# ಕನ್ನಡ ಕಥನ ಸಾಹಿತ್ಯ : ಗ್ರಾಮ ನಗರಗಳ ದ್ವಂದ್ವಾತ್ಮಕತೆ

## (ಮುಂಬಯಿ ಕರ್ನಾಟಕವನ್ನು ಅನುಲಕ್ಷಿಸಿ)

[ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಮಹಾಪ್ರಬಂಧ]


ಸಂಶೋಧಕರು

**ಲಿಂಗದಹಳ್ಳಿ ಹಾಲಪ್ಪ**

ಕಲ್ಯಾ (ಧಾರವಾಡ)



ಮಾರ್ಗದರ್ಶಕರು

**ಡಾ. ಬಿ.ಎಂ. ಪುಟ್ಟಯ್ಯ**

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ





ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩೨೭೬

೨೦೦೯

# ಕನ್ನಡ ಕಥನ ಸಾಹಿತ್ಯ : ಗ್ರಾಮ ನಗರಗಳ ದ್ವಂದ್ವಾತ್ಮಕತೆ

(ಮುಂಬಯಿ ಕರ್ನಾಟಕವನ್ನು ಅನುಲಕ್ಷಿಸಿ)

[ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಮಹಾಪ್ರಬಂಧ]

ಸಂಶೋಧಕರು

**ಲಿಂಗದಹಳ್ಳಿ ಹಾಲಪ್ಪ**

ಕದ್ರಾ (ಕಾರವಾರ)

ಮಾರ್ಗದರ್ಶಕರು

**ಡಾ. ಬಿ. ಎಂ. ಪುಟ್ಟಯ್ಯ**

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ







ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩೨೭೬

೨೦೦೯

# ಕನ್ನಡ ಕಥನ ಸಾಹಿತ್ಯ : ಗ್ರಾಮ ನಗರಗಳ ದ್ವಂದ್ವಾತ್ಮಕತೆ

(ಮುಂಬಯಿ ಕರ್ನಾಟಕವನ್ನು ಅನುಲಕ್ಷಿಸಿ)

[ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಮಹಾಪ್ರಬಂಧ]


ಸಂಶೋಧಕರು

**ಲಿಂಗದಹಳ್ಳಿ ಹಾಲಪ್ಪ**

ಕದ್ರಾ (ಕಾರವಾರ)

ಮಾರ್ಗದರ್ಶಕರು

**ಡಾ. ಬಿ.ಎಂ. ಪುಟ್ಟಯ್ಯ**

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ





ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩೨೭೬

೨೦೦೯

# ಸಂಶೋಧಕರ ಪ್ರಮಾಣ ಪತ್ರ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲು **ಡಾ.ಬಿ.ಎಂ. ಪುಟ್ಟಯ್ಯ** ಇವರ ಮಾರ್ಗದರ್ಶನದಲ್ಲಿ **'ಕನ್ನಡ ಕಥನ ಸಾಹಿತ್ಯ : ಗ್ರಾಮ ನಗರಗಳ ದ್ವಂದ್ವಾತ್ಮಕತೆ'** (ಮುಂಬಯಿ ಕರ್ನಾಟಕವನ್ನು ಅನುಲಕ್ಷಿಸಿ) ಎಂಬ ವಿಷಯ ಕುರಿತು ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ. ಪ್ರಸ್ತುತ ಈ ಮಹಾಪ್ರಬಂಧವನ್ನು ಅಥವಾ ಈ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇತರೆ ಯಾವುದೇ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ: 27.08.2009
ವಿದ್ಯಾರಣ್ಯ

ಲಿಂಗದಹಳ್ಳಿ ಹಾಲಪ್ಪ
ಸಂಶೋಧಕರು

## ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಲಿಂಗದಹಳ್ಳಿ ಹಾಲಪ್ಪ ಇವರು ನನ್ನ ಮಾರ್ಗದರ್ಶನದಲ್ಲಿ 'ಕನ್ನಡ ಕಥನ ಸಾಹಿತ್ಯ : ಗ್ರಾಮ ನಗರಗಳ ದ್ವಂದ್ವಾತ್ಮಕತೆ' (ಮುಂಬಯಿ ಕರ್ನಾಟಕವನ್ನು ಅನುಲಕ್ಷಿಸಿ) ಎಂಬ ವಿಷಯ ಕುರಿತು ಪಿಎಚ್.ಡಿ. ಮಹಾಪ್ರಬಂಧವನ್ನು ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವು ಇಡಿಯಾಗಿ ಅಥವಾ ಬಿಡಿಯಾಗಿ ಎಲ್ಲಿಯೂ ಈ ಮೊದಲು ಪ್ರಕಟವಾಗಿರುವುದಿಲ್ಲ ಮತ್ತು ಇದನ್ನು ಯಾವ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

ದಿನಾಂಕ : 27.08.2009
ವಿದ್ಯಾರಣ್ಯ

27.08.09
ಡಾ. ಬಿ.ಎಂ. ಪುಟ್ಟಯ್ಯ
ಮಾರ್ಗದರ್ಶಕರು

# ಪರಿವಿಡಿ

• • •

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

ಸಾಮಾಜಿಕ ಪರಂಪರೆಯ ಒಂದು ದಾಖಲೆ ಆ ನಾಡಿನ ಸೃಜನಶೀಲ ಸಾಹಿತ್ಯ. ವಿವಿಧ ಕಾಲಘಟ್ಟದಲ್ಲಿ ಸೃಜಿಸಲ್ಪಟ್ಟಿರುವ, ಮನುಷ್ಯರ/ಸಕಲ ಜೀವಿಗಳ ಚಲನಶೀಲ ಬದುಕಿನ ಛಾಯೆಯೇ ಸಾಹಿತ್ಯವೆಂದು ಒಪ್ಪಬಹುದಾಗಿದೆ. ಎಲ್ಲ ಸಾಹಿತ್ಯ ಕಲೆಗಳ ಉಗಮಕ್ಕೂ ಸಾಮಾನ್ಯ ಜನತೆಯೇ ಮೂಲಬೇರು. ಸಾಹಿತ್ಯ ಕಲೆಯ ತಾಯಿಬೇರು ಸಾಮಾನ್ಯರ ಜನಜೀವನದಲ್ಲಿ ಅಡಗಿದೆ. ಸಾಹಿತ್ಯ ಮನುಷ್ಯರನ್ನು, ಅವರ ಮೂಲಕ ಬದುಕನ್ನು ಭಾಷೆಯಲ್ಲಿ ಅರಿಯುವ ಅನನ್ಯ ಮಾಧ್ಯಮವಾಗಿದೆ ಎಂಬ ಮಾತು ಕಲೆ ಮತ್ತು ಕಥನ ಸಾಹಿತ್ಯ ಎರಡಕ್ಕೂ ಏಕಕಾಲದಲ್ಲಿ ಅನ್ವಯವಾಗುತ್ತದೆ.

ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸ್ಥಳಾಂತರ (ವಲಸೆ) ಆದಿ ಮಾನವರ ಕಾಲದಿಂದಲೂ ಕಂಡುಬರುವ ಪ್ರಕ್ರಿಯೆಯಾಗಿದೆ. ಬೇಟೆ, ಕೃಷಿ, ಹೈನುಗಾರಿಕೆಗಳಂತಹ ವೃತ್ತಿಗಳಿಗೋಸ್ಕರ ಪ್ರಶಸ್ತ ಸ್ಥಳದ ಅನ್ವೇಷಣೆಯಂತಹ ಉದ್ದೇಶಗಳು ಪ್ರಾಚೀನ ಜನರ ವಲಸೆಯ ಹಿಂದಿದ್ದ ಒತ್ತಡಗಳಾಗಿದ್ದವು. ಆದರೆ ಇಂದಿನ ಯುಗದಲ್ಲಿ? ಗ್ರಾಮ/ನಗರ ನಿರಾಕರಣೆಯ ನಿಶ್ಚಿತ ಉದ್ದೇಶಗಳು ಸೂಚಿಸಿದ ಭೌತಿಕ ಉದ್ದೇಶಗಳೊಂದಿಗೆ ಅವರ ಭಾವನಾತ್ಮಕ ಅಂಶಗಳನ್ನೂ ತಳುಕು ಹಾಕಿಕೊಂಡಿರುವುದು ವಿಶೇಷವಾಗಿದೆ. ಈ ಸಾಮಾಜಿಕ ಪರಿಚಲನೆಯ ಹಿಂದಿರುವ ಆರ್ಥಿಕ, ಸಾಮಾಜಿಕ, ಭಾವನಾತ್ಮಕ (ಸಾಮೂಹಿಕ) ಒತ್ತಡಗಳನ್ನು ಮತ್ತು ಮನುಷ್ಯರ ಮಾನಸಿಕ ದ್ವಂದ್ವಾತ್ಮಕತೆಯನ್ನು, ಮುಂಬಯಿ ಕರ್ನಾಟಕದ ಕಥನ ಸಾಹಿತ್ಯ ಸಮರ್ಥವಾಗಿ ಹಿಡಿದಿಟ್ಟಿದೆ. ಕಥನ ಸಾಹಿತ್ಯದ ಹಿನ್ನೆಲೆಯಲ್ಲಿ ಮನುಷ್ಯರ ಈ ಭೌತಿಕ, ಭಾವನಾತ್ಮಕ ಪರಿಚಲನೆ, ದ್ವಂದ್ವಗಳು ಅಧ್ಯಯನಯೋಗ್ಯವೂ ಆಗಿವೆ.

### ಅಧ್ಯಯನದ ಉದ್ದೇಶ : ವಿಭಿನ್ನ ದೃಷ್ಟಿಕೋನ

ಭಾರತ ಹಳ್ಳಿಗಳಿಂದ ತುಂಬಿದ ದೇಶ. ಪ್ರತಿಯೊಂದು ಹಳ್ಳಿಯೂ ತನ್ನದೇ ಆದ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ವ್ಯವಸ್ಥೆಯನ್ನು ಹೊಂದಿದೆ. ಇಂತಹ ಸೀಮಿತ ಚೌಕಟ್ಟಿನ ವ್ಯವಸ್ಥೆಯಲ್ಲಿ ಜನಿಸಿ ಬಂದ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಚೌಕಟ್ಟಿನಾಚೆಯ ಹಲವಾರು ಸೌಲಭ್ಯಗಳಿಗೆ ಆಸೆ ಪಡುವುದು ಮಾನವ ಸಹಜ ಗುಣವಾಗಿದೆ. ತನ್ನ ಹುಟ್ಟಿದೂರನ್ನು ತೊರೆದು, ನಗರ ಜೀವನದ ಸೌಲಭ್ಯಗಳಿಗೆ ಆಕರ್ಷಿತರಾಗಲು ಕಾರಣವೇನು, ಇದಕ್ಕೆ ಸೀಮಿತ ಚೌಕಟ್ಟಿನ ವ್ಯವಸ್ಥೆಗಳು ಕಾರಣವೆ, ನಗರದಲ್ಲಿ ಸುಲಭ ಹಣ ಗಳಿಕೆಯ ಮಾರ್ಗಗಳು ಕಾರಣವೆ ಮುಂತಾದ ಪ್ರಶ್ನೆಗಳೊಂದಿಗೆ ವಲಸೆಯ ಹಿಂದಿರುವ ಮತ್ತು ಅದು ಹೊಂದಿರುವ ಭಾವನಾತ್ಮಕ ನೆಲೆಗಳನ್ನು ಅರಸುವ ಕುತೂಹಲ ಮನುಷ್ಯ ಸಹಜವಾದುದಾಗಿದೆ.

ಗ್ರಾಮೀಣ ವ್ಯವಸ್ಥೆಯಿಂದ ದೂರವಾಗಿ ನಗರಮುಖಿಯಾಗಿ ಬಂದ ವ್ಯಕ್ತಿಗಳು ಕೈ ತುಂಬ ಸಂಪಾದಿಸಿ ಶಿಕ್ಷಣ, ಹಣ, ಸಾಮಾಜಿಕ, ರಾಜಕೀಯ ಸ್ಥಾನಮಾನ ಗಳಿಸಿ, ನಂತರ ಅವರ ಮನಸ್ಸು ತನ್ನ ಹಳೆಯ ಗ್ರಾಮೀಣ ಜೀವನಕ್ಕೆ ತುಡಿಯುವುದು ಏಕೆ? ಈ ತುಡಿತಗಳು, ಮೂಲನೆಲೆಗಾಗಿ ಹಪಹಪಿಸುವ ಮಿಡಿತಗಳು

ವಾಸ್ತವ ಸಾಹಿತ್ಯದಲ್ಲಿ ಎಲ್ಲರೂ ಕಾಣಬಹುದಾದ ಅಚ್ಚರಿಗಳಾಗಿವೆ. ಇದು ಇದ್ದುದನ್ನು ನಿರಾಕರಿಸುವ ಹಾಗೂ ಇಲ್ಲದುದನ್ನು ಆಸೆಪಡುವ ಮಾನವ ಸಹಜ ಗುಣವಾದರೂ, ಇದರ ಹಿಂದಿರುವ ಕಾರಣಗಳನ್ನು ಕಥನ ಸಾಹಿತ್ಯದ ಅಧ್ಯಯನದ ಮೂಲಕ ಕ್ರೋಡೀಕರಿಸಿ, ಮನುಷ್ಯರ ಗ್ರಾಮ ಜೀವನದ ನಿರಾಕರಣೆಯ ನೆಲೆಗಳನ್ನು, ಅವರ ನಗರ ಜೀವನದ ಆಯ್ಕೆಯ ಅಥವಾ ಅಪೇಕ್ಷೆಯ ನೆಲೆಗಳನ್ನು ಅಥವಾ ಗ್ರಾಮ, ನಗರಗಳ ದ್ವಂದ್ವಾತ್ಮಕತೆಯನ್ನು ಶೋಧಿಸುವ ಉದ್ದೇಶ ಈ ಪ್ರಬಂಧ ರಚನೆಯ ಆಶಯವಾಗಿದೆ. ಪ್ರಸ್ತುತ ಕಥನ ಸಾಹಿತ್ಯವನ್ನು ವಿಭಿನ್ನ ದೃಷ್ಟಿಯಿಂದ ಅಧ್ಯಯನ ಮಾಡಬಯಸಿದ ಉದ್ದೇಶವು ಈ ಕೆಳಗಿನ ಅಂಶಗಳಿಗೆ ಒತ್ತು ಕೊಟ್ಟಿದೆ.

ಮೊದಲನೆಯದಾಗಿ, ಅಧ್ಯಯನವು ಒಂದು ಪ್ರದೇಶದ ಪ್ರಮುಖ ಲೇಖಕ/ಲೇಖಕಿಯರ ಕಥನ ಸಾಹಿತ್ಯದ ನೆಲೆಗಟ್ಟಿನಲ್ಲಿ ನಿಂತು ಮಾನವರ ಸಹಜ ಗುಣ(ದೌರ್ಬಲ್ಯ?)ಗಳಾದ ವಲಸೆ ಹಾಗೂ ದ್ವಂದ್ವಾತ್ಮಕತೆಯನ್ನು ವಿಶ್ಲೇಷಿಸುತ್ತ ಇಂತಹದೊಂದು ಸಾಮಾಜಿಕ ಸಮಸ್ಯೆಯೊಂದರ ಮೇಲೆ ಬೆಳಕು ಚೆಲ್ಲುವ ಉದ್ದೇಶವನ್ನು ಹೊಂದಿದೆ. ಎರಡನೆಯದಾಗಿ, ಒಂದು ಪ್ರದೇಶಕ್ಕೆ ಒಳಪಟ್ಟ ಕಥನ ಸಾಹಿತಿಗಳು ಚಿತ್ರಿಸಿದ ಸಾಮಾನ್ಯ ಕಥಾವಸ್ತುಗಳನ್ನು (Common Theme) ಹೊಂದಿರುವ ಕಥನ ಕೃತಿಗಳ ತುಲನಾತ್ಮಕ ಅಧ್ಯಯನದೊಂದಿಗೆ ಕರ್ನಾಟಕದ ಗಡಿನಾಡಿನ ವೈವಿಧ್ಯತೆಯನ್ನು, ಕಲಾತ್ಮಕತೆಯನ್ನು/ಅಭ್ಯಸಿಸುವ ಉದ್ದೇಶವೂ ಸೇರಿದೆ. ಮೂರನೆಯದಾಗಿ, ವ್ಯಕ್ತಿಗಳು ಯಾವುದೋ ವ್ಯವಸ್ಥೆಯ, ಎಂತದೋ ಕಾರಣಕ್ಕೆ ಒಂದು ನಗರಕ್ಕೆ ವಲಸೆ ಬರುವುದು ಅಥವಾ ನಗರದಿಂದ ಗ್ರಾಮಜೀವನಕ್ಕೆ ಹೆಜ್ಜೆ ಇಡುವುದು ಕೇವಲ ಭೌತಿಕ ವಲಸೆ ಮಾತ್ರವಾಗಿರದೆ ಅವರ ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ, ಧಾರ್ಮಿಕ ಸಂಬಂಧಗಳ ವಲಸೆಯೂ ಆಗಿದೆ. ಸಾಹಿತ್ಯಿಕ ಹಿನ್ನೆಲೆಯಲ್ಲಿ ಇವೆಲ್ಲವುಗಳ ಸೂಕ್ಷ್ಮ ಅಧ್ಯಯನವೂ ಸಹ ಇಂದಿನ ಬೆಳೆಯುತ್ತಿರುವ ನಗರೀಕರಣ/ಜಾಗತೀಕರಣದ ಅವಸ್ಥೆಯಲ್ಲಿ ಅತ್ಯಾವಶ್ಯಕವಾದ ಅಂಶವೆಂದು ಮನಗಾಣಬಹುದು. ಕೊನೆಯದಾಗಿ, ಕಥನ ಕಲೆ ಎಂಬುದು ಇಡೀ ಸಮುದಾಯದ ಜೊತೆ ಲೇಖಕರು ಸಂವಾದಿಸುವ ಒಟ್ಟು ಮೊತ್ತವಾಗಿದೆ. ಈ ಸಂವಾದ ಕನ್ನಡದ ಕತೆ, ಕಾದಂಬರಿಗಳೆರಡೂ ಪ್ರಕಾರಗಳಲ್ಲಿ ನಿರಂತರವಾಗಿ ನಡೆದು ಬಂದಿದೆ. ಒಂದು ವ್ಯಕ್ತಿತ್ವ ಭೌತಿಕವಾಗಿ ನಗರ ನೆಲೆಯಲ್ಲಿ ನಿಂತು ಗ್ರಾಮದ ನೆಲೆಯತ್ತ ನೋಡುವ, ಇನ್ನೊಂದು ಗ್ರಾಮದಲ್ಲಿ ನಿಂತು ನಗರ ನೆಲೆಯತ್ತ ದೃಷ್ಟಿ ಹರಿಸುವಾಗ ಅಂತಹ ಮನಸ್ಸುಗಳ ಹೊಯ್ದಾಟ, ತುಮುಲ-ತಾಕಲಾಟ, ಭಾವನೆಗಳ ತೊಳಲಾಟಗಳ ಮಾನಸಿಕ ಅಧ್ಯಯನವು ಸಹ ಈ ನಿಬಂಧ ರಚನೆಯ ಒಳ ಉದ್ದೇಶಗಳಲ್ಲಿ ಒಂದಾಗಿದೆ. ಇಂತಹ ನಗರಮುಖಿ ನೆಲೆಯಲ್ಲಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡ ಎಷ್ಟೋ ಕಥಾನಾಯಕ/ನಾಯಕಿಯರು ಆರ್ಥಿಕ, ಸಾಮಾಜಿಕವಾಗಿ ಉನ್ನತ ಹಂತ ತಲುಪಿದ್ದಾರೆ. ಇನ್ನೂ ಕೆಲವು ಕಥಾನಾಯಕ/ನಾಯಕಿಯರು ಮಿಥ್ಯ ಜೀವನ ವ್ಯವಸ್ಥೆಗೆ ಬಲಿಯಾಗಿ ವಂಚನೆಗೊಳಗಾಗಿ, ಬೀದಿಗಿಳಿದು ಅದನ್ನು ತಿರಸ್ಕರಿಸಿದ್ದಾರೆ. ಒಟ್ಟಾರೆ ಸಾಹಿತ್ಯಿಕ ನೆಲೆಯಲ್ಲಿ ನಿಂತು ಗ್ರಾಮ/ಮಹಾನಗರ ಜೀವನವು ತನ್ನನ್ನು ಸೇರಲು ಬಂದ ವ್ಯಕ್ತಿಗಳಿಗೆ ಒದಗಿಸಬಹುದಾದ ಭದ್ರತೆಗಳ, ಜೀವನದ ಸಂಘರ್ಷಗಳ, ಸಂಕಟಗಳ ಸಂಶೋಧನೆಯೂ ಈ ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.

## ಅಧ್ಯಯನದ ವ್ಯಾಪ್ತಿ, ವಿನ್ಯಾಸ ಮತ್ತು ವಿಧಾನಗಳು

ಕಥೆ, ಕಾದಂಬರಿಗಳಂತಹ ಸಾಹಿತ್ಯ ಪ್ರಕಾರಗಳಿಗೆ ಇರುವ ನಿರ್ದಿಷ್ಟ ಹಾಗೂ ವಿಶಿಷ್ಟ ಆಕಾರಕ್ಕೂ ಅವು ಗ್ರಹಿಸಲು ಹೊರಟ ವಾಸ್ತವ ಸತ್ಯಕ್ಕೂ ಅನ್ಯೋನ್ಯ ಸಂಬಂಧವಿದೆ. ಆದ್ದರಿಂದ ಯಾವುದೆ ವಿಷಯವನ್ನು ಕುರಿತು ಕೈಗೊಳ್ಳುವ ಅಧ್ಯಯನವು ಸೂಕ್ಷ್ಮವೂ, ಆಡಕವೂ, ಸಮಗ್ರವೂ ಆಗಬೇಕಾದರೆ ಅದನ್ನು ಒಂದು ನಿರ್ದಿಷ್ಟ ಚೌಕಟ್ಟಿನಲ್ಲಿ ಅಳವಡಿಸಿಕೊಳ್ಳಬೇಕಾಗುತ್ತದೆ. ಅಧ್ಯಯನದ ಕಾರ್ಯಕ್ಷೇತ್ರವು ವಿಸ್ತಾರವಾದಂತೆಲ್ಲ ಸೂಕ್ಷ್ಮ ಒಳನೋಟಗಳನ್ನು ನೀಡುವುದು ಸ್ವಲ್ಪ ಕಷ್ಟವಾಗಬಹುದು. ಅದಕ್ಕಾಗಿ ಪ್ರಸ್ತುತ ಅಧ್ಯಯನವನ್ನು ಮುಂಬಯಿ ಕರ್ನಾಟಕದ ಕಥನ ಸಾಹಿತ್ಯಕ್ಕೆ ಮಿತಿಗೊಳಿಸಲಾಗಿದೆ. ಕೈಗೊಂಡ ಅಧ್ಯಯನಗಳಲ್ಲಿ ಅದರ ವಿನ್ಯಾಸ, ವಿಧಾನಗಳು ಪ್ರಮುಖ ಪಾತ್ರ ವಹಿಸುತ್ತವೆ ಮತ್ತು ಅವು ಮಾರ್ಗಸೂಚಿಗಳಾಗಿವೆ. ಪ್ರಸ್ತುತ ಅಧ್ಯಯನಕ್ಕೆ ಕಥನ ಸಾಹಿತ್ಯದ (ಕಥಾ ಸಂಕಲನಗಳು ಹಾಗೂ ಕಾದಂಬರಿಗಳು) ಕೃತಿಗಳನ್ನು ಆಕರಗಳಾಗಿ ಉಪಯೋಗಿಸಲಾಗಿದೆ. ಸಂಬಂಧಿಸಿದ ವಿಮರ್ಶೆ, ಲೇಖನಗಳು ಯಾವುದೇ ಪತ್ರಿಕೆಗಳಲ್ಲಿ (ಸಾಹಿತ್ಯ ಮತ್ತು ಸುದ್ದಿ ಪತ್ರಿಕೆಗಳು) ಪ್ರಕಟವಾಗಿದ್ದರೂ ಅವುಗಳನ್ನು ಬಳಸಿಕೊಳ್ಳಲಾಗಿದೆ. ಪ್ರಸ್ತುತ ಉದ್ದೇಶಿತ ಅಧ್ಯಯನದ ವಸ್ತುವಿನ ಕಾಲವ್ಯಾಪ್ತಿಯನ್ನು ಇಪ್ಪತ್ತನೇ ಶತಮಾನದ ಕಥನ ಸಾಹಿತ್ಯದ ನವೋದಯ,

ಪ್ರಗತಿಶೀಲ, ನವ್ಯ, ನವ್ಯೋತ್ತರ ಎಂದು ಕರೆಯಲಾಗುವ ಪ್ರಮುಖ ಕೃತಿಗಳನ್ನು ಆಧರಿಸಿ ಅಭ್ಯಸಿಸಲು ನಿರ್ಧರಿಸಿ, ಈ ಮೊದಲು ತಿಳಿಸಿದಂತೆ ನಿರ್ದಿಷ್ಟ ಪ್ರಾದೇಶಿಕ ವ್ಯಾಪ್ತಿಯಲ್ಲಿ, ಸೂಚಿಸಿದ ಕಾಲಘಟ್ಟದಲ್ಲಿ, ವಿವಿಧ ಕಥನ ಪ್ರಕಾರಗಳಲ್ಲಿ ರಚಿಸಿದ ಕಥನ ಸಾಹಿತ್ಯದ ಕೃತಿಗಳನ್ನು ಆಕರಗಳಾಗಿ ಬಳಸಿಕೊಳ್ಳಲಾಗಿದೆ.

**ಅಧ್ಯಯನದ ಸ್ವರೂಪ**

ಈ ರೀತಿಯಾಗಿ ಅಧ್ಯಯನದಿಂದ ದೊರಕಿಸಿಕೊಂಡ ಮಾಹಿತಿಗಳನ್ನು ಈ ಕೆಳಗಿನಂತೆ ಪ್ರಮುಖ ಅಧ್ಯಾಯಗಳಲ್ಲಿ ವಿಂಗಡಿಸಿಕೊಂಡು ಚರ್ಚಿಸಲಾಗಿದೆ.

**೧. ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ**

ಅಧ್ಯಯನಕ್ಕೆ ಕಾರಣವಾದ ಅಂಶಗಳು, ಅಧ್ಯಯನದ ಉದ್ದೇಶ, ಅಧ್ಯಯನದ ವ್ಯಾಪ್ತಿ ಸ್ವರೂಪಗಳನ್ನು ಇಲ್ಲಿ ಪ್ರಸ್ತಾಪಿಸಿ ಚರ್ಚಿಸಲಾಗಿದೆ. ಮುಖ್ಯವಾಗಿ ಈ ಅಧ್ಯಯನವನ್ನೇ ಆಯ್ಕೆ ಮಾಡಿಕೊಳ್ಳಲು ಕಾರಣವಾದ ವಾಸ್ತವಿಕ, ಭಾವನಾತ್ಮಕ ಅಂಶಗಳು, ಈ ಅಧ್ಯಯನ ಹೇಗೆ ವಿಭಿನ್ನವಾಗಿದ್ದು ಸಾಹಿತ್ಯಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕವಾದ ಅನ್ಯೋನ್ಯತೆಯನ್ನು ಹೊಂದಿದೆ ಎಂಬುದರ ನಿರೂಪಣೆಯನ್ನು ಮಾಡಲಾಗಿದೆ. ಅಧ್ಯಯನದ ವ್ಯಾಪ್ತಿ, ಸ್ವರೂಪಗಳು ಮುಂಬಯಿ ಕರ್ನಾಟಕದ ಪ್ರಮುಖ ಕಥನ ಲೇಖಕರ ಕಥನ ಸಾಹಿತ್ಯಕ್ಕೆ ನಿರ್ದಿಷ್ಟಗೊಳಿಸಿದ್ದನ್ನು ಸ್ಪಷ್ಟಪಡಿಸಲಾಗಿದೆ.

**೨. ಮುಂಬಯಿ ಕರ್ನಾಟಕ : ಸಾಂಸ್ಕೃತಿಕ ಸಂಬಂಧದ ಸ್ವರೂಪ**

ಮುಂಬಯಿ ಕರ್ನಾಟಕವು ಹಲವು ಜಾತಿ, ಧರ್ಮ, ಭಾಷೆಗಳನ್ನು ಹೊಂದಿದ ಪ್ರದೇಶವಾಗಿದ್ದು ಸಾಂಸ್ಕೃತಿಕ ಪರಂಪರೆ, ಕಲೆ, ಸಾಹಿತ್ಯ, ಜಾನಪದ ಬದುಕುಗಳೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿದೆ. ಇಲ್ಲಿನ ಕಾಡಿನಲ್ಲಿ ಅಪಾರ ಪ್ರಕೃತಿ ಸಂಪತ್ತಿನೊಂದಿಗೆ ಹಲವಾರು ಜಾತಿ, ಉಪಜಾತಿ, ಭಾಷೆ, ಉಪಭಾಷೆ, ವಿಭಿನ್ನ ಆಚಾರ-ವಿಚಾರಗಳ, ವಿವಿಧ ಜನಾಂಗೀಯ ಪಂಗಡಗಳ ಸಾಂಸ್ಕೃತಿಕ ವೈವಿಧ್ಯತೆ ಇದೆ. ಈ ಅಧ್ಯಾಯದಲ್ಲಿ, ಮುಂಬಯಿ ಕರ್ನಾಟಕದ ಮೂರು ಪ್ರಮುಖ ಭಾಷಾ ಸಮುದಾಯಗಳಾದ ಕನ್ನಡ, ಮರಾಠಿ ಮತ್ತು ಕೊಂಕಣಿಗರೆಂಬ ಸಾಮಾನ್ಯ ಜನತೆಯ ಉದ್ಯೋಗ, ಆರ್ಥಿಕತೆ, ನಡೆನುಡಿ, ಆಹಾರ ಪದ್ಧತಿ, ಸ್ವಭಾವ, ಶೋಷಣೆ, ಸಾಮಾಜಿಕ ಸಂಪ್ರದಾಯ, ಸಮಸ್ಯೆಗಳ ಕುರಿತ ಚಿಂತನೆಗಳನ್ನು ಮಾಡಲಾಗಿದೆ. ಈ ಅಂಶಗಳು ಈ ಭಾಗದ ಕಥನ ಸಾಹಿತ್ಯದ ಹಂದರದಲ್ಲಿ ಯಾವ ರೀತಿ ಪೂರಕ ಪ್ರಭಾವ ಬೀರಿವೆ ಎಂದು ತಿಳಿದುಕೊಳ್ಳಲು ಈ ಚರ್ಚೆ ನೆರವಾಗುತ್ತದೆ. ಅಧ್ಯಯನ ದೃಷ್ಟಿಯಿಂದ ಮುಂಬಯಿ ಕರ್ನಾಟಕದ ಸಾಂಸ್ಕೃತಿಕ ಪರಂಪರೆಯನ್ನು ವಸಾಹತುಪೂರ್ವ, ವಸಾಹತುಕಾಲ ಮತ್ತು ನವವಸಾಹತು ಕಾಲದಲ್ಲಿನ ಆಗುಹೋಗುಗಳೆಂದು ವಿಭಾಗಿಸಿ ಅಧ್ಯಯನ ಮಾಡಲಾಗಿದೆ.

**೩. ಮುಂಬಯಿ ಕರ್ನಾಟಕ : ಕಥನ ಸಾಹಿತ್ಯದ ಸ್ವರೂಪ**

ಯಾವುದೇ ಭಾಷೆಯ ಸಾಹಿತ್ಯ ಚರಿತ್ರೆಯನ್ನು ಅಧ್ಯಯನ ಮಾಡಿದಾಗ ಅದು ಹಲವು ಪರಂಪರೆಗಳಲ್ಲಿ, ಪಂಥಗಳಲ್ಲಿ ಹಾಯ್ದು ಹೋಗಿರುವುದು ಕಂಡುಬರುತ್ತದೆ. ಮುಂಬಯಿ ಕರ್ನಾಟಕದ ಕಥನ ಸಾಹಿತ್ಯವೂ ಸಹ ಈ ಸ್ಪಂದನೆಗೆ ಸಿಲುಕಿದೆ. ನವೋದಯ, ಪ್ರಗತಿಶೀಲ, ನವ್ಯ, ನವ್ಯೋತ್ತರ ಇತ್ಯಾದಿ ಚಲನೆಯಲ್ಲಿದ್ದ ಸಾಹಿತ್ಯ ನಡೆದು ಬಂದ/ಬೆಳೆದು ಬಂದ ರೀತಿಯೆಂಬ ಸಿದ್ಧಮಾದರಿಗಳನ್ನು ಬಿಟ್ಟುಕೊಟ್ಟು, ಉತ್ಪಾದನಾ ಕಾಲಘಟ್ಟದ ಸ್ಥಿತ್ಯಂತರಗಳು, ಈ ಸ್ಥಿತ್ಯಂತರಗಳಲ್ಲಿ ನಿರ್ಮಿಸಲ್ಪಟ್ಟ ಕಥನ ಸಾಹಿತ್ಯ ಮತ್ತು ಆ ಕಾಲಘಟ್ಟದ ಜನರ ಸಾಹಿತ್ಯಿಕ ಸಂವೇದನೆಗಳ ಕುರಿತು ಇಲ್ಲಿ ಚರ್ಚಿಸಲಾಗಿದೆ. ಮುಂಬಯಿ ಕರ್ನಾಟಕದ ಗಡಿಯು ಗೋವಾ, ಮಹಾರಾಷ್ಟ್ರ ರಾಜ್ಯಗಳೊಂದಿಗೆ ಹೊಂದಿಕೊಂಡಿದ್ದು, ಅಲ್ಲಿನ ಸಾಹಿತ್ಯ, ಆ ರಾಜ್ಯ ಭಾಷೆಗಳಾದ ಕೊಂಕಣಿ, ಮರಾಠಿ ಭಾಷೆಗಳ ಸಂಪರ್ಕದಲ್ಲಿದೆ ಮತ್ತು ಅವುಗಳಿಂದ ಪ್ರಭಾವಿತವೂ ಆಗಿದೆ. ಈ ಪ್ರದೇಶದ, ವಿವಿಧ ಕಾಲಘಟ್ಟದ ಕಥನ ಸಾಹಿತಿಗಳ ಕೊಡುಗೆ ಏನು, ವಿವಿಧ ಕಾಲಘಟ್ಟದ ಕಥನ ಸಾಹಿತ್ಯಕ್ಕೆ ಓದುಗರ ಸ್ಪಂದನ ಎಂತಹುದಿತ್ತು ಎಂಬುದರ ಚಿಂತನೆಯನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಇವೆಲ್ಲ ಅಂಶಗಳೂ ಮುಂಬರುವ ಮೂಲ ಅಧ್ಯಯನದ ವಸ್ತುವಿಗೆ ತುಂಬ ಹತ್ತಿರದ ಪೂರಕ ಅಂಶಗಳಾಗಿ ಬರುವುದು ಇಲ್ಲಿ ಮಹತ್ವದ್ದಾಗಿದೆ.

## ೪. ಗ್ರಾಮ, ನಗರ ವ್ಯಾಖ್ಯಾನದ ನೆಲೆಗಳು

ಗ್ರಾಮ, ನಗರಗಳ ಸಾಮಾನ್ಯ ಸ್ವರೂಪ, ಅವುಗಳ ಸಾಮಾಜಿಕ ರಚನೆ, ವರ್ಣ-ವರ್ಗ ವಿಂಗಡಣೆ, ಭೂ ಒಡೆತನ, ವೃತ್ತಿ ಮತ್ತು ಆರ್ಥಿಕತೆ, ಸರಕಾರಿ ಯೋಜನೆಗಳು ಅವುಗಳ ಸದುಪಯೋಗ/ದುರುಪಯೋಗ, ನ್ಯಾಯ ವ್ಯವಸ್ಥೆ, ಶೋಷಣೆ, ಶಿಕ್ಷಣ, ಸೌಲಭ್ಯ ಕುರಿತಂತೆ ಶೋಷಕರ/ ಶೋಷಿತರ ನೆಲೆಯಲ್ಲಿ ನಿಂತು ಚರ್ಚಿಸಲಾಗಿದೆ. ಗ್ರಾಮ, ನಗರಗಳ ಇತ್ತೀಚಿನ ಪ್ರವೃತ್ತಿಗಳು, ಬದಲಾಗುತ್ತಿರುವ ಗ್ರಾಮ/ನಗರ ಸಮುದಾಯಗಳ ಚಿಂತನೆಗಳು ಹೇಗಿವೆ? ಬಡವರು, ಶ್ರೀಮಂತರು, ಜಮೀನ್ದಾರರು, ಕೂಲಿಯಾಳುಗಳು, ಜಾತಿಯತೆ, ಅಸ್ಪೃಶ್ಯತೆಯಂತಹ ವ್ಯವಸ್ಥೆಗಳಲ್ಲಿ ಪರಿವರ್ತನೆಯಾಗಿದೆಯೆ? ಗ್ರಾಮಗಳ ಸಾಮಾನ್ಯ ಸಮಸ್ಯೆಗಳು, ಉತ್ಪಾದನೆಯ ವಿಧಾನಗಳು, ಸರಕಾರಿ ಸೌಲಭ್ಯಗಳು ಯಾರ ಪಾಲಾಗುತ್ತಿವೆ? ಯಾವ ವರ್ಗದವರು ಉದ್ಯೋಗಕ್ಕಾಗಿ ವಲಸೆ ಹೋಗುತ್ತಾರೆ? ಯಾವ ವರ್ಗದವರು ಪಟ್ಟಣ ನಗರಗಳಿಗೆ ಉನ್ನತ ಶಿಕ್ಷಣಕ್ಕಾಗಿ ಹೋಗುತ್ತಾರೆ? ಜಾಗತೀಕರಣದ ಪ್ರಭಾವ ದಲಿತ ಕೆಳವರ್ಗಗಳ ಆರ್ಥಿಕ, ಸಾಮಾಜಿಕ ಬದುಕಿನ ಮೇಲೆ ಆಗಿದೆಯೆ? ಮುಂತಾದ ಚಿಂತನೆಗಳನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

## ೫. ದ್ವಂದ್ವಾತ್ಮಕತೆಯೆಂದರೆ,

ದ್ವಂದ್ವಾತ್ಮಕತೆ ಎಂದರೆ ಏನು, ಅದು ಹೇಗೆ ಹುಟ್ಟುತ್ತದೆ, ಅದಕ್ಕೆ ಕಾರಣಗಳೇನು? ಎಂಬುದನ್ನು ಕುರಿತು ಚರ್ಚಿಸುವ ಅಗತ್ಯವಿದೆ. ಮನುಷ್ಯರ ಮನಸ್ಸಿನ ಪರದೆಯಲ್ಲಿ ಕಾಣಿಸಿಕೊಳ್ಳುವ ಈ ದ್ವಂದ್ವಾತ್ಮಕತೆಯ ಉಗಮ, ಬೆಳವಣಿಗೆ, ದ್ವಂದ್ವಾತ್ಮಕತೆ ಹಾಗೂ ಮಾನವನ ಮಾನಸಿಕ ಸಂಬಂಧಗಳ ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗುವುದು. ಪ್ರಕೃತಿಯ ಚಿರಂತರತೆ, ದ್ವಂದ್ವಾತ್ಮಕತೆ ಕುರಿತು ಚರ್ಚೆ, ಮನುಷ್ಯ ಸಮಾಜ-ಮನುಷ್ಯ ಸಮಾಜ, ಗಂಡಸು-ಹೆಂಗಸು, ಬಂಡವಾಳ-ಶ್ರಮ, ಮಾಲೀಕ-ಕಾರ್ಮಿಕ, ಒಡೆಯ-ಆಳು, ಸ್ಪೃಶ್ಯ-ಅಸ್ಪೃಶ್ಯ ಮುಂತಾದ ದ್ವಂದ್ವ ಶಬ್ದಗಳ ಧ್ವನಿಶಕ್ತಿ, ಚಿಂತನೆ, ಅರ್ಥ ಗ್ರಹಿಕೆಗಳ ಕುರಿತು ಚರ್ಚೆ. ನ್ಯಾಯ-ಅನ್ಯಾಯ, ಸತ್ಯ-ಸುಳ್ಳು, ಸುಖ-ದುಃಖ ಮುಂತಾದ ದ್ವಂದ್ವ ಮೌಲ್ಯದ ಶಬ್ದಗಳ ಕುರಿತು ಚರ್ಚಿಸಲಾಗಿದೆ. ದಿನನಿತ್ಯ ಸಾಮಾನ್ಯರ ಬದುಕಿನಲ್ಲಿ ಕಾಣಸಿಗುವ ದ್ವಿಧಾಭಾವ ಸ್ವಭಾವ, ನಡತೆಗಳು, ಅದಕ್ಕೆ ಕಾರಣಗಳು, ಗ್ರಾಮ/ನಗರ ನಿರಾಕರಣೆಯ/ಅಪೇಕ್ಷೆಯ ಹಿಂದಿರುವ ದ್ವಂದ್ವ ಭಾವಗಳ ಕುರಿತೂ ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

## ೬. ಕಥನ ಸಾಹಿತ್ಯ : ಗ್ರಾಮ/ ನಗರ ಜೀವನದ ನಿರಾಕರಣೆಯ ನೆಲೆಗಳು

ಮುಂಬಯಿ ಕರ್ನಾಟಕದ, ವಿವಿಧ ಕಾಲಘಟ್ಟದ ಕಥನ ಸಾಹಿತ್ಯದಲ್ಲಿ, ಕಥಾನಾಯಕ/ನಾಯಕಿಯರ ಗ್ರಾಮ/ನಗರ ನಿರಾಕರಣೆಗೆ ಅವರು ಕಂಡುಕೊಂಡ ಒತ್ತಡ, ಪ್ರೇರಣೆಗಳನ್ನು ಇಲ್ಲಿ ಚರ್ಚಿಸಲಾಗುವುದು. ಗ್ರಾಮ/ನಗರ ವ್ಯವಸ್ಥೆ, ಅಲ್ಲಿಯ ವಿವಿಧ ವರ್ಗ, ವರ್ಣಗಳ ಜನತೆ ಗ್ರಾಮ/ನಗರ ತೊರೆಯಲು ಕಾರಣವಾಗುವ ಸಾಮಾಜಿಕ, ಧಾರ್ಮಿಕ, ಆರ್ಥಿಕ ಅಂಶಗಳ (ನೌಕರಿಗಾಗಿ, ವ್ಯಾಪಾರಕ್ಕಾಗಿ, ಕೂಲಿಗಾಗಿ, ಅಥವಾ ಸರಕಾರದ ಬೃಹತ್ ಜಲ ವಿದ್ಯುತ್ ಯೋಜನೆಗಳಿಂದ ಗ್ರಾಮ ಮುಳುಗಡೆ ಇತ್ಯಾದಿ) ಕುರಿತು ಚರ್ಚಿಸಲಾಗಿದೆ. ವೈಯಕ್ತಿಕ, ಕೌಟುಂಬಿಕ, ಸಾಮಾಜಿಕ ಮತ್ತು ಆಡಳಿತಾತ್ಮಕ ನೆಲೆಯಲ್ಲಿ ನಿಂತು ಕಥನ ಸಾಹಿತ್ಯದ ಹಿನ್ನೆಲೆಯಲ್ಲಿ ಚರ್ಚಿಸಿದ ನಿರಾಕರಣೆಗೆ ಕಾರಣವಾಗುವ ಅಂಶಗಳನ್ನು ಈ ಅಧ್ಯಾಯದಲ್ಲಿ ಕ್ರೋಡೀಕರಿಸಲಾಗಿದೆ.

## ೭. ಕಥನ ಸಾಹಿತ್ಯ : ಗ್ರಾಮ/ ನಗರ ಜೀವನದ ಆಯ್ಕೆಯ ನೆಲೆಗಳು

ಕಥನ ಸಾಹಿತ್ಯದಲ್ಲಿ ಗ್ರಾಮ/ನಗರ ನಿರಾಕರಿಸಿ ನಗರ/ಗ್ರಾಮಕ್ಕೆ ಬರುವ ವ್ಯಕ್ತಿಗಳು ತಮ್ಮ ಮುಂದಿನ ಬದುಕಿಗೆ ಯಾವ ನೆಲೆಯನ್ನು ಆಯ್ಕೆ ಮಾಡಿಕೊಳ್ಳುತ್ತಾರೆ, ಅದಕ್ಕೆ ಅವರು ಕಂಡುಕೊಳ್ಳುವ ಪೂರಕ ಕಾರಣಗಳೇನು, ಇತ್ಯಾದಿ ಅಂಶಗಳ ಕಥಾ ಹಿನ್ನೆಲೆಯ ಅಧ್ಯಯನವನ್ನು ಈ ಹೆಜ್ಜೆಯಲ್ಲಿ ಮಾಡಲಾಗಿದೆ. ನಗರ ಕೇಂದ್ರಿತ ಆಯ್ಕೆಯ ಪ್ರೇರಣೆಗಳಾವುವು ಮತ್ತು ನಗರ ಜೀವನವನ್ನು ತ್ಯಜಿಸಿ ಗ್ರಾಮದತ್ತ ಆಕರ್ಷಣೆಗೊಳ್ಳಲು ಕಾರಣವಾದ ಅಂಶಗಳು ಯಾವವು, ಗ್ರಾಮೀಣ ಜನರ ಜೀವನ ಸುಧಾರಣೆಯತ್ತ ಅವನ/ಅವಳ ಒಲವು, ಆಸಕ್ತಿ ಕೇಂದ್ರಿತ ಎಳೆತಗಳೆ, ಶಾಂತಿಯುತ ಬದುಕನ್ನು ಅರಸಿ ಮರಳಿ ತನ್ನ ನೆಲೆಯತ್ತ ಸೇರುವ ತವಕವೆ, ಮುಂತಾದ ಪ್ರಶ್ನೆಗಳೊಂದಿಗೆ ಅವರ ನಗರ/ಗ್ರಾಮ ಜೀವನದ ಆಯ್ಕೆಯ

ನೆಲೆಗಳು ಮತ್ತು ಈ ನೆಲೆಗಳೊಂದಿಗೆ ಅವರ ಭೌತಿಕ, ಭಾವನಾತ್ಮಕ ಸಂಬಂಧಗಳನ್ನು ಕುರಿತ ಚರ್ಚೆಯನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

**೮. ಕಥನ ಸಾಹಿತ್ಯ : ಗ್ರಾಮ/ನಗರ ಜೀವನದ ಸಂಘರ್ಷಗಳು, ಸಂಕಟಗಳು**

ಕಥನ ಸಾಹಿತ್ಯದಲ್ಲಿ ಗ್ರಾಮ/ ನಗರ ಮೂಲ ನೆಲೆಯನ್ನು ನಿರಾಕರಿಸಿ ಬಂದ ವ್ಯಕ್ತಿಗಳು ಹೊಸ ನೆಲೆಯಲ್ಲಿ, ಹೊಸ ಪರಿಸರಕ್ಕೆ ಹೊಂದಿಕೊಳ್ಳುವಾಗಿನ ದ್ವಂದ್ವಗಳು ಹಲವಾರು. ಹೊಸ ನೆಲೆಯ ಅವರ ಬದುಕಿನ ಆರಂಭಿಕ ಹಂತ, ಗ್ರಾಮ/ನಗರ ಬದುಕಿನ ವಿವಿಧ ಮುಖಗಳು, ಗ್ರಾಮ/ನಗರ ಜೀವಿಯ ಬದುಕಿನ ಹೋರಾಟ, ವಿವಿಧ ಶಕ್ತಿಗಳ ಜೊತೆ ಅವರ ಸಂಘರ್ಷ, ಅನುಭವಿಸುವ ಸಂಕಟಗಳು, ಹೊಸ ನೆಲೆಯಲ್ಲಿ ಅವರು ನಿರ್ವಹಿಸುವ ಸಾಮಾಜಿಕ, ಧಾರ್ಮಿಕ, ರಾಜಕೀಯ, ಕಾರ್ಮಿಕ ಸಂಘಟನೆಗಳು, ಅವುಗಳ ಸಫಲತೆ, ವಿಫಲತೆ, ಅವರ ಕೌಟುಂಬಿಕ ಜೀವನ ನಿರ್ವಹಣೆಯ ರೀತಿ ಕುರಿತು ಸಾಹಿತ್ಯದ ಮೂಲಕ ಇಲ್ಲಿ ಚರ್ಚಿಸಲಾಗಿದೆ.

**೯. ಕಥನ ಸಾಹಿತ್ಯ : ಗ್ರಾಮ/ನಗರ ಮುಂದಿನ ಸಾಧ್ಯತೆಗಳು**

ಪ್ರಸ್ತುತ ಕಥನ ಸಾಹಿತ್ಯದಲ್ಲಿ, ವ್ಯಕ್ತಿಗಳು ಗ್ರಾಮ/ನಗರಗಳ ಹೊಸ ನೆಲೆಯಲ್ಲಿ ಆರ್ಥಿಕ, ಸಾಮಾಜಿಕ ಸಂಘರ್ಷದ ನಂತರ ಯಾವ ಜೀವನವನ್ನು ಇಷ್ಟಪಡುತ್ತಾರೆ? ಕಳಚಿಕೊಂಡ ಮೂಲ ನೆಲೆಯ ಸಂಬಂಧವೆ? ಬೆಳೆಸಿಕೊಂಡ ಹೊಸ ನೆಲೆಯ ಸಂಬಂಧಗಳೆ? ಅಥವಾ ಇವೆರಡೂ ಅಲ್ಲದ ದ್ವಂದ್ವ ನಿಲುವೆ? ಇವುಗಳ ಸಾಧ್ಯತೆಗಳೇನು? ಎಂಬುದರ ಚರ್ಚೆಯನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

**೧೦. ಗ್ರಂಥಸೂಚಿ**

ಅಧ್ಯಯನಕ್ಕೆ ಬಳಸಿದ ಆಧಾರ ಗ್ರಂಥಗಳು, ಲೇಖಕರ ಹೆಸರು, ಮುದ್ರಣದ ವರ್ಷಗಳ ವಿವರ ಪಟ್ಟಿ, ನಿರೂಪಕರ ಪಟ್ಟಿ, ನಿಯತಕಾಲಿಕೆಗಳು ಮತ್ತು ವಿಮರ್ಶಾ ಗ್ರಂಥಗಳ ವಿವರಗಳನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ. ಇವುಗಳನ್ನು ಮೂಲ ಪಠ್ಯಗಳು, ಪರಾಮರ್ಶನ ಕೃತಿಗಳಾಗಿ ವಿಂಗಡಿಸಿ ವಿವರವಾದ ಪಟ್ಟಿಯನ್ನು ಕೊಡಲಾಗಿದೆ.

# ಅಧ್ಯಾಯ ಎರಡು

## ಮುಂಬಯಿ ಕರ್ನಾಟಕ : ಸಾಂಸ್ಕೃತಿಕ ಸಂಬಂಧದ ಸ್ವರೂಪ

ಪ್ರಸ್ತುತ ಪ್ರಬಂಧದಲ್ಲಿ 'ಮುಂಬಯಿ ಕರ್ನಾಟಕ' ಎಂಬುದನ್ನು ಪದವ್ಯಾಪ್ತಿಗೆ ಮಾತ್ರ ಸೀಮಿತಗೊಳಿಸದೆ ವಿಶಾಲಾರ್ಥದಲ್ಲಿ ಪ್ರಯೋಗಿಸಲಾಗಿದೆ. ಪ್ರಬಂಧದಲ್ಲಿ ಮುಂಬಯಿ ಕರ್ನಾಟಕವೆಂದರೆ ಭೌಗೋಳಿಕವಾಗಿ ಇಂದಿನ ವಾಯುವ್ಯ ಕರ್ನಾಟಕದ ಅವಿಭಜಿತ ನಾಲ್ಕು ಜಿಲ್ಲೆಗಳು (ಉತ್ತರ ಕನ್ನಡ, ಬೆಳಗಾವಿ, ಧಾರವಾಡ, ವಿಜಾಪುರ), ಗೋವಾ, ದಕ್ಷಿಣ ಮಹಾರಾಷ್ಟ್ರದ ಪುಣೆ, ಮುಂಬಯಿ ಮತ್ತು ನಾಸಿಕ್‌ನಂತಹ ನಗರ ಪ್ರದೇಶಗಳೆಂದು ಪರಿಗಣಿಸಲಾಗಿದೆ. ಒಂದು ಪ್ರದೇಶದ ಸಂಸ್ಕೃತಿ ಎಂಬುದು ಆಯಾ ಕಾಲದ ಜನಸಾಮಾನ್ಯರ ಜೀವನದೊಂದಿಗೆ ಬೆಸೆದುಕೊಂಡು ಬಂದ ಸಾಮಾಜಿಕ, ಧಾರ್ಮಿಕ, ಆರ್ಥಿಕ ಪದ್ಧತಿಗಳನ್ನು ಹಿಡಿದಿಟ್ಟ ರೀತಿನೀತಿಯಾಗಿರುತ್ತದೆ. ಕೆಳವರ್ಗದ ಸಾಮಾನ್ಯ ಜನತೆಯ ನಿತ್ಯ ಬದುಕಿನ ಸಂಘರ್ಷದ ದಾಖಲೆಯಾಗಿ ಅವರ ವೃತ್ತಿ, ಪ್ರವೃತ್ತಿಗಳನ್ನೊಳಗೊಂಡ ನಂಬಿಕೆ, ಭಾವನೆ, ಆಶಯಗಳ ಅಭಿವ್ಯಕ್ತಿಗೆ ಈ ಅಧ್ಯಾಯದಲ್ಲಿ ಅಕ್ಷರ ರೂಪವನ್ನು ನೀಡಲಾಗುವುದು. ಸಂಸ್ಕೃತಿ ಎಂಬುದನ್ನು ಶಬ್ದವರ್ಣಿತ ವೈಭವವಾಗಿ ಕಟ್ಟದೆ, ಅದು ಪ್ರತಿ ಪ್ರಜೆಯ ದೈನಂದಿನ ಚಟುವಟಿಕೆಗಳ ಒಂದು ಸಮೂಹ ಛಾಯಾಚಿತ್ರವಾಗಿ ಬಿಂಬಿಸುವ ಮತ್ತು ಒಳಗಣ್ಣಿನಿಂದ ನೋಡುವ ಒಂದು ಸಂಕ್ಷಿಪ್ತ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗುವುದು.

### ಸಾಂಸ್ಕೃತಿಕ ಗಡಿ ಎಂಬುದಿದೆಯೇ? : ಒಂದು ಜಿಜ್ಞಾಸೆ

ಭಾಷಾವಾರು ಪ್ರಾಂತಗಳ ವಿಂಗಡನೆಯ ಸಂದರ್ಭದಲ್ಲಿ ಕೇರಳಕ್ಕೆ ಸೇರಿಸಲ್ಪಟ್ಟ ಕಾಸರಗೋಡು, ಮಹಾರಾಷ್ಟ್ರಕ್ಕೆ ಸೇರ್ಪಡೆಯಾದ ಸೊಲ್ಲಾಪುರ ಮತ್ತು ಇತರ ಗಡಿಗ್ರಾಮಗಳು, ಆಂಧ್ರ ಪ್ರದೇಶಕ್ಕೆ ಸೇರಿದ ಹಲವು ಪ್ರದೇಶಗಳು ಕರ್ನಾಟಕಕ್ಕೆ ಸೇರ್ಪಡೆಯಾಗದೆ ಹೋದ ಭಾವನಾತ್ಮಕ ನೋವು ಕನ್ನಡಿಗರಿಗಿದೆ. ಇದಕ್ಕಾಗಿ ಅನೇಕ ಕನ್ನಡ ಸಂಘ, ಸಂಸ್ಥೆಗಳು ಹೋರಾಟ ಮಾಡುತ್ತಲೂ ಬಂದಿವೆ. ಬೆಳಗಾವಿ ಸಹಿತ ಅನೇಕ ಗಡಿ ಪ್ರದೇಶಗಳು ತನಗೆ ಸೇರಬೇಕೆಂದೂ, ಕಾಸರಗೋಡು ಕೇರಳದ ಅವಿಭಾಜ್ಯ ಅಂಗವೆಂದೂ ಮಹಾರಾಷ್ಟ್ರ, ಕೇರಳ ರಾಜ್ಯಗಳು ವಾದಿಸುತ್ತಲೇ ಇವೆ. "ಹೈದರಾಬಾದ ಕರ್ನಾಟಕ, ಮುಂಬಯಿ ಕರ್ನಾಟಕ ಎಂಬ ಹೆಸರಿನಿಂದ ಕರ್ನಾಟಕದ ಭಾಗಗಳನ್ನು ಕರೆಯಬಾರದು. ಅದು ದಾಸ್ಯದ ಸಂಕೇತ"[1] ಎಂಬ ವಾದವೂ ವಿದ್ವಾಂಸರಲ್ಲಿ ಕೇಳಿ ಬರುತ್ತಲಿದೆ. ಇಂತಹ ಒಂದು ವರ್ಗದ ಭಾವನಾತ್ಮಕ ಅನಿಸಿಕೆಗಳನ್ನು ಬದಿಗಿಟ್ಟು ವಿವೇಚಿಸಿದಾಗ, ನಾವು ಎದುರಿಸುತ್ತಿರುವ ಅಂತರ್‌ರಾಜ್ಯ ಗಡಿ ಸಮಸ್ಯೆ ಭೌಗೋಲಿಕ ಅಥವಾ ರಾಜಕೀಯ ಸ್ವರೂಪದ್ದು ಮತ್ತು ಈ ಸೀಮಾ ಪ್ರದೇಶಕ್ಕೆ ರಾಜಕೀಯ ಅಥವಾ ಭೌಗೋಳಿಕಗಳಿಗೆ ಹೊರತಾಗಿಯೂ ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಮುಂತಾದ ಇನ್ನೂ ಅನೇಕ ಆಯಾಮಗಳಿವೆ ಎಂಬುದನ್ನು ಚಿಂತಿಸಬೇಕಾದ ಆವಶ್ಯಕತೆ ಕಂಡುಬರುತ್ತದೆ. ಮುಂಬಯಿ ಕರ್ನಾಟಕದಂತಹ ಗಡಿನಾಡಿನ (ಅದು ಕರ್ನಾಟಕಕ್ಕೆ ಸೇರಿದ ಮಹಾರಾಷ್ಟ್ರದ ಭಾಗವಾಗಿರಬಹುದು ಅಥವಾ ಮಹಾರಾಷ್ಟ್ರಕ್ಕೆ ಸೇರಿದ ಕರ್ನಾಟಕದ ಭಾಗವಾಗಿರಬಹುದು) ಜನಜೀವನದಲ್ಲಿ ಶತಮಾನಗಳಿಂದ ನೆಲೆಸಿದ ಬದುಕಿನ ಸಾಮರಸ್ಯ ಇಂದಿಗೂ ಈ ಭಾಷೆಗಳ ಭಾವನೆಗಳನ್ನು ಮೀರಿ ನಿಲ್ಲುವಂತಹುದಾಗಿದೆ. ಸಾಮಾನ್ಯ ಜನತೆ ಇಂತಹ

ಜೀವನ ಸಾಮರಸ್ಯಕ್ಕಾಗಿ ತುಡಿಯುತ್ತಿದೆ ಎಂಬುದಕ್ಕೆ ಇತ್ತೀಚೆಗೆ ಮುಂಬಯಿ ಕರ್ನಾಟಕದ ಗಡಿ ಭಾಗದಲ್ಲಿ ಎಂ.ಇ.ಎಸ್., ಗೋವಾ ಏಕೀಕರಣ ಮಂಚ್‌ಗಳಂತಹ ಸಂಘಟನೆಗಳಿಗೆ ಜನತೆ ತೋರಿಸುತ್ತಿರುವ ನಿರಾಸಕ್ತಿಯೇ ಸಾಕ್ಷಿಯಾಗಿದೆ. ನುಡಿ ಮತ್ತು ಗಡಿ ಸಮಸ್ಯೆ/ಸಾಮರಸ್ಯಗಳು ರಾಜಕೀಯ ಪ್ರೇರಿತವಾಗಿದ್ದು ಉಂಡುಟ್ಟು ಸುಖವಾಗಿರುವವರ ಭಾವೋದ್ವೇಗದ ಲಕ್ಷಣಗಳಾಗಿವೆ ಮತ್ತು ಅನ್ನ, ಆಶ್ರಯಕ್ಕೆ ಪರದಾಡುವ ಬಡ, ದಲಿತ, ಕೆಳವರ್ಗದ ಜನರ ಸಾಮಾಜಿಕ ಬದುಕಿನ ಆಶಯಗಳಲ್ಲ ಎಂಬ ಅಂಶ ಗಡಿ ಭಾಗದಲ್ಲಿ ಸಂಚರಿಸಿದಾಗ ತಿಳಿದುಬರುತ್ತದೆ. ಒಟ್ಟಾರೆ ಮುಂಬಯಿ ಕರ್ನಾಟಕದ ಸಾಂಸ್ಕೃತಿಕ ಸಂಬಂಧಗಳ ಸ್ವರೂಪವೆನ್ನುವ ಈ ಅಧ್ಯಾಯದ ಪರಿಕಲ್ಪನೆ ಕನ್ನಡ, ಕೊಂಕಣಿ, ಮರಾಠಿ ಈ ಮೂರು ಜನಾಂಗಗಳ ಒಟ್ಟು ಬದುಕಿನ ರೀತಿ ಮತ್ತು ಕೊಡುಕೊಳ್ಳುವಿಕೆಯ ದರ್ಶನವಾಗಿದೆ.

**೧. ಮುಂಬಯಿ ಕರ್ನಾಟಕ : ಭೌಗೋಳಿಕ ಸಂಬಂಧದ ನೆಲೆಗಳು**

ಒಂದು ಪ್ರದೇಶದ ಜನಾಂಗೀಯ ಇತಿಹಾಸದ ಮೇಲೆ ಆ ಪ್ರದೇಶದ ಭೌಗೋಳಿಕ ಲಕ್ಷಣ ಮಹತ್ವದ ಪರಿಣಾಮವನ್ನು ಬೀರುತ್ತದೆ. ಕರ್ನಾಟಕದ ಉಳಿದ ಪ್ರದೇಶಕ್ಕೆ ಹೋಲಿಸಿದರೆ ಮುಂಬಯಿ (ವಾಯುವ್ಯ) ಕರ್ನಾಟಕವು ವಿಶಿಷ್ಟವಾದ ಭೌಗೋಳಿಕ ಲಕ್ಷಣವನ್ನು ಹೊಂದಿದೆ. ಪಶ್ಚಿಮಕ್ಕೆ ಅರಬ್ಬಿ ಸಮುದ್ರದ ಕರಾವಳಿ, ಪೂರ್ವಕ್ಕೆ ಬಯಲು ಸೀಮೆ, ಉತ್ತರಕ್ಕೆ ಕೃಷ್ಣಾ-ಭೀಮಾ ನದಿಗಳ ಫಲವತ್ತಾದ ಪ್ರದೇಶ, ದಕ್ಷಿಣಕ್ಕೆ ಕಾಳಿ-ಶರಾವತಿ ನದಿಗಳ ಹರಿವು, ಮಧ್ಯ ಪಶ್ಚಿಮ ಘಟ್ಟಗಳ ದುರ್ಗಮ ಕಾಡು ಇದರ ಭೂಲಕ್ಷಣಗಳಾಗಿವೆ. ಈ ಭೂಲಕ್ಷಣಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಪ್ರದೇಶವನ್ನು ಕರಾವಳಿ ಪ್ರದೇಶ (ಕೊಂಕಣ), ಪಶ್ಚಿಮ ಘಟ್ಟಗಳು (ಮಲೆನಾಡು), ಅರೆಮಲೆನಾಡು, ಮತ್ತು ಬಯಲು ಸೀಮೆ ಎಂದು ವಿಭಾಗಿಸಿಕೊಳ್ಳಬಹುದು.

ಇಂದು ಮುಂಬಯಿ ಕರ್ನಾಟಕವೆಂದು ಕರೆಯಲಾಗುವ ನಾಡು ಆಧುನಿಕಪೂರ್ವ ಕಾಲದಲ್ಲಿ ಯಾವ ಗಡಿ ರೇಖೆಗಳ ಬಂಧನವಿಲ್ಲದೆ ಹಲವು ಭಾಷೆ, ಜನಾಂಗಗಳ ನಾಡಾಗಿದ್ದುದು ತಿಳಿದುಬರುತ್ತದೆ. (ಗಡಿ, ನುಡಿ, ಜಲಗಳ ಕ್ಲಿಷ್ಟತೆ ಮೊಳಕೆಯೊಡೆದಿದ್ದು ದೇಶ ಪ್ರಜಾಪ್ರಭುತ್ವ ವ್ಯವಸ್ಥೆ ಒಪ್ಪಿಕೊಂಡ ನಂತರ ಎಂಬುದು ಸ್ಪಷ್ಟವಿದೆ.) "ಪ್ರಾಚೀನ ಕಾಲದಲ್ಲಿ ಕರ್ನಾಟಕವೆ ಮಹಾರಾಷ್ಟ್ರವಾಗಿತ್ತು" ಎಂಬುದನ್ನು ಲೋಕಮಾನ್ಯ ಟಿಳಕರು ಸಾರ್ವಜನಿಕ ಭಾಷಣದಲ್ಲಿ ಹೇಳಿದ್ದಾರೆ. ಕವಿರಾಜ ಮಾರ್ಗದಲ್ಲಿ ಶ್ರೀವಿಜಯನು ಕನ್ನಡ ನಾಡಿನ ವಿಸ್ತಾರವನ್ನು 'ಕಾವೇರಿಯಿಂದ ಗೋದಾವರಿಯವರೆಗೆ' ಎಂದು ಗುರುತಿಸಿದ್ದು, ಈಗಿನ ಬಹಳಷ್ಟು ಮರಾಠಿ ಪ್ರದೇಶಗಳು ಕನ್ನಡದ ಪ್ರದೇಶಗಳಾಗಿದ್ದುದು ಸ್ಪಷ್ಟವಿದೆ. 'ಮಹಾರಾಷ್ಟ್ರ' ಶಬ್ದ ನಿಷ್ಪತ್ತಿಯ ಕುರಿತು ಅನೇಕ ವಾದಗಳಿವೆ. 'ಮಹಾರಾಷ್ಟ್ರವೆಂದರೆ 'ಮಹಾರರ ರಾಷ್ಟ್ರ' (ಇಲ್ಲಿನ ಮೂಲನಿವಾಸಿಗಳು ಹೊಲೆಯರು) ಎಂದು ಮೋಲ್ಸವರ್ಥ್ ಎಂಬ ಆಂಗ್ಲ ಸಂಶೋಧಕ ಹೇಳುತ್ತಾನೆ" ಮಹಾರಾಷ್ಟ್ರದಲ್ಲಿ ಹೊಲೆಗೇರಿ ಇಲ್ಲದ ಊರೇ ಇಲ್ಲದ್ದರಿಂದ ಈ ವಾದವನ್ನು ನಿರ್ಲಕ್ಷಿಸುವಂತಿಲ್ಲ. ರಠಿ>ಮಹಾರಠಿ>ಮರಾಠಿ ಜನಾಂಗವೇ ಮುಂದೆ ಮರಾಠರಾಗಿರಬೇಕೆಂದು ಹಾಗೂ ರಟ್ಟರು ರಾಷ್ಟ್ರೀಕರಾಗಿ ಮುಂದೆ ಮಹಾರಾಷ್ಟ್ರೀಕರಾಗಿರಬೇಕೆಂಬ ಇನ್ನೊಂದು ವಾದವೂ ಇದೆ. 'Rattas who gave their name to the country of maharastra.. .." ನ್ಯಾಯಮೂರ್ತಿ ಮಹಾದೇವ ಗೋವಿಂದರು ಮರಾಠರಲ್ಲಿ ದ್ರಾವಿಡರ ಅಂಶವಿರುವುದನ್ನು 'ದಿ ರೈಸ್ ಆಫ್ ಮರಾಠಾ ಪವರ್' ಎಂಬ ಗ್ರಂಥದಲ್ಲಿ ವಿಶದಪಡಿಸಿರುವುದನ್ನು ಗಮನಿಸಿದರೆ, ಮರಾಠರೊಂದಿಗೆ ತಳುಕು ಹಾಕಿಕೊಂಡಿರುವ ಈ ದ್ರಾವಿಡರು ಕನ್ನಡಿಗರಲ್ಲದೆ ಬೇರೆ ಆಗಿರಲು ಸಾಧ್ಯವಿಲ್ಲ ಎನ್ನಿಸುತ್ತದೆ. ನೀಲಗಿರಿಯಿಂದ ವಿಂಧ್ಯದವರೆಗೆ ಆಗ ಕನ್ನಡದ ಸೀಮೆ ಹಬ್ಬಿತ್ತು. ಬಲೂಚಿಸ್ಥಾನದ ಮಧ್ಯಪ್ರದೇಶದಲ್ಲಿ ಮಾತನಾಡುವ ಬ್ರೂಹಿ ಭಾಷೆಯೂ ಕನ್ನಡಕ್ಕೆ ಹತ್ತಿರವಾದ ಭಾಷೆಯಾಗಿದೆ ಎಂಬುದನ್ನು ಶಂ.ಬಾ. ಜೋಶಿಯವರು ಪ್ರತಿಪಾದಿಸುತ್ತಾರೆ.

ಕೊಂಕಣ ಎಂದರೆ ಕೊಂಕಾದ ಅಂದರೆ ವಕ್ರವಕ್ರವಾಗಿರುವ ಸಮನಾದ ಭೂಮಿಯಿಲ್ಲದ ದೇಶವೆಂದು ಕನ್ನಡ ಭಾಷೆಯಿಂದಲೇ ಕೆಲವರು ಇದರ ಅರ್ಥವ್ಯುತ್ಪತ್ತಿಯನ್ನು ಹೇಳುತ್ತಾರೆ. 'ಡಾ. ಕೇತಕರರು ಹೇಳುವಂತೆ 'ಅಪರಾಂತಕ' ಶಬ್ದದಿಂದ ಈ ಹೆಸರು ಹುಟ್ಟಿದಂತೆ ಕಾಣುತ್ತದೆ. ಆರ್ಯರು ಈ ನಾಡಿಗೆ ಅಪರಾಂತಕವೆಂದು ಕರೆದಿದ್ದಾರೆ. 'ಅಪರಾಂತವೆಂಬ ಸಂಸ್ಕೃತ ಶಬ್ದಕ್ಕೆ ಮೂಲಕಾರಣವಾದ ತೆಂಕಣ(ದಕ್ಷಿಣ)ವೆಂಬುದು ಈ ನಾಡಿನ ಮೊದಲ ಹೆಸರಿರಬೇಕು" ಎಂಬ ಅಭಿಪ್ರಾಯ ವಿದ್ವಾಂಸರದಾಗಿದೆ. ತೆಂಕಣ > ಕೊಂಕಣವೆಂಬ ಬದಲಾವಣೆ ಪಡೆದದ್ದು ಆಶ್ಚರ್ಯವಿರಲಾರದು. ಕನ್ನಡ, ಮರಾಠಿ, ಕೊಂಕಣಿ ಜನರ ಸಾಂಸ್ಕೃತಿಕ

ಪರಿವಲಯವಾಗಿ ಮುಂಬಯಿ ಕರ್ನಾಟಕವು ಪ್ರತಿನಿಧಿಸುತ್ತಿದ್ದು ಈ ಮೂರೂ ಪ್ರದೇಶದ ನೆಲ, ಜಲ, ಭಾಷೆಗಳು ಒಂದಕ್ಕೊಂದು ಹಾಸು ಹೊಕ್ಕಾಗಿರುವುದು ಸಂಶೋಧನೆಯಿಂದ ತಿಳಿಯುವ ಅಂಶವಾಗಿದೆ.

ಕನ್ನಡ ಮರಾಠಿ ಸಾಂಸ್ಕೃತಿಕ ಸಂಬಂಧ ಒಂದು ದಾಯಾದಿ ಸಂಬಂಧ ಎಂಬುದು ಇತ್ತೀಚಿನ ನೆಲ, ಜಲದ ಪ್ರಶ್ನೆಯ ಮೂಲಕ ಉದ್ಧೃತವಾದುದಾಗಿದೆ. ಆದರೆ ಇದು ವ್ಯಾಜ್ಯರೂಪ ತಾಳಿದ್ದು ಶತಮಾನಗಳ ಹಿಂದೆ ಎಂಬುದು ಅಧ್ಯಯನಗಳಿಂದ ಸ್ಪಷ್ಟವಾಗಿದೆ. ಮಹಾರಾಷ್ಟ್ರದ ಭೌಗೋಳಿಕ ಮೂಲವನ್ನು ಕುರಿತು ಚರ್ಚಿಸುತ್ತ ಶಂ.ಬಾ. ಜೋಶಿಯವರು 'ವರ್‍ಹಾಟ' ಶಬ್ದ ವ್ಯುತ್ಪತ್ತಿಯು ವರ್ಧಾ+ತಟ=ವರ್‍ಹಾಟ ಎಂಬುದಾಗಿದೆ[೬] ಎಂದಿದ್ದಾರೆ. ವರ್‍ಹಾಡ ಪ್ರದೇಶದಲ್ಲಿ ತಾಪೀ ಮತ್ತು ವೈನಗಂಗಾದಂತ ದೊಡ್ಡ ನದಿಗಳು ಹರಿಯುತ್ತವೆ. ಜೊತೆಗೆ 'ವರ್ಧಾ' ಎಂಬ ಚಿಕ್ಕ ಹಳ್ಳದಂತಹ ನದಿಯೂ ಇದೆ ಎಂಬ ಅವರ ಅಭಿಪ್ರಾಯದ ಜೊತೆ ಇಂದಿನ ಮಧ್ಯ ಕರ್ನಾಟಕದ ತುಂಗೆಯ ಉಪನದಿಯಾದ ವರದೆ ಯಾಕಿರಬಾರದು ಎಂಬ ಸಂಶಯವನ್ನು ವ್ಯಕ್ತಪಡಿಸುವವರೂ ಇದ್ದಾರೆ. ಹಾಗೆ ಮರಾಠಿ ಭಾಷೆಯ ಪ್ರಾಚೀನ ಕಾಲದ ಮೊದಲ ವಾಕ್ಯ 'ಚಾವುಂಡರಾಯಜ್ ಕರವಿಯಲೇಜ್'[೭] ಎಂಬುದು ಶ್ರವಣಬೆಳುಗೊಳದ ಹತ್ತನೆಯ ಶತಮಾನದ ಶಾಸನವೊಂದರಲ್ಲಿ ದೊರೆತಿದೆ. ಕನ್ನಡ ನೆಲದ ಮೂಲಸ್ಥಾನದ ಕುರಿತು ಚಿಂತಿಸುತ್ತಾ ಶಂ. ಬಾ. ಜೋಶಿಯವರು, 'ಗೋದಾವರಿ, ನರ್ಮದಾ ನದಿಯ ಮಧ್ಯದ ಪ್ರದೇಶವು ಕನ್ನಡದ ನೆಲೆಯಾಗಿತ್ತು' ಎಂದಿದ್ದಾರೆ. ಈ ಕುರಿತು, 'ನಮ್ಮ ಹಳೆಯ ಕನ್ನಡ ನಾಡು ಈಗಣ ಕಾನದೇಶವೇ ಆಗಿರಬೇಕೆಂದು ಮಾಡಿರುವ ನಿರ್ಧಾರವು ತುಂಬಾ ಶ್ಲಾಘನೀಯವ್'[೮] ಎಂದು ಗೋವಿಂದ ಪೈಯವರೂ ಸಮರ್ಥಿಸುತ್ತಾರೆ. ಇವೆಲ್ಲ ವಾದ ವಿವಾದಗಳು ದ್ವಂದ್ವವನ್ನು ಸೃಷ್ಟಿಸಿದರೂ, ಕರ್ನಾಟಕ ಮಹಾರಾಷ್ಟ್ರಗಳು ಒಂದರ ಒಡಲೊಳಗೆ ಇನ್ನೊಂದು ಚಾಚಿಕೊಂಡಿದ್ದು ಪ್ರಾಚೀನ ಕಾಲದಿಂದಲೂ ಸ್ಪಷ್ಟವಿದೆ. ನಾಸಿಕ್ ಜಿಲ್ಲೆಯ ವೀರಗಲ್ಲುಗಳು ಮತ್ತು ಖಾನದೇಶ, ನಾಸಿಕ್ ನಗರ ಕಡೆಗಳಲ್ಲಿ ವಾಸಿಸುತ್ತಿರುವ ಕಾನಡ ಗೌಳಿಗಳು (ಇವರು ಈಗಲೂ ಕನ್ನಡ ಮಾತನಾಡುತ್ತಾರೆ) ಇತ್ಯಾದಿ ಸಂಗತಿಗಳಿಂದ ಈ ಭಾಗವೆಲ್ಲ ಕನ್ನಡ ಹಟ್ಟಿಕಾರರ ತವರು ಮನೆಯೆಂದೇ ಕರೆದರೆ ಅನುಚಿತವಾಗಲಾರದು. ನಮ್ಮ ಹಳೆಯ ಕನ್ನಾಡು ಈಗಿನ ಕಾನದೇಶವೆಂದು, ಹಟ್ಟಿಕಾರ ಜನಾಂಗವೇ ಅಖಿಲ ಭಾರತೀಯ ಜನಾಂಗವೆಂದೂ ವಿದ್ವಾಂಸರ ಖಚಿತ ಅಭಿಪ್ರಾಯವಾಗಿದೆ. ಹಟ್ಟಿಕಾರರು ಕುರು (ಕಂವ), ತುರುವ, ಮತ್ತು ಕುಡುವ ಎಂಬ ಮೂರು ಬಗೆಯವರು ಇದ್ದಾರೆ. ಇವರೆಲ್ಲ ಕ್ರಿ.ಪೂ. ೨೦೦೦ರಲ್ಲಿ ನರ್ಮದಾ ಗೋದಾವರಿಯ ತೀರಗಳಲ್ಲಿ ಬೀಡುಬಿಟ್ಟವರು. ಹಟ್ಟಿಕಾರರು (ನೆಯ್‌ಕಾರರು) ವೇದಪೂರ್ವ ಜನಾಂಗವೆಂಬುದನ್ನು ಶಂಬಾ ನಡೆಸಿರುವ ಅಧ್ಯಯನ ಮತ್ತು ಆಧಾರಗಳ ಮೇಲಿಂದ ಖಚಿತವಾಗಿ ಹೇಳಬಹುದು. 'ಕಾವೇರಿಯಿಂದ ಗೋದಾವರಿಯವರೆಗೆ' ಕನ್ನಡ ಸಂಸ್ಕೃತಿ ಹರಡಿತ್ತೆಂಬ ಅಭಿಪ್ರಾಯ ಇಂದು ಮಸುಕಾಗಿ, ಗೋದಾವರಿ ನರ್ಮದೆಯರ ಮಧ್ಯದ ಪ್ರದೇಶ 'ಕಂನಡ'ದ ಮೂಲ ಎಂಬ ಸಂಶೋಧನೆ ಮಹತ್ವ ಪಡೆದಿದೆ. ಇದರಿಂದ ಕನ್ನಡದ ಸಂಸ್ಕೃತಿಯ ಹಾಸಿನ ಮೇಲೆ ಮರ್‍ಹಾಠಿ ಸಂಸ್ಕೃತಿ ವಿಕಸನ ಹೊಂದಿತು ಎಂದು ಹೇಳಬಹುದಾಗಿದೆ. ಮುಂಬಯಿ ಕರ್ನಾಟಕವು ಪ್ರಾಚೀನ ಕಾಲದಲ್ಲಿ ಈ ಪ್ರದೇಶದ ಒಂದು ಭಾಗವಾಗಿದ್ದುದು ಸ್ಪಷ್ಟವಿದೆ. ಭಾಷಾವಾರು ಪ್ರಾಂತಗಳ ವಿಂಗಡನೆಯ ನಂತರ ಮಹದಾಯಿ ನದಿ ಕನ್ನಡ, ಕೊಂಕಣಿಯರನ್ನು ಮತ್ತು ಕೃಷ್ಣೆ, ಭೀಮಾ ನದಿಗಳು ಕನ್ನಡ ಮರಾಠಿಗರನ್ನು ಬೆಸೆದಿರುವುದು ಒಂದು ಭೌಗೋಳಿಕ ಬಂಧನವೇ ಸರಿಯೆನ್ನಬಹುದು. ಇಂತಹ ಪ್ರದೇಶದಲ್ಲಿ ಇಂದು ನೈಸರ್ಗಿಕ ಬಂದರುಗಳು, ಕಡಲ ತೀರಗಳು, ಎತ್ತರದ ವಿಹಾರ ಸ್ಥಳಗಳು, ಜಲಪಾತಗಳು, ಮ್ಯಾಂಗನೀಸ್ ಉತ್ಪಾದನಾ ಕೇಂದ್ರಗಳು, ಅಣುವಿದ್ಯುತ್-ಜಲವಿದ್ಯುತ್ ಯೋಜನಾ ಕೇಂದ್ರಗಳು, ಅಣೆಕಟ್ಟು ಪ್ರದೇಶಗಳು, ನೈಸರ್ಗಿಕ ಗುಹೆಗಳೂ ಇವೆ. ಇವು ಜನಸಾಮಾನ್ಯರ ಆರ್ಥಿಕ ವ್ಯವಸ್ಥೆಯ ಮೇಲೆ ಪರಿಣಾಮ ಬೀರುವ ಅಂಶಗಳೂ ಆಗಿವೆ. ಸುಮಾರು ಎರಡೂವರೆ ಸಾವಿರ ವರ್ಷಗಳ ನಿಖರ ಇತಿಹಾಸ ದಾಖಲೆಗಳನ್ನು ಹೊಂದಿದ ಈ ನಾಡನ್ನು ಶಾತವಾಹನ, ಚುಟು, ಬನವಾಸಿ ಕದಂಬರು, ಸಾಮಂತ ಕದಂಬರು, ಚಾಲುಕ್ಯ, ರಾಷ್ಟ್ರಕೂಟ, ವಿಜಯನಗರ, ಕೆಳದಿ, ಕಿತ್ತೂರು, ಸ್ವಾದಿ, ಬಿಳಗಿ, ಗೇರುಸೊಪ್ಪ, ಸಂಗೀತಪುರ (ಹಾಡುವಳ್ಳಿ), ಚಂದಾವರ, ಅದಿಲಷಾಹಿ, ರಟ್ಟರು, (ಇವರೆಲ್ಲ ಕನ್ನಡ ಅರಸರು) ಮತ್ತು ಶಿವಾಜಿ, ಪೇಶ್ವೆಗಳು (ಇವರು  ಮರಾಠರು) ಮುಂತಾದ ದೇಶೀಯ ಅರಸರು ಆಳಿದ್ದಾರೆ. ನಂತರ ಬಂದ ಪೋರ್ಚುಗೀಸರು, ಡಚ್ಚರು, ಆಂಗ್ಲರಾದಿ ವಿದೇಶಿಯರು ಇಲ್ಲಿಯ ಹಲವಾರು ಬಂದರುಗಳನ್ನು, ಆಡಳಿತ ಕೇಂದ್ರಗಳನ್ನು ಆಕ್ರಮಿಸಿಕೊಂಡು ತಮ್ಮ ವ್ಯಾಪಾರದ ಜೊತೆ ಆಡಳಿತವನ್ನು ನಡೆಸಿದ್ದಾರೆ.

## ಭೂ ಒಡೆತನ ಮತ್ತು ರೈತ ಹೋರಾಟಗಳು

ಮುಂಬಯಿ ಕರ್ನಾಟಕ ಪ್ರದೇಶದಲ್ಲಿ ಪಶುಪಾಲನೆ, ಕೃಷಿಗಳು ಮೂಲವೃತ್ತಿಗಳಾಗಿ ಬೆಳೆದುಬಂದಿವೆ. ಪ್ರಾಚೀನ ಕಾಲದಲ್ಲಿ ಹತ್ತಿ ಇಲ್ಲಿಯ ಪ್ರಮುಖ ಬೆಳೆಯಾಗಿದ್ದುದು, ಇಲ್ಲಿಯ ಮೂಲನಿವಾಸಿಗಳಾದ ಹಟ್ಟಿಕಾರರು (ಧನಗಾರರು) ಹತ್ತಿಯನ್ನು ಇಜಿಪ್ತ, ಗ್ರೀಸ್ ದೇಶಗಳಿಗೆ ರಫ್ತು ಮಾಡುತ್ತಿದ್ದುದು ಸಂಶೋಧನೆಗಳಿಂದ ತಿಳಿದು ಬಂದಿದೆ. 'ಹತ್ತಿಯನ್ನು ಕಂಡುಹಿಡಿದು ಜಗತ್ತಿಗೆ ಕೊಟ್ಟ ಶ್ರೇಯಸ್ಸು ಹಟ್ಟಿಕಾರರಿಗೆ ಸಲ್ಲತಕ್ಕುದಾಗಿದೆ. ಮರ (ಮರ=ಝಾಡ)ಹಾಟವು ಇದೇ ಪ್ರದೇಶವಾಗಿದೆ. ಉತ್ತರ ಕರ್ನಾಟಕದ ಗೆಜೆಟಿರ್‌ನಲ್ಲಿ 'ಜಾಡರು ಬೆಳಗಾವಿ, ಧಾರವಾಡ, ವಿಜಾಪೂರಗಳ ಕಡೆಗೆ ಉತ್ತರದಿಂದ ಬಂದವರೆಂದು ದಾಖಲಿಸಿದ್ದು ಅದು ಕೃಷ್ಣೆ ನರ್ಮದೆಯರ ಮಧ್ಯದ ಭಾಗವಾಗಿದೆ" ಎಂಬ ಮಾತನ್ನು ಒಪ್ಪಬಹುದು. ಜೋಳ, ರಾಗಿ, ನವಣೆ, ಭತ್ತ ಮೊದಲಾದವು ಆಹಾರ ಬೆಳೆಗಳಾಗಿವೆ. ಕಬ್ಬು, ಮೆಣಸಿನಕಾಯಿ, ಕರಾವಳಿಯಲ್ಲಿ ತೆಂಗು ಇತರ ವಾಣಿಜ್ಯ ಬೆಳೆಗಳಾಗಿವೆ. 'ಹಿಂದೂ ದೇಶದ ಪಶ್ಚಿಮ ಕರಾವಳಿಯಿಂದ ಪರದೇಶಗಳೊಡನೆ ವ್ಯಾಪಾರ ಮಾಡಲು ಪ್ರಾಚೀನ ಕಾಲದಲ್ಲಿ ತಮಿಳರಿಗಿಂತಲೂ ಕರ್ನಾಟರಿಗೆ ಹೆಚ್ಚು ಬಂದರುಗಳಿದ್ದವು'[೧೦] ಎಂಬ ಶಂ.ಬಾ. ಜೋಶಿಯವರ ಮಾತು ಅಂದು ಕೃಷಿಗಿದ್ದ ಪ್ರಾಮುಖ್ಯತೆಯನ್ನು ಸೂಚಿಸುತ್ತದೆ.

ಸ್ವಾತಂತ್ರ್ಯಾನಂತರ ಕೃಷಿಯು ಮುಂಬಯಿ ಕರ್ನಾಟಕದಲ್ಲಿ ಲಾಭದಾಯಕ ವೃತ್ತಿಯಾಗಿ ಉಳಿದಿಲ್ಲ. ಇದನ್ನು ನಂಬಿದ ಅನೇಕ ರೈತರು ಮುಂಬಯಿ, ಪುಣೆ ನಗರಗಳತ್ತ ವಲಸೆ ಹೋಗಿದ್ದಾರೆ ಅಥವಾ ನೇಣಿಗೆ ಶರಣಾಗಿದ್ದಾರೆ. ಸರ್ಕಾರಗಳು ರೈತರ ಪರವಾಗಿ ಅನೇಕ ಕಾನೂನು(ಸುಧಾರಣೆ)ಗಳನ್ನು ಜಾರಿಗೆ ತಂದಿವೆ. ಮೊದಲನೆಯದಾಗಿ, 'ಸ್ವಾತಂತ್ರ್ಯ ಬಂದ ನಂತರ ಸರ್ಕಾರವು ಇನಾಂದಾರಿ ಕಾಯ್ದೆ (ಮೈಸೂರು ವೈಯಕ್ತಿಕ ಮತ್ತು ಇನ್ನಿತರ ಇನಾಂ ರದ್ಧತಿ ಕಾಯಿದೆ ೧೯೫೪) ಜಾರಿಗೆ ತಂದಿತು'[೧೧] ಇದರ ಪರಿಣಾಮವಾಗಿ ಅನೇಕ ಸಾಗುವಳಿದಾರರು ತಾವು ಸಾಗುಮಾಡುತ್ತಿದ್ದ ಜಮೀನಿಗೆ ಒಡೆಯರಾದರು ಮತ್ತು ಇನಾಂದಾರರು ಪರಿಹಾರ ಧನವನ್ನು ಪಡೆದರು. ಇನಾಂ ರದ್ಧತಿ ಕಾಯಿದೆಯು ಕೇವಲ ಕೃಷಿ ಜಮೀನಿನ ಇನಾಂಗಳನ್ನು ರದ್ದುಪಡಿಸಿತಾದರೂ ಖನಿಜ ಮುಂತಾದ ನೈಸರ್ಗಿಕ ಸಂಪನ್ಮೂಲಗಳದ್ದನ್ನು ರದ್ದು ಮಾಡಲಿಲ್ಲ. 'ನಂತರ ಬಂದ ೧೯೭೭ರ ಕರ್ನಾಟಕದ ಹಲವಾರು ಇನಾಂಗಳ ರದ್ಧತಿ ಕಾಯಿದೆ-೧೯೭೭ ಎಲ್ಲ ತರದ ಇನಾಂಗಳನ್ನು ಸಂಪೂರ್ಣ ರದ್ದುಪಡಿಸಿತು.'[೧೨] ಎರಡನೆಯದಾಗಿ, ಕರ್ನಾಟಕ ಸರಕಾರ ಜಾರಿಗೊಳಿಸಿದ (೧೯೭೪) 'ಉಳುವವನೇ ಹೊಲದೊಡೆಯ' ಎಂಬ ಭೂಸುಧಾರಣೆ ಕಾನೂನು ಮುಖ್ಯವಾಗಿದೆ. ಈ ಶಾಸನದಂತೆ ಸಾವಿರಾರು ಎಕರೆ ಜಮೀನನ್ನು ಹೊಂದಿದ್ದ ಮೇಲ್ಜಾತಿಯ, ಪ್ರಬಲ ವರ್ಗದ ಜನರು, ಭೂಮಿಯನ್ನು ಕಳೆದುಕೊಂಡು, ಗೇಣಿ ಮಾಡುತ್ತಿದ್ದ ಸಾವಿರಾರು ಸಣ್ಣ ರೈತರು ಭೂಮಿ ಪಡೆಯುವಂತಾಯ್ತು. ಆದರೆ ಆ ಭೂಮಿಯಲ್ಲಿ ಕೃಷಿಕೂಲಿ ಮಾಡಿಕೊಂಡಿದ್ದ ಕೆಳ, ದಲಿತ ವರ್ಗದ ಜನರು ಕೃಷಿಕೂಲಿಗಳಾಗಿಯೇ ಮುಂದುವರೆದರು. ಅವರು ಇಂದಿಗೂ ಭೂಹೀನರಾಗಿಯೇ ಉಳಿದಿದ್ದಾರೆ. ಬೆಂಬಲ ಬೆಲೆ, ಬೇಸಾಯ ಕ್ರಮದಲ್ಲಿ ಸುಧಾರಿತ ನಮೂನೆಗಳು ಮುಂತಾದ ಸರಕಾರಿ ಕಾರ್ಯಕ್ರಮಗಳ ಲಾಭ ಸಣ್ಣ ರೈತ, ಅತಿ ಸಣ್ಣ ರೈತ ಹಾಗೂ ಕೃಷಿ ಕೂಲಿಗಳಿಗೆ ಮುಟ್ಟುತ್ತಿಲ್ಲವೆಂಬ ಅಭಿಪ್ರಾಯ ಕೇಳಿಬರುತ್ತಿದೆ. ಯಾಂತ್ರೀಕೃತ ಬೇಸಾಯ ಇವರ ಪಾಲಿಗೆ ಗಗನ ಕುಸುಮವಾಗಿದೆ. ಇಂದಿನ ದಿನಗಳಲ್ಲಿ ಅತಿವೃಷ್ಟಿ, ಅನಾವೃಷ್ಟಿಯಿಂದ ಬೆಳೆ ಹಾಳಾದಲ್ಲಿ ಹಾಗೂ ಸರಿಯಾದ ಬೆಳೆ ದೊರಕದೇ ಇದ್ದಲ್ಲಿ, ರೈತರು, ರೈತಸಂಘ ವಿವಿಧ ಸಂಘಟನೆಗಳ ಮೂಲಕ ಸರ್ಕಾರದ ಮೇಲೆ ಪರಿಹಾರಕ್ಕಾಗಿ ಒತ್ತಡ ತರುತ್ತಾರೆ. ಸರ್ಕಾರಗಳು ಬೆಂಬಲ ಬೆಲೆ ಘೋಷಿಸಿ, ಪ್ರತ್ಯೇಕ ಬೆಳೆಗಳಿಗೆ ಮಂಡಳಿಗಳನ್ನು ರಚಿಸುತ್ತವೆ. ಈ ಮಂಡಳಿಗಳ ರಚನೆಯು ಕೂಡಾ ತಾರತಮ್ಯಭಾವದಿಂದ ಕೂಡಿದ್ದು ತನಗೆ ಆದಾಯ ತರುವ ವಾಣಿಜ್ಯ ಬೆಳೆಗಳಾದ ಕಾಫಿ, ಟೀ, ಅಡಿಕೆ, ತೆಂಗು ಮುಂತಾದವುಗಳಿಗೆ ಮಂಡಳಿಗಳ ವ್ಯವಸ್ಥೆ ಇದ್ದು ಆಹಾರದ ಬೆಳೆಗಳಾದ ಈರುಳ್ಳಿ, ಟೊಮ್ಯಾಟೋ, ಆಲೂಗಡ್ಡೆ, ಜೋಳ, ಮೆಕ್ಕೆಜೋಳ ಬೆಳೆಗಳಿಗೆ ಇಲ್ಲದಿರುವುದು ಸಾವಿರಾರು ಜನ ರೈತರ ಆತ್ಮಹತ್ಯೆಗಳಿಗೆ ಕಾರಣವಾಗಿದೆ.

ಮುಂಬಯಿ ಕರ್ನಾಟಕದಲ್ಲಿ, ೧೯೩೮ರಲ್ಲಿ ದಿನಕರ ದೇಸಾಯಿಯವರ ಮುಂದಾಳತ್ವದಲ್ಲಿ ಆರಂಭವಾಗಿ ೧೯೭೩ರವರೆಗೂ ಮುಂದುವರೆದ ಅಂಕೋಲೆಯ ಭೂಹೋರಾಟ ಮೊದಲ ರೈತ ಚಳುವಳಿಯೆನಿಸಿದರೂ ಅದು ಇತಿಹಾಸದಲ್ಲಿ ದಾಖಲಾಗದೇ ಹೋಗಿರುವುದು ಮತ್ತು ಚರ್ಚೆಗೆ ಒಳಗಾಗದೇ ಇರುವುದು ಆಶ್ಚರ್ಯವಾಗಿದೆ. "ನಮ್ಮ ಪ್ರಭುತ್ವಗಳು ಭೂಮಿ ಹಂಚಿಕೆ ಪ್ರಶ್ನೆಯನ್ನು ಅಸಡ್ಡೆ ಮಾಡಿರುವುದಕ್ಕೂ,

ನಮ್ಮ ಜ್ಞಾನಕ್ಷೇತ್ರಗಳು ಭೂಚಳುವಳಿಗಳನ್ನು ಮುಖ್ಯವೆಂದು ತಿಳಿಯದೇ ಇರುವುದಕ್ಕೂ ಸಂಬಂಧ ಇದ್ದಂತಿದೆ"[೧೩] ಎಂಬ ಅಭಿಪ್ರಾಯ ಅಧ್ಯಯನದ ನಿಲುವೂ ಆಗಿದೆ. ಶಿವಮೊಗ್ಗ ಜಿಲ್ಲೆಯಲ್ಲಿ ಕಾಗೋಡು ಸತ್ಯಾಗ್ರಹದ ನಂತರ ರೈತರ ಮೇಲೆ ಸೋಷಿಯಲಿಸ್ಟರ ಪ್ರಭಾವ ಗಾಢವಾಗಿ ಪರಿಣಾಮ ಬೀರಿತು ಹಾಗೂ ಸಿ.ಪಿ.ಎಂ ಅವರ ಸಂಪರ್ಕವೂ ದೊರೆಯಿತು. ಅಂಕೋಲೆಯ ಭೂಹೋರಾಟವು ಕಾಗೋಡು ಸತ್ಯಾಗ್ರಹದ ಮೇಲೆ ಪ್ರಭಾವ ಬೀರಿದ್ದುದು ಕಂಡುಬರುತ್ತದೆ. "ಕಾಗೋಡು ಸತ್ಯಾಗ್ರಹವು ದೀವರ ಸಮುದಾಯಕ್ಕೆ ಸೇರಿದ ಗೇಣಿದಾರರ ಸಮಸ್ಯೆಗಳಿಂದ ಹುಟ್ಟಿತಾದರೆ, ಅಂಕೋಲೆಯ ಹೋರಾಟವು ಹಾಲಕ್ಕಿ ಒಕ್ಕಲಿಗರು, ಕುಮಾರಪಂತರು, ನಾಮಧಾರಿಗಳು ಮುಂತಾದ ಗೇಣಿದಾರರ ಸಮಸ್ಯೆಯ ಮೂಲಕ ಹುಟ್ಟಿ, ದಿನಕರ ದೇಸಾಯಿ, ಗಿರಿ ಪಿಕಳೆ ಹಾಗೂ ದಯಾನಂದ ನಾಡಕರ್ಣಿಯವರ ಸಾಮೂಹಿಕ ನಾಯಕತ್ವದಲ್ಲಿ ಮುಂಬಯಿ ಕರ್ನಾಟಕದ ಜನರ ಬದುಕನ್ನು ಗಾಢವಾಗಿ ಪ್ರಭಾವಿಸಿತು"[೧೪] ಎಂದು ವಿಷ್ಣು ನಾಯ್ಕ ಅವರು ಹೇಳುತ್ತಾರೆ. ಅಂಕೋಲೆಯ ಭೂ ಚಳುವಳಿಯಿಂದ ಅನೇಕ ಕೆಳವರ್ಗದ ಗೇಣಿದಾರರಿಗೆ ಭೂಮಿ ದೊರೆಯಿತು. ಆದರೆ ಇಂದೂ ಸಹ ಉತ್ತರ ಕನ್ನಡ ಜಿಲ್ಲೆಯ ಮೇಲ್ವರ್ಗದ ಜನರ ಅಡಿಕೆ ತೋಟಗಳಲ್ಲಿ ದುಡಿಯುವ ಕಾರ್ಮಿಕರಿಗೆ, ಹಸಲರೆಂಬ ಬುಡಕಟ್ಟು ಜನಾಂಗಕ್ಕೆ ಯಾವುದೇ ಉಪಯೋಗವೂ ಆಗಿಲ್ಲವೆಂಬುದು ಒಂದು ವರ್ಗದ ಅಭಿಪ್ರಾಯವಾಗಿದೆ. ಅಡಿಕೆ ತೋಟಗಳಲ್ಲಿ ದುಡಿಯುವ ಹಸಲ, ಇತರ ಕೆಳ ಜನಾಂಗದ ಕೃಷಿಕಾರ್ಮಿಕರ ರೂಪದಲ್ಲಿ ಜೀತ ಪದ್ಧತಿ ಇನ್ನೂ ಜೀವಂತವಾಗಿದೆಯೇ? ಎಂಬ ಸಂಶಯ ಹಲವರ ಮನಸ್ಸಿನಲ್ಲಿ ಇನ್ನೂ ಉಳಿದಿದೆ. ರೈತ ಮತ್ತು ಕೃಷಿ ಕಾರ್ಮಿಕರ ಹಿತರಕ್ಷಣೆಗೆ ಹುಟ್ಟಿಕೊಂಡ ಸಂಘಟನೆಗಳು ತಮ್ಮ ಹೋರಾಟದ ಪ್ರಖರತೆಯನ್ನು ಹೆಚ್ಚಿಸಿಕೊಂಡಿವೆ. ಇವು ಶ್ರೀಮಂತ ಹಾಗೂ ಮಧ್ಯಮ ರೈತರಿರುವ ಕಡೆ ಹುಟ್ಟಿಕೊಂಡು, ಸಣ್ಣ, ಅತಿ ಸಣ್ಣ ರೈತರ ಹಾಗೂ ಕೃಷಿ ಕಾರ್ಮಿಕರ ಹಿತ ಕಾಯುವಲ್ಲಿ ಹಾಗೂ ಹಳ್ಳಿಗಳಲ್ಲಿ ತಮ್ಮ ಹೋರಾಟವನ್ನು ತೀವ್ರಗೊಳಿಸುವಲ್ಲಿ ಸೋತಿವೆ ಎಂಬ ಅಭಿಪ್ರಾಯವಿದೆ.

### ಕೈಗಾರಿಕೆ ಮತ್ತು ಕುಲ ಕಸುಬುಗಳು

ಮುಂಬಯಿ ಕರ್ನಾಟಕ ಪ್ರದೇಶದಲ್ಲಿ ಅನೇಕ ಬೃಹತ್ ಮತ್ತು ಮಧ್ಯಮ ಗಾತ್ರದ ಕಾರ್ಖಾನೆಗಳು ಸ್ಥಾಪನೆಗೊಂಡಿವೆ. ದಾಂಡೇಲಿಯ ಕಾಗದ ಕಾರ್ಖಾನೆ, ಬಿಣಗಾ ಕಾಸ್ಟಿಕ್ ಸೋಡಾ, ಕಾಳಿ ಜಲವಿದ್ಯುತ್ ಸ್ಥಾವರಗಳು, ಕೈಗಾ ಅಣುವಿದ್ಯುತ್ ಸ್ಥಾವರ, ಹಣ್ಣು ಸಂಸ್ಕರಣ ಕೇಂದ್ರಗಳು, ಹೆಂಚು, ಸಿಮೆಂಟ್ ಕಾರ್ಖಾನೆಗಳು, ಅಕ್ಕಿ ಗಿರಣಿಗಳು, ಜವಳಿ ಮಿಲ್ಲುಗಳು, ಸ್ಟೀಲ್ ಎಂಡ್ ಫೆರೋ ಅಲೈಸ್, ಸಿದ್ದಾಪುರದ ಕರ್ನಾಟಕ ವೀನರ್ಸ್, ಇಟ್ಟಿಗೆ ಕಾರ್ಖಾನೆಗಳು, ಉಪ್ಪು ಆಗರಗಳು ಮುಂತಾದ ಉದ್ಯಮಗಳಿವೆ. ಆದರೆ ಒಂದು ದಶಕದ ಇತ್ತೀಚಿನ ಆರ್ಥಿಕ ಮುಗ್ಗಟ್ಟು, ಅಸ್ಥಿರತೆ, ರಾಜಕೀಯ ಇಚ್ಛಾಶಕ್ತಿಯ ಕೊರತೆಯಿಂದ ಇವುಗಳಲ್ಲಿ ಬಹಳಷ್ಟು ಕಾರ್ಖಾನೆಗಳು ಮುಚ್ಚಿವೆ, ಇಲ್ಲವೇ ಆರ್ಥಿಕವಾಗಿ ರೋಗಗ್ರಸ್ತವಾಗಿವೆ. ಇತ್ತೀಚಿನ ಎರಡು ಸರಕಾರಗಳಲ್ಲಿ, ನಿರಂತರ ಎರಡು ಅವಧಿಗೆ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಮಂತ್ರಿ ಇದೇ ಪ್ರದೇಶದವರಾಗಿದ್ದರೂ, ಬಹಳಷ್ಟು ಕೈಗಾರಿಕೆಗಳು ಮುಚ್ಚಿರುವುದಕ್ಕೆ ರಾಜಕೀಯ ಇಚ್ಛಾಶಕ್ತಿಯ ಕೊರತೆಯೇ ಕಾರಣವೆಂಬದು ಸಾರ್ವಜನಿಕರ ಅಭಿಪ್ರಾಯವಾಗಿದೆ. ಸರ್ಕಾರಗಳ ಯೋಜನೆಯಾದ ಪ್ರಧಾನಮಂತ್ರಿ ರೋಜಗಾರ್ ಯೋಜನೆ, ಕರ್ನಾಟಕ ಸರ್ಕಾರದ ವಿಶ್ವ ಯೋಜನೆಗಳ ಅಡಿಯಲ್ಲಿ ನಿರ್ಮಾಣಗೊಂಡ ಕುಶಲ ಕೈಗಾರಿಕೆ ಮತ್ತು ಅತಿಸಣ್ಣ ಕೈಗಾರಿಕೆಗಳು ಸ್ಥಾಪನೆಗೊಂಡಿದ್ದರೂ ಅವುಗಳ ಸ್ಥಿತಿಯೂ ದಯನೀಯವಾಗಿದೆ.

ಭಾರತದ ಆರ್ಥಿಕ ವ್ಯವಸ್ಥೆಯ ಮೂಲ ಸ್ಥಳ ಗ್ರಾಮ. ಪ್ರಾಚೀನ ಕಾಲದಿಂದಲೂ ಕೃಷಿ, ಪಶುಸಂಗೋಪನೆ, ಕುಶಲ ಕಲೆಗಳು, ಮೀನುಗಾರಿಕೆ ಭಾರತದ ಆರ್ಥಿಕ ವ್ಯವಸ್ಥೆಯನ್ನು ನಿಯಂತ್ರಣದಲ್ಲಿಟ್ಟುಕೊಂಡ ವೃತ್ತಿಗಳಾಗಿವೆ. ಭಾರತದಲ್ಲಿ ಹಿಂದಿನಿಂದಲೂ ಬಂದ ಆರ್ಥಿಕ ವ್ಯವಸ್ಥೆ ಆಂಗ್ಲರು ಆಡಳಿತವನ್ನು ವಹಿಸಿಕೊಳ್ಳುವವರೆಗೆ ತನ್ನದೇ ಮಹತ್ವವನ್ನು ಪಡೆದುಕೊಂಡಿತ್ತು. ಕುಲಕಸುಬುಗಳನ್ನು ನಂಬಿದ ವಿವಿಧ ಜಾತಿಯ ನೂರಾರು ಕುಟುಂಬಗಳು ಮುಂಬಯಿ ಕರ್ನಾಟಕ ಪ್ರದೇಶದಲ್ಲಿ ಕಾಣಸಿಗುತ್ತವೆ. ಪಾರಂಪರಿಕ ತಿಳುವಳಿಕೆಯಿಂದ, ಶಿಕ್ಷಣ ಮತ್ತು ಆಧುನಿಕ ಯಂತ್ರಗಳ ಸಹಾಯವಿಲ್ಲದೆ, ವಂಶ ಪಾರಂಪರ್ಯದಿಂದ ಸೂಕ್ಷ್ಮ ಕುಸುರಿ ಕಲಾ ವಸ್ತುಗಳನ್ನು ತಯಾರು ಮಾಡುವ ವೃತ್ತಿಗೆ ಇಲ್ಲಿಯ ಅಪಾರ ನಿಸರ್ಗ ಸಂಪತ್ತೇ ಮೂಲಾಧಾರವಾಗಿದೆ. ಮನೆಮಂದಿಯೆಲ್ಲ ಸೇರಿ, ಹೆಚ್ಚು ಖರ್ಚಿಲ್ಲದೇ ಕೃಷಿಯ

ಚಟುವಟಿಕೆಯ ನಂತರದ ಬಿಡುವಿನ ಸಮಯದಲ್ಲಿ ತಯಾರಿಸುವ ಗೃಹೋಪಯೋಗಿ ವಸ್ತುಗಳು ಆಂಗ್ಲರು ಭಾರತಕ್ಕೆ ಬರುವ ಮುನ್ನ ಅನೇಕ ಕುಟುಂಬಗಳಿಗೆ ಆಧಾರವಾಗಿದ್ದವು. ಕೈಮಗ್ಗ, ಬುಟ್ಟಿ ಹೆಣೆಯುವುದು, ಕೈಗೊಂಬೆ ತಯಾರಿಕೆ, ಮಕ್ಕಳ ಆಟದ ಸಾಮಾನುಗಳ ತಯಾರಿಕೆ, ಮರಗೆಲಸ, ಹಗ್ಗ ಹೆಣೆಯುವುದು ಇವು ವ್ಯವಸಾಯಕ್ಕೆ ಸಂಬಂಧಿಸಿದ ಉಪ ಕೆಲಸಗಳಾಗಿವೆ. ಗುಡಿ ಕೈಗಾರಿಕೆ, ಕುಶಲಕಲೆಗಳು ಗ್ರಾಮದ ಸಂಪತ್ತು ಮತ್ತು ಆದಾಯವನ್ನು ಹೆಚ್ಚಿಸುವುದಲ್ಲದೇ ಸ್ವಯಂಉದ್ಯೋಗ, ಸ್ವಹಾಯ, ಸ್ವಾವಲಂಬನೆಯನ್ನು ಉಂಟು ಮಾಡುತ್ತಿದ್ದವು. ವಿದೇಶಿಯರ ಆಗಮನದೊಂದಿಗೆ ಬೃಹತ್ ಕೈಗಾರಿಕೆಗಳು ಭಾರತದಲ್ಲಿ ಪ್ರವೇಶ ಪಡೆದವು. ವಸಾಹತುಶಾಹಿ ವ್ಯಾಪಾರಿ ಮನೋಭಾವ ಕುಸುರಿ ಕೆಲಸಕ್ಕೆ ಹೆಸರಾದ ಭಾರತದ ಕುಶಲ ಕಲೆಗಳ ಉದ್ಯೋಗಕ್ಕೆ ಇತಿಶ್ರೀ ಹಾಡಿಸಿತು. ಸ್ವದೇಶಿ ವಸ್ತುಗಳಿಗೆ ಹೆಚ್ಚು ಸುಂಕ ವಿಧಿಸಿ, ಯುರೋಪ್ ಉತ್ಪನ್ನಗಳಿಗೆ ಭಾರತವನ್ನು ಮಾರುಕಟ್ಟೆಯನ್ನಾಗಿ ಮಾಡಲಾಯಿತು. ದೊಡ್ಡ ಬಟ್ಟೆ ಮಿಲ್ಲುಗಳು ನೇಕಾರರನ್ನು, ಎಣ್ಣೆ ಗಿರಣಿಗಳು ಗಾಣಿಗರನ್ನು ನಿರ್ಗತಿಕರನ್ನಾಗಿ ಮಾಡಿದವು. ಕುಶಲ ಕಲೆಯನ್ನು ನಂಬಿ ಬದುಕುವವರು ಅನಾಥರಾದರು. ನಿರ್ಗತಿಕರಾದ ಕುಶಲ ಕಲೆಗಾರರು ಕೃಷಿ ಕೂಲಿಯನ್ನು ಆಶ್ರಯಿಸಬೇಕಾಯಿತು. ಇದರಿಂದ ಕೃಷಿಯಲ್ಲಿಯೂ ಭೀಕರ ಪರಿಣಾಮಗಳು ಸೃಷ್ಟಿಯಾದವು. ಭಾರತದ ಕುಶಲಕಲೆಗಳ ಹಿನ್ನಡೆಗೆ ಪ್ರಧಾನವಾಗಿ ಬ್ರಿಟಿಷರೇ ಕಾರಣರಾಗಿದ್ದಾರೆ.

**ಮೀನುಗಾರಿಕೆ ಮತ್ತು ಉಪ್ಪಿನ ಬೇಸಾಯ**

ಮುಂಬಯಿ ಕರ್ನಾಟಕದ ಕರಾವಳಿ ಉದ್ದಕ್ಕೂ ಮೀನುಗಾರಿಕೆ ಒಂದು ಮುಖ್ಯ ಉದ್ಯಮವಾಗಿದೆ. ಮೀನುಗಾರಿಕಾ ಉತ್ಪನ್ನಗಳು ದೇಶ ವಿದೇಶಗಳಿಗೂ ರಫ್ತಾಗುತ್ತವೆ. ಕರಾವಳಿ ಹಿನ್ನೀರಿನ ಪ್ರದೇಶಗಳಲ್ಲಿ ಸೀಗಡಿ ಕೃಷಿ ಸಹ ವ್ಯಾಪಕವಾಗಿ ಆರ್ಥಿಕ ಸಂಪನ್ಮೂಲಕ್ಕೆ ಸಹಕಾರಿಯಾಗಿದೆ. ಕರಾವಳಿ ಉದ್ದಕ್ಕೂ ಅನೇಕ ಮಂಜುಗಡ್ಡೆ ಕಾರ್ಖಾನೆಗಳು ಸ್ಥಾಪಿತವಾಗಿದ್ದು ಮೀನುಗಾರಿಕೆಗೆ ಸಹಾಯಕವೆನಿಸಿವೆ. ಭಟ್ಕಳ, ಹೊನ್ನಾವರ, ಕಾರವಾರ, ತದಡಿ, ಮಾಜಾಳಿ, ಕಾಣಕೋಣ ಮುಂತಾದ ಮೀನು ಬಂದರುಗಳಿದ್ದು ಉದ್ಯಮಕ್ಕೆ ವ್ಯಾಪಕತೆ ಇದ್ದರೂ ಆಧುನಿಕ ಮೀನು ಶೈತ್ಯಾಗಾರಗಳ ಕೊರತೆಯಿಂದ ಹಿನ್ನಡೆಯಾಗಿದೆ. ಮೀನುಗಾರಿಕೆಗೆ ಆಧುನಿಕ ಯಂತ್ರಗಳ ಉಪಯೋಗ, ಗುತ್ತಿಗೆ, ರಫ್ತು, ಉದ್ಯಮ ನೀತಿಗಳು ಬಡ ಮೀನುಗಾರರನ್ನು ನಿರುದ್ಯೋಗಿ, ಅಲ್ಪ ಉತ್ಪನ್ನಗಾರರನ್ನಾಗಿ ಮಾಡಿವೆ. ಇತ್ತೀಚಿಗೆ ನಿರ್ಮಾಣವಾದ ಕದಂಬ ನೌಕಾನೆಲೆ (ಐ. ಎನ್. ಎಸ್. ಕದಂಬ) ಬೃಹತ್ ಯೋಜನೆಯು ಮೀನುಗಾರಿಕಾ ಪ್ರದೇಶವನ್ನು ಆಕ್ರಮಿಸಿ, ಉದ್ಯೋಗವನ್ನು ನಿರ್ಬಂಧಿಸಿ ಮೀನುಗಾರಿಕೆ, ಮೀನುಗಾರರನ್ನು ಎತ್ತಂಗಡಿ ಮಾಡಿರುವುದು ಸಾರ್ವಜನಿಕ ಅಸಮಾಧಾನಕ್ಕೆ ಕಾರಣವಾಗಿದೆ.

ಮುಂಬಯಿ ಕರ್ನಾಟಕದ ಕರಾವಳಿ ಉದ್ದಕ್ಕೂ ಉಪ್ಪು ತಯಾರಿಕಾ ಕೇಂದ್ರಗಳಿವೆ. ಅವುಗಳಲ್ಲಿ ಅಂಕೋಲ, ಕಾರವಾರ, ಬಾಡಗಳಲ್ಲಿರುವ ಕೇಂದ್ರಗಳಿಗಿಂತ ಸಾಣಿಕಟ್ಟಾ ಉಪ್ಪು ತಯಾರಿಕಾ ಘಟಕ ಹಳೆಯದು ಮತ್ತು ಗಾತ್ರದಲ್ಲಿ ದೊಡ್ಡದೂ ಆಗಿದೆ. ೧೭೦ರಲ್ಲಿ ಆರಂಭಗೊಂಡ ಇದು ೪೬೯ ಎಕರೆ ವಿಸ್ತೀರ್ಣದಲ್ಲಿ ನೆಲೆಗೊಂಡಿದ್ದು ರಾಜ್ಯದಲ್ಲಿಯೇ ಪ್ರಥಮ ಮತ್ತು ದೊಡ್ಡ ಉಪ್ಪು ತಯಾರಿಕಾ ಘಟಕವಾಗಿದೆ. ವಿದೇಶಗಳಿಗೂ ರಫ್ತಾಗುವ ಉಪ್ಪಿನ ಉದ್ಯಮದ ಆರ್ಥಿಕ ವ್ಯವಹಾರ ಈ ಘಟಕದಿಂದ ವರ್ಷಕ್ಕೆ ಎರಡು ಕೋಟಿಗಳಿಗೂ ಹೆಚ್ಚಾಗಿದ್ದು ಆದರ್ಶಪ್ರಾಯವಾಗಿದೆ. ಸರಕಾರದ ಎಲ್ಲ ನಿಯಮಗಳನ್ನು ಪಾಲಿಸುತ್ತ (ಸೋಡಿಯಂ ಬೆರೆತಿರಬೇಕು, ಅಯೋಡಿನ್ ಮಿಶ್ರಣಗೊಳಿಸಬೇಕೆಂಬ) ಆಧುನಿಕ ತಂತ್ರಜ್ಞಾನದ ನೆರವಿನಿಂದ ನಡೆಯುತ್ತಿರುವ ಉಪ್ಪಿನ ಬೇಸಾಯ/ಸಹಕಾರಿ ಸಂಘಗಳು ಸರಕಾರದ ಆರ್ಥಿಕ ನೆರವನ್ನು, ಸೌಲಭ್ಯಗಳನ್ನು ಪ್ರೋತ್ಸಾಹವನ್ನು ನಿರೀಕ್ಷಿಸುತ್ತದೆ.

**೨. ಮುಂಬಯಿ ಕರ್ನಾಟಕ : ಜನಾಂಗೀಯ ಸಂಬಂಧದ ನೆಲೆಗಳು**

'ಜನಾಂಗವೆಂಬುದು ಜಾತಿ, ಧರ್ಮಗಳಿಂದ ಭಿನ್ನವಾದುದು. ಜನಾಂಗವೆಂದರೆ ಸಾಮಾನ್ಯವಾಗಿ ತೀರ ಆರಂಭಕಾಲದಲ್ಲಿ ಒಟ್ಟಿಗೆ ಇದ್ದು ಬೆಳೆದ ಒಂದು ಮನುಷ್ಯ ಸಮಾಜ'[೧೫] ಎಂಬ ಅಭಿಪ್ರಾಯದಂತೆ ಆಯಾ ಪ್ರದೇಶದ ಜನಾಂಗವೇ ಅಲ್ಲಿನ ಸಾಮಾಜಿಕ, ಸಾಂಸ್ಕೃತಿಕ ಅಧ್ಯಯನದ ಕೇಂದ್ರ ವಸ್ತುವಾಗಿದೆ. ಇಂದಿಗೂ ಮುಂಬಯಿ ಕರ್ನಾಟಕದ ನೂರಾರು ಜನಾಂಗಗಳು, ಭಿನ್ನ ಭಿನ್ನ ಜಾತಿಗಳ ಜನರ ವಾಂಶಿಕ ಸಂಬಂಧಗಳು, ಅವರು ಪೂಜಿಸುವ ದೇವತೆಗಳು ರೀತಿನೀತಿ ನಡತೆಗಳು ಇಲ್ಲಿಯ ಸಂಸ್ಕೃತಿಯ ಪ್ರತಿರೂಪಗಳೆನಿಸಿವೆ.

ಮುಂಬಯಿ ಕರ್ನಾಟಕವು ಕನ್ನಡ, ಮರಾಠಿ, ಕೊಂಕಣಿ ಭಾಷೆಗಳ ಜನರಿಂದ ಕೂಡಿದ ಮಿಶ್ರ ಜನಾಂಗವನ್ನು ಹೊಂದಿದೆ. ಈ ಮೂರೂ ಜನಸಮುದಾಯಗಳ ಸ್ವಭಾವವೂ ಭಿನ್ನವಾಗಿದ್ದುದನ್ನು ಗಮನಿಸಬಹುದು. 'ದೇವರಂತೆ ಭಕ್ತರು' ಎಂಬ ಮಾತಿನಂತೆ ಶಂ.ಬಾ. ಜೋಶಿ ಅವರು, ಮಲ್ಲಯ್ಯ-ಮಲ್ಹಾರಿ ದೈವಗಳ ಹಿನ್ನೆಲೆಯಲ್ಲಿ ಈ ಜನರ ಗುಣ ಸ್ವಭಾವವನ್ನು ವಿಶ್ಲೇಷಿಸುತ್ತಾರೆ. "ಮರಹಟ್ಟಿ (ಮರ್ಹಾಠಿ)ಯವರ ಅಭಿಮಾನ ಮತ್ತು ತಮ್ಮ ಕೆಲಸವಾಗುವಾಗ ಅವರು ತೋರಿಸುವ ಜಿದ್ದಿನ ಸ್ವಭಾವ ಪ್ರಸಿದ್ಧವಾದದ್ದು. ಇದಕ್ಕೆ ವಿಪರೀತವಾಗಿ ಕನ್ನಡಿಗರು ಶೂರರು, ಉತ್ಕಟ ದರ್ಪದವರು. ಮರಾಠಿಗರು ಸಮುದಾಯ ಅಭಿಮಾನಿಗಳಾದರೆ, ಕನ್ನಡಿಗರು ವೈಯಕ್ತಿಕ ಸ್ವಾಭಿಮಾನಿಗಳು. ಎರಡೂ ಜನಾಂಗಗಳ ಉತ್ಕರ್ಷ ಮತ್ತು ಅವನತಿಯ ರಹಸ್ಯ ಇಲ್ಲಿದೆ"[೨೨] ಎನ್ನುತ್ತಾರೆ. ಆದರೆ ಜಾಗತೀಕರಣದ ಹಿನ್ನೆಲೆಯಲ್ಲಿ ಈ ಅಭಿಪ್ರಾಯವನ್ನು ಒಪ್ಪಬಹುದೆ ಎಂಬ ಪ್ರಶ್ನೆ ಪ್ರಜ್ಞಾವಂತರನ್ನು ಕಾಡುತ್ತದೆ. ಏಕೆಂದರೆ ಮರಾಠಿಗರ ಸಮುದಾಯ ಸ್ವಾಭಿಮಾನಕ್ಕೆ ಅವರ ಏಕೈಕ ಐತಿಹಾಸಿಕ ಆರಾಧನಾ ವ್ಯಕ್ತಿ ಶಿವಾಜಿ, ಪೇಶವಾಯಿಗಳು ಕಾರಣರಾಗುತ್ತಾರೆ. ಇವರ ಈ ಅಭಿಮಾನ ೧೭ನೇ ಶತಮಾನದಿಂದೀಚಿನ ಅಭಿಮಾನವಾಗಿದೆ. ಕನ್ನಡಿಗರು ಕ್ರಿಸ್ತಶಕ ಪೂರ್ವದಿಂದಲೂ ಅನೇಕ ಸಾಮ್ರಾಜ್ಯಗಳನ್ನು ಕಟ್ಟಿ ವಿಸ್ತರಿಸಿದ ಜನಾಂಗವಾಗಿದ್ದು ಇಂದಿಗೂ ವೈಯಕ್ತಿಕ ಪ್ರತಿಷ್ಠೆ ಅವರಿಗೆ ಮಾನ್ಯವಾದುದಾಗಿದೆ. ಈ ಹಿನ್ನೆಲೆಯಲ್ಲಿ, 'ಮರ್ಹಾಠಿಗರ ಆರಾಧ್ಯ ದೈವ ಛತ್ರಪತಿ ಶಿವಾಜಿಯ ಹಿಂದೂ ಸ್ವರಾಜ್ಯದ ಕನಸಿನ ಅಡಿಗಲ್ಲು ವಿಜಯನಗರದ ಸಾಮ್ರಾಜ್ಯದ ಬುನಾದಿಯಲ್ಲಿದೆ' ಎಂಬ ಮರಾಠಿ ವಿದ್ವಾಂಸರ ಅಭಿಪ್ರಾಯ ಅಧ್ಯಯನದ ನಿಲುವಾಗಿದೆ.

ಮಾನವನ ವಿಕಾಸ ಕ್ರಮದಲ್ಲಿ ಆಹಾರಕ್ಕಾಗಿ ಅಲೆದಾಡುವ ಬೇಡರದು, ಪಶುಪಾಲನಾ ವೃತ್ತಿಯ ಧನಗರರದು, ವೃಕ್ಷ, ವನಸ್ಪತಿಗಳ ತಿಳುವಳಿಕೆಯಿಂದ ಬೇಸಾಯ ಮಾಡುವ ಒಕ್ಕಲಿಗರದು, ನಂತರದಲ್ಲಿ ವ್ಯಾಪಾರ, ಉದ್ಯೋಗ, ರಾಜಕಾರಣ ಕೆಲಸಗಳದ್ದು - ಹೀಗೆ ನಾಲ್ಕು ಅವಸ್ಥೆಗಳನ್ನು ಗುರುತಿಸಬಹುದು. 'ಪಟ್ಟ-ಹಟ್ಟ' ಪದ ಎರಡನೇ ಅವಸ್ಥೆಯ ಸೂಚಿಯಾಗಿದೆ. ಗೋದಾವರಿ, ನರ್ಮದೆಯರ ನಡುವಿನ ಪ್ರದೇಶದಲ್ಲಿ ವಾಸಿಸುತ್ತಿದ್ದ 'ಹಟ್ಟಿಕಾರ-ಧನಗಾರ'ರು ಅಲ್ಲಿನ ಮೂಲನಿವಾಸಿಗಳಾಗಿದ್ದಾರೆ. 'ಕಂನಡ'ದ ಈ ಜನರನ್ನು ಕುರಿತು ಖಾನದೇಶದ ಗೆಜೆಟಿಯರ್‌ನಲ್ಲಿ 'Kanadas (gavalis) are a peculiar race of drovers.. ..they have a peculier breed or black and white cattle, HATKAR which though not large are much prized for their strength and sprit' (p 106)[೨೩] ಎಂದು ಹೇಳಲಾಗಿದೆ. ಇಲ್ಲಿ ಬರುವ ಹಟಕಾರ > ಹಟ್ಟಿಗಾರ ಜನಾಂಗ ಆಗಿದ್ದು, ಇಂದಿಗೂ ಇವರು ಆಚರಿಸುವ ಪ್ರಮುಖ ಹಬ್ಬವಾದ ಹಟ್ಟಿ ಹಬ್ಬದ ರೂಪದಲ್ಲಿ ಇವರ ಪಶುಪಾಲನೆಯ ಸಂಸ್ಕೃತಿಯನ್ನು ಕಾಣಬಹುದಾಗಿದೆ.

ಮರ್ಹಾಟಗರ ಪೂರ್ವ ಭಾಷೆಯಾದ ಪ್ರಾಕೃತದಲ್ಲಿ (ಮರಾಠಿ ಭಾಷೆ, ಸಂಸ್ಕೃತ> ಪ್ರಾಕೃತ > ಅಪಭ್ರಂಶ ಭಾಷೆಯಿಂದ ಹುಟ್ಟಿತೆಂದು ಮರಾಠಾ ವಿದ್ವಾಂಸರೆಲ್ಲರೂ ಒಪ್ಪುತ್ತಾರೆ) 'ಪಟ್ಟ ಇಲ್ಲ'> ಪಟ್ಟಿಲ ಪದ ಪ್ರಯೋಗವಿದ್ದು ಅದು, 'ಅದರಲ್ಲಿದ್ದವನು' ಎಂಬ ಅರ್ಥ ನೀಡುತ್ತದೆ. ಈ ಪಟ್ಟಿಲ ಕ್ರಮೇಣ 'ಪಾಟೀಲ' ಆಗಿದ್ದು ಗ್ರಾಮವಾಸಿ ಅರ್ಥ ಕೊಡುತ್ತದೆ. ಮರ್ಹಾಟ (ಕರ್ನಾಟಕದಲ್ಲೂ) ಪ್ರದೇಶಗಳಲ್ಲಿ ಕುರುಬ, ಕುಣಬಿ ಮತ್ತು ಧನಗರರಿಗೆ 'ಪಾಟೀಲರೆ' ಎಂದು ಸಂಬೋಧಿಸುವ ರಿವಾಜು ಇದೆ. ಮುಂಬಯಿ ಕರ್ನಾಟಕದ ಉತ್ತರ ಕನ್ನಡ ಜಿಲ್ಲೆ ಮತ್ತು ಗುಜರಾತದ ಗೆಜೆಟಿಯರುಗಳಲ್ಲಿ Patti ಮತ್ತು Patelia(ಪಟ್ಟಿ ಮತ್ತು ಪಟೇಲಿಯಾ)ದಂತಹ ಲೋಕಜಾತಿಗಳಿರುವ ಉಲ್ಲೇಖವಿದೆ. ಪಟೇಲಿಯಾ ಜಾತಿಯವರು ಒಕ್ಕಲಿಗರೆಂದು ಅಲ್ಲಿ ಹೇಳಲಾಗಿದೆ. 'ಕರ್ನಾಟಕದಲ್ಲಿ ಪಾಟೀಲ ಮತ್ತು ಗೌಡ ಶಬ್ದಗಳನ್ನು ಸಮಾನ ಪದಗಳಂತೆ ಉಪಯೋಗಿಸಲಾಗುತ್ತದೆ. ಆದರೆ ಗೌಡ ಶಬ್ದದ ಸಂಬಂಧ ಗೌಳ-ಗೋವಳ-ಗೋಪಾಲ ಇವುಗಳಿಗೆ ಹೋಗಿ ತಲುಪುತ್ತದೆ.'[೨೪] ಇದು ಎರಡು ಜನಾಂಗಗಳ (ಕಂನಡ, ಮರ್ಹಾಟ)ಪಂಗಡಗಳ ಸಾಮ್ಯತೆಯ ದ್ಯೋತಕವಾಗಿದೆ.

'ಮುದಲ' ಕನ್ನಡ ಶಬ್ದ ಮರಾಠಿಯಲ್ಲಿ ಜ್ಞಾನೇಶ್ವರನಿಂದ ಹಿಡಿದು ಇಂದಿನ ಆಡುಭಾಷೆಯಲ್ಲಿಯೂ ಜೀವಂತವಾಗಿದೆ. ಆದರೆ ಕನ್ನಡವು ಇದನ್ನು ಬಿಟ್ಟು ಇಂದು 'ಅಸಲು' ಎಂಬ ಎರವಲು ಶಬ್ದವನ್ನು ಉಪಯೋಗಿಸುವುದು ಕಂಡುಬರುತ್ತದೆ. ಮುದಲ್ ಅಥವಾ ಮೊದಲ್ ಎಂದರೆ ಪ್ರಾರಂಭದ ಎಂದು ಅರ್ಥವಿದ್ದು ವ್ಯಾಪಾರ ಮತ್ತು ವ್ಯವಹಾರಗಳಲ್ಲಿ ಲಕ್ಷಣಾರ್ಥದಿಂದ ಈ ಪದಕ್ಕೆ ಮೂಲಧನವೆಂದು ಅರ್ಥ ಬಂದಿದೆ. ನಯಸೇನನ ಕೃತಿಗಳಲ್ಲಿ ಸಾಲದ ವ್ಯವಹಾರ ಮುಗಿದ ಮೇಲೆ ಪತ್ರವನ್ನು ಹರಿದು

ಹಾಕುವ ಇಂದಿನ ಪದ್ಧತಿ ಆ ಕಾಲಕ್ಕೂ ಪ್ರಚಲಿತವಾಗಿರುವುದರ ವರ್ಣನೆ ಇದೆ. ಇಂತ ಉಲ್ಲೇಖಗಳು ಪ್ರಾಚೀನ ಕಾಲದಲ್ಲಿ ಕರ್ಣಾಟ-ಮಹಾರಾಷ್ಟ್ರದಲ್ಲಿ ರೂಢವಾಗಿದ್ದ ಸಾಮಾಜಿಕ ಪದ್ಧತಿಗಳ ಮೇಲೆ ಬೆಳಕು ಚೆಲ್ಲುತ್ತವೆ.

ರಾಜಕೀಯ ಮತ್ತು ಸಾಂಸ್ಕೃತಿಕ ಕಾರಣಗಳಿಗಾಗಿ ಜೀವವನ್ನು ಬಲಿಕೊಟ್ಟ ಸೈನಿಕರನ್ನು ಕೃತಜ್ಞತೆಯಿಂದ ಸ್ಮರಿಸಿ ಅವರ ನೆನಪಿಗಾಗಿ ವೀರಗಲ್ಲುಗಳನ್ನು ನೆಡುವ ಒಂದು ವಿಶಿಷ್ಟ ಸಂಪ್ರದಾಯವನ್ನು ಬಹಳ ಮಟ್ಟಿಗೆ ಪಾಲಿಸಿದವರು ಕನ್ನಡಿಗರು. ಇದರಲ್ಲಿ ಗ್ರಾಮದ ತುರು, ಕರುಗಳನ್ನು ರಕ್ಷಿಸಿದ, ಶತ್ರುಗಳಿಂದ ಪ್ರಜೆಗಳನ್ನು ಕಾಪಾಡಿದ, ಊರಿನ ಸ್ತ್ರೀಯರ ಮಾನ ಸಂರಕ್ಷಣೆ ಮಾಡಿದ ತ್ಯಾಗಿಗಳ ಸ್ಮರಣೆ ಇದೆ. ಕರ್ನಾಟಕದಲ್ಲಿ ಲಭ್ಯವಿರುವಷ್ಟು ವೀರಗಲ್ಲುಗಳು, ಅದರಂತೆಯೇ ಮಹಾಸತಿ ಕಲ್ಲುಗಳು ಭಾರತದ ಬೇರಾವ ಭಾಗದಲ್ಲೂ ದೊರೆತಿಲ್ಲವೆಂದೇ ಹೇಳಬೇಕು. ಆದರೆ ಮುಂಬಯಿ ಕರ್ನಾಟಕದ ಗಡಿಭಾಗವಿರಲಿ, ಮಹಾರಾಷ್ಟ್ರದ ಮಧ್ಯಭಾಗವಾದ ನಾಶಿಕ್ ಜಿಲ್ಲೆಯಲ್ಲಿ, ಎಷ್ಟೋ ಕಡೆಗೆ ವೀರಗಲ್ಲುಗಳು (ಮರಾಠಿಯಲ್ಲಿ 'ವೀರಗಳ' ಎನ್ನುತ್ತಾರೆ) ದೊರೆತಿರುವುದನ್ನು (ನಾಶಿಕ್ ಗೆಜೆಟಿಯರ್, ಪುಟ ೬೪೭) ಗಮನಿಸಬಹುದು. ಮಹಾರಾಷ್ಟ್ರದಲ್ಲಿ ಕನ್ನಡ ಶಾಸನಗಳೇ ಹೆಚ್ಚು ದೊರಕಿರುವುದರಿಂದ ಅವು ಗಡಿಪ್ರದೇಶಗಳಾಗಿರದೇ ಕಂನಡ ಪ್ರದೇಶದ ಮಧ್ಯಭಾಗವಾಗಿದ್ದುದು ಸ್ಪಷ್ಟವಿದೆ. ಇವೆರಡೂ ಜನಾಂಗಗಳ ಸಮಾನಸ್ತರದ ಬದುಕಿನ ಲಕ್ಷಣಗಳನ್ನು ಇವು ಆಧಾರಪೂರ್ವಕವಾಗಿ ಒದಗಿಸುತ್ತವೆ. 'ಇಂದಿನ ಕರ್ನಾಟಕಕ್ಕೆ ಭೂಗೋಲ ಸಣ್ಣದು ಇತಿಹಾಸ ದೊಡ್ಡದು, ಆದರೆ ಮಹಾರಾಷ್ಟ್ರಕ್ಕೆ ಭೂಗೋಲ ದೊಡ್ಡದು, ಇತಿಹಾಸ ಸಣ್ಣದು'[೧೯] ಎಂಬ ಸಂಶೋಧಕರ ಮಾತು ಸತ್ಯವೆನಿಸುತ್ತದೆ. ಅಂದರೆ ಒಂದು ಕಾಲದಲ್ಲಿ ಈ ಭಾಗ ಕನ್ನಡಿಗರ ನಾಡಾಗಿತ್ತು ಎಂಬ ಅಭಿಪ್ರಾಯ ಮಾನ್ಯವಾಗಿದೆ.

ಧಾರ್ಮಿಕ ಆಚರಣೆಗಳು, ಸಾಹಿತ್ಯ, ಭಾಷೆ, ಸಾಮಾಜಿಕ ಸಂಬಂಧಗಳು ಮತ್ತು ಆರ್ಥಿಕ ವ್ಯವಹಾರಗಳು ಒಂದು ಸಂಸ್ಕೃತಿಯ ನೆಲೆಯ ಬೇರುಗಳೆನಿಸಿಕೊಳ್ಳುತ್ತವೆ. ಈ ಎಲ್ಲವುಗಳ ಕೊಡುಕೊಳ್ಳುವಿಕೆಯು ಎರಡು ಸಂಸ್ಕೃತಿಗಳ ನಡುವೆ ನಿರಂತರವಾಗಿ ನಡೆಯುವ ಸಂಬಂಧವಾಗಿದೆ. ಈ ಸಂಬಂಧಗಳು ಸೌಹಾರ್ದಯುತವಾಗಿದ್ದರೆ ಸಾಮರಸ್ಯವೆಂದೂ, ವಿಷಮವಾಗಿದ್ದರೆ ವೈಷಮ್ಯವೆಂದೂ ಕರೆಯಲ್ಪಡುತ್ತವೆ. ಕನ್ನಡ ಮತ್ತು ಮರಾಠಿ ಸಂದರ್ಭದಲ್ಲಿ, ಇವೆರಡೂ ಅವಳಿ ಸಂಸ್ಕೃತಿಗಳೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಮರಹಟ್ಟಿ ಮತ್ತು ಕಾನಡೇಗಳ ಸಂಬಂಧ ಪುರಾಣದ ಯದು-ತುರ್ವಸುಗಳ ಸಂಬಂಧವೆಂದು ಧೃಡಪಟ್ಟಿದೆ.

**ಮುಂಬಯಿ ಕರ್ನಾಟಕ : ಜನಾಂಗ, ಜಾತಿ**

ಪ್ರಾಚೀನ ಕಾಲದಿಂದಲೂ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಒಂದು ಮೆಟ್ಟಿಲಾಗಿರುವ ಜಾತಿ ಪದ್ಧತಿಯು ಮುಂಬಯಿ ಕರ್ನಾಟಕ ಪ್ರದೇಶದಲ್ಲಿ ಇಂದಿಗೂ ಕಂಡುಬರುತ್ತದೆ. ಇದು ಈ ಭಾಗದ ವೈಶಿಷ್ಟ್ಯವೂ, ವೈವಿಧ್ಯವೂ ಆದ ಅಂಶವಾಗಿದೆ. ವ್ಯಕ್ತಿಯ ಹುಟ್ಟಿನೊಂದಿಗೆ ನಿರ್ಧಾರವಾಗಿ ಅವರ ವಿವಾಹ, ಕುಟುಂಬ, ಆಹಾರಾಭ್ಯಾಸ, ವರ್ತನಾಂಶಗಳು, ಸಂಪ್ರದಾಯ, ಉದ್ಯೋಗ, ರಾಜಕೀಯ, ವೇಷಭೂಷಣ, ಆಚಾರ-ವಿಚಾರಗಳನ್ನು ನಿಯಂತ್ರಿಸುವ ಜಾತಿ ವ್ಯವಸ್ಥೆಯು ಇಲ್ಲಿ ವರ್ಗ/ವರ್ಣ ಅಂತಸ್ತಿನ ಸಂಕೇತವಾಗಿರುವುದು ಸ್ಪಷ್ಟವಿದೆ.

ಈ ಪ್ರದೇಶದ ಜಾತಿ ವ್ಯವಸ್ಥೆಯ ಮೇಲ್(ಶಿಷ್ಟ)ಸ್ತರದಲ್ಲಿ ಹವ್ಯಕ ಬ್ರಾಹ್ಮಣರು, ಗೌಡ ಸಾರಸ್ವತ ಬ್ರಾಹ್ಮಣರು (ಜಿ.ಎಸ್.ಬಿ.), ದೈವಜ್ಞ ಬ್ರಾಹ್ಮಣರು, ಜೈನರು, ವೀರಶೈವರು ಮೊದಲಾದ ಜಾತಿಗಳು ಕಂಡುಬರುತ್ತವೆ. ಶೂದ್ರರಲ್ಲಿ ನಾಡವರು, ನಾಮಧಾರಿ, ಕೋಮಾರಪಂತ, ದೇವಾಂಗ, ನೇಕಾರ, ಕುರುಬ, ಮರಾಠಿಗಳು, ಅಂಬಿಗರು, ಅಗಸರು ಇತ್ಯಾದಿ ಜಾತಿಗಳೂ, ಪರಿಶಿಷ್ಟರಲ್ಲಿ ಆಗೇರ, ಮುಕ್ರಿ, ಬೇಡ, ಮಾದಿಗ, ಗವಳಿಗ ಮುಂತಾದವೂ, ಬುಡಕಟ್ಟು ಸಮುದಾಯದಲ್ಲಿ ಸಿದ್ದಿಗಳು, ಹಸಲರು, ಹಾಲಕ್ಕಿ ಗೌಡರು, ಲಂಬಾಣಿ, ಕುಣಬಿ, ಹರಿಕಂತ್ರರು ಮೊದಲಾದ ಜಾತಿಗಳು ಅಸ್ತಿತ್ವದಲ್ಲಿವೆ. ಮುಸ್ಲಿಂ ಸಮುದಾಯದಲ್ಲಿ ಮೀನುಗಾರರಾದ ದಾರಚಿ (ದಾಲ್ಜಿ), ಮೊಗವಾಯಿ ಹಾಗೂ ನವಾಯತರೂ ಇರುವುದು ವಿಶೇಷವಾಗಿದೆ. ಉತ್ತರ ಕನ್ನಡ ಜಿಲ್ಲೆಯ ಹಾಗೂ ಗೋವಾದ ಗಡಿಗ್ರಾಮದ ಕರಾವಳಿ ಪ್ರದೇಶದಲ್ಲಿ ಮೀನುಗಾರರು ಅಧಿಕ ಸಂಖ್ಯೆಯಲ್ಲಿದ್ದಾರೆ. ಇವರಲ್ಲಿ ಹಲವು ಪಂಗಡಗಳಿದ್ದು ಕೆಲವರದು ಕಡಲಲ್ಲಿ ಮೀನು

ಹಿಡಿಯುವುದಾದರೆ, ಇನ್ನೂ ಕೆಲವರದು ನದಿ, ತೊರೆ, ಝುರಿಗಳಲ್ಲಿ ಮೀನು, ಏಡಿ, ಜಟ್ಲ ಮುಂತಾದವುಗಳನ್ನು ಹಿಡಿದು ಮಾರುವ ಕಸುಬಾಗಿದೆ. ಮುಂಬಯಿಯಿಂದ ಭಟ್ಕಳದವರೆಗೆ ವಿಸ್ತಾರವಾದ ಅರಬ್ಬಿ ಸಮುದ್ರ ಇರುವುದರಿಂದ ಕಾಳಿ, ಗಂಗಾವಳಿ, ಅಘನಾಶಿನಿ, ಶರಾವತಿ, ವೆಂಕಟಾಪುರ ಮುಂತಾದ ನದಿ, ಉಪನದಿಗಳಿದ್ದು ಈ ಭಾಗದಲ್ಲಿ ಮೀನುಗಾರಿಕೆಯು ಒಂದು ಪ್ರಮುಖ ಉದ್ಯೋಗವಾಗಿದೆ. ಈ ಜನ ಹಲವಾರು ವೃತ್ತಿಜನ್ಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಮೀನು ಸಂಗ್ರಹಣೆಗೆ ಆಧುನಿಕ ಶೈತ್ಯಾಗಾರಗಳು ಇಲ್ಲದಿರುವಿಕೆ ಹಾಗೂ ಕಡಲ ರಾಜನ ಬೀಭತ್ಸ ನೃತ್ಯ, ಐ.ಎನ್.ಎಸ್. ಕದಂಬ ನೌಕಾನೆಲೆಯಂತಹ ಯೋಜನೆಗಳ ದಾಳಿ, ಸುನಾಮಿಯಂತಹ ಪ್ರಾಕೃತಿಕ ವಿಕೋಪಗಳು ನಾಳೆಯ ಇವರ ಬದುಕಿನ ಭರವಸೆಯನ್ನು ಕತ್ತಲಾಗಿಸಿವೆ.

ಬ್ರಿಟೀಷರು ಭಾರತಕ್ಕೆ ಬರುವ ಮೊದಲು ಪ್ರಬಲವಾಗಿದ್ದ ಜಾತಿ ವ್ಯವಸ್ಥೆ, ಅವರ ಕಾಲದಲ್ಲಿ ಜಾತಿ ಕಟ್ಟುಪಾಡುಗಳಲ್ಲಿ ಕೆಲವು ಸಡಿಲಿಕೆಗಳನ್ನು ಕಂಡಿದ್ದು ಐತಿಹಾಸಿಕ ಸತ್ಯವಾಗಿದೆ. ವಸಾಹತುಶಾಹಿ ಆಳರಸರ, ಮಹಾರಾಷ್ಟ್ರದ ಸಮಾಜ ಸುಧಾರಕರ, ಸಾಮಾಜಿಕ ಸೇವಾ ಸಂಸ್ಥೆಗಳ ಪ್ರಗತಿಶೀಲ ಧೋರಣೆಯ ಪ್ರಭಾವ ಈ ಪ್ರದೇಶದ ಮೇಲಾಗಿದೆ. 'ಬ್ರಿಟೀಷರು ಶಾಸನಗಳ ಮೂಲಕ ಅಸ್ಪೃಶ್ಯರ ಮೇಲೆ ಹೇರಲಾಗಿದ್ದ ಅನೇಕ ನಿರ್ಬಂಧಗಳನ್ನು ತೆಗೆದುಹಾಕಿ, ಬಾಲ್ಯವಿವಾಹಗಳನ್ನು ನಿಷೇಧಿಸಿದರು ಹಾಗೂ ವಿಧವಾ ವಿವಾಹ, ಅಂತರ್ಜಾತಿ ವಿವಾಹಗಳಿಗೆ ಅವಕಾಶ ನೀಡಿದರು.'[೨೦] ಇವೆಲ್ಲ ಸುಧಾರಣೆಗಳನ್ನು ಆಂಗ್ಲ ಶಿಕ್ಷಣ ಹಾಗೂ ಪಾಶ್ಚಿಮಾತ್ಯ ವಿಚಾರಧಾರೆಗಳ ಪ್ರಭಾವಕ್ಕೆ ಒಳಗಾದ ಅನೇಕ ಭಾರತೀಯರು, ಬ್ರಹ್ಮ ಸಮಾಜ, ಪ್ರಾರ್ಥನಾ ಸಮಾಜ, ಆರ್ಯ ಸಮಾಜ, ರಾಮಕೃಷ್ಣ ಮಿಷನ್, ಸತ್ಯಶೋಧಕ ಸಮಾಜ ಮುಂತಾದ ಸಂಘ-ಸಂಸ್ಥೆಗಳ ಮೂಲಕ ಮಾಡಿದರೆ, ಬ್ರಿಟೀಷರು ಇದನ್ನು ಜಾತಿಯ ಕಠಿಣತೆಯನ್ನು ನಿವಾರಿಸುವ ಆಕಾಂಕ್ಷೆಯಿಂದ ಮಾಡಲಿಲ್ಲ, ಬದಲಿಗೆ ತಮ್ಮ ಆಡಳಿತಾತ್ಮಕ ಅನುಕೂಲತೆಗಾಗಿ ಮಾಡಿದರೆಂದು ಡಾ. ಜಿ. ಎಸ್. ಘುರ್ಯೆ ಹೇಳುತ್ತಾರೆ. ಸಾಮಾಜಿಕ ಆಂದೋಲನಗಳು, ಕೈಗಾರಿಕೀಕರಣ, ನಗರೀಕರಣ, ಶಿಕ್ಷಣ ಮತ್ತು ಪಾಶ್ಚಿಮಾತ್ಯ ವಿಚಾರಧಾರೆಗಳು, ಹಿಂದುಳಿದ ವರ್ಗಗಳ ಜಾಗೃತಿ ಆಂದೋಲನಗಳು ಸಹ ಇದಕ್ಕೆ ಕಾರಣವಾಗಿರಬಹುದು. ವಿದೇಶಿಯರಿಂದ ರಾಜಕೀಯ ಸ್ವಾತಂತ್ರ್ಯ ಪಡೆದ ನಂತರದ ನವವಸಾಹತು ಕಾಲದಲ್ಲಿ ಮುಂಬಯಿ ಕರ್ನಾಟಕವೂ ಸೇರಿದಂತೆ, ಜಾತಿ ವ್ಯವಸ್ಥೆ ಕುಸಿದು ಸಾಮಾಜಿಕ ಸಮಾನತೆ ಬರುತ್ತದೆ ಎಂಬ ನಂಬಿಕೆ ಸುಳ್ಳಾಗಿದೆ. ಮುಂಬಯಿ ಕರ್ನಾಟಕವು ಆಧುನಿಕ ಶಿಕ್ಷಣ, ಪ್ರಜಾಪ್ರಭುತ್ವ ವ್ಯವಸ್ಥೆ, ವಿಜ್ಞಾನ ಮತ್ತು ತಂತ್ರಜ್ಞಾನ, ಕಾನೂನುಗಳಲ್ಲಿ ಪಾಶ್ಚಿಮಾತ್ಯ ದೇಶಗಳ ಪ್ರಭಾವಗಳಿಗೆ ಒಳಗಾಗಿಯೂ ಜಾತಿ ವ್ಯವಸ್ಥೆಯು ಸುಧಾರಣೆಯನ್ನು ಕಾಣದೇ ಹಲವಾರು ರೂಪಾಂತರಗಳಿಗೆ ಒಳಗಾಗಿದೆ.

### ಮಹಿಳೆ

ಮಹಿಳೆ, ಸಂಸ್ಕೃತಿ ಮತ್ತು ಸಮಾಜಗಳು ಒಂದಕ್ಕೊಂದು ನಿಕಟವಾದ ಸಂಬಂಧಗಳನ್ನು ಹೊಂದಿವೆ. ಮಹಿಳೆ ಸಮಾಜ ಮತ್ತು ಸಂಸ್ಕೃತಿಯ ಅವಿಭಾಜ್ಯ ಅಂಗವೆನಿಸಿದ್ದರೂ, ಮುಂಬಯಿ ಕರ್ನಾಟಕದ ಸಾಮಾಜಿಕ ಸಂದರ್ಭದಲ್ಲಿ, ಅಭಿವೃದ್ಧಿ ಪ್ರಕ್ರಿಯೆಯಲ್ಲಿ, ಅಭಿವೃದ್ಧಿಯಲ್ಲಿ ಮಹಿಳೆಯ ಇರುವಿಕೆ ಮತ್ತು ಪಾತ್ರ ಇತಿಹಾಸ ಕಾಲದಿಂದಲೂ ಗೌಣವಾಗಿತ್ತೆಂದೇ ಹೇಳಬೇಕು. "ಕೆಲವೆಡೆ ರಾಜ್ಯಾಡಳಿತ, ಶಿಕ್ಷಣದಲ್ಲಿ ಕ್ಷತ್ರಿಯ, ಬ್ರಾಹ್ಮಣ ಮಹಿಳೆಯರಿಗೆ ಆದ್ಯತೆಗಳು ಕಂಡುಬಂದರೂ ಶ್ರಮದಾಯಕ, ವೇಶ್ಯಾವಾಟಿಕೆಯಂತಹ ವೃತ್ತಿಯಲ್ಲಿ ಕೆಳವರ್ಗದ ಸ್ತ್ರೀಯರಿದ್ದರು"[೨೧] ಎಂಬ ವಿವರಗಳು ಈ ಪ್ರದೇಶದ ಶಾಸನಗಳಲ್ಲಿ ದೊರೆಯುತ್ತವೆ.

ಬ್ರಿಟಿಷರು ಸಾಮ್ರಾಜ್ಯ ಸ್ಥಾಪಿಸಿ ಇಲ್ಲಿನ ಆಡಳಿತವನ್ನು ಪ್ರಾರಂಭಿಸಿದ ಸಮಯದಲ್ಲಿ ಮುಂಬಯಿ ಕರ್ನಾಟಕ, ದಕ್ಷಿಣದ ಮಹಾರಾಷ್ಟ್ರದಲ್ಲಿ ಸ್ತ್ರೀಯರ ಸ್ಥಾನಮಾನಗಳು ಅತ್ಯಂತ ಕೆಳ ಮಟ್ಟದಲ್ಲಿದ್ದವು. ಸತಿಪದ್ಧತಿ, ಬಾಲ್ಯ ವಿವಾಹ, ಬಹುಪತ್ನಿತ್ವ, ವಿಧವೆಯರ ಪುನರ್ವಿವಾಹ ನಿಷೇಧ ಮುಂತಾದ ಸಮಸ್ಯೆಗಳನ್ನು ಎದುರಿಸುತ್ತಿದ್ದ ಇಲ್ಲಿನ ಸ್ತ್ರೀ ಸಮುದಾಯ ರಾಜಕೀಯ, ಆರ್ಥಿಕ ಮತ್ತು ಧಾರ್ಮಿಕ ಸ್ವಾತಂತ್ರ್ಯವನ್ನು ಕಳೆದುಕೊಂಡು ಪುರುಷರ ಅಡಿಯಾಳಾಗಿ ಜೀವನ ಸಾಗಿಸುತ್ತಿದ್ದರು. ಬ್ರಿಟಿಷರು ತಮ್ಮ ಆಡಳಿತದ ಅವಧಿಯಲ್ಲಿ ಆರ್ಥಿಕ ಹಾಗೂ ಸಾಮಾಜಿಕ ರಚನೆಗಳಲ್ಲಿ ಮಹತ್ತರ ಬದಲಾವಣೆಗಳನ್ನು ತಂದರು. 'ಬಾಲ್ಯವಿವಾಹ, ಸತಿಪದ್ದತಿ, ವಿಧವಾ ಪುನರ್ವಿವಾಹ ನಿಷೇಧ, ಪರದಾ ಪದ್ಧತಿಗಳಂತಹ ಅನಿಷ್ಟ ಪದ್ಧತಿಗಳನ್ನು ತೊಡೆದು ಹಾಕಲು ಅನೇಕ ಶಾಸನಗಳನ್ನು ರೂಪಿಸಿದರು.'[೨೨] 'ಭಾರತೀಯ ಸಮಾಜ ಕಂಡ ಅತ್ಯಂತ ಪ್ರಗತಿಶೀಲ ನಾಯಕರಲ್ಲೊಬ್ಬರಾದ ಮಹಾತ್ಮ ಜ್ಯೋತಿ ಫುಲೆ ಅವರು ೧೮೪೮ರಲ್ಲಿ

ಕನ್ಯಾಶಾಲೆಯನ್ನು ಪ್ರಾರಂಭಿಸಿದರು. ಅಲ್ಲದೇ ೧೮೫೧ರಲ್ಲಿ ದಲಿತ ಮಹಿಳೆಯರಿಗಾಗಿ ಪ್ರಪ್ರಥಮವಾಗಿ ಶಾಲೆಯೊಂದನ್ನು ಸ್ಥಾಪಿಸಿದರು.'[೨೩] ಪಾಶ್ಚಿಮಾತ್ಯ ಜೀವನ ಪದ್ಧತಿ ಭಾರತೀಯರಲ್ಲಿ ವಿಶಾಲ ಮನೋಭಾವವನ್ನು ಬಿತ್ತಿದವು. ಆ ಕಾಲದಲ್ಲಿ ಹುಟ್ಟಿಕೊಂಡ ಸಮಾಜ ಸುಧಾರಣಾ ಸಂಸ್ಥೆಗಳು, ಸ್ತ್ರೀ ಸಂಘಟನೆಗಳು, ಮಹಿಳಾ ನೇತಾರರು ಸ್ತ್ರೀ ಶಿಕ್ಷಣ, ಸಾಮಾಜಿಕ ಅನಿಷ್ಟಗಳ ನಾಶ, ಹಿಂದೂ ಕಾನೂನಿನ ಸುಧಾರಣೆ, ಸ್ತ್ರೀಯರ ನೈತಿಕ ಹಾಗೂ ಭೌತಿಕ ಅಭಿವೃದ್ಧಿ, ಹಕ್ಕುಗಳು ಹಾಗೂ ಅವಕಾಶಗಳಲ್ಲಿ ಸಮಾನತೆ, ಸ್ತ್ರೀಯರಿಗೂ ಓಟಿನ ಹಕ್ಕು ಮುಂತಾದ ವಿಷಯಗಳ ಮೇಲೆ ಹೋರಾಟ ನಡೆಸಿದವು. ಸ್ವಾತಂತ್ರ್ಯ ಚಳುವಳಿಯಲ್ಲಿ, ಅಂಕೋಲಾ ಉಪ್ಪಿನ ಸತ್ಯಾಗ್ರಹ ಮುಂತಾದ ವಿದೇಶಿ ವಿರೋಧಿ ಆಂದೋಳನದಲ್ಲಿ ಉಚ್ಚ ವರ್ಗದ, ನಗರದ ಸ್ತ್ರೀಯರು ಭಾಗವಹಿಸಿದುದು ಮಾತ್ರವಲ್ಲದೇ ಅನೇಕ ಪ್ರದೇಶಗಳಲ್ಲಿ ಸರಳ ಮತ್ತು ಕಪಟವರಿಯದ ಗ್ರಾಮೀಣ ಸ್ತ್ರೀಯರು ಮುಂದಾಳುಗಳಾಗಿದ್ದರು. ಇಂದಿನ ಬೆಳಗಾವಿ, ಧಾರವಾಡ ಮತ್ತು ಉತ್ತರ ಕನ್ನಡ ಜಿಲ್ಲೆಗಳನ್ನೊಳಗೊಂಡ ಕಿತ್ತೂರ ಸಂಸ್ಥಾನದ ರಾಣಿ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಮಡಿದಿದ್ದು ತಿಳಿದ ವಿಚಾರವಾಗಿದೆ. 'ಕರ್ನಾಟಕದ ಬಾರ್ಡೋಲಿ ಎಂದೇ ಖ್ಯಾತಿಯಾದ ಅಂಕೋಲೆಯಲ್ಲಿ ಉಪ್ಪಿನ ಸತ್ಯಾಗ್ರಹ, ಕರನಿರಾಕರಣೆ ಚಳುವಳಿಯಲ್ಲಿ ಭಾಗವಹಿಸಿದ ಸೀತಾಬಾಯಿ ಸರಾಫ, ಆನಂದಿಬಾಯಿ ಹನಮಟ್ಟೇಕರ, ಯಶೋದಾ ಶ್ಯಾಮರಾವ್ ಶೆಣ್ವಿ, ಕೃಷ್ಣಾಬಾಯಿ ಪಂಜಿಕರ, ತಿಮ್ಮ ಹಮ್ಮಣ್ಣಾ ನಾಯ್ಕ ಮುಂತಾದ ಅನೇಕ ಮಹಿಳೆಯರು ಭಾಗವಹಿಸಿದ್ದುದು ತಿಳಿದು ಬರುತ್ತದೆ. ಇವರಲ್ಲಿ ಕೆಳವರ್ಗದ ಸ್ತ್ರೀಯರೂ ಬಹುಸಂಖ್ಯೆಯಲ್ಲಿದ್ದುದು ಗಮನಾರ್ಹವಾಗಿದೆ.'[೨೪]

ಇದು ಆ ಕಾಲದ ಮೇಲ್ವರ್ಗದ ಹಾಗೂ ಮಧ್ಯಮ ವರ್ಗದ ಸ್ತ್ರೀಯರ ಸ್ಥಿತಿಯಾಗಿತ್ತು. ಇನ್ನು ಕೆಳವರ್ಗದ ಮಹಿಳೆಯ ಸ್ಥಿತಿ ಚಿಂತಾಜನಕವಾಗಿತ್ತು. ದಲಿತ ಹೆಣ್ಣು ಮಕ್ಕಳು, ಮಹಿಳೆ ಮತ್ತು ದಲಿತರು ಎಂಬ ಕಾರಣಗಳಿಗಾಗಿ ಎರಡು ಬಗೆಯ ಶೋಷಣೆಗಳನ್ನು ಏಕಕಾಲದಲ್ಲಿ ಅನುಭವಿಸುತ್ತಿದ್ದರು. ಕೆಳಸ್ತರದ ಮಹಿಳೆಯರು ಯಾವಾಗಲೂ ವೇತನಕ್ಕಾಗಿ ಕೃಷಿ, ಕಾರ್ಖಾನೆಗಳಲ್ಲಿ ನಿರಂತರ ದುಡಿಯುತ್ತಿದ್ದರು. ಭೂಮಾಲೀಕರ ಜಮೀನುಗಳು, ಕಾರ್ಖಾನೆಗಳು ಅವರ ಕಾರ್ಯಸ್ಥಾನಗಳಾಗಿದ್ದವು. ಕರಾವಳಿ ತೀರದ ಗ್ರಾಮಗಳಲ್ಲಿ, ಒಳನಾಡಿನ ಹಳ್ಳಿಗಳಲ್ಲಿ ಮಹಿಳೆಯು ಮನೆಗೆಲಸದೊಂದಿಗೆ ಮೀನುಗಾರಿಕೆ, ಪಶುಸಂಗೋಪನೆ ಕಾರ್ಯದಲ್ಲಿ ಪುರುಷರೊಂದಿಗೆ ದುಡಿದರೆ, ಬುಡಕಟ್ಟು ಮಹಿಳೆಯರು ಮಕ್ಕಳನ್ನು ಬೆನ್ನಿಗೆ ಕಟ್ಟಿಕೊಂಡು ಅರಣ್ಯ ಉತ್ಪನ್ನಗಳ ಸಂಗ್ರಹ ಮತ್ತು ಮಾರಾಟದಲ್ಲಿ ಜೀವನ ನಿರ್ವಹಿಸಬೇಕಾದ ಅನಿವಾರ್ಯತೆಗಳಿದ್ದವು. ಇವರು ಶಿಕ್ಷಣ, ವೈದ್ಯಕೀಯ ಸೌಲಭ್ಯ, ಧಾರ್ಮಿಕ ಹಕ್ಕು ಮತ್ತು ಸಾಮಾಜಿಕ ನ್ಯಾಯಗಳಿಂದ ವಂಚಿತರಾಗಿದ್ದರು. ಮುಂಬಯಿ ಕರ್ನಾಟಕದ ಗಡಿಭಾಗದಲ್ಲಿ ಪರಿಶಿಷ್ಟ ವರ್ಗ, ಬುಡಕಟ್ಟು ಮಹಿಳೆಯರ ಸ್ಥಿತಿ ಇಂದಿಗೂ ಕಷ್ಟಕರವಾಗಿದೆ. ಸರಕಾರದ ಯಾವುದೇ ಶೈಕ್ಷಣಿಕ ಯೋಜನೆಗಳು ಹಿಂದುಳಿದ ಮತ್ತು ಕಾಡಿನ ಮಧ್ಯದ ಗ್ರಾಮಗಳಿಗೆ ತಲುಪಿಲ್ಲ. ತಲುಪಿದರೂ ಇವರು ಅವುಗಳಲ್ಲಿ ನಂಬಿಕೆಯನ್ನಿಡುತ್ತಿಲ್ಲ. ಮಹಿಳೆಯರ ಕೂಲಿ, ದುಡಿಮೆ ಹಾಗೂ ಕುಟುಂಬದ ಸ್ಥಾನಮಾನಗಳ ನಡುವೆ ವಿಲೋಮ ಸಂಬಂಧಗಳಿರುವುದನ್ನು ಅಧ್ಯಯನಗಳು ದೃಢಪಡಿಸಿವೆ. ಉನ್ನತ ಜಾತಿ ವರ್ಗಗಳಲ್ಲಿ ದುಡಿಮೆಯನ್ನು ಉದ್ಯೋಗವನ್ನಾಗಿಸಿಕೊಂಡ (ವೇಳೆ ಕಳೆಯುವ) ಮಹಿಳೆಯರು ಇದ್ದರೆ, ಕೆಳಜಾತಿಯ ಮಹಿಳೆಗೆ ದುಡಿಮೆ ಅನ್ನಕ್ಕೆ ದಾರಿಯಾಗಿದೆ.

ಸ್ವಾತಂತ್ರ್ಯಾನಂತರದ ನವವಸಾಹತು ಕಾಲದಲ್ಲಿ ಸ್ತ್ರೀಯರು ಮತ್ತು ಸ್ತ್ರೀಯರ ಅಭಿವೃದ್ಧಿ ಕುರಿತು ಕಾರ್ಯಕ್ರಮಗಳು ಎಲ್ಲೆಲ್ಲೂ ದೊಡ್ಡದಾಗಿ ಕಾಣಿಸಿಕೊಳ್ಳತೊಡಗಿವೆ. ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಮಹಿಳೆಯರು ಹೆಚ್ಚು ಹೆಚ್ಚು ತೊಡಗುವಂತೆ ಮಾಡುವ ಯೋಜನೆಗಳು ಸರ್ಕಾರದ ನೆಲೆಯಲ್ಲಿ ಕಂಡುಬರುತ್ತದೆ. 'ಪ್ರಥಮ ಬಾರಿಗೆ ಆರನೆಯ ಪಂಚವಾರ್ಷಿಕ ಯೊಜನೆಯ ಕರಡಿನಲ್ಲಿ 'ಮಹಿಳೆ ಮತ್ತು ಅಭಿವೃದ್ಧಿ' ಎಂಬ ಅಧ್ಯಾಯವನ್ನು ಸೇರಿಸಲಾಗಿದೆ.'[೨೫] ನಮ್ಮ ಸಂವಿಧಾನವು ಜಾತಿ, ಮತ, ಪಂಥ ಹಾಗೂ ಲಿಂಗಬೇಧವಿಲ್ಲದೆ ಸರ್ವರಿಗೂ ಮೂಲಭೂತ ಹಕ್ಕುಗಳನ್ನು ನೀಡಿದೆ. ಧಾರ್ಮಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಹಾಗೂ ಜೀವನದ ಎಲ್ಲಾ ಕ್ಷೇತ್ರಗಳಲ್ಲಿ ಸ್ತ್ರೀ ಪುರುಷರಿಗೆ ಸಮಾನ ಅವಕಾಶವನ್ನು ಕಲ್ಪಿಸಿದೆ. 'ಕಂಪನಿ ಸರಕಾರವು ಕೊಡಮಾಡಿದ ಶಾಸನಗಳಿಗೆ ತಿದ್ದುಪಡಿಯ ಜೊತೆಗೆ ಸ್ತ್ರೀಯರ ಸ್ಥಾನಮಾನಗಳ ಮೇಲೆ ಪ್ರಭಾವ ಬೀರುವ ಅನೇಕ ಕಾನೂನುಗಳನ್ನು ರಚಿಸಿ ಜಾರಿಗೆ ತಂದಿದೆ.'[೨೬] ಮುಂಬಯಿ ಕರ್ನಾಟಕದಲ್ಲಿ ಪ್ರಚಲಿತದಲ್ಲಿರುವ 'ಮಗ ಉಂಡ್ರ ಕೇಡಿಲ್ಲ, ಮಳೆ ಬಂದ್ರ ಕೇಡಿಲ್ಲ' ಎಂಬ ಗಾದೆಯು ಗಂಡು, ಹೆಣ್ಣಿನ ಬಗೆಗಿರುವ ತಾರತಮ್ಯದ ಮನಃಸ್ಥಿತಿಯನ್ನು ತೆರೆದಿಡುತ್ತದೆ. ಗ್ರಾಮೀಣ

ಪ್ರದೇಶದಲ್ಲಿ ಮಹಿಳೆಯು ಹೆರುವ, ಹೊರುವ ಯಂತ್ರವಾಗಿದ್ದರೆ, ಇಂದಿನ ಜಾಗತೀಕರಣ–ವ್ಯಾಪಾರೀಕರಣಗಳಿಗೆ ತೆರೆದುಕೊಂಡ ನಗರದ ಬದುಕಿನಲ್ಲಿ ಅವಳು ದುಡಿವ ಮತ್ತು ಜಾಹಿರಾತಿನ ಸರಕಾಗಿದ್ದಾಳೆ. ಮಹಿಳೆಯರು ಮಕ್ಕಳನ್ನು ಹೆರುವ, ಪಾಲನೆ ಪೋಷಣೆ ಮಾಡುವುದರ ಜೊತೆಗೆ ಕುಟುಂಬದ ಹೊರಗಿನ ಜವಾಬ್ದಾರಿಗಳನ್ನು ನಿರ್ವಹಿಸುತ್ತಿರುವುದು ಇಂದು ರಹಸ್ಯವಾಗಿಯೇನೂ ಉಳಿದಿಲ್ಲ. '೧೯೯೧ರ ಜನಗಣತಿ ಪ್ರಕಾರ ಕರ್ನಾಟಕದಲ್ಲಿನ ಒಟ್ಟು ಕೃಷಿ ಕಾರ್ಮಿಕರಲ್ಲಿ ಮಹಿಳೆಯರ ಪ್ರಮಾಣ ಶೇ. ೪೯.೭೫ ಹಾಗೂ ಇತ್ತೀಚೆಗೆ ನಡೆದ ೨೦೦೧ರ ಜನಗಣತಿಯ ಪ್ರಕಾರ ರಾಜ್ಯದ ಒಟ್ಟು ಕೃಷಿ ಕಾರ್ಮಿಕರಲ್ಲಿ ಶೇ. ೫೮.೧೯ರಷ್ಟಿದೆ.'[೨೭] ಇದಕ್ಕೆ ಮುಂಬಯಿ ಕರ್ನಾಟಕ ಪ್ರದೇಶ ಹೊರತಾಗಿಲ್ಲ. ಕೃಷಿ, ಮೀನುಗಾರಿಕೆ, ಉಪ್ಪಿನ ದೇಸಾಯ, ಪಶುಪಾಲನೆಯಂತಹ ಕೆಲಸ ಕಾರ್ಯಗಳಲ್ಲಿ ಸರಿಸುಮಾರು ಅರ್ಧಕ್ಕಿಂತ ಹೆಚ್ಚು ಮಹಿಳೆಯರಿದ್ದು ಈ ವೃತ್ತಿಗಳ ಬೆನ್ನೆಲುಬಾಗಿದ್ದಾರೆ.

**೩. ಮುಂಬಯಿ ಕರ್ನಾಟಕ : ಭಾಷಿಕ ಅಂತಃಪ್ರಮಾಣದ ನೆಲೆಗಳು**

ಕರ್ನಾಟಕ, ಮಹಾರಾಷ್ಟ್ರ ಮತ್ತು ಗೋವಾ ರಾಜ್ಯಗಳ ಭೂಸಂಪರ್ಕ ಸಂಬಂಧದಂತೆ ಭಾಷೆ, ಸಾಹಿತ್ಯಗಳ ಸಂಬಂಧವು ಪ್ರಾಚೀನವೂ, ನಿಕಟವೂ ಆಗಿದೆ. ಒಂದು ಭಾಷೆಯನ್ನು ಕಾರಣಾಂತರದಿಂದ ಸ್ವೀಕರಿಸುವಾಗ ಜನತೆ ತಿಳಿದೋ ತಿಳಿಯದೆಯೋ ಅದರ ಹಿನ್ನೆಲೆಯ ಸಂಸ್ಕೃತಿಯೊಂದಿಗೆ ಸಂಪರ್ಕ ಹೊಂದಿ ಅದನ್ನು ಮೈಗೂಡಿಸಿಕೊಳ್ಳುತ್ತಾರೆ. ಇದಕ್ಕೆ ಕಾರಣಗಳು ಹತ್ತು ಹಲವು ಇರಬಹುದು. ವಲಸೆ ಹೋಗುವುದಿರಬಹುದು, ಒತ್ತಾಯದ ಸ್ಥಳಾಂತರವಿರಬಹುದು, ಸಾಮಾಜಿಕ, ಧಾರ್ಮಿಕ ಒತ್ತಡಗಳ ಪರಿಣಾಮವಿರಬಹುದು ಅಥವಾ ಇವೆಲ್ಲಕ್ಕಿಂತ ಮಹತ್ವದ್ದಾದ ರಾಜಕೀಯ ಆಡಳಿತವಿರಬಹುದು. ಇವೆಲ್ಲ ಒತ್ತಡಗಳು ಪರಸ್ಪರ ಆಕರ್ಷಣೆ, ಘರ್ಷಣೆಗೆ ಎಡೆ ಮಾಡಿಕೊಡಬಹುದು.

ಮುಂಬಯಿ ಕರ್ನಾಟಕವು ಕನ್ನಡ, ಮರಾಠಿ, ಕೊಂಕಣಿ ಸಂಸ್ಕೃತಿಗಳ ಸಮ್ಮಿಳನವಾದಂತೆ, ಭಾಷಾ ನೆಲೆಯಲ್ಲೂ ಇವು ಪರಸ್ಪರ ಹೆಣೆದುಕೊಂಡವುಗಳಾಗಿವೆ. ಇಂದು ಕನ್ನಡ, ಮರಾಠಿ ಎಂದು ಗುರುತಿಸಲ್ಪಡುವ ಜನರ ವ್ಯವಹಾರಗಳು ಸಾವಿರಾರು ವರ್ಷಗಳಿಂದ ಒಂದರೊಳಗೊಂದು ಹೆಣೆದುಕೊಂಡಿವೆ ಮತ್ತು ಪರಸ್ಪರ ಪ್ರಭಾವಿತವಾಗಿವೆ. ಈ ಎರಡೂ ಜನಾಂಗಗಳಲ್ಲಿ ಒಬ್ಬೊಬ್ಬರ ಅಭ್ಯಾಸವನ್ನು (ಭಾಷೆ, ಸಾಹಿತ್ಯ) ಸ್ವತಂತ್ರ ರೀತಿಯಲ್ಲಿ ಮಾಡುವುದು ಸಾಧ್ಯವಿಲ್ಲದಾಗಿದೆ. ಕನ್ನಡದಲ್ಲಿ ಕಾಣೆಯಾಗಿರುವ ಶಬ್ದಗಳು ಇಂದಿಗೂ ಮರಾಠಿಯಲ್ಲಿ ಸಿಗುತ್ತವೆ. ಮರಾಠಿಯ ಶಬ್ದಗಳು ಕನ್ನಡದಲ್ಲಿ ಬಳಕೆಯಲ್ಲಿವೆ. ಮರಾಠಿ ಭಾಷೆ ಒಂದು ಮೂರ್ತರೂಪಕ್ಕೆ ಬರುವ ಮೊದಲೇ ಈ ಎರಡು ಜನಾಂಗಗಳಲ್ಲಿ ಗಾಢವಾದ ಸಂಬಂಧವಿತ್ತು ಎಂಬುದಕ್ಕೆ 'ಗಾಥಾ ಸಪ್ತ ಶತಿ'ಯಲ್ಲಿ ಬರುವ ಗಲ್ಲ, ಪೊಟ್ಟ, ತುಪ್ಪದಂಥ ಕನ್ನಡ ಶಬ್ದಗಳು ಉದಾಹರಣೆಯಾಗಿವೆ.

ಮರಾಠಿಯ 'ಪೋವಾಡ' ಪದದ ಅರ್ಥ ತಿಳಿಯಬೇಕಾದರೆ ಕನ್ನಡದಲ್ಲಿ 'ಪವಾಡ' ಪದದ ಹಳೆಯ ಪ್ರಯೋಗವನ್ನು ನೋಡಬೇಕು. ಚಮತ್ಕಾರ, ದಿವ್ಯ ಅತಿಮಾನುಷ ಎಂಬ ಅರ್ಥ ಇದಕ್ಕಿದೆ. 'ಮಾವ' ಎಂಬ ಪದವು ಅಚ್ಚ ದ್ರಾವಿಡ ಪದವಾಗಿದೆ. ಇದು 'ಮಾಮ' ಎಂಬ ರೂಪದಲ್ಲಿ ಮರಾಠಿಯಲ್ಲಿ ಪ್ರಯೋಗದಲ್ಲಿದ್ದು, ಭಾರತದ ಎಲ್ಲ ಭಾಷೆಗಳಲ್ಲೂ ಹೊಕ್ಕಿರುವುದು ಕಂಡುಬರುತ್ತದೆ. 'ಶೇತಕರಿ ಎಂಬ ಪದಪ್ರಯೋಗ ಕರ್ನಾಟಕದ ಕಂದಾಯ ಇಲಾಖೆಯಲ್ಲಿ ಜೀವಂತವಿದೆ. ಶೇತವಾಡಿ > ಶೇತಿಕರಿಯಾಗಿದ್ದು, ಮರಾಠಿಯಲ್ಲಿ, ಮಳೆಯ ನೀರಿನಿಂದ ಬೆಳೆಯನ್ನು ತೆಗೆದುಕೊಳ್ಳುವವರು'[೨೮]ಎಂಬ ಅರ್ಥವನ್ನು ಕೊಡುತ್ತದೆ.

'ಪ'ಕಾರ 'ಹ'ಕಾರವಾಗುವುದು ತೆಲುಗು ಮತ್ತು ತಮಿಳು ಭಾಷೆಯಲ್ಲಿಲ್ಲ. ಕನ್ನಡದಲ್ಲಿ ಮಾತ್ರ ಅದು ಸಾರ್ವತ್ರಿಕವಾಗಿದ್ದು ಅದು ಮರಾಠಿಯಲ್ಲಿಯೂ ಆನುಷಂಗಿಕವಾಗಿ ದೊರೆಯುತ್ತದೆ. 'ಹಟಗಾರ', 'ಹಟ್ಟಿಕಾರ' ಶಬ್ದಗಳು ಮರಾಠಿಯಂತೆ ಕನ್ನಡದಲ್ಲೂ ದೊರೆಯುತ್ತವೆ. ಮರಾಠಿಯ ಧನಗರ ಕನ್ನಡದಲ್ಲಿ ದನಗರ (ದನಕರ) ಎಂದಾಗುತ್ತದೆ. ಕನ್ನಡದ ಶಬ್ದಗಳಲ್ಲಿಯ ಅಲ್ಪಪ್ರಾಣಗಳು ಮರಾಠಿಯಲ್ಲಿ ಮಹಾಪ್ರಾಣಗಳಾಗುತ್ತವೆ. ಉದಾ, ಕಿಂಡಿ (ಖಿಂಡಿ), ಕೊಬ್ಬರಿ (ಖೊಬರೆ), ಕಳ (ಖಳೇ), ಕಾಹಿಲೆ (ಖಾಯಿ), ಕಣಿ (ಖಾಣಿ, ಖಾಣ) ಇತ್ಯಾದಿ. ಇಂತಹ ಅನೇಕ ಕಾರಣಗಳಿಂದಾಗಿ ಕನ್ನಡ ಮತ್ತು ಮರಾಠಿಗಳಲ್ಲಿ ಭೌಗೋಲಿಕ ಸಾಮೀಪ್ಯ ಮತ್ತು ಜನರ ಭಾಷಾ ಸಂಬಂಧಗಳು ನಿಕಟವಾಗಿವೆ. ಮರಾಠಿಯು ಕನ್ನಡದ ಹೊಟ್ಟೆಯ ಮಗುವಲ್ಲದಿದ್ದರೂ ಸಾಕುಮಗುವೆಂದು ವಿದ್ವಾಂಸರು ಸಾಕಷ್ಟು ವಿಶ್ವಾಸದಿಂದ ಹೇಳುತ್ತಾರೆ. ಶೈಶವಾವಸ್ಥೆಯಲ್ಲಿದ್ದಾಗ ಅದು ಕನ್ನಡದಿಂದ ತೆಗೆದುಕೊಂಡ ಶಬ್ದ, ಕ್ರಿಯಾಪದ, ಕನ್ನಡ ಧಾತುಗಳ

ಒಂದು ಭಂಡಾರವನ್ನೇ ಕೊಡಬಹುದು. ಮುಂಬಯಿ ಕರ್ನಾಟಕದಲ್ಲಿ ಇಂತಹ ಶಬ್ದ ಪ್ರಯೋಗಗಳನ್ನು ದಿನನಿತ್ಯ ಕಾಣಬಹುದಾಗಿದೆ. 'ಉದಾಹರಣೆಗೆ, ಓಪದೇಣೆ (ಒಪ್ಪ ಹಾಕು), ಗುದ್ದಾದೇಣೆ (ಗುದ್ದು), ಥಂಡ ಹೋಣೆ (ತಣೆ), ಬಿಕಟ್ ಕರಣೆ (ಬಗಿ ಕಟ್ಟು), ಕೋರಣೆ (ಕೊರೆ), ತುಂಬಣೆ (ತುಂಬು), ಓಪಣೆ (ಒಪ್ಪು), ಮನಗಟಿ (ಮಣಿಕಟ್ಟು), ಬಾಸಿಂಗ ಬಳ (ಬಾಸಿಂಗ ಬಲ) ಇತ್ಯಾದಿ.,'[೨೯]

ಮರಾಠಿಯು ಭಾರತೀಯ ಆರ್ಯ ಭಾಷೆಗಳಲ್ಲಿ ಒಂದಾಗಿದೆ. ಯಾವುದೇ ಸಂಸ್ಕೃತಜನ್ಯ ಭಾಷೆಯಲ್ಲಿ ಸಂಸ್ಕೃತ ಸಂಧಿಗಳನ್ನು ಹೊರತುಪಡಿಸಿ ಬೇರೆ ಸಂಧಿಗಳಿರುವುದಿಲ್ಲ. ಆದರೆ ಮರಾಠಿಯಲ್ಲಿ ಕನ್ನಡದ ಸಂಪರ್ಕದಿಂದಾಗಿ ಸ್ವರಲೋಪ ಸಂಧಿ, 'ಅದೂ ಮೊದಲ ಶಬ್ದ 'ನ' ಇದ್ದಾಗ ದೃಗ್ಗೋಚರವಾಗುತ್ತದೆ. ಉದಾಹರಣೆಗೆ ನ+ಉರೆ =ನುರೇ; ನ+ಅಸೇ=ನಸೇ ಇತ್ಯಾದಿ.[೩೦] ಇದು ಭಾಷೆಗಳೆರಡರ ಕೊಡುಕೊಳ್ಳುವಿಕೆಗೆ ಉತ್ತಮ ಉದಾಹರಣೆಯಾಗಿದೆ.

ಈ ಪರಸ್ಪರ ಕೊಡುಕೊಳ್ಳುವಿಕೆ ಕೇವಲ ಭಾಷೆಗೆ ಮಾತ್ರ ಸೀಮಿತವಾಗಿರದೆ ಎರಡೂ ಭಾಷೆಗಳ ಪ್ರಾಚೀನ ಮತ್ತು ಅರ್ವಾಚೀನ ಸಾಹಿತ್ಯದಲ್ಲೂ ಚಾಚಿಕೊಂಡಿದೆ. ಮರಾಠಿ ಭಾಷೆ ರೂಪುಗೊಳ್ಳುವ ಮೊದಲೇ ಕನ್ನಡ ಭಾಷೆ ಪ್ರಬುದ್ಧವಾಗಿ ಬೆಳೆದಿತ್ತು. ಕಾವ್ಯ, ಮಹಾಕಾವ್ಯಗಳು ರಚನೆಗೊಂಡು ಜನಪ್ರಿಯವಾಗಿದ್ದವು. ಮರಾಠಿಯ ಪ್ರಥಮ ಶಾಸನ ಹತ್ತನೆಯ ಶತಮಾನಕ್ಕೆ ಸೇರಿದ್ದು, ಸಾಹಿತ್ಯ ಹನ್ನೆರಡನೆಯ ಶತಮಾನದಿಂದ ಸೃಷ್ಟಿಯಾಗತೊಡಗಿತೆಂಬ ಅಭಿಪ್ರಾಯ ವಿದ್ವಾಂಸರದಾಗಿದೆ. ಹೀಗಾಗಿ ಸಹಜವಾಗಿ ಕನ್ನಡ ಸಾಹಿತ್ಯದ ಪ್ರಭಾವ ಪಕ್ಕದ ಮರಾಠಿ ಸಾಹಿತ್ಯದ ಮೇಲೆ ಆಗಿದೆಯೆಂಬುದು ವಾಸ್ತವಿಕ ಸಂಗತಿಯಾಗಿದೆ. ಮುಂಬಯಿ ಕರ್ನಾಟಕ ಸಂದರ್ಭದಲ್ಲಿ ಈ ಪ್ರಭಾವ ಹಾಸುಹೊಕ್ಕಾಗಿದೆ.

೧೨೯೦ರಲ್ಲಿ ಜ್ಞಾನೇಶ್ವರ ಬರೆದ 'ಜ್ಞಾನೇಶ್ವರಿ'ಯು ಮರಾಠಿಯ ಮೊದಲ ಮಹಾಕಾವ್ಯವಾಗಿದೆ. ಈ ಮಹಾಕಾವ್ಯದ ಮೇಲೆ ಕನ್ನಡದ ಪ್ರಭಾವವನ್ನು ವಿದ್ವಾಂಸರು ಗುರುತಿಸಿದ್ದಾರೆ. ಜ್ಞಾನೇಶ್ವರಿಯಲ್ಲಿ ಕನ್ನಡದ ಶಬ್ದಗಳಾದ ಅಕ್ಕಸಾಲಿಗ, ಅಡತರ, ಅಡವಾರಾ, ಕೇಳವಣಿ, ತೂಕ, ಪಾಳಿ, ಮದವಿ, ಮಾತು, ಮೆರವಣಿಗೆ, ಹೆರಳು ಮುಂತಾದ ಅನೇಕ ಪದಗಳು ಸಿಗುತ್ತವೆ. ಜ್ಞಾನೇಶ್ವರನೇ ತನ್ನ ಆರಾಧ್ಯ ದೈವವಾದ ಪಂಢರಾಪುರದ ವಿಠಲನನ್ನು 'ಕಾನಡಾ ಹೋ ವಿಠ್ಠಲ ಕರ್ನಾಟಕಿ' ಎಂದು ಕರೆದಿದ್ದಾನೆ. ಇವನ ಇನ್ನೊಂದು ಪದ 'ಕಾಟ್ಯಾಂಚಾ ಅಣಿವರ ವಸತಿ ಶಿನಗಾಂವ್' ಎಂಬ ಪದ ಹಾಗೂ ಪುರಂದರದಾಸರ 'ಮುಳ್ಳು ಕೊನೆಯ ಮೇಲೆ ಮಾರು ಕೆರೆಯ ಕಟ್ಟಿ' ಎಂಬ ಪದದಲ್ಲಿರುವ ಸಾಮ್ಯವನ್ನು ಮರಾಠಿಯ ವಿದ್ವಾಂಸರಾದ ಪಂಡಿತ ಅವಳೀಕರರು ಗುರುತಿಸಿದ್ದಾರೆ. ಇಲ್ಲಿ ಒಬ್ಬ ಸಂತ ಕವಿ ಇನ್ನೊಬ್ಬ ಸಂತ ಕವಿಯಿಂದ ಪ್ರಭಾವಿತನಾಗಿದ್ದುದನ್ನು ಕಾಣಬಹುದು. ಈ ರೀತಿಯ ಭಾಷೆಗಳೆರಡರ ಕೊಡುಕೊಳ್ಳುವಿಕೆಗೆ ಇಂದಿನ ಮುಂಬಯಿ ಕರ್ನಾಟಕವೆಂಬ ಪ್ರದೇಶ ಸಾಕ್ಷೀಭೂತವಾಗಿ ನಿಲ್ಲುತ್ತದೆ.

ಇದೇ ಕಾಲದಲ್ಲಿ ರಚಿತವಾದ ಶರಣರ ವಚನಗಳಲ್ಲಿ ಅನೇಕ ಮರಾಠಿ ಪದಗಳನ್ನು ಬಳಸಲಾಗಿದೆ. ಸಿದ್ಧರಾಮೇಶ್ವರ ಮತ್ತು ಬಸವಣ್ಣನವರ ವಚನಗಳು ಇದಕ್ಕೆ ಉದಾಹರಣೆಯಾಗಿವೆ. ಬಸವಣ್ಣನವರ ವಚನವೊಂದರಲ್ಲಿ 'ಕೊಂಡ ಮಾರೆಂಗೆ ಪೋಪುದು ತಪ್ಪದು' ಎಂಬ ಸಾಲು ಬರುತ್ತದೆ. 'ಮರಾಠಿಯಲ್ಲಿ 'ಕೋಂಡಣೇ' ಎಂದರೆ ಬಂಧಿಸುವುದು (ಅಲೆಮಾರಿ ದನಗಳನ್ನು ಬಂಧಿಸಿಡುವ ಜಾಗಕ್ಕೆ ಕೋಂಡವಾಡೆ ಎನ್ನುವುದು ಇಂದಿಗೂ ಮುಂಬಯಿ ಕರ್ನಾಟಕದಲ್ಲಿ ರೂಢಿಯಲ್ಲಿದೆ), ಮಾರಣೇ ಎಂದರೆ ಹೊಡೆಯುವುದು. ಅತ್ತಿತ್ತ ಹೋಗಲಾರದಂತೆ ಬಂಧಿಸಿ ಹೊಡೆಯುವುದು ಕೊಂಡಮಾರಣೆ ಎನ್ನಿಸಿಕೊಳ್ಳುತ್ತದೆ.[೩೧] ಇತರ ವಚನಗಳಲ್ಲಿ ಬರುವ ಅವುಟು=ಮೂರೂವರೆ, ಕರೋಟಿ= ತಲೆಬುರುಡೆ, ಧವಳಾರ= ಸುಣ್ಣ ಹಚ್ಚಿದ ಮನೆ, ಬಜಾವಣೆ= ವಾದ್ಯ ಬಾರಿಸುವುದು, ಲೆಂಕಡಿಂಗರ=ಸೇವಕ (ಮೂಲತಃ ಮರಾಠಿಯಲ್ಲಿ ಲೆಂಕ ಎಂದರೂ ಮಗ, ಡಿಂಗರ ಎಂದರೂ ಮಗನೇ) ಇತ್ಯಾದಿ., ಮತ ಪ್ರಚಾರಕ್ಕಾಗಿ ಸಂಚರಿಸುತ್ತಿದ್ದ ಶರಣರು, ಸ್ಥಳಾಂತರ ಮಾಡುತ್ತಿದ್ದ ಸಾಹಿತಿಗಳು ಎರಡೂ ಭಾಷೆಯ ಪದಗಳನ್ನು ಪ್ರಯೋಗಿಸುತ್ತ ಸಾಹಿತ್ಯ ರಚಿಸಿದ್ದು ಕಂಡುಬರುತ್ತದೆ.

ಕರ್ನಾಟಕದ ದಾಸ ಸಾಹಿತ್ಯ ಮಹಾರಾಷ್ಟ್ರದ ಸಂತ ಸಾಹಿತ್ಯ ಎರಡೂ ಏಕಕಾಲಕ್ಕೆ ಎರಡೂ ಪ್ರದೇಶಗಳಲ್ಲಿ ವ್ಯಾಪಿಸಿದ್ದವು. ಕನ್ನಡದ ಪುರಂದರದಾಸರು ಹಾಗೂ ಮರಾಠಿಯ ಏಕನಾಥ ಇಬ್ಬರೂ ಸಮಕಾಲೀನರು, ವಿಠ್ಠಲನ ಭಕ್ತರಾಗಿದ್ದವರು. ಏಕನಾಥರು ತಮ್ಮ ಒಂದು ಅಭಂಗದಲ್ಲಿ 'ನಮೋ ಕಾನಡಿ

ಭಾಷಾ' ಎಂದು ಹೇಳಿ ಕನ್ನಡಕ್ಕೆ ಕೃತಜ್ಞತೆಯನ್ನು ತೋರಿದ್ದಾರೆ. ಇವರ ಮೊಮ್ಮಗ ಮುಕ್ತೇಶ್ವರ (ಕ್ರಿ.ಶ. ೧೫೩೧) ಕುಮಾರವ್ಯಾಸನಿಂದ ಪ್ರಭಾವಿತನಾಗಿ ಮರಾಠಿ ಮಹಾಭಾರತವನ್ನು ರಚಿಸಿದ್ದಾನೆ. ಕುಮಾರವ್ಯಾಸನ 'ಭಾರತ'ದಲ್ಲಿಯೂ ಅನೇಕ ಮರಾಠಿ ಪದಗಳು ಕಾಣಸಿಗುತ್ತವೆ. ಆದರಣೆ, ಘಡಾವಣೆ, ವಿಸ್ತಾರಪಣ, ಶೌರ್ಯಪಣ, ಜಾಗವಣ, ಖೇತೆ (ಸಲ), ಖೇಳಿಮೇಳನೆ, ನಿವಡಣೆ ಮುಂತಾದ ಶಬ್ದಗಳು ಮರಾಠಿ ಭಾಷೆಯಿಂದ ಪಡೆದವುಗಳೆ ಆಗಿವೆ. ಇದಲ್ಲದೆ ಕನ್ನಡದ ಲಾವಣಿ-ಗೊಂದಲಿಗರ ಹಾಡುಗಳು ಕರ್ನಾಟಕದಿಂದ ಮಹಾರಾಷ್ಟ್ರಕ್ಕೆ ಹೋಗಿ ಅಲ್ಲಿಂದ ಮತ್ತೆ ಕರ್ನಾಟಕಕ್ಕೆ ಬಂದಿವೆ.

ಈ ಸಾಹಿತ್ಯ ಪ್ರೇರಣೆ, ಅನುಕರಣೆ ಆಧುನಿಕ ಕನ್ನಡ ಸಾಹಿತ್ಯದಲ್ಲಿಯೂ ಮುಂದುವರೆದುಕೊಂಡು ಬಂದಿದೆ. '೧೮೭೫ರಿಂದ ೧೯೩೦ರವರೆಗಿನ ಕಾಲವನ್ನು ಕನ್ನಡ ಕಾದಂಬರಿಯ ಉದಯಕಾಲವೆಂದು ಡಾ. ಆಮೂರರು ಗುರುತಿಸಿದ್ದಾರೆ.'[೨] ಈ ಕಾಲದ ಕನ್ನಡ ಕಾದಂಬರಿಗಳ ಮೇಲೆ ಬಂಗಾಲಿ ಮತ್ತು ಮರಾಠಿ ಕಾದಂಬರಿಗಳ ಪ್ರಭಾವವನ್ನು ಗುರುತಿಸಬಹುದು. ಮುಂಬಯಿ ಕರ್ನಾಟಕದ ಮೊದಲ ಕಾದಂಬರಿಗಾರರಲ್ಲಿ ಒಬ್ಬರೆನಿಸಿದ ಗಳಗನಾಥರು ಮರಾಠಿ ಪತ್ರಿಕೆಗಳಿಂದ, ಅವುಗಳಲ್ಲಿಯ ಲೇಖನಗಳಿಂದ ಪ್ರಭಾವಿತರಾಗಿದ್ದುದು ತಿಳಿದುಬರುತ್ತದೆ. 'ಮರಾಠಿ ಪತ್ರಿಕೆಗಳಾದ ಕೇಸರಿ ಮತ್ತು ಕರಮಣೂಕಗಳಲ್ಲಿ ಪ್ರಕಟವಾಗುತ್ತಿದ್ದ ರಾಜಕೀಯ ಲೇಖನಗಳು, ಹರಿ ನಾರಾಯಣ ಆಪ್ಟೆಯವರ ದಾರಾವಾಹಿ ಕಾದಂಬರಿಗಳು ಅವರಲ್ಲಿ ಸಾಹಿತ್ಯಾಭಿರುಚಿಯನ್ನು, ಬರೆಯಬೇಕೆಂಬ ಹಂಬಲವನ್ನು ಉಂಟು ಮಾಡಿದ್ದವು. ಆಗ (೧೯೦೬-೦೭) ಕನ್ನಡ ಜನರೆಲ್ಲ ಈ ಪತ್ರಿಕೆಗಳನ್ನು ಹೆಚ್ಚಾಗಿ ಓದುತ್ತಿದ್ದರು'[೩] ಎಂಬ ಮಾತು ಮುಂಬಯಿ ಕರ್ನಾಟಕದ ನವೋದಯ ಸಾಹಿತ್ಯದ ಮೊದಲ ಲೇಖಕರ ಮೇಲೆ ಮರಾಠಿ ಭಾಷೆ, ಸಾಂಸ್ಕೃತಿಕ ಪ್ರಭಾವವನ್ನು ಸೂಚಿಸುತ್ತದೆ. ಗಳಗನಾಥರು 'ಸ್ವರಾಜ್ಯ ಸುಗಂಧ' ಎಂಬ ಅವರ ಕಾದಂಬರಿಯಲ್ಲಿ ಶಿವನೇರಿ ಕೋಟೆಯ ವರ್ಣನೆ ಮಾಡುತ್ತ, 'ಶಿವನ ಏರಿ' ಎಂಬ ವ್ಯುತ್ಪತ್ತಿಯನ್ನು ಬಿಡಿಸಿ ಹೇಳಿ, 'ಶಿವಾಜಿಯ ಆ ಜನ್ಮ ಸ್ಥಳವು ಹಿಂದಕ್ಕೆ ಕರ್ನಾಟಕವಿದ್ದುದ್ದರಿಂದ ಶಿವಾಜಿಯು ಕನ್ನಡಿಗನೆಂತಲೇ ಅಭಿಮಾನದಿಂದ ಆರೋಪಿಸಬೇಕಾಗುತ್ತದೆ'[೪] ಎಂದು ಬರೆದಿರುವುದೂ ಗಮನಾರ್ಹವಾಗಿದೆ. 'ಮುಂಬಯಿ ಕರ್ನಾಟಕದ ಕಥನ ಸಾಹಿತ್ಯದ ಆದ್ಯರಲ್ಲಿ ಒಬ್ಬರಾದ 'ಕೆರೂರ ವಾಸುದೇವಾಚಾರ್ಯರ ಸಣ್ಣಕತೆಯ ತಂತ್ರ ಮರಾಠಿಯಲ್ಲಿಯ ಸಣ್ಣಕತೆಯ ಪ್ರಕಾರವಾದ 'ಸಂಪೂರ್ಣ ಕತೆ'ಯ ಅನುಕರಣವಾಗಿದೆ'[೫] ಎಂಬ ಕುರ್ತಕೋಟಿಯವರ ಹೇಳಿಕೆಯನ್ನು ಕನ್ನಡ ಕಥನ ಸಾಹಿತ್ಯದ ವಿಮರ್ಶೆಯು ಪರಿಗಣಿಸಬೇಕಾಗಿದೆ.

ಕನ್ನಡ ಮರಾಠಿ ರಂಗಭೂಮಿಗಳೂ ಈ ಪ್ರಭಾವದಿಂದ ದೂರ ಉಳಿದಿಲ್ಲ. ಮರಾಠಿ ರಂಗಭೂಮಿಯ ಜನಕರೆಂದು ಕೀರ್ತಿ ಪಡೆದ ಅಣ್ಣಾಸಾಹೇಬ ಕಿರ್ಲೋಸ್ಕರರು ಕರ್ನಾಟಕದವರು. ಕಾರವಾರ ಜಿಲ್ಲೆಯಲ್ಲಿರುವ ಕರ್ಕಿಗ್ರಾಮದ ಒಂದು ಯಕ್ಷಗಾನ ಮೇಳವು ೧೮೪೨ರಲ್ಲಿ ಮಹಾರಾಷ್ಟ್ರದ ಸಾಂಗಲಿ ಅಧಿಪತಿ ಅಪ್ಪಾ ಸಾಹೇಬ ಪಟವರ್ಧನರ ಆಮಂತ್ರಣದ ಮೇರೆಗೆ ಸಾಂಗಲಿ ಸಂಸ್ಥಾನಕ್ಕೆ ಭೇಟಿ ನೀಡಿದ್ದು ದಾಖಲೆಯಾಗಿದೆ. '೧೮೭೦ರಲ್ಲಿ ಬೆಳಗಾವಿ ಸಮಾಚಾರ ಛಾಪಖಾನೆಯಲ್ಲಿ ಪ್ರಕಟವಾದ 'ಶ್ರೀಕೃಷ್ಣ ಪಾರಿಜಾತ' ನಾಟಕಕ್ಕೆ ಮರಾಠಿ ಮುನ್ನುಡಿಯಿರುವುದು ಕನ್ನಡ ಮರಾಠಿ ಸಾಹಿತ್ಯ ಸಂಬಂಧಕ್ಕೆ ಉತ್ತಮ ಉದಾಹರಣೆಯಾಗಿದ್ದು'[೬] ಮುಂಬಯಿ ಕರ್ನಾಟಕ ಇದಕ್ಕೆ ಸೇತುವೆಯಾಗಿದೆ. ಕನ್ನಡದಲ್ಲಿ ರಂಗಭೂಮಿಯ ಮೇಲಿನ ಶ್ರೀರಂಗ ಮತ್ತು ಕಾರ್ನಾಡರೆಂದರೆ ಮರಾಠಿ ರಂಗಭೂಮಿಯ ಮೇಲಿನ ವಸಂತ ಕಾನೇಟಕರ ಮತ್ತು ವಿಜಯ ತೆಂಡುಲ್ಕರರು ಎಂದು ಹೇಳಬಹುದು. ಸಮಾನ ಪ್ರಕೃತಿ ಮತ್ತು ಪ್ರವೃತ್ತಿಯ ಈ ಲೇಖಕರು ಭಿನ್ನ ಭಾಷೆಯಲ್ಲಿ ಬರೆಯುತ್ತಿದ್ದರೂ ಅವರ ಆಂತರಿಕ ಪ್ರತಿಕ್ರಿಯೆಗಳು ಸಮಾನವಾಗಿಯೇ ವ್ಯಕ್ತವಾಗುತ್ತವೆ.

ಇಷ್ಟೆಲ್ಲ ಸಾಮಾಜಿಕ ಸಾಂಸ್ಕೃತಿಕ ಒಳಸಂಬಂಧ ಹೊಂದಿರುವ ಈ ಜನಾಂಗಗಳು ಪರಸ್ಪರ ಘರ್ಷಣೆಗಿಳಿಯಲು ಕಾರಣಗಳಾದರೂ ಏನು, ಇದು ಬರಿ ರಾಜಕೀಯ ಚಿತಾವಣೆಯೋ, ಇಲ್ಲಾ ಸಾಂಸ್ಕೃತಿಕ ಕರ್ಷಣೆಯೋ ಎಂಬ ಪ್ರಶ್ನೆ ಕಾಡುತ್ತದೆ. ಸಮಸ್ಯೆಯ ಒಳಪದರುಗಳನ್ನು ಬಿಡಿಸಿ ನೋಡಿದಾಗ ಹಲವಾರು ಐತಿಹಾಸಿಕ ಅಂಶಗಳು ನಮ್ಮೆದುರು ನಿಲ್ಲುತ್ತವೆ. ಮರಾಠಿಗರು ತಾವು ಬೃಹತ್ ಮಹಾರಾಷ್ಟ್ರದ ಭಾಗವೆಂತಲೂ, ಕನ್ನಡಿಗರು ತಾವು ವಿಶಾಲ ಕರ್ನಾಟಕದ ಪ್ರಜೆಗಳೆಂತಲೂ ತಿಳಿದುಕೊಂಡಿದ್ದಾರೆ. ಇದು ಇತ್ತೀಚೆಗೆ ಬೆಳೆದುಕೊಂಡು ಬಂದ ಬೆಳವಣಿಗೆಯಾಗಿದೆ. ಇಂದಿಗೆ ಸುಮಾರು ೭೫-೧೦೦ ವರ್ಷಗಳ ಹಿಂದೆ ಮರಾಠಿ/ಕನ್ನಡಿಗರಲ್ಲಿ ಈ ಮನೋಭಾವನೆ ಇರಲಿಲ್ಲ. '೧೯ನೆಯ ಶತಮಾನದ ಕೊನೆಯವರೆಗೆ ಅಂದರೆ ದಕ್ಷಿಣದಲ್ಲಿ ರಾಷ್ಟ್ರೀಯ ಭಾವನೆ ಜಾಗೃತವಾಗುವವರೆಗೆ ಮಹಾರಾಷ್ಟ್ರದ ಬ್ರಾಹ್ಮಣನನ್ನು

ಯಾರಾದರೂ 'ಮರಾಠಾ' ಎಂದು ಕರೆದರೆ ಅವನಿಗೆ ಅಪಮಾನವಾದಂತಾಗುತ್ತಿತ್ತು. 'ಛೆ ! ಛೆ ! ನಾನು ಮರಾಠಾ ಅಲ್ಲ ದಕ್ಷಿಣೀ ಬ್ರಾಹ್ಮಣನಾಗಿದ್ದೇನೆ'[೩೭] ಎಂದು ಅವನು ತಟ್ಟನೆ ಉತ್ತರ ಕೊಡಬಹುದಾಗಿತ್ತು. ಮರಾಠಾ ಎನ್ನುವುದು ಅಂದು ಒಂದು ವಿಶಿಷ್ಟ ಜಾತಿಯ ಹೆಸರಾಗಿರಬಹುದು. ಇದು ಮರಾಠಾ ಪದದ ಬಗೆಗೆ ಬ್ರಾಹ್ಮಣರಿಗಿದ್ದ ಕೀಳರಿಮೆಯನ್ನು ತೋರಿಸುತ್ತದೆ. ಮುಂಬಯಿ ಕರ್ನಾಟಕದ ಸ್ಥಿತಿಯೂ ಇದಕ್ಕಿಂತ ಭಿನ್ನವಾಗಿರಲಿಲ್ಲ. 'ದಕ್ಷಿಣದ ಮಹಾರಾಷ್ಟ್ರ ಎಂದು ಕರೆಯಲ್ಪಡುತ್ತಿದ್ದ ಧಾರವಾಡ ಹುಬ್ಬಳ್ಳಿಗಳಲ್ಲಿ ಒಂದೂ ಕನ್ನಡ ಶಾಲೆಗಳಿರಲಿಲ್ಲ. ಇಡೀ ಪ್ರದೇಶದಲ್ಲಿ ಎರಡು ಮರಾಠಿ ಶಾಲೆಗಳಿದ್ದವು. ಮೊದಲ ಕನ್ನಡ ಶಾಲೆ ಆರಂಭಗೊಂಡಿದ್ದು ೧೮೩೬ರಲ್ಲಿ'[೩೮] ಅಂದರೆ ಅಂದಿನ ಕನ್ನಡದ ಶೋಚನೀಯ ಸ್ಥಿತಿ ಅರ್ಥವಾಗುತ್ತದೆ. ಇಲ್ಲಿ ಒಂದೂ ಕನ್ನಡ ಪತ್ರಿಕೆಗಳ ಸುಳಿವಿರಲಿಲ್ಲ. 'ಮುಂಬಯಿ ಪ್ರಾಂತದ ಗೆಜೆಟಿಯರ್ ಪ್ರಕಾರ (೧೮೮೫, ಪುಟಗಳು ೬೧೩, ೬೨೧) ಬ್ರಾಹ್ಮಣರು ಓದುತ್ತಿದ್ದುದು ಮರಾಠಿಯಲ್ಲಿ ಅಚ್ಚಾದುದನ್ನು ಮಾತ್ರ ಹಾಗೂ ಕನ್ನಡಿಗರು ವೃತ್ತ ಪತ್ರಿಕೆ ಓದುವುದರಲ್ಲಿ ಯಾವುದೇ ಆಸಕ್ತಿಯನ್ನು ತೋರುತ್ತಿರಲಿಲ್ಲ.'[೩೯] ಕನ್ನಡವು ದ್ರಾವಿಡ ಭಾಷಾ ಪರಿವಾರಕ್ಕೆ ಸೇರಿದ್ದು ಮರಾಠಿ ಭಾಷೆಯು ಸಂಸ್ಕೃತಜನ್ಯವೆಂಬ (ಸಂಸ್ಕೃತ> ಪ್ರಾಕೃತ> ಅಪಭ್ರಂಶ> ಮರಾಠಿ) ತಿಳುವಳಿಕೆ ಅವರದಾಗಿತ್ತು. ಇಂತಹ ಸಾಮಾಜಿಕ ಸಂದರ್ಭದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡುವ ರಾಷ್ಟ್ರೀಯ ಭಾವನೆಯ ಜಾಗೃತಿ, ನಂತರ ನಡೆದ ಭಾಷಾವಾರು ಪ್ರಾಂತಗಳ ವಿಂಗಡಣೆಯ ಪ್ರಕ್ರಿಯೆಗಳು ಜನರನ್ನು ಭಾಷೆ, ನೆಲ, ಜಲಕ್ಕಾಗಿ ಹೋರಾಡಲು ಪ್ರೇರೇಪಿಸಿದವು ಎಂಬುದು ಅಧ್ಯಯನದ ನಿಲುವಾಗಿದೆ.

**ಮುಂಬಯಿ ಕರ್ನಾಟಕ ಮತ್ತು ಶಿಕ್ಷಣ**

ಕರ್ನಾಟಕದ ಎಲ್ಲೆಡೆಯಂತೆ ಮುಂಬಯಿ ಕರ್ನಾಟಕದಲ್ಲಿಯೂ ಸ್ವಾತಂತ್ರ್ಯಾ ನಂತರ ಬಂದ ಸರಕಾರಗಳು ಶಿಕ್ಷಣ ಎಲ್ಲರ ಹಕ್ಕು ಎಂಬ ಘೋಷಣೆಯಡಿ ಶಾಲೆ, ಕಾಲೇಜುಗಳನ್ನು ಸ್ಥಾಪಿಸಿದರೂ ಅದನ್ನು ಅನುಷ್ಠಾನಕ್ಕೆ ತರುವಲ್ಲಿ ಎಡವಿದ್ದು ಕಂಡುಬರುತ್ತದೆ. ಮುಂಬಯಿ ಕರ್ನಾಟಕ ಪ್ರದೇಶವು ಶೈಕ್ಷಣಿಕವಾಗಿ ಹಿಂದುಳಿದ ಪ್ರದೇಶವಾಗಿದ್ದು, ಗಡಿನಾಡಿನ ಎರಡೂ ಭಾಗಗಳಲ್ಲಿ ಕನ್ನಡ, ಮರಾಠಿ, ಕೊಂಕಣಿ ಮಾಧ್ಯಮದ ಶಾಲೆಗಳನ್ನು ಕಾಣಬಹುದು. ಮರಾಠಿ ಶಾಲೆಗಳಿಗೆ ಹೋಲಿಸಿದರೆ ಕನ್ನಡ ಶಾಲೆಗಳ ಸ್ಥಿತಿ ಶೋಚನೀಯವೆನಿಸುತ್ತದೆ. ಉತ್ತಮ ಕಟ್ಟಡ, ಶೌಚಾಲಯ, ಆಟದ ಮೈದಾನ, ಸಮಯಕ್ಕೆ ಸರಿಯಾಗಿ ಸಿಗದ ಪಠ್ಯ ಪುಸ್ತಕಗಳು, ಶಾಲಾ ಶಿಕ್ಷಕರ ಕೊರತೆಯಿಂದ ಈ ಶಾಲೆಗಳು ಬೇರೆ ಭಾಷಾ ಶಾಲೆಗಳಿಗೆ ಸ್ಪರ್ಧೆಯನ್ನು ನೀಡಲಾರದ ಸ್ಥಿತಿಯಲ್ಲಿವೆ. ಹೀಗಾಗಿ ಗಡಿಯುದ್ದಕ್ಕೂ ಮರಾಠಿ ಶಾಲೆಗಳಿಗೆ ಕನ್ನಡ ಮಕ್ಕಳು ಸೇರುವುದನ್ನು ಕಾಣಬಹುದಾಗಿದೆ. ಅನ್ಯ ಭಾಷಾ ಮಾಧ್ಯಮದ ಶಾಲೆಗಳಲ್ಲಿ ಕನ್ನಡ ಕಲಿಕೆಯ ಕಡ್ಡಾಯವೆಂಬ ಸರಕಾರದ ಕಾನೂನು ಕನ್ನಡಕ್ಕೆ ಅನಾನುಕೂಲವಾಗಿ ಪರಿಣಮಿಸಿದೆ. ಕನ್ನಡದ ಅಭಿಮಾನವಿರುವ ಕೆಲವೇ ಜನರು ತಮ್ಮ ಮಕ್ಕಳನ್ನು ಬೇರೆ ಮಾಧ್ಯಮದ ಶಾಲೆಗಳಿಗೆ ಸೇರಿಸಿ ಈ ಕಾನೂನಿನ ಎಳೆಯಲ್ಲಿ ಒಂದು ಭಾಷೆಯಾಗಿ ಕನ್ನಡವನ್ನು ಕಲಿಯುವ ವ್ಯವಸ್ಥೆ ಮಾಡುತ್ತಿದ್ದಾರೆ.

ಗಡಿ ಪ್ರದೇಶದ ಹಾಸುಹೊಕ್ಕಾದ, ಕೊಡುಕೊಳ್ಳುವ ಜೀವನ ಕೇವಲ ಸಾಮಾಜಿಕ, ಆರ್ಥಿಕ ಜೀವನಕ್ಕೆ ಸೀಮಿತವಾಗಿರದೆ, ಶಿಕ್ಷಣ, ಸಾಹಿತ್ಯ ಕ್ಷೇತ್ರದಲ್ಲಿಯೂ ನೆಲೆಗೊಂಡಿರುವುದು ಕಂಡುಬರುತ್ತದೆ. ಗಡಿ ಗ್ರಾಮ, ಪಟ್ಟಣದಲ್ಲಿ ಗಂಡು ಮಕ್ಕಳನ್ನು ಕನ್ನಡ ಶಾಲೆಗೂ, ಹೆಣ್ಣು ಮಕ್ಕಳನ್ನು ಮರಾಠಾ ಶಾಲೆಗೂ ಕಳಿಸುತ್ತ ದ್ವಿಭಾಷಾ, ತ್ರಿಭಾಷಾ ಸೂತ್ರವನ್ನು ಅನುಸರಿಸುತ್ತಿದ್ದ ಹಳಿಯಾಳ, ಜೋಯಿಡಾ, ಕಾರವಾರ, ಬೆಳಗಾವಿ, ವಿಜಾಪುರ, ಸಾಂಗ್ಲಿ, ಪುಣೆ, ಮುಂಬಯಿ ಪ್ರದೇಶಗಳಲ್ಲಿಯ ಸಾಮಾನ್ಯ ಜನರನ್ನು ಕುರಿತು ಶಾಂತಿನಾಥ ದೇಸಾಯಿ, 'ಈ ರೀತಿ ನಾವು ಭಾಷೆ, ಸಾಹಿತ್ಯ ವಿಚಾರದಲ್ಲಿ ಘರ್ಷಣೆ ಕಂಡವರು. ಕರ್ಷಣ ಹಾಗೂ ಆಕರ್ಷಣೆಯನ್ನೂ ಕಂಡವರು. ಮರಾಠಿ ಮನೆ ಮಾತಾಗಿರುವ ಎಷ್ಟೋ ಜನರು ಕನ್ನಡದಲ್ಲಿ ಸಾಹಿತ್ಯ ರಚಿಸಿರುವ ಪರಂಪರೆಯಿದೆ. ಕನ್ನಡ ಮನೆ ಮಾತಾಗಿದ್ದ ಗೋಕಾಕ ಹಾಗೂ ಮುಗಳಿಯವರು ಮಹಾರಾಷ್ಟ್ರದ ಸಾಂಗಲಿಯಲ್ಲಿ ನೆಲೆಸಿ ಸಾಹಿತ್ಯ ರಚಿಸಿದ್ದು; ಚಿತ್ತಾಲ ಸಹೋದರರು, ನಾ. ಡಿಸೋಜ ಮುಂತಾದವರು ಕೊಂಕಣಿ ಮನೆ ಮಾತಾಗಿದ್ದರೂ ಕನ್ನಡಕ್ಕೆ ಉತ್ತಮ ಸಾಹಿತ್ಯ ಕೊಟ್ಟಿದ್ದು ತಿಳಿದಿದೆ'[೪೦] ಎಂದು ಉಲ್ಲೇಖಿಸುತ್ತಾರೆ. ಇಂದು ಕರ್ನಾಟಕದ ಎಲ್ಲ ಭಾಗಗಳಲ್ಲಿ ಕಂಡು ಬರುವಂತೆ ಶಿಕ್ಷಣವು ಇಲ್ಲಿಯೂ ವ್ಯಾಪಾರದ ಸರಕಾಗಿದೆ. ಪ್ರಬಲಕೋಮಿಗೆ ಸೇರಿದ ಜನಾಂಗಗಳು ಸ್ಥಾಪಿಸಿ ನಡೆಸುತ್ತಿರುವ ವೃತ್ತಿ ಶಿಕ್ಷಣ ಸಂಸ್ಥೆಗಳು, ಉನ್ನತ ಶಿಕ್ಷಣ ಸಂಸ್ಥೆಗಳು ಮುಂಬಯಿ ಕರ್ನಾಟಕದ ಪ್ರದೇಶದಲ್ಲೂ ಕಂಡುಬರುತ್ತವೆ.

ಈ ಶಿಕ್ಷಣ ಸಂಸ್ಥೆಗಳು ಪಡೆವ ಡೋನೇಶನ್, ದುಬಾರಿ ಶುಲ್ಕಗಳಿಂದಾಗಿ ಇವು ಜನಸಾಮಾನ್ಯರ ಮಕ್ಕಳಿಗೆ ನಿಲುಕದಂತಾಗಿವೆ.

## ೪. ಮುಂಬಯಿ ಕರ್ನಾಟಕ : ಆಚರಣಾ ಮೂಲದ ನೆಲೆಗಳು

ಮುಂಬಯಿ ಕರ್ನಾಟಕದ ರಾಜಮನೆತನಗಳ ಇತಿಹಾಸಕ್ಕಿಂತ ಇಲ್ಲಿಯ ಜನಜೀವನ, ನಡೆನುಡಿಯ ಇತಿಹಾಸ ಇನ್ನೂ ವೈವಿಧ್ಯಮಯವಾಗಿದೆ ಮತ್ತು ಸಾದೃಶ್ಯವೂ ಆಗಿದೆ. ಬೇರೆ ಬೇರೆ ಕಾಲಘಟ್ಟದಲ್ಲಿ ವಿಭಿನ್ನ ಮತ ಧರ್ಮ ಸಂಸ್ಕೃತಿಗಳಿಗೆ ಸೇರಿದ ಜನ ತಮ್ಮ ನಡೆ ನುಡಿ ಸಂಪ್ರದಾಯಗಳೊಂದಿಗೆ ಇಲ್ಲಿಗೆ ವಲಸೆ ಬಂದರು. ಇವರು ಮತ್ತು ಸ್ಥಳೀಕರಲ್ಲಿ ತಮ್ಮ ಮತ, ಧರ್ಮ ಅಸ್ತಿತ್ವಕ್ಕಾಗಿ ಹೋರಾಟ ನಡೆದು ಕೆಲವು ಕಳೆಗುಂದಿ ಕಣ್ಮರೆಯಾದವು. ಕೆಲವು ಸ್ಥಿರವಾಗಿ ನೆಲೆ ನಿಂತವು. ಕಾಲಾಂತರದಲ್ಲಿ ಇವರಲ್ಲಿ ಪರಸ್ಪರ ಸಾಮಾಜಿಕ ಸಂಪರ್ಕವೇರ್ಪಟ್ಟು, ಇವರ ಸಾಂಪ್ರದಾಯಿಕ ನಡೆನುಡಿಗಳಲ್ಲಿ ಒಂದು ಬಗೆಯ ಸಂಕೀರ್ಣತೆಯುಂಟಾಯಿತು. ಸಾಹಿತ್ಯ, ಕಲೆ, ಜಾನಪದ ಗೀತೆ, ರಂಗಭೂಮಿ, ಗುಡಿ ಗೋಪುರಗಳು, ಶಾಸ್ತ್ರಗಳು, ಸಾಮಾಜಿಕ ಆಚರಣೆಗಳು, ವಿಜ್ಞಾನ, ಭಾಷಾ ಬಾಂಧವ್ಯ, ವಿವಿಧ ಕಲೆಗಳು ಸಂಸ್ಕೃತಿಯ ಹಲವು ಅಭಿವ್ಯಕ್ತಿ ರೂಪಗಳಾಗಿ ಉಳಿದಿವೆ. ಈ ನಾಡಿನ ಸಾಹಿತ್ಯ, ಕಲೆಗಳು ಇಲ್ಲಿನ ಸಾಮಾನ್ಯ ಜನರ ಆಶಯಗಳು, ರೂಢಿ, ನಂಬಿಕೆಗಳು, ಸಂಪ್ರದಾಯಗಳು ಇವೆಲ್ಲವುಗಳ ಪ್ರಭಾವದಿಂದ ರೂಪುಗೊಂಡಿವೆ. ಇಲ್ಲಿಯ ಮಾತೃಪ್ರಧಾನ, ಪಿತೃಪ್ರಧಾನ ಹಾಗೂ ಟೋಟಮ್ ಸಂಸ್ಕೃತಿಗೆ ಸೇರಿದ ಜನರೆಲ್ಲ ಇಂದಿನ ವೈಜ್ಞಾನಿಕ ಯುಗದಲ್ಲಿ ಒಟ್ಟಿಗೆ ಕಲೆತು ತಮ್ಮ ಹಿಂದಿನ ಸಾಂಸ್ಕೃತಿಕ ವಿವಿಕ್ತತೆಯನ್ನು ಹಂತಹಂತವಾಗಿ ಕಳೆದುಕೊಂಡು ಒಂದು ಬಗೆಯ ಸಮ್ಮಿಶ್ರ ಸಂಕೀರ್ಣ ಸಂಸ್ಕೃತಿಯನ್ನು ರೂಡಿಸಿಕೊಂಡಿದ್ದು ಮೇಲುನೋಟಕ್ಕೆ ತೋರುತ್ತಿದೆಯಾದರೂ, ಇವರ ಸಂಸ್ಕೃತಿಯ ಒಡಲಾಳಕ್ಕಿಳಿದು ವಿಶ್ಲೇಷಿಸಿ ನೋಡಿದಲ್ಲಿ ಭಿನ್ನತೆಯನ್ನು ಎತ್ತಿ ತೋರಿಸುವುದು ಕಷ್ಟವಾಗಲಾರದು.

ಕನ್ನಡ-ಮರಾಠಿ ಸಾಮಾಜಿಕ ಆಚರಣೆಗಳ ಸಂದರ್ಭದಲ್ಲಿ ಇಲ್ಲಿಯ ಆಚರಣೆಗಳು, ನಡೆನುಡಿಗಳು ವೈಶಿಷ್ಟ್ಯಪೂರ್ಣ ಆಯಾಮವನ್ನು ಪಡೆದುಕೊಂಡು ಸಾದೃಶ್ಯವನ್ನು ಪಡೆದುಕೊಳ್ಳುತ್ತವೆ. ಸುಮಾರು ಏಳು ನೂರು ವರ್ಷಕ್ಕೂ ಹೆಚ್ಚು ಕಾಲ ಒಂದು ಪ್ರದೇಶದ ಮೇಲೆ ಇನ್ನೊಂದು ಸಂಸ್ಕೃತಿಯ, ಭಾಷೆಯ ಅರಸರು ಆಡಳಿತ ನಡೆಸಿದ್ದು ಭಾರತದ ಇತಿಹಾಸದಲ್ಲೇ ಅನನ್ಯ ಸಾಧಾರಣವಾದುದು. ಕನ್ನಡದ ನಡೆನುಡಿಯ ಅನೇಕ ವೈಶಿಷ್ಟ್ಯಗಳು ಮರಾಠಿಯಲ್ಲಿ ಮೈಗೂಡಿ ಹೋಗಿವೆ. ಮನೆಯಿಂದ ಹೋಗುವಾಗ 'ಹೋಗುತ್ತೇನೆ' ಎನ್ನಬಾರದು. 'ಹೋಗಿ ಬರುತ್ತೇನೆ' ಎನ್ನಬೇಕು (ವಾಸ್ತು, ತಥಾಸ್ತು ಎನ್ನುತ್ತಿರುತ್ತದೆ ಎನ್ನುವ ಕಲ್ಪನೆ). ಇದು ಕನ್ನಡ ಜನಜೀವನದ ರೂಢಿ. ಇದನ್ನೇ ಆದಿಪುರಾಣ ಹೇಳುತ್ತದೆ (ಆದಿಪುರಾಣ ಪುಟ ೮.೧೯). ಈ ವಿಶ್ವಾಸವನ್ನು ಮರಾಠಿಗರು ನಡೆನುಡಿಯಲ್ಲಿ ಬಳಸಿಕೊಂಡಿದ್ದಾರೆ. ಅದೇ ರೀತಿ, 'ಮುಂಬಯಿ ಕರ್ನಾಟಕದ ಜನರು, ಸ್ನಾನಕ್ಕೆ ಮೈತೊಳೆದುಕೊಳ್ಳುತ್ತೇನೆ ಎನ್ನುತ್ತಾರೆ. ಮರಾಠಿ ಗಂಡಸರೂ 'ಮೈ ಒದ್ದೆ' (ಅಂಗ+ ಓಲೇಜ್=ಅಂಘೋಳ) ಎಂದು ಅನುಸರಿಸುತ್ತಾರೆ'.[೧೯]

'ಮುಂಬಯಿ (ಉತ್ತರ) ಕರ್ನಾಟಕದ ರೈತಾಪಿ ಜನರಲ್ಲಿ ಸಾರು ಪಲ್ಯಗಳಿಗೆ ಒಣಿಗ್ಗೆ (ಒಣಗು+ಚತುರ್ಥಿ 'ಗೆ') ಶಬ್ದ ಬಂದಿದೆ. ಮರಾಠಿಯಲ್ಲಿ ಇದೇ ಕಲ್ಪನೆ (ಒಣ=ಕೊರಡೇ+ಚತುರ್ಥೀ 'ಸ'=ಕೋರಡ್ಯಾಸ) ಶಬ್ದದಲ್ಲಿ ಕಾಣಬರುತ್ತದೆ. ಕೊಂಕಣಿಯಲ್ಲೂ ಈ ಕಲ್ಪನೆ ಇದೆ. ಅಲ್ಲಿ ಸಾರು ಪಲ್ಯಗಳಿಗೆಲ್ಲ (ಬರಿ=ನುಸತೇ+ಚತುರ್ಥೀ 'ಕ'=ನಿಸ್ತ್ಯಾಕ) ಆಗುತ್ತದೆ.[೨೦] ಕೂಸು ಹುಟ್ಟಿದ ಐದನೇ ದಿವಸಕ್ಕೆ ಒಬ್ಬ ದೇವಿ ಅದರ ಹಣೆ ಬರಹವನ್ನು ಬರೆಯುವ (ಮೂಢ ?) ನಂಬಿಕೆ ಕನ್ನಡಿಗರಲ್ಲಿದೆ. ಅವಳಿಗೆ ಐದೇಶಿ (ಅಯ್=೫ ದಿವಸಿ) ಎಂದು ಜನಪದ ಶಬ್ದಗಳಲ್ಲಿ ಹೇಳುವುದುಂಟು. ಇದೇ ರೀತಿಯ ನಡೆ ಮರಾಠಿಗರಲ್ಲೂ ಇದ್ದು ಐದನೇ ದಿನಕ್ಕೆ ಹಣೆಬರಹವನ್ನು ಬರೆಯುವ ಆ ದೇವಿಗೆ ಸಟವಿ (ಸಟಿ+ಅವ್ವೆ) ಎಂದು ಕರೆಯುತ್ತಾರೆ. ಇಲ್ಲಿ ಅವಳು ಐದನೇ ದಿನ ವಿಧಿ ಬರಹ ಬರೆದರೂ ಅವಳಿಗೆ ಆರನೇ ದಿನದಾಕೆಯೆಂದು ಕರೆಯುವುದು ಸೋಜಿಗವೆನಿಸಿದೆ. ಹೀಗೆ ನಡೆನುಡಿಯಲ್ಲಿ ಮೂರೂ ಜನಾಂಗ (ಕಂನಡ, ಮರ್ಹಾಠ, ಕೊಂಕಣಿ) ಹಾಸುಹೊಕ್ಕಾಗಿರುವುದನ್ನು ಕಾಣಬಹುದು.

ಮಾವನ ಮಗಳನ್ನು ಮದುವೆಯಾಗುವ ರೂಢಿ ಆರ್ಯ ಜನಾಂಗದಲ್ಲಿ ನಿಷಿದ್ಧವೆನಿಸಿದೆ. ತಾವು 'ಅರೆ' (ಆರ್ಯ)ರೆಂದು ನಂಬಿದ ಮರಾಠರಲ್ಲಿ ಮಾವನ ಮಗಳನ್ನು ಎಲ್ಲ ಕುಲದಲ್ಲೂ ಮದುವೆಯಾಗುವ

ಸಂಪ್ರದಾಯವಿದೆ. ಈ ಸಂದರ್ಭದಲ್ಲಿ ಸಂಶೋಧಕರು ಎರಡು ಸಾಧ್ಯತೆಗಳನ್ನು ಪರಿಗಣಿಸುತ್ತಾರೆ. ‘ಈ ಸಂಪ್ರದಾಯ ದ್ರವಿಡರಾದ ಕಂನಡಿಗರ ಬಳುವಳಿಯಾಗಿ ಆಚರಣೆಗೆ ಬಂದಿರಬೇಕು. ಇಲ್ಲವೆ, ಮರಾಠಿಯರ ಪೂರ್ವಜರು ಆರ್ಯೇತರ ಜನಾಂಗವಾದ ‘ಪತ್ತಿ’ (ದ್ರವಿಡ) ಜನಾಂಗಕ್ಕೆ ಸೇರಿರಬೇಕೆಂದು ತಿರ್ಮಾನಿಸುತ್ತಾರೆ’.[೨೩] ರಕ್ತ ಸಂಬಂಧದಂತಹ ಸೂಕ್ಷ್ಮ ವಿಚಾರಗಳಲ್ಲಿ ದ್ರಾವಿಡರಾದ ಪತ್ತಿಕಾರರ ಸಂಪ್ರದಾಯ ಮರ್ಹಾಟಿಗರ ಮೇಲೆ ಆದುದನ್ನು ಗಮನಿಸಬಹುದಾಗಿದೆ.

ಕನ್ನಡ ನಾಡಿನ ಮೊದಲ ಅರಸರಾದ ಶಾತಕರ್ಣಿ ಅಥವಾ ಶಾತವಾಹನರು ಕನ್ನಡ ರಾಜವಂಶದವರು. ಇವರದು ಮಾತೃಪ್ರಧಾನ ಕುಟುಂಬವೆಂದು ಡಾ. ಇರಾವತಿ ಕರ್ವೆಯವರು ಬರೆಯುತ್ತಾರೆ. ಗೌತಮಿಪುತ್ರ ಸಾತಕರ್ಣಿ ಎಂಬ ರಾಜನ ಹೆಸರು ಇದಕ್ಕೆ ನಿದರ್ಶನವಾಗಿದೆ. ಇವರಿಗೆ ‘ನೂರವರ್ ಕಣ್ಣರ್’ ಎಂಬ ಬಿರುದಿದ್ದು, ಹಾಲ, ಪುಲಮಾಯಿ ರಾಜರ ಹೆಸರುಗಳು ಕನ್ನಡದ ಹೆಸರುಗಳಾಗಿವೆ. ಇದರ ಬಳುವಳಿಯಾಗಿ ಮಾತೃಪ್ರಧಾನ ಕುಟುಂಬ ಪದ್ಧತಿ ಇಂದು ಕರಾವಳಿಯ ಪ್ರದೇಶದಲ್ಲಿ ಕಂಡುಬರುತ್ತದೆ. ಈ ರಾಜರ ಆಡಳಿತ ಭಾಷೆ ಪ್ರಾಕೃತವಾಗಿತ್ತು. ಕನ್ನಡ ಭಾಷೆಯ ಸಾಮಂತರು ಇಂದು ಸಾವಂತ್ ಆಗಿಯೂ, ಮನ್ನೆಯರು ಮಾನೆ ಆಗಿಯೂ ಮಹಾರಾಷ್ಟ್ರೀಕರಣಗೊಂಡಿದ್ದಾರೆ. ಕನ್ನಡದ ರಾಜರ ಈ ಅಧೀನ ಮನೆತನಗಳು ಇಂದು ಮುಂಬಯಿ ಕರ್ನಾಟಕದ ಪ್ರಮುಖ ಮರಾಠಿ ಮನೆತನಗಳಾಗಿವೆ. ಹೀಗೆ ಕನ್ನಡದಲ್ಲಿ ಸಂಸ್ಕೃತ, ಪ್ರಾಕೃತದ ವರ್ಣಮಾಲೆ, ಶಬ್ದಗಳು ಮೂಲಸ್ವರೂಪದಲ್ಲಿ ಪ್ರತಿಷ್ಠಾಪನೆಗೊಂಡು ಭಾಷೆಯ ರೂಪಾಂತರ ಪಡೆದಿವೆ. ಮಹಾನವಮಿ ಉತ್ಸವ ಒಂದು ಕಾಲಕ್ಕೆ ಕರ್ನಾಟಕ ಮಹಾರಾಷ್ಟ್ರಗಳಲ್ಲಿ ರಾಜನಿಂದ ಬಡವನವರೆಗೆ ಎಲ್ಲರ ಹಬ್ಬವಾಗಿತ್ತೆಂದು ಹೇಳಬಹುದು. ಈ ಹಬ್ಬ ಎರಡೂ ರಾಜ್ಯಗಳ ಗಡಿ ಜನರ ಸಂಸ್ಕೃತಿಯನ್ನು ಬೆಸೆವ ಹಬ್ಬವಾಗಿದೆ. ಬೆಳ್ದಿಂಗಳಪ್ಪನ ಪೂಜೆ, ಹುಣ್ಣಿಮೆ ಉತ್ಸವಗಳು ಇಂದಿಗೂ ಎರಡೂ ಜನಾಂಗಗಳ ವಿಶಿಷ್ಟ ಆಚರಣೆಯ ಹಬ್ಬಗಳಾಗಿವೆ. ಮುಂಬಯಿ ಕರ್ನಾಟಕದ ದೊಡ್ಡ ಹಬ್ಬಗಳಾದ ಮಹಾನವಮಿ ಮತ್ತು ದೀವಳಿಗೆಗಳು ಹಟ್ಟಿಕಾರರ ಕಾಲದಿಂದಲೂ ಆಚರಣೆಯಲ್ಲಿ ಬಂದಿವೆ. ಹಟ್ಟಿಕಾರರ ದೊಡ್ಡ ಹಬ್ಬವಾಗಿದ್ದ ಹಟ್ಟಿ ಹಬ್ಬ ದೀಪಾವಳಿ ಹೆಸರಿನಿಂದ ಇಂದಿಗೂ ಆಚರಣೆಯಲ್ಲಿದೆ. ಹಟ್ಟಿಯ ಹಬ್ಬದಲ್ಲಿ ಗೋಪೂಜೆಯಷ್ಟೇ ಅಲ್ಲ ಕುರಿಗಳ ಪೂಜೆಯೂ ನಡೆಯುವುದು ಒಂದು ವಿಶೇಷವಾಗಿದೆ. ರೈತರು ಎತ್ತುಗಳನ್ನು ಶೃಂಗರಿಸಿ ಊರಲ್ಲಿ ಮೆರೆಸುವುದುಂಟು. ನಮ್ಮ ಅನೇಕ ಆಚರಣೆಗಳ ಹಿಂದೆ ಸಂಸ್ಕೃತಿಯು ಉಳಿಸಿಕೊಂಡಿರುವ ಅವಶೇಷಗಳಿವೆ. ಉದಾಹರಣೆಗೆ ಹುಡುಗಿ ಮೈನೆರೆತಾಗ ಹಸಿರು ಗುಡ್ಡ ಹಾಕುವುದು, ಮದುವೆಯ ದಿನ ಕರಿ ಉಣ್ಣೆಯ ದಾರವನ್ನು ಕಂಕಣವಾಗಿ ಕಟ್ಟಿಕೊಳ್ಳುವುದು ಈ ಜನಾಂಗಗಳು ಉಳಿಸಿಕೊಂಡಿರುವ ಆಚರಣೆಗಳು ಈ ಭಾಗ(ಮುಂಬಯಿ ಕರ್ನಾಟಕ)ದಲ್ಲಿ ಕಂಡುಬರುತ್ತವೆ.

ಜಾವಳಿ (ಉಣ್ಣೆ) ಪದವು ಪಶುಪಾಲನೆ ವೃತ್ತಿಯ ಉತ್ಪನ್ನವಾಗಿದೆ. ಜಾವಳಿ>ಜವಳಿಯಾಗಿ ಈ ಶಬ್ದಪ್ರತಿಮೆಯು ವ್ಯಾಪಾರದ ವಿಶಿಷ್ಟ ನೆಲೆಯನ್ನು ಸೂಚಿಸುತ್ತದೆ. ಉಣ್ಣೆಯನ್ನು ಬಳಸಿ ಬಟ್ಟೆ ಮಾಡಿದ್ದು, ನಂತರ ಅದನ್ನು ಹೊತ್ತು ಮಾರುವಾಗಿನ ಆಚರಣೆಯು ಉದ್ಯೋಗವೆನಿಸಿದ್ದು ನಮ್ಮ ಗಮನಕ್ಕೆ ಬರುತ್ತದೆ. ಇಂದು ವ್ಯಾಪಾರಿಗಳನ್ನು ಜವಳಿಗಳೆಂದು ಕರೆಯುತ್ತಾರೆ. ಇಂತಹ ಪದಪ್ರಯೋಗ ಕನ್ನಡ, ಮರಾಠಿಯ ಅಂತರಂಗದ ಪದಗಳಾಗಿವೆ.

ಹಟ್ಟಿಕಾರ (ಕಂನಡ) ಜನಾಂಗದ ಜೀವನದ ಮೊದಲನೆ ಹಂತ ಪಶುಪಾಲನೆಯಾಗಿದ್ದು ತಮ್ಮ ಕುರಿ, ಪಶುಗಳ ಹಿಂಡಿನೊಂದಿಗೆ ಗುಡ್ಡಗಾಡುಗಳಲ್ಲಿ ಅಲೆಯುವುದು ಅವಶ್ಯಕವಾಗಿತ್ತು. ಕ್ರೂರ ಮೃಗಗಳಿಂದ ತಮ್ಮ ಬದುಕುಗಳನ್ನು (ಮುಂಬಯಿ ಕರ್ನಾಟಕದ ಕುರುಬರು ತಮ್ಮ ಕುರಿ, ಪಶುಗಳಿಗೆ ಇಂದಿಗೂ ‘ಬದುಕು’ ಎಂದೇ ಕರೆಯುತ್ತಾರೆ, ಬದುಕು ಎಂದರೆ ತಾವು ಹಟ್ಟಿಕಾರರು ಮತ್ತು ಸಾಕುಪ್ರಾಣಿಗಳು) ರಕ್ಷಿಸಿಕೊಳ್ಳುವುದೂ ಒಂದು ಸಾಹಸ ಕೆಲಸವೆ ಆಗಿತ್ತು. ಇವೆಲ್ಲ ಶ್ರಮದಾಯಕ ವೃತ್ತಿಗೆ ಅನುಕೂಲವಾಗಲೆಂದು ಮಹಿಳೆಯರು ತಾವು ಉಟ್ಟ ಸೀರೆಯನ್ನು ಎತ್ತಿ ಸೊಂಟಕ್ಕೆ ಕಚ್ಚೆ ಹಾಕಿ ಸಿಕ್ಕಿಸಿಕೊಂಡು ಅಲೆಯುತ್ತಿದ್ದರು. ಇಂದಿಗೂ ಕರ್ನಾಟಕ ಮತ್ತು ಮಹಾರಾಷ್ಟ್ರದ ಗಡಿಭಾಗಗಳಲ್ಲಿ (ಮುಂಬಯಿ ಕರ್ನಾಟಕದಲ್ಲೂ ಕೂಡ) ಅಂಡೆ ಕುರುಬರೆಂಬ ಈ ಜನಾಂಗದ ಮಹಿಳೆಯರು ಕಚ್ಚೆ ಹಾಕಿ ಕುರಿ, ಕುದುರೆಗಳೊಂದಿಗೆ ಓಡಾಡುವುದನ್ನು ಕಾಣಬಹುದಾಗಿದೆ. ಇದೇ ರೀತಿ ವಸ್ತ್ರ ತೊಡುವ ರೀತಿರಿವಾಜು ಕನ್ನಡ, ಮರಾಠಿಯ ಗಡಿಭಾಗದ ಮಹಿಳೆಯರಲ್ಲಿ (ಉಚ್ಚ, ಶೂದ್ರ ಇಬ್ಬರಲ್ಲೂ) ಪಳೆಯುಳಿಕೆಯಾಗಿ ಉಳಿದುಕೊಂಡು ಬಂದಿದೆ ಎನ್ನಬಹುದು.

ಮುಂಬಯಿ ಕರ್ನಾಟಕದ ಕರಾವಳಿ ಜಿಲ್ಲೆಯಲ್ಲಿ ಹುಲಿ ಆರಾಧನೆ ಎಂಬ ವಿಶಿಷ್ಟ ಆಚರಣೆ ಇದೆ. ಕನ್ನಡ ಜಿಲ್ಲೆಯ ಕುಳಪೈಕರು ಎಂಬ ಮೂಲ ಜನಾಂಗವು ಇದನ್ನು ಆಚರಿಸುತ್ತಿದ್ದು, ಇದು ತುರುಕರು, ಗೋವಳರು (ಹಟ್ಟಿಕಾರರು, ಧನಗಾರರು) ಹುಲಿಯನ್ನು ಗೌರವಿಸುವ, ಪೂಜಿಸುವತ್ತ ನಮ್ಮ ಗಮನವನ್ನು ಸೆಳೆಯುತ್ತದೆ. 'ವ್ಯಾಘ್ರನೆ ವಗ್ಗಯ್ಯನಾಗಿ ಮಲ್ಲಾರಿ ದೇವನ ಅನುಯಾಯಿಯಾಗಿರುವ ಹಿನ್ನೆಲೆಯಲ್ಲಿ ಕುಳಪೈಕಳು > ಹಳಪೈಕಳುಗಳು ಮತ್ತು ಹಟ್ಟಿಕಾರರ ಸಂಬಂಧಗಳನ್ನು ಹತ್ತಿರ ತರುವುದನ್ನು ಅಲ್ಲಗಳೆಯಲಾಗುವುದಿಲ್ಲ.'[೪೪]

ಮಹಿಳೆಯನ್ನು ಗುರುತಿಸುವ, ಪರಿಚಯಿಸುವ ಸಾಂಸ್ಕೃತಿಕ ನಡೆಯಲ್ಲಿಯೂ ಮುಂಬಯಿ ಕರ್ನಾಟಕವು (ಕರ್ನಾಟಕ ಮತ್ತು ಮಹಾರಾಷ್ಟ್ರದ ಭಾಗಗಳು) ಕರ್ನಾಟಕದ ಉಳಿದ ಭಾಗಗಳಿಗೆ ಹೋಲಿಸಿದರೆ ವೈಶಿಷ್ಟ್ಯಪೂರ್ಣವಾಗಿದೆ. ಇಲ್ಲಿ 'ಹೆಂಡತಿಯನ್ನು ಪರಿಚಯಿಸುವಾಗ ನನ್ನ 'ಕುಟುಂಬ' ಎಂದು ಪರಿಚಯಿಸುವ ಸಂಪ್ರದಾಯ ಗಮನ ಸೆಳೆಯುತ್ತದೆ.'[೪೫] ಆದರೆ ದಕ್ಷಿಣ ಕರ್ನಾಟಕದಲ್ಲಿ ನನ್ನ ಹೆಂಗಸು (ಹೆಂಡತಿ), ನನ್ನ ಹುಡುಗ (ಮಗ) ಇತ್ಯಾದಿ ನಡೆನುಡಿ ಕಂಡು ಬರುವುದು ಸಾಂಸ್ಕೃತಿಕ ವಿಭಿನ್ನತೆಯಾಗಿದೆ. ಈ ಸಂದರ್ಭದಲ್ಲಿ ಕುಟುಂಬದ ಮಹಿಳೆಯ ಸ್ಥಾನಮಾನದ ಎರಡು ಆಯಾಮಗಳನ್ನು ಗುರುತಿಸಬಹುದು. ಸಂಸಾರದ ನಿರ್ವಹಣೆಯಾದ ಆಹಾರ ತಯಾರಿಕೆ, ಮಕ್ಕಳ ಜನನ, ಪಾಲನೆ–ಪೋಷಣೆ, ಬಂಧುಗಳ ಉಪಚಾರ, ಶಿಕ್ಷಣದ ಜವಾಬ್ದಾರಿ ಇತ್ಯಾದಿ ಹೊಣೆ ಹೊರುವ ಉಚ್ಚ ವರ್ಣ/ವರ್ಗದ ಮಹಿಳೆ ಪುರುಷನ ದೃಷ್ಟಿಯಲ್ಲಿ 'ಕುಟುಂಬ'ವಾಗುತ್ತಾಳೆ. ಅಷ್ಟೇ ಜವಾಬ್ದಾರಿ ನಿರ್ವಹಿಸುವ ಜೊತೆಗೆ ಪುರುಷನೊಟ್ಟಿಗೆ ದುಡಿದು ಸಂಪಾದಿಸುವ ಕೆಳವರ್ಗದ ಸ್ತ್ರೀಯ ಸ್ಥಾನಮಾನ ಕೇವಲ ಹೆಂಡತಿಯಾಗಿರುವುದೂ ಗಮನಿಸುವ ಅಂಶವಾಗಿದೆ.

**ಮುಂಬಯಿ ಕರ್ನಾಟಕ : ಕುಟುಂಬ ಮತ್ತು ವಿವಾಹ**

ಬೇಟೆ, ಪಶುಪಾಲನೆ, ಕೃಷಿಗಳನ್ನು ಉದ್ಯೋಗಗಳನ್ನಾಗಿ ಹೊಂದಿದ್ದ ಜನಾಂಗಗಳು ಸಮೂಹವಾಸಕ್ಕೆ ತೊಡಗಿದ್ದ ಕಾಲದಿಂದ ಅವಿಭಕ್ತ ಕುಟುಂಬಗಳು ನಾಗರಿಕತೆಯಲ್ಲಿ ಅಸ್ತಿತ್ವ ಕಂಡುಕೊಂಡವು. 'ಕುಟುಂಬವು ಸಾರ್ವತ್ರಿಕವಾದ, ಖಾಯಂ ಆದ, ವ್ಯಾಪಕವಾದ ವ್ಯವಸ್ಥೆ. ಸಾಮಾಜಿಕವಾಗಿ ಅಂಗೀಕೃತವಾದ ಲೈಂಗಿಕ ಸಂಪರ್ಕ, ಸಂತಾನ ಕ್ರಿಯೆ, ಸಮಾನ ವಸತಿ, ಕೌಟುಂಬಿಕ ಕಾರ್ಯಗಳು, ಆರ್ಥಿಕ ಸಹಕಾರ ಈ ಮುಂತಾದ ಲಕ್ಷಣಗಳನ್ನು ಒಳಗೊಂಡಿರುತ್ತದೆ.'[೪೬] ವಸಾಹತುಶಾಹಿ ಕಾಲದಲ್ಲಿ ಮುಂಬಯಿ ಕರ್ನಾಟಕ, ಕರಾವಳಿ ತೀರದ ಗ್ರಾಮ, ನಗರಗಳಲ್ಲಿ ಅವಿಭಕ್ತ ಕುಟುಂಬಗಳಿದ್ದವು. ನಂತರ ಬಂದ ಔದ್ಯೋಗಿಕ ಕ್ರಾಂತಿ, ಕೈಗಾರಿಕೀಕರಣ, ನಗರೀಕರಣದ ಪ್ರಭಾವದಿಂದಾಗಿ ಸುಶಿಕ್ಷಿತ ಯುವಕ, ಯುವತಿಯರು ಅವಿಭಕ್ತ ಕುಟುಂಬ ವ್ಯವಸ್ಥೆಯನ್ನು ಇಷ್ಟಪಡದೇ, ನಗರಗಳಿಗೆ ವಲಸೆ ಬಂದು ಸಣ್ಣ (ಅಣು ಕುಟುಂಬ) ಕುಟುಂಬ ವ್ಯವಸ್ಥೆಯನ್ನು ಇಷ್ಟಪಡುವುದು ಕಂಡುಬರುತ್ತದೆ. ಅವಿಭಕ್ತ ಕುಟುಂಬವಿದ್ದಾಗ ಒಂದೇ ಬಗೆಯ ಊಟ, ಸಂಪ್ರದಾಯ, ಪೂಜಾ ವಿಧಾನ, ಒಂದೇ ಕುಲದೈವ ಹೊಂದಿದ್ದು ಅಣು ಕುಟುಂಬಗಳು ಇವುಗಳನ್ನು ಬಿಟ್ಟು ಕೊಟ್ಟು ಸಾಮಾಜಿಕ ಹೊಣೆಗಾರಿಕೆಗಳು, ಬದ್ಧತೆಗಳು ಹಾಗೂ ಪರಸ್ಪರ ಹಕ್ಕುಗಳನ್ನು ಪಡೆಯದೇ ಪಲಾಯನ ಮಾಡುವುದು ಮೇಲ್ನೋಟಕ್ಕೆ ಕಂಡುಬರುವ ಅಂಶವಾಗಿದೆ. ಇದರ ಹಿಂದೆ ಹಲವು ಉತ್ತಮ ಅಂಶಗಳು ಅಡಗಿವೆ. ಆರ್ಥಿಕ ಸ್ವಾವಲಂಬನೆ, ಮಹಿಳೆಯರ ಸ್ವಾತಂತ್ರ್ಯ, ಕಲಹವಿಲ್ಲದ ಜೀವನ, ಚಿಕ್ಕ ಸಂಸಾರ ಹೊಂದುವುದು ಒಂದಾದರೆ, ಸೋಮಾರಿತನ, ಸಂಪ್ರದಾಯಶರಣತೆಯಿಂದ ಬಿಡುಗಡೆಗಳೂ ಸೇರಿ ಅಭಿವೃದ್ಧಿಗೆ ಪೂರಕವಾಗಿವೆ. ನವವಸಾಹತುಶಾಹಿ ಕಾಲದಲ್ಲಿ ಕುಟುಂಬ ವ್ಯವಸ್ಥೆಯಲ್ಲಾದ ಬದಲಾವಣೆಗೆ ಸ್ತ್ರೀ, ಪುರುಷರಿಬ್ಬರಿಗೂ ಶಿಕ್ಷಣ ಸೌಲಭ್ಯ, ವೃತ್ತಿ ಅವಕಾಶಗಳು, ಕೈಗಾರಿಕೀಕರಣ, ಜಾರಿಗೊಂಡ ಶಾಸನಗಳು,[೪೭] ಸ್ತ್ರೀ ಜಾಗೃತಿ, ಇಂಗ್ಲಿಶ್ ಶಿಕ್ಷಣ ನೀಡಿದ ವೈಚಾರಿಕತೆ, ವ್ಯಕ್ತಿ ಸ್ವಾತಂತ್ರ್ಯ ಸಮಾನತೆ, ಇತ್ಯಾದಿ ವೈಜ್ಞಾನಿಕ ಅಂಶಗಳು ಕಾರಣವೆನ್ನಬಹುದು.

ಮುಂಬಯಿ ಕರ್ನಾಟಕದ ವಿವಾಹ ವಿಧಿಗಳನ್ನು ಸಹ ಆಧುನಿಕತೆ ಸ್ಪರ್ಶಿಸಿದೆ. 'ಹಿಂದಿನ ದಿನಗಳಲ್ಲಿ ಒಂದು ತಿಂಗಳು, ವಾರಗಳ ಕಾಲ ಹಲವು ಸಂಪ್ರದಾಯ ಅಚರಣೆಗಳೊಂದಿಗೆ ಜರುಗುತ್ತಿದ್ದ ವಿವಾಹಗಳು ನಂತರ ಮೂರು ದಿನಗಳ ಆಚರಣೆಗೆ ಇಳಿದು, ಈಗ ಒಂದು ದಿನದಲ್ಲಿ ಎಲ್ಲ ವಿಧಿವಿಧಾನಗಳು ಮುಗಿದು ಹೋಗುತ್ತವೆ.'[೪೮] 'ಬಹುಪತ್ನಿತ್ವವು ಹಳ್ಳಿಗಳಲ್ಲಿ, ಹಲವು ಬುಡಕಟ್ಟು ಜನಾಂಗಗಳಲ್ಲಿ ಈಗಲೂ

ಪ್ರಚಲಿತದಲ್ಲಿದೆ[೨೫] ಮತ್ತು ಇಸ್ಲಾಂ ಧರ್ಮಾನುಯಾಯಿಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಯಾವುದೇ ಜಾತಿಯ ಸುಶಿಕ್ಷಿತರಲ್ಲಿ ಏಕಪತ್ನಿತ್ವ, ಒಂದು ಅಥವಾ ಎರಡು ಮಕ್ಕಳನ್ನು ಹೊಂದುವುದು ಸಾಮಾನ್ಯವಾಗಿದ್ದು ಇದಕ್ಕೆ ಸರಕಾರದ ಬಿಗಿ ಕಾನೂನುಗಳೂ ಕಾರಣವಾಗಿವೆ. ಇಷ್ಟೇ ಕಟ್ಟುನಿಟ್ಟಿನ ಕಾನೂನನ್ನು ಎಲ್ಲ ಜಾತಿಗಳ ವಿವಾಹಗಳಿಗೂ, ವಿವಾಹ ವಿಚ್ಛೇದನಕ್ಕೂ ಸಮಾನವಾಗಿ ಅಳವಡಿಸಿಕೊಳ್ಳುವಂತೆ ಸರಕಾರವು ಶಾಸನಗಳನ್ನು ರಚಿಸಬೇಕಾಗಿದೆ. ಮುಂಬಯಿ ಕರ್ನಾಟಕದ ಕರಾವಳಿ, ಘಟ್ಟ ಪ್ರದೇಶದ ಅರಣ್ಯಗಳಲ್ಲಿ ಪರಿಶಿಷ್ಟ ಜಾತಿ, ಬುಡಕಟ್ಟು ಜನಾಂಗಗಳ ಸಂಖ್ಯೆ ಗಣನೀಯವಾಗಿದ್ದು, ಅವುಗಳಲ್ಲಿ ಆಗೇರರು, ಮುಕ್ರಿಗಳು, ಗೌಳಿಗರು, ಸಿದ್ದಿಗಳು, ಕಾಡುಕುರುಬರು, ಹಸಲರು ಮುಂತಾದ ಜಾತಿಗಳು ಪ್ರಮುಖವಾಗಿವೆ. ಇವರ ಕಲ್ಯಾಣಕ್ಕಾಗಿ ಸರಕಾರವು ಸಂವಿಧಾನದಲ್ಲಿ ಅನೇಕ ಶಾಸನಗಳನ್ನು ರೂಪಿಸಿದೆ. ಉಚಿತ ಶಿಕ್ಷಣ, ಶಿಕ್ಷಣ ಪರಿಕರಗಳು, ಬಟ್ಟೆ, ಆರ್ಥಿಕ ಕಾರ್ಯಕ್ರಮಗಳು, ಆಹಾರ ಧಾನ್ಯ, ಕೃಷಿ ಉಪಕರಣ, ಬೀಜ ಇತ್ಯಾದಿ, ವೈದ್ಯಕೀಯ ಸೌಲಭ್ಯಗಳು, ಪುನರ್ವಸತಿ ಕಾರ್ಯಕ್ರಮ, ವೃತ್ತಿ ತರಬೇತಿ ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಈ ಎಲ್ಲ ಯೋಜನೆಗಳನ್ನು ಸರಕಾರ ರೂಪಿಸಿದ್ದರೂ, ನಾನಾ ಕಾರಣಗಳಿಂದ ಪ್ರಗತಿ ಮಾತ್ರ ನಿರೀಕ್ಷಿತ ಮಟ್ಟದಲ್ಲಿ ಸಾಗುತ್ತಿಲ್ಲ. ಈ ಯೋಜನೆಗಳ ಫಲ ಸಂತ್ರಸ್ತರಿಗೆ ನೇರವಾಗಿ ತಲುಪಬೇಕಾದ ವ್ಯವಸ್ಥೆ ಆಗಬೇಕಿದೆ.

### ೫. ಮುಂಬಯಿ ಕರ್ನಾಟಕ : ದೈವ, ಧಾರ್ಮಿಕತೆ ಸಂಬಂಧದ ನೆಲೆಗಳು

ಮಾನವರ ಪ್ರಗತಿ ಘಟ್ಟ, ಜೀವನ ಕ್ರಮದಲ್ಲಿ (ಆದಿ ಮಾನವರಿಂದ ನಾಗರಿಕ ಮಾನವರವರೆಗೆ) ದೇವ, ದೈವತ್ವಗಳಿಗೆ, ಅವುಗಳ ಹುಟ್ಟು ಬೆಳವಣಿಗೆಗಳಿಗೆ ಬಹಳಷ್ಟು ಮಹತ್ವವಿದೆ. ದೇವರನ್ನು ಬಿಟ್ಟು ಮನುಷ್ಯರಿಲ್ಲ, ಮನುಷ್ಯರನ್ನು ಬಿಟ್ಟು ದೈವಗಳಿಲ್ಲ ಎಂಬ ಮಾತು ಆಸ್ತಿಕರ ನಂಬಿಕೆಯಲ್ಲಿಯೂ ಮತ್ತು ನಾಸ್ತಿಕರ ದೈವವಿರೋಧಿ ನೆಲೆಯಲ್ಲಿಯೂ ಒಪ್ಪಿಕೊಳ್ಳುವಂತಹುದಾಗಿದೆ. ಶಿವ-ರುದ್ರ, ಚಂದ್ರರಂತಹ ಪ್ರಾಚೀನ ದೇವತೆಗಳು ವೈದಿಕ ದೇವತೆಗಳಾಗಿ ಮಾರ್ಪಟ್ಟಿದ್ದಾರೆ. ಮಲ್ಲಯ್ಯ, ಪರ್ವತೇಶ್ವರ, ಗೊಂಡರದೇವ, ಪಟ್ಟಿ ಮಾರಮ್ಮ, ಮಾಳವ್ವ ಈ ಬಗೆಯ ಗ್ರಾಮ ದೇವತೆಗಳು ಇಂದಿಗೂ ಪೂಜಿಸಲ್ಪಡುತ್ತಿದ್ದಾರೆ. ಇವೆರಡರ ಕುರಿತು ಸಾಂಸ್ಕೃತಿಕ ಅಧ್ಯಯನವಾಗಬೇಕಾದ ಅವಶ್ಯಕತೆಯನ್ನು ವಿದ್ವಾಂಸರು ಪ್ರತಿಪಾದಿಸುತ್ತಾರೆ. ಕರ್ನಾಟಕ ಮತ್ತು ಮಹಾರಾಷ್ಟ್ರಗಳ ಸಹೋದರ ಸಂಬಂಧಗಳು ದೇವತೆಗಳ ಇತಿಹಾಸದಲ್ಲಿ ಮತ್ತು ಧರ್ಮಪಂಥಗಳ ಬೆಳವಣಿಗೆಯಲ್ಲಿಯೂ ಕಂಡುಬರುತ್ತವೆ. ಮಲ್ಹಾರಿಯಂತಹ ದೇವತಾ ಪ್ರತಿಮೆಯಲ್ಲಿ ಹಲವಾರು ದೇವತೆಗಳು ಸಂಯೋಜನೆಗೊಂಡು ಮುಂದೆ ಮಲ್ಲಯ್ಯ (ಕನ್ನಡಿಗರಿಗೆ), ಖಂಡೋಬ (ಮರ್ಹಾಟಿಗರಿಗೆ) ಆಗಿ ವಿಭಕ್ತವಾದದ್ದರ ಇತಿಹಾಸ ಕನ್ನಡ, ಮರಾಠಿ ಪ್ರದೇಶಗಳ ಸಾಂಸ್ಕೃತಿಕ ಇತಿಹಾಸದ ಪ್ರತಿಮೆಯಾಗಿ ಉದ್ಬೋಧಕವಾಗಿದೆ.

ಕನ್ನಡ, ಮರಾಠಿ, ಕೊಂಕಣದ ಧಾರ್ಮಿಕ ಜೀವನವನ್ನು ಬೆಸೆದ ಮತ್ತು ಈಗಲೂ ಸಾಮೂಹಿಕ ಪೂಜೆಗೆ ಒಳಪಡುವ ದೇವರುಗಳೆಂದರೆ ಶಿವ-ರುದ್ರ, ಖಂಡೋಬ-ಮೈಲಾರಯ್ಯ, ವಿಠ್ಠಲ-ಪಾಂಡುರಂಗ, ರೇಣುಕೆ-ಮಾಳ್ಸಾ-ಮಹಾಲಸರಾಗಿದ್ದಾರೆ. ಸ್ವಯಂಭೂ ಶಿವನಿಗೂ ಮತ್ತು ಹಾಲಿಗೂ ಇರುವ ಸಂಬಂಧ ಮಹತ್ವದ್ದಾಗಿದೆ. ಕಲ್-ಕಳ್ ಇದು ಕಂದಮಿಳ ವರ್ಗದಲ್ಲಿಯ ಪ್ರಾಚೀನ ಶಬ್ದವಾಗಿದೆ. ಇದು ರಸಾರ್ಥಕ ಶಬ್ದವಾಗಿದ್ದು 'ಪಾಲು' ಶಬ್ದದಂತೆ ಕ್ಷೀರವಾಚಕವಾಗಿದೆ. ಮಹಾರಾಷ್ಟ್ರ-ಕರ್ನಾಟಕ ದೇವರುಗಳಿಗೂ ಹಾಲಿಗೂ ಅವಿನಾಭಾವ ಸಂಬಂಧವಿದ್ದು, ಅದು ಪ್ರಾಚೀನ ಕಾಲದಲ್ಲಿ ಪಶುಪಾಲನೆ ವೃತ್ತಿಯನ್ನು ಹೊಂದಿದ 'ಹಾಲುಮತ'(ಹಟ್ಟಿಕಾರ ಮತ್ತು ಧನಗಾರ)ರೆಂಬ ಬಹುಸಂಖ್ಯಾ ಜನಾಂಗದ ಮೂಲನೆಲೆ, ವೃತ್ತಿಯನ್ನು ಸಂಕೇತಿಸುತ್ತದೆ.

ಮಲ್ಲಯ್ಯನಿಗೆ ಖಂಡೋಬ, ಮಲ್ಹಾರಿ, ಮೈರಾಳ, ಮಣಿ-ಮಾರ್ತಾಂಡ ಮೊದಲಾದ ವಿವಿಧ ಹೆಸರುಗಳಿವೆ. ಇದು ಮರಹಟ್ಟಿಗರ, ಹಟ್ಟಿಗಾರ ಕನ್ನಡಿಗರ ಪ್ರಾಚೀನ ಪೂರ್ವದ ಮೂಲ ದೇವರು. ಇತ್ತೀಚೆಗೆ ಮೈಲಾರನಿಗೆ ಮೈಲಾರಲಿಂಗೇಶ್ವರ ಎಂಬ ನಾಮಕರಣವಾಗಿ ಅವನು ಶಿವನ ಅವತಾರವೆಂಬ ಸಂಸ್ಕೃತೀಕರಣ ನಡೆದಿದೆ. ಮೈಲಾರನಿಗೂ, ಶಿವನಿಗೂ ಮೂಲಭೂತವಾಗಿ ಅನೇಕ ವ್ಯತ್ಯಾಸಗಳಿವೆ. ಖಂಡೋಬನ ಮೂರ್ತಿಯನ್ನು ನೋಡಿದರೆ, ಅದರಲ್ಲಿ ಶಿವನ ಸ್ವರೂಪಕ್ಕೆ ಸಂಬಂಧಿಸಿದ ಮಹತ್ವದ ಎರಡು ವಸ್ತುಗಳು ಇಲ್ಲ. ಶಿವನ ವಾಹನ ನಂದಿಯಾದರೆ, ಮೈಲಾರನ ವಾಹನ ಕುದುರೆ. ಶಿವ

ತ್ರಿಶೂಲಧಾರಿಯಾದರೆ ಖಂಡೋಬ ಖಡ್ಗಧಾರಿ. ಖಂಡೋಬನು ವೀರರ ದೇವತೆಯೆಂದು ಪ್ರತೀತಿಯಿದ್ದು ಶಿವನು ಭೋಳೆ ಶಂಕರ, ಕೇವಲ ವರಗಳನ್ನು ಕೊಡುತ್ತಾನೆ ಎಂಬ ನಂಬಿಕೆಗಳು ಇವೆ. ಇಲ್ಲಿ ಇನ್ನೊಂದು ಗಮನೀಯವಾದ ವ್ಯತ್ಯಾಸವೆಂದರೆ ಶಿವನು ಅಸುರ ಸಂಹಾರಕನಲ್ಲ. ಖಂಡೋಬ ಮಣಿ-ಮಲ್ಲಾಸುರರೆಂಬ ರಾಕ್ಷಸರನ್ನು ಸಂಹರಿಸುತ್ತಾನೆ. 'ಮಲ್ಲಯ್ಯ' ಕರ್ನಾಟಕದವರು ಕರೆಯುವ ಹೆಸರಾದರೆ, 'ಮಲ್ಹಾರಿ' ಮಹಾರಾಷ್ಟ್ರೀಯರು ಕರೆವ ಹೆಸರಾಗಿದೆ. 'ಮಲ್ಲಯ್ಯ', ಮಲ್ಲಾರಿ' ಹೆಸರುಗಳು ಎರಡೂ ನಾಡುಗಳ ವೈಶಿಷ್ಟ್ಯವನ್ನು ಹೇಳುತ್ತವೆ. ಮಲೆ+ಅಯ್ಯ ದಲ್ಲಿ ಮಲೆ=ಬೆಟ್ಟ, ಪರ್ವತಸೂಚಿಯಾಗಿದ್ದು ಪಶುಪಾಲಕರಾಗಿದ್ದ ಎರಡೂ ರಾಜ್ಯಗಳ ಮೂಲ ನಿವಾಸಿಗಳು (ಹಟ್ಟಿಕಾರರು) ಕೃತಜ್ಞತಾಪೂರ್ವಕವಾಗಿ ಇಟ್ಟ ಹೆಸರು ಇದಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಈ ಮಲ್ಹಾರ-ಖಂಡೋಬ ಒಬ್ಬ ಹಟ್ಟಿಕಾರ-ಧನಗಾರ ಮೂಲ ವೀರತ್ವದ ದೇವತೆಯಾಗಿದ್ದು ಇವನನ್ನು ಶಿವನೊಂದಿಗೆ ಸಮೀಕರಿಸುವ ಯತ್ನ ನಡೆದಿರುವುದಾಗಿದೆ. ಇದು ಬೇರೆಯವರ ಪ್ರಯತ್ನವೂ ಆಗಿದೆ.

'ಮಲ್ಹಾರಿ'ಯ ಹೆಂಡತಿಯ ಹೆಸರು 'ಮ್ಹಾಳ್ಸಾ' ಆಗಿದ್ದು, ಕರ್ನಾಟಕದಲ್ಲಿ ಮಾಳವ್ವ, ಗಂಗಮಾಳವ್ವ ಇತ್ಯಾದಿ ಹೆಸರಿನಿಂದ ಕರೆಯುತ್ತಾರೆ. ಪರ್ವತ, ಇಲ್ಲವೆ ಗುಡ್ಡ ಎಂಬ ಅರ್ಥಕೊಡುವ ಮಲಯ-ಮಾಡ-ಮಾಳ ಈ ಶಬ್ದಗಳು ಸಂಸ್ಕೃತದ ಪಾರ್ವತಿಗೆ ಸಮಾನವಾಗಿವೆ. ಕರ್ನಾಟಕದಲ್ಲಿ ಮಾಳವ್ವ ಮಹಾರಾಷ್ಟ್ರದಲ್ಲಿ ಮ್ಹಾಳ್ಸಾ ಮತ್ತು ಕೊಂಕಣ (ಗೋವಾ) ಪ್ರದೇಶದಲ್ಲಿ ಮಹಾಲಸಾ ಎಂಬ ಹೆಸರುಗಳಿಂದ ಪೂಜಿಸಲ್ಪಡುವ ದೇವತೆಯಾಗಿ, ಇವಳು ಮುಂಬಯಿ ಕರ್ನಾಟಕ(ಕನ್ನಡ, ಮರಾಠಿ, ಕೊಂಕಣಿ)ದ ಸಮುದಾಯ ದೇವತೆಯಾಗಿದ್ದಾಳೆ. ಮುಂಬಯಿ ಕರ್ನಾಟಕದಲ್ಲಿ ಕಂಡುಬರುವ ಇನ್ನೊಂದು ಧಾರ್ಮಿಕ ಸಾಮ್ಯತೆಯೆಂದರೆ 'ಮರುತ್'ನ ಆರಾಧನೆಯಾಗಿದೆ. ಕನ್ನಡಿಗರು ಹಣುಮಂತನೆಂದು, ಮರಾಠಿಗರು 'ಮಾರುತಿ' ಎಂದು ಕರೆಯುವ ಈ ದೇವರ ಆರಾಧನೆ ಕರ್ನಾಟಕ, ಮಹಾರಾಷ್ಟ್ರಗಳನ್ನು ಹೊರತುಪಡಿಸಿದರೆ ಉಳಿದೆಡೆ ಅಷ್ಟಾಗಿ ಕಂಡುಬರುವುದಿಲ್ಲ. ಮರಾಠಿಗರು ಹಣುಮಂತನೆಂಬ ಹೆಸರನ್ನು ಇಡುವುದು ಅಪರೂಪವಾಗಿದೆ, ಆದರೆ ಕನ್ನಡಿಗರು ಇವನನ್ನು ಎರಡು ಹೆಸರಿನಿಂದಲೂ ಆರಾಧಿಸುತ್ತಾರೆ.

ಕರ್ನಾಟಕ, ಮಹಾರಾಷ್ಟ್ರಗಳ ಗಡಿ ಪ್ರದೇಶದ ಬಹುಸಂಖ್ಯಾತರ ಸರ್ವಮಾನ್ಯ ದೇವತೆಯೆಂದರೆ ರೇಣುಕೆ/ಎಲ್ಲಮ್ಮ ಆಗಿದ್ದಾಳೆ. ಈ ಎರಡು ಪ್ರಾಂತಗಳಲ್ಲಿಯೇ ಈ ದೇವಿಯ ಪೂಜೆಯ ಪ್ರಸಾರ ಯಾಕೆ ಎಂಬುದೊಂದು ಪ್ರಶ್ನೆಯಿದೆ. ಏಕವೀರಾ ಎಂಬ ಹೆಸರಿನ ಈ ದೇವತೆಯ ಪೂಜೆಗಳು ಹುಣ್ಣಿಮೆಯ ದಿನ ನಡೆಯುವುದರಿಂದ, ರೇಣುಕೆಗಿಂತ ಭೂಮಾತೆಗೆ ಸಂಬಂಧಿಸಿದ್ದೆಂದು ಊಹಿಸಬಹುದು. ಚೈತ್ರ ಮಾಸದ ಹುಣ್ಣಿಮೆಯಲ್ಲಿ ನಡೆಯುವ ಉತ್ಸವದಲ್ಲಿ ಈ ದೇವಿ ಮುತ್ತೈದೆಯಾಗುತ್ತಾಳೆ ಮತ್ತು ಮಾರ್ಗಶೀರ್ಷದ ಹುಣ್ಣಿಮೆಯ ದಿನ ಅವಳು ವಿಧವೆಯಾಗುತ್ತಾಳೆ. ಚೈತ್ರಮಾಸ ವಸಂತ ಚಿಗುರಿನ ಬೆಳೆ ಕಾಲವಾದರೆ, ಮಾರ್ಗಶಿರ(ರಂಡೆಹುಣ್ಣಿವೆ)ದಲ್ಲಿ ಬೆಳೆ ಕೊಯ್ಲಾಗಿ ಭೂಮಿಯ ಸೌಭಾಗ್ಯ ನಷ್ಟವಾಗುವುದು ಇದರ ಹಿಂದಿರುವ ಸಾಂಸ್ಕೃತಿಕ ಸಂಕೇತವಾಗಿದೆ. ಒಟ್ಟಾರೆ ಗಡಿಭಾಗದ ಭಾವ, ಭಕ್ತಿ ಸಂಬಂಧ, ಸಂಕೇತವಾಗಿ ಎಲ್ಲಮ್ಮನ ಆರಾಧನೆ ನಿಂತಿದೆ. ಇದೇ ರೀತಿ ಮರ್ಗಜಾ (ಮರಗವ್ವ), ಮರಿಆಯಿ (ಮಾರೆಮ್ಮ) ಇತ್ಯಾದಿ ದೇವತೆಯರೂ ಸಾಂಸ್ಕೃತಿಕ ಸೇತುವೆಯಾಗಿದ್ದಾರೆ.

ಕರ್ನಾಟಕ, ಮಹಾರಾಷ್ಟ್ರಗಳನ್ನು ಹೀಗೆ ಬೆಸೆದ ಇನ್ನೊಂದು ದೈವ ಪಂಡರಾಪುರದ ವಿಠಲನಾಗಿದ್ದಾನೆ. ಮಹಾರಾಷ್ಟ್ರದ ಸಂತ ಚರಿತ್ರೆಯ ಪ್ರಕಾರ ಸಂತ ಭಾನುದಾಸನು ವಿಠ್ಠಲನ ಮೂರ್ತಿಯನ್ನು ವಿಜಯನಗರದಿಂದ ಪಂಡರಾಪುರಕ್ಕೆ ಒಯ್ದನೆಂದು ತಿಳಿದುಬರುತ್ತದೆ. 'ಸಂತರು, 'ಕಾನಡಾ ಹೋ ವಿಠ್ಠಲ' ಎಂದು ವರ್ಣಿಸಿದ್ದಾರೆ.'[೨೦] ಈ ಅಭಂಗದಲ್ಲಿ ವಿಠ್ಠಲ ಕನ್ನಡ ದೇವತೆ ಮತ್ತು ಪಂಡರಪುರ ಕನ್ನಡ ಕ್ಷೇತ್ರವೆಂದು ಸ್ಪಷ್ಟವಾಗಿ ಹೇಳಲಾಗಿದೆ. ಹೀಗೆ ಕನ್ನಡಿಗರಿಂದ ಮಹಾರಾಷ್ಟ್ರಕ್ಕೆ ಶಿವಭಕ್ತಿ, ಮಲ್ಲಾರಿ ಮಾರ್ತಾಂಡ, ಎಲ್ಲಾಯಿ, ತುಕಾಯಿ ಮೊದಲಾದ ಸಂಪ್ರದಾಯಗಳು ಒಂದು ಕಾಲಕ್ಕೆ ಧಾರೆ ಎರೆಯಲ್ಪಟ್ಟಿವೆ, ಅವು ಇಂದಿಗೂ ಗಡಿ ಪ್ರದೇಶದಲ್ಲಿ ಜೀವಂತವಾಗಿವೆ. ಹೀಗೆ ಮೊಗೆದಷ್ಟೂ ಸಮೃದ್ಧವಾಗಿ ದೊರೆಯುವ ಮೂರೂ ಭಾಷಾ ಸಮುದಾಯಗಳ/ಜನಾಂಗಗಳ ಸಾಂಸ್ಕೃತಿಕ ಬೆಸುಗೆಯು ದೈವ, ಧಾರ್ಮಿಕತೆ, ಸಂಪ್ರದಾಯ, ಆಚರಣೆಗಳ ಮೂಲಕ ಗಡಿನಾಡಿನಲ್ಲಿ ಬೇರುಬಿಟ್ಟಿದೆ. ಶಿವ (ರುದ್ರ), ಹಾಟೇಶ್ವರ (ಹಟ್ಟಕಾರ), ಕಲ್ಲೇಶ್ವರ (ಕಾಲೇಶ್ವರ), ಮಲ್ಲಯ್ಯ (ಮಲ್ಹಾರ), ಮಾಲವ್ವ (ಮ್ಹಾಳ್ಸಾ, ಮಹಾಲಸ), ಹಣುಮಂತ (ಮಾರುತಿ) ಮುಂತಾದವುಗಳು ಮುಂಬಯಿ ಕರ್ನಾಟಕದ ಸಾಂಸ್ಕೃತಿಕ ದೇವತೆಗಳಾಗಿದ್ದಾರೆ.

## ಧರ್ಮ ಮತ್ತು ಸಾಮರಸ್ಯ

ಮುಂಬಯಿ ಕರ್ನಾಟಕ ಪ್ರದೇಶದಲ್ಲಿ ಪ್ರಮುಖವಾಗಿ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಮಠಗಳನ್ನು, ಶಿಷ್ಟ ಮತ್ತು ಶಿಷ್ಟೇತರ ದೇವರನ್ನು ಕಾಣುತ್ತೇವೆ. ಬಯಲು ಸೀಮೆಯಲ್ಲಿ ವೀರಶೈವರ ಮಠಗಳ ಸಂಖ್ಯೆ ಗಣನೀಯವಾಗಿದ್ದು, ಇವು ಅತಿ ಹೆಚ್ಚು ಭಕ್ತರನ್ನು ಮತ್ತು ಆರ್ಥಿಕ ಸಂಪನ್ಮೂಲಗಳನ್ನು ಹೊಂದಿವೆ. ವೀರಶೈವ ಮತ ಪ್ರಚಾರ ಇವುಗಳ ಮೂಲ ಉದ್ದೇಶವಾಗಿದ್ದರೂ, ಶಿಕ್ಷಣ ಸಂಸ್ಥೆಗಳನ್ನು ಕಟ್ಟಿ ಉನ್ನತ ಶಿಕ್ಷಣ ಪ್ರಸಾರ, ವಿದ್ಯಾರ್ಥಿ ಪ್ರಸಾದ ನಿಲಯಗಳನ್ನು (ಶಿಕ್ಷಣ ಹಾಗೂ ಅನ್ನ ದಾಸೋಹಗಳನ್ನು) ನಡೆಸಲಾಗುವುದೆಂದು ಹೇಳಿಕೊಳ್ಳುತ್ತವೆ. ಆದರೆ ಅಲ್ಲಿ ಸ್ವಜಾತಿಯ ವಿದ್ಯಾರ್ಥಿಗಳಿಗೆ ಆದ್ಯತೆಯಿರುವುದು ವಾಸ್ತವ ಸಂಗತಿ. ದೇವಸ್ಥಾನ, ಮಠಗಳ ನಿರ್ಮಾಣ, ಪುರೋಹಿತರ ಪೋಷಣೆಯನ್ನು ತಮ್ಮ ಪ್ರಗತಿಪರ ಸಿದ್ಧಾಂತಗಳಿಂದ ಕಟುವಾಗಿ ಟೀಕಿಸಿ, ಆ ವ್ಯವಸ್ಥೆಯನ್ನೇ ತೊರೆದು ಬಂದಿದ್ದ ಬಸವಣ್ಣನವರು ವೀರಶೈವ ಧರ್ಮದ ಆದ್ಯಪುರುಷರೆಂದು ಹೇಳಿಕೊಳ್ಳುವ ಮಠಗಳು, ತಮ್ಮಲ್ಲಿ ನಡೆಯುತ್ತಿರುವ ಆಚರಣೆಗಳ ಕುರಿತು ಆತ್ಮವಿಮರ್ಶೆ ಮಾಡಿಕೊಳ್ಳಬೇಕಾಗಿದೆ. ವೈದಿಕರ ಮಠ, ದೇವಾಲಯಗಳಿಗೆ ಹೋಲಿಸಿದರೆ ವೀರಶೈವ ಮಠಗಳಲ್ಲಿ ಬೇರೆ ಜಾತಿ, ಧರ್ಮಗಳಿಗೆ ಸೇರಿದ ವಿದ್ಯಾರ್ಥಿಗಳಿಗೆ ವಿದ್ಯಾದಾನ, ಅನ್ನದಾನ ಮಾಡುವುದು ಹಾಗೂ ಅಸ್ಪೃಶ್ಯತೆಯನ್ನು ತೊಲಗಿಸಿರುವುದು ಪ್ರಗತಿಪರ ವಿಚಾರಗಳೂ ಆಗಿವೆ. ಸರಕಾರ ಕೊಡುವ ಸಹಾಯ ಧನವನ್ನು ಪಡೆಯಲು, ಆಡಳಿತ ಮಾಡಿದ ಕಾನೂನನ್ನು ಪಾಲಿಸಲು ದಲಿತ, ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಮಠಗಳಲ್ಲಿ ವಿದ್ಯಾಭ್ಯಾಸಕ್ಕೆ ಅವಕಾಶ ಮಾಡಿಕೊಡಲಾಗುತ್ತದೆ ಎಂಬ ಆಪಾದನೆಯೂ ಇದೆ. ಇತ್ತೀಚಿನ ದಿನಗಳಲ್ಲಿ ಮಠ, ಚರ್ಚು, ಮಸೀದಿ ಇತ್ಯಾದಿಗಳೆಲ್ಲ ಆಳುವ ವರ್ಗಕ್ಕೆ ಆಶೀರ್ವಾದ ಮಾಡುವ, ವೋಟು ಬ್ಯಾಂಕಿನ ಕೇಂದ್ರ ಸ್ಥಳಗಳಾಗಿದ್ದಂತೆ ವರ್ತಿಸುತ್ತಿರುವುದು ಧಾರ್ಮಿಕ ವ್ಯವಸ್ಥೆಗೆ ಅಪಾಯಕಾರಿಯಾಗುತ್ತಿದೆ. ಮಠದ ಆಸ್ತಿಗಾಗಿ ಹಿರಿಯ ಮತ್ತು ಕಿರಿಯ ಪೀಠಾಧಿಪತಿಗಳಲ್ಲಿ ಭಿನ್ನಾಭಿಪ್ರಾಯಗಳು, ಪೈಪೋಟಿಗಳು ಸೃಷ್ಟಿಯಾಗಿ ತೀರ್ಮಾನಕ್ಕೆ ನ್ಯಾಯಾಲಯದ ಮೆಟ್ಟಿಲೇರಿರುವುದೂ ಉಂಟು. ಮಠಗಳಲ್ಲಿ ನಡೆಯುವ ಭ್ರಷ್ಟಾಚಾರ, ಅವ್ಯವಹಾರ, ಮುಗ್ಧರ, ಮಹಿಳೆಯರ ಶೋಷಣೆ, ಚರ್ಚುಗಳಲ್ಲಿ ವ್ಯವಸ್ಥಿತ ಮತಾಂತರಕ್ಕೆ ಪ್ರಯತ್ನಗಳು, ಮಸೀದಿಗಳಲ್ಲಿ ಭಯೋತ್ಪಾದಕರ ನೆಲೆ ಮುಂತಾದ ಘಟನೆಗಳಿಂದ ಜನಸಾಮಾನ್ಯರು ಆತಂಕಗೊಂಡು ಇವುಗಳ ಕುರಿತು ವಿಶ್ವಾಸವನ್ನೇ ಕಳೆದುಕೊಳ್ಳುವಂತಾಗಿದೆ. ವೈದಿಕ ಮಠಗಳೂ ಇದಕ್ಕೆ ಹೊರತಾಗಿಲ್ಲ. ಈ ಮಠಗಳಲ್ಲಿ ಅಸ್ಪೃಶ್ಯತೆ, ವರ್ಣ ತಾರತಮ್ಯ ಮುಂತಾದ ಶ್ರೇಣೀಕೃತ ವರ್ಣ ವ್ಯವಸ್ಥೆಯ ಆಚರಣೆಗಳು ಈಗಲೂ ಕಂಡುಬರುತ್ತವೆ. ಮಠ, ದೇವಸ್ಥಾನಗಳ ಕೆಲಸ ಕಾರ್ಯಗಳಿಗೆ ಅವೈದಿಕರನ್ನು ನೇಮಿಸಲಾಗಿದ್ದರೂ ಅವರಿಗೆ ಸಹಭೋಜನಕ್ಕೆ ಅವಕಾಶ ಮಾಡಿಕೊಡದೇ ಪ್ರತ್ಯೇಕ ವ್ಯವಸ್ಥೆ ಮಾಡಿರುವುದು ಕರಾವಳಿ ತೀರದ ಬಹುತೇಕ ಮಠಗಳಲ್ಲಿ ಕಂಡುಬರುತ್ತದೆ.

## ಗ್ರಾಮದೇವತೆಗಳು

ಗ್ರಾಮ ದೇವತೆಗಳಿಗೂ, ಗ್ರಾಮಸ್ಥರಿಗೂ ಕರುಳ ಬಳ್ಳಿಯ ಸಂಬಂಧವಿರುವುದು ವಾಸ್ತವಿಕ ಸಂಗತಿಯಾಗಿದೆ. ಎಂ. ಚಿದಾನಂದಮೂರ್ತಿಯವರು ಜನಪದ ದೇವತೆಗಳನ್ನು ಗ್ರಾಮ್ಯ ದೇವತೆಗಳು ಮತ್ತು ಗ್ರಾಮ ದೇವತೆಗಳು ಎಂದು ಎರಡು ರೀತಿಯಲ್ಲಿ ವಿಭಜಿಸಿದ್ದಾರೆ. 'ಗ್ರಾಮದ ಎಲ್ಲ ಕೆಳವರ್ಗದ ಅಪೌರಾಣಿಕ ದೇವತೆಗಳೆಲ್ಲವೂ ಗ್ರಾಮ್ಯ ದೇವತೆಗಳೆಂದು, ಇಡಿ ಗ್ರಾಮಕ್ಕೆ ಗ್ರಾಮವೇ ಪೂಜೆ ಮಾಡುವ ದೇವತೆಯನ್ನು ಗ್ರಾಮ ದೇವತೆಯೆಂದು'[೧೧] ಅವರು ಗುರುತಿಸಿದ್ದಾರೆ. ವಿದ್ವಾಂಸರ ಈ ವಿಭಾಜಕ ದೃಷ್ಟಿಯಲ್ಲಿಯೂ ನಾವು ಪುರೋಹಿತಶಾಹಿಯ ಹುನ್ನಾರವನ್ನು ಗಮನಿಸಬಹುದಾಗಿದೆ.

ಮುಂಬಯಿ ಕರ್ನಾಟಕದ ಪ್ರದೇಶದಲ್ಲಿ ಸವದತ್ತಿ ಎಲ್ಲಮ್ಮ, ಗೋಕಾಕದ ದ್ಯಾಮಮ್ಮ, ಸಿರಸಿಯ ಮಾರಮ್ಮ, ಬಾದಾಮಿಯ ಬನಶಂಕರಿ, ಕರಾವಳಿಯ ಮಹಾಸತಿಯಮ್ಮ, ಚಂಡಿ, ದುರಗಮ್ಮ, ದ್ಯಾಮವ್ವ, ಆಂಜನೆಯ, ಮೈಲಾರಯ್ಯ, ಚಂದ್ರಗುತ್ತೆಮ್ಮ, ಮುನೇಶ್ವರ ಇತ್ಯಾದಿ ಗ್ರಾಮ ದೇವತೆಗಳು ಕಂಡುಬರುತ್ತವೆ. ಇವರಲ್ಲಿ ಎಲ್ಲಮ್ಮ, ಆಂಜನೆಯ, ಮೈಲಾರಯ್ಯ, ಚಂದ್ರಗುತ್ತೆಮ್ಮ ಮುಂತಾದವರು ತಮ್ಮ ಅಸಂಖ್ಯ ಭಕ್ತ ಸಮೂಹಗಳಿಂದ ಹಾಗೂ ಜನಪ್ರಿಯತೆಯಿಂದ ಈಗಾಗಲೇ ಮೇಲ್ವರ್ಗದ ಭಕ್ತರನ್ನು ಆಕರ್ಷಿಸಿ ವೈದಿಕ ದೇವತೆಗಳಾಗಿ ರೂಪಾಂತರ ಪಡೆದು ಪೂಜೆಗೊಳ್ಳುತ್ತಿದ್ದಾರೆ. ಇಂತಹ ದೇವತೆಯರ ಮೂಲ, ವೈದಿಕ ದೇವತೆಗಳೆಂಬ ಕಥೆಗಳು ಈಗಾಗಲೇ ಜನಜನಿತವಾಗಿವೆ. ಎಲ್ಲಮ್ಮಳನ್ನು ಜಮದಗ್ನಿ ಪತ್ನಿ ರೇಣುಕೆಯೆಂದು

ಗುರುತಿಸಲಾಗಿದೆ. ಮಾರಮ್ಮನನ್ನು ಬ್ರಹ್ಮಕುಮಾರಿ ಬಾಲಗೌರಿ ಎಂದು ಪರಿಗಣಿಸಲಾಗಿದೆ. ಮೈಲಾರಯ್ಯ ಶಿವನ (ಮೈಲಾರ ಲಿಂಗೇಶ್ವರ) ಅವತಾರವಾಗಿ ಮಣಿ, ಮಲ್ಲಾಸುರರೆಂಬ ರಾಕ್ಷಸರನ್ನು (ಶೂದ್ರರು?) ಸಂಹರಿಸಿದವನೆಂಬ ಕಥೆ ಹೆಣೆದು, ಧರ್ಮ ರಕ್ಷಿಸಿ ಭಕ್ತರ ಅಭಿಮಾನ ಗಳಿಸಿ ವೈದಿಕನಾಗಿದ್ದಾನೆ. ೬೪ ವಿವಿಧ ಆಕಾರಗಳಲ್ಲಿ ಪೂಜಿಸಲ್ಪಡುವ ಚಂಡಿ, ಪಾರ್ವತಿಯ ಅವತಾರವಾಗಿದ್ದು ವಿಶಿಷ್ಟ ಗ್ರಾಮ ದೇವತೆಯಾಗಿದ್ದಾಳೆ. 'ವೇದಗಳ ಕಾಲದಿಂದ ಇಂದಿನವರೆಗೂ ದೇವಿಯು ಬಹುಮುಖ್ಯವಾದ ಸ್ಥಾನವನ್ನು ಪಡೆದಿದ್ದಾಳೆ. ಆಧುನಿಕ ಭಾರತದಲ್ಲಿ ಸ್ವಾಮಿ ವಿವೇಕಾನಂದರ ಗುರುವಾದ ಶ್ರೀ ರಾಮಕೃಷ್ಣ ಪರಮಹಂಸರು ದೇವಿಯ ಮಹಾ ಭಕ್ತರಾಗಿದ್ದರು'[illegible] ಎಂಬ ಚಂದ್ರಶೇಖರ ಕಂಬಾರರ ಮಾತಿನಂತೆ ಶ್ರೀ ರಾಮಕೃಷ್ಣ ಪರಮಹಂಸರು ಮೂಲ ಗ್ರಾಮದೇವಿಯ ಭಕ್ತರಾಗಿದ್ದುದು ವೇದ್ಯವಾಗುತ್ತದೆ.

ಮುಂಬಯಿ ಕರ್ನಾಟಕದ ಗ್ರಾಮೀಣ ಕೆಳಸ್ತರದ ದೇವತೆಗಳಲ್ಲಿ ಸ್ತ್ರೀ ದೇವತೆಗಳೇ ಹೆಚ್ಚು. ಇದಕ್ಕೆ ಮಾತೃ ದೇವತೆಯ ಆರಾಧನೆ ಮಾತೃಪ್ರಧಾನ ಕುಟುಂಬದವರಿಂದ ಉಗಮ ಪಡೆದು, ಇತರೆಡೆ ಪ್ರಸಾರಗೊಂಡಿರಬೇಕು. ಯಾಕೆಂದರೆ 'ಪುರುಷನ ಶ್ರೇಷ್ಠತ್ವವನ್ನು ಸಾರುವ ವರ್ಷಗಳಿಂದ, ಮಾತೃ ದೇವತಾರಾಧನೆ ಹುಟ್ಟಿ ಬೆಳೆದಿರಲಾರದು'[illegible] ಎಂಬ ಮಾತು ಅರ್ಥ ಪಡೆದುಕೊಂಡಿದೆ. ಮಾತೃದೇವತೆ ಅಥವಾ ಶಕ್ತಿ ದೇವತೆಗಳ ವಿಕಾಸ ಕ್ರಮದ ಮೂರು ಹಂತಗಳನ್ನು ನಾವು ಗುರುತಿಸಬೇಕಾಗಿದ್ದು, 'ಅವು ಜಾನಪದ ಮೂಲದ ಮಾರಿ ಅಮ್ಮ, ವೇದ ಮೂಲದ ಅದಿತಿ, ಅಂಬ್ರಣಿ, ಶಾಕ್ತ ಮೂಲದ ಶಕ್ತಿ ದೇವತೆ ದುರ್ಗೆಯರಾಗಿದ್ದಾರೆ.'[illegible] ಇವುಗಳಲ್ಲಿ ದುರ್ಗೆಯ ಪೂಜೆ ಸಾರ್ವತ್ರಿಕವಾಗಿ ಈ ಪ್ರದೇಶದಲ್ಲಿ ಕಂಡುಬರುತ್ತದೆ. ದಲಿತರ ಕುಟುಂಬಗಳು ಸಾಮಾನ್ಯವಾಗಿ ಮಾತೃಪ್ರಧಾನ ಕುಟುಂಬಗಳು. ಮನೆ ನಡೆಸುವ ಜವಾಬ್ದಾರಿಯನ್ನು ಪುರುಷರಿಗಿಂತ ಮಹಿಳೆಯರು ಸಾಹಸದಿಂದ ನಿರ್ವಹಿಸುತ್ತಾರೆ. ಮೊಗಳ್ಳಿ ಗಣೇಶರು ಹೇಳುವಂತೆ, 'ದಲಿತ ಸಮುದಾಯಗಳ ಪರಂಪರೆಯಲ್ಲಿ ಮಹಿಳೆ ವಿಶೇಷ ಸ್ಥಾನ ಪಡೆದಿದ್ದು ಆಕೆಯ ಪ್ರಭಾವ, ಸ್ವಭಾವ, ಗ್ರಹಿಕೆ, ಅರಿವು ದಾಖಲಾಗಿರುತ್ತವೆ. ಆದ್ದರಿಂದ ಕೆಳಜಾತಿಗಳ ಸಂವೇದನೆಯಲ್ಲಿ ತಾಯ್ತನದ ಹಂಬಲ, ಸಲಹುವ, ಕರುಣಿಸುವ, ಭಾವುಕ ಸಂವೇದನೆ ಗಟ್ಟಿಯಾಗಿದ್ದು ಇದು ಮಾತೃಪ್ರಧಾನ ಸಂಸ್ಕೃತಿಯ ಬೇರಿನಿಂದ ಬಂದದ್ದಾಗಿದೆ.'[illegible] ಈ ಸಂವೇದನೆ ಭಕ್ತಿ ರೂಪದಲ್ಲಿ ಹರಿದಿದ್ದುದು ಸತ್ಯವಾಗಿದೆ. ಅಂತೆಯೆ ಮುಂಬಯಿ ಕರ್ನಾಟಕದ ಬಯಲು ಪ್ರದೇಶದ ದಲಿತರು ಸ್ಥಳೀಯ ಶಕ್ತಿ ದೇವತೆಗಳನ್ನು ಪೂಜಿಸಿದರೆ, ಹಿಂದುಳಿದ ಜನಾಂಗದವರೂ ಸೇರಿದಂತೆ ಅವರ ಭಕ್ತಿ ಶ್ರದ್ಧೆಯ ಬಹುತೇಕ ಕೇಂದ್ರಗಳು ಮಾತೃದೇವತಾ ಸ್ವರೂಪಿಣಿಯರಾದ ಸವದತ್ತಿಯ ಯಲ್ಲಮ್ಮ, ಬಾದಾಮಿಯ ಬನಶಂಕರಿ ದೇವಿ, ಹೊನ್ನತ್ತಿಯ ಹೊನ್ನಮ್ಮ, ಚಂದ್ರಗುತ್ತಿಯ ಚಂದ್ರಗುತ್ತೆಮ್ಮ, ಮೈಲಾರದ ಗಂಗವ್ವಾಳವ್ವ ಮುಂತಾದವರಾಗಿದ್ದಾರೆ. ಕರಾವಳಿ, ಉತ್ತರ ಕನ್ನಡ, ಮಲೆನಾಡಿನ ದಲಿತರು ಶಿರಸಿಯ ಮಾರಮ್ಮ, ಗೋಕರ್ಣದ ಭದ್ರಕಾಳಿ, ಅಂಕೋಲೆಯ ಆರ್ಯದುರ್ಗಾ ಮೊದಲಾದ ದೇವತೆಯರನ್ನು ಪೂಜಿಸುತ್ತಾರೆ.

ಮುಂಬಯಿ ಕರ್ನಾಟಕದ ಕರಾವಳಿ ತೀರದ ಜನಸಾಮಾನ್ಯರು ಮಹಾಮಾಯಿ ಎಂಬ ಗ್ರಾಮೀಣ ದೇವತೆಯನ್ನು ಪೂಜಿಸುವುದು ಕಂಡುಬರುತ್ತದೆ. ಈ ದೇವತೆ ಶಕ್ತಿ ದೇವತೆಯಾದ ಪಾರ್ವತಿಯ ಒಂದು ಅವತಾರವೆಂಬ ಕಥೆಯಿದೆ. ಅಲ್ಲದೆ ಗ್ರಾಮೀಣ ಕೆಳಸ್ತರದ ಜನರು ಪ್ರಕೃತಿಗೆ ಬಹಳಷ್ಟು ಹತ್ತಿರದಲ್ಲಿ ಜೀವಿಸುವವರು, ಪ್ರಕೃತಿ ಅವರಿಗೆ ಪೂಜನೀಯ. ಸೂರ್ಯ, ಚಂದ್ರ, ತಾರೆ, ಮಳೆ, ಸಿಡಿಲು, ವೃಕ್ಷ, ಮಿಂಚು ಶಕ್ತಿಗಳಾಗಿ ಪೂಜನೀಯವಾಗುತ್ತವೆ. ಗ್ರಾಮೀಣ ಹಾಗೂ ಬುಡಕಟ್ಟು ಜನರ ಜೀವನ ಆಧಾರ ಕೃಷಿ, ಕೃಷಿ ಕೂಲಿಗಳಾಗಿವೆ. ಕೃಷಿಗೆ ಸಂಬಂಧಿಸಿದ ಎಲ್ಲ ಸಲಕರಣೆಗಳನ್ನು ಸಹ ಅವರು ಪ್ರಕೃತಿಯೊಂದಿಗೆ ಪೂಜಿಸುತ್ತಾರೆ. ಮುಂಬಯಿ ಕರ್ನಾಟಕ ಪ್ರದೇಶದ ಗ್ರಾಮೀಣ ನೆಲೆಗಳಲ್ಲಿ ಪ್ರಕೃತಿ ಪೂಜೆಗೆ, ಸ್ತ್ರೀ ಆರಾಧನೆಗೆ ಪ್ರಾಶಸ್ತ್ಯ ಇರುವುದನ್ನು ಅನೇಕ ಜಾತಿ ಜನಾಂಗಗಳಲ್ಲಿ ಇಂದಿಗೂ ನೋಡಬಹುದು. ಖಾರ್ವಿಗಳೆಂಬ ಕರಾವಳಿಯ ಮೀನುಗಾರರು ವಿಶೇಷ ಆಚರಣೆಯಾಗಿ ನಾವೆ, ಮಚವೆಗಳ ಮೂಲಕ ಕಡಲನ್ನು ಪೂಜಿಸಿ ಜನಿವಾರ ತೊಡಿಸಿ, ಹೂ ಹಣ್ಣು ಕಾಂಚನಗಳನ್ನು ಅರ್ಪಿಸುವುದು ಇದಕ್ಕೆ ಪುಷ್ಟಿ ಕೊಡುತ್ತದೆ. ಗೊಂಡರು ಕಂಚಿನ ಬಿಂದಿಗೆಗೆ ನೀರು ತುಂಬಿಸಿ ಅದಕ್ಕೆ ತಿರುಪತಿ ತಿಮ್ಮಪ್ಪನ ಲಾಂಛನಗಳನ್ನು ಬಳಸಿ ಸಿಂಗರಿಸಿ ಮಾಸ್ತಿ, ಜಟ್ಟಿಗ ದೈವಗಳನ್ನು ಆಹ್ವಾನಿಸುತ್ತಾ, ಹಾಡುತ್ತಾ ಪೂಜಿಸುತ್ತಾರೆ. ಇದು ಕೆಳವರ್ಗದ ಜನಪದರಲ್ಲಿ ದೈವಾರಾಧನೆ ಜೊತೆ ಕಲಾರಾಧನೆ ಬೆಳೆದುಬಂದ ಬಗೆಯಾಗಿದೆ. ಬಿಂಗಿಪದ ಕಲಾ ಸಂಪ್ರದಾಯವು ಮುಂಬಯಿ ಕರ್ನಾಟಕದ ಮಲೆನಾಡಿನಲ್ಲಿ ಅಂಟಿಗೆ ಪಂಟಿಗೆ, ದೀಪ ನೀಡುವುದು, ಹಬ್ಬವಾಡುವುದು

ಎಂಬ ಬೇರೆಬೇರೆ ಹೆಸರುಗಳಿಂದ ಪ್ರಚಲಿತವಿದೆ. ಈ ಕಲೆ ಬಲೀಂದ್ರನ ಆರಾಧನೆಗಾಗಿಯೇ ರೂಪಗೊಂಡಿದೆ ಎಂಬ ನಂಬಿಕೆ ಇಲ್ಲಿ ಪ್ರಚಲಿತವಾಗಿದೆ. ಬಲೀಂದ್ರನು ದೀಪಾವಳಿಗೆ ಮೂರು ದಿನ ತನ್ನ ರಾಜ್ಯ ಸಿರಿಯನ್ನು ನೋಡಲಿಕ್ಕೆ ಬರುತ್ತಾನಂತೆ. ಆಗ ನಾವು ನಮ್ಮ ನೋವು ನುಂಗಿ ದೀಪ ಬೆಳಗಿ ಅವನನ್ನು ಸ್ತುತಿಸಿದರೆ ನಾಡು ಸುಭಿಕ್ಷವಾಗುವುದೆಂಬ ನಂಬಿಕೆಯಿಂದ ಪ್ರಕೃತಿ ಆರಾಧನೆಯನ್ನು ಕೈಗೊಳ್ಳಲಾಗುತ್ತದೆ. ಬುಡಕಟ್ಟು ಜನಾಂಗವಾದ ಕುಣುಬಿಗಳು ಮಾಟಮಾಗೇಶ್ವರ, ಜುಟಾಸೂರ, ಜನ್ನ, ಕಾಳದೇವ, ಗೌಳಾದೇವಿ, ಮಹಾಮಾಯಿ, ವಾಗ್ರೋ (ವಾಗ್ರೋ>ವ್ಯಾಗ್ರ>ವಗ್ಗಯ್ಯ ಆಗಿರುವ ಸಂಭವವೂ ಉಂಟು) ಮುಂತಾದ ಹೆಸರಿನ ದೇವತೆಗಳನ್ನು ಪೂಜಿಸುತ್ತಾರೆ. ಹವ್ಯಕರೆಂಬ ಉತ್ತರ ಕನ್ನಡ ಜಿಲ್ಲೆಯ ಬ್ರಾಹ್ಮಣರು, 'ತುಳಸಿ, ಅಶ್ವತ್ಥ ಮರ, ಔದುಂಬರ ವೃಕ್ಷಗಳನ್ನೂ, ಗೋವು, ನಾಗ, ಭೂತ, ದೆವ್ವ, ಮಾರಿ, ಚವಡಿಯರನ್ನು ಪೂಜಿಸುತ್ತಾರೆ. ಹಿಂದುಗಳ ಎಲ್ಲ ಹಬ್ಬಗಳನ್ನು ಇವರು ಆಚರಿಸುತ್ತಾರೆ. ಜೊತೆಗೆ ಜಟಗನ ಹಬ್ಬ, ಗಡಿ ಹಬ್ಬ, ಬೂರೆ ಹಬ್ಬ, ಕಣದ ಹಬ್ಬ ಮತ್ತು ಹುಲಿದೇವರ ಹಬ್ಬಗಳನ್ನೂ ಆಚರಿಸುವುದುಂಟು.'[೨೮] ಯಲ್ಲಾಪುರ ಕಾಡಿನಲ್ಲಿ ವಾಸಿಸುವ ಹಿಂದು ಸಿದ್ಧಿಗಳು 'ಹನುಮಾನ್, ಶಿದ್ರಾಮೇಶ್ವರ, ಮತ್ತು ಯಲ್ಲಮ್ಮನಿಗೆ ಭಕ್ತರಾಗಿದ್ದು, ಪಿತೃಗಳೊಂದಿಗೆ ಭೂತ, ಪ್ರೇತ, ಹುಲಿ ದೇವರುಗಳನ್ನು ಪೂಜಿಸುತ್ತಾರೆ.'[೨೯] ಇವರಲ್ಲಿ ಅನೇಕ ಮನೆತನದವರು ಸೋಂದೆ ಮಠದ ಅನುಯಾಯಿಗಳಾಗಿದ್ದುದು ಒಂದು ವಿಶೇಷವಾಗಿದೆ.

**೬. ಮುಂಬಯಿ ಕರ್ನಾಟಕ : ಸ್ಥಳನಾಮ ಮತ್ತು ರಾಜಕೀಯ ವ್ಯವಸ್ಥೆಯ ನೆಲೆಗಳು**

ಕರ್ನಾಟಕ ಹಾಗೂ ಮಹಾರಾಷ್ಟ್ರ ಇವುಗಳ ನಡುವೆ ಸುಮಾರು ೩೦೦೦ ವರ್ಷಗಳ ಸಾಂಸ್ಕೃತಿಕ ಮತ್ತು ೧೫೦೦ ವರ್ಷಗಳ ಆಡಳಿತಾತ್ಮಕ ಸಂಬಂಧವಿದೆ. ಕನ್ನಡದ ರಾಜಮನೆತನಗಳು ಮಹಾರಾಷ್ಟ್ರದ ಮೇಲೆ ಹದಿಮೂರನೆಯ ಶತಮಾನದವರೆಗೆ ಪ್ರಭಾವ ಬೀರಿವೆ. ನಂತರದ ಕಾಲಘಟ್ಟದಲ್ಲಿ ಮಹಾರಾಷ್ಟ್ರದ ಪ್ರಭಾವ ಕರ್ನಾಟಕದ ಮೇಲೆ ವಿಶೇಷತಃ ಮುಂಬಯಿ ಕರ್ನಾಟಕದ ಮೇಲೆ ಆಗಿರುವುದನ್ನು ಗಮನಿಸಬಹುದಾಗಿದೆ. ಅಲ್ಲದೆ ಭಾಷಾ ಸಂದರ್ಭದಲ್ಲಿ, ಕನ್ನಡ ಮತ್ತು ಮರಾಠಿ ಭಾಷೆಗಳ ಬಾಂಧವ್ಯ ಅನನ್ಯವಾದದ್ದು, ಇವು ಪರಸ್ಪರ ಪ್ರಭಾವದಿಂದ ಒಂದು ಸಂಸ್ಕೃತಿಯನ್ನು ಹುಟ್ಟಿಸಿದ್ದು ಒಂದು ಐತಿಹಾಸಿಕ ಸತ್ಯವಾಗಿದೆ. ಈ ಎರಡೂ ಭಾಷೆಗಳ ಆಕರ್ಷಣ-ವಿಕರ್ಷಣೆಗಳ ಇತಿಹಾಸವು ಸಾಕಷ್ಟು ಉದ್ಬೋಧಕವಾಗಿದ್ದು, ಮುಂಬಯಿ ಕರ್ನಾಟಕ ಈ ಕರ್ಷಣೆಗಳ ನೆಲೆಯಾಗಿದೆ.

ಕರ್ನಾಟಕದಿಂದ ಬಹು ದೂರದಲ್ಲಿರುವ (ಮಹಾರಾಷ್ಟ್ರ ರಾಜ್ಯದ) ಚಾಂದಾ, ಭಂಡಾರಾ ಜಿಲ್ಲೆಗಳ 'ಕುರುಂಬ' ಮತ್ತು 'ಹೊಲೆಯ'ರ ಜಾತಿಯ ೪-೫ ಸಾವಿರದಷ್ಟು ಜನರು ಕನ್ನಡವನ್ನಾಡುತ್ತಾರೆಂದು ಗ್ರಿಯರ್‌ಸನ್ ತಮ್ಮ 'Linguistic Survey of India' (Vol. IV P. 446) ಎಂಬ ಗ್ರಂಥದಲ್ಲಿ ಹೇಳಿದ್ದಾರೆ. ಅವರ ಈ ಕನ್ನಡ ಬಿಜಾಪುರದ ಇಂದಿನ ಆಡುಮಾತಿಗೆ ಸಮೀಪದ್ದಾಗಿದೆಯೆಂದು ಹೇಳಿದ್ದಾರೆ. ಇದು ಒಂದು ಮುಖವಾದರೆ, ಕನ್ನಡದ ಆಂಡಯ್ಯನ ಕೃತಿಯಲ್ಲಿ ರಾವುತರ ಬಾಯಿಂದ ಬರುವ ಈ ವಾಕ್ಯವನ್ನು ಗಮನಿಸೋಣ. 'ಝೂರೇ, ಜಝೂರೇ ಹಳೂ ರೇ ಹೋ, ಹೋ ಮಝಾ' ಈ ವಾಕ್ಯದಲ್ಲಿ 'ಜಾ' ಶಬ್ದದ ಬದಲಾಗಿ ಮಹಾಪ್ರಾಣದ ಉಪಯೋಗವಿದೆ. ಶುದ್ಧ ಕರ್ನಾಟಕದ ಕೇಂದ್ರದಲ್ಲಿ ಕೂಡ ಮರಾಠಿಯ ಪ್ರಯೋಗ ಜೀವಂತವಾಗಿತ್ತು ಎಂಬುದು ಇದರಿಂದ ತಿಳಿಯುತ್ತದೆ. ಕನ್ನಡ ಮರಾಠಿಗಳು ಅವಳಿ-ಜವಳಿ ಸಹೋದರರಂತೆ ಬಾಳಿ ಬದುಕಿದ್ದ ಭಾಷೆಗಳು ಎಂಬುದಕ್ಕೆ ಅನೇಕ ದೃಷ್ಟಾಂತಗಳು ನಮ್ಮಲ್ಲಿ ದೊರಕುತ್ತವೆ.

ಮಹಾರಾಷ್ಟ್ರದಲ್ಲಿ, ಖಾನದೇಶದ ವಿಸ್ತಾರದಲ್ಲಿ ಕನ್ನಡವೆಂಬ ಹೆಸರಿನ ಅನೇಕ ಊರುಗಳು ಸಿಕ್ಕುತ್ತವೆ. ಕನ್ನಡಗಾಂವ (ನಾಗಲವಾಡಿ ಮಹಾಲ), ಕನ್ನಡ ಪುರಾ (ನೇಮಾಡ ಜಿಲ್ಲೆ, ಖರಗೋನ ಮಹಾಲ), ಕಾನಡಗಾಂವ (ಕಾಸರಾವದ ಮಹಾಲ), ಕಾನಾಡ್ಯಾ (ಇಂದೋರ ಮಹಾಲ) ಮೊದಲಾದ ಊರುಗಳು ಪುರಾತನದ ಆರ್ಯೇತರ ಕನ್ನಡ ಭಾಷೆಯ ಜನರ ವಸತಿಗಳನ್ನು ಸೂಚಿಸುತ್ತವೆ. ಮಹಾರಾಷ್ಟ್ರಿಯರು ತಮ್ಮನ್ನು 'ಆರಿಯ' ಎಂದು ಕರೆದುಕೊಳ್ಳುತ್ತಾರೆ. ಕರ್ನಾಟಕದಲ್ಲಿ ಈ ಹೆಸರಿನ ಅನೇಕ ಊರುಗಳನ್ನು ಕಾಣಬಹುದು. ಧಾರವಾಡ ಪ್ರದೇಶದಲ್ಲಿ ಮಾತ್ರವಲ್ಲ, ಮೈಸೂರಿನವರೆಗೆ ಕೂಡ 'ಆರೇ' ಜನರಿದ್ದದ್ದು ಕಂಡುಬರುತ್ತದೆ. ಉದಾ, ಅರೆ ಕುರಹಟ್ಟಿ, ಅರೇ ಹೊಸೂರು, ಅರೇ ಮಲ್ಲಾಪುರ, ಅರೇ ಲಕಮಾಪುರ ಇತ್ಯಾದಿ., ಊರುಗಳ ಹೆಸರು ಅವರ ವಾಸಸ್ಥಳಗಳಾಗಿದ್ದುದನ್ನು ಗುರುತಿಸಬಹುದಾಗಿದೆ.

ಕನ್ನಡ ಮತ್ತು ಮರಾಠಿಗರ ರಾಜಕೀಯ ಸಂಬಂಧ ಈ ರೀತಿ ಅನುರೂಪಗೊಂಡ ಹಂತದಲ್ಲಿಯೇ ಕನ್ನಡ ಮತ್ತು ಗೋಮಾಂತಕಿ(ಕೊಂಕಣಿ)ಯರ ರಾಜಕೀಯ ಮತ್ತು ಸಾಂಸ್ಕೃತಿಕ ಸಂಬಂಧಗಳು ಹದಗೊಂಡಿವೆ. ಸುಮಾರು ಒಂದು ಸಾವಿರ ವರ್ಷಗಳ ಕಾಲ ಗೋವೆಯನ್ನು ಆಳಿದ ಕನ್ನಡಿಗರು ತಮ್ಮ ಸಂಸ್ಕೃತಿಯ ವಿಪುಲ ಗುರುತುಗಳನ್ನು ಉಳಿಸಿದ್ದಾರೆ. ವಿಜಯನಗರದ ಸೈನ್ಯಕ್ಕೆ ಸಾವಿರಾರು ಕುದುರೆಗಳನ್ನು ಒದಗಿಸಿದ ಪೋರ್ತುಗೀಜರು ಪಣಜಿಯ ಬಂದರ(Fort)ನ್ನು ಕೃಷ್ಣದೇವರಾಯನ ಮೇಲಿನ ಗೌರವದಿಂದ 'ರಾಯರ ಬಂದರು' ಎಂದೇ ಕರೆದರು. ಅದು ಇಂದಿಗೂ 'ರಾಯ ಬಂದರ'ವಾಗಿ ಉಳಿದಿದೆ. ಹನ್ನೆರಡರಿಂದ ಹದಿನೈದನೆಯ ಶತಮಾನದವರೆಗೆ ಗೋವೆಯಲ್ಲಿ ಕನ್ನಡದ ಪ್ರಾಬಲ್ಯವಿತ್ತು. ಇಲ್ಲಿ ಶಿವಪೂಜೆ ಪ್ರಚಲಿತವಿತ್ತು. ಇಂದು ಹಳೆ ಗೋವೆ ಎಂದು ಕರೆಯಲ್ಪಡುವ ಗೋಪಕ ಪಟ್ಟಣದಲ್ಲಿ ಗೋಮಂತೇಶ್ವರ ಅಥವಾ ಗೋವೇಶ್ವರ ಎಂಬ ಶಿವಾಲಯವಿದೆ. ಪೋಂಡಾ ತಾಲೂಕಿನಲ್ಲಿ ಸಿದ್ಧಾರೂಢ ಸ್ವಾಮಿಗಳ ಆರಾಧನೆ ಕಂಡುಬರುತ್ತದೆ. 'ಮೂಲ ಗೋಮಂತಕಿಯರ ಭಾಷೆಯಾದ ಕೊಂಕಣಿ(ಆರ್ಯ ಭಾಷಾವರ್ಗ)ಯಲ್ಲಿ ಕನ್ನಡದ ಪದಗಳು ಹೇರಳವಾಗಿವೆ. 'ಮಣೆ=ಮಾಣಾಯ, ತಂಬಿಗೆ=ತಂಬಿಯೋ, ಮಂಚ=ಮಾಚೋ, ಮಂಟಪ=ಮಾಟಪ, ಮಡಿವಾಳ=ಮಡಿವಳ, ಧೂಳು=ಧೂಳ ಅಂಗಿ=ಆಂಗಿ ಇತ್ಯಾದಿ.,'"[25] ಪದಗಳು ಕನ್ನಡವನ್ನು ಅಲ್ಲಿ ಜೀವಂತವಾಗಿಟ್ಟಿವೆ. ಇದಲ್ಲದೆ ಅಜ್ಜ, ಅಜ್ಜಿ, ಅಕ್ಕಾ, ಅಣ್ಣ ಮೊದಲಾದ ಸಂಬಂಧವಾಚಕಗಳು ಕೇರಿ (ಕೇರಿಮ್), ಪೊಂಡಾ (Ponda ಇದು ಹೊಂಡ ಶಬ್ದದಿಂದ ಹುಟ್ಟಿದ್ದು), ಕುಕ್ಕಳ್ಳಿ, ಕುಟ್ಟಳ್ಳಿ, ಬಾಳ್ಳಿ ಅಗುಸಿ, ಮಾಂಡುರ, ಶಿವೋಲಿ (ಶಿವಳ್ಳಿ), ಮೊದಲಾದ ಅನೇಕ ಗ್ರಾಮಗಳ ಹೆಸರೂ ಬಳಕೆಯಲ್ಲಿವೆ. ಹೆಸರುಗಳಿಗೆ ಅಪ್ಪ ಎಂದು ಸೇರಿಸಿ ಕರೆಯುವ ವ್ಯಕ್ತಿನಾಮಗಳನ್ನು (ದುರ್ಗಪ್ಪ, ಪಾದಪ್ಪ, ಸಾತಪ್ಪ) ಹೊಂದಿದ ಹಿರಿಯರೂ ಅಲ್ಲಿ ಕಾಣಸಿಗುತ್ತಾರೆ. ಎರಡು ನದಿಗಳು ಸೇರಿದ ಊರಿನ ಹೆಸರು ಸಾಂಗೆ (ಸಂಗಮ) ಎಂದಿದೆ. ಗೋವಾ ಸರಕಾರ ಇಲ್ಲಿನ ರಾಜ್ಯ ಸಾರಿಗೆ ಸಂಸ್ಥೆಗೆ ಕನ್ನಡ ದೊರೆಗಳಾದ ಕದಂಬರ (ಕದಂಬ ಟ್ರಾನ್ಸಪೋರ್ಟ್) ಹೆಸರಿಟ್ಟಿರುವುದು ಸೌಹಾರ್ದತೆಯ ಕುರುಹಾಗಿದೆ. ಇದಕ್ಕೆ ಪ್ರತಿಯಾಗಿ ಕರ್ನಾಟಕ ಸರಕಾರವೂ ಸಹ ಇತ್ತೀಚೆಗೆ, ಆರನೆಯ ಇಯತ್ತೆ(ವರ್ಗ)ಯಿಂದ ಕೊಂಕಣಿಯನ್ನು ನಾಲ್ಕನೆಯ ಭಾಷೆಯಾಗಿ ಕಲಿಯಲು ಮಕ್ಕಳಿಗೆ ಅವಕಾಶ ಮಾಡಿಕೊಟ್ಟಿರುವುದು ಸಹ ಸೌಹಾರ್ದತೆಯ ಒಂದು ಮುಖವಾಗಿದೆ.

**ಚುನಾವಣೆ**

ಸ್ವಾತಂತ್ರ್ಯೋತ್ತರ ಕಾಲದಲ್ಲಿ ಮುಂಬಯಿ ಕರ್ನಾಟಕದ ರಾಜಕೀಯ ವ್ಯವಸ್ಥೆ ಪ್ರಜಾಪ್ರಭುತ್ವದ ಹೆಸರಿನಿಂದ ನಡೆಯುತ್ತಿದ್ದು, ಪ್ರಜೆಗಳಿಂದ ಆಯ್ಕೆಯಾದ ಪ್ರಜಾ ಪ್ರತಿನಿಧಿಗಳು ಆಡಳಿತ ನಡೆಸುತ್ತಿದ್ದಾರೆ. ರಾಜಪ್ರಭುತ್ವದಿಂದ ವಸಾಹತುಪ್ರಭುತ್ವ, ನಂತರ ಪ್ರಜಾಪ್ರಭುತ್ವ ಕಂಡರೂ ಜನಸಾಮಾನ್ಯರ ಬದುಕಿನಲ್ಲಿ ಮಹತ್ವದ ಬದಲಾವಣೆಗಳು ಆಗಿರುವುದಿಲ್ಲ. ಕೆಳವರ್ಗದ, ದಲಿತರ ರಾಜಕೀಯ ಸ್ಥಾನಮಾನಗಳು ಯಥಾಪ್ರಕಾರವೇ ಇದ್ದು ಆಡಳಿತ ಪ್ರಬಲ ವರ್ಗಗಳ ಕೈಯಲ್ಲಿದೆ. ಕರ್ನಾಟಕದಲ್ಲಿರುವಂತೆ ಮುಂಬಯಿ ಕರ್ನಾಟಕದ ಪ್ರದೇಶದಲ್ಲಿಯೂ ಸಹ ಪ್ರಬಲ ಜಾತಿಗಳು ತಮ್ಮ ಜಾತಿಯವರ ಹಿತಾಸಕ್ತಿಗಾಗಿ ಮಠಗಳನ್ನು ಸ್ಥಾಪಿಸಿ ಶಾಲಾ, ಕಾಲೇಜು, ವಿದ್ಯಾರ್ಥಿ ನಿಲಯಗಳನ್ನು ನಡೆಸಿ ತಮ್ಮ ಜಾತಿ, ಪಂಗಡಗಳ ಸಂಘಟನೆಗಳನ್ನು ಮಾಡುತ್ತಿವೆ. ಮುಂಬಯಿ ಕರ್ನಾಟಕದಲ್ಲಿ ವೀರಶೈವರು, ನಾಡವರು, ನಾಮಧಾರಿಗಳು, ಹಾಲಕ್ಕಿ ವಕ್ಕಲಿಗರು ಮತ್ತು ಹವ್ಯಕ ಬ್ರಾಹ್ಮಣರನ್ನು ಪ್ರಬಲ ರಾಜಕೀಯ ಶಕ್ತಿಗಳನ್ನಾಗಿ ಗುರುತಿಸಬಹುದು. ಈ ಜಾತಿ ಸಂಘಟನೆಗಳು ಹಾಗೂ ಮಠಗಳು ತಮ್ಮ ಜನಾಂಗದವರ ಶೈಕ್ಷಣಿಕ ಹಾಗೂ ಆರ್ಥಿಕ ಹಿತಾಸಕ್ತಿಯನ್ನು ಕಾಪಾಡುತ್ತಿರುವ ಜೊತೆಗೆ ರಾಜಕೀಯ ಹಿತಾಸಕ್ತಿಯನ್ನೂ ಕಾಪಾಡುತ್ತಿವೆ. ಹೀಗಾಗಿ ಶಾಸನ ಸಭೆಗಳಲ್ಲಿ ಪ್ರಬಲ ಕೋಮುಗಳ ಜನರೇ ಆರಿಸಿ ಬಂದು ತಮ್ಮವರನ್ನೇ ನಾಯಕರನ್ನಾಗಿ ಮಾಡಿಕೊಂಡು ಸರಕಾರ ರಚಿಸುವುದನ್ನು ಕಾಣುತ್ತೇವೆ. ಜಾತಿ ಆಧಾರಿತ ವರ್ಗವ್ಯವಸ್ಥೆಯು ಕಡಿಮೆಯಾಗುತ್ತಿದ್ದು, ಒಂದು ಜಾತಿಯಲ್ಲಿಯೇ ಆರ್ಥಿಕ ಸ್ಥಿತಿ ಅವಲಂಬಿಸಿ ಮೇಲುವರ್ಗ, ಕೆಳವರ್ಗಗಳು ನಿರ್ಮಾಣವಾಗುತ್ತಿವೆ. ದುಡಿಯುವವರು ಹಾಗೂ ದುಡ್ಡಣಿಸಿಕೊಳ್ಳುವವರು ಎಂಬ ವರ್ಗಬೇಧ ಜಾತಿಯೊಳಗೇ ನಿರ್ಮಾಣವಾಗುತ್ತಿರುವುದು ವಿಶೇಷವಾಗಿದೆ.

**ಗಡಿರೇಖೆ, ಗಡಿನಾಡು : ಒಂದು ಅಭಿಪ್ರಾಯ**

ಸ್ವಾತಂತ್ರ್ಯಾನಂತರ ಭಾಷಾವಾರು ಪ್ರಾಂತಗಳ ರಚನೆಯ ಸಮಯದಲ್ಲಿ ಕರ್ನಾಟಕ, ಗೋವಾ ಹಾಗೂ ಮಹಾರಾಷ್ಟ್ರ ರಾಜ್ಯಗಳನ್ನು ಬೇರ್ಪಡಿಸಿದ ಗಡಿರೇಖೆಯು ಒಂದು ರಾಜಕೀಯ ಎಲ್ಲೆ ಮಾತ್ರ

ಎಂಬುದನ್ನು ಒತ್ತಿ ಹೇಳಬೇಕಾಗಿದೆ. ಇಲ್ಲಿ ವಾಸಿಸುವ ಸಾಮಾನ್ಯ ಜನತೆ ಸಾಂಸ್ಕೃತಿಕವಾಗಿ ಪರಸ್ಪರ ಬೆಸೆದುಕೊಂಡಿದ್ದು, ಭಾಷಾತೀತ, ಭಾವನಾತ್ಮಕ ಸಂಬಂಧವನ್ನು ಹೊಂದಿದ್ದಾರೆ. ವ್ಯಾಪಾರ ವಹಿವಾಟು, ವಿದ್ಯಾಭ್ಯಾಸ, ನೌಕರಿ, ಕೃಷಿ, ಕೂಲಿ ಮುಂತಾಗಿ ದಿನ ನಿತ್ಯದ ಅವರ ಬದುಕು ಹಾಸು ಹೊಕ್ಕಾಗಿದೆ. ಈ ಭಾಗದ ಜನಸಾಮಾನ್ಯರ ಮಕ್ಕಳು ಓದು, ವಿದ್ಯಾಭ್ಯಾಸಕ್ಕಾಗಿ ಗಡಿದಾಟಿ ಗೋವಾ, ಮಹಾರಾಷ್ಟ್ರದ ಶಾಲೆಗಳಿಗೂ, ಅಲ್ಲಿಯ ಮಕ್ಕಳು ಕರ್ನಾಟಕದ ಶಾಲೆಗಳಿಗೂ ಹೋಗಿ ಬರುವುದು ಸಾಮಾನ್ಯ ಸಂಗತಿಯಾಗಿದೆ. ಗಡಿ, ನುಡಿಗಳ ಬಂಧನ ಮೀರಿ ಕರ್ನಾಟಕದ ಯುವತಿಯರನ್ನು ಗೋವಾ ಮತ್ತು ಮಹಾರಾಷ್ಟ್ರದ ಯುವಕರೂ, ಅವೆರಡೂ ರಾಜ್ಯಗಳ ಯುವತಿಯರನ್ನು ಕರ್ನಾಟಕದ ಯುವಕರೂ ಮದುವೆಯಾಗಿದ್ದಾರೆ. ಗೋವಾ ಮಹಾರಾಷ್ಟ್ರದ ಗಡಿ, ಒಳ ಭಾಗಗಳಲ್ಲಿ ಕರ್ನಾಟಕದ ಉಡುಪಿ ಹೊಟೇಲು, ಲಿಂಗಾಯತರ ಖಾನಾವಳಿಗಳನ್ನು ಹಾಗೂ ಕರ್ನಾಟಕದಲ್ಲಿ ಗೋವೆ, ಮಹಾರಾಷ್ಟ್ರದ ಮಿಲಿಟರಿ ಹೋಟೆಲುಗಳನ್ನೂ ಕಾಣಬಹುದಾಗಿದೆ. ಕರ್ನಾಟಕದ ಸಾವಿರಾರು ಕಾರ್ಮಿಕರು ಗೋವಾ, ಮಹಾರಾಷ್ಟ್ರದ ಉದ್ಯಮಗಳನ್ನು ಆಶ್ರಯಿಸಿ ಬದುಕುತ್ತಿದ್ದಾರೆ. ರಾಜಕೀಯ ಹಿತಾಸಕ್ತಿ ಪ್ರೇರಿತ ಎಂ.ಇ.ಎಸ್. ಮತ್ತು ಕನ್ನಡಪರ ಸಂಘಟನೆಗಳಿಗೆ ಇಲ್ಲಿಯ ಜನಸಾಮಾನ್ಯರ ಪ್ರತಿಕ್ರಿಯೆ ನಿರ್ಲಿಪ್ತತೆ ಎಂದು ಹೇಳಬೇಕಾಗಿದೆ. ಇತ್ತೀಚೆಗೆ ಗೋವಾ ಸರಕಾರ ಅಲ್ಲಿನ (ಬೈನಾ ಬೀಚ್) ನಿವಾಸಿಗಳಾದ ಕರ್ನಾಟಕ ಕಾರ್ಮಿಕರ, ಬಡಜನತೆಯ ಮೇಲೆ ನಡೆಸಿದ ದೌರ್ಜನ್ಯ, ಸ್ಥಳಾಂತರ ರಾಜಕೀಯ ಪ್ರೇರಿತವಾದದ್ದೇ ಹೊರತು ಪ್ರಜಾಪ್ರೇರಿತವಾದದ್ದಲ್ಲ ಎಂಬುದು ಸ್ಪಷ್ಟವಾಗಿದೆ. ಕಳೆದ ವರ್ಷಗಳಲ್ಲಿ ಅತಿವೃಷ್ಟಿಯಿಂದ ಕೃಷ್ಣಾ, ಭೀಮಾ ನದಿ ತೀರದ ಮಹಾರಾಷ್ಟ್ರದ ಜನತೆ ಮನೆ, ಜಮೀನು ಕಳೆದುಕೊಂಡಾಗ ಕರ್ನಾಟಕದ ಸಂಘ, ಸಂಸ್ಥೆಗಳು ಬಡ ಕುಟುಂಬಗಳಿಗೆ ಆಹಾರ, ಬಟ್ಟೆ, ಆಶ್ರಯ ನೀಡಿದ ಸಂಗತಿ ಸಾಮರಸ್ಯದ ಉದಾಹರಣೆಯಾಗಿದೆ. ನೆರೆಹಾವಳಿ, ಬರ, ಇತ್ಯಾದಿ ಕಷ್ಟಗಳಿಗೆ ಮೂರೂ ರಾಜ್ಯಗಳ ಬಡಜನತೆಯು ಪರಸ್ಪರ ಸ್ಪಂದಿಸುತ್ತ ಬಂದಿರುತ್ತಾರೆ.

**ಕೊನೆಯ ಟಿಪ್ಪಣಿಗಳು**

೧. ಚಿದಾನಂದಮೂರ್ತಿ ಎಂ., ವಿಜಯ ಕರ್ನಾಟಕ, ದಿನಾಂಕ ೧೭.೧.೨೦೦೫, ಪುಟ ೭

೨. ಗುಂಜಾಳ ಎಸ್. ಆರ್. (ಸಂ), ಬೆಳಗಾವಿ ಬೆಳಕು, ೨೦೦೩, ಕನ್ನಡ ಸಾಹಿತ್ಯ ಪರಿಷತ್ತು, ಪುಟ ೫೨೨

೩. ಮರಾಠಿ ಇಂಗ್ಲೀಷ್ ನಿಘಂಟು, ಪುಟ ೨೩

೪. ಭಂಡಾರಕರ್ (ಡಾ.), ದಿ ಅರ್ಲಿ ಹಿಸ್ಟರಿ ಆಫ್ ಡೆಕ್ಕನ್, ಪುಟ ೧೫

೫. ಜೋಶಿ ಶಂ.ಬಾ., ಮಹಾರಾಷ್ಟ್ರದ ಮೂಲ, ೧೯೮೮, ಮಾನವಧರ್ಮ ಪ್ರತಿಷ್ಠಾನ, ಪುಟ ೨೫

೬. ಮಲ್ಲೇಪುರಂ ಜಿ. ವೆಂಕಟೇಶ, ಶಂಬಾ ಕೃತಿ ಸಂಪುಟ-೧, ೧೯೯೯, ಕನ್ನಡ ಪುಸ್ತಕ ಪ್ರಾಧಿಕಾರ, ಪುಟ ೧೧೮

೭. ಮಲ್ಲೇಪುರಂ ಜಿ. ವೆಂಕಟೇಶ, ಶಂಬಾ ಕೃತಿ ಸಂಪುಟ-೨, ೧೯೯೯, ಕನ್ನಡ ಪುಸ್ತಕ ಪ್ರಾಧಿಕಾರ, ಪುಟ ೧೯

೮. ಮಲ್ಲೇಪುರಂ ಜಿ. ವೆಂಕಟೇಶ, ಶಂಬಾ ಸಂಸ್ಕೃತಿ ಚಿಂತನೆ, ೧೯೯೮, ಸ್ವಪ್ನ ಬುಕ್ ಹೌಸ್, ಪುಟ ೫೪, ೫೫

೯. ಮಲ್ಲೇಪುರಂ ಜಿ. ವೆಂಕಟೇಶ, ಶಂಬಾ ಕೃತಿ ಸಂಪುಟ-೧, ೧೯೯೯, ಕನ್ನಡ ಪುಸ್ತಕ ಪ್ರಾಧಿಕಾರ, ಪುಟ ೩೪೮, ೩೪೯

೧೦. ಅದೇ ಪುಟ

೧೧. ರಾಜನ್ ಎಮ್.ಎ.ಎಸ್., ಕರ್ನಾಟಕದಲ್ಲಿ ಭೂಸುಧಾರಣೆ, ೧೯೮೭, ಐ.ಬಿ.ಹೆಚ್. ಪ್ರಕಾಶನ ಬೆಂ., ಪುಟ ೨೦೭, ೨೦೮

೧೨. ಅದೇ. ಪುಟ ೨೦೭, ೨೦೮

೧೩. ಶಾಂತಕುಮಾರ ಕೆ. ಎನ್., ಮಯೂರ, ಡಿಸೆಂಬರ್ ೨೦೦೪ (ದುಡಿಯುವ ಕೈಗಳ ಹೋರಾಟದ ಕತೆ, ವಿಮರ್ಶೆ- ರಹಮತ್ ತರೀಕೆರೆ), ಪುಟ ೧೬

೧೪. ವಿಷ್ಣು ನಾಯ್ಕ, ದುಡಿಯುವ ಕೈಗಳ ಹೋರಾಟದ ಕಥೆ, ೨೦೦೪, ಡಾ. ದಿನಕರ ದೇಸಾಯಿ ಸ್ಮಾರಕ ಪ್ರತಿಷ್ಠಾನ ಅಂಕೋಲಾ, ಪುಟ ೧೮-೨೩

೧೫. ಜೋಶಿ ಶಂ.ಬಾ., ಕರ್ನಾಟಕದ ವೀರಕ್ಷತ್ರಿಯರು, ೧೯೩೬, ಮನೋಹರ ಗ್ರಂಥಭಂಡಾರ ಧಾರವಾಡ, ಪುಟ ೮

೧೬. ಮಲ್ಲೇಪುರಂ ಜಿ. ವೆಂಕಟೇಶ, ಶಂಬಾ ಕೃತಿ ಸಂಪುಟ-೧, ೧೯೯೯, ಕನ್ನಡ ಪುಸ್ತಕ ಪ್ರಾಧಿಕಾರ, ಪುಟ ೧೮೭

೧೭. ಅದೇ. ಪುಟ ೧೨೯

೧೮. ಜೋಶಿ ಶಂ.ಬಾ. (ಅನು: ಕೀರ್ತಿನಾಥ ಕುರ್ತಕೋಟಿ), ಮರ್‍ಹಾಟಿ ಸಂಸ್ಕೃತಿ, ೧೯೯೦, ಕನ್ನಡ ಸಾಹಿತ್ಯ ಅಕಾಡೆಮಿ, ಪುಟ ೪೯

೧೯. ಗುಂಜಾಳ ಎಸ್.ಆರ್. (ಸಂ), ಬೆಳಗಾವಿ ಬೆಳಕು, ೨೦೦೩, ಕನ್ನಡ ಸಾಹಿತ್ಯ ಪರಿಷತ್ತು, ಪುಟ ೪೮೩

೨೦. The Caste Disabilities Removal Act-1850
The Hindu Widows Remarriage Act-1856
The Civil Marriage Act-1872
The Child Marriage Restraint Act-1929. Etc.

೨೧. ವಿಜಯಶ್ರೀ ಸಬರದ, ಮಹಿಳೆ ಶೋಷಣೆ-ಸವಾಲುಗಳು, ೨೦೦೫, ಗುಲ್ಬರ್ಗಾ ವಿಶ್ವವಿದ್ಯಾಲಯ, ಪುಟ.೧೭೦, ೧೭೧

೨೨. The Prevention of Sati Act-1829
The Civil Marriage Act –1856
The Widow Remarriage Act-1856
The Prohibition of Child Marriage Act-1929 etc.

೨೩. ಇಂದಿರಾ ಆರ್., ಮಹಿಳೆ ಸಮಾಜ ಮತ್ತು ಸಂಸ್ಕೃತಿ, ೨೦೦೨, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪುಟ ೮೩

೨೪. ಉತ್ತರ ಕನ್ನಡ ಜಿಲ್ಲೆಯ ಸ್ವಾತಂತ್ರ್ಯ ಚಳುವಳಿ, ೧೯೯೧, ಕರ್ನಾಟಕ ವಿ.ವಿ. ಧಾರವಾಡ, ಪುಟ ೩೧-೫೦

೨೫. ಚಂದ್ರಶೇಖರ ಟಿ.ಆರ್., ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ನೆಲೆಗಳು, ಸಿವಿಜಿ ಪಬ್ಲಿಕೇಷನ್ಸ್, ೨೦೦೩, ಪುಟ ೧೨೦

೨೬. The Special Marriage Act-1954
    The Hindu Marriage Act-1955
    The Hindu Succession Act-1956
    The Suppression of Immoral Traffic of Woman and Girls Act-1956
    The Medical Termination of Pregnency Act-1971
    The Dowry Prohibition Act-1961 etc

೨೭. ಚಂದ್ರಶೇಖರ ಟಿ.ಆರ್., ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ನೆಲೆಗಳು, ೨೦೦೩, ಸಿವಿಜಿ ಪಬ್ಲಿಕೇಷನ್ಸ್ ಬೆಂ., ಪುಟ ೧೨೪

೨೮. ಜೋಶಿ ಶಂ.ಬಾ. (ಅನು: ಕೀರ್ತಿನಾಥ ಕುರ್ತಕೋಟಿ), ಮರ್‍ಹಾಟಿ ಸಂಸ್ಕೃತಿ, ೧೯೯೦, ಕರ್ನಾಟಕ ಸಾಹಿತ್ಯ ಅಕಾಡೆಮಿ, ಪುಟ ೪೪

೨೯. ಜೋಶಿ ಶಂ.ಬಾ., ಮಹಾರಾಷ್ಟ್ರದ ಮೂಲ, ೧೯೮೮, ಮಾನವ ಧರ್ಮ ಪ್ರಕಾಶನ, ಪುಟ ೩೫

೩೦. ಲೋಕಾಪುರ ರಂ. ಶಾ., ಹಳಗನ್ನಡ ಮತ್ತು ಮರಾಠಿ, ೧೯೯೪, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪುಟ ೩

೩೧. ಅದೇ. ಪುಟ ೧೫

೩೨. ಗುಂಜಾಳ ಎಸ್. ಆರ್. (ಸಂ), ಬೆಳಗಾವಿ ಬೆಳಕು, ೨೦೦೩, ಕನ್ನಡ ಸಾಹಿತ್ಯ ಪರಿಷತ್ತು, ಪುಟ ೪೮೬

೩೩. ಕೃಷ್ಣಮೂರ್ತಿ ಕಿತ್ತೂರ; ಗಳಗನಾಥರ ಕಾದಂಬರಿಗಳು, ೧೯೭೧, ಕರ್ನಾಟಕ ವಿ.ವಿ. ಧಾರವಾಡ, ಪುಟ ೬

೩೪. ಅದೇ. ಪುಟ ೨೧, ೨೨

೩೫. ಕೀರ್ತಿನಾಥ ಕುರ್ತಕೋಟಿ, ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ೨೦೦೨, ಮನೋಹರ ಗ್ರಂಥಮಾಲಾ, ಪುಟ ೧೩೫

೩೬. ಗುಂಜಾಳ ಎಸ್. ಆರ್. (ಸಂ), ಬೆಳಗಾವಿ ಬೆಳಕು, ೨೦೦೩, ಕನ್ನಡ ಸಾಹಿತ್ಯ ಪರಿಷತ್ತು, ಪುಟ ೪೮೫

೩೭. ಜದುನಾಥರಾವ್ ಸರಕಾರ (ಸರ್.) (ಅನು: ವಿ.ಸ. ವಾಕಸಕರ), ಶಿವಾಜಿ ಚರಿತ್ರ, ೧೯೧೯, ಪುಟ ೨೮೫

೩೮. ನಾಯಕ ಜಿ.ಹೆಚ್., ಶತಮಾನದ ಕನ್ನಡ ಸಾಹಿತ್ಯ, ೨೦೦೦, ಶ್ರೀ ರಾಘವೇಂದ್ರ ಪ್ರಕಾಶನ, ಪುಟ ೨

೩೯. ಅದೇ. ಪುಟ ೨

೪೦. ಶಾಂತಿನಾಥ ದೇಸಾಯಿ, ನವ್ಯ ಸಾಹಿತ್ಯ ದರ್ಶನ, ೨೦೦೪, ಸ್ವಪ್ನ ಬುಕ್ ಹೌಸ್, ಪುಟ ೬೮, ೬೯

೪೧. ಲೋಕಾಪುರ ರಂ. ಶಾ., ಹಳಗನ್ನಡ ಮತ್ತು ಮರಾಠಿ, ೧೯೯೪, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪುಟ ೨

೪೨. ಅದೆ. ಪುಟ ೨

೪೩. ಜೋಶಿ ಶಂ.ಬಾ. (ಅನು: ಕೀರ್ತಿನಾಥ ಕುರ್ತಕೋಟಿ), ಮರ್‍ಹಾಟಿ ಸಂಸ್ಕೃತಿ, ೧೯೯೦, ಕರ್ನಾಟಕ ಸಾಹಿತ್ಯ ಅಕಾಡೆಮಿ, ಪುಟ ೬೯, ೭೦

೪೪. ಚೆನ್ನಕ್ಕ ಪಾವಟೆ (ಎಲಿಗಾರ), ಸಂಸ್ಕೃತಿ, ಸಂಶೋಧನೆ, ೧೯೯೫, ಚನ್ನಗಂಗಾ ಪ್ರಕಾಶನ, ಪುಟ ೨೩೯

೪೫. ಜೋಶಿ ಜಿ.ಬಿ., ಪುಟ ಬಂಗಾರ-೩, ೧೯೮೭, ಮನೋಹರ ಗ್ರಂಥಮಾಲಾ, ಪುಟ ೧೧೯

೪೬. ಶ್ಯಾಮಚರಣ ದುಬೆ, ಭಾರತೀಯ ಸಮಾಜ, ೧೯೯೦, ನವದೆಹಲಿ, ಪುಟ ೬೭

೪೭. ಬಾಲ್ಯ ವಿವಾಹ ನಿಷೇಧ ಶಾಸನ-೧೮೨೯
    ವಿಶೇಷ ವಿವಾಹ ಕಾನೂನು-೧೯೫೪
    ಹಿಂದೂ ವಿವಾಹ ಕಾನೂನು-೧೯೫೫
    ಹಿಂದೂ ಉತ್ತರಾಧಿ ಕಾನೂನು-೧೯೫೬
    ವರದಕ್ಷಿಣೆ ನಿಷೇಧ ಕಾನೂನು-೧೯೬೧

೪೮. ಶಾಲಿನಿ ರಘುನಾಥ, ಭಾಷೆ-ಸಾಹಿತ್ಯ-ಸಂಸ್ಕೃತಿ, ಭಾರತಿ ಪ್ರಕಾಶನ, ಮೈಸೂರು, ೧೯೯೪, ಪುಟ ೯೧

೪೯. ಸಣ್ಣರಾಮ, ಲಂಬಾಣಿ ಸಂಸ್ಕೃತಿ, ೧೯೯೯, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಪುಟ ೧೧೦, ೧೧೪

೫೦. ಜೋಶಿ ಶಂ.ಬಾ. (ಅನು: ಕೀರ್ತಿನಾಥ ಕುರ್ತಕೋಟಿ), ಮರ್‍ಹಾಟಿ ಸಂಸ್ಕೃತಿ, ೧೯೯೦, ಕರ್ನಾಟಕ ಸಾಹಿತ್ಯ ಅಕಾಡೆಮಿ, ಪುಟ ೨೨೮ - ೨೩೦

೫೧. ಬಸವರಾಜ ಸಬರದ, ಸಮುದಾಯ ಮತ್ತು ಸಂಸ್ಕೃತಿ, ೨೦೦೨, ಕ.ಸಾ.ಪ. ಬೆಂಗಳೂರು, ಪುಟ ೭೮

೫೨. ಕಂಬಾರ ಚಂದ್ರಶೇಖರ (ಸಂ), ಕನ್ನಡ ಜನಪದ ವಿಶ್ವಕೋಶ, ಸಂಪುಟ ೧ ಮತ್ತು ೨, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ಪುಟ ೧೦೩೫

೫೩. ನಾಯಕ. ಎನ್.ಆರ್., ಕರ್ನಾಟಕದ ಶಕ್ತಿ ದೇವತೆಗಳು, ೧೯೮೩, ಐ.ಬಿ.ಹೆಚ್. ಪ್ರಕಾಶನ, ಪುಟ ೪

೫೪. ಅದೇ. ಪುಟ ೪, ೫

೫೫. ಮೊಗಳ್ಳಿ ಗಣೇಶ್ (ಸಂ), ದಲಿತ ಚಿಂತನೆ, ೨೦೦೨, ಪ್ರಸಾರಾಂಗ ಕ.ವಿ.ವಿ. ಹಂಪಿ, ಪುಟ ೨೩೨

೫೬ ಶಾಲಿನಿ ರಘುನಾಥ, ಭಾಷೆ-ಸಾಹಿತ್ಯ-ಸಂಸ್ಕೃತಿ, ೧೯೯೪, ಭಾರತಿ ಪ್ರಕಾಶನ, ಮೈಸೂರು, ಪುಟ ೯೨

೫೭ ಮಹಮೂದ್ ಟಿ.ಕೆ., (ಸಂ.), ಉತ್ತರ ಕನ್ನಡ ದರ್ಶನ, ೧೯೮೭, ಕನ್ನಡ ಸಾಹಿತ್ಯ ಪರಿಷತ್, ಪುಟ ೧೪೮

೫೮. ಅದೇ. ಪುಟ ೭೯

## ಅಧ್ಯಾಯ ಮೂರು

# ಮುಂಬಯಿ ಕರ್ನಾಟಕ : ಕಥನ ಸಾಹಿತ್ಯ ಸಂವೇದನೆಗಳ ಸ್ವರೂಪ

ಸಾಹಿತ್ಯ ಹಾಗೂ ಜೀವನ ಬೇರೆ ಬೇರೆ ಅಲ್ಲ. ಅದು ಜೀವನದ ಸಾದೃಶ್ಯ ರೂಪ. ಒಂದು ಪ್ರದೇಶದ ಸಾಹಿತ್ಯವೆಂದರೆ ಆ ಭಾಗದ ಚಾರಿತ್ರಿಕ, ಭೌಗೋಳಿಕ, ಸಾಮಾಜಿಕ ಸ್ಥಿತಿಗತಿಗಳನ್ನು, ಆಗುಹೋಗುಗಳನ್ನು ಒಳಗೊಂಡ ಸೃಜನಶೀಲ ಲಿಖಿತ/ಮೌಖಿಕ ಸಂಗ್ರಹವಾಗಿದೆ. ಮುಂಬಯಿ ಕರ್ನಾಟಕದ ಆಧುನಿಕ ಕಥನ ಸಾಹಿತ್ಯ ರಚನೆ ವಿಪುಲವೂ, ಗಟ್ಟಿ ಸ್ತರಗಳ ಮೇಲೆ ರಚಿಸಿದ್ದೂ ಆಗಿದೆ. ಇಂತಹ ಕಥನ ಸಾಹಿತ್ಯದ ಬೃಹತ್ತತೆಯನ್ನು ಅರಿತು, 'ಸಾಹಿತ್ಯ ಬೆಳೆದು ಬಂದ ದಾರಿ' ಅಥವಾ 'ಸಾಹಿತ್ಯ ಸಾಗಿ ಬಂದ ರೀತಿ'ಯ ಮಾದರಿಯ ಅಧ್ಯಯನ ಈ ಪ್ರಬಂಧದ ವ್ಯಾಪ್ತಿಗೆ ಭಾರವಾದದ್ದೆಂಬ ಅರಿವಿನೊಂದಿಗೆ, ಸಾಹಿತ್ಯ ಸ್ವರೂಪದ ಅಧ್ಯಯನದ ಧೋರಣೆಯನ್ನು ನಿರ್ಧರಿಸಲಾಗಿದೆ. ಅಧ್ಯಯನದ ಮುಖ್ಯ ಧೋರಣೆ, ಬೇರೆ ಬೇರೆ ಕಾಲ ಖಂಡಗಳಲ್ಲಿಯ ಕತೆ, ಕಾದಂಬರಿಗಳನ್ನು ತೆಗೆದುಕೊಂಡು ಅವು ಜೀವನಾನುಭವ ರೂಪಿಸಿದ ರೀತಿಯನ್ನು ಅಭ್ಯಾಸ ಮಾಡುವುದು. ಈ ಜೀವನಾನುಭವ ಸ್ವರೂಪಕ್ಕೂ ಅದರೊಳಗಿನ ಪ್ರಮುಖ ಒತ್ತಡಗಳಿಗೂ, ಅದು ವ್ಯಕ್ತವಾಗುವ ಸಾಹಿತ್ಯಿಕ ರೀತಿಗೂ ಅನ್ಯೋನ್ಯವಾದ ಸೈದ್ಧಾಂತಿಕ ಸಂಬಂಧವಿರುವುದು ಗಮನಾರ್ಹ. ಈ ಅರಿವಿನೊಂದಿಗೆ ಮುಂಬಯಿ ಕರ್ನಾಟಕದ ಕಥನ ಸಾಹಿತ್ಯದ ಸ್ವರೂಪ, ಸಂವೇದನೆಗಳನ್ನು ಅಲ್ಲಿಯ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಪ್ರಶ್ನೆಗಳೊಂದಿಗೆ ಚರ್ಚಿಸುವುದು ಈ ಅಧ್ಯಾಯದ ಆಶಯವಾಗಿದೆ.

### ಉತ್ಪಾದನಾ ವ್ಯವಸ್ಥೆ ಮತ್ತು ಕಥನ ಸಾಹಿತ್ಯ ಸಂಬಂಧಗಳು

ಸಾಮಾನ್ಯ ಜನತೆಯ ಸಮಗ್ರ ಜೀವನ ಕ್ರಮವನ್ನು ಸಂಸ್ಕೃತಿ ಎಂದು ಕರೆಯಲಾಗಿದೆ. ಇದರಲ್ಲಿ ಮನುಷ್ಯ ನಿರ್ಮಿತ ಮೂರ್ತ ಮತ್ತು ಅಮೂರ್ತ ಪದಾರ್ಥಗಳೆಲ್ಲವೂ ಸೇರುತ್ತವೆ ಎಂಬುದು ಸಂಸ್ಕೃತಿ ವ್ಯಾಖ್ಯಾನಗಳ ಒಟ್ಟು ಸಾರವಾಗಿದೆ. ಮನುಷ್ಯ ಸಂಸ್ಕೃತಿಯು ಅವರ ನಡುವಿನ ಸಾಮಾಜಿಕ ಸಂಬಂಧಗಳಿಗೆ ಹೆಣೆದ ಹೆಣಿಗೆಯಾಗಿದೆ. ಈ ಸಂಬಂಧಗಳು ಉತ್ಪಾದಕ ಶಕ್ತಿಗಳನ್ನು ಆಧರಿಸಿರುತ್ತವೆ. ಉದಾಹರಣೆಗೆ ಉತ್ಪಾದಕ ಶಕ್ತಿಯಾದ ಭೂಮಿಯ ಮಾಲಿಕತ್ವ ಹೊಂದಿದವನು ಭೂಮಾಲೀಕನೆನಿಸಿಕೊಂಡು, ಭೂಮಿಯ ಉತ್ಪನ್ನದ ಬಹುಪಾಲು ಪಡೆದು ಒಡೆಯನೆನಿಸಿಕೊಳ್ಳುತ್ತಾನೆ. ಇದೇ ಭೂಮಿಯಲ್ಲಿ ದುಡಿಯುವ ಕೃಷಿ ಕಾರ್ಮಿಕ ಕಡಿಮೆ ಪ್ರತಿಫಲವನ್ನು ಪಡೆದು ಬಡವನೆನಿಸುತ್ತಾನೆ. ಸಂಪತ್ತು ಸಮಾಜದ ಕೆಲವೆ ವ್ಯಕ್ತಿಗಳಲ್ಲಿ ಕೇಂದ್ರೀಕೃತವಾಗಿ ಶೋಷಕ ಮತ್ತು ಶೋಷಿತ ವರ್ಗಗಳ ನಿರ್ಮಾಣವಾಗುತ್ತದೆ. "ಹೀಗೆ ಮನುಷ್ಯ-ಮನುಷ್ಯರ ನಡುವೆ ಏರ್ಪಡುವ ಅಸಮಾನತೆಯ ಸಾಮಾಜಿಕ ಸಂಬಂಧವು ಉತ್ಪಾದಕ ಶಕ್ತಿಗಳ ಮೇಲೆ ಸಾಧಿಸಿದ ಹತೋಟಿ ಮೂಲದ್ದಾಗಿದೆ"[೧] ಎಂಬುದು ಇಲ್ಲಿ ಗಮನಾರ್ಹ.

ಮಾರ್ಕ್ಸ್‌ನ ಪ್ರಕಾರ ಸಾಮಾಜಿಕ ಪ್ರಕ್ರಿಯೆಯ ಕೇಂದ್ರ ರಚನೆ ಆರ್ಥಿಕವಾದುದಾಗಿದೆ. ಈ ದೃಷ್ಟಿಯನ್ನು ಕೇಂದ್ರೀಕರಿಸಿ, 'ಆಳುವವರ ಮತ್ತು ಆಳಿಸಿಕೊಳ್ಳುವವರ ಸಂಘರ್ಷದ ಸಂಬಂಧದಲ್ಲಿ ಕಾದಂಬರಿ (ಕಥನ

ಸಾಹಿತ್ಯ) ಹುಟ್ಟುತ್ತದೆ” ಎಂದು ವಿಮರ್ಶಕರಾದ ಡಿ.ಆರ್. ನಾಗರಾಜ ಹೇಳುತ್ತಾರೆ. ಈ ಅಭಿಪ್ರಾಯವನ್ನು ಹಲವು ವಿದ್ವಾಂಸರು ಒಪ್ಪುವುದಿಲ್ಲ ಮತ್ತು ತಿರಸ್ಕರಿಸುವುದೂ ಇಲ್ಲ. ಈ ಕುರಿತು ಚರ್ಚಿಸುತ್ತ, ಜಿ. ಎಚ್. ನಾಯಕರು 'ಮನುಷ್ಯ-ಸಮಾಜ ಇರುವಲ್ಲೆಲ್ಲ ಕಾದಂಬರಿ (ಕಥನ ಸಾಹಿತ್ಯ) ಹುಟ್ಟುತ್ತದೆ ಎಂದು ಹೇಳಿದಷ್ಟೆ ಅದು ಸರಳ ಹೇಳಿಕೆಯಾಗದೆ? ಸಂಘರ್ಷ ಎಂಬ ಮಾತನ್ನು ಆಳುವವನ ಮತ್ತು ಆಳಿಸಿಕೊಳ್ಳುವವನ ನಡುವಿನ ಬಹಿರಂಗ ಹೋರಾಟಕ್ಕೆ ಮಾತ್ರ ಸೀಮಿತಗೊಳಿಸದೆ, ವ್ಯಕ್ತಿಯ ಅಂತರಂಗದ ಹೋರಾಟವನ್ನೂ ಒಳಪಡಿಸಿ ವ್ಯಾಖ್ಯಾನಿಸಿದರೆ ಆಗ ಸಂಘರ್ಷ ಎಂಬ ಮಾತಿನ ಅರ್ಥವ್ಯಾಪ್ತಿ ಹೆಚ್ಚು ಸಮಗ್ರವಾದೀತು” ಎಂದು ಅಭಿಪ್ರಾಯಪಡುತ್ತಾರೆ. ಆದ್ದರಿಂದ (ಕಥನ ಸಾಹಿತ್ಯ, ಇದು ಸಾಹಿತ್ಯದ ಯಾವ ಪ್ರಕಾರವೂ ಆಗಿರಬಹುದೆಂಬುದು ಅಧ್ಯಯನದ ಅಭಿಪ್ರಾಯವಾಗಿದೆ) ಒಟ್ಟಿನಲ್ಲಿ ಆಳುವವರ ಮತ್ತು ಆಳಿಸಿಕೊಳ್ಳುವವರ ನಡುವಿನ ಒಳ-ಹೊರ ಸಂಘರ್ಷಗಳು ಕಥನ ಸಾಹಿತ್ಯದ ಹುಟ್ಟಿಗೆ ಕಾರಣ ಎನ್ನಬಹುದು. ಇದು ಉತ್ಪಾದಕ ಶಕ್ತಿ ಸಂಬಂಧದ ಜೊತೆಗೆ ಮಾನವೀಯ ಸಂಬಂಧ ಸಂಸ್ಥೆಗಳಾದ ಕೌಟುಂಬಿಕ, ಸಾಮಾಜಿಕ ವ್ಯವಸ್ಥೆಗಳನ್ನು ಒಳಗೊಂಡು ಒಂದೆಡೆ ಶೋಷಕರು ಇನ್ನೊಂದೆಡೆ ಶೋಷಿತರ ತುಮುಲ, ದ್ವಂದ್ವಗಳನ್ನು ಇಲ್ಲಿ ಗುರುತಿಸಬಹುದಾಗಿದೆ.

'ಕಥನ ಸಾಹಿತ್ಯದ ಜನಪ್ರಿಯತೆಯನ್ನು ಎಲ್ಲ ವಿದ್ವಾಂಸರು, ವಿಮರ್ಶಕರು ವಾದಭೇದವಿಲ್ಲದೆ ಒಪ್ಪಿಕೊಳ್ಳುತ್ತಾರೆ ಮತ್ತು ಕತೆ, ಕಾದಂಬರಿ ಪ್ರಕಾರವನ್ನು ಮಧ್ಯಮ ವರ್ಗದ ಜನರ ಮಹಾಕಾವ್ಯ” ಎಂದೂ ಒಮ್ಮತಿಸುತ್ತಾರೆ. ಈ ಪ್ರಕಾರವನ್ನು ನಿರ್ಮಿಸುತ್ತಿರುವವರು ಮಧ್ಯಮ ವರ್ಗದ ಬುದ್ಧಿಜೀವಿಗಳಾದರೆ, ಓದುವವರು ಮಧ್ಯಮ ವರ್ಗಕ್ಕೆ ಸೇರಿದ ಅಕ್ಷರಸ್ಥರಾಗಿದ್ದಾರೆ. 'ಬದುಕಿನ ಸಂಬಂಧಗಳ ಬದಲಾಗುವ ಬಣ್ಣಗಳನ್ನು ಬಿಚ್ಚಿಡಲು ಕಾದಂಬರಿ ಅತ್ಯುತ್ತಮ ಮಾಧ್ಯಮ” ಎನ್ನುವ ಲಾರೆನ್ಸ್, 'ಕಾದಂಬರಿ ಬದುಕಿನ ಜ್ವಾಜ್ವಲ್ಯಮಾನ ಪುಸ್ತಕ' ಎನ್ನುತ್ತಾನೆ. ಸಾಹಿತ್ಯವನ್ನು ಶ್ರೀಸಾಮಾನ್ಯನ ಬಳಿಗೊಯ್ಯು ಸಾಧನೆ ಕಥನ ಸಾಹಿತ್ಯದ್ದಾಗಿದೆ ಮತ್ತು ಇಷ್ಟು ವಿಶಾಲವಾದ ಓದುಗ ವರ್ಗ ಸಾಹಿತ್ಯದ ಇನ್ನಾವ ಪ್ರಕಾರಕ್ಕೂ ಸಿಕ್ಕಿಲ್ಲ ಎನ್ನಬಹುದು. ಸಣ್ಣಕಥೆ, ನೀಳ್ಗತೆ, ಕಾದಂಬರಿಗಳ ರೂಪದಲ್ಲಿ ಇಂದು ಕಥನ ಸಾಹಿತ್ಯವನ್ನು ಗುರುತಿಸಬಹುದು. ಕಾದಂಬರಿ ಕುರಿತು ಹೆನ್ರಿ ಜೇಮ್ಸ್ ಹೇಳಿದ 'ಕಾದಂಬರಿ ಒಂದು ಸಜೀವ ವಸ್ತು. ಅದು ಇಡಿಯಾಗಿರುತ್ತದೆ. ಯಾವುದೇ ಸಜೀವ ಪ್ರಾಣಿಯಂತೆ ಅದರ ಯಾವುದೇ ಭಾಗವನ್ನು ತೆಗೆದುಕೊಂಡರೂ ಅದರಲ್ಲಿ ಉಳಿದ ಭಾಗಗಳ ಅಂಶಗಳು ಇದ್ದೇ ಇರುತ್ತವೆ” ಎಂಬ ಮಾತನ್ನು ಕಥನ ಸಾಹಿತ್ಯದ ಎಲ್ಲ ಪ್ರಕಾರಗಳಿಗೂ ಅನ್ವಯಿಸಬಹುದಾಗಿದೆ.

ಕರ್ನಾಟಕವೂ ಸೇರಿದಂತೆ ಭಾರತೀಯ ಸಂದರ್ಭದಲ್ಲಿ ನಡೆದುಹೋದ ರಾಜಕೀಯ ವಿದ್ಯಮಾನಗಳನ್ನು ಪರಿಶೀಲಿಸಿದಾಗ, ಆಧುನಿಕ ಸಾಹಿತ್ಯ ನಿರ್ಮಾಣಗೊಂಡ ಕಾಲಘಟ್ಟದ ಉತ್ಪಾದನಾ ಸಂಬಂಧಗಳ ಸ್ಥಿತ್ಯಂತರಗಳನ್ನು ಮೂರು ಘಟಕ(ಜಮೀನ್ದಾರಿ, ಬಂಡವಾಳಶಾಹಿ, ಸಮಾಜವಾದಿ ಘಟ್ಟ)ಗಳಾಗಿ ವಿಂಗಡಿಸಬಹುದು. ಈ ಕಾಲದ ಕಥನ ಸಾಹಿತ್ಯವನ್ನು ನಿರ್ಮಿಸಿದವರ (ಅಭಿವ್ಯಕ್ತಿ), ಗ್ರಹಿಸಿದವರ (ಅನುಭವಿಸಿದವರ) ಸಂವೇದನೆಗಳು ಸಹ ಆಯಾ ಕಾಲಘಟ್ಟದ ಸಮಾಜೋ-ಧಾರ್ಮಿಕ, ಆರ್ಥಿಕ, ರಾಜಕೀಯ ಸಂಬಂಧಗಳೊಂದಿಗೆ ಬಂಧಿಯಾಗಿರುವುದೂ ಕಂಡುಬರುತ್ತದೆ.

### ೧. ಸಂಕ್ರಮಣ ಕಾಲದ ಕಥನ ಸಾಹಿತ್ಯ ಮತ್ತು ಸಾಹಿತ್ಯ ಸಂವೇದನೆಗಳು

ಮನುಷ್ಯ ಮತ್ತು ಉತ್ಪಾದನಾ ಶಕ್ತಿಗಳ ನಡುವೆ ಏರ್ಪಡುವ ಮನುಷ್ಯ ಸಂಬಂಧಗಳು ಮತ್ತು ಅವುಗಳಲ್ಲಿ ತಲೆದೋರುವ ಬದಲಾವಣೆಗಳು ಚರಿತ್ರೆಯು ತನ್ನ ಒಂದು ಘಟ್ಟದಿಂದ ಇನ್ನೊಂದು ಘಟ್ಟಕ್ಕೆ ಹೊರಳುವ ಸ್ಥಿತ್ಯಂತರಕ್ಕೆ ಕಾರಣವಾಗುತ್ತದೆ. ಕಾರಣ ಸಂಸ್ಕೃತಿಯ ಸಂರಚನೆ ಮತ್ತು ಅದರ ಸಂವೇದನೆಯು ಒಂದು ಘಟ್ಟದಿಂದ ಇನ್ನೊಂದು ಘಟ್ಟಕ್ಕೆ ಬದಲಾವಣೆಯಾಗುತ್ತದೆ ಎನ್ನಬಹುದು. ಜೊತೆಗೆ ಸಾಹಿತ್ಯ ಸಂವೇದನೆಗಳೂ ತಮ್ಮ ವ್ಯತ್ಯಸ್ತವನ್ನು ಕಂಡುಕೊಳ್ಳುತ್ತವೆ. ಭಾರತೀಯ ಸಂದರ್ಭದಲ್ಲಿ ಸಂಸ್ಕೃತಿ, ಸಾಹಿತ್ಯ ಸಂವೇದನೆಗಳೊಂದಿಗೆ ಭಾಷಾ ಸಂವೇದನೆಗಳೂ ಆಕಾರ ಪಡೆದುದನ್ನು ಕನ್ನಡದಂತಹ (ಅದರಲ್ಲೂ ಗಡಿಭಾಗದ ಸಾಹಿತ್ಯ) ಪ್ರಾದೇಶಿಕ ಸಾಹಿತ್ಯದಲ್ಲಿ ಗುರುತಿಸಬಹುದು. ಉದಾಹರಣೆಗೆ ವಸಾಹತುಪೂರ್ವ ಕಾಲದಲ್ಲಿದ್ದ ಚಂಪೂ, ವಚನ, ರಗಳೆ, ತ್ರಿಪದಿ, ಷಟ್ಪದಿ, ಸಾಂಗತ್ಯ, ಕಂದ ಮುಂತಾದ ಪ್ರಕಾರಗಳಿಂದ ಬಿಡುಗಡೆಗೊಂಡು ರಚಿತವಾದ ಆಧುನಿಕ ಸಾಹಿತ್ಯ ರಚನಾ ಕಾಲವನ್ನು ಸಂಕ್ರಮಣ ಕಾಲವೆಂದು, ರಚನಾಕಾರರನ್ನು ಆಧುನಿಕ ಸಾಹಿತ್ಯದ ಮೊದಲಿಗರೆಂದು ಕರೆಯಲಾಗಿದೆ. ಮುಂಬಯಿ ಕರ್ನಾಟಕದ

ಮೊದಲಿಗರ ಕಥನ ಸಾಹಿತ್ಯವನ್ನು, ಅದನ್ನು ಗ್ರಹಿಸುವ ಮಧ್ಯಮ ವರ್ಗದ ಜನರ ಸಂವೇದನೆಗಳನ್ನು ಐತಿಹಾಸಿಕ, ಸಾಮಾಜಿಕ ಕಾದಂಬರಿಗಳ ಹಿನ್ನೆಲೆಯಲ್ಲಿ ಇಲ್ಲಿ ವಿಶ್ಲೇಷಿಸಬೇಕಾಗುತ್ತದೆ.

ಕನ್ನಡ ಸಾಹಿತ್ಯದ ಸಂದರ್ಭದಲ್ಲಿ, ಮುಂಬಯಿ ಕರ್ನಾಟಕದ ಕಥನ ಸಾಹಿತ್ಯದ ಮೊದಲ ಬರಹಗಾರರು ಮತ್ತು ಅವರ ಕೃತಿ ಕುರಿತು ಚರ್ಚಿಸುವ ಮೊದಲು, ಯಾವ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಹಿನ್ನೆಲೆಯಲ್ಲಿ ಈ ಮೊದಲ ಕೃತಿಗಳು ಜನಿಸಿ ಬಂದವು ಎಂಬುದರ ಕುರಿತು ಚರ್ಚಿಸುವ ಅಗತ್ಯವಿದೆ. ಯಾಕೆಂದರೆ ಆ ಕಾಲದ ಉತ್ತರ, ವಾಯುವ್ಯ ಕರ್ನಾಟಕದ ರಾಜಕೀಯ, ಆರ್ಥಿಕ, ಭಾಷಾ ಸಂಬಂಧಗಳು ಮೈಸೂರು, ಮಂಗಳೂರು ಭಾಗದ ಕರ್ನಾಟಕದ ಸ್ಥಿತಿಗಿಂತ ತುಂಬ ಭಿನ್ನವಾದವುಗಳಾಗಿದ್ದವು. ಪೇಶ್ವೆಯರ ಆಡಳಿತ ಕಾಲದಲ್ಲಿ ಈ ಭಾಗದಲ್ಲಿ ಎಂಟು ರಾಜ್ಯಗಳಿದ್ದು, ನಾಡಿನೊಂದಿಗೆ ನುಡಿ(ಭಾಷೆ)ಯ ಛಿದ್ರೀಕರಣದ ಅನುಭವವನ್ನು ಈ ಭಾಗದ ಜನರು ಇತಿಹಾಸದಿಂದ ಅನುಭವಿಸಿದ್ದರು. ಮುಂಬೈ ಕರ್ನಾಟಕವೆಂಬ ಹೆಸರಿನಡಿ ಬ್ರಿಟೀಶರ ರಾಜ್ಯಾಡಳಿತದಲ್ಲಿ ಈಗಿನ ಧಾರವಾಡ, ವಿಜಾಪುರ, ಉತ್ತರ ಕನ್ನಡ, ಬೆಳಗಾವಿ ಜಿಲ್ಲೆಗಳು ಸೇರಿದ್ದು ಇವುಗಳ ಆಡಳಿತ ಕೇಂದ್ರ ಮುಂಬಯಿಯಾಗಿತ್ತು. ಈ ಜಿಲ್ಲೆಗಳನ್ನು ದಕ್ಷಿಣದ ಮಹಾರಾಷ್ಟ್ರ ಎಂದು ಕರೆಯಲಾಗುತ್ತಿದ್ದು, ಇಂದಿನ ಹುಬ್ಬಳ್ಳಿ ಧಾರವಾಡದಂತಹ ಶುದ್ಧ ಕನ್ನಡದ ನೆಲದಲ್ಲಿ ಒಂದೂ ಕನ್ನಡ ಶಾಲೆ ಇರಲಿಲ್ಲ. ಇಡೀ ಪ್ರದೇಶದಲ್ಲಿ ಎರಡು ಮರಾಠಿ ಶಾಲೆಗಳಿದ್ದವು. ಮೊದಲ ಕನ್ನಡ ಶಾಲೆ ಆರಂಭಗೊಂಡಿದ್ದು ೧೮೩೬ರಲ್ಲಿ[೪] ಅಂದರೆ ಅಂದಿನ ಕನ್ನಡದ ಶೋಚನೀಯ ಸ್ಥಿತಿ ಅರ್ಥವಾಗುತ್ತದೆ. ಇಲ್ಲಿ ಒಂದೂ ಕನ್ನಡ ಪತ್ರಿಕೆಗಳ ಸುಳಿವಿರಲಿಲ್ಲ. 'ಮುಂಬಯಿ ಪ್ರಾಂತದ ಗೆಜೆಟಿಯರ್ ಪ್ರಕಾರ (೧೮೮೪, ಪುಟಗಳು ೬೧೩, ೭೨೧) ಬ್ರಾಹ್ಮಣರು ಓದುತ್ತಿದ್ದುದು ಮರಾಠಿಯಲ್ಲಿ ಅಚ್ಚಾದುದನ್ನು ಮಾತ್ರ, ಕನ್ನಡಿಗರು ವೃತ್ತ ಪತ್ರಿಕೆ ಓದುವುದರಲ್ಲಿ ಯಾವುದೇ ಆಸಕ್ತಿಯನ್ನು ತೋರುತ್ತಿರಲಿಲ್ಲ'[೫] ಇಂತಹ ವಿಷಮ, ಸಂದಿಗ್ಧ ಸ್ಥಿತಿಯಲ್ಲಿ ತಮ್ಮ ವಿಶಿಷ್ಟ ಕನ್ನಡತನವನ್ನು ಉಳಿಸಿಕೊಳ್ಳಲು ಈ ಭಾಗದ ಜನರು ಹೋರಾಡಿದರು. ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡದ ಟ್ರೇನಿಂಗ್ ಕಾಲೇಜು, ಅಗಡಿಯ ಮಠಗಳು ಈ ಚಟುವಟಿಕೆಗಳ ಹಿನ್ನೆಲೆಯಲ್ಲಿ ಮಹತ್ವದ ಪಾತ್ರಗಳನ್ನು ವಹಿಸಿರುವುದು ಕಾಣಿಸುತ್ತದೆ. ಮರಾಠಿ ಭಾಷಾ ಪ್ರಭಾವ, ತಿಲಕರ ಕೇಸರಿ ಪತ್ರಿಕೆಯ ಪ್ರಭಾವ, ಕರಾವಳಿ ತೀರದಲ್ಲಿ ಕೊಂಕಣಿ ಭಾಷೆಯ ಪ್ರಭಾವಗಳು ಇವರ ಸಾಂಸ್ಕೃತಿಕ ವಲಯದಲ್ಲಿ ದಾಖಲಾಗಿವೆ. ಈ ಭಾಗದಿಂದ ಕತೆ, ಕಾದಂಬರಿ ರಚನೆ ಮಾಡಿದವರಲ್ಲಿ ಕೆರೂರು ವಾಸುದೇವಾಚಾರ್ಯರು, ಗಳಗನಾಥರು ಮೊದಲಿಗರಾದರೆ, ನಂತರದ ಸ್ಥಾನ ಎಂ. ಎನ್. ಕಾಮತರು ಮತ್ತು ಟೇಂಗ್ಸೆ ಗೋವಿಂದರಾಯರಿಗೆ ಸಲ್ಲುತ್ತದೆ.

ಸನಾತನ ಧರ್ಮದ ಮೌಲ್ಯಗಳನ್ನು ಒಪ್ಪಿಕೊಂಡು ಬರೆಯುತ್ತಿದ್ದ ಈ ಕಾಲದ ಲೇಖಕರಿಗೂ ಅವರ ವಾಚಕ ವರ್ಗಕ್ಕೂ ಸಾಂಸ್ಕೃತಿಕ ವಿರೋಧವಿರಲಿಲ್ಲ. ಪಂಡಿತ ಪಾಮರರಿಬ್ಬರನ್ನೂ ರಂಜಿಸ ಹೊರಟ ಉದ್ದೇಶ ಇವರ ಬರಹದಲ್ಲಿ ಕಾಣುತ್ತದೆ. ಆ ಕಾರಣಕ್ಕಾಗಿಯೇ ಇವರು ತಮ್ಮ ಕೃತಿಗಳಿಗೆ 'ಇಂದಿರಾ ಬಾಯಿ ಅಥವಾ ಸದ್ಧರ್ಮ ವಿಜಯ', 'ಕುಮುದಿನಿ ಅಥವಾ ದಾಲಕ್ಕೆ ಬಡಿದಾಟ' ಮುಂತಾದ ದ್ವಿಸ್ತರೀಯ ಹೆಸರುಗಳನ್ನು ಕೊಟ್ಟದ್ದುಂಟು. ಸಮಾಜದ ನೈತಿಕ ಮಟ್ಟವನ್ನು, ಅಭಿರುಚಿಯನ್ನು, ಮನೋರಂಜನದ ಸ್ತರವನ್ನು ಸಂಸ್ಕರಿಸಬೇಕೆಂಬ ಉದ್ದೇಶವನ್ನು ಆ ಕಾಲದ ಲೇಖಕರು ಹೊಂದಿದ್ದರಾದರೂ, ಅವರು ತಮ್ಮ ವಾಚಕ ವರ್ಗದ ಮಧ್ಯದಲ್ಲಿದ್ದುಕೊಂಡೇ ತಮ್ಮ ಕೃತಿಗಳನ್ನು ರಚಿಸಿದರು. ಈ ದೃಷ್ಟಿಯಿಂದ ಕಾದಂಬರಿ ಕಲೆಗೆ ಆ ಕಾಲದಲ್ಲಿ ಸಾಮಾಜಿಕ ಸ್ವರೂಪವಿತ್ತು ಎನ್ನುವುದನ್ನು ಅಲ್ಲಗಳೆಯಲಾಗುವುದಿಲ್ಲ. ಆದರೆ ಯಾವ ರೀತಿಯ ಸಾಮಾಜಿಕ ಸ್ವರೂಪ? ಮೇಲ್ವರ್ಗದ್ದೆ? ಕೆಳವರ್ಗದ್ದೇ? ಎಂಬುದೂ ಸಹ ಚರ್ಚಿಸತಕ್ಕ ವಿಷಯವಾಗಿದೆ. ಈ ಕಾಲದಲ್ಲಿ ಪ್ರಕಟವಾದ ಕಾದಂಬರಿಗಳಲ್ಲಿ ದಲಿತರ, ಅಸ್ಪೃಶ್ಯರ, ಕೆಳವರ್ಗದ ಜನತೆಯ ಸಾಮಾಜಿಕ ಬದುಕು, ಜೀವನ ವಿಧಾನಗಳ ಚರ್ಚೆಯಾಗಿದ್ದುವೆ, ಈ ಕಾಲದ ಕಾದಂಬರಿಗಳ ಪ್ರಭಾವ ಈ ವರ್ಗದ ಜನರ ಮೇಲೆ ಯಾವ ಪರಿಣಾಮ ಬೀರಿದ್ದವು ಮತ್ತು ಯಾವ ವರ್ಗದ ಜನರ ಮೇಲೆ ಪರಿಣಾಮ ಬೀರಿದ್ದವು ಎಂಬುದೂ ಸಹ ಚರ್ಚಿಸಬೇಕಾದ ವಿಷಯವಾಗಿದೆ.

ಗಳಗನಾಥರು ಯಾವ ಉದ್ದೇಶದಿಂದ ಕಾದಂಬರಿ ರಚನೆಗೆ ಕೈಹಾಕಿದರು ಎಂಬ ಪ್ರಶ್ನೆಯೊಂದಿಗೆ ಅವರ ಒಟ್ಟು ಸಾಹಿತ್ಯದ ವಿಮರ್ಶೆಯ ಚರ್ಚೆಗೆ ಕೈಹಾಕುವುದು ಒಳಿತಾಗುತ್ತದೆ. ಅವರು ತಮ್ಮ ಕೃತಿಗಳಲ್ಲಿ ಒಂದೆಡೆ, 'ಮಾಧವ ಕರುಣಾವಿಲಾಸ'ವನ್ನು 'ಪ್ರಚಂಡ ಸುರಸ ತಾತ್ತ್ವಿಕ ಐತಿಹಾಸಿಕ ಕಾದಂಬರಿ' ಎಂದು

ಕರೆದುಕೊಂಡಿದ್ದಾರೆ. ೧೮೯೮ರಲ್ಲಿ ಪ್ರಕಟಿಸಿದ ಪ್ರಪ್ರಥಮ ಕಾದಂಬರಿ 'ಪ್ರಬುದ್ಧ ಪದ್ಮನಯನೆ'ಯ ಪ್ರಸ್ತಾಪದಲ್ಲಿಯೇ ಅವರು, 'ವಾಚನಾಭಿರುಚಿ ಇಲ್ಲದ ಜನರಲ್ಲಿ ವಾಚನಾಭಿರುಚಿಯನ್ನು ಹುಟ್ಟಿಸಲಿಕ್ಕೂ, ಉದ್ಯೋಗಾತಿಶಯದಿಂದ ಶ್ರಾಂತರಾದವರಿಗೆ ವಿಶ್ರಾಂತಿಯಲ್ಲಿ ಆನಂದಗೊಳಿಸಲಿಕ್ಕೂ, ಮನೋರಂಜನವಾಗಿ ನೀತಿಬೋಧವಾಗುವುದಕ್ಕೂ ಉತ್ತಮ ಕಾದಂಬರಿಗಳು ಬೇಕೇಬೇಕು'[೯] ಎನ್ನುತ್ತಾರೆ. ಆ ಕಾಲದ (ಸಾಮಾಜಿಕ ಕಾದಂಬರಿಯ) ಇನ್ನೊಬ್ಬ ಲೇಖಕರಾದ ಕೆರೂರು ವಾಸುದೇವಾಚಾರ್ಯರು ತಾವೇ ಹೇಳಿಕೊಂಡಿರುವಂತೆ 'ಸ್ವಧರ್ಮ, ಸ್ವಕುಲಾಚಾರಗಳನ್ನು ಬೇರೊರಸಿ ಕಿತ್ತು ಹಾಕಲೆತ್ನಿಸಿ ತಮ್ಮ ಪೂರ್ವಜರನ್ನು ಅಪಹಾಸ್ಯ ಮಾಡಿ ಉತ್‌ಶೃಂಖಲರಾಗಿ ತಿರುಗುವ ಪೋರರನ್ನು ತಮ್ಮ ಕತೆ, ಕಾದಂಬರಿಗಳ ಮೂಲಕ ಖಂಡಿಸುವುದೇ ಆಗಿದ್ದು, ಈ ನೆಲೆಯಲ್ಲಿ ಅಂದರೆ ಪಾಶ್ಚಾತ್ಯ ಸಂಸ್ಕೃತಿಯನ್ನು ಹಾಗೂ ಅದರಿಂದ ಪ್ರಭಾವಿತರಾದ ಹಿಂದೂ ಸುಧಾರಣಾವಾದಿಗಳನ್ನು ಸಂದೇಹಿಸುವ ನೆಲೆಯಲ್ಲಿ ಈ ಕಾದಂಬರಿಯು ರಚಿತವಾಗಿದೆ'[೧೦] ಎನ್ನುತ್ತಾರೆ. ಇದು ಇವರಿಬ್ಬರ ಕೃತಿಗಳ ಸಾಮಾಜಿಕ ಧೋರಣೆಯಾಗಿದೆ. ದಾಖಲಿಸಿದ ಇವರಿಬ್ಬರ ಮಾತುಗಳು ಅಂದು ಕಾದಂಬರಿ (ಕಥನ ಸಾಹಿತ್ಯ) ಪ್ರಯೋಗ ಕೆಳ, ದಲಿತ ವರ್ಗದ ಜನತೆಯನ್ನು, ಅವರ ಸಾಮಾಜಿಕ ಜೀವನವನ್ನು ಕುರಿತುದಾಗಿರಲಿಲ್ಲ ಎಂಬ ಅಂಶವನ್ನು ಒಪ್ಪಿಕೊಳ್ಳುತ್ತವೆ. ಅಲ್ಲದೆ, ಅಂದಿನ ಕಾಲದ ವರ್ಗ, ವರ್ಣ ವ್ಯವಸ್ಥೆಗಳ ಕುರಿತು ಈ ಬರಹಗಾರರ ಮನಸ್ಸಿನಲ್ಲಿದ್ದ ಜಿಜ್ಞಾಸೆಯನ್ನು ಹೀಗೆ ಪ್ರಸ್ತಾಪಿಸಬಹುದು. ಗಳಗನಾಥರು ತಮ್ಮ 'ಮಾಧವ ಕರುಣಾ ವಿಲಾಸ'ದಲ್ಲಿ ಮಾಧವಾಚಾರ್ಯರರ ಮುಖಾಂತರ, "ಒಟ್ಟಿಗೆ ಮಾನವ ಜಾತಿಯಲ್ಲಿ ವೈದಿಕರಾದ ನಮ್ಮ ದೃಷ್ಟಿಯಿಂದ ವೈದಿಕ, ಅವೈದಿಕ, ಅಸ್ಪೃಶ್ಯ ಎಂಬ ಮೂರು ವರ್ಗದ ಜನರು ಇರುತ್ತಿದ್ದು ವೈದಿಕರಲ್ಲಿಯ ಎರಡು ವರ್ಗಗಳನ್ನು ಹಿಡಿದರೆ ಮೇಲೆ ಹೇಳಿದಂತೆ-ಮುಸಲ್ಮಾನ, ಜಂಗಮ, ಬ್ರಾಹ್ಮಣ, ಒಬ್ಬ ಹೊಲೆಯ ಈ ನಾಲ್ವರು ಜತ್ತಾದರೆ ಜಗತ್ತೇ ಜತ್ತಾದಂತಾಗುತ್ತದೆ"[೧೧] ಎಂಬ ಮಾತುಗಳನ್ನಾಡಿಸಿ ವರ್ಣಾಶ್ರಮ ಧರ್ಮದ ಪಾಲನೆಗೆ ಅಂಟಿಕೊಳ್ಳುತ್ತಾರೆ. ಕೆರೂರ ಅವರು, 'ರಮಾಕಾಂತನೆದ್ದು ಈ ಸರ್ವಾರಿಷ್ಟಕಳೆ ಸುರಿಯುತ್ತಿದ್ದ ಬ್ರಾಹ್ಮಣಾಧಮನ ಹಸ್ತ ಸ್ಪರ್ಶ ಮಾಡಲಾರದೇ ದೂರದಿಂದಲೇ ನಮಸ್ಕಾರ ಮಾಡಿದ'[೧೨] ಎಂದು ಬರೆಯುತ್ತ ಅದೇ ನಿಲುವಿಗೆ ಅಂಟಿಕೊಳ್ಳುತ್ತಾರೆ. ಹಾಗೆಂದು ಇವರನ್ನು ಪ್ರತಿಗಾಮಿಗಳೆಂದು ಕರೆಯಲಾಗುವುದಿಲ್ಲ. ಇವರಲ್ಲಿ ರಾಷ್ಟ್ರಪ್ರೇಮ ಜಾಗೃತವಾಗಿದ್ದುದನ್ನು ಕಾದಂಬರಿಗಳ ಉದ್ದಕ್ಕೂ ಕಾಣುತ್ತೇವೆ. ಆದರೆ ಈ ಪ್ರೇಮ ಅವರ ಸಾಂಪ್ರದಾಯಿಕ ನೆಲೆಯನ್ನು ಬಿಟ್ಟುಕೊಡದ ಪ್ರಾತಿಪರತೆಯಾಗಿತ್ತು ಎಂಬುದು ಗಮನಾರ್ಹವಾಗಿದೆ.

ಸ್ವತಂತ್ರ ಕಾದಂಬರಿಗಳನ್ನು ಮತ್ತು ಅನುವಾದಿತ ಕಾದಂಬರಿಗಳನ್ನು ರಚಿಸಿದ ಗಳಗನಾಥರು ಕೈ ಚಾಚಿದ್ದು ತೀರಾ ಹತ್ತಿರದ ಮರಾಠಿ ಐತಿಹಾಸಿಕ ಸಾಹಿತ್ಯಕ್ಕೆ. ಶಿವಾಜಿ ಹಾಗೂ ಅವನ ಸರದಾರರ ಸಾಧನೆ ಕುರಿತು 'ಶಿವಪ್ರಭುವಿನ ಪುಣ್ಯ', 'ಮರಾಠರ ಅಭ್ಯುದಯ', 'ಸ್ವರಾಜ್ಯ ಸುಗಂಧ' ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಇವರು ರಚಿಸಿದ ಕರ್ನಾಟಕದ ಚರಿತ್ರೆಯನ್ನು ಆಧರಿಸಿದ ಮೊದಲ ಸ್ವತಂತ್ರ ಕಾದಂಬರಿ 'ಕುಮುದಿನಿ' ೧೯೧೩ರಲ್ಲಿ ಪ್ರಕಟವಾಗಿದೆ. ನಂತರ 'ಕನ್ನಡಿಗರ ಕರ್ಮಕಥೆ' ಮತ್ತು 'ಮಾಧವ ಕರುಣಾವಿಲಾಸ' ವಿಜಯನಗರದ ಹುಟ್ಟು, ವೈಭವ, ನಾಶಗಳ ಕುರಿತು ರಚಿಸಿದವುಗಳಾಗಿವೆ. 'ಕನ್ನಡ ಕಾದಂಬರಿಯ ಉನ್ನತ ಸೌಧದ ತಳಪಾಯವನ್ನು ಹಾಕಿದವರೇ ಗಳಗನಾಥರು. ಅದಕ್ಕೆಂದೇ ಅವರು ಕನ್ನಡ ಕಾದಂಬರಿಯ ಪಿತಾಮಹರು'[೧೩] ಎಂಬ ಅಭಿಪ್ರಾಯವೂ ಇದೆ. ಆದರೆ ಇದು ಒಂದು ವರ್ಗದವರ ವೈಭವೀಕರಣದ ಮಾತಾಗಬಹುದು. ಇವರ ಕೃತಿಗಳು ತಮ್ಮ ರೋಚಕತೆಯಿಂದ ಮಧ್ಯಮ ವರ್ಗದವರ ಆದರ ಪಡೆದಿರಬಹುದು. ಇವರು ರಚಿಸಿದ ಚಾರಿತ್ರಿಕ ಕಾದಂಬರಿಗಳು 'ಚಾರಿತ್ರಿಕ ರೋಮ್ಯಾನ್ಸ್' ಕಾದಂಬರಿಗಳೆಂದು ಹೆಸರಾಗಿರಬಹುದು. ಆದರೆ ಇವುಗಳಲ್ಲಿ ಸಾಮಾನ್ಯರ ಬದುಕಿನ ಕಷ್ಟ-ಸುಖ, ನೋವು-ನಲಿವು, ನಿತ್ಯ ಜೀವನದ ಹೋರಾಟಗಳ ಚಿತ್ರಣ ಕಾಣಸಿಗುವುದಿಲ್ಲ. ಗಳಗನಾಥ, ಕೆರೂರರ ಕಾದಂಬರಿಧಾರೆ ಮುಂಬಯಿ ಕರ್ನಾಟಕ ಪ್ರದೇಶದ ಮೊದಲ ಘಟ್ಟದ ಕಾದಂಬರಿಧಾರೆ ಎನ್ನಬಹುದು, ಆದರೆ ಪ್ರಧಾನಧಾರೆ ಎನ್ನಬಹುದೆ? ಈ ಧಾರೆಯು, ಕರ್ನಾಟಕ ಸಮಷ್ಟಿ ಹುಡುಕಾಟವು ೧೯ನೇ ಶತಮಾನದ ವಿದ್ಯಾವಂತ ವರ್ಗದ ಅಸ್ಮಿತೆಯ ಹುಡುಕಾಟದೊಂದಿಗೆ, ರಾಷ್ಟ್ರೀಯವಾದಿ ಚಳುವಳಿಯ ನೇರ ಸಂಬಂಧ ಪಡೆದಿದೆ ಎಂದು ಮಾತ್ರ ಒಪ್ಪಬಹುದಾಗಿದೆ.

ಈ ಕುರಿತು ಡಾ. ಡಿ. ಆರ್. ನಾಗರಾಜರು, 'ನಮ್ಮಲ್ಲಿ ಮೊದಲು ಉತ್ಕಟವಾಗಿ ಪ್ರಾರಂಭವಾದದ್ದೇ ಚಾರಿತ್ರಿಕ ಕಾದಂಬರಿಗಳು. Rise of individualನ ಜೊತೆಯಲ್ಲಿ ಕಾದಂಬರಿ ಪ್ರಕಾರದ ಉಗಮ ಎಂದು

ಪಾಶ್ಚಿಮಾತ್ಯ ವಿಮರ್ಶೆ ಹೇಳಿಕೊಂಡಿದೆ. ನಮ್ಮಲ್ಲಿ ಅದು ಕರ್ನಾಟಕದ ಸಮಷ್ಟಿ ಹುಡುಕಾಟದೊಡನೆ ಪ್ರಬುದ್ಧ ಸ್ಥಿತಿಗೆ ಬಂತು. ಕನ್ನಡ ಕಾದಂಬರಿಯ ಪರಂಪರೆಯ ಬೇರುಗಳು ಇಳಿದದ್ದೇ ಸಮಷ್ಟಿ ಕರ್ನಾಟಕದ ಹುಡುಕಾಟದಲ್ಲಿ. ಗಳಗನಾಥ ಈ ವಲಯದ ಪ್ರಮುಖ ಧ್ವನಿ[೧೪] ಎಂದಿದ್ದಾರೆ. ಅಂದಿನ ಸಾಮಾಜಿಕ, ರಾಜಕೀಯ ಸಂದರ್ಭಗಳ ಹಿನ್ನೆಲೆಯಲ್ಲಿ ಈ ಮಾತು ಒಪ್ಪುವಂತಹುದಾಗಿದೆ. ಕಾರಣ ಇವುಗಳನ್ನು ರಾಷ್ಟ್ರೀಯವಾದಿ, ಪುನರುತ್ಥಾನವಾದಿ ಕಾದಂಬರಿಗಳೆಂದೂ ಕರೆಯಬಹುದಾಗಿದೆ. ಮುಂಬಯಿ ಕರ್ನಾಟಕದ ಮೊದಲ ಕನ್ನಡ ಕಾದಂಬರಿಗಳು ಅನೇಕ ವಿಮರ್ಶಕರ ಹೊಗಳಿಕೆ ತೆಗಳಿಕೆಗಳನ್ನು ಪಡೆದುಕೊಂಡಿವೆ. ಬಹುತೇಕ ವಿಮರ್ಶೆಗಳು ಪ್ರಸ್ತುತ ಕಾದಂಬರಿಗಳು ರಚನೆಗೊಳ್ಳಲು ಕಾರಣವಾದ ಅಂಶಗಳು, ಕಾದಂಬರಿಯಲ್ಲಿನ ಲೋಪ-ದೋಷ, ಭಾಷಾಬಂಧ, ಲೇಖಕರ ಐತಿಹಾಸಿಕ/ಸಾಮಾಜಿಕ ದೃಷ್ಟಿಕೋನಗಳ ಕುರಿತ ಚರ್ಚೆಗಳಾಗಿರುವುದು ಶೋಚನೀಯವಾಗಿದೆ. ಮೊದಲ ಕಾದಂಬರಿಗಳು ಬಹುಸಂಖ್ಯಾತ, ಕೆಳ-ದಲಿತ ವರ್ಗಗಳನ್ನು ಪ್ರತಿನಿಧಿಸದ ಕುರಿತು ಪ್ರಶ್ನೆಗಳನ್ನು, ಅದಕ್ಕೆ ಉತ್ತರಗಳನ್ನು ವಿಮರ್ಶೆಗಳು ಹುಡುಕಿಲ್ಲ ಎನ್ನುವುದು ಸೋಜಿಗವೂ ಹೌದು!

ಆ ಕಾಲದ ಮುಂಬಯಿ ಕರ್ನಾಟಕದ ಸಾಮಾಜಿಕ ಕಾದಂಬರಿಗಳ ಕುರಿತು ಹೇಳುವುದಾದರೆ, ಕೆರೂರ ವಾಸುದೇವಾಚಾರ್ಯ ಅವರ ಕಾದಂಬರಿ 'ಇಂದಿರಾ' (ಮೊ.ಮು. ೧೯೦೮) ಭಾರತೀಯ ಕಥಾ ಸಂಪ್ರದಾಯಕ್ಕೆ ತೀರ ಹತ್ತಿರವಿದ್ದ ಸಾಮಾಜಿಕ ಕಥೆಯಾಗಿದೆ. ಶೃಂಗಾರ ಪ್ರಧಾನವಾದ, ಆದರ್ಶ, ವಾಸ್ತವಗಳ ನಡುವೆ ಸಂಬಂಧವನ್ನು ಕಲ್ಪಿಸುವ ಹಾಗೂ ಪಾತ್ರಗಳನ್ನು ವೈಚಾರಿಕ ಸಂಕೇತಗಳನ್ನಾಗಿ ಪರಿವರ್ತಿಸುವ ಮೂಲಕ ಇಂದಿರಾ ಅಂದಿನ ಮಹತ್ವದ ಕೃತಿಯಾಗಿದೆಯೆನ್ನಬಹುದು. ಮೇಲ್ನೋಟಕ್ಕೆ ವಿಭಿನ್ನವೆಂದು ತೋರುವ ಕೆರೂರರ ಇಂದಿರಾ ಕಾದಂಬರಿಯ ಮೂಲದ್ರವ್ಯವೂ ಆದರ್ಶದ ಪುನರುಜ್ಜೀವನವೆ ಆಗಿದೆ. ಇಲ್ಲಿನ ಕತೆಯ ನಾಯಕ, ನಾಯಕಿಯರು ಆಧುನಿಕ ವಿದ್ಯಾಭ್ಯಾಸವನ್ನು ಪಡೆದೂ ಪ್ರಾಚೀನ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿದ್ದಾರೆ. ಇಂದಿರಾ ಒಂದು ಬಗೆಯ ರಮ್ಯ ಪ್ರಣಯ ಕಥೆ. ಇಲ್ಲಿ ಪುನರ್‌ವಿವಾಹದ ಪ್ರಶ್ನೆ ಬರುತ್ತದೆ. ಆದರೆ ತೆಗಳಿಸಿಕೊಳ್ಳುವುದಕ್ಕಾಗಿಯೇ ಬರುವುದು ವಿಶೇಷವಾಗಿದೆ. ಪುನರ್‌ವಿವಾಹವಾಗಬಯಸುವ ಕಮಲೆ, ಆರ್ಯ ಸಮಾಜವನ್ನು ಹೋಲುವ ಉಪಾಸನಾ ಸಮಾಜ, ಆಧುನಿಕ ನಟೇಶ ಇವರೆಲ್ಲ ಕೃತಿಕಾರರ ಗೇಲಿಗೆ ಹಾಗೂ ಕುಚೋದ್ಯಕ್ಕೆ ವಿನಾಕಾರಣ ಗುರಿಯಾಗುತ್ತಾರೆ. ಈ ಗೇಲಿ ಪುರೋಗಾಮಿಗಳ ಟೀಕೆಯಾಗಿದ್ದು, ಒಂದು ನೂರು ವರ್ಷಗಳ ಕೆಳಗೆ ಇಂಗ್ಲೀಷ್ ವಿದ್ಯಾಭ್ಯಾಸ ಮತ್ತು ಅದರ ಪ್ರಭಾವದಿಂದ ಹಿಂದೂ ಧರ್ಮದ ಶ್ರೇಷ್ಠತೆಯ ಬಗೆಗೆ ಲೇಖಕರಿಗಿರುವ ಪೂರ್ವಗ್ರಹ ನಂಬಿಕೆಯನ್ನು ತೋರಿಸುತ್ತದೆ. ನಾಯಕ, ನಾಯಕಿಯರ ಮಾತು, ನಡತೆ, ಆಚಾರ, ವಿಚಾರಗಳಲ್ಲಿ ಅತೀ ಆದರ್ಶ ಎದ್ದು ಕಂಡು, ಕಾದಂಬರಿ ವಾಸ್ತವದ ಅಭಾವವನ್ನು ಎದುರಿಸುತ್ತದೆ. ಉದಾಹರಣೆಗೆ ಅವರ ಸಂಭಾಷಣೆಯನ್ನೇ ನೋಡಬಹುದು.

> "ರಮಾಕಾಂತರೆ ಈ ವಿಶುದ್ಧವಾದ ಜಲವನ್ನು ನೋಡಿದಿರಾ, ರಾಮಾಯಣದಲ್ಲಿ ವಾಲ್ಮೀಕಿ ಮಹರ್ಷಿಗಳು ಪಂಪಾ ಸರೋವರದ ದಿವ್ಯವಾದ ಸಲಿಲದ ಮೇಲೊಂದುತ್ಪ್ರೇಕ್ಷೆ ಮಾಡಿರುವರು. ತಮ್ಮ ಜ್ಞಾಪಕಕ್ಕೆ ಬರುವುದೇನು?"
>
> "ಅಹುದು. 'ಸಜ್ಜನಾನಾಂ ಮನೋಯಥಾ' ಎಂದು ವರ್ಣಿಸಿರುವರು."[೧೫]

ಈ ಸಂಭಾಷಣೆಯಲ್ಲಿ ಸಂಸ್ಕೃತ ಭಾಷಾ ಶೈಲಿ, ಸಾಹಿತ್ಯ ಸಂದರ್ಭದ ಸೂಚನೆಗಳು ಅಪಾರವಾಗಿ ಕಂಡುಬರುತ್ತವೆ. ಅಷ್ಟೇ ಅಲ್ಲ; ಇಂಜನಿಯರಿಂಗ್ ಓದಿದ್ದ ರಮಾಕಾಂತ ರಾಮಾಯಣದಿಂದ ಸಲೀಸಾಗಿ ಸಂಸ್ಕೃತ ಉಕ್ತಿಗಳನ್ನು ಎತ್ತಿ ಆಡುವುದೂ ಆಶ್ಚರ್ಯವಾಗುತ್ತದೆ. ಇನ್ನೊಂದು ಪಾತ್ರವಾದ ಪೋಲೀಸ್ ಅಧಿಕಾರಿ ನಟೇಶ, ಕೃಷ್ಣಮಾಚಾರ್ಯರು ಮಾಡಿದ ಮೃಚ್ಛಕಟಿಕದ ಅನುವಾದದ ಟೀಕೆ ಮಾಡುವುದು ಇನ್ನೂ ಸೋಜಿಗದ ಸಂಗತಿಯಾಗಿ ಕೇರೂರರ ಕಲ್ಪನಾ ಶಕ್ತಿಯನ್ನು ವಿಜೃಂಭಿಸುತ್ತದೆ. ಇದಲ್ಲದೆ ಅಲ್ಲಲ್ಲಿ ಬರುವ ಪ್ರಕೃತಿಯ ವರ್ಣನೆಗಳಲ್ಲಿ ಕಾಣಿಸಿಕೊಳ್ಳುವ ವಸಂತಮಾಸ, ಮಂದಮಾರುತ, ಕೋಕಿಲೆ ಮುಂತಾದ ಕವಿ ಸಮಯದ ವಾಕ್ಯಗಳು ಆಯಾ ಸಂದರ್ಭ, ಸನ್ನಿವೇಶಗಳಿಗೆ ಭಾರವೆನ್ನಿಸಿ ಅಭಾಸಗಳಾಗಿ ಕಾಣುತ್ತವೆ. ಈ ಕೃತಿ ಕುರಿತು, 'ವಸ್ತುವಿನ ಬೆಳವಣಿಗೆಯಲ್ಲಿಯ ಸೋದ್ದಿಶ್ಯ ಕೃತ್ರಿಮತೆ, ರಸಪುಷ್ಟಿಗಾಗಿಯೇ ನಿರ್ಮಿತ ಸನ್ನಿವೇಶಗಳು ಇವೆಲ್ಲ ಇಂದಿರೆ ವಾಸ್ತವ ಮಾರ್ಗದಿಂದ ತುಂಬ ದೂರವಾದ ಕೃತಿ'[೧೬] ಎಂಬ ಜಿ.ಎಸ್. ಆಮೂರರ ಮಾತನ್ನು ಅಧ್ಯಯನ ಒಪ್ಪುತ್ತದೆ. ಇದಕ್ಕೆ ಪೂರಕವಾಗಿ 'ಇಂದಿರಾ'ವನ್ನು ವಿಮರ್ಶಿಸುತ್ತ,

ಶಿವರಾಮ ಪಡಿಕ್ಕಲ್ ಅವರು, 'ಅದ್ಭುತಾಂಶಗಳನ್ನು ಪೂರ್ತಿಯಾಗಿ ಬದಿಗಿರಿಸಿ ವಾಸ್ತವತೆಯ ಹೆದ್ದಾರಿಯಲ್ಲಿ ನಿಂತ ಕೃತಿಯಾಗಿದೆ'[೧೭] ಎಂಬ ಇನಾಂದಾರರ ವ್ಯಾಖ್ಯಾನವನ್ನು ಒಪ್ಪದೇ, 'ಆದರ್ಶ ಮತ್ತು ವಾಸ್ತವಗಳ ಸಂಘರ್ಷವೆನ್ನುವುದು ಈ ಕಾದಂಬರಿಯಲ್ಲಿ ನಡೆಯುವುದೇ ಇಲ್ಲ'[೧೮] ಎಂಬ ಡಿ.ಆರ್. ನಾಗರಾಜರ ಅಭಿಪ್ರಾಯವನ್ನು ಪುರಸ್ಕರಿಸುತ್ತಾರೆ.

೧೯೦೦ರಿಂದ ೧೯೨೦ರ ವರೆಗಿನ ಕಾಲವನ್ನು ಆಧುನಿಕ ಕನ್ನಡ ಸಣ್ಣಕತೆಯ ಪ್ರಾರಂಭದ ಕಾಲವೆಂದು ಕರೆಯಲಾಗುತ್ತದೆ. ಮಾಸ್ತಿಯವರಿಂದಲೇ ಸಣ್ಣಕತೆ ಒಂದು ಸಾಹಿತ್ಯ ಪ್ರಕಾರವಾಗಿ ಕನ್ನಡದಲ್ಲಿ ನೆಲೆಯೂರಿತು ಎಂಬುದು ಸತ್ಯವಾದರೂ, ಈ ಪ್ರಕಾರಕ್ಕೆ ಸ್ಪಷ್ಟರೂಪ ಕೊಟ್ಟವರಲ್ಲಿ ಪ್ರಾರಂಭದ ಕತೆಗಾರರಾದ ಮಂಗಳೂರು ಪ್ರಾಂತದಲ್ಲಿ ಪಂಜೆಯವರೂ, ಅವರ ಅನಂತರ ಎಂ.ಎನ್. ಕಾಮತರೂ, ಉತ್ತರ ಕರ್ನಾಟಕದಲ್ಲಿ ಕೆರೂರ ವಾಸುದೇವಾಚಾರ್ಯರನ್ನು ಕಡೆಗಣಿಸುವಂತಿಲ್ಲ. ಇದಕ್ಕಾಗಿ ಮಧುರವಾಣಿ, ಸುವಾಸಿನಿ, ಸಚಿತ್ರ ಭಾರತಗಳಂತಹ ಪತ್ರಿಕೆಗಳ ಹುಟ್ಟು, ಸೇವೆ ಸ್ಮರಣಾರ್ಹ. ಮಾಸ್ತಿಯವರು ಗುರುತಿಸುವ ಕಥನದ ಮೌಖಿಕ (ಹೇಳುವ) ಮಾದರಿಯನ್ನೇ ಇವರು ಹೆಚ್ಚಾಗಿ ಅನುಸರಿಸಿದರೂ ಅದಕ್ಕೆ ತಮ್ಮದೇ ಆದ ವಸ್ತು, ಶೈಲಿ, ತಂತ್ರ ಹಾಗೂ ವೈಚಾರಿಕತೆಗಳ ಮೂಲಕ ಆಧುನಿಕತೆಯನ್ನು ತಂದುಕೊಟ್ಟರು. ಇವರ ಪ್ರಾರಂಭದ ಪ್ರಯತ್ನದಲ್ಲಿ ಅಲ್ಪ, ಸ್ವಲ್ಪ ದೋಷವಿರಬಹುದು. ಆದರೆ ಅವರ ಸಾಧನೆಯ ಮಹತ್ವವನ್ನು ಅಲ್ಲಗಳೆಯುವಂತಿಲ್ಲ. ಪಂಜೆ, ಕೆರೂರು, ಕಾಮತರನ್ನು ಹೆಸರಿಸುತ್ತ, 'ಈ ಮೂವರು ಹಿರಿಯರಲ್ಲಿ ಯಾರೂ ಆಧುನಿಕ ಸಣ್ಣ ಕತೆಯ ಸಾಹಿತ್ಯ ತಂತ್ರದ ಪ್ರಜ್ಞೆಯನ್ನು ಹುಟ್ಟಿಸಲಿಲ್ಲ' ಎಂಬ ಆನಂದಕಂದರ ಹೇಳಿಕೆಯು 'ವಸ್ತುಸ್ಥಿತಿಯಿಂದ ದೂರವಾದದ್ದು'[೧೯] ಎಂದು ಜಿ.ಎಸ್. ಆಮೂರ ಅವರು ಅಭಿಪ್ರಾಯ ಪಡುತ್ತಾರೆ. ಗಳಗನಾಥರಂತೆ ವಾಸುದೇವಾಚಾರ್ಯರೂ ಸ್ವಸಂಸ್ಕೃತಿಯ ನೆಲೆಯಲ್ಲಿಯೇ ಆಧುನಿಕತೆಯ ಸವಾಲನ್ನು ಎದುರಿಸಿದರೂ ಅವರಿಬ್ಬರ ಮನೋಧರ್ಮದಲ್ಲಿ ವ್ಯತ್ಯಾಸಗಳಿರುವುದು ಅವರ ಕಥನ ಸಾಹಿತ್ಯದಿಂದ ತಿಳಿದು ಬರುತ್ತದೆ. ಗಳಗನಾಥರು ಸ್ವಸಂಸ್ಕೃತಿಯಲ್ಲಿ ಅಗಾಧವಾದ ವಿಶ್ವಾಸವನ್ನಿಟ್ಟಿದ್ದರು, ಅದು ಆಧುನಿಕತೆಯ ಎಲ್ಲ ಸವಾಲುಗಳನ್ನು ಸ್ವೀಕರಿಸಬಲ್ಲದು ಎಂದು ತಿಳಿದಿದ್ದರೆ, ವಾಸುದೇವಾಚಾರ್ಯರು ಪ್ರಗತಿಯ ಅವಶ್ಯಕತೆಯನ್ನು ಅಲ್ಲಗಳೆಯಲಿಲ್ಲ. 'ಜಗತ್ತಿಗೆ ಜಗತ್ತೇ ಪ್ರಗತಿಯ ಮಾರ್ಗವನ್ನು ಹಿಡಿದಿರುವುದು. ಮಹತ್ವವುಳ್ಳ ಶಾಸ್ತ್ರಗಳು ಕೂಡ ಅವಸ್ಥಾಂತರವನ್ನು ಹೊಂದಿರಲು ಕ್ಷುಲ್ಲಕವಾದ ಕೆಲ ವಿಷಯಗಳು ನಮಗೆ ಪರಲೋಕದ ಸುಳ್ಳು ಭೀತಿಯನ್ನು ತೋರಿಸಿ ನಮ್ಮ ಇಹಪರಗಳನ್ನು ಕೂಡಿಯೇ ಅಗಡು ಮಾಡುತ್ತಲಿವೆ. ನಮ್ಮಲ್ಲಿರುವ ವಿಚಾರ ದುರ್ಬಲತೆಯಲ್ಲಿ ಧರ್ಮ ತತ್ವಗಳ ನಿಜವಾದ ಉದ್ದೇಶವನ್ನು ಕಂಡುಹಿಡಿಯುವ ಜಾಣತನವಿಲ್ಲ'[೨೦] ಎಂದು ಅವರು ಸಾಕಷ್ಟು ಧೈರ್ಯದಿಂದಲೇ ಬರೆದರು. ಆದರೆ ಪ್ರಗತಿಯ ಹೆಸರಿನಲ್ಲಿ ಪಾಶ್ಚಾತ್ಯರ ಅಂಧಾನುಕರಣೆಯನ್ನು ಅವರು ತಿರಸ್ಕರಿಸಿದರು. 'ಪ್ರಕೃತಿ ಬಲ' ಎಂಬ ಹೆಸರಿನ ಕತೆಯಲ್ಲಿ ಇಂತಹ ಅಪಾಯದ ಟೀಕೆಯನ್ನು ಮಾಡಿದ್ದಾರೆ. 'ಆಗಿನ ಕಾಲದ ಸುಧಾರಣೆಯೆಂದರೆ ಬ್ರಾಹ್ಮಣರಲ್ಲಿರುವ ಮಡಿ ಮೈಲಿಗೆ, ಸ್ನಾನ, ಸಂಧ್ಯೆ, ಭಸ್ಮ, ಮುದ್ರಾಕ್ಷಿಗಳನ್ನು ನಿಂದಿಸಿ ಸ್ವೇಚ್ಛೆಯಿಂದ ನಡೆಯುವುದೂ, ಪರಕೀಯರ ವೇಷಾಭರಣಗಳನ್ನು ಅನುಕರಿಸುವುದೂ, ಬೇಕು ಬೇಕಾದಲ್ಲಿ ಉಂಡು ತಿಂದು ಬರುವುದು ಅಷ್ಟೇ ಆಗಿತ್ತು. ಇದರ ಹೊರತಾಗಿ ಜನರ ಮನಸ್ಸಿನಲ್ಲಿ ಸುಧಾರಣೆಯ ವಿಚಾರಗಳು ಸೇರಿರಲಿಲ್ಲ' ಎಂಬುದು ಅವರ ತಿಳುವಳಿಕೆಯಾಗಿತ್ತು. ಪ್ರಣಯ ಮತ್ತು ವಿವಾಹ ಇವು ಅವರ ಸಾಮಾಜಿಕ ಕತೆಯ ಮುಖ್ಯ ಆಶಯಗಳಾಗಿದ್ದವು. ಸ್ತ್ರೀ ಶಿಕ್ಷಣ ಹಾಗೂ ಲಿಂಗ ಸಮಾನತೆಯ ವಿಚಾರಗಳ ಪರಿಣಾಮವಾಗಿ ಸ್ತ್ರೀ, ಪುರುಷ ಸಂಬಂಧಗಳಲ್ಲಿ ಕಾಣಿಸಿಕೊಂಡ ಕ್ರಾಂತಿಕಾರಕ ವಿಚಾರಗಳನ್ನು ಅವರು ತಮ್ಮ ಕಲ್ಪನೆಗಳನ್ನಾಧರಿಸಿದ ಕತೆಗಳಲ್ಲಿ ತಮ್ಮವೇ ಆದ ಇತಿಮಿತಿಗಳಲ್ಲಿ ಸಮರ್ಥಿಸಿದ್ದಾರೆ. ಉದಾಹರಣೆಗೆ, 'ತೊಳೆದ ಮುತ್ತು' ಕಥಾ ಸಂಕಲನದ 'ಪ್ರಥಮ ಪ್ರೇಮ' ಕತೆಯಲ್ಲಿ ರಮಾಸುಂದರಿ ಹಾಗೂ ಧ್ರುವರಾಯರ ಸಂಬಂಧವನ್ನೇ ನೋಡಬಹುದು. ರೋಮ್ಯಾಂಟಿಕ್ ಉತ್ಕಟತೆಯಿಲ್ಲದ, ತೀವ್ರವಾಗಿ ಪ್ರತಿಸ್ಪಂದನೆಯ ಪ್ರೀತಿಯಲ್ಲಿ ಇಬ್ಬರೂ ಭಾಗಿಯಾದರೂ, ಸಾಂಸ್ಕೃತಿಕ ಬಂಧನಗಳನ್ನು ಮೀರಲಾರದೇ ಸಮಾಜಕ್ಕೆ ಒಪ್ಪಿತವಾಗುವ ರೀತಿಯಲ್ಲಿ ಮದುವೆಯಾಗುತ್ತಾರೆ. 'ಅಲಿಪ್ತವಾದ ಪ್ರೇಮ ಸಂಯೋಗ' ಎಂಬ ಇನ್ನೊಂದು ಕತೆಯಲ್ಲಿ ಪ್ರಣಯದ ವಸ್ತುವನ್ನು ಬೇರೊಂದು ಸಂದರ್ಭದಲ್ಲಿ ನಿರ್ವಹಿಸಲಾಗಿದೆ. ಬ್ರಾಹ್ಮಣನಾದ ಪ್ರದ್ಯುಮ್ನನನ್ನು ಕ್ಷತ್ರಿಯ ಕನ್ಯೆ ಪ್ರೇಮಸುಂದರಿ ಪ್ರೀತಿಸುತ್ತಾಳೆ. ವರ್ಣ, ಸಾಮಾಜಿಕ ಸ್ತರಗಳ ಅಂತರಗಳನ್ನು ಮೀರುವ ಶಕ್ತಿ ಅವರಿಗಿದೆ. ಆದರೆ ತಮ್ಮ ತಾಯಿ, ತಂದೆಯರ ಇಚ್ಛೆಯನ್ನು ಮೀರಿ ಅವರು ಮದುವೆಯಾಗಲಾರರು. ಪ್ರದ್ಯುಮ್ನ ಆರ್ಯ ಧರ್ಮದ ಪ್ರಚಾರಕ್ಕಾಗಿ ತನ್ನನ್ನು ಅರ್ಪಿಸಿಕೊಂಡರೆ ಪ್ರೇಮ

ಸುಂದರಿ ಅವಿವಾಹಿತಳಾಗಿಯೇ ಉಳಿಯಲು ನಿರ್ಧರಿಸುತ್ತಾಳೆ. ಕತೆಗೆ ಕ್ರಾಂತಿಯ ಹಾಗೂ ದುರಂತದ ಸಾಧ್ಯತೆಗಳಿದ್ದರೂ ಲೇಖಕರು ಅದನ್ನು ಬಳಸಿಕೊಳ್ಳುವುದಿಲ್ಲ, ಹಾಗೂ ಅವರಿಬ್ಬರ ಮದುವೆಯನ್ನು ಮಾಡಿ ವರ್ಣಸಂಕರ ಕೈಗೊಳ್ಳುವ ಧೈರ್ಯವಹಿಸದೆ ಇರುವುದೂ ವಿಶೇಷವಾಗಿದೆ. 'ಗುಲ್‌ಬಾಯಿ' ಇನ್ನೊಂದು ವಿಭಿನ್ನ ಕಥೆಯಾಗಿದ್ದು, ಸಂಗೀತದ ಮೂಲಕ ಶ್ಯಾಮರಾಯ, ಗುಲ್‌ಬಾಯಿ ಆಕರ್ಷಿತರಾಗುತ್ತಾರೆ. ಇಬ್ಬರೂ ಬ್ರಾಹ್ಮಣ ಜಾತಿಗೆ ಸೇರಿದ್ದರೂ ಸ್ತ್ರೀಸ್ವಾತಂತ್ರ್ಯ ಹಾಗೂ ಸ್ತ್ರೀಪುರುಷ ಸಮಾನತೆಯ ವಿಷಯದಲ್ಲಿ ಗುಲ್‌ಬಾಯಿ ಹೊಂದಿದ ವಿಚಾರಗಳ ಅತಿರೇಕತೆ (ಇದು ಲೇಖಕರ ಅಭಿಪ್ರಾಯ, ಅಧ್ಯಯನದ್ದಲ್ಲ) ಅವರ ನಡುವಿನ ಗೋಡೆಯಾಗಿ ನಿಲ್ಲುತ್ತದೆ. ಗುಲ್‌ಬಾಯಿಗೆ ತನ್ನ ತಪ್ಪಿನ ಅರಿವಾದಾಗ ಈ ಗೋಡೆ ಮುರಿದು ಬಿದ್ದು ಸಂಬಂಧ ಸುಖಾಂತವಾಗುತ್ತದೆ.

ಕೆರೂರರ ಕಥೆಗಳಲ್ಲಿ ಸಾಮಾನ್ಯ ಜನರ ಜೀವನ ಚಿತ್ರಣ ಅಷ್ಟಾಗಿ ಕಂಡುಬರುವುದಿಲ್ಲ. ಸಮಸ್ಯೆಗಳ ಕುರಿತು ಚರ್ಚಿಸುವ ಮೊದಲು ಅದಕ್ಕೆ ಒಂದು ಪೂರ್ವನಿಗದಿತ ಪರಿಹಾರ ಸೂಚನೆ ಕಂಡರೂ ಅದು ಸಂಪ್ರದಾಯ ಮೀರಿ ನಿಲ್ಲುವುದಿಲ್ಲ. ಆದರೆ ಇದಕ್ಕೆ 'ಮಲ್ಲೇಶಿಯ ನಲ್ಲೆಯರು' ಕತೆ ಅಪವಾದವಾಗಿದೆ. ೧೯೧೭ರಲ್ಲಿ ಪ್ರಕಟವಾದ 'ಮಲ್ಲೇಶಿಯ ನಲ್ಲೆಯರು' ಕತೆಯಲ್ಲಿ ಮಲ್ಲೇಶಿಯು ತನ್ನ ಬಾಳ ನಲ್ಲೆಯರನ್ನು ಹುಡುಕುವ ನವಿರು ಪ್ರಸಂಗಗಳು ತಿಳಿ ಹಾಸ್ಯವನ್ನು ಚಿಮ್ಮಿ ಕತೆಗೊಂದು ಲವಲವಿಕೆಯನ್ನು ಕೊಡುತ್ತವೆ. ಜೊತೆಗೆ ಇದೊಂದು ಪ್ರಬಂಧದಂತೆ ಭಾಸವಾಗುತ್ತದೆ. ಆದರೆ ಈ ವಿನೋದ (ಹಾಸ್ಯ) ಮೇಲುಗೈ ಪಡೆದು ಕತೆಯ ಉದ್ದೇಶವನ್ನು ಜೀವಂತವಿಡಲಾಗಿದೆ. ಗ್ರಾಮೀಣ ಪ್ರದೇಶದ ಮಲ್ಲೇಶಿಯ ಜೀವನ ಪ್ರೀತಿಯನ್ನು ಯಥಾವತ್ತಾಗಿ ಚಿತ್ರಿಸುತ್ತ ಕೆರೂರರು ಮಲ್ಲೇಶಿಯಲ್ಲಿ ಅಕ್ಷರ ಮೊಳಕೆಯೊಡೆಯುವುದನ್ನು, ಆ ಮೂಲಕ ಅವನು ಹೊಸ ಬದುಕಿನ ಅಂಗಳದಲ್ಲಿ ಕಾಲಿರಿಸುವುದನ್ನು ದಾಖಲಿಸುತ್ತಾರೆ. ಕಾಲಮರೆ (ಚಪ್ಪಲಿ), ಎರಕೊಳ್ಳುವುದು (ಎಣ್ಣೆ ನೀರಿನ ಸ್ನಾನ), ಕೆವ ಬಣ್ಣ (ಕಾವಿ ಬಣ್ಣ), ನೀರು-ನಿಡಿ, ಮನೆಮೂಳ ಮುಂತಾದ ಉತ್ತರ ಮತ್ತು ಮುಂಬಯಿ ಕರ್ನಾಟಕದ ಭಾಷಾ ಶಬ್ದ ಪ್ರಯೋಗ ಕತೆಯ ಕಸುವಾಗಿದೆ. ಹೊಕ್ಕು ತುಂಬೋಬಾವಿ, ಉಬ್ಬು (ಹರುಷಗೊಳ್ಳು), ಸಾಮಧೂಮ ಮುಂತಾದ ಸಾಂಸ್ಕೃತಿಕ ಪದಕೋಶಗಳು ಕತೆಯಲ್ಲಿ ಹಾಸುಹೊಕ್ಕಾಗಿವೆ. ಶಿಕ್ಷಣದಲ್ಲಿ ಅಕ್ಷರ ಲೇಖಣಕ್ಕಿರುವ ಜ್ಞಾನ, ಅರ್ಥ, ಚಮತ್ಕಾರ, ಉಪಯೋಗಗಳು ಚಿತ್ರಕಲೆಗೂ ಇವೆ ಎಂಬುದನ್ನು ಮೂಢ ಮಲ್ಲೇಶಿಯಿಂದ ಸುಶಿಕ್ಷಿತರು ಅರ್ಥ ಮಾಡಿಕೊಳ್ಳುವ ಪ್ರಸಂಗ ಹಾಸ್ಯದ್ದಾದರೂ ಅರ್ಥವಂತಿಕೆಯಿಂದ ಕೂಡಿದೆ.

ಕನ್ನಡದ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ದೃಷ್ಟಿಕೋನದಿಂದ ಹಲವು ಪ್ರಶ್ನೆಗಳನ್ನೆತ್ತಿ ಮುಂಬಯಿ ಕರ್ನಾಟಕದ ಮೊದಲಿಗರ ಕಥನ ಸಾಹಿತ್ಯವನ್ನು ವಿಶ್ಲೇಷಿಸಿದಾಗ ಅದರ ಸ್ವರೂಪವನ್ನು ಹೀಗೆ ಸಂಗ್ರಹಿಸಬಹುದು.

* ಐತಿಹಾಸಿಕ ಕಾದಂಬರಿಗಳು ಬ್ರಿಟಿಶ್‌ಪೂರ್ವ ಇತಿಹಾಸದ ಒಂದು ಘಟನೆಯ ಎಳೆಯನ್ನೆತ್ತಿ ಅದಕ್ಕೆ ಕಲ್ಪನೆಯನ್ನು ಸೇರಿಸಿ ರಾಜ್ಯದ ಸ್ಥಾಪನೆ, ಉನ್ನತಿ, ಅವನತಿ ಕುರಿತು ರಮ್ಯಗೊಳಿಸಿದ ಕೃತಿಗಳಾಗಿವೆ. ಆದರೆ ಇತಿಹಾಸದ ಸತ್ಯ ಶೋಧನೆಗೆ ಒತ್ತು ಕೊಡದೆ, ಜನರನ್ನು ರೋಮಾಂಚನಗೊಳಿಸಲು ಮಾತ್ರ ಸೀಮಿತವಾದ ಇವು ಎಷ್ಟು ಜನರನ್ನು ತಲುಪಿವೆ ಎನ್ನುವುದು ಒಂದು ತಾತ್ವಿಕ ಪ್ರಶ್ನೆಯಾಗುತ್ತದೆ.

* ಇವುಗಳ ನಿರೂಪಣಾ ಪ್ರಜ್ಞೆಯಲ್ಲಿ ಪೂರ್ವ ನಿರ್ಧಾರಿತ ದಟ್ಟ ಆದರ್ಶವಿದ್ದು, ಅದು ಬ್ರಾಹ್ಮಣ, ಕ್ಷತ್ರಿಯ ವರ್ಗಗಳಿಗೆ ಮಾತ್ರ ಸೀಮಿತವಾಗಿದೆ. ಶೂದ್ರ, ಅತೀ ಶೂದ್ರರಲ್ಲಿ ಅದನ್ನು ಅರಸದೇ ಇರುವುದು ವರ್ಗ ವ್ಯವಸ್ಥೆಯನ್ನು ಜೀವಂತ ಇಡುವ ಯತ್ನವಾಗಿದೆ.

* ಆ ಕಾಲದ ಜನಸಾಮಾನ್ಯ ಜೀವನವನ್ನು ಚಿತ್ರಿಸದೇ, ಜನಪರ ನಿಲುವನ್ನು ಕೃತಿಯಲ್ಲಿ ಕಾಣದೇ ಇರುವುದು ವಿದೇಶಿ ಪ್ರಭುತ್ವವನ್ನು ಧಿಕ್ಕರಿಸುವ ಉದ್ದೇಶದಿಂದ ಸ್ವದೇಶಿ ಯಾಜಮಾನ್ಯ ಸಂಸ್ಕೃತಿಯ ಉತ್ಕೃಷ್ಟತೆಯನ್ನು ಕೃತಿಯಲ್ಲಿ ತುಂಬಲಾಗಿದೆ.

* ಅಲ್ಲಲ್ಲಿ ಕತೆಯ ನಿರೂಪಣೆಯನ್ನು ತಡೆದು ನಿಲ್ಲಿಸಿ, ಓದುಗನೊಂದಿಗೆ ಸಂಭಾಷಣೆಯಲ್ಲಿ ತೊಡಗುವುದು ಮತ್ತು ಬುದ್ಧಿಮಾತು ಹೇಳುವುದು ಅತೀ ವಾಚ್ಯವೆನ್ನಿಸಿ ಕೃತಿ ಅಪ್ರಬುದ್ಧವೆನಿಸುತ್ತದೆ.

ಈ ಎರಡೂ ಬಗೆಯ (ಐತಿಹಾಸಿಕ, ಸಾಮಾಜಿಕ) ಬರವಣಿಗೆಗಳಲ್ಲಿ ವಸ್ತುನಿಷ್ಠ ದೃಷ್ಟಿಗೆ ಕಾರಣವಾಗಬೇಕಿದ್ದ ಪ್ರಬುದ್ಧತೆ ಕಾಣಿಸುವುದಿಲ್ಲ, ಆರಾಧಕ, ವ್ಯಂಗ್ಯ ದನಿಗಳು ಮಾತ್ರ ಪ್ರಾಧಾನ್ಯತೆ ಪಡೆದಿವೆ ಎನ್ನಬಹುದು.

* ಕಲ್ಪಿತ ವಿವರಗಳ ರಚನೆಯಾಗಿರುವುದರಿಂದ ಮತ್ತು ರಮ್ಯತೆಯು ಮುಖ್ಯವಾಗಿರುವುದರಿಂದ ಈ ಕೃತಿಗಳಲ್ಲಿ ಒಂದು ಬಗೆಯ ಕೃತ್ರಿಮ ಶೈಲಿಯು ಕಂಡುಬರುತ್ತದೆ. ಮಿಲಿಟೆಂಟ್ ರಾಷ್ಟ್ರೀಯವಾದಿ ನಿಲುವಿನಿಂದ ಅಥವಾ ಅದರ ಅಂಗವೇ ಆಗಿರುವ ಕನ್ನಡಾಭಿಮಾನದ ಧೋರಣೆಯಿಂದ ಈ ಕೃತಿಗಳು ತುಂಬಿವೆ. ಇವೆಲ್ಲವುಗಳ ಮಧ್ಯೆಯೂ ಮಧ್ಯಮ ವರ್ಗದ (ಕೆಳ ವರ್ಗವನ್ನಲ್ಲ) ಜನತೆಯನ್ನು ಕಾದಂಬರಿಯ ಹತ್ತಿರ ಒಯ್ದ ಯಶಸ್ಸು ಈ ಕಾದಂಬರಿಗಳಿಗೆ ಸಲ್ಲುತ್ತದೆ ಎನ್ನಬಹುದು.

## ೨. ಜಮೀನ್ದಾರಿಕೆಯ ಸಂಬಂಧಗಳು ಮತ್ತು ಸಾಹಿತ್ಯ ಸಂವೇದನೆಗಳು

ಭೂಮಿಯ ಒಡೆತನದ ಪ್ರಶ್ನೆಯೊಂದಿಗೆ, ಒಡೆಯ-ಆಳು ಎಂಬ ಅಸಮಾನತೆಯ ನೆಲೆಯಲ್ಲಿ ಹುಟ್ಟಿಕೊಳ್ಳುವ ಸಂವೇದನೆಗಳು ಕಾಲದ ಚೌಕಟ್ಟನ್ನು ಮೀರಿ ಕಥನ ಸಾಹಿತ್ಯದಲ್ಲಿ ದಾಖಲಾಗಿವೆ. ಭೂಮಿ ಅಥವಾ ಭೂಹಿಡುವಳಿಯ ಸಂಬಂಧಗಳು ಸಮಾಜದ ಆರ್ಥಿಕತೆಯನ್ನು ರಚಿಸಿದಂತೆ, ಜಮೀನ್ದಾರನು ಆರ್ಥಿಕ ವ್ಯವಸ್ಥೆಯನ್ನು ನಿಯಂತ್ರಿಸುತ್ತಿದ್ದ. ಈ ಕಾಲಘಟ್ಟದಲ್ಲಿ ಅಕ್ಷರ, ಉದ್ಯೋಗ ಮುಂತಾದುವು ನಿರ್ದಿಷ್ಟ ಜಾತಿಯೊಳಗೆ ಬಂಧಿಯಾಗಿದ್ದವು. ಜಾತಿ, ಜಾತಿಗಳ ಮಧ್ಯೆ ಹೆಚ್ಚಾದ ಅಂತರ ಆರ್ಥಿಕ ವ್ಯವಸ್ಥೆಯ ಅಂತರವನ್ನು ಹೆಚ್ಚಿಸಿದ್ದು, ಅದು ಗಾಢ ವರ್ಣ (ಜಾತಿ)/ವರ್ಗ ವ್ಯವಸ್ಥೆಗೆ ಎಡೆ ಮಾಡಿಕೊಟ್ಟಿದ್ದು ಸುಳ್ಳಲ್ಲ! ಇಂತಹ ಕಾಲಘಟ್ಟದ ಮುಂಬಯಿ ಕರ್ನಾಟಕದ ಕಥನ ಸಾಹಿತ್ಯದ ಸಂವೇದನೆಗಳು ಯಾವ ರೂಪದಲ್ಲಿದ್ದವು? ಒಡೆಯ, ಗೇಣಿಪದ್ಧತಿ, ಒಕ್ಕಲು ಮಕ್ಕಳು, ಗುಲಾಮ ಎಂಬ ಬೇಧಭಾವದ ಶೋಷಣೆಗಳಿಗೆ ಕಾಲದ ಚೌಕಟ್ಟಿಲ್ಲ ಎನ್ನಬಹುದು. ಭಾರತದ ಸಂದರ್ಭದಲ್ಲಿ (ಮುಂಬಯಿ ಕರ್ನಾಟಕವೂ ಸೇರಿದಂತೆ) ವಸಾಹತುಪೂರ್ವ ಕಾಲದಿಂದಲೂ ಭೂಮಿಯನ್ನು ಅನುಭವಿಸಿಕೊಂಡು ಬಂದ ಒಂದು ಸಮುದಾಯ/ವ್ಯವಸ್ಥೆ ಭೂಸುಧಾರಣೆ ಕಾನೂನು ಜಾರಿಯಾದ ನಂತರ ಛಿದ್ರಗೊಂಡಿದ್ದು ನಿಜ! ಆದರೆ ಈ ಅಸಮಾನತೆ ಇಷ್ಟಕ್ಕೆ ಮುಗಿಯಿತೆ? ಕಾನೂನಿನ ಬಿಗಿ ಹಿಡಿತದಿಂದ ನುಸುಳಿಕೊಂಡವರು, ಅಷ್ಟೇಕೆ ಲಾಭ ಪಡೆದ ಜನಸಾಮಾನ್ಯರು (ಗೇಣಿ ರೈತರು) ಇಂದಿಗೂ ಭೂಹೀನರನ್ನು, ಕೃಷಿ ಕಾರ್ಮಿಕರನ್ನು ಶೋಷಿಸುತ್ತಲೆ ಬಂದಿರುತ್ತಾರೆ. ಶೋಷಕರ, ಶೋಷಿತರ ನಡುವಿನ ಈ ಘರ್ಷಣೆಯ ಕುರಿತು ಹೇಳುವ ಕಥನ ಸಾಹಿತ್ಯ ವಿಪುಲವಾಗಿ ಬೆಳೆದು ಬಂದಿದೆ, ಇಂದಿಗೂ ಬರುತ್ತಲೇ ಇದೆ. ಜಮೀನ್ದಾರಿ ಪದ್ಧತಿ ಕಾಲಘಟ್ಟದ ಕಥನ ಸಾಹಿತ್ಯವೆಂದ ತಕ್ಷಣ ಅದು ಒಡೆಯ-ಗೇಣಿರೈತರ ಸಂಬಂಧದ ಕುರಿತಾದುದು ಎಂದು ವ್ಯಾಖ್ಯಾನಿಸಿದರೆ ಸಾಹಿತ್ಯ ವ್ಯಾಪ್ತಿಗೆ ನ್ಯಾಯ ಒದಗುವುದಿಲ್ಲ. ಭೂಮಿ ಮತ್ತು ಮನುಷ್ಯರ ಒಟ್ಟು ಸಂಬಂಧವನ್ನು ಹೊಂದಿದ ಕೃಷಿ, ಕೃಷಿ ವ್ಯಾಪಾರ, ಕೃಷಿ ಕೂಲಿ, ಕೃಷಿ ನೆಲೆಯಾಧಾರಿತ ಕೌಟುಂಬಿಕ, ಸಾಮಾಜಿಕ ಸಂಬಂಧಗಳ ಸಮೇತ ಪರಿಗಣಿಸಿದ ಸಾಹಿತ್ಯ ಎಂದು ತಿಳಿಯಬಹುದಾಗಿದೆ.

ಭಾರತದಲ್ಲಿ, ಭೂಮಿಯ ಒಡೆತನ ಮತ್ತು ಹಂಚಿಕೆಯ ತಾರತಮ್ಯವು ಅನೇಕ ಮೂಲಭೂತ ಸಮಸ್ಯೆಗಳಿಗೆ ಪ್ರಧಾನ ಕಾರಣವಾಗಿದೆ. ಒಂದು ವರ್ಗದ ಬಡತನ, ಅಜ್ಞಾನ, ಮೂಢನಂಬಿಕೆಗಳು ಇನ್ನೊಂದು ಪ್ರಬಲ ವರ್ಗವು ಉತ್ಪಾದನಾ ಸಾಧನಗಳ ಒಡೆತನವನ್ನು ಹೊಂದುವುದಕ್ಕೆ ಕಾರಣವಾಗಿವೆ. ಮುಂಬಯಿ ಕರ್ನಾಟಕದ ಕಥನ ಸಾಹಿತ್ಯವನ್ನು ಗಮನಿಸಿದರೆ, ಶ್ರಮವಹಿಸಿಯೋ/ವಹಿಸದೆಯೋ ಪಡೆದುಕೊಳ್ಳುವ ಜಮೀನು, ಅದನ್ನು ಸೂಕ್ತ ರೀತಿಯಲ್ಲಿ ನಿರ್ವಹಿಸದೇ ದುಶ್ಚಟಗಳಿಗೆ ಬಲಿಯಾಗಿ ಕಳೆದುಕೊಳ್ಳುವ ಬಗೆ, ಶ್ರಮಿಕ ವರ್ಗ ಮತ್ತು ಐಷಾರಾಮಿ ವರ್ಗಗಳ ನಿರಂತರ ಘರ್ಷಣೆಯನ್ನು ಕುರಿತು ಕಥನ ಸಾಹಿತ್ಯ ಬಹಳಷ್ಟು ವಿವರಗಳನ್ನು ದಾಖಲಿಸಿದೆ. ಹುಸೇನಬಿಯ ಕೋಳಿ (ಬಿ. ಟಿ. ದೇಸಾಯಿ), ಮಂಚ (ವ್ಯಾಸರಾಯ ನಿಂಜೂರ), ವಿಶ್ವಾಮಿತ್ರನ ಸೃಷ್ಟಿ (೧೯೩೪, ಶ್ರೀರಂಗ), ನಿಸರ್ಗ (೧೯೪೫, ಮಿರ್ಜಿ ಅಣ್ಣಾರಾಯ), ತಾಯಿ ಸಾಹೇಬ (ರಂ. ಶಾ.), ಗ್ರಾಮಾಯಣ (ರಾವ್ ಬಹಾದ್ದೂರ), ಗಂಗವ್ವ ಗಂಗಾಮಾಯಿ (ಶಂಕರ ಮೊಕಾಶಿ ಪುಣೇಕರ), ಬೀಜ (ಶಾಂತಿನಾಥ ದೇಸಾಯಿ), ಮಣ್ಣು (ಗಿರಡ್ಡಿ ಗೋವಿಂದರಾಜ), ಒಡ್ಡು (ನಾ. ಡಿಸೋಜ, ೧೯೯೦), ಕುಂಕುಮ ಭೂಮಿ (ಕೇಶವ ಮಳಗಿ), ಕೋಲ್ಮಿಂಚು (ವೆಂಕಟೇಶ ಹುಣಶೀಕಟ್ಟಿ), ಕುದಿ (ಮಹಾಲಿಂಗ ಮಂಗಿ) ಬಂಧಮುಕ್ತ (ವ್ಯಾಸರಾಯ

ಬಲ್ಲಾಳ), ಧಣಿಯರ ಸತ್ಯನಾರಾಯಣ (ಕೊರಡ್ಕಲ್ ಶ್ರೀನಿವಾಸರಾವ್), ಕಿಚ್ಚಿನ ಕಾವಲು (ಹ. ಪಿ. ಜೋಷಿ), ಮಂಗಾಟ (ದ. ರಾ. ಬೇಂದ್ರೆ), ಮನೆಗಾಗಿ, ಒತ್ತೆ, ಹೆಣ್ಣು ಕೆಡಸಿದರು ಹೊಲಾನೂ ಕಸಗೊಂಡರು, ಮನಷ್ಯಾ ಆಗೋ (ಕುಂದರನಾಡ ಪಾಟೀಲ), ದೇಸಗತಿ (ರಾಘವೇಂದ್ರ ಪಾಟೀಲ), ಮಾಲ್ಕಿ ಹಕ್ಕು (ಆನಂದಕಂದ) ಮುಂತಾದ ನೂರಾರು ಕಥೆ, ಕಾದಂಬರಿಗಳು ಜಮಿನ್ದಾರಿ ವ್ಯವಸ್ಥೆಯಲ್ಲಿ ಭೂಮಿ ಮನುಷ್ಯರ ಸಂಬಂಧಗಳನ್ನು ತೆರೆದಿಟ್ಟಿವೆ.

ಭಾಷೆಯನ್ನು ಸಮರ್ಥವಾಗಿ ಉಪಯೋಗಿಸಿಕೊಂಡು, ಅದನ್ನು ದೇಶೀಯ ನೆಲೆಯಲ್ಲಿ ಬಿಂಬಿಸಿದ ಮಿರ್ಜಿ ಅಣ್ಣಾರಾಯರ 'ನಿಸರ್ಗ' ಕಾದಂಬರಿ ಒಂದು ಪ್ರಾತಿನಿಧಿಕ ಕೃತಿಯೆನ್ನಬಹುದು. ಪ್ರಾದೇಶಿಕ ಕಾದಂಬರಿಯಾಗಿದ್ದಂತೆ, ಪಾತ್ರ ಪ್ರಧಾನವಾದ ಒಂದು ದುರಂತ ಕತೆಯೂ ಆಗಿದೆ. ಈ ಕಾದಂಬರಿಯ ಮುನ್ನುಡಿ ಬರೆದ ರಂ. ಶ್ರೀ. ಮುಗಳಿಯವರು, 'ಸಂವಾದ ಶೈಲಿ ಸುಲಭವಾಗಿ ಅರ್ಥವಾಗುವಂತಿಲ್ಲ ಎಂಬ ಸಂಗತಿ ವಾಸ್ತವವಾಗಿದ್ದರೂ, ಪ್ರಾದೇಶಿಕ ಕಾದಂಬರಿಗಳಲ್ಲಿ ಇಂಥ ದೇಸಿ ಬರುವುದು ಅಪರಿಹಾರ್ಯ. ಈ ಕಾದಂಬರಿಯ ಬಹು ದೊಡ್ಡ ಗುಣ ಇದರ ಸಹಜತೆ, ವಾಸ್ತವತೆ. ಸಂವಿಧಾನ ಚಮತ್ಕಾರವಿಲ್ಲದೇ ನಮ್ಮ ಮನಸನ್ನು ಸೆಳೆಯುತ್ತ ಹೋಗುವ ಕಥೆಯ ಸಹಜ ಓಟವೇ ಇದರ ಯಶಸ್ಸಿನ ಗುಟ್ಟು, ಅಲ್ಲಲ್ಲಿ ಧ್ವನಿ ರಮ್ಯತೆ ಬಂದಿದ್ದರೂ ಅದು ಕೃತಕವಲ್ಲ'[೨೧] ಎಂದಿದ್ದಾರೆ. ಸ್ವಾತಂತ್ರ್ಯಪೂರ್ವದಲ್ಲಿಯೇ ಪ್ರಕಟವಾದ ಈ ಕಾದಂಬರಿ ಕೆಳವರ್ಗದ ಕುಟುಂಬಗಳ ಸಾಮಾಜಿಕ ಆಗು ಹೋಗುಗಳೆಂಬ ಸಾಂಸ್ಕೃತಿಕ ಕಥಾನಕವಾಗಿದೆ. ದೇಶೀಯತೆಯನ್ನು ಜಿಚಿತ್ಯವರಿತು ಅದರ ಹದಕ್ಕೆ ತಕ್ಕಂತೆ ಸಂದರ್ಭಾನುಸಾರ ಉಪಯೋಗಿಸುವಲ್ಲಿ, ಹಾಗೂ ಕಾದಂಬರಿಯ ಪಾತ್ರಗಳ ಸಂವಾದ ರೀತಿಯಲ್ಲಿಯೂ ವಿಶಿಷ್ಟವಾಗಿದೆ. ಉಚ್ಚಾರ ರೀತಿ, ಶಬ್ದರೂಪ, ವ್ಯಾಕರಣರೂಪಗಳು ಸಹ ವೈಶಿಷ್ಟ್ಯದಿಂದ ಕೂಡಿವೆ. ಮುಂಬಯಿ ಕರ್ನಾಟಕದ ಗಡಿ ಭಾಗದ ಶ್ರಮಿಕ ವರ್ಗವನ್ನು ಪ್ರತಿಬಿಂಬಿಸಿವೆ. ಸಂಭಾಷಣೆಯ ಪ್ರಯೋಗ ಮೇಲ್ನೋಟಕ್ಕೆ ಕ್ಲಿಷ್ಟವಾಗಿ ಕಂಡರೂ ಅರ್ಥವಂತಿಕೆ ಹಾಗೂ ಹೃದಯವಂತಿಕೆಯಿಂದ ತುಂಬಿವೆ. ಉದಾಹರಣೆಗೆ, ಛಲೋ (ಒಳ್ಳೆಯದು), ಜನ್ನ ಮಾಡು (ಬಾಳುವೆ ಮಾಡು, ಕನ್ನಡದ ಗಡಿನಾಡಿನ ಗ್ರಾಮೀಣ ಪದ), ಅಡಕಿಲದಾಗ (ಇಲ್ಲಿ ಅಡಕಿಲ ಗಡಿಗೆ, ಎಂದರೆ ಮಣ್ಣಿನಿಂದ ಮಾಡಿದ ಪಾತ್ರೆಗಳನ್ನು ಒಂದರ ಮೇಲೊಂದು ಜೋಡಿಸುವುದು ಎಂದಾಗಿರುತ್ತದೆ), ಕಾಲಮಡಿ (ಮೂತ್ರಮಾಡು, ಯಾವ ಕ್ರಿಯೆಯನ್ನು ನಾವು ಕಾಲುಮಡಿಚಿ ಕುಳಿತು ಮಾಡಿ ಮುಗಿಸುತ್ತೇವೆಯೋ ಆ ಕ್ರಿಯೆ, ಇಲ್ಲಿ ಭಾಷೆಯ ಸೊಗಸು ಸುಂದರವಾಗಿದೆ.) ಇತ್ಯಾದಿ. ಹೀಗೆ ಈ ಗ್ರಾಮೀಣ ಭಾಷಾ ಶಬ್ದ ಸಂಪತ್ತು ಬೆಳೆಯುತ್ತ ಹೋಗುತ್ತದೆ. ಗಡಿಭಾಗದ/ನೆಲದ ಅನೇಕ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಆಚರಣೆಗಳ ಪರಿಚಯವಾಗುತ್ತದೆ. ಉದಾಹರಣೆಗೆ, ಮದುವೆ ಸಮಾರಂಭಗಳಲ್ಲಿ ವಧುವರರಿಗೆ ಆರತಿ ಮಾಡುವಾಗ ಗಂಡನ ಹೆಸರನ್ನು ಹೆಂಡತಿ, ಹೆಂಡತಿಯ ಹೆಸರನ್ನು ಗಂಡ ಹೇಳುವ ಮುನ್ನ ಒಗಟಿನ ರೂಪದಲ್ಲಿ ಹೇಳುವುದು. 'ಜೋಡೆಳಿ ಮುತ್ತ ಜೋಮಾಲಿ ಸರಾ, ಎಂಟೆಳಿ ಮುತ್ತಾ ಕಂಠಿಸರಾ, ಒಂಟಿ ಮ್ಯಾಲ ಕುಂತು ಮೋಣಿಸುತಾರ' ಇತ್ಯಾದಿಗಳು ನೆಲ ಸಂಸ್ಕೃತಿಯ ಸ್ವರೂಪವನ್ನು ಹೇಳುತ್ತವೆ. ಊರ ದೇವತೆ ಲಗಮವ್ವನ ಜಾತ್ರೆಯಲ್ಲಿ ಕುರುಬರು ಡೊಳ್ಳು ಬಾರಿಸಿದರೆ, ಮಾದರ ಮರೆಪ್ಪನ ಮೈಯಲ್ಲಿ ದೇವತೆ ಬಂದು ಅಂಬಲಿ ಕುಡಿದು ಪರಾಕು ಹೇಳುವುದು, ಇವು ಸಾಮಾಜಿಕ ಜೀವನದಲ್ಲಿ ಸಮೂಹ ಬದುಕಿನ ಸಿದ್ಧಾಂತದ ಜೊತೆಗೆ ಜಾತಿ ವ್ಯವಸ್ಥೆಯ ಜೀವಂತಿಕೆಯ ಸೂಚನೆಗಳಾಗಿವೆ. ಗ್ರಾಮೀಣ ಸಮಾಜದಲ್ಲಿ ಕೂಡಿಕೆ ಮಾಡಿಕೊಳ್ಳುವಾಗ (ವಿಧವಾ ವಿವಾಹ, ಅಥವಾ ಗಂಡ ಬಿಟ್ಟ ಹೆಣ್ಣಿನ ಮದುವೆ), ಗಂಡು ತಂದ ಸೀರೆಯನ್ನು ವಿಧವೆಯರು ಹೆಣ್ಣಿಗೆ ಉಡಿಸುವಿಕೆಯಲ್ಲಿನ ಉಡಿಕೆ ಮಾಡಿಕೊಳ್ಳುವಿಕೆ ಎಂಬ ಮರುಮದುವೆಯ ಅರ್ಥವ್ಯಾಪ್ತಿ ಇದೆ. ಅಂದರೆ ಈ ಮದುವೆಯಲ್ಲಿ ಸುಮಂಗಲೆಯರ ಭಾಗವಹಿಸುವಿಕೆ ಅನಗತ್ಯವೆ ಎಂಬ ಚಿಂತನೆಗೆ ಈಡು ಮಾಡುತ್ತದೆ. ಹೀಗೆ ಕರ್ನಾಟಕ ಮತ್ತು ಮಹಾರಾಷ್ಟ್ರ ರಾಜ್ಯಗಳ ಶೆಡಬಾಳ, ಸದಲಗಾ ಮುಂತಾದ ಗಡಿಗ್ರಾಮಗಳ ಗ್ರಾಮೀಣ ಕನ್ನಡ ಭಾಷೆ, ಸಂಸ್ಕೃತಿಯು ಈ ಕಾದಂಬರಿಯಲ್ಲಿ ಪಡಿ ಮೂಡಿದೆ. ಕಾದಂಬರಿಕಾರ, ವಿಮರ್ಶಕರಾದ ಶಿವರಾಮ ಕಾರಂತರು, 'ನಿಸರ್ಗ ಕಾದಂಬರಿ ಒಂದು ಅಮೂಲ್ಯವಾದ ಮುತ್ತು, ಇಂತಹ ಹತ್ತು ಕಾದಂಬರಿಗಳು ಬಂದರೂ ಸಾಕು ಕನ್ನಡ ಭಾಷೆಯ ದಾರಿದ್ರ್ಯ ದೂರಾಗುವುದು'[೨೨] ಎಂದು ಪ್ರಶಂಸಿಸಿದ್ದಾರೆ. ಕಾದಂಬರಿಯ ಅಂತ್ಯದಲ್ಲಿ ನಾಯಕನು ನಾಯಕಿಯೊಂದಿಗೆ ಸಹಗಮನ ಮಾಡುವ ಸಿನಿಮೀಯ ಸಂದರ್ಭವು ವಾಸ್ತವಿಕತೆಯಿಂದ ದೂರವಾದದ್ದು ಎಂಬುದನ್ನು ಬಿಟ್ಟರೆ ಭಾಷೆ, ಸಂಸ್ಕೃತಿಯ ಅಭಿವ್ಯಕ್ತಿಯ ದೃಷ್ಟಿಯಿಂದ ಇದು ಪರಿಪೂರ್ಣ ಕಾದಂಬರಿ ಎನ್ನಬಹುದು.'[೨೩] ಆಂಗ್ಲ ಸಾಹಿತ್ಯದ ನೇರವಾದ ಪ್ರಭಾವವಿಲ್ಲದೆ ದೇಶಿಸಂವೇದನೆಗಳನ್ನು ಹೊಮ್ಮಿಸುವ ಕೃತಿ ಇದಾಗಿದೆ.

ಮುಂಬಯಿ ಕರ್ನಾಟಕದ ಜನರ ಭಾಷೆ, ಜೀವನಕ್ರಮವನ್ನು ಚಿತ್ರಿಸುತ್ತ ಗಮನ ಸೆಳೆಯುವ ರಂ.ಶಾ. ಲೋಕಾಪೂರ ಅವರ ತಾಯೀಸಾಹೇಬ (೧೯೭೪) ಇನ್ನೊಂದು ಪ್ರಾತಿನಿಧಿಕ ಕೃತಿಯಾಗಿದೆ. ಒಂದು ಪರಿಸರದ ಜೀವನಕ್ರಮವನ್ನು, ಕೌಟುಂಬಿಕ ನೆಲೆಗಟ್ಟಿನಲ್ಲಿ ಚಿತ್ರಿಸುತ್ತ ಹೋಗುವ ಕೃತಿ 'ಇನಾಮ್ ಜಮೀನು ರದ್ಧತಿ ಕಾನೂನು (೧೯೫೫)' ಪೂರ್ವ ಕಾಲಘಟ್ಟದಲ್ಲಿ ರಚಿತವಾಗಿದೆ. ತಾಯೀ ಸಾಹೇಬ ವ್ಯಕ್ತಿ ಚಿತ್ರಣ, ವಾತಾವರಣ ಸೃಷ್ಟಿ ಮತ್ತು ಕೌಟುಂಬಿಕ ಮೌಲ್ಯ ವ್ಯವಸ್ಥೆಯನ್ನು ಹೊಂದಿಸಿಕೊಂಡು ಸಾಗುತ್ತ, ಜಮಿನ್ದಾರಿ ಪದ್ಧತಿಯ ಎಲ್ಲ ಹೊಳವುಗಳನ್ನು ಬಿಡಿಸಿಡುವ ಕಾದಂಬರಿಯಾಗಿದೆ.

ಬಾಳಕೃಷ್ಣ ಇನಾಂದಾರನ ಶ್ರಾದ್ಧದ ಸಿಹಿಬಾಯಿ ದಿನ ಹತ್ತಾರು ಜನ ಬ್ರಾಹ್ಮಣರು ಉಂಡಿ ಊಟ ಮಾಡಿದ್ದಕ್ಕೆ (೧೯೪೮ರ ಗಾಂಧೀ ಹತ್ಯೆಯ ಪ್ರತಿಕಾರದ ಪರಿಣಾಮವಾಗಿ) ಛತ್ರಪತಿ ಸರಕಾರದ ಜನರಿಂದ ಅವರೆಲ್ಲರ ಮನೆಗಳು (ಇನಾಮದಾರನ ವಾಡೆ ಸಮೇತ) ಸುಡಲ್ಪಡುತ್ತವೆ. ಇನಾಂದಾರನ ಇಬ್ಬರು ಸಂತಾನವಿಲ್ಲದ ಹೆಂಡಂದಿರು ರಾಧಾಬಾಯಿ, ನರ್ಮದೆ ಹಾಗೂ ಮೂರು ಗಂಡು ಒಂದು ಹೆಣ್ಣು ಮಕ್ಕಳ ತಾಯಿಯಾದ ಚಂದ್ರ (ರಖೇಲಿ) ಇವರ ಮಧ್ಯೆ ವಾಡೆಯ ಜಮಿನ್ದಾರಿ ಆಸ್ತಿಗಾಗಿ ನಡೆಯುವ ಘರ್ಷಣೆ ಇಲ್ಲಿನ ಪ್ರಧಾನ ವಸ್ತುವಾಗಿದೆ. ದ್ವೇಷಾಸೂಯೆ ಗೊತ್ತಿರದ, ವಿದ್ವತ್ತಿಲ್ಲದ, ಸಾಮಾನ್ಯ, ಸರಳ ಪಾತ್ರಗಳಾಗಿದ್ದ ಈ ಮೂವರು ಮಹಿಳೆಯರು ಸವತಿ ಮಾತ್ಸರ್ಯ ಹೊಂದಿದ್ದರೂ ದ್ವೇಷಿಸುವಷ್ಟು ಕೆಟ್ಟವರಲ್ಲ ಎಂಬುದು ಗಮನಾರ್ಹ. ಮೊದಲನೆಯ ಹೆಂಡತಿ ರಾಧಾಬಾಯಿಯ ಸಂಬಂಧಿ ಗೋವಿಂದಪ್ಪ ತನ್ನ ಹಿರಿಮಗ ನಾರಾಯಣನನ್ನು ಇನಾಂದಾರಿ ಮನೆತನಕ್ಕೆ ದತ್ತಕ ಕೊಟ್ಟಾಗ ಕುಟುಂಬದಲ್ಲಿ ಬಿರುಗಾಳಿ ಕಾಣಿಸಿಕೊಳ್ಳುತ್ತದೆ. ಆಸ್ತಿ ಅನುಭವಿಸಲು ಗೋವಿಂದಪ್ಪ ಹೂಡುವ ಕುತಂತ್ರಗಳು, ನಾರಾಯಣನ ಅಂಕೆ ಮೀರಿದ ನಾಲಿಗೆ, ದುರಭ್ಯಾಸಗಳು ಅಕ್ಕಾಸಾಹೇಬಳನ್ನು (ರಾಧಾಬಾಯಿ) ಮತ್ತು ನಾರಾಯಣನ ತಾಯಿ ತಿಪ್ಪವ್ವನನ್ನು ಬಲಿ ತೆಗೆದುಕೊಳ್ಳುತ್ತವೆ. ನಾರಾಯಣನ ವಿಲಾಸಿ ಜೀವನ ಮಿತಿಮೀರಿದಾಗ, ದತ್ತಕ ಕೃತ್ರಿಮ, ಒಂದು ಕ್ಷುಲ್ಲಕ ವಿಧಿಯಿಂದ ಹೊಸೆವ ಗಂಟು. ಅದನ್ನು ಬಿಡಿಸಲಾಗದ ಕಾಯಿದೆ, ಕೋರ್ಟು, ಸಮಾಜಗಳು ಅಸಹಾಯಕ ಸಂಸ್ಥೆಗಳು ಎನ್ನುವುದು ಸಾಬೀತಾಗುತ್ತದೆ. ಇನಾಮದಾರಿ ಜಮೀನುಗಳನ್ನು ಹೊಂದಿದ ಮೇಲ್ವರ್ಗದ ಮನೆತನಗಳು ದತ್ತು ಪ್ರಕ್ರಿಯೆ ಕೈಗೊಳ್ಳುವ ಮುನ್ನ ಇನಾಮ ಕೊಟ್ಟ ಕೊಲ್ಲಾಪುರ ಸಂಸ್ಥಾನದ ಪೂರ್ವಾನುಮತಿ ಪಡೆಯಲೇಬೇಕು ಎಂಬ ನಿಯಮದಡಿ ಪ್ರಸ್ತುತ ದತ್ತಕ ಕೋರ್ಟಿನಲ್ಲಿ ರದ್ದಾಗಿ ಆಸ್ತಿಯನ್ನು ಯಜಮಾನನ ರಖೇಲಿಯ ಗಂಡುಮಕ್ಕಳಿಗೆ ವಿಲೇವಾರಿ ಮಾಡಲಾಗುತ್ತದೆ. ಭೂಮಿಯನ್ನು ಗಂಡನ ರಖೇಲಿ ಮಕ್ಕಳಿಗೆ ವಿಲೇವಾರಿ ಮಾಡುವ ಸಂದರ್ಭದಲ್ಲಿ, 'ಯಾವುದೋ ಮನೆಯಿಂದ ಬರುವ ದತ್ತಕ ಪುತ್ರನಿಗಿಂತ, ಯಜಮಾನನ ಅನೌರಸ ಪುತ್ರರೇ ತನ್ನ ವಂಶಕ್ಕೆ, ಆಸ್ತಿಗೆ ಸಮೀಪ' ಎಂಬ ಅವಳ (ತಾಯೀಸಾಹೇಬ) ನಿರ್ಧಾರ ಪುರೋಗಾಮಿಯಾದುದಾಗಿದೆ. ಇಲ್ಲಿ ಜಾತಿ, ಧರ್ಮ, ವೈವಾಹಿಕ ಮೌಲ್ಯಗಳು ಗೌಣವಾಗಿ ರಕ್ತ ಸಂಬಂಧ ಮಾತ್ರ ಕೌಟುಂಬಿಕ ಮೌಲ್ಯವೆಂದು ನಿರ್ಧಾರವಾಗುವುದು ಪ್ರಗತಿಪರತೆಯ ವಿಜಯವಾಗಿದೆ. 'ಕೆರೀ ನೀರು ಕೆರಿಗೆ ಚೆಲ್ಲಿದಂಗಾತು. ಕಟ್ಟೀ ಕಲ್ಲು ಕಟ್ಟೆಗೆ ಕೂತ್ಹಾಂಗ ಆತು''[೨೪] ಎಂಬ ತಾಯೀಸಾಹೇಬಳ ಮಾತು ಇದನ್ನು ಪುರಸ್ಕರಿಸುತ್ತದೆ.

ದತ್ತಕ ಪ್ರಕ್ರಿಯೆಯ ನಂತರ ಜಮೀನ್ದಾರನಾಗುವ ನಾರಾಯಣ ಮತ್ತು ಇನಾಂದಾರರ ಎರಡನೇ ಹೆಂಡತಿ ನರ್ಮದಾ ಇವರ ಕಾನೂನಿನ ಹೋರಾಟದಲ್ಲಿ ಎದ್ದು ಕಾಣುವ ಅಂಶವೆಂದರೆ ರಖೇಲಿ ಚಂದ್ರಳ ಮಕ್ಕಳಿಗೆ ಭೂಮಿಯ ಹಕ್ಕಿಲ್ಲದಿರುವುದು! ಸ್ವಂತ ಹೆಂಡಂದಿರಿಗೆ ಮಕ್ಕಳಿಲ್ಲದಿದ್ದರೂ ರಖೇಲಿ ಚಂದ್ರಳ ಮಕ್ಕಳು ಉತ್ತರಾಧಿಕಾರಿಗಳಾಗುವುದಿಲ್ಲ. ಈ ಆರ್ಥಿಕ, ಸಾಮಾಜಿಕ ವೈಪರೀತ್ಯಕ್ಕೆ ಜಾತಿ, ಅಂತಸ್ತು, ಸಂಪ್ರದಾಯ ಸಂಬಂಧಗಳ ಬೇರುಗಳಿರುವುದನ್ನು ಇಲ್ಲಿ ಅಧ್ಯಯನ ಗಮನಿಸುತ್ತದೆ. ಶಾಂತಿನಾಥ ದೇಸಾಯಿ ಅವರ 'ಬೀಜ' ಕಾದಂಬರಿಯಲ್ಲಿಯೂ ಈ ರೀತಿಯ ಸಂದರ್ಭವನ್ನು ಕಾಣಬಹುದಾಗಿದೆ. ಮುಂಬಯಿಯಿಂದ ತಂದೆಯ ಅಂತ್ಯ ಸಂಸ್ಕಾರದಲ್ಲಿ ಪಾಲ್ಗೊಳ್ಳಲು ಬಂದ ಶ್ರೇಯಾಂಸನಿಗೆ, ಅವರ ಕುಟುಂಬದ ಹಿತೈಷಿ ಕಲ್ಯಾಣಶೆಟ್ಟರು 'ಅದೆಂಗಾಗಬೇಕು? ನೀನೂ ಸಂಬಂಧ ಕಳಕೊಂಡ ಹುಡುಗ. ಅಂದಾಂಗ, ಮುಂಬೈಕ ಹೋಗಿ ನೀ ನಿನ್ನ ಬೇರನ್ನ ಕಳಕೊಂಡಬಿಟ್ಟೆ'[೨೫] ಎನ್ನುವ ಮಾತು ಈ ಬೇರಿನ ಪ್ರಶ್ನೆಯ ಮೂಲವನ್ನು ಶೋಧನೆಗೆ ಪ್ರೇರೇಪಿಸುತ್ತದೆ. ಸಂಬಂಧ ಕಳಕೊಂಡ ಸ್ವಂತ ಮಗನೆ ಆಸ್ತಿ ಸಂಬಂಧಿತ ಬೇರು ಕಳೆದುಕೊಂಡ ಮೇಲೆ, ರಖವಾಲಿಯ ಮಕ್ಕಳಿಗೆ ಆ ಹಕ್ಕು ಉಂಟೆ, ರಕ್ತ ಹಂಚಿಕೊಂಡು ಹುಟ್ಟಿದ ಕೆಳವರ್ಗದ ಸ್ತ್ರೀಯ ಮಕ್ಕಳು ಹಕ್ಕುದಾರರು ಯಾಕಾಗಬಾರದು ಎಂಬ ಪ್ರಶ್ನೆಗಳು ಜಮಿನ್ದಾರಿ

ವ್ಯವಸ್ಥೆಯನ್ನೆ ಅಲ್ಲಾಡಿಸುವಂತಹುಗಳಾಗಿವೆ. ಶ್ರೇಯಾಂಸನ ತಾಯಿ, ಸಂಬಂಧಿಕರು, ಕಲ್ಯಾಣಶೆಟ್ಟರು ಇವರೆಲ್ಲ ಶ್ರೇಯಾಂಸನ ಅಪ್ಪನ ರಖವಾಲಿಗೆ ಒಂದು ತುಂಡು ಜಮೀನು ಕೊಡುವುದನ್ನು ವಿರೋಧಿಸುವ ಸಂದರ್ಭದಲ್ಲಿ ಈ ವ್ಯವಸ್ಥೆಯ ಭದ್ರ ಹಿಡಿತ ಪ್ರಕಟವಾಗಿದೆ.

ಈ ಕಾಲಘಟ್ಟದಲ್ಲಿ, ಗಮನ ಸೆಳೆದ ಕರಾವಳಿಯ ಕತೆಗಾರರೆಂದರೆ ಕೊರಡ್ಕಲ್ ಶ್ರೀನಿವಾಸರಾವ್, ವಿ.ಜಿ. ಶಾನಭಾಗ, ಕೆ.ವಿ. ಶಾಸ್ತ್ರಿ ಕಿಬ್ಬಳ್ಳಿ ಮುಂತಾದವರಾಗಿದ್ದಾರೆ. ತಲೆಬರಹದಲ್ಲಿಯೆ ಊಳಿಗಮಾನ್ಯ ವ್ಯವಸ್ಥೆಯ ಕ್ರೂರ ಪರಂಪರೆ, ಮುಗ್ಧತೆಗಳ ಸಂಘರ್ಷವನ್ನು ಹೊರ ಹಾಕುವ ಕೊರಡ್ಕಲ್ ಶ್ರೀನಿವಾಸರಾವ್ ಅವರ 'ಧನಿಯರ ಸತ್ಯನಾರಾಯಣ' ಕತೆಯು, ಭೂಮಾಲೀಕರು ದೈವತ್ವದ ನೆಲೆಯಲ್ಲಿ ಶ್ರಮಿಕ ವರ್ಗವನ್ನು ಶೋಷಿಸುವ ಕತೆಯಾಗಿದೆ. ಭೂರಹಿತ ಕೆಳವರ್ಗದ ಜನರ ಶ್ರಮದ ಫಲವು ಹೇಗೆ ದೇವರ ಹೆಸರಿನಲ್ಲಿ ಧಣಿಗಳ ಪಾಲಾಗುತ್ತದೆ, ಅವರ ರೋದನ ಧ್ವನಿ ಸತ್ತು ಉಡುಗುವ ಸತ್ಯವು ಕತೆಯಲ್ಲಿ ಅನಾವರಣಗೊಂಡಿದೆ. 'ಧನಿ (ಧಣಿ)' ಎಂಬ ಪದ ಪ್ರಯೋಗವು ಶೋಷಣೆಯ ತೀವ್ರತೆಯನ್ನು ಸೂಚಿಸುವ ಅಂಶವಾಗಿದ್ದು, ಶ್ರಮಿಕ ವರ್ಗಕ್ಕೆ ವಿರೋಧಿ ನೆಲೆಯಲ್ಲಿ ನಿಲ್ಲುತ್ತದೆ. ಕೂಲಿ ಮಾಡಿ ಬದುಕುವ ತೌಡ, ದೆಯ್ಯಿಯರು ಭೂಮಾಲೀಕನ ಜಾಗದಲ್ಲಿ ಬಾಡಿಗೆ ಕೊಟ್ಟು ಗುಡಿಸಲು ಹಾಕಿಕೊಂಡಿದ್ದು ಇಲ್ಲಿ ಶೋಷಣೆಗೆ ನೆಲೆಯಾಗಿದೆ. ಆ ಜಾಗದಲ್ಲಿ ಬೆಳೆದ ಎಲ್ಲದಕ್ಕೂ ಧನಿ(ಣಿ) ಒಡೆಯನಾಗುವುದು, ದುಡಿಮೆಯ ಶ್ರಮ ದುಡಿದವರಿಗೆ ದಕ್ಕದಿರುವುದು ವ್ಯವಸ್ಥೆಯ ವ್ಯಂಗ್ಯವೆನ್ನಬಹುದು. ಕತೆಯಲ್ಲಿ ಬರುವ 'ಅವರು ಹೊತ್ತು ತಂದ ಕಂದು, ಅವರಪ್ಪ ನೆಟ್ಟ ಕಂದು, ಅವರು ನೀರೆರೆದು ಬೆಳಸಿದ ಕಂದು, ಅದು ಬಿಟ್ಟ ಗೊನೆಯು ಅವರದು ಅದು ಹಣ್ಣಾದಾಗ ಅದನ್ನೆಲ್ಲರಿಗೆ ಪಾಲು ಮಾಡಿ ಹಂಚುವವರೂ ಅವರೆ. ಅವರಜ್ಜಿಗೂ ಒಂದು ಪಾಲಿದೆ ಅದರಲ್ಲಿ'[೨೩] ಎಂಬ ಮಾತು ಕಂದು ಒಂದೇ ಆದರೂ ಅದರ ಫಲದಲ್ಲಿ ಅನೇಕ ಪಾಲುಗಳಿರುವುದನ್ನು ಹೇಳುತ್ತದೆ. ಇದು ಶ್ರಮವಿಭಾಜಕ ತತ್ವದಡಿ ಬೆಳೆದ ಫಲ ಎಂಬ ಧ್ವನಿ ಕಥೆಯಲ್ಲಿ ಸ್ಥಾಯಿಯಾಗಿದೆ. ಶ್ರಮದ ಪಾಲು ಹೀಗೆ ಹೀಗೆ ಎಂದು ಗುರುತಿಸುತ್ತ ಏಕಾಏಕಿ ಫಲ ಒಡೆಯನದಾಗುವುದು ಅಂತರಂಗವನ್ನು ತಲ್ಲಣಗೊಳಿಸುವ ವ್ಯವಸ್ಥೆಯ ತಣ್ಣನೆಯ ಕ್ರೌರ್ಯವಾಗಿದೆ. "ಮಕ್ಕಳಿಗೆ ರಸಬಾಳೆ ಹಣ್ಣೋ?, ಮಣ್ಣೋ ! ದೇವರ ಬಾಯಿಗೆ ಬೀಳಲಿ ! ಮಕ್ಕಳ ಮೈಕ್ಕೆ ಸುಖ ಕೊಡುತ್ತಾನೆ, ಸತ್ಯನಾರಾಯಣ! ಮಕ್ಕಳಿಗಿಟ್ಟುಕೊಂಡು ದೇವರಿಗೆ ಕೊಡೋದೆ? ಹೀಗೆಲ್ಲ ಮಾಡೋದ್ರಿಂದ ದರಿದ್ರ ತಪ್ಪೋದಿಲ್ಲ ನಿಮಗೆ !" (ಪುಟ ೧೧) ಎಂಬ ಧನಿಯ ಮಾತಲ್ಲಿ ದೇವರ ಹೆಸರಿನಲ್ಲಿ ಮುಗ್ಧರನ್ನು ಕತ್ತಲಿನಲ್ಲಿಟ್ಟು ಶೋಷಿಸುವ ಸ್ಥಾಪಿತ ಹಿತಾಸಕ್ತಿಯ ಹುನ್ನಾರ ಅಡಗಿರುವುದನ್ನು ಕಾಣುತ್ತೇವೆ. 'ದೇವ್ರು ಅದನ್ನು ತಿನ್ನುತ್ತಾರೆಯೆ?' ಎಂದು ಬೂದ(ಪುಟ್ಟ ಮಗು)ನ ಪ್ರಶ್ನೆ. 'ದೇವ್ರಿಗೆ ಅಷ್ಟೂ ಬೇಕಿತ್ತೆ? ನಮಗೆ ಎರಡೆರಡು-ಒಂದೊಂದು ಆದರೂ ಇರಬಾರದಿತ್ತೆ?' ಎಂದು ತುಕ್ರಿಯ ತರ್ಕಗಳು ಮಕ್ಕಳ ಮುಗ್ಧ, ನಿಷ್ಕಳಂಕ ಪ್ರಶ್ನೆಗಳಾದರೂ ಒಂದು ವ್ಯವಸ್ಥೆಯನ್ನೇ ನೇರವಾಗಿ ಅಲ್ಲಾಡಿಸುವ ಸತ್ವವನ್ನು ಹೊಂದಿವೆ. ಆದರೆ ಅವರ ಅಂತಿಮ ಆವೇಶ ಕಂದುಗಳನ್ನು ನಾಶಗೊಳಿಸುವುದರಲ್ಲಿ ಮಾತ್ರ ತೊಡಗಿದ್ದು, ಆ ರೋಷ ಭೂಮಾಲೀಕರನ್ನು ಸ್ಪರ್ಶಿಸುವುದಿಲ್ಲ ಎಂಬುದು ಕತೆಯಲ್ಲಿ ಕಾಣುವ ವಿಷಾದವಾಗಿದೆ.

ಇದೇ ಕಾಲಘಟ್ಟದಲ್ಲಿ ಪ್ರಕಟವಾದ ಆನಂದ ಕಂದ ಅವರ 'ಮಾಲ್ಕಿ ಹಕ್ಕು' ಕತೆಯಲ್ಲಿಯೂ ಇಂತಹುದೆ ಒಂದು ಸಂದರ್ಭ ಬರುತ್ತದೆ. ಕತೆಯ ಹೆಸರು ಸೂಚಿಸುವ ಹಾಗೆ ಮಾಲಿಕ, ಕೃಷಿಕ(ಕೂಲಿ)ರ ನಡುವೆ ಕರ್ಷಣೆಗೆ ಕಾರಣವಾಗುವ ಭೂಮಿಯ ಒಡೆತನದ ಪ್ರಶ್ನೆ ಇಲ್ಲಿಯೂ ಪ್ರಮುಖವಾಗಿದೆ. ತಮ್ಮ ಬಾಲ್ಯದ ಪ್ರಸಂಗವನ್ನು ಕತೆಯಾಗಿಸಿದ ಕತೆಗಾರರು ಭೂಮಿಯ ಹಕ್ಕು ಕುರಿತು ಎತ್ತುವ ಪ್ರಶ್ನೆ ಅಂದಿನ ವ್ಯವಸ್ಥೆಯನ್ನು ಪ್ರತಿಭಟಿಸುವಂತಿದ್ದರೂ, ಹಾಸ್ಯ ಪ್ರಸಂಗವಾಗಿ ತೇಲುತ್ತ ಪ್ರತಿಭಟನೆಯಾಗುವ ತೀವ್ರತೆಯನ್ನು ಕಳೆದುಕೊಳ್ಳುತ್ತದೆ. ಲಿಂಗಣ್ಣ(ಕಾರ್ಮಿಕ)ನ ಹೆಂಡತಿ ತಾವು ಉತ್ತಿ, ಬಿತ್ತಿ ಬೆಳೆದ ಕಾಯಿಪಲ್ಯೆಯನ್ನು ತಿನ್ನುವಂತಿಲ್ಲ! ಅವು ಶ್ರಮ ವಹಿಸದ, ಭೂಮಿ ಹಕ್ಕು ಮಾತ್ರ ಹೊಂದಿದ ಧನಿಯ ಮನೆಗೆ ಉಪಯೋಗವಾಗುತ್ತವೆ. ಹೊಲದಲ್ಲಿ ತನಗೆ ಸಿಕ್ಕ ಧನಿಯ ಪುಟ್ಟ ಮಗಳ ಬಂಗಾರದ ಬಳೆಗಳನ್ನು ಮರಳಿಸಿದ ಸಾತಮ್ಮ (ಲಿಂಗಣ್ಣನ ಹೆಂಡತಿ) ಪ್ರಾಮಾಣಿಕಳಾಗಿ ಕಾಣಿಸಿದರೆ, ಧನಿಯ ತೋಟದಲ್ಲಿ ಬೆವರು ಸುರಿಸಿ ಬೆಳೆದ ನಾಲ್ಕು ಬಾಳೆ ಗೊನೆ ಮಾರಿ ಜಾತ್ರೆಗೆ ಮಕ್ಕಳಿಗೆ ಬಟ್ಟೆ ಕೊಂಡಿದ್ದಕ್ಕೆ ಅದೇ ಸಾತಮ್ಮ ಕಳ್ಳಿಯೆನಿಸುತ್ತಾಳೆ. ಪರಿಣಾಮವಾಗಿ ತೋಟದಲ್ಲಿ ಕೃಷಿ ಮಾಡುವ ಹಕ್ಕನ್ನು ಕಳೆದುಕೊಳ್ಳುವುದು ವ್ಯವಸ್ಥೆಯ ವಿಪರ್ಯಾಸವಾಗಿದೆ!

ಇಂತಹ ವ್ಯವಸ್ಥೆಯನ್ನು ಕುರಿತು ಪ್ರಶ್ನಿಸುತ್ತ ಕಥನ ಸಾಹಿತ್ಯ ಬಿತ್ತುವ ಮಾನವೀಯ ಸಂವೇದನೆಗಳನ್ನು ಸೂಕ್ಷ್ಮವಾಗಿ ಗಮನಿಸೋಣ. 'ಬಾದಶಹನಿಗೆ ಸಹಾಯ ಮಾಡಿ, ನಮ್ಮ ಪೂರ್ವಜರು ಪಡೆದ ಭೂಮಿಗೆ ನಾವಿಂದು ಒಡೆಯರಾಗಿ, ಕೈಕೆಸರು ಮಾಡಿಕೊಳ್ಳದೆ ಕುಳಿತಲ್ಲಿಯೇ ಮೊಸರನ್ನವನ್ನು ಉಣ್ಣುತ್ತಿದ್ದೆವು, ಅಲ್ಲದೆ ಲಿಂಗಣ್ಣನು ನಮ್ಮ ಸೇವಕನೆಂಬ ಕೀಳ್ನೋಟಕ್ಕೆ ನಮ್ಮೆಲ್ಲರ ಹೃದಯದಲ್ಲಿಯೂ ಇಂಬುಗೊಟ್ಟಿದ್ದೆವು!'[೨೭] ಜಮಿನ್ದಾರಿ ಪದ್ಧತಿಯಂತೆ ಭೂಮಾಲೀಕ ವರ್ಗ ದುಡಿಯದೇ ಉಂಡುಟ್ಟು ಸುಖವಾಗಿದ್ದರೆ, ಅಂತವರ ಜಮೀನಿನಲ್ಲಿ ಗೇಣಿ ದುಡಿಯುವ ರೈತ ಹೊಟ್ಟೆಗಿಲ್ಲದೆ ಬಳಲುತ್ತಾನೆ. ಒಂದೇ ವಯಸ್ಸಿನ ಇಬ್ಬರು ಬಾಲಕರಲ್ಲಿ ಒಬ್ಬನು (ಮಾಲಿಕನ ಮಗ) ತೋಟದಲ್ಲಿ ಪೂಜೆಗೆ ಹೂ ಕೀಳುತ್ತಿರುವುದು, ಇನ್ನೊಬ್ಬನು (ಗೇಣಿ ರೈತನ ಮಗ) ಜ್ವರದಿಂದ ಬಳಲುತ್ತ ಸುರಿಯುತ್ತಿರುವ ಮಳೆಯಲ್ಲಿ ಕಳೆ ಕೀಳುತ್ತಿರುವ ದೃಶ್ಯ ಗ್ರಾಮೀಣ ಪರಿಸರದಲ್ಲಿನ ವರ್ಗ ವೈಷಮ್ಯದ ದ್ಯೋತಕವಾಗಿದೆ. ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಅಸಮಾನತೆಗೆ ಕಾರಣಗಳಾದ ದೇವರು ಕುರಿತ (ಮೂಢ?) ನಂಬಿಕೆ ಮತ್ತು ಇಲ್ಲಿನ ಬಡತನವನ್ನು ಈ ಎರಡು ವ್ಯಕ್ತಿತ್ವಗಳು ಪ್ರತಿನಿಧಿಸುತ್ತವೆ. ಇದರೊಂದಿಗೆ ಈ ಕಾಲಘಟ್ಟದ ಸಾಹಿತ್ಯ ಜನಪರ ಧೋರಣೆಯತ್ತ ಸರಿಯುತ್ತಿದ್ದುದರ ಅರಿವಾಗುತ್ತದೆ. ಭೂಮಿಯ ಹಕ್ಕನ್ನು ಎಲ್ಲರೂ ಸಮಾನವಾಗಿ ಹೊಂದುವ, ಅದಕ್ಕಾಗಿ ಹೋರಾಡುವ ಸೈದ್ಧಾಂತಿಕ ತಳಹದಿಯ ಹೋರಾಟಗಳು ಇನ್ನೂ ಅಂಕುರವಾಗುತ್ತಲೇ ಇವೆಯೆ ಎಂಬ ಜಿಜ್ಞಾಸೆ ಈ ಸಂವೇದನೆಯ ಮೂಲದಲ್ಲಿದೆ. ಹ.ಪಿ. ಜೋಷಿಯವರ, 'ಕಿಚ್ಚಿನ ಕಾವಲು' (೧೯೩೩) ಕತೆಯೂ ಸಹ ಇದೇ ವ್ಯವಸ್ಥೆಯ ಸಂವೇದನೆಗಳನ್ನು ಬಿತ್ತುವ  ಕತೆಯಾಗಿದೆ. ಮನುಷ್ಯರ ಮನದಾಳದಲ್ಲಿ ಅವರಿಗೇ ಗೊತ್ತಾಗದಂತಿರುವ ದ್ವೇಷ, ವೈರ, ಸೇಡು, ದುರಭಿಮಾನಗಳು ಪ್ರೀತಿ, ವಿಶ್ವಾಸದ ನಂಬಿಕೆಯ ಚಿಪ್ಪನ್ನೊಡೆದು ಹೊರನುಗ್ಗಿ ಬಂದು ಸರ್ವನಾಶಕ್ಕೆ ಕಾರಣವಾಗುವ ಬಗೆಯನ್ನು ಬಿಂಬಿಸುವ ಕಥೆಯಾಗಿದೆ. ಹೆಸರೇ ಸೂಚಿಸುವ ಹಾಗೆ 'ಕಿಚ್ಚಿನ ಕಾವಲು' ಸೇಡಿನ, ತನ್ನಲ್ಲಿ ಹಿಂಸೆಯನ್ನು ಹಿಡಿದಿಟ್ಟುಕೊಂಡ ಕತೆಯಾಗಿದೆ. ದ್ವೇಷದ ದಳ್ಳುರಿಗೆ ಸಿಲುಕಿದ ಇಬ್ಬರು ಜಮೀನುದಾರರು, ಕೋರ್ಟು, ಕಚೇರಿ, ನ್ಯಾಯ ಎನ್ನುತ್ತ ಉರಿದುರಿದು ನಾಶವಾಗುವುದು ಒಂದು ವ್ಯವಸ್ಥೆಯ ಅವಸಾನದ ಸಂಕೇತವೂ ಆಗುತ್ತದೆ. ಒಬ್ಬ ಸತ್ತಾಗ, ಇನ್ನೊಬ್ಬ ಅನಾಮಿಕನಾಗಿ ಬಂದು ಕಿಚ್ಚಿನ ಹತ್ತಿರ ನಿಂತುಕೊಳ್ಳುವುದು, ಶವಕ್ಕೆ ಸ್ಮಶಾನದಲ್ಲಿ ಕಿಚ್ಚಿಡುವಾಗ ಜಾತಿ ನೆಲೆಯಲ್ಲಿ ಅಂಜುವ ಶೂದ್ರರ ಅಳುಕು, ದುಗುಡಗಳು ಇಲ್ಲಿ ವ್ಯಕ್ತವಾಗಿವೆ. ಇದಕ್ಕೆ ಉತ್ತರವಾಗಿ, 'ಕಿಚ್ಚಿಗ್ಯಾತರ ಮೈಲಿಗಿ? ಇಲ್ಲಿ (ಸ್ಮಶಾನ) ಬಂದ ಮ್ಯಾಲ ಎಲ್ಲಾರು ದೇವರ'[೨೮] ಎಂಬ ಮಾತು ಯಾರು ದೇವರು, ಸತ್ತವರೆ ಇಲ್ಲ ಜೀವಂತ ನಿಂತವರೆ (ಭೂಸುರರೆ) ಎಂಬ ಜಿಜ್ಞಾಸೆ ಹುಟ್ಟಿಸುತ್ತದೆ.

ಬಿ. ಟಿ. ದೇಸಾಯಿ ಅವರ 'ಹೋರಿ' ಕತೆಯು ಜಮಿನ್ದಾರಿಕೆಯ ವಿಷಮ ಸ್ವಭಾವಗಳನ್ನು ಎತ್ತಿ ಹೇಳುವ ಪ್ರಾತಿನಿಧಿಕ ಕತೆಯೆನ್ನಬಹುದು. ಮುಂಬಯಿ ಕರ್ನಾಟಕದ ಬಯಲುಸೀಮೆಯ ಹಾವೇರಿ, ಅಗಡಿ, ಹೊಸರಿತ್ತಿ, ನೆಗಳೂರು, ಗುತ್ತಲ, ಕಬ್ಬೂರು, ಬಸಾಪುರ ಮೊದಲಾದ ಗ್ರಾಮೀಣ ಪ್ರದೇಶಗಳಲ್ಲಿ ಇಂದಿಗೂ ಕಾಣಸಿಗುವ ಭೂ ಒಡೆತನ, (ಕತೆಯ ಹೆಸರು ರೂಪಕವಾಗುವ ಹಾಗೆ) ಅದರಿಂದುಂಟಾಗುವ ಆರ್ಥಿಕ ಶಕ್ತಿಯ ಅಹಂಕಾರ ಪ್ರದರ್ಶನ, ವೈಷಮ್ಯ, ಭೂಮಿಯನ್ನು ಗೆಲ್ಲುವಾಗಿನ (ಕೊಳ್ಳು, ಹಕ್ಕುಪತ್ರ ಬದಲಾಯಿಸಿ) ಮೋಸ, ದೌರ್ಜನ್ಯಗಳು, ಸ್ತ್ರೀ ವ್ಯಾಮೋಹಿತ ಸ್ಪರ್ಧೆಗಳು ಕತೆಯಲ್ಲಿ ಹಾಸು ಹೊಕ್ಕಾಗಿವೆ. ತಲೆತಲಾಂತರದಿಂದ ಬಂದ ಪರಸಿ ಬಸವೆಣ್ಣೆ ಮತ್ತು ಕುಲಕರ್ಣಿ ರಂಗಣ್ಣ ಇವರ ಮಧ್ಯೆ ನಡೆಯುವ ವೈಷಮ್ಯ, ದ್ವೇಷಗಳು, ಭೂಮಿ, ಹೆಣ್ಣು, ಹೋರಿಗಳನ್ನು ಪಡೆಯುವಲ್ಲಿ ಮುಂದುವರೆಯುತ್ತವೆ. ಇಲ್ಲಿ ಪುನಃ ಶೋಷಣೆಗೆ ಒಳಗಾಗುವವರು ಕೆಳಜಾತಿ (ವರ್ಗ ಶೋಷಣೆ) ಹಾಗೂ ಮಹಿಳೆ(ಲೈಂಗಿಕ ಶೋಷಣೆ)ಯರು ಎಂಬುದು ಗಮನಿಸತಕ್ಕ ವಿಚಾರವಾಗಿದೆ. ಪರಿಸಿ ಮನೆತನದ ಮೇಲಿನ ಜಿದ್ದಿನಿಂದ ರಂಗಣ್ಣ ಆ ಪ್ರದೇಶದಲ್ಲಿಯೇ ಹೌದೌದೆನ್ನುವ ಹೋರಿ ಕೊಂಡು, ಅದರಿಂದಲೇ ಹಾಯಿಸಿ(ಚುಚ್ಚಿಸಿ)ಕೊಳ್ಳುತ್ತಾನೆ. ತನ್ನ ಹೋರಿ ತನ್ನ ವಿರುದ್ಧವೇ ತಿರುಗಿ ಬಿದ್ದಿದ್ದನ್ನು ಸಹಿಸದ ರಂಗಣ್ಣ ಅದನ್ನು ಒನಕೆಯಿಂದ ಮನದಣಿಯೆ ಹೊಡೆಯುತ್ತಾನೆ. ಮುರಿದ ಒನಕೆಯನ್ನು ಎಸೆಯುತ್ತ, 'ರಾಘು ಅದನ್ನು ಹೊಡೆದ್ನೆಲ್ಲ, ಒಂದು ಥರಾ ಸುಖ ಆತು ನೋಡು ನನಗ, ಸುಂದರಿ (ಪರಸಿ ಮತ್ತು ಕುಲಕರ್ಣಿ ಮನೆತನಗಳ ಜಿದ್ದಿಗೆ ಕಾರಣವಾದ ಆ ಊರಿನ ಸುಂದರ ಹೆಣ್ಣು) ಮಗ್ಗುಲದಾಗ ಒಮ್ಮೆ ಮಲಗಿ ಎದ್ದಂಗ ಅನ್ನಿಸಿತು'[೨೯] ಎಂಬ ಮಾತು ಕಾಮ, ಕ್ರೌರ್ಯ ಮತ್ತು ದೌರ್ಜನ್ಯಗಳ ಅಂಕುರದ ಮೂಲನೆಲೆ ಜಮೀನ್ದಾರಿ ಅಹಂಕಾರ ಎಂಬುದನ್ನು ಅಭಿವ್ಯಕ್ತಿಸುತ್ತದೆ. ಕೆಳವರ್ಗದ ಜನರ ಬಡತನ, ಮೌಢ್ಯಗಳನ್ನು ಉಪಯೋಗಿಸಿಕೊಂಡು, ಮೇಲ್ಜಾತಿಯ ಬುದ್ಧಿವಂತರ ಸಮಯಸಾಧಕತನದ ಬೆಂಬಲ ಪಡೆದು ದೇಸಗತಿ

ಕಟ್ಟಿದ ದರೋಡೆಕೋರ(ಪಿಂಡಾರಿ)ನೊಬ್ಬನ ಕತೆ ರಾಘವೇಂದ್ರ ಪಾಟೀಲರ 'ದೇಸಗತಿ'. ಅನಾಯಾಸವಾಗಿ ಒಲಿದು ಬರುವ ದೇಸಗತಿಯ ಸಂಪತ್ತು ಕಾಲಕಾಲಕ್ಕೆ ಸವೆಯುತ್ತ, ನಾಶವಾಗುವ ಪರಿಯನ್ನೂ ಕತೆ ಬಿಚ್ಚಿಟ್ಟಿದೆ. ಆರೇಳು ತಲೆಮಾರುಗಳ ನಂತರ ವಂಶದ ಕೊನೆಯ ಕುಡಿಯಾಗಿದ್ದ ಮಗು ಅನಾಥವಾಗಿ ಕೊನೆಯುಸಿರೆಳೆಯುವುದು, ಅದರ ದೇಹವನ್ನು ಕಟ್ಟಿರುವೆಗಳು ಕಚ್ಚಿ ತಿನ್ನುವುದು, ದೇಸಗತಿಯ ಸಂಪೂರ್ಣ ಆಸ್ತಿ ಜನಸಾಮಾನ್ಯರದಾಗಿ ಉಳಿಯುವ ಸಾಂಕೇತಿಕತೆಯನ್ನು ಕಾಣುತ್ತೇವೆ. 'ಅಮೃತಾ, ಅಮೃತಾ ಅಂತ ಒದರಿ ಕರಕೋತ ಆ ಕೂಸಿನ ಎದಿಮ್ಯಾಲ ಕೈಯಿಟ್ಟು ನೋಡಿದರು. ಉಸರಿಲ್ಲಾ, ಎದಿ ಬಡಿವಲ್ಲದು! ಏನಾತು ಏನಾತು ನನ್ನ ಕಂದಗ? ಏನಾತು ನನ್ನ ಕೂಸಿಗ? ಸಂತಾನ ಬ್ಯಾಡಾಗಿತ್ತಂತ ಪೇಚಾಡತಿದ್ದಳಲಾ ಆ ದುಷ್ಟ ತಾಯಿ. ಆಕೇನ ಕುತಗೀ ಹಿಚಿಕಿ ಹೋದಳೇನು? ಹೇಳೋ ನನ್ನ ಅಂಬಣ್ಣಾ!'[೨೦] ಕಲ್ಪನಾಥ ದೇಸಾಯಿಯರ ಈ ಅರಣ್ಯ ರೋದನ ಕೇವಲ ಮಗುವಿನ ಸಾವಿಗಲ್ಲದೆ ದೇಸಗತಿಯ ಸಾವಿನ ಕುರಿತೂ ಹುಟ್ಟಿದ ರೋದನವಾಗಿದೆ.

ಭೂಮಿ ಮತ್ತು ಮನುಷ್ಯರ ನಡುವಿನ ಭಾವನಾತ್ಮಕ ಸಂಬಂಧಗಳನ್ನು ತಿಳಿಸುವ ಕೇಶವ ಮಳಗಿ ಅವರ 'ಕುಂಕುಮ ಭೂಮಿ' ಮೂರು ತಲೆಮಾರುಗಳ ಬದುಕನ್ನು ಕಟ್ಟಿಕೊಡುವ ಕೃತಿಯಾಗಿದೆ. ಕೃಷ್ಣಸ್ವಾಮಿಯು ಭೂಮಿಯೊಂದಿಗೆ ಹೊಂದಿದ ಭಾವುಕ ಸಂಬಂಧ, ಅವನ ಕುಟುಂಬದಲ್ಲಿ ತಲೆದೋರುವ ಭೂಮಿಯ ಪಾಲಿನ ಸಮಸ್ಯೆ, ಅವಿಭಕ್ತ ಕುಟುಂಬದಲ್ಲಿ ಉಂಟುಮಾಡುವ ಸಂಕಟಗಳು, ವಿಘಟನೆಗೊಳ್ಳುವ ಕೌಟುಂಬಿಕ ಸಂಬಂಧಗಳನ್ನು ಬೆಸೆಯುವಲ್ಲಿನ ವಿಫಲ ಯತ್ನಗಳು ಇಲ್ಲಿ ಪ್ರಮುಖವಾಗಿ ಕಾಣುವ ಅಂಶಗಳಾಗಿವೆ. ಭೂಮಿಯನ್ನು ತಾಯಿಯಾಗಿ ಪ್ರೀತಿಸುವ ಕೃಷ್ಣಸ್ವಾಮಿ ಒಂದು ದಡವಾದರೆ, ಭೂಮಿ ಹಣ ಮಾಡುವ, ಮಾರಿದಾಗ ಹಣವಾಗುವ ವಸ್ತು ಎಂಬ ನಗರದ ಕಟು ವಾಸ್ತವ ಭಾವನೆ ಹೊಂದಿದ ಇವನ ತಮ್ಮ ನಾರಾಯಣ ಹಾಗೂ ಕೃಷ್ಣಸ್ವಾಮಿಯ ಸ್ವಂತ ಮಕ್ಕಳು ಇನ್ನೊಂದು ದಡವಾಗಿದ್ದಾರೆ. ಇದು ಗ್ರಾಮ ಮತ್ತು ನಗರ ವ್ಯಕ್ತಿಗಳ ದ್ವಂದ್ವಗಳನ್ನು ಚಿತ್ರಿಸುವ ಕೃತಿಯೂ ಆಗಿದೆ. ಉದ್ಯೋಗ, ನೌಕರಿಗಾಗಿ ನಗರ ಆಶ್ರಯಿಸುವ ನವಪೀಳಿಗೆ ಸ್ವಾಭಾವಿಕವಾಗಿ ಭೂಮಿಯ ಮೇಲಿನ ಭಾವನಾತ್ಮಕ ಸಂಬಂಧವನ್ನು ಕಳೆದುಕೊಳ್ಳುತ್ತಾರೆ. ಅದನ್ನು ಮಾರಿದಾಗ ಹಣವಾಗಿ ಮಾರ್ಪಡುವ ಪ್ರಕ್ರಿಯೆಗೆ ಒತ್ತು ಕೊಡಲಾಗಿದೆ. ಪ್ರೀತಿ ಇದ್ದಲ್ಲಿ ಮಾತ್ರ ಹಕ್ಕು ಸ್ಥಾನಪಡೆದುಕೊಳ್ಳುತ್ತದೆ. ಯಾರು ಎಲ್ಲಿ ಇರುತ್ತಾರೆನ್ನುವುದಕ್ಕಿಂತಲೂ ಯಾರು ನೆನಪಲ್ಲಿ ಉಳಿದು ಮುಖ್ಯವೆನಿಸುತ್ತಾರೋ ಅಂತಹವರ ಸಂಬಂಧ ನಿಜ ಎಂಬ ನಿಲುವಿಗೆ ಅಧ್ಯಯನ ಬರುತ್ತದೆ. ಇನ್ನೂ ಭೂಮಾಲೀಕ, ಪಾಳೇಗಾರಿಕೆ ಸಂಸ್ಕೃತಿಯಲ್ಲಿ ನಲುಗುತ್ತಿರುವ ಬಹುಮುಖಿ ಸಂಸ್ಕೃತಿ, ಬಹುಮುಖಿ ವರ್ಣ ವ್ಯವಸ್ಥೆಯನ್ನು ಪ್ರತಿಬಿಂಬಿಸುವ ಬಾಳಾಸಾಹೇಬ ಲೋಕಾಪುರ ಅವರ 'ಬೆಂಕಿ ಆರಿ ಬೆಳಕ ಉಳಿದಿತ್ತೋ' ಮತ್ತು 'ಒಂದು ಸೇರು ಜ್ವಾಳ ಎರಡು ಹೊರೆ ಹುಲ್ಲು' ಕತೆಗಳು ಸಹ ಪ್ರಾತಿನಿಧಿಕ ಕತೆಗಳಾಗಿವೆ. ಹೆಸರು ಸೂಚಿಸುವ ಹಾಗೆ ಜಮೀನ್ದಾರನ ಹೆಂಡತಿ (ಸಾವುಕಾರ್ತಿ) ಎರಡು ಹೊರೆ ಹುಲ್ಲು ತಂದರೆ ಮಲೆವ್ವನಿಗೆ ಒಂದು ಸೇರು ಜ್ವಾಳ ಕೊಡುವ ಭರವಸೆ ಕೊಡುತ್ತಾಳೆ. ಹೊಳವು ಕೊಡದೇ ಹಿಡಿದ ಮಳೆಯಲ್ಲಿ ಕೂಲಿ ಸಿಗದೆ ಮಲೆವ್ವ ತೋಯಿಸಿಕೊಂಡು, ಕೆಸರಲ್ಲಿ ಕಾಲು ಹುದುಗಿ ಹೋದರೂ, ಹಸಿದುಕೊಂಡೇ ಎರಡು ಹೊರೆ ಹುಲ್ಲು ತಂದು ಹಾಕಿ ಜೋಳ ಪಡೆಯುತ್ತಾಳೆ. 'ಕಪ್ಪಾನ ಆಕಾಶದಾಗ ಹಿಂಡ ಮಾಡಿನ ಕೆಳಗ ಜಿನುಗು ಮಳಿ, ಕೆಸರ ತುಳಕೋತ. . ಗಟ್ಟಿ ಹೆಜ್ಜ ಹಾಕೋತ . .'[೨೧] ಹಸಿವನ್ನು ಶೋಷಣೆಯ ಆಯುಧವನ್ನಾಗಿ ಮಾಡಿಕೊಂಡು, ಭೂರಹಿತರಿಂದ ಕೆಲಸ ಮಾಡಿಸಿಕೊಳ್ಳುವ ರೀತಿ ಜಮೀನ್ದಾರಿಕೆಯ ಕ್ರೌರ್ಯದ ಜೊತೆ ಒಂದು ವರ್ಗದ ಅಸಹಾಯಕತೆಯನ್ನೂ ಕಟ್ಟಿಕೊಡುತ್ತದೆ.

ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ದೇಶ ಸ್ವಾತಂತ್ರ್ಯ ಗಳಿಸಿರಬಹುದು, ಭೂಸುಧಾರಣೆ ಕಾನೂನು ಜಾರಿಯಾಗಿ ಇನಾಮಿ ಜಮೀನ್ದಾರಿ ಪದ್ಧತಿ ಅವಸಾನಗೊಂಡಿರಬಹುದು, ಆದರೆ ಸಾಮಾಜಿಕ ಮತ್ತು ಆರ್ಥಿಕ ಶೋಷಣೆ ಇನ್ನೂ ಕೊನೆಗೊಂಡಿಲ್ಲ. ಜಮೀನ್ದಾರ-ಗೇಣಿದಾರ ಎಂಬ ಪದಗಳ ಬದಲಿಗೆ ಮಾಲಿಕ-ಸೇವಕ ಪದಗಳು ಬಳಕೆಯಾಗುತ್ತಿದ್ದು ಈ ವ್ಯವಸ್ಥೆ ಇನ್ನೂ ಜೀವಂತವಾಗಿದೆ. ಇದಕ್ಕೆ ಕಾಲದ ಚೌಕಟ್ಟಿಲ್ಲ. ಕೃಷಿ ಪ್ರಧಾನವಾದ ನಮ್ಮ ಆರ್ಥಿಕ ಸಂರಚನೆಯಲ್ಲಿ ಭೂಮಿ ಸ್ಥಾನ ಪಡೆದಿರುವವರೆಗೂ ಇದು ಚಿರಂತನವಾಗಿದ್ದು, ವಿವಿಧ ರೂಪಗಳನ್ನು ಪಡೆದುಕೊಳ್ಳುವುದು ಅಷ್ಟೇ ಸತ್ಯವಾಗಿದೆ. ವ್ಯಾಸರಾಯ ಬಲ್ಲಾಳ ಅವರ 'ಬಂಧಮುಕ್ತಿ' ಕತೆಯ ಸಂಕಪ್ಪನ ಸ್ಥಿತಿಯನ್ನು ಇಲ್ಲಿ ಚರ್ಚಿಸೋಣ. ಅಪ್ಪ ಕೊಡಬೇಕಾದ ಗೇಣಿ ಹಣದ ಬಾಕಿ ತೀರಿಸಲು ಮುಂಬಯಿಯಿಂದ ಬಂದ ಸಂಕಪ್ಪ ಜಮೀನ್ದಾರ ಫೈ ಒಡೆಯರಿಗೆ

ವಿವಿಧ ರೀತಿಯಿಂದ ಕೇಳಿಕೊಳ್ಳುತ್ತಾನೆ. ಮಾಲೀಕ ಒಪ್ಪಿಕೊಳ್ಳುವುದಿಲ್ಲ. ಇವನ ಸಮಸ್ಯೆಗೆ ಎರಡು ನೆಲೆಗಳಿವೆ. ಮೊದಲನೆಯದು ಹಳ್ಳಿಯ ಜಮೀನ್ದಾರನಿಂದ ಅಪ್ಪನ ಶೋಷಣೆಯಾದರೆ, ಎರಡನೆಯದು ನಗರದ ಕಾರ್ಖಾನೆಯ ಬಂಡವಾಳಶಾಹಿಯಿಂದ ಕಾರ್ಮಿಕರ ಶೋಷಣೆಯಾಗಿದೆ. ಎರಡರ ಬಂಧನದಲ್ಲೂ ಸಿಲುಕಿಕೊಂಡ ಸಂಕಪ್ಪ ಬಂಧಮುಕ್ತನಾಗುವುದೆಂದರೆ ಮುಷ್ಕರದಲ್ಲಿ ಬಂಧಿತನಾಗಿ ಜೈಲಿಗೆ ಹೋಗುವುದಾಗಿದೆ. 'ಅವರೆಲ್ಲರ ಜಾತಿಯೂ ಒಂದೆ. ಮುಂಬಯಿಯಲ್ಲಿ ನಮ್ಮ ಕಾರ್ಖಾನೆಯಲ್ಲಿಯೂ ಇಂಥದೇ ಪ್ರಶ್ನೆಯೆದ್ದಿದೆ. ಇಲ್ಲಿ ಗೇಣಿಬಾಕಿ ಮತ್ತು ಸಾಲ, ಅಲ್ಲಿ ಕಡಿಮೆ ಸಂಬಳ ಅದರಿಂದಾಗಿ ಸಾಲ. ಎಲ್ಲ ಕಡೆಯೂ ಒಂದೇ ರಾಗ'[೨೨] ಎಂಬ ಅವನ ಮಾತು ಶೋಷಣೆಯು ತೆಗೆದುಕೊಳ್ಳುವ ಮತ್ತು ತೆರೆದುಕೊಳ್ಳುವ ಹಲವು ಆಯಾಮಗಳನ್ನು ಹೇಳುತ್ತಿದ್ದು ಇದು ಸರ್ವಾಂತರ್ಯಾಮಿ ಎಂಬುದನ್ನು ಸೂಚಿಸುತ್ತದೆ. ಸಂಕಪ್ಪನ ಈ ಮಾತು ಕುಂದರನಾಡ ಪಾಟೀಲ ಅವರ 'ಒತ್ತೆ' ಕತೆಯ ಹರಿಜನ ವೃದ್ಧನ ಮಾತನ್ನು ನೆನಪಿಗೆ ತರುತ್ತದೆ. 'ಅಜ್ಜಾ ನಮ್ಮ ಹೊಲಾ ನಮಗ ಬರಬೇಕಾದರ ಇನ್ನು ಎಷ್ಟು ಜಲುಮ ಬೇಕಾದಾವು' ಎಂದ ಬಂದು ಹರಿಜನನ ಪ್ರಶ್ನೆಗೆ ಆ ಹಿರಿಯ ಹೀಗೆ ಪ್ರತಿಕ್ರಿಯಿಸುತ್ತಾನೆ. 'ನೋಡು ತಮ್ಮಾ ನನ್ನ ತಲಿಮ್ಯಾಗಿನ ಕೂದ್ಲಾ ಬಿಸಿಲಿಗಿ ಬೆಳ್ಳಗಾಗಿಲ್ಲ. ಮೂರಿಪ್ಪತ್ತರ ಮ್ಯಾಲ ಹತ್ತು ಮಳೆಗಾಲ ನೋಡಿದೇನ. ನಮ್ಮ ಹಂಡಿರು ಅವರ ಒಗಲಾಗ ಆದಾರ. ನಮ್ಮ ಹೊಲಾ ಅವರ ಕಬ್ಜಾದಾಗ ಅದಾವ. ಅವರ ಹೇಲಾ ಉಚ್ಚಿ ಬಳೀದಿದ್ರ ನಮ್ಮ ಮಕ್ಕಳು ರೊಟ್ಟಿ ಕಾಣೂದಿಲ್ಲ. ನಮ್ಮ ಬಾಳೇನ ಅವರಲ್ಲಿ ಒತ್ತಿ ಇರುವಾಗ ಹೊಲದ ಸುದ್ದಿ ಕೇಳಾಕ ಬಂದಿ'[೨೩] ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಶ್ರಮವರ್ಗದ ಜನರ ಇಡೀ ಬದುಕು ಭೂಮಾಲೀಕರಲ್ಲಿ ಒತ್ತೆ ಇರುವಾಗ ಅವರ ಆಸ್ತಿಗೆಲ್ಲಿ ಬಿಡುಗಡೆ ಎಂಬ ಪ್ರಶ್ನೆಯನ್ನು ನಿರಂತರವಾಗಿ ಇಡುತ್ತದೆ.

### ೩. ಬಂಡವಾಳಶಾಹಿ ಸಂಬಂಧಗಳು ಮತ್ತು ಸಾಹಿತ್ಯ ಸಂವೇದನೆಗಳು

ಭಾರತೀಯ ಸಂದರ್ಭದಲ್ಲಿ, ಪಶುಪಾಲನೆ, ಕೃಷಿ ಮತ್ತು ಕೈಗಾರಿಕೆಗಳು ದೇಶದ ಆರ್ಥಿಕ ಸಂರಚನೆಗೆ ಕಾರಣವಾದ ಪ್ರಮುಖ ವೃತ್ತಿಗಳಾಗಿವೆ. ವಸಾಹತು ಕಾಲಘಟ್ಟದಲ್ಲಿ ಕೃಷಿಯ ಜೊತೆಗೆ ಕೈಗಾರಿಕೆಗಳು ಈ ನಾಡನ್ನು ಪ್ರವೇಶಿಸಿದಾಗ, ಭೌತಿಕವಾಗಿ ಸಾಹಿತ್ಯದಲ್ಲೂ ಹೊಸ ಪ್ರಕಾರಗಳ ಉದಯವಾಗಿ, ಬೌದ್ಧಿಕ ನೆಲೆಯಲ್ಲಿ ಇವು ಹೊಸ ಸಂವೇದನೆಗಳನ್ನು ಹುಟ್ಟುಹಾಕಿದ್ದು ಸತ್ಯವಾದ ಸಂಗತಿ. ಉತ್ಪಾದನಾ ಸಂಬಂಧಗಳ ನೆಲೆಯಲ್ಲಿ ಮೂಡಿದ ವಸಾಹತುಕಾಲವೆಂಬ ಹೊಸ ಚಾರಿತ್ರಿಕ ಘಟ್ಟ ಹೊಸ ಆರ್ಥಿಕ ಸಂರಚನೆಯನ್ನು ರೂಪಿಸಿಕೊಂಡರೆ, ಈ ವ್ಯವಸ್ಥೆಯ ಚಲನೆಯನ್ನು ಬಂಡವಾಳಶಾಹಿ ಎಂಬ ಚಾಲಕ ನಿರ್ವಹಿಸುತ್ತ ಬಂದಿರುತ್ತಾನೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಜಮೀನ್ದಾರಿ ಘಟ್ಟದಲ್ಲಿ ಇದ್ದ ಉದ್ಯೋಗ, ಅಕ್ಷರ ಮುಂತಾದ ಅವಕಾಶಗಳು ನಿರ್ದಿಷ್ಟ ಜಾತಿಗಳ ಬಂಧನದಿಂದ ಸ್ವಲ್ಪಮಟ್ಟಿಗೆ ಬಿಡುಗಡೆಗೊಂಡು, ಸಾರ್ವಜನಿಕಗೊಳಿಸಲ್ಪಟ್ಟು ಮಧ್ಯಮ ವರ್ಗದವರನ್ನು ತಲುಪಿದ್ದಾಗಿದೆ. ಇಲ್ಲಿ ಪ್ರವೇಶಿಸಿದ ಕೈಗಾರಿಕೀಕರಣವು ಜಾತಿಗಳಲ್ಲಿ ಚಲನೆಯನ್ನುಂಟುಮಾಡಿ ಕುಲಕಸುಬುಗಳನ್ನು ಛಿದ್ರಗೊಳಿಸಿದೆ. ಪರಿಣಾಮವಾಗಿ ಮೇಲ್ಜಾತಿಯಲ್ಲಿ ಹುಟ್ಟಿದವನೊಬ್ಬನು ಚರ್ಮೋದ್ಯಮದ ಕಾರ್ಖಾನೆಯಲ್ಲಿ ಕಾರ್ಮಿಕನಾಗುವುದು, ಕುಂಬಾರಿಕೆಯನ್ನು ಮಾಡಿಕೊಂಡು ಬಂದವನೊಬ್ಬ ವಸಾಹತುಶಾಹಿಗಳು ನೀಡಿದ ಅಕ್ಷರ ಜ್ಞಾನದ ಮೂಲಕ ಉಚ್ಚ ವರ್ಣದವರು ಮಾಡಿಕೊಂಡು ಬಂದಿದ್ದ ಅಧ್ಯಾಪಕ ವೃತ್ತಿ ಹಿಡಿಯುವುದು ಸಾಧ್ಯವಾಯಿತು. ಈ ನೆಲೆಯಲ್ಲಿ ಇಲ್ಲಿ ಬದಲಾದ ಉತ್ಪಾದನಾ, ಸಾಮಾಜಿಕ ಸಂಬಂಧಗಳ ವ್ಯವಸ್ಥೆಯಿದೆ. ಅಂತೆಯೆ ಜನರ ದೃಷ್ಟಿ-ಧೋರಣೆಯೂ ಬೇರೆಯಾಗಿ ಕೈಗಾರಿಕೀಕರಣ ಮತ್ತು ಶಿಕ್ಷಣದ ಸಾರ್ವತ್ರೀಕರಣದಿಂದ ಸಾಹಿತ್ಯ ಸಂವೇದನೆಗಳೂ ರೂಪಾಂತರಗೊಂಡಿವೆ. ಈ ಹಿನ್ನೆಲೆಯಲ್ಲಿ ಈ ಕಾಲಘಟ್ಟದ, ಇಲ್ಲಿಯ ಸಂಸ್ಕೃತಿ, ಮತ್ತು ಸಾಹಿತ್ಯ ಸಂವೇದನೆಯು ತನ್ನ ಹಿಂದಿನ ಘಟ್ಟಕ್ಕಿಂತ ಭಿನ್ನ ಮತ್ತು ವಿಶಿಷ್ಟ ಎಂದು ಹೇಳಬಹುದು.

ಮುಂಬಯಿ ಕರ್ನಾಟಕದ ಕಥನ ಸಾಹಿತ್ಯದ ಸಂದರ್ಭದಲ್ಲಿ ಬಂಡವಾಳಶಾಹಿ ಕಾಲ ಘಟ್ಟದ (ಪ್ರಗತಿಶೀಲ/ನವ್ಯರು) ಕತೆ, ಕಾದಂಬರಿಗಳಲ್ಲಿ ಜನಸಾಮಾನ್ಯರ ಜೀವನ, ಕಷ್ಟ, ಸಮಸ್ಯೆಗಳು, ನೋವು ನಲಿವುಗಳು ನೇರವಾಗಿ ಉತ್ತರ ಕರ್ನಾಟಕದ ಭಾಷಾ ಚೌಕಟ್ಟಿನಲ್ಲಿ ದಾಖಲಿಸಲ್ಪಟ್ಟಿವೆ. ತಾನಿದ್ದ ಸಮಾಜದ ಬಗೆಗಿನ ವಿಶಿಷ್ಟ ವೈಯಕ್ತಿಕ ವಿಮರ್ಶೆಯನ್ನೆ ಕಥನ ಸಾಹಿತ್ಯ ಹೂರಣವಾಗಿಸಿಕೊಂಡಿದೆ. ಸಮಕಾಲೀನ ಕೃತಿಗಳಿಗೆ ಹೋಲಿಸಿ ನೋಡಿದರೆ ಈ ಕೃತಿಗಳಲ್ಲಿ ಮಾಲಿಕ – ಕಾರ್ಮಿಕ ಸಂಬಂಧ, ವೃತ್ತಿ ವೈಷಮ್ಯ, ವರ್ಗ ವೈಷಮ್ಯಗಳ ಜೊತೆಗೆ ಸಾಮಾಜಿಕ ಪ್ರಜ್ಞೆ, ಕಳಕಳಿ, ಸಮಾಜ ಸುಧಾರಣಾ ಮನೋಭಾವ ಎದ್ದು

ಕಾಣುತ್ತದೆ. ಈ ಅಂಶಗಳನ್ನು ಜ್ವಾಲಾಮುಖಿಯ ಮೇಲೆ (ಬಸವರಾಜ ಕಟ್ಟೀಮನಿ), ಹೇಮಂತಗಾನ, ಬಂಡಾಯ (ವ್ಯಾಸರಾಯ ಬಲ್ಲಾಳ), ಶಿಕಾರಿ (ಯಶವಂತ ಚಿತ್ತಾಲ) ಮುಂತಾದ ಅನೇಕ ಕೃತಿಗಳಲ್ಲಿ ಕಾಣಬಹುದು.

ಜಾಗತಿಕವಾಗಿ ಸಾಹಿತ್ಯದಲ್ಲಿ ಚಳುವಳಿ (ಪ್ರಗತಿಶೀಲ?) ಹುಟ್ಟಿಕೊಂಡಿದ್ದು ಕಾರ್ಮಿಕ, ಬಂಡವಾಳಶಾಹಿಗಳ ಸಂಘರ್ಷದಿಂದ, ಸಾಮ್ಯವಾದ(ಕಮ್ಯೂನಿಸಂ)ದ ಪ್ರಭಾವದಿಂದ ಎನ್ನಬಹುದು. ಇಂದಿನ ಜಾಗತೀಕರಣ, ಕೈಗಾರಿಕೀಕರಣ, ಉದಾರೀಕರಣ ಮುಂತಾದ ಪ್ರಕ್ರಿಯೆಗಳಿಗೆ ತೆರೆದುಕೊಂಡ ಭಾರತೀಯ ಸಾಮಾಜಿಕ, ಆರ್ಥಿಕ ವ್ಯವಸ್ಥೆಯಲ್ಲಿ ಬಂಡವಾಳಶಾಹಿ, ಬಡವರ ನಡುವಿನ ಕಂದರ ಇನ್ನೂ ಹೆಚ್ಚಾಗಿದೆ. ಕಾರ್ಮಿಕ, ಮಹಿಳೆ, ದಲಿತರ ಮೇಲಿನ ಶೋಷಣೆಯನ್ನು ವಿವರಿಸುವ ಕಟ್ಟಿಮನಿಯವರ 'ಜ್ವಾಲಾಮುಖಿಯ ಮೇಲೆ' (೧೯೫೧) ಕಾದಂಬರಿಯನ್ನು ಇಲ್ಲಿ ಪ್ರಾತಿನಿಧಿಕವಾಗಿ ಚರ್ಚಿಸಬಹುದು. ಈ ಕಾದಂಬರಿಯ ಮೂಲ ದ್ರವ್ಯ ವರ್ಗಸಂಘರ್ಷ. ವರ್ಗಸಂಘರ್ಷಕ್ಕೆ ಮುಖ್ಯ ಕಾರಣ ವಿಷಮ ಅರ್ಥವ್ಯವಸ್ಥೆ. ಇದನ್ನು ಬಂಡವಾಳಶಾಹಿ ವರ್ಗ ನಿರ್ಮಿಸಿದರೆ, ಇದನ್ನು ಬೆಳೆಸಿ ಪೋಷಿಸಿದವರು ಭ್ರಷ್ಟ ರಾಜಕಾರಣಿಗಳು. ಸ್ವತಂತ್ರ ಭಾರತದಲ್ಲಿ ನಡೆದ ಈ ಮೌಲ್ಯಗಳ ಅಧಃಪಥನಕ್ಕೆ ಕಾರಣ ಭಾರತದ ರಾಜಕೀಯ ಪಕ್ಷಗಳ ತತ್ವರಹಿತ ರಾಜಕಾರಣ ಹಾಗೂ ರಾಜಕೀಯ ರಂಗದ ಮೌಲ್ಯಪತನವೆಂಬುದನ್ನು ಕಾದಂಬರಿ ಹೇಳುತ್ತದೆ.

ತುಂಬ ಸೂಕ್ಷ್ಮಗ್ರಾಹಿ ಹಾಗೂ ಆದರ್ಶ ಗುರಿಗಳನ್ನು ಹೊಂದಿದ ಚಂದ್ರಣ್ಣನ ಮೇಲೆ ಕೃತಿಯ ಕಥಾ ಹಂದರ ನಿಂತಿದೆ. ಸ್ವಾತಂತ್ರ್ಯಾನಂತರ ಕಾಂಗ್ರೆಸ್ಸಿಗರ ತತ್ವಭ್ರಷ್ಟತೆ ಚಂದ್ರಣ್ಣನಂತವರಿಗೆ ಭ್ರಮನಿರಸನ ಉಂಟುಮಾಡಿದಾಗ, ಬೇರೊಂದು ರಾಜಕೀಯ ಶಕ್ತಿಯ ಅನ್ವೇಷಣೆಯಲ್ಲಿ ತೊಡಗುತ್ತಾನೆ. ಆದರೆ ಈ ಪಕ್ಷದ ಧೋರಣೆಗಳು, ತಂತ್ರ, ಕುತಂತ್ರಗಳು ಕಾಂಗ್ರೆಸ್ಸಿಗಿಂತ ಭಿನ್ನವೇನೂ ಆಗಿರದೇ ಇದ್ದಾಗ, ಪರ್ಯಾಯವಾಗಿ ಮೂರನೆಯ ರಾಜಕೀಯ ಶಕ್ತಿಯ ಶೋಧವನ್ನು ನಡೆಸಿ ಕಮ್ಯುನಿಷ್ಟ ಸಿದ್ಧಾಂತದತ್ತ ದೃಷ್ಟಿ ಹರಿಸುತ್ತಾನೆ. ಕಥಾ ನಾಯಕನ ವಿಚಾರಲಹರಿ, ದಿಟ್ಟ ನಿರ್ಧಾರಗಳು ಇಂದಿನ ಸ್ವತಂತ್ರ ಭಾರತದ ರಾಜಕೀಯ ಪಕ್ಷಗಳು ಹಣಬಲಕ್ಕೆ ಬಂಡವಾಳಶಾಹಿಗಳ ಬಾಲಬಡುಕರಾಗಿರುವುದನ್ನು ಸೂಚ್ಯವಾಗಿ ಸೂಚಿಸುತ್ತವೆ. ಸೂಕ್ಷ್ಮಮತಿ ನಾಯಕ ಕಮ್ಯುನಿಸಂ ಸಿದ್ಧಾಂತವನ್ನು ಪೂರ್ತಿ ರಶಿಯಾ ಆವೃತ್ತಿಯಾಗಿಯೂ ಸ್ವೀಕರಿಸದೆ ಭಾರತಕ್ಕೆ ಹೊಂದುವ ತತ್ವಗಳನ್ನು ಅಳವಡಿಸಲು, ಗಲಭೆ, ರಕ್ತಪಾತ, ದ್ವೇಷಗಳಿಲ್ಲದ, ಅಹಿಂಸಾ ನೆಲೆಯಲ್ಲಿ(ಗಾಂಧಿವಾದ)ಯೇ ಕಾರ್ಮಿಕರ ಉದ್ಧಾರದ ಆಶಯಗಳನ್ನು ಹೊಂದಿರುವ ಪಕ್ಷಕ್ಕಾಗಿ ಇಲ್ಲಿಯ ಪಾತ್ರಗಳೊಂದಿಗೆ ಹುಡುಕಾಟ ನಡೆಸುತ್ತಾನೆ. ಇದು ಇಂದು ಹಿಂಸೆ, ಭಯೋತ್ಪಾದನೆ ಮುಂತಾದ ಘಟನೆಗಳಿಂದ ನಲುಗಿದ ಭಾರತೀಯ ಜನಸಾಮಾನ್ಯ ಗಾಂಧಿವಾದದತ್ತ ಹೊರಳುತ್ತಿರುವ ಸಂದರ್ಭಕ್ಕೆ ಹೋಲಿಕೆಯಾಗಿದೆ. ಅಂತ್ಯದಲ್ಲಿ ನಾಯಕ, ಹಿಂದೂಸ್ಥಾನಕ್ಕೆ ಸಾಮ್ಯವಾದವನ್ನುಳಿದು ಬೇರಾವ ಉದ್ಧಾರದ ಮಾರ್ಗವೂ ಇಲ್ಲ ಎಂದು ತಿರ್ಮಾನಕ್ಕೆ ಬರುತ್ತಾನೆ. 'ಕಮ್ಯುನಿಷ್ಟ ಸಿದ್ಧಾಂತವನ್ನು ಮೀರಿದ ಹಾಗೂ ಕಾರ್ಮಿಕರ ಹಿತಾಸಕ್ತಿಯನ್ನೆ ಮುಖ್ಯ ಉದ್ದೇಶವಾಗಿಟ್ಟುಕೊಂಡ ಪಕ್ಷಾತೀತ ಪ್ರಜ್ಞೆಯೊಂದು ಇಲ್ಲಿ ಕೆಲಸ ಮಾಡುವುದು ಗಮನಾರ್ಹ'[೩೪] ಎಂಬ ಅಭಿಪ್ರಾಯವನ್ನು ಒಪ್ಪಬಹುದಾಗಿದೆ.

ಬಂಡವಾಳಶಾಹಿ ಆರ್ಥಿಕ ಸಂರಚನೆಯ ಹಿನ್ನೆಲೆಯಲ್ಲಿ, ಕನ್ನಡ ಸಾಹಿತ್ಯದಲ್ಲಿ 'ಜ್ವಾಲಾಮುಖಿಯ ಮೇಲೆ' ಕಾದಂಬರಿಯ ಸ್ಥಾನ ಕುರಿತಂತೆ ವಿಭಿನ್ನ ಅಭಿಪ್ರಾಯಗಳು ಪ್ರಕಟವಾಗಿವೆ. 'ವರ್ಗ ಸಮರದ ಕತೆಯನ್ನು ಜ್ವಾಲಾಮುಖಿಯ ಮೇಲೆ ಮೂಲಕ ಕನ್ನಡದಲ್ಲಿ ಮೊಟ್ಟಮೊದಲು ಮನದಟ್ಟಾಗುವಂತೆ ನೀಡಿದ ಯಶಸ್ಸು ಕಟ್ಟೀಮನಿಯವರದು'[೩೫] ಮತ್ತು 'ಪ್ರಗತಿಶೀಲ ಸಾಹಿತ್ಯದ ಮಾದರಿಗೆ ಇದು ಸೂಕ್ತ ಕಾದಂಬರಿಯಾಗಿದೆ. ಪ್ರಗತಿಶೀಲ ಸಾಹಿತ್ಯವೆನ್ನುವುದಕ್ಕೆ 'ಜ್ವಾಲಾಮುಖಿಯ ಮೇಲೆ' ಸಜೀವ ಉದಾಹರಣೆಯಾಗಿದೆ'[೩೬] ಎಂಬ ಅಭಿಪ್ರಾಯಗಳನ್ನು ಒಪ್ಪಬಹುದು. ಆದರೆ, 'ಜ್ವಾಲಾಮುಖಿಯ ಮೇಲೆ ಅತ್ಯುತ್ತಮ ಕನ್ನಡ ಕಾದಂಬರಿ ಅಷ್ಟೇ ಅಲ್ಲ, ಜಗತ್ತಿನ ಕಾದಂಬರಿಗಳ ಸಾಲಿನಲ್ಲಿ ನಿಲ್ಲುವಂತಹುದಾಗಿದೆ'[೩೭] ಎಂಬ ಮಾತುಗಳನ್ನು ಪುನರ್ವಿಮರ್ಶಿಸಬೇಕಾದ ಅಗತ್ಯವಿದೆ. ಯಾಕೆಂದರೆ ಜ್ವಾಲಾಮುಖಿಯ ಮೇಲೆ ಕೃತಿ, ವಿಫಲ ವರ್ಗಹೋರಾಟಕ್ಕೆ ರಾಜಕೀಯ ಕಾರಣಗಳನ್ನು ನೀಡುತ್ತದಾದರೂ ಶೀರ್ಷಿಕೆಗೆ ತಕ್ಕ ಸಂಘರ್ಷ ಇಲ್ಲಿ ಕಾಣುವುದಿಲ್ಲ. ಬಂಡವಾಳಶಾಹಿಗಳ ಘೋರ ಅನ್ಯಾಯವನ್ನು ಅವರ ಅನೈತಿಕ ಬದುಕನ್ನು ಬಯಲಿಗೆಳೆದು ತೋರಿಸುವಲ್ಲಿ ತಲ್ಲೀನವಾದ ಲೇಖಕರು, ಮುಖ್ಯ ಘರ್ಷಣೆಯ ತಾಂತ್ರಿಕ ನೆಲೆಗಳನ್ನು

ಕಥಾ ಹಂದರದ ಬದಿಗೆ ತಳ್ಳಿದ್ದಾರೆ ಎಂಬುದು ನಿಜ. ಆದರೆ ಶೋಷಿತರ ಮನದಲ್ಲಿ ಕ್ರಾಂತಿಯನ್ನು ಉಂಟುಮಾಡುವ ಪ್ರಬಲ ಪ್ರಯತ್ನವಾಗಿ ಕಾಣಿಸುತ್ತದೆ. ಒಂದು ಹೆಜ್ಜೆ ಮುಂದೆ ಹೋಗಿ 'ಅಗ್ನಿಯನ್ನು ಹೊರಸೂಸುವ ಬದಲು ಅದರ್ಶ ದಾಂಪತ್ಯದ ಅನುರಾಗದ ತಂಗಾಳಿಯನ್ನು ಬೀಸುತ್ತದೆ. ಇದಕ್ಕೆ ಲೇಖಕರ ರೊಮ್ಯಾಂಟಿಕ್ ವೈಚಾರಿಕತೆಯ ಅನುಸಂಧಾನವೆನ್ನಬಹುದೇನೋ?[೩೮] ಎನ್ನುವ ಅಭಿಪ್ರಾಯವನ್ನು ಒಪ್ಪಲಾಗುವುದಿಲ್ಲ. ಯಾಕೆಂದರೆ ಅನುರಾಗ ದಾಂಪತ್ಯದಿಂದ ಒಬ್ಬ ಮಹಿಳೆಯು ಶೋಷಣೆಯಿಂದ ಬಿಡುಗಡೆಯಾಗುವುದೂ ಸಹ ಪ್ರಗತಿಶೀಲತೆ ಎನ್ನಿಸಿಕೊಳ್ಳುತ್ತದೆ. 'ಸ್ತ್ರೀ ವಿಮೋಚನೆ ಕೂಡ ವರ್ಗ ಸಂಘರ್ಷದ ಆಂತರಿಕ ವಿಷಯುವೇ ಆಗಿದೆ. ಅವರು ಕಾರ್ಮಿಕರಾಗಿರಬಹುದು ಅಥವಾ ಬೇರೆಯಾಗಿರಬಹುದು. ಬೇರೆ ವರ್ಗಕ್ಕೆ ಸೇರಿದ್ದರೂ ಸಹ ಸ್ತ್ರೀಯರ ಬಹುಕಾಲದ ಬಂಧನ ಹರಿದೊಗೆಯಲ್ಪಡುವುದು ವರ್ಗ ಸಂಘರ್ಷಗಳೊಡನೆಯೆ'[೩೯] ಎಂಬ ನಿಲುವನ್ನು ಹಾಗೂ 'ಅನುಭವಗಳಿಂದ ಗಟ್ಟಿಗೊಳ್ಳುವ ಅನೇಕ ವಿಫಲತೆಗಳಿಂದ ಪಾಠ ಕಲಿಯುತ್ತ ಮುಂದುವರೆಯುವ ಹಾಗೂ ತನ್ನ ಅಂತಿಮ ವಿಜಯದ ತನಕ ಬಲಗೊಳ್ಳುತ್ತ ವಿಸ್ತಾರವಾಗುವ ಆಶಾಭಾವವನ್ನು'[೪೦] ಕೂಡ ಈ ಕಾದಂಬರಿಯು ಹೊಂದಿದೆ. ಈ ನಿಲುವನ್ನು ಪ್ರಸ್ತುತ ಅಧ್ಯಯನ ಬೆಂಬಲಿಸುತ್ತದೆ.

ಬಂಡವಾಳಶಾಹಿ ವ್ಯವಸ್ಥೆ (ವರ್ಗ ವ್ಯವಸ್ಥೆ). ಆದರಲ್ಲಿನ ಹೋರಾಟಗಳು, ಕ್ರೌರ್ಯಗಳು, ಹಿಂಸೆ, ಶಾಂತಿ, ಸಂಧಾನ, ವಿಫಲತೆ, ಸಫಲತೆಗಳನ್ನು ಚಿತ್ರಿಸಿದ ಇನ್ನೊಂದು ಕಾದಂಬರಿ ವ್ಯಾಸರಾಯ ಬಲ್ಲಾಳ ಅವರ 'ಬಂಡಾಯ' (೧೯೮೫). ಬಂಡಾಯ ಎನ್ನುವಂತದ್ದು ಮೂಲತಃ ಒಂದು ಮನೋಧರ್ಮ ಮತ್ತು ಅದರ ಪರಿಣಾಮವಾಗಿ ಬರುವಂತಹ ಒಂದು ಚಟುವಟಿಕೆ. ಈ ಕಾದಂಬರಿಯು ಸಹ ಔದ್ಯೋಗೀಕರಣದ ಸಮಸ್ಯೆಗಳಲ್ಲಿ ಮುಖ್ಯವಾದ ಉದ್ಯೋಗಪತಿತ್ವ ಮತ್ತು ಕಾರ್ಮಿಕ ಶಕ್ತಿಯ ನಡುವಿನ ಸಂಘರ್ಷವನ್ನು ಪರಿಣಾಮಕಾರಿಯಾಗಿ ಚಿತ್ರಿಸುವ ಒಂದು ಪ್ರಯತ್ನವಾಗಿದೆ. ಒಮ್ಮೆ ನಕ್ಸಲೈಟ್ ಆಗಿದ್ದು, ನಂತರ ೮–೧೦ ವರ್ಷಗಳಿಂದ ಟ್ರೇಡ್ ಯೂನಿಯನ್ನಿನ ಕಾರ್ಮಿಕ ನಾಯಕನಾಗಿ ಮುಂಬಯಿಯಲ್ಲಿ ದುಡಿಯುತ್ತಿರುವ ರಾಜೀವನದು ಈ ಕಾದಂಬರಿಯ ಕೇಂದ್ರ ವ್ಯಕ್ತಿತ್ವ ಸತೀಶ್ ಶರ್ಮಾ (ಕಾರ್ಖಾನೆಯ ಮಾಲೀಕ) ಹೇಳುವಂತೆ, ರಾಜೀವನ ಶಕ್ತಿಯೇ ಉದ್ಯಮಪತಿಗಳ ಪಾಲಿಗೆ ಹಿಂಸೆಯಾಗಿ ಪರಿಣಮಿಸಿದೆ. ರಾಜೀವನನ್ನು ಹಣದಿಂದಾಗಲಿ, ಅನುನಯದಿಂದಾಗಲೀ ಗೆಲ್ಲುವ 'ಶರ್ಮಾ ತಂದೆ–ಮಕ್ಕಳ' ಪ್ರಯತ್ನ ವಿಫಲವಾಗುತ್ತದೆ ಎಂಬುದು ರಾಜೀವನ ನೈತಿಕ ಗೆಲುವಾದರೂ, ದೇಶಪಾಂಡೆಯ ಹಿಂಸೆ ಕುದುರಿಸುವ ಭಯದೆದುರು ರಾಜೀವನ ಕಾರ್ಮಿಕ ವರ್ಗದ ಮಣಿತ, ಸ್ವತಃ ರಾಜೀವನ ಸೋಲಾಗಿಯೂ ಪರಿಣಮಿಸಿ, ರಾಜೀವ ಪುನಃ ನಕ್ಸಲೈಟ್ ಆಗುವ ನಿರ್ಧಾರದೊಂದಿಗೆ ನಿರ್ಗಮಿಸುವುದು ಕಾದಂಬರಿಯಲ್ಲಿ ಕಾಣುವ ಇನ್ನೊಂದು ತಿರುವು. 'ಶಕ್ತಿ ಪ್ರವಹಿಸುವುದೇ ಬಂದೂಕಿನ ನಳಿಕೆಯ ಮೂಲಕ' ಎಂಬ ಮಾವೋನ ಮಾತನ್ನು ಅನಿವಾರ್ಯವಾಗಿ ಒಪ್ಪಿಕೊಂಡಂತೆ ಆ ಪಾತ್ರದ ಚಲನೆ ಇದೆ. ಕಲ್ಯಾಣಿ ಕೆಮಿಕಲ್ಸ್‌ಗೆ ಬೀಳುವ ಬೆಂಕಿ ಈ ಹಿಂಸಾವ್ರತದ ಮೊದಲ ಗುರಿಯಾಗಿದೆ.



ಸಮಾನತೆ ಸಾಧಿಸಲು, ಶೋಷಣೆ ತಪ್ಪಿಸಲು ಹಿಂಸೆಯೊಂದೇ ಪ್ರಮುಖ ಮಾರ್ಗವಾಗಬಾರದೆಂಬ ಅಂಶವನ್ನು ಕಾದಂಬರಿ ತುಂಬಾ ಸೂಕ್ಷ್ಮವಾಗಿ ಧ್ವನಿಸುತ್ತದೆ. ಕಾದಂಬರಿಯಲ್ಲಿ ಗಮನಿಸಬೇಕಾದ ಅಂಶವೆಂದರೆ, ಹಿಂಸೆಗೆ ಅನೇಕ ಮೂಲಗಳುಂಟು (Sources). ನಕ್ಸಲೀಯ ಚಟುವಟಿಕೆಗಳಿಂದುಂಟಾಗುವ ಹಿಂಸೆಯ ವಿವಿಧ ಮುಖಗಳು ಇದರಲ್ಲಿ ಕಾಣಿಸಿಕೊಳ್ಳುವುದರ ಜೊತೆಗೆ ಉದ್ಯಮಪತಿಗಳ ಹಿಂಸೆಯ ಚಿತ್ರಣವೂ ತೆರೆದುಕೊಳ್ಳುತ್ತದೆ. ಇದರಲ್ಲಿ ನಗರೀಕರಣದ ಸಮಸ್ಯೆ, ಉದ್ಯೋಗ, ಬೃಹತ್ ಕೈಗಾರಿಕೆಗಳ ಸಮಸ್ಯೆ, ಹಿಂಸೆ, ಅಹಿಂಸೆಗಳ ನವೀನ ಪರಿಕಲ್ಪನೆಗಳು ಒಂದರೊಳಗೊಂದು ನೇಯ್ದುಕೊಂಡಿವೆ. ಇಲ್ಲಿನ ಬಂಡಾಯ ಏಕಮುಖವಲ್ಲ. ಮಾಲೀಕರ ವಿರುದ್ಧ ಕಾರ್ಮಿಕರ ಬಂಡಾಯ, ತಂದೆಯ ವಿರುದ್ಧ ಮಗನ ಬಂಡಾಯ (ನಾಗೇಶ ಶರ್ಮನ ವಿರುದ್ಧ ಮಗ ಸತೀಶ ಶರ್ಮ), ಇಡೀ ಕುಟುಂಬದ ವಿರುದ್ಧ ಮಗಳ ಬಂಡಾಯ (ನಾಗೇಶ ಶರ್ಮನ ಮಗಳು ನಯನಾ), ಗಂಡನ ವಿರುದ್ಧ ಹೆಂಡತಿಯ ಬಂಡಾಯ (ಶ್ರೀಕಾಂತನ ವಿರುದ್ಧ ಯಾಮಿನಿ) ಹೀಗೆ ಕೃತಿಯಲ್ಲಿ ಮಾಲೀಕ–ಕಾರ್ಮಿಕರ ಸಂಘರ್ಷ ಮಾತ್ರವಿರದೇ ಮನುಷ್ಯನ ಮನಸ್ಸು–ಮನಸ್ಸುಗಳ ನಡುವೆ ನಡೆಯುವ ಸಂಘರ್ಷವೂ ಇದೆ. ಒಟ್ಟಾರೆ ಬದಲಾದ ಆರ್ಥಿಕ ವ್ಯವಸ್ಥೆಯ ಹಿನ್ನೆಲೆಯಲ್ಲಿ ಮಾನವೀಯ ಸ್ವಭಾವಗಳ ಸಂಘರ್ಷ, ಬಂಡಾಯ, ಕ್ರೌರ್ಯವನ್ನು ಹೊರಹಾಕುವ ಕೃತಿ ಇದಾಗಿದೆ.

ವರ್ಣ/ವರ್ಗ ಶೋಷಣೆಗೆ ಮೂಲ ಇಂತಹುದೆ ಸ್ಥಳ, ವೇಳೆ, ವ್ಯಕ್ತಿಗಳು, ಕಾರಣಗಳು ಎಂದು ಹೇಳಲಾಗುವುದಿಲ್ಲ. ಮನುಷ್ಯರ ಮನೋಭಾವದಲ್ಲಿ ಸೇರಿಹೋದ ಶೋಷಣೆ ಎಲ್ಲಿಂದ, ಹೇಗಾದರೂ ಆರಂಭವಾಗಬಹುದು. ಬೃಹತ್ ಉದ್ದಿಮೆಗಾರರು ಮಾತ್ರ ಶೋಷಕರಾಗಿ ನಿಂತಿಲ್ಲ. ಗ್ರಾಮೀಣ ಪರಿಸರದ ಚಿಕ್ಕ ಹೋಟೆಲ್ ಸಹ ಶೋಷಣೆಯ ಮೂಲವಾಗಿರುವುದು, ಒಂದೇ ಕುಟುಂಬದ ಸದಸ್ಯರು ಅದಕ್ಕೆ ಕುಮ್ಮಕ್ಕು ಕೊಡುವುದೂ ಸಹ ಬಂಡವಾಳಶಾಹಿ ವ್ಯವಸ್ಥೆಯ ಕರಾಳ ರೂಪವಾಗಿದೆ. ಇಂತಹ ಅನೇಕ ಸಂದರ್ಭಗಳನ್ನು ಮುಂಬಯಿ ಕರ್ನಾಟಕದ ಕಥನ ಸಾಹಿತ್ಯ ಹಿಡಿದಿಟ್ಟಿದೆ. ಎಂ.ಎಚ್. ನಾಯಕ ಬಾಡ ಅವರ 'ಅಪ್ಪುವಿನ ಸಂಬಳದ ದಿನ' ಕತೆಯಲ್ಲಿ ಅಪ್ಪು ಕೆಳವರ್ಗದ ಕೂಲಿಕಾರ ಕುಟುಂಬದ ಹುಡುಗ. ಇವನ ತಂದೆ ದುಡಿಯದೆ (ದುಡಿಯುವ ಹೆಂಡತಿಯನ್ನು ಬಡಿದು ಕೂಲಿಯನ್ನು ಕಿತ್ತುಕೊಂಡು) ಗಂಗತ್ತೆ ಎಂಬವಳನ್ನು ಇಟ್ಟುಕೊಂಡು ಅಲ್ಲಿಯೇ ವಾಸ್ತವ್ಯ ಹೂಡಿರುತ್ತಾನೆ. ಕುಮಟೆಯ ಕಮ್ತೀರ ಚಾದಂಗಡಿಯಲ್ಲಿ ಕೆಲಸಕ್ಕಿದ್ದ ಅಪ್ಪು ಇಡೀ ತಿಂಗಳು ತಾನು ದುಡಿದ ಸಂಬಳವನ್ನು ಇಸಿದುಕೊಳ್ಳುವ ಕಾತುರದಲ್ಲಿರುತ್ತಾನೆ. ಆ ದಿನ ಮಾಲೀಕನನ್ನು ಕೇಳಿಯೂ ಬಿಡುತ್ತಾನೆ. ಕಮ್ತೀರು 'ಚೋದಿ ಮಗನೆ ಎಂತಾ ಸಂಬಳಾನೋ? ನೀನು ಮಾಡೋ ಕೆಲಸಕ್ಕೆ ಸಂಬಳ ಬೇರೆ ಬೇಕೆನೋ? ಆಗಲೇ ನಿನ್ನಪ್ಪ ಅನ್ನೋ ಬೋಳಿಮಗ ಎರಡೆರಡು ಸಾರಿ ಬಂದು ದುಡ್ಡು ತೆಗೆದುಕೊಂಡು ಹೋದ. ಇಲ್ಲಿ ನೀನು ದೊಡ್ಡ ಆಫೀಸರ್. ನಿನ್ನ ಅಪ್ಪ ಅನ್ನೋ ಸೂಳೇಮಗ ತಲಬು ಬಂದಾಗ್ಲೆಲ್ಲ ದುಡ್ಡಿಗೆ ಬರ್‍ತ್'' ಎಂದು ಬೈದು ಓಡಿಸುತ್ತಾರೆ. ಬಾಲ್ಯ ಸಹಜ ಬಯಕೆಗಳು, ಕನಸುಗಳು ಸನ್ನಿವೇಶದ ಒತ್ತಡದಿಂದಾಗಿ ಹತ್ತಿಕ್ಕಲ್ಪಡುವುದರಿಂದ ಅಪ್ಪು ಸಮಾಜ ವಿಮುಖಿಯಾದ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುತ್ತಾನೆ. ಇಲ್ಲಿ ಅಪ್ಪುವಿನ ಶೋಷಣೆಗೆ ಎರಡು ನೆಲೆಗಳಿವೆ. ಮೊದಲನೆಯ ನೆಲೆಯಲ್ಲಿ ಪತ್ನಿ, ಕುಟುಂಬ ಪೀಡಕ ಅಪ್ಪುವಿನ ತಂದೆ ತಿಂಗಳ ಸಂಬಳವನ್ನು ದೋಚಿ, ವೇಶ್ಯೆಗೆ ಹಾಕುವುದು. ಎರಡನೆಯ ನೆಲೆಯಲ್ಲಿ ಕಮ್ತಿ ಎಂಬ ಬಂಡವಾಳಶಾಹಿ ಮಗನನ್ನು ದುಡಿಸಿಕೊಂಡು, ಕುಡುಕ ಅಪ್ಪನಿಗೆ ಆರಕ್ಕೆ ಮೂರನ್ನು ಸಂಬಳವೆಂದು ಎಣಿಸುವುದಾಗಿದೆ. ಗ್ರಾಮೀಣ ಪರಿಸರದಲ್ಲಿನ ವರ್ಗವ್ಯವಸ್ಥೆ ಮುಗ್ಧ ಮಕ್ಕಳನ್ನು ಅಮಾನುಷವಾಗಿ ಕ್ರೌರ್ಯಕ್ಕೆ ಒಳಪಡಿಸುವುದನ್ನು ಮತ್ತು ಹೀಗೆ ಹಲವು ಬಾರಿ ಕುಟುಂಬದ ಸದಸ್ಯರೆ ಶೋಷಣೆಗೆ ಕಾರಣವಾಗುವ ಅಪಾಯವನ್ನು ಗ್ರಾಮ/ನಗರಗಳ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಕಾಣುತ್ತೇವೆ.

ವೀರಭದ್ರ ಕೌದಿ ಅವರ 'ದಡಸೇರಿದ ದೋಣಿ' ಕತೆಯ ರಮೇಶ ಶೋಷಣೆಗೊಳಗಾದ ಪರಿಯನ್ನು ಇಲ್ಲಿ ಪರಿಗಣಿಸಬಹುದು. ಗ್ರಾಮೀಣ ಪ್ರದೇಶದಿಂದ ಬಂದು ಪಟ್ಟಣದಲ್ಲಿ ಪದವಿ ಓದುತ್ತಿದ್ದ ರಮೇಶನಿಗೆ ಅವನ ಸ್ವಂತ ಅಣ್ಣ (ತಂದೆ ತೀರಿಕೊಂಡಿರುತ್ತಾರೆ) 'ಖರ್ಚಿಗೆ ಹಣ ಬೇಕಾದರೆ ಆಸ್ತಿಯಲ್ಲಿನ ಪಾಲಿನ ಹಕ್ಕನ್ನು ಬಿಟ್ಟುಕೊಡಬೇಕು'' ಎಂದು ಹಳ್ಳಿಯಿಂದ ಪತ್ರ ಬರೆಯುತ್ತಾನೆ. ಪರೀಕ್ಷೆಗಳು ನಡೆಯುತ್ತಿವೆ, ಅಸಹಾಯಕನಾದ ರಮೇಶ, ಊರಿಗೆ ಹೋಗಿ ಭೂಮಿಯ ಹಕ್ಕನ್ನು ತನ್ನ ಅಣ್ಣನಿಗೆ ಬಿಟ್ಟು ಕೊಟ್ಟು ಹಣ ತಂದು ಪಾಸಾಗುತ್ತಾನೆ. ತಾಯಿ ತೀರಿಕೊಂಡ ಸುದ್ದಿ ಬಂದಾಗಲೂ ಹೋಗದ ಅವನು, 'ನನ್ನವ್ವ ನನ್ನ ಎದಿಯಾಗ ಅದಾಳು' ಎಂದು ಮುಂಬಯಿ ಸೇರಿ ಒಂದು ಕಾರ್ಖಾನೆಯಲ್ಲಿ ನೌಕರಿ ಹಿಡಿಯುತ್ತಾನೆ. ಫ್ಯಾಕ್ಟರಿಯಲ್ಲಿ ರಮೇಶ ಕಾಲು ಕಳೆದುಕೊಂಡಾಗ ಕಂಪನಿ ಜವಾಬ್ದಾರಿ ವಹಿಸಿಕೊಳ್ಳದೇ ಅವನನ್ನು ಕೆಲಸದಿಂದ ತೆಗೆದು ಹಾಕುತ್ತದೆ. ಇಲ್ಲಿ ತಮ್ಮನ ಆರ್ಥಿಕ ಅಸಹಾಯಕತೆಯನ್ನು ವ್ಯಾಪಾರವಾಗಿ ದುರುಪಯೋಗಪಡಿಸಿಕೊಂಡ ಅಣ್ಣ, ಅದೇ ಸ್ಥಿತಿಯಲ್ಲಿ ಸಹಾಯ ಮಾಡದೆ ಗ್ಯಾಂಗ್ರಿನ್ ಹುಣ್ಣು ಬೆಳೆಯಲು ಕಾರಣವಾಗುವ ಕಂಪನಿಯ ಮಾಲೀಕರಲ್ಲಿ ಯಾವುದೇ ವ್ಯತ್ಯಾಸವಿಲ್ಲ, ಇವರಿಬ್ಬರೂ ಶೋಷಕರಾಗಿದ್ದಾರೆ. ಗ್ರಾಮೀಣ ಮತ್ತು ನಗರ ಪರಿಸರಗಳ ಶೋಷಣೆಗಳಿಗೆ ಕಾರಣವಾಗಿರುವ ಊಳಿಗಮಾನ್ಯ ಮತ್ತು ಆರ್ಥಿಕಶಾಹಿ ವ್ಯವಸ್ಥೆಯೊಳಗೆ ಮಾನವೀಯತೆ ನಲುಗಿ ಹೋಗುತ್ತಿರುವ ಹಾಗೂ ಅದು ಭೂ ಒಡೆತನ, ಬಂಡವಾಳಶಾಹಿತ್ವದ ರೂಪದಲ್ಲಿ ನಿಂತಿರುವುದನ್ನು ಕಾಣುತ್ತೇವೆ. ಅದೇ ರೀತಿ ಮಾಲತಿ ಪಟ್ಟಣಶೆಟ್ಟಿ ಅವರ 'ಋಣ' ಕತೆಯ ಬಾಳಣ್ಣ ವಿಜಾಪುರ ಜಿಲ್ಲೆಯ ತಾಳೂರಿನವನು. ನಾಲ್ಕು ವರ್ಷ ಬರದಿಂದ ಆ ಪ್ರದೇಶ ನಲುಗಿದಾಗ, ಎಲ್ಲ ವಿದ್ಯಾವಂತ ತರುಣರು ತೆಗೆದುಕೊಂಡಂತೆ ಗುಳೆ ಹೋಗುವ ನಿರ್ಧಾರ ತೆಗೆದುಕೊಳ್ಳುತ್ತಾನೆ. ಮಲ್ಲಣ್ಣನೆಂಬವನ ಸಹಾಯದಿಂದ ಬೆಂಗಳೂರು ತಲುಪಿ ಒಂದು ಕಾರ್ಖಾನೆಯಲ್ಲಿ ಕೆಲಸಕ್ಕೆ ಸೇರಿಕೊಳ್ಳುತ್ತಾನೆ. ತಾಯಿ ಸತ್ತ ಸುದ್ದಿ ತಂದ ಪತ್ರ ತೋರಿಸಿದರೂ ಕಾರ್ಖಾನೆಯ ಮ್ಯಾನೇಜರು ರಜಾ ಕೊಡದೆ ಅವನನ್ನು ಕಾರ್ಖಾನೆಯಿಂದ ಹೊರಗೆ ಹಾಕುತ್ತಾನೆ. 'ನಿಮ್ಮಮ್ಮ ಸತ್ರೆ ನಿನ್ನ ಕಳಿಸಿ ನಾ ಇಲ್ಲಿ ಕಣ್ಣೀರು ಹಾಕಬೇಕಾ? ರಜಾ ಬೇಕಿದ್ದರೆ ಗಂಟುಮೂಟೆ ಕಟ್ಟಿಕೊಂಡು ನಿನ್ನೂರಿಗೆ ಹೊರಡು''[13]

ಎಂಬ ಆಡಳಿತ ವರ್ಗದ ಧೋರಣೆ, ಲಾಭದ ದೃಷ್ಟಿಯನ್ನು ಮಾತ್ರ ಹೊಂದಿದ್ದು ಕಾರ್ಮಿಕರ ಹಿತರಕ್ಷಣೆ, ಮಾನವೀಯ ದೃಷ್ಟಿಕೋನವನ್ನು ಮರೆತದ್ದಾಗಿದೆ.

ಹೀಗೆ ಈ ಕಾಲಘಟ್ಟದಲ್ಲಿ ರಚಿತವಾದ ಕಥನಗಳಲ್ಲಿ ಬಂಡವಾಳಶಾಹಿ–ಕಾರ್ಮಿಕರ ಸಂಬಂಧ, ಶೋಷಣೆ, ಘರ್ಷಣೆ–ಕರ್ಷಣೆ, ಕೈಗಾರಿಕಾ ಸಂಸ್ಕೃತಿ, ಇದೆಲ್ಲದರ ಪರಿಣಾಮವಾಗಿ ಕಾಣಿಸುವ ಕೌಟುಂಬಿಕ ವಿಘಟನೆಗಳು, ವ್ಯಾಪಾರೀಕರಣಗೊಂಡ ಮಾನವೀಯ ಸಂಬಂಧಗಳು ದಾಖಲಾಗಿವೆ. ಅವಿಭಕ್ತ ಕುಟುಂಬಗಳು ಒಡೆದು ಅಣು ಕುಟುಂಬಗಳಾಗುವ ಪ್ರಕ್ರಿಯೆಯ ಆರಂಭವನ್ನು ಈ ಸಂವೇದನೆಗಳಲ್ಲಿ ಗುರುತಿಸಬಹುದಾಗಿದೆ.

### ೪. ಸಮಾಜವಾದಿ ಪದ್ಧತಿ ಮತ್ತು ಸಾಹಿತ್ಯ ಸಂವೇದನೆಗಳು

ಸ್ವಾತಂತ್ರ್ಯಾನಂತರ ಅನ್ಯದೇಶೀಯರ ಆಳ್ವಿಕೆ ಕೊನೆಗೊಂಡು ಸ್ವದೇಶಿಯರು ರಾಜಕೀಯ ಸೂತ್ರಗಳನ್ನು ಹಿಡಿದಿದ್ದಾರೆ. ರಾಜಕೀಯ ಸ್ವಾತಂತ್ರ್ಯದೊಂದಿಗೆ ಆರ್ಥಿಕ ಸ್ವಾತಂತ್ರ್ಯವೂ ದೊರಕಿದ್ದು (ಇದರ ಸಾರ್ಥಕತೆ ಎಷ್ಟೆಂಬ ವಾದ ಬೇರೆ ವಿಚಾರ) ಹಿಂದಿದ್ದ ರಾಜಕೀಯ ಪರತಂತ್ರ ಮತ್ತು ಬಂಡವಾಳಶಾಹಿ ಪದ್ಧತಿಗಿಂತ ಹೊಸ ಕಾಲದ ಆರ್ಥಿಕ ಸಂರಚನೆ ಮತ್ತು ಅದರ ಮೇಲೆ ನಿರ್ಧಾರಿತ ರಾಜಕೀಯ ಪದ್ಧತಿ ಅಳವಡಿಸಲ್ಪಟ್ಟಿದೆ. ಇದರ ಮಿತಿಗಳು ಏನೇ ಇರಲಿ, ಬದಲಾಗುತ್ತಿರುವ ಜಾಗತಿಕ ಮತ್ತು ಅದರ ಮೂಲದ ಹೊಸ ಆರ್ಥಿಕ ನೀತಿ–ಸನ್ನಿವೇಶಗಳ ಪರಿಣಾಮವಾಗಿ, ಪಾರಂಪರಿಕವಾಗಿ ಸಮಾಜದ ಮುಕ್ತವಾಹಿನಿಗೆ ಬಾರದ ದಲಿತರು, ಹಿಂದುಳಿದವರು, ಮಹಿಳೆಯರು, ಅಲ್ಪಸಂಖ್ಯಾತರು ಬಂದಿದ್ದು (ಈ ಕುರಿತು ವಿರೋಧಾಭಿಪ್ರಾಯಗಳೂ ಉಂಟು, ಅದು ಬೇರೆ ವಿಚಾರ), ಸಾಮಾಜಿಕ ನ್ಯಾಯದೊಂದಿಗೆ ಸ್ವ–ಆರ್ಥಿಕ ರಚನೆಯ ಅರ್ಥವ್ಯಾಪ್ತಿಯತ್ತ ದೃಷ್ಟಿ ಹರಿಸಿದ್ದಾರೆ. ಇದು ಸಾಹಿತ್ಯ ಸಂವೇದನೆಗಳ ರೂಪದಲ್ಲಿ ಅಭಿವ್ಯಕ್ತವಾಗಿದೆ.

### ೧. ಪ್ರತಿಭಟನಾ ಸಾಹಿತ್ಯ (ದಲಿತ–ಬಂಡಾಯ) ಸಂವೇದನೆಗಳು

ಕಾಲದಿಂದ ಕಾಲಕ್ಕೆ ಸಾಹಿತ್ಯದ ವಸ್ತು, ಅಭಿವ್ಯಕ್ತಿ, ಸಂವೇದನೆಗಳಲ್ಲಿ ಬದಲಾವಣೆಗಳಾಗುತ್ತ ಬಂದಿವೆ. ಈ ಬದಲಾವಣೆಗಳಿಗೆ ಧಾರ್ಮಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕವಾದ ಕಾರಣಗಳಿವೆ. ಭಾರತದ ಸಾಮಾಜಿಕ ಸಂದರ್ಭದಲ್ಲಿ ಎರಡು ವಿಧವಾದ ಶೋಷಣೆಗಳನ್ನು ಕಾಣಬಹುದಾಗಿದೆ. ವರ್ಣ ಆಧಾರಿತ ಮತ್ತು ವರ್ಗ ಆಧಾರಿತವೆಂಬ ಶೋಷಣೆಗಳಲ್ಲಿ ಶೋಷಿತನನ್ನು ಆರ್ಥಿಕ ಮತ್ತು ಜಾತಿ ಆಧಾರದ ಮೇಲೆ ಗುರುತಿಸಬಹುದು. ಸಾಮಾನ್ಯವಾಗಿ ಎಲ್ಲ ರೀತಿಯ ಸವಲತ್ತುಗಳನ್ನು ಪಡೆದ ಪ್ರತಿಷ್ಠಿತ ವರ್ಗದ ನೆನಪು, ಅನುಭವ ಮತ್ತು ಸಂವೇದನೆಗಳು, ಶೋಷಣೆಗೆ, ದಬ್ಬಾಳಿಕೆಗೆ ಒಳಗಾದ ಅಪ್ರತಿಷ್ಠಿತ ವರ್ಗದ ನೆನಪು, ಅನುಭವ ಮತ್ತು ಸಂವೇದನೆಗಳಿಗಿಂತ ಭಿನ್ನವಾದವುಗಳಾಗಿವೆ. ಇದುವರೆಗೂ ಮೌನವಾಗಿದ್ದ ಈ ಕೆಳ ಪದರುಗಳು (ವರ್ಣ/ವರ್ಗ) ಇತ್ತೀಚಿನ ದಿನಗಳಲ್ಲಿ ತಮ್ಮ ಅನುಭವ/ಧ್ವನಿಗೆ ಅಭಿವ್ಯಕ್ತಿಯ ರೂಪವನ್ನು ಪಡೆದುಕೊಂಡಿದ್ದು, ಸಾಹಿತ್ಯ ಕ್ಷೇತ್ರದಲ್ಲಿ ಆಯಾಮವನ್ನುಂಟು ಮಾಡಿದೆ. ಶೋಷಿತ, ದಲಿತ ಮತ್ತು ಅಸ್ಪೃಶ್ಯ ಪದಗಳ ಅರ್ಥವ್ಯಾಪ್ತಿ ಕುರಿತು ಸಾಹಿತ್ಯ ವಲಯದಲ್ಲಿ ಅನೇಕ ವಾದ–ವಿವಾದಗಳಿವೆ. 'ಒಬ್ಬ ಅವಮಾನಿತ ವ್ಯಕ್ತಿ ಸ್ವಾಭಿಮಾನಿಯೂ ಆದಾಗ ಹುಟ್ಟುವ ಸಾಹಿತ್ಯಕ್ಕೆ ಒಂದು ಗುಣವಿರುತ್ತದೆ. ಅದನ್ನು ನಾವು ಪ್ರಪಂಚದ ಎಲ್ಲ ಕಡೆ ಪ್ರತಿಭಟನಾ ಸಾಹಿತ್ಯವೆಂದು ಕಾಣುತ್ತೇವೆ. ಹೀಗೆ ಅವಮಾನಿತ ಸ್ವಾಭಿಮಾನಿಯಾದವನು ಅಸ್ಪೃಶ್ಯನೂ ಆಗಿದ್ದಲ್ಲಿ ದಲಿತ ಸಾಹಿತ್ಯ ಹುಟ್ಟಿ ಬರುತ್ತದೆ. ಆದ್ದರಿಂದ ಅವಮಾನಿತರ ಜಾಗತಿಕ ಸಾಹಿತ್ಯದ ನಡುವೆ ಈ ಸಾಹಿತ್ಯಕ್ಕೊಂದು ಸ್ವಸ್ವರೂಪವಿರುತ್ತದೆ'[೮] ಎಂಬ ಅಭಿಪ್ರಾಯಕ್ಕೆ ಸಹಮತ ವ್ಯಕ್ತಪಡಿಸಿ, ಪ್ರಸ್ತುತ ಅಧ್ಯಯನವು ಶೋಷಣೆಯನ್ನು ಆರ್ಥಿಕ ಆಧಾರದಲ್ಲಿ ಗುರುತಿಸಿ, ಶೋಷಿತನ ಪ್ರತಿಭಟನೆಯನ್ನು ಪ್ರತಿಭಟನಾ (ಬಂಡಾಯ) ಅಭಿವ್ಯಕ್ತಿಯೆಂದೂ, ಶೋಷಣೆಯು ಆರ್ಥಿಕ ಸ್ಥಿತಿಯ ಜೊತೆಗೆ ಜಾತಿ ನೆಲೆಯಲ್ಲಿ ನಡೆದರೂ ಶೋಷಕನ ಅಭಿವ್ಯಕ್ತಿ, ಹೋರಾಟವನ್ನು ದಲಿತ(ಅವಕಾಶ ವಂಚಿತರ) ಬಂಡಾಯವೆಂದು ಸರಳೀಕರಿಸಿಕೊಳ್ಳುತ್ತದೆ.

ಬಂಡಾಯ ದಲಿತ ಸಾಹಿತ್ಯ ಚಳುವಳಿ ಮುಖ್ಯವಾಗಿ ಸಾಂಸ್ಕೃತಿಕ ಕ್ಷೇತ್ರಕ್ಕೆ ಸಂಬಂಧಪಟ್ಟಿದ್ದು ಎಂಬ ಅಭಿಪ್ರಾಯ ಒಪ್ಪುವಂತಹುದಾಗಿದೆ. ಬಂಡಾಯ ದಲಿತ ಸಾಹಿತ್ಯ ಅಭಿವ್ಯಕ್ತಿಗೆ ಮುಂಬಯಿ ಕರ್ನಾಟಕದ

ಕಥನ ಸಾಹಿತಿಗಳು ವಸಾಹತು ಕಾಲಘಟ್ಟದಿಂದಲೂ ಸ್ಪಂದಿಸುತ್ತ ಬಂದಿದ್ದಾರೆ. ಟೇಂಗ್ಸೆ ಗೋವಿಂದರಾಯರ 'ಛಪ್ಪರ ಬಂದ್', ಆನಂದ ಕಂದರ 'ಮಾಲ್ಕಿ ಹಕ್ಕು' ಹಾಗೂ ಜಡಭರತರ 'ಡೂಗಜ್ಜನ ಬಹಿಷ್ಕಾರ' ಕತೆಗಳು ಈ ಪ್ರಕಾರದ ಮೊದಲ ಕತೆಗಳೆಂದು ಗುರುತಿಸಬಹುದು. ಇವುಗಳನ್ನು ಬರೆದವರು ಉನ್ನತ ಜಾತಿ/ವರ್ಗಕ್ಕೆ ಸೇರಿದವರಾದ್ದರಿಂದ ಇವು ನಿಜವಾದ ಅರ್ಥದಲ್ಲಿ ಬಂಡಾಯ/ದಲಿತ ಸಾಹಿತ್ಯ ಪ್ರಕಾರಕ್ಕೆ ಸೇರಿದವುಗಳೆ ಎಂಬ ಪ್ರಶ್ನೆ ಒಂದು ವರ್ಗದಿಂದ ಕೇಳಿಬರುತ್ತದೆ. ಶೋಷಣೆಯ ನೋವು, ಸಂಕಟಗಳನ್ನು ಆವಾಹನೆ ಮಾಡಿಕೊಂಡವರು ವಾಸ್ತವಿಕವಾದ ನೋವು, ಸಂಕಟಗಳ ಚಿತ್ರಣ ನೀಡಬಲ್ಲರೆ ಎಂಬುದೂ ಸಹ ಇಂತಹ ಪ್ರಶ್ನೆಗಳ ಆಳದಲ್ಲಿದೆ. ಪ್ರಶ್ನೆಗಳು ಯಾವುವೇ ಇರಲಿ, ಆದರೆ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಶೋಷಣೆಗೆ ಒಳಗಾಗಿ ನೊಂದವರ, ಅವಮಾನಕ್ಕೆ ಒಳಗಾದವರ ಭಾವನಾತ್ಮಕ ಅಭಿವ್ಯಕ್ತಿಯನ್ನು ಈ ಕತೆಗಳು ಅನನ್ಯವಾಗಿ ಚಿತ್ರಿಸಲು ಪ್ರಯತ್ನಿಸಿರುವುದು ಮಾತ್ರ ಅಷ್ಟೇ ಸತ್ಯವೆಂಬುದನ್ನು ಅಲ್ಲಗಳೆಯುವಂತಿಲ್ಲ.

ಬ್ರಿಟೀಶ್ ಸಾಮ್ರಾಜ್ಯ ಬೇರು ಬಿಟ್ಟಿದ್ದ ಕಾಲದಲ್ಲಿ ಕೆಲವು ಜಾತಿಗಳನ್ನು ಅಪರಾಧಿ ಜಾತಿಗಳೆಂದು ಪರಿಗಣಿಸಿ ಅವರನ್ನು ಬಯಲಿನಲ್ಲಿಯೇ ಬಂಧನದಲ್ಲಿಡಲಾಗಿತ್ತು. ಸಭ್ಯರನ್ನು ರಕ್ಷಿಸಲು (?) ಆಗ ಇದೊಂದು ರಾಜಕೀಯ ಉಪಾಯದ ಸಂಚಾಗಿತ್ತು. 'ಛಪ್ಪರಬಂಧ ಕತೆ'ಯ ನಾಯಕ ದುರಗಪ್ಪ ಇಂತಹ ಜಾತಿಗೆ ಸೇರಿದ ಮನುಷ್ಯನಾಗಿದ್ದಾನೆ ಹಾಗೂ ಎಲ್ಲೇ ಕಳುವಾದರೂ ಅದಕ್ಕೆ ಅವನೇ ಕಾರಣ ಎಂಬ ಹೊಣೆಯನ್ನು ಬಲಾತ್ಕಾರವಾಗಿ ಹೊತ್ತವನಾಗಿದ್ದಾನೆ. ಇವನು ಎಲ್ಲಿ ಹೋದರೂ ಜಾತಿನೆಲೆಯಲ್ಲಿ ಕೆಲಸ ಸಿಕ್ಕುವುದಿಲ್ಲ ಮತ್ತು ಹಸಿವಿಗೆ ಕಳವು ಮಾಡದೇ ಇರಲಾಗುವುದಿಲ್ಲ ಎಂಬ ವ್ಯವಸ್ಥೆ ನಿರ್ಮಿತ ಸಂದಿಗ್ಧ ಬದುಕು ಅವನದಾಗಿದೆ. ಅವನು ಈ ಬಂಧನದಿಂದ ಪಾರಾಗಲು ಯತ್ನಿಸಿ ಸೋಲುತ್ತಾನೆ. ಜಡಭರತ ಅವರ 'ಡೂಗಜ್ಜನ ಬಹಿಷ್ಕಾರ' ಕಥೆಯು ನಾಗರಿಕತೆಯ ಘೋರ ಮುಖವನ್ನು ತಿಳಿಸುವುದಾಗಿದೆ. ಈ ಕತೆಗಳು ಸಮಕಾಲೀನ ಸಮಸ್ಯೆಗಳನ್ನು ಚರ್ಚಿಸುತ್ತವೆಯಾದರೂ ಶೋಷಣೆಗೆ ಒಳಗಾದವರ ಪ್ರತಿಭಟನೆ ಇಲ್ಲಿ ಎದ್ದು ಕಾಣುವುದಿಲ್ಲ. ಈ ಕತೆಗಳ ವಿವರಗಳಲ್ಲಿ ಕಂಡುಬರುವ ವಾಸ್ತವತೆ ಮತ್ತು ರಾಜಕೀಯ ಧ್ವನಿ ಅನಿವಾರ್ಯತೆಯಿಂದ ಕೂಡಿದೆ ಎನ್ನಬಹುದು.

ಎಪ್ಪತ್ತರ ದಶಕದಲ್ಲಿ ಆರಂಭವಾದ ಬಂಡಾಯ, ದಲಿತ ಸಾಹಿತ್ಯ ಚಳುವಳಿ ಅನೇಕ ಕಥೆ, ಕಾದಂಬರಿಗಳಿಗೆ ಜನ್ಮ ನೀಡಿದೆ. ಜೀವನ ಕಲೆ (ಬಸವರಾಜ ಕಟ್ಟೀಮನಿ), ಹಂತ (ಕುಂದರನಾಡ ಪಾಟೀಲ), ಬೆಂಕಿಯ ಮಧ್ಯೆ, ಬಿರುಗಾಳಿ, ತಲೆಮಾರು, ನೆರೆ ಹಾವಳಿ (ಆರ್.ವಿ. ಭಂಡಾರಿ), ತೂತಿನ ದುಡ್ಡು ಮತ್ತು ನೀರು, ಅಹಿಂಸಾ ಚಕ್ಕಿಯ ಅಯ್ಯಪ್ಪ, ಕಾರ್ಯ (ಅರವಿಂದ ಮಾಲಗತ್ತಿ), ಗಂಡಸರು, ಶೋಷಣೆ, ಬಂಡಾಯ ಇತ್ಯಾದಿ (ವೀಣಾ ಶಾಂತೇಶ್ವರ), ಮಣ್ಣು (ಗಿರಡ್ಡಿ ಗೋವಿಂದರಾಜ), ಆವಾರಿ, ಕಡಲ ಬೆಳಕಿನ ದಾರಿಗುಂಟ (ರಾಮಕೃಷ್ಣ ಗುಂದಿ), ಹೊಲೆಗೇರಿಯ ರಾಜಕುಮಾರ (ಶಿವರುದ್ರ ಕಲ್ಲೋಳಿಕರ), ಹೋರಿ (ಬಿ. ಟಿ. ದೇಸಾಯಿ), ಪಾಲ್ಗುಣಿ (ಮೋಹನ ನಾಗಮ್ಮನವರ) ಮುಂತಾದ ಲೇಖಕರು ತಮ್ಮ ಕಥನ ಸಾಹಿತ್ಯದಲ್ಲಿ ಒದಗಿಸುವ ವಸ್ತುವಿನ ಮೂಲಕ ಮೇಲಿನ ಹೇಳಿಕೆಯನ್ನು ದೃಡೀಕರಿಸಿದ್ದಾರೆ.

ಮುಂಬಯಿ ಕರ್ನಾಟಕ ಗಡಿ ಪ್ರದೇಶದ ಕನ್ನಡ ದೇಶಿಭಾಷೆಯಲ್ಲಿ ರಚನೆಗೊಂಡ ಸಿಂಗಾರೆವ್ವ ಮತ್ತು ಅರಮನೆ, ಅದರ ಶಿರೋನಾಮೆ ಸೂಚಿಸುವಂತೆ ಹೆಣ್ಣು ಮತ್ತು ಅರಮನೆಯ ಕತೆ ಮಾತ್ರವಾಗಿರದೆ ಹಳೆ ಮೌಲ್ಯಗಳ ನಾಶ ಮತ್ತು ಹೊಸ ಮೌಲ್ಯಗಳ ಉದಯವಾಗಿದೆ. 'ಪ್ರೀತಿ-ದ್ವೇಷಗಳ ಅದ್ಭುತಲೋಕವನ್ನು ನಮ್ಮ ಮುಂದೆ ತೆರೆದಿಡುವ ವಿಶಿಷ್ಟ ಕೃತಿ' ಇದಾಗಿದೆ'' ಎಂಬ ಮಾತು ಸಾಹಿತ್ಯದಲ್ಲಿ ಅದರ ಸ್ಥಾನವನ್ನು ಗುರುತಿಸುತ್ತದೆ. ದೇಸಗತಿ, ವಿನಾಶ, ಗೌಡಿಕೆಯವರ ಗತ್ತು, ಗೈರತ್ತುಗಳು, ವೈಭವಗಳು, ಹುಸಿ ಅಬ್ಬರಗಳು ವಿನಾಶದ ನೆರಳನ್ನು ಹೊತ್ತು ನಡೆದ ಸ್ಥಿತಿಯನ್ನು ಬೆಳವಣಿಗೆಯ ಋಣಾತ್ಮಕ ಚಿಹ್ನೆಯೊಂದಿಗೆ ಕಾದಂಬರಿಯಲ್ಲಿ ಕಾಣಬಹುದು. ಅಂತರಂಗ ಬಹಿರಂಗದ ಸಂಗತಿಗಳನ್ನು ಪ್ರತ್ಯೇಕವಾಗಿಯೇ ಉಳಿಸಿ, ಬೆಳೆಸಿಕೊಂಡು ಹಳ್ಳಿಯ ಜನರ ಭಾವನಾತ್ಮಕ ಸಂಬಂಧ ಹೊಂದಿದ್ದ ದೇಸಾಯಿಯಂತವರ ಅರಮನೆ ವ್ಯವಸ್ಥೆಯನ್ನು ಭೇದಿಸಿ ಅದರ ಗರ್ಭವನ್ನು ಸಾರ್ವಜನಿಕಗೊಳಿಸಿದ್ದು ಈ ಕಾದಂಬರಿಯ ಕೊಡುಗೆ. ಸರಗಂ ದೇಸಾಯಿ ಮನೆ ಇಲ್ಲಿ ಹಳೆಯ ಮೌಲ್ಯಗಳಿಗೆ ರೂಪಕವಾದರೆ, ಮರ್ಯ, ಸಿಂಗಾರೆವ್ವರ ಸಂಬಂಧ ಈ ಮೌಲ್ಯವನ್ನು ನಾಶಗೊಳಿಸಿ ವರ್ಣ ವ್ಯವಸ್ಥೆ ಬದಲಾಗುವ ಮೌಲ್ಯದತ್ತ ಚಲಿಸಲು ಕಾರಣವಾಗುತ್ತದೆ.

ಇಲ್ಲಿ ಬರುವ ಸಿಂಗಾರೆವ್ವನ ಪಾತ್ರವು ಎಲ್ಲ ಹಳ್ಳಿಯ ಹೆಣ್ಣುಗಳಂತೆ ಅನೇಕ ಕಷ್ಟ, ನೋವು, ಸಂಕಟಗಳ ಸತ್ವ ಪರೀಕ್ಷೆಗೆ ಒಳಗಾಗಿ ತನ್ನ ಸುಖಕ್ಕೆ ಎರವಾಗುತ್ತದೆ. ಮಕ್ಕಳಾಸೆಗೆ ಕದ್ದು ಮಾಡಿಸುವ ಪೂಜೆ, ಅಲ್ಲಿ ಜಂಗಮನ ಮರಣ, ಅದನ್ನು ಮುಚ್ಚಿಡಲು ಹೊಲೆಯರ ಮರಿಯನ ಸಹಾಯ, ಊರಲ್ಲಿ ಬಂಜೆ ಪಟ್ಟ, ಗಂಡನ ಲೈಂಗಿಕ ವಿಫಲತೆ, ಮರಿಯನ ಪುರುಷ ಆಕ್ರಮಣ ಇತ್ಯಾದಿ ಅನೇಕ ಪರೀಕ್ಷೆಗಳನ್ನು ಹಾದು ಬಂದರೂ, ಗಟ್ಟಿಯಾಗದ ಅವಳ ವ್ಯಕ್ತಿತ್ವ ತಾನು ಹೊತ್ತ ಮರಿಯನ ಬಸಿರಿಗೆ ಪಶ್ಚಾತ್ತಾಪ ಪಡುವುದಿಲ್ಲ, ಬದಲಿಗೆ ಹೆಮ್ಮೆ ಪಡುತ್ತದೆ. ಕಾದಂಬರಿ ದಲಿತರ ಪ್ರತಿಭಟನೆಯ ಸಂಕೇತವಾಗಿದೆ. ತುಳಿಯಲ್ಪಟ್ಟ ಕೆಳವರ್ಗ ಮೇಲ್ವರ್ಗದೊಂದಿಗೆ ನಡೆಸಿದ ಹೋರಾಟದ ತೀವ್ರ ಸೇಡು, ರೋಷದ ಕಿಚ್ಚು ಕಾದಂಬರಿಯ ವಿನ್ಯಾಸದಲ್ಲಿ ಕಾಣಿಸಿಕೊಳ್ಳುತ್ತದೆ. ಒಂದು ಸಾಮಾಜಿಕ ಮುಖವನ್ನು ಪಡೆದ ವರ್ಗೀಕೃತ ಸಮಾಜದ ಅವನತಿಯ ಮತ್ತು ದಲಿತ ವರ್ಗದ ಸಿಡಿದೇಳುವ ಪ್ರಕ್ರಿಯೆಗೆ ಆಹ್ವಾನದ ಸಂಕೇತವಾಗುತ್ತದೆ. 'ಚೂರಿ, ಅಲಗು, ಹುಲಿ ಪ್ರತಿಮೆಗಳು ಕಾದಂಬರಿ ಉದ್ದಕ್ಕೂ ಬಂದು ಮರ್‍ಯಾನ ಹಗೆ ಮತ್ತು ಅವನು ಪ್ರತಿನಿಧಿಸುವ ಶೋಷಿತ ವರ್ಗದ ಪ್ರತಿಭಟನಾ ಪ್ರವೃತ್ತಿ, ಸೇಡು ತೀರಿಸಿಕೊಳ್ಳುವ ರೊಚ್ಚು, ಆ ದಿಕ್ಕಿನಲ್ಲಿ ನಡೆದಾಗ ಅನಿವಾರ್ಯವಾಗಿ ಉಂಟಾಗಬಹುದಾದ ಹಿಂಸೆ, ಸಂಘರ್ಷಗಳನ್ನು ಸೃಷ್ಟಿಕರಿಸುತ್ತವೆ.'[೪೬] ಆದರೆ ದಲಿತರ ಸೇಡಿಗೆ ರೊಚ್ಚಿಗೆ ಧ್ವನಿ ನೀಡುವ ಕಾದಂಬರಿ ಮಹಿಳಾ ಸಂವೇದನೆ ಮತ್ತು ಅವಳ ಪ್ರತಿಭಟನೆಗೆ ತಣ್ಣನೆಯ ಪ್ರತಿಕ್ರಿಯೆಯನ್ನು ಹೊಂದಿದೆ. 'ದಲಿತರು, ಶೋಷಿತರು ಹೊಸ ಬದುಕಿನತ್ತ ಹೆಜ್ಜೆಯಿಡಬೇಕೆಂದು ಬಯಸುವ ಸಂವೇದನಾಶೀಲರು, ಎಲ್ಲರಿಗೂ ಸೇಡಿಗೆ, ತುಳಿತಕ್ಕೆ ಈಡು ಮಾಡಲು ಸಿಗುವುದು ಹೆಣ್ಣೆ ಎಂಬ ನಿಜವನ್ನು ಕಾದಂಬರಿ ಬಿಚ್ಚಿಟ್ಟಿದೆ. ಇಲ್ಲಿಯ ಸಿಂಗಾರೆವ್ವ ಮೇಲ್ವರ್ಗದ ದೇಸಾಯಿ ಗೌಡರ ತುಳಿತಕ್ಕೆ ಅಷ್ಟೇಕೆ ದಲಿತ ಮರ್‍ಯಾನ ಆಕ್ರಮಣಕ್ಕೂ ತುತ್ತಾಗುತ್ತಾಳೆ. ಹಾಗಾಗಿ ಕಾದಂಬರಿ ಎಲ್ಲ ಶೋಷಿತರ ಪ್ರತಿಭಟನೆಗೆ ಸಂಕೇತವಾಗದು'[೪೭] ಎಂಬ ಅಭಿಪ್ರಾಯ ಅಧ್ಯಯನದ ನಿಲುವೂ ಆಗಿದೆ.

'ಸಿಂಗಾರವ್ವ ಅರಮನೆಯಲ್ಲಿರಲಿ ಹುಣಸೆ ಮೆಳೆಯಲ್ಲಿರಲಿ ಎದುರಿಸಬೇಕಾಗಿರುವುದು ಗಂಡು ಜಗತ್ತನ್ನು. ಆಯ್ಕೆಯ ಸಾಧ್ಯತೆ ಅವಳಿಗೆ ಕಡಿಮೆ. ಕಾದಂಬರಿಯು ಎರಡು ಜಗತ್ತುಗಳು ಎದುರು ಬದುರಾಗುವ ಕ್ರಮವನ್ನು ಮಾತ್ರವಲ್ಲದೇ ಗಂಡು ಜಗತ್ತಿನ ಕ್ರೌರ್ಯ ತುಂಬಿದ ವಿರಳತನವನ್ನು ಗುರುತಿಸುತ್ತದೆ. ಕಾರಣ ಕತೆಯು ಕೇವಲ ಒಂದು ಹೆಣ್ಣಿನ ಜೀವನದ ಕತೆಯಾಗದೆ ಜೀವನದ ಒಳಗಿರುವ ಮಾದರಿಯನ್ನು ಅನ್ವೇಷಿಸುವ ಯತ್ನವಾಗಿದೆ'[೪೮] ವಿಮರ್ಶಕರ ಈ ಅಭಿಪ್ರಾಯವನ್ನು ಅಧ್ಯಯನ ಪುರಸ್ಕರಿಸುತ್ತದೆ. ಇದಕ್ಕೆ ಸಾಕ್ಷಿಯಾಗಿ ನಾವು ಕಾದಂಬರಿಯನ್ನೇ ಅವಲೋಕಿಸಬಹುದು.  ಹಸು ಕರುವಿನ ಜೊತೆ ಮರ್‍ಯಾನೂ ಕೂಡ ಸಿಂಗಾರೆವ್ವನ ಕರುಳಿನ ಕಂದನಾಗಿದ್ದರೂ ಮರ್‍ಯಾ ಮನುಷ್ಯತ್ವ ಮರೆತು ಹುಚ್ಚಯ್ಯನ ಹೆಣದ ಪಕ್ಕದಲ್ಲಿ ಸಿಂಗಾರೆವ್ವನನ್ನು ಆಕ್ರಮಿಸಿ ಪುರುಷ ದೌರ್ಜನ್ಯ ಮೆರೆಯುತ್ತಾನೆ. ಇದಕ್ಕೆ ಸಾವಿರ ಕಾರಣ ಇರಬಹುದು. ದೇಸಾಯಿ ಅವನ ತಾಯಿ, ಹೊಲವನ್ನು ಎತ್ತಿ ಹಾಕಿರಬಹುದು, ಆಳಾಗಿ ದುಡಿಸಿರಬಹುದು. ಗೌಡನ ಮೇಲಿನ ಸೇಡಿಗೆ ಕರುಣೆಯ ತಾಯಿಯನ್ನು ಬಲಿಯಾಗಿಸುವುದೆ? ಅಷ್ಟೆ ಅಲ್ಲದೆ ಕಾದಂಬರಿ ಒಬ್ಬ ಸ್ತ್ರೀಯಿಂದ ಇನ್ನೊಬ್ಬ ಸ್ತ್ರೀಯ ಶೋಷಣೆ ನಡೆಯುವುದನ್ನು ಸೃಷ್ಟಿಸಿದೆ. ಸಿಂಗಾರೆವ್ವನ ಬಂಗಾರದ ಬಳೆಗಳು ಕಳೆದಾಗ ಅವಳ ತಂದೆ ನಂದಗಾಂವನ ಗೌಡ ಶೀನಿಂಗವ್ವನ ಮೇಲೆ ಸಂಶಯಗೊಂಡು ಬೆನ್ನಿಗೆ ಒದೆಯುತ್ತಾನೆ. ತನ್ನೊಂದಿಗೆ, ಕಣ್ಣೀರಿನಲ್ಲಿ ಕಲ್ಲು ಕುದಿಸಿ, ಮುಳ್ಳು ಬೇಯಿಸಿ ತಿಂದು ಕಷ್ಟಪಡುತ್ತಿದ್ದ ಬಾಲ್ಯದ, ಜೀವದ ಗೆಳತಿಯ ಮೇಲೆ ಗೌಡ, ಗೌಡತಿ ಸಂಶಯ ಪಡುತ್ತಿದ್ದರೂ, ಗೆಳತಿಯ ಪರವಾಗಿ ಸಿಂಗಾರೆವ್ವ ಒಂದು ಶಬ್ದ ಮಾತಾಡುವುದಿಲ್ಲ, ನೈತಿಕ ಆಸರೆಯನ್ನೂ ಕೊಡುವುದಿಲ್ಲ. ಕತೆ ಮುಗಿದಾಗ, ಮದುವೆಯಾಗದೇ ಉಳಿದು ಸಿಂಗಾರೆವ್ವನ ಬದುಕಿನುದ್ದಕ್ಕೂ ಅವಳ ಕಷ್ಟ, ನೋವು, ಸಂಕಟಗಳಲ್ಲಿ ಒಂದಾಗಿದ್ದು, ಅವಳಿಗೆ ತಾಯಿ ಹೃದಯದ ಕ್ಷೇಮಭಾವವನ್ನು ಕೊಟ್ಟು ತ್ಯಾಗಮಯಿಯಾಗಿ ಬದುಕಿದ ಶೀನಿಂಗವ್ವಳೆ ಈ ಕೃತಿಯ ಕಥಾ ನಾಯಕಿ ಎಂದು ಅಧ್ಯಯನ ಅಭಿಪ್ರಾಯಿಸುತ್ತದೆ.

ಅರವಿಂದ ಮಾಲಗತ್ತಿಯವರ 'ಕಾರ್ಯ' (೧೯೮೮) ಕಾದಂಬರಿ ಈ ಪ್ರದೇಶದ ದಲಿತ ಬಂಡಾಯದ ವಿಭಿನ್ನ ಕೃತಿಯಾಗಿ ನಿಲ್ಲುತ್ತದೆ. ದಲಿತರಲ್ಲಿಯ ಒಳಪಂಗಡಗಳಲ್ಲಿನ ವೈಮನಸ್ಸು, ಅಂಧಶ್ರದ್ಧೆ, ಶರಾಬು ಕುಡಿದಾಗ ಶೂರರಾಗಿ, ನಿಶೆ ಇಳಿದಾಗ ಹೇಡಿಗಳಾಗಿ ವರ್ತಿಸುವ ಒಂದು ಸಮೂಹದ ಕತೆಯಾಗಿ ಕೃತಿ ಸಾಗುತ್ತದೆ. ಕೊನೆಯಲ್ಲಿ ಅಂದರೆ ವರ್ಗ ಸಂಘರ್ಷಕ್ಕೆ ಎಡೆಮಾಡಿಕೊಡುವ ಹಂತದಲ್ಲಿ, ಜಾತಿಗಳ ಎಲ್ಲೆ ಮೀರಿ ಮಾನವ ಸಂಬಂಧಗಳನ್ನು ಅನಾವರಣಗೊಳಿಸಿ ಮುಕ್ತಾಯವಾಗುತ್ತದೆ. ಈ ಕಾದಂಬರಿಯಲ್ಲಿ

ನಾಯಕನಿಲ್ಲ, ಪ್ರಧಾನ ಪಾತ್ರಗಳಿಲ್ಲ. ಬೀಗ ಬಿದ್ದ ಬಾಯಿಗಳ, ಮೌನ ಹೊತ್ತ ಮಾತುಗಳ ಇಡೀ ದಲಿತ ಸಮಾಜವೇ ನಾಯಕನ ಸ್ಥಾನದಲ್ಲಿದೆ. ಬಂಗಾರೆವ್ವ ಸತ್ತು ಸಮಾಧಿಯಾದ ಮೂರನೇ ದಿನ ಹಕ್ಕಿ ಕೂಳು ಮುಟ್ಟುವ 'ಕಾರ್ಯ'ದ ಸುತ್ತ ನಡೆಯುವ ಅನಿರೀಕ್ಷಿತ ಘಟನೆಗಳು ಈ ಕಾದಂಬರಿಯ ವಸ್ತುಗಳಾಗಿವೆ.

ಭಾರತೀಯ ಸಂದರ್ಭದಲ್ಲಿ ಸ್ಪೃಶ್ಯ-ಅಸ್ಪೃಶ್ಯ ಎಂಬ ತಾರತಮ್ಯದ ಮುಖ ಅನಾವರಣ ಮಾಡುವ ಕಾದಂಬರಿ, ಜೊತೆ ಜೊತೆಗೆ ದಲಿತರ ಒಳಜಾತೀಯತೆಯ ಕುರಿತೂ ಬೆಳಕು ಚೆಲ್ಲುತ್ತದೆ. ಊರಗೌಡ ಮತ್ತು ವರಗ ದಶರಥ ಇವರ ಮಧ್ಯೆ ಕಲ್ಲಿ ಮೀಸೆ ಪ್ರಸಂಗದಲ್ಲಿ ಸ್ಪೃಶ್ಯ ಅಸ್ಪೃಶ್ಯತೆಯ ಪ್ರತಿಷ್ಠೆ ಎದ್ದು ಕಂಡರೆ, ಮಚಗಾರ ಮತ್ತು ಸಮಗಾರ ಒಳಜಾತಿಗಳ ಮಧ್ಯೆ ವಿವಾಹ ಸಂಬಂಧ ಬೆಳೆಸುವ ವಿಷಯದಲ್ಲಿ ಡೋರ ಅಮ್ಮಣ್ಣ ಹಾಗೂ ಚನ್ನಪ್ಪ ಇವರಲ್ಲಿ ವಾಗ್ವಾದ ನಡೆಯುತ್ತದೆ. ಇದಕ್ಕೆ ಒಳಜಾತಿ ಶ್ರೇಷ್ಠತೆಯ ಅಹಂ ಎಂದೂ ಕರೆಯಬಹುದು. 'ಬೇಕಿದ್ರ ನಿನ್ನ ಮಗಳನ್ನ ಕೊಟ್ಟು ಮದುವೆ ಮಾಡು. ನಾವ್ಯಾಕ ಕೊಡಬೇಕು'[೨೯] ಎನ್ನುವ ಚೆನ್ನಪ್ಪನ ಮಾತು ಯಾವ ಸವರ್ಣೀಯರ ಮಾತಿಗಿಂತಲೂ ಕಡಿಮೆಯಿಲ್ಲ. ಅಧಿಕಾರ, ಸೌಲಭ್ಯ ಮತ್ತು ಸವಲತ್ತಿನ ಅವಕಾಶ ಸಿಕ್ಕರೆ ಒಂದಾಗಿ ಹೋರಾಡದೆ, ಅಲ್ಲೇ ಒಳಪಂಗಡಗಳಾಗಿ ಒಡೆಯುವುದು ಭಾರತದ ಜಾತಿವ್ಯವಸ್ಥೆಯ ದೊಡ್ಡ ದುರಂತವಾಗಿದೆ. ಇದಕ್ಕೆ ದಲಿತ ವರ್ಗವೂ ಒಳಗಾಗಿದ್ದು ಈ ಎರಡು ಗುಂಪುಗಳಲ್ಲಿ ಹುಟ್ಟಿಕೊಳ್ಳುವ ಭಿನ್ನ ರೀತಿಯ ಸಂವೇದನೆಗಳು ಕಥನದಲ್ಲಿ ದಾಖಲಾಗಿವೆ. ಕೃತಿ ದಲಿತರೊಳಗಿನ ಶ್ರೇಣೀಕರಣವನ್ನು ತಿಳಿಸುತ್ತ ಇವೇ ಅವರ ದುರಂತಕ್ಕೆ ಕಾರಣ ಎಂಬ ನಿಲುವಿಗೆ ಬರುತ್ತದೆ. ಮೈಲಿಗೆಯ ಜೊತೆ ಬೆರೆತು ಹೋದ ಕಾಮ, ಇಲ್ಲವೇ ಕಾಮದ ಜೊತೆ ಬೆರೆತು ಹೋದ ಮೈಲಿಗೆ ವರ್ಗ ಸಂಘರ್ಷಕ್ಕೆ ಎಡೆ ಮಾಡುವ, ತತ್ಸಂಬಂಧವಾಗಿ ಪ್ರಬಲರಿಗೆ ಜಯವಾಗುವುದು ಕೂಡ ಪೂರ್ವನಿಯೋಜಿತವೇನೋ ಎಂಬ ಸಂಶಯ ಬರುತ್ತದೆ. ರಂಜಾನ್ ದರ್ಗಾ ಅವರು ಹೇಳುವಂತೆ, 'ಅರವಿಂದರ ಕಾರ್ಯದಲ್ಲಿ ವ್ಯವಸ್ಥೆಯನ್ನು ಸ್ವಲ್ಪ ಸೀಳುವ ಕೆಲಸ ಮಾಡಬೇಕಿತ್ತು. ಹೇಗೆ ಸೀಳಬೇಕೆಂಬುದೇ ಅವರಿಗೆ ಸಮಸ್ಯೆಯಾಗಿದೆ. ಹೀಗಾಗಿ ಕಥೆಯಲ್ಲಿ ಉಸಿರುಗಟ್ಟುವ ವಾತಾವರಣ ಸೃಷ್ಟಿಸುವಲ್ಲಿ ಯಶಸ್ವಿಯಾದಂತೆ ಹೊಸಗಾಳಿ ತುಂಬುವಲ್ಲಿ ಯಶಸ್ವಿಯಾಗಿಲ್ಲ'[೩೦] ಎಂಬುದು ವಿಚಾರಾರ್ಹ ಅಂಶವಾದರೂ ಇದು ಒಪ್ಪುವ ಮಾತಲ್ಲ. ವ್ಯವಸ್ಥೆಯನ್ನು ಸೀಳುವ ಆ ಮೂಲಕ ಜಾಗೃತಿಗೊಳಿಸಿ ಕ್ರಾಂತಿ ಮಾಡುವ ಕಾರ್ಯ ಸಾಹಿತಿಯದಲ್ಲ. ಅದೇನಿದ್ದರೂ ಸಮಾಜ ಸುಧಾರಕರ ಕಾರ್ಯವಾಗಿದೆ. ವಾಸ್ತವತೆಯ ನಿರ್ಲಿಪ್ತ ನಿರೂಪಣೆ ಮಾತ್ರ ಸಾಹಿತ್ಯ ಸೃಷ್ಟಿಕರ್ತನದಾಗಿದೆ ಎಂಬುದು ಅಧ್ಯಯನದ ನಿಲುವಾಗಿದೆ. ಅರವಿಂದ ಮಾಲಗತ್ತಿ ಅವರ ಕಾರ್ಯ ದಲಿತ ಪ್ರಕಾರಕ್ಕೆ ಸೇರಿದ ಕೃತಿಯೆಂಬ ಸೀಮಿತ ಹಣೆಪಟ್ಟಿಯನ್ನು ಕನ್ನಡದ ಬಹುತೇಕ ವಿಮರ್ಶಕರು ಕೊಟ್ಟಿರುವುದು ಸಹ ವಿಷಾದನೀಯ. ಇದೂ ಸಹ ಒಪ್ಪುವ ವಿಚಾರವಲ್ಲ. ಕಾರ್ಯ, ಉತ್ತರ ಕರ್ನಾಟಕದ ಎಲ್ಲ ಹಿಂದುಳಿದ ಜನಾಂಗಗಳಲ್ಲಿ ಪ್ರಚಲಿತದಲ್ಲಿರುವ ಒಂದು ಆಚರಣೆಯಾಗಿದೆ. ಆದರೆ ಪ್ರದೇಶದಿಂದ ಪ್ರದೇಶಕ್ಕೆ ಕೊಂಚ ಭಿನ್ನತೆಯನ್ನೂ ಗುರುತಿಸಿಕೊಂಡಿದೆ. ಅಲ್ಲದೆ ಬಿಳಿಮಲೆಯವರು ಹೇಳುವಂತೆ, 'ಕಾದಂಬರಿಯ ಒಳಗಿರುವ ವ್ಯಕ್ತಿಗಳು ವಿಕಲಾಂಗರು, ರೋಗಿಷ್ಠರು, ಅಸಹ್ಯರು ದಲಿತರಲ್ಲಿದ್ದಾರೆ.' ಇದು ನಿಜವಾದರೂ (ಸ್ವಾಟೆರಕ, ವರಗ ಇತ್ಯಾದಿ), ಇವರೆಲ್ಲರೂ ಎಲ್ಲ ಜನಾಂಗಗಳನ್ನೂ ಪ್ರತಿನಿಧಿಸುತ್ತಾರೆ (ಉದಾಹರಣೆಗೆ ಕುರುಬ, ನಾಯಕ, ಕುಂಬಾರ, ಅಗಸ, ನಾಮಧಾರಿ, ಮೊಗೇರ ಇತ್ಯಾದಿ). ಕಾರ್ಯದ ದಲಿತ ವ್ಯಕ್ತಿಗಳ ವಿಕಲಾಂಗತೆ, ಅಶಕ್ತತೆ, ಪ್ರತಿಭಟಿಸಲಾರದ ಹೇಡಿತನ, ಅಸಹ್ಯ, ಅವನತಿ, ಅಪ್ರಬುದ್ಧತೆ ಇತ್ಯಾದಿ ಗುಣಗಳು ಇವರಲ್ಲಿಯೂ ಇವೆ. ಹೀಗಾಗಿ ಕೃತಿ ಒಂದು ಜನಾಂಗದ ಸಾರ್ವತ್ರಿಕ ಸಾಕ್ಷಿಯಾಗಿ ನಿಲ್ಲುವ ಬದಲಾಗಿ ಒಂದು ಇಡೀ ಶೋಷಿತ ಸಮುದಾಯದ ಒಟ್ಟು ಸಾರ್ವತ್ರಿಕ ಸಾಕ್ಷಿಯಾಗಿ ನಿಲ್ಲುತ್ತದೆ.

ಬಾಳಾಸಾಹೇಬ ಲೋಕಾಪುರ ಅವರ 'ಉಜಳ್ಯಾ ಮತ್ತು ಕೋಣ' ಪುಟ್ಟ ಕತೆಯಾದರೂ ದಲಿತ ಬಂಡಾಯ ಆಶಯಗಳನ್ನು ಒಡಲಲ್ಲಿ ತುಂಬಿಕೊಂಡ ಕತೆಯಾಗಿದೆ. ಕತೆಯಲ್ಲಿ ಬರುವ ಉಜಳ್ಯಾನ ಪರಿಸ್ಥಿತಿ ನಮಗೆ ದೇವನೂರ ಮಹಾದೇವ ಅವರ ಸಾಕವ್ವನ ನೆನಪನ್ನು ತರುತ್ತದೆ. ಆಕೆ ಕಳೆದುಹೋದ ಹುಂಜವನ್ನು ಹುಡುಕುತ್ತಾ ಹೋಗಿ ಇರುವ ಇನ್ನೊಂದು ಹುಂಜವನ್ನು ಕಳೆದುಕೊಳ್ಳುತ್ತಾಳೆ. ಉಜಳ್ಯಾನ ಮುಗ್ಧ ಪ್ರೀತಿ ತಾನು ಪ್ರೀತಿಪಟ್ಟು ಸಾಕಿದ ಕೋಣನ ಮಾಂಸವನ್ನು ತಾನೇ ತಿನ್ನುವ ಹೃದಯವಿದ್ರಾವಕ ಸ್ಥಿತಿಗೆ ನೂಕುತ್ತದೆ. ಇಲ್ಲಿ ಉಜಳ್ಯಾ ಶೋಷಣೆಗೆ ಒಳಗಾಗುವುದು ತನ್ನ ಕೇರಿಯ, ಸ್ವಜಾತಿಯವರಿಂದಲೇ

ಎಂಬುದು ಗಮನಾರ್ಹ ಸಂಗತಿಯಾಗಿದೆ! 'ಉಜುಳ್ಯಾ ಲಬೋಲಬೋ ಹೊಯ್ಕೊಂಡ. ದುರ್ಗವ್ವ ನೀ ದೇವರ ಅಲ್ಲ ಅಂದ. ಕಲ್ಲ ಅದಿಯವ್ವಾ ಅಂದ. ಎದಿಎದಿ ಬಡ್ಕೊಂಡ. ಕ್ವಾಣಾ ಕಟ್ಟು ಗೂಟದ ಹತ್ಯಾಕ ಬಂದ ಬಳಾಬಳಾ ಕಾರ್ಕೊಂಡ'[೫೧] ಮುಗ್ಧತೆಯು ತನ್ನವ(ಶೋಷಿತ)ರಿಂದಲೇ ಶೋಷಣೆಗೊಳಗಾದ ನೆಲೆಯನ್ನು ಇಲ್ಲಿ ಗುರುತಿಸುತ್ತೇವೆ.

ರಾಮಕೃಷ್ಣ ಗುಂದಿ ಅವರ 'ಹಸಿವು' ಕತೆಯ ಮಾನ್ಯಾ ಹಸಿದವರಿಂದಲೇ, ಹಸಿದವರಿಗಾಗಿಯೇ ಹುಟ್ಟಿದವನು. ಹಿಡಿ ಅನ್ನಕ್ಕಾಗಿ ಕನಸು ಕಾಣಲು ಪ್ರಯತ್ನಿಸುವುದು, ರೋಗ ಹಿಡಿದು ಮಲಗಿದ ಅವ್ವ ತಾಯವ್ವನ ಚೂರು ಮುದ್ದೆಯೂಟದ ಕನಸನ್ನು ಪೂರೈಸುವುದು ಅವನ ಗುರಿಗಳಾಗಿವೆ. ಅವನ ಕನಸಿನಲ್ಲಿ ಬಂಗಾರದ ಪೀಠದ ಮೇಲೆ ಹಾಟಟ್ಟುಕೊಂಡು ಬಿಳಿ ಅಕ್ಕಿ ಅನ್ನ, ಆಚೀಚೆ ನಿಂತ ಉಣ್ಣಲಾರದ ಹಸಿದವರು, ಇವೆಲ್ಲಾ ಕರುಳು ಸತ್ತ ಈ ಸಮಾಜದ ಕ್ರೌರ್ಯಗಳನ್ನು ಬಿಂಬಿಸುತ್ತವೆ. ಹೊಟ್ಟೆಯ ಹಸಿವಿಗಾಗಿ ಗೌಡರ ತ್ವಾಟದ ಕಾಯಿ ಕದಿಯುವ ತಮ್ಮ್ಯಾ, ದೇಹದ ಹಸಿವಿಗಾಗಿ ಕಾನಮೂಲೆ ಗುಡ್ಡ ಹತ್ತಿ ಇಳಿಯುವ ಕುಂಬಾರ ಲಕ್ಕಿ, ಹಣದ ಹಸಿವಿಗಾಗಿ ಅರಳಿ ಕಟ್ಟೆಯಲ್ಲಿ ನಡೆಯುವ ಇಸ್ಪೀಟ ಆಟ ಇತ್ಯಾದಿಗಾಗಿ ಹಸಿವಿನ ಹಲವಾರು ಮುಖಗಳನ್ನು ಕತೆ ಅನಾವರಣಗೊಳಿಸುತ್ತದೆ. ಉತ್ತರ ಕನ್ನಡ ಜಿಲ್ಲೆಯ ಕರಾವಳಿ ತೀರದ ದಲಿತರ ಬದುಕಿನ ದಾರುಣ ಚಿತ್ರಣವನ್ನು ತಮ್ಮ ಕಥಾ ಸಂಕಲನಗಳ ಮೂಲಕ ಸಾಹಿತ್ಯ ಲೋಕಕ್ಕೆ ಪರಿಚಯಿಸಿದ ದಲಿತ ಬರಹಗಾರರಾದ ರಾಮಕೃಷ್ಣ ಗುಂದಿಯವರ ಕತೆಗಳು ದಲಿತ ಸಾಹಿತ್ಯದ ಧರವಸೆಗಳಾಗಿವೆ. 'ಇವರ ಕತೆಗಳು ಕೇವಲ ಕತೆಗಳಾಗಿರದೇ ದಲಿತರ ನೋವು-ಕಷ್ಟಗಳಿಗೆ ನುಡಿಗಳಾಗಿಸಿ, ಕಲೆಗಳಾಗಿಸುವಲ್ಲಿ ಅವರ ಎಚ್ಚರಿಕೆ ಕೆಲಸ ಮಾಡಿರುತ್ತದೆ'[೫೨] ಎಂಬ ಮಾತು ಗಮನೀಯವಾದದ್ದು.

ಮುಂಬಯಿ ಕರ್ನಾಟಕದ ದಲಿತ ಬಂಡಾಯ ಸಾಹಿತ್ಯದ ಒಟ್ಟು ಅಭಿವ್ಯಕ್ತಿ ಹೀಗೆ ಸಾಫಲ್ಯವೆಂದು ಹೇಳಬಹುದು. ತಮ್ಮ ಅವಮಾನಿತ ನೋವನ್ನು ಸಾಹಿತಿಗಳು ಕತೆ, ಕಾದಂಬರಿಗಳ ಮೂಲಕ ತೋಡಿಕೊಂಡಿದ್ದು ಅದು ಸಾಹಿತ್ಯ ಇತಿಹಾಸದಲ್ಲಿ ದಾಖಲಾಗಿದೆ. ದಲಿತೇತರ ಸಾಹಿತಿಗಳೂ ದಲಿತ ಸಾಹಿತ್ಯ ರಚಿಸಿದ್ದರೂ ಕೆಳವರ್ಗದವನೆ ಸಾಹಿತಿಯಾದಾಗ, ತನ್ನ ಅನುಭವವನ್ನು ಅಭಿವ್ಯಕ್ತಿಸಲು ತೊಡಗಿದಾಗ, ಆ ಬರಹಕ್ಕೆ ಒದಗುವ ನ್ಯಾಯವನ್ನು ಹಾಗೂ ಅವನೇ ಆವಿಷ್ಕಾರ ಮಾಡಿಕೊಳ್ಳುವ ಭಾಷೆಯಲ್ಲಿನ ಲಯದ ಗಟ್ಟಿತನವನ್ನು ಇಲ್ಲಿನ ಕಥನ ಸಾಹಿತ್ಯದಲ್ಲಿ ಗುರುತಿಸಬಹುದಾಗಿದೆ. ದಲಿತ ಬಂಡಾಯ ಸಾಹಿತ್ಯದಲ್ಲಿ ಕೇವಲ ಆಕ್ರೋಶವಿದೆ, ಕಲೆಗಾರಿಕೆ ಇಲ್ಲ ಎಂಬ ಅಭಿಪ್ರಾಯವನ್ನು ಈ ಕೃತಿಗಳು ಅಲ್ಲಗಳೆಯುವಂತೆ ರಚಿತವಾಗಿರುವುದನ್ನು ಕಾಣಬಹುದು. ಗ್ರಾಮಜೀವನದ ಅವಿಭಾಜ್ಯ ಅಂಗಗಳಾದ ದಲಿತರ ಬದುಕನ್ನು ಮತ್ತು ನಗರದ ಕೆಳಜಾತಿಗಳು ಎದುರಿಸುವ ರಾಜಕೀಯ ಹಾಗೂ ಸಾಮಾಜಿಕ ಸಮಸ್ಯೆಗಳನ್ನು ಈ ದಲಿತ ಬಂಡಾಯ ಕಥನಗಳು ಯಶಸ್ವಿಯಾಗಿ ಚಿತ್ರಿಸಿರುವುದನ್ನು ಕಾಣುತ್ತೇವೆ. ನಮ್ಮ ಸಂಸ್ಕೃತಿಯ ಸಂದರ್ಭದಲ್ಲಿ ಇಂತಹ ಸಾಹಿತ್ಯವು ಅವಕಾಶ ವಂಚಿತರ ಅಂತರಂಗದ ಅಭಿವ್ಯಕ್ತಿ, ಬಹಿರಂಗದ ಹೋರಾಟವನ್ನು ಜೊತೆಜೊತೆಯಾಗಿ ನಡೆಸಿದರೆ ಕೆಳವರ್ಗಗಳ ಧ್ವನಿಗೆ ದಾಖಲೆ ಬರೆಯುವ ಸಾಧ್ಯತೆಯಿದೆ.

### ೨. ಮಹಿಳಾ ಸಾಹಿತ್ಯ ಸಂವೇದನೆಗಳು

ಮಹಿಳೆ ಮತ್ತು ಕಥೆ ಇವುಗಳ ಸಂಬಂಧ ಪ್ರಾಚೀನವಾದುದು, ಕಥೆ ಹೇಳುವುದರಲ್ಲಿ ಮಹಿಳೆಯರದೇ ಪ್ರಧಾನ ಪಾತ್ರ, ಭಾರತೀಯ ಪರಂಪರೆಯಲ್ಲಿ ಮಹಿಳೆ ಶಕ್ತಿದೇವತೆಯ ಪ್ರತೀಕಳಾದರೂ, ಆಕೆ ಅಬಲೆಯಾಗಿ ಪರಿಗಣಿಸಲ್ಪಟ್ಟಿದ್ದಾಳೆ. ಭಾರತೀಯ ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ, ಮಹಿಳೆಯರ ಸಾಮಾಜಿಕ ಅಂತಸ್ತು, ಸ್ಥಾನಮಾನ, ನಡವಳಿಕೆಗಳ ಬಗ್ಗೆ ಕಟ್ಟು ಕಟ್ಟಳೆಗಳನ್ನು ರೂಪಿಸುವ ಹಂತದಲ್ಲಿ ಪುರುಷರೇ ಇದ್ದಾರೆ. ಹೀಗಾಗಿ ಮಹಿಳೆಯ ಪ್ರತಿಭಟನೆಯ ಕೇಂದ್ರ ನೆಲೆ ಪುರುಷ ಮತ್ತು ಅವನು ನಿರ್ಮಿಸಿದ ಧಾರ್ಮಿಕ/ಸಾಮಾಜಿಕ ನೀತಿಸಂಹಿತೆಗಳಾಗಿವೆ. ಎಚ್ಚೆತ್ತ ಮನೋಧರ್ಮದ ಫಲವಾಗಿ ಮಹಿಳೆಯರು ಸಾಮಾಜಿಕ ಪ್ರಜ್ಞೆಯನ್ನು ಪ್ರಕಟಿಸುವತ್ತ ಸಾಹಿತ್ಯ ನಿರ್ಮಾಣಕ್ಕೆ ತೊಡಗಿರುವುದು ಈ ಶತಮಾನದ ಲಕ್ಷಣವಾಗಿದೆ. ಇಪ್ಪತ್ತನೆಯ ಶತಮಾನದ ಮಹಿಳಾ ಕತೆಗಾರ್ತಿಯರ ವಸ್ತು, ಭಾಷೆ, ತಂತ್ರ, ಸಂವೇದನೆ, ಮನೋಧರ್ಮ, ಕಾಳಜಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಹಲವು ಘಟ್ಟಗಳಲ್ಲಿ ಇವರ ಸಂವೇದನೆಗಳನ್ನು ವಿಶ್ಲೇಷಣೆ ಮಾಡಬಹುದಾಗಿದೆ. ಯಾಕೆಂದರೆ ಮಹಿಳೆಯರ ಸಾಹಿತ್ಯ ಸಂವೇದನೆಗಳು ಪುರುಷರ ಸಂವೇದನೆಗಳಿಗಿಂತ ವಿಭಿನ್ನವಾಗಿದ್ದು, ಭಿನ್ನ ಸಾಂಸ್ಕೃತಿಕ ಸಾಧ್ಯತೆಗಳ ಹುಡುಕಾಟದಲ್ಲಿ ಸ್ಪಂದಿಸಿದವುಗಳಾಗಿವೆ.

ಕರ್ನಾಟಕ (ಕನ್ನಡ) ಅದರಲ್ಲೂ ಮುಂಬಯಿ ಕರ್ನಾಟಕದ ಸಂದರ್ಭದಲ್ಲಿ ಮಹಿಳಾ ಕಥನ ಸಾಹಿತ್ಯ ರಚನೆಯ ಕಾಲವನ್ನು ನಿಖರವಾಗಿ ನಿರ್ಧರಿಸುವುದು ಕಷ್ಟಸಾಧ್ಯವಾದ ಮಾತು. ಯಾವಾಗಿನಿಂದ ಈ ಪ್ರದೇಶದ ಮಹಿಳೆಯರು ಕಥನ ಸಾಹಿತ್ಯದ ರಚನೆಗೆ ಕೈಹಾಕಿದರು ಎಂಬ ಮಾಹಿತಿಯನ್ನು ಸಂಗ್ರಹಿಸುವುದು ಈ ಅಧ್ಯಯನದ ಉದ್ದೇಶವಲ್ಲ. ಈ ಪ್ರದೇಶದ ಆಧುನಿಕ ಸಾಹಿತ್ಯದ ಮೊದಲ ಬರಹಗಾರ್ತಿಯರಿಂದ ಇಂದಿನ ಜಾಗತೀಕರಣದ ಕಾಲಘಟ್ಟದವರೆಗೆ ಬಂದ ಕೆಲವು ಪ್ರಾತಿನಿಧಿಕ ಕೃತಿಗಳನ್ನು ಇಟ್ಟುಕೊಂಡು ಅವರ ಸಾಮಾಜಿಕ, ಸಾಂಸ್ಕೃತಿಕ ಗ್ರಹಿಕೆಗಳನ್ನು, ಸಾಹಿತ್ಯಿಕ ಸಂವೇದನೆಗಳನ್ನು ಗುರುತಿಸುವುದು ಮಾತ್ರ ಈ ಭಾಗದ ಉದ್ದೇಶವಾಗಿದೆ.

ಇಪ್ಪತ್ತನೆಯ ಶತಮಾನದ ಮೊದಲ ದಶಕದಲ್ಲಿ ಈ ಪ್ರದೇಶದ ಮಹಿಳೆಯರು ಉದಾರವಾದಿ ಸಂವೇದನೆಯುಳ್ಳ ಸಾಹಿತ್ಯ ರಚನೆಗೆ ಕೈ ಹಾಕಿದರೆಂಬುದು ಗಮನಾರ್ಹ ಸಂಗತಿಯಾಗಿದೆ. ಧಾರವಾಡದ ಶ್ರೀಮತಿ ಶಾಂತಾಬಾಯಿ ನೀಲಗಾರ ಅವರು ೧೯೦೮ರಲ್ಲಿ 'ಸದ್ಗುಣಿ ಕೃಷ್ಣಾಬಾಯಿ' ಎಂಬ ಕಾದಂಬರಿ ರಚನೆಯ ಮೂಲಕ ಆಧುನಿಕ ಕನ್ನಡ ಮಹಿಳಾ ಸಾಹಿತ್ಯದ ಮೊದಲ ಲೇಖಕಿಯೆಂಬ ಖ್ಯಾತಿಗೆ ಒಳಗಾಗಿದ್ದಾರೆ. ಕರ್ನಾಟಕ ವಿದ್ಯಾವರ್ಧಕ ಸಂಘವು ಮಹಿಳೆಯರಿಗಾಗಿ ಏರ್ಪಡಿಸಿದ್ದ ಕಾದಂಬರಿ ಸ್ಪರ್ಧೆಯಲ್ಲಿ ಮೊದಲ ಬಹುಮಾನ ಗಳಿಸಿದ ಈ ಕಾದಂಬರಿಯು, ವಿದ್ಯಾವಂತ ಮಹಿಳೆಯು ತನ್ನ ಕುಟುಂಬ ಮತ್ತು ಸುತ್ತಲಿನ ಪರಿಸರದ ಇತ್ಯಾತ್ಮಕ ಬೆಳವಣಿಗೆಗೆ ಕಾರಣಳಾಗಿರುವುದನ್ನು ಚಿತ್ರಿಸಿದೆ. ಅಂದಿನ ಶಿಕ್ಷಣ ಮತ್ತು ಆಗ ತಾನೇ ಪ್ರವೇಶ ಪಡೆಯುತ್ತಿರುವ ಆಧುನಿಕತೆಯ ಸೌಲಭ್ಯಗಳ ಬಗೆಗೆ ರಚನಾತ್ಮಕವಾಗಿಯೂ ಸ್ಪಂದಿಸಿದೆ. ಹೀಗೆ ಆಧುನಿಕತೆ ಮತ್ತು ಪರಿವರ್ತನೆಯ ಸ್ತ್ರೀ ಕೇಂದ್ರಿತ ಆಶಯಗಳೊಂದಿಗೆ ಪ್ರಾರಂಭವಾದ ಮಹಿಳಾ ಬರವಣಿಗೆ ಮುಂದಿನ ದಶಕಗಳಲ್ಲಿ ಸ್ತ್ರೀಪರ ಆಶಯಗಳನ್ನು ಕೇಂದ್ರವಾಗಿರಿಸಿಕೊಂಡು ರೂಪುಗೊಂಡಿದೆ ಎನ್ನಬಹುದು.

### ಅ. ಮಹಿಳೆ ಮತ್ತು ಕುಟುಂಬ : ಮೌನ ಸಂವೇದನೆಗಳು

ಇಪ್ಪತ್ತನೇ ಶತಮಾನದ ೩೦-೪೦ರ ದಶಕದಲ್ಲಿ, ಮುಂಬಯಿ ಕರ್ನಾಟಕದ ಶ್ಯಾಮಲಾದೇವಿ ಬೆಳಗಾಂವಕರ, ಸರಸ್ವತಿಬಾಯಿ ರಾಜವಾಡೆ (ದ. ಕ. ಕರಾವಳಿ), ಶಾಂತಾದೇವಿ ಮಾಳವಾಡ, ಮತ್ತು ಉತ್ತರ ಕನ್ನಡ ಜಿಲ್ಲೆ ಗೋಕರ್ಣದ ದೇವಾಂಗನಾ ಶಾಸ್ತ್ರಿ ಮೊದಲಾದವರನ್ನು ಮಹಿಳಾ ಕಥನ ಸಾಹಿತ್ಯದ ಮೊದಲ ಲೇಖಕಿಯರು ಎನ್ನಬಹುದು. ಶ್ಯಾಮಲಾದೇವಿ ಬೆಳಗಾಂವಕರ (ಹೂ ಬಿಸಿಲು, ಹೊಂಬಿಸಿಲು ಕಥಾ ಸಂಕಲನಗಳು) ಇವರು ಕೆಳವರ್ಗದಿಂದ ಬಂದ ಲೇಖಕಿಯಾದ್ದರಿಂದ ಅವರ ಬರವಣಿಗೆಯಲ್ಲಿ ಸಮಾಜದ ದುಸ್ಥಿತಿಗೆ ಕಾರಣವಾದ ವ್ಯವಸ್ಥೆಯ ಮೇಲೆ ಕೋಪ, ರೋಷಗಳು ಎದ್ದು ಕಾಣುತ್ತವೆ. ಅಂದಿನ ಸಾಮಾಜಿಕ ಸನ್ನಿವೇಶದಲ್ಲಿ ಇದು ವಿಭಿನ್ನ ಅಭಿವ್ಯಕ್ತಿಯೆನಿಸಿದೆ. ಅವರ ಕಥನ ಸಾಹಿತ್ಯದ ಪಾತ್ರಗಳು ದಿಟ್ಟ ಪಾತ್ರಗಳಾಗಿದ್ದು ಶೋಷಿತರನ್ನು ಪ್ರತಿನಿಧಿಸುವುದು ಅಂದಿನ ಮಹಿಳಾ ಸಾಹಿತ್ಯದಲ್ಲಿಯೇ ಅಪರೂಪ ಎನ್ನಬಹುದು. 'ಕಂತಿಯ ದೇಶಾಂತರ' ಕತೆಯಲ್ಲಿ ಕಂತಿ ಗಂಡನನ್ನು ಬಿಟ್ಟು ಸ್ವತಂತ್ರವಾಗಿ ಬಾಳಲು ಹೋಗುವ ಸನ್ನಿವೇಶವನ್ನೇ ನೋಡಬಹುದು. ಜೋಗತಿ ದ್ಯಾವಕ್ಕಳ ಬದುಕು ಗಂಡಿನಾಧಾರವಿಲ್ಲದೇ ಹೆಣ್ಣು ಬಾಳುವೆ ಮಾಡಲು ಸಾಧ್ಯ ಎಂಬ ಅಭಿಪ್ರಾಯವನ್ನು ಪ್ರತಿಪಾದಿಸಿದೆ. ನಾವು ಬಲವಿದ್ದರೆ ಜಗ ಬಲ ಎಂಬ ನಂಬಿಕೆಯನ್ನು ಗಟ್ಟಿಗೊಳಿಸಿದ ದ್ಯಾವಕ್ಕ ನಿಜಕ್ಕೂ ದಿಟ್ಟ ಪಾತ್ರವಾಗುವುದು ಅದ್ಭುತ ಸೃಷ್ಟಿಯೆನ್ನಿಸಿದೆ. ಮಹಿಳಾ ಸಂಘಟನೆಕಾರರಾಗಿ ಸಾರ್ವಜನಿಕ ಸಂಪರ್ಕದಲ್ಲಿದ್ದ ಶ್ಯಾಮಲಾರವರು ಹೆಣ್ಣಿನ ಶೋಷಣೆಯನ್ನು ವಸ್ತುವಾಗಿ ರಚಿಸಿದ 'ಕರುಳಿನ ಕತ್ತರಿ' ಕತೆ ನವೀನ ನಿರ್ವಹಣೆಯ ಸಾಂಪ್ರದಾಯಿಕ ತಂತ್ರ ಹೊಂದಿದ ಇನ್ನೊಂದು ಕತೆಯೆನ್ನಬಹುದು. ತಂದೆ ತಾಯಿಗಳ ರಕ್ಷಣೆಯಲ್ಲಿ ಬೆಳೆಯಬೇಕಾಗಿದ್ದ ಹೆಣ್ಣು ಚಂದ್ರಿ ಅವರಿಂದಲೇ ಅಮಾನುಷವಾದ ಶೋಷಣೆಗೆ ಒಳಗಾಗುವುದು ಇದರ ಕಥಾವಸ್ತುವಾಗಿದೆ. ತಾಯಿ ಅವಳನ್ನು ಬಲವಂತವಾಗಿ ವೇಶ್ಯಾವೃತ್ತಿಗೆ ತಳ್ಳಿದರೆ, ತಂದೆ ಅವಳು ಗಳಿಸಿದ ಹಣವನ್ನು ಕಿತ್ತುಕೊಂಡು ಕುಡಿದು ಅವಳ ಮೇಲೆ ದೈಹಿಕ ದೌರ್ಜನ್ಯವೆಸಗುತ್ತಾನೆ. ಚಂದ್ರಿ ಕೊನೆಗೆ ಬೀದಿಗೆ ಬಿದ್ದು ಭಿಕ್ಷುಕಿಯಾಗಿ, ಹುಚ್ಚಿಯಾಗುತ್ತಾಳೆ. ಹೀಗೆ ಮಹಿಳೆಯ ಶೋಷಣೆಯ ಮೂಲ ಅವಳ ಕುಟುಂಬದಲ್ಲಿಯೇ ಇದೆ ಎಂದು ಕತೆ ಬೆರಳಿಟ್ಟು ತೋರಿಸುತ್ತದೆ. 'ಹೇಣತೀ ಮ್ಯಾಲೆ ಜೀವಾ ಮಾಡಿದಾಂಗ ನನ್ನ ಮ್ಯಾಲೆ ಸಹ ಜೀವ ಕಳಕೋತಾರ'[೫೩] ಎಂಬ ಚಂದ್ರಿ ಮಾತು ಉಪಪತ್ನಿ/ಬಹುಪತ್ನಿತ್ವದ ಪುರುಷಪ್ರಧಾನ ವ್ಯವಸ್ಥೆಯನ್ನು ಮುಗ್ಧ, ಮೃದು ಭಾವನೆಯಿಂದ ಸ್ವೀಕರಿಸಿದ್ದಾಳೆ. ತನ್ನ ತವರಿನ ಕ್ರೌರ್ಯದ

ಅರಿವಿದ್ದೂ ಅದರ ವ್ಯಾಮೋಹಕ್ಕೆ ಬಲಿಯಾದ ಹೆಣ್ಣಾಗಿ ಚಂದ್ರಿ ಹೊಸ ಸಂದೇಶ(ಕಿವಿ ಮಾತನ್ನು)ವನ್ನು ಮಹಿಳಾ ಸಮುದಾಯಕ್ಕೆ ಹೇಳುವ ಪಾತ್ರವಾಗಿದೆ. ಲೇಖಕಿಯ ಪ್ರಾರಂಭದ ಕತೆಯಾದ್ದರಿಂದ ತಾಂತ್ರಿಕತೆಯ ದೋಷವನ್ನು ಪರಿಗಣಿಸದೇ ವಿಶ್ಲೇಷಿಸಿದಾಗ, ಅಂದಿನ ಮಹಿಳೆಯರ ಸಮಸ್ಯೆಗಳ ಅರಿವು ಮತ್ತು ಮಹಿಳಾಕೇಂದ್ರಿತ ಮಹಿಳಾಪರ ನಿಲುವನ್ನು ಕತೆಗಾರ್ತಿ ಹೊಂದಿರುವುದು ಕಂಡುಬರುತ್ತದೆ.

ಸರಸ್ವತಿಬಾಯಿ ರಾಜವಾಡೆಯವರ ಮನೆ ಮಾತು ಮರಾಠಿಯಾದರೂ ಕನ್ನಡದಲ್ಲಿ ಕಥನ ಸಾಹಿತ್ಯವನ್ನು ಕೃಷಿಮಾಡಿದ ಕೆಲವರಲ್ಲಿ ಒಬ್ಬರೆನಿಸಿದ್ದಾರೆ. ಗಿರಿಬಾಲೆ ಹೆಸರಿನಿಂದ ಕತೆ ರಚಿಸುತ್ತಿದ್ದ ಇವರ **'ಅವಳ ಉದ್ಧಾರ'** ಕತೆಯೂ ಸಹ ಕೌಟುಂಬಿಕ ಹಿನ್ನೆಲೆಯ ಸ್ತ್ರೀ ಶೋಷಣೆಯನ್ನು ಕುರಿತದ್ದಾಗಿದೆ. ವಿಧವೆಯಾದ ಕಥಾನಾಯಕಿಯನ್ನು ಅವಳ ಭಾವ ಅತ್ಯಾಚಾರಗೈದು ಅವಳು ಗರ್ಭಿಣಿಯಾದಾಗ ಮನೆಯಿಂದ ಹೊರಹಾಕುತ್ತಾನೆ. ಒಂದು ವಿಧವಾಶ್ರಮ ಸೇರಿದ ಅವಳ ಮೇಲೆ ಪುರುಷ ವರ್ಗ ಮುಗಿಬಿದ್ದು ದೈಹಿಕ ದೌರ್ಜನ್ಯ ನಡೆಸುತ್ತದೆ. ಮಹಿಳೆಯ ವ್ಯಾಪಾರ ಕೇಂದ್ರವಾಗಿದ್ದ ಆ ವಿಧವಾಶ್ರಮದ ವ್ಯವಸ್ಥಾಪಕ ಇವಳನ್ನು ವಿಧುರನೊಬ್ಬನಿಗೆ ಮಾರುತ್ತಾನೆ. ಕುಡುಕನಾದ ಇವನ ನಡತೆಯನ್ನು ಪ್ರತಿಭಟಿಸಿ ಮನೆಯಿಂದ ಹೊರ ಬಂದು ಒಬ್ಬ ದಲ್ಲಾಳಿಯ ಕೈಗೆ ಸಿಕ್ಕು ವೇಶ್ಯಾವೃತ್ತಿಗೆ ಇಳಿಯುತ್ತಾಳೆ. ಹೀಗೆ ಹಂತ ಹಂತವಾಗಿ ಪುರುಷರಿಂದ ದೌರ್ಜನ್ಯಕ್ಕೆ ಒಳಗಾದ ಹೆಣ್ಣು, ಒಂದು ಹಂತದಲ್ಲಿ ಕುಡುಕ ಗಂಡ 'ನೀನು ಗೊಡ್ಡು' ಎಂದು ಜರಿದಾಗ, 'ಸುಮ್ಮನೆ ಏಕೆ ಗೊಡ್ಡು ಗೊಡ್ಡು ಎನ್ನುತ್ತೀರಿ. ನಾನು ಗೊಡ್ಡು ಎಂಬುದಕ್ಕೆ ಸಿದ್ಧಾಂತವೇನು? ಹೊರನೋಟಕ್ಕೆ ಗಂಡ ಹೆಂಡಿರಂತಿದ್ದರೆ ನಮ್ಮದು ತಂದೆ ಮಕ್ಕಳಂತಹ ಸಂಬಂಧ! ನಾನು ಗೊಡ್ಡಲ್ಲ ನನ್ನ ಮಗು ಆಶ್ರಮದಲ್ಲಿ ಬೆಳೆಯುತ್ತಿದೆ. ಮುದ್ದಾದ ಮಗು'"[ii] ಎಂದು ಪ್ರತಿಭಟಿಸುವುದು ಕತೆಯ ಬಹುಮುಖ್ಯ ಘಟ್ಟವಾಗಿ ಕಾಣಿಸುತ್ತದೆ. ವಿಧವಾಶ್ರಮದಿಂದ ಆದುದು ಇದೇ ಏನು? ಅವಳ ಉದ್ಧಾರ!! ಎಂದು ಕತೆ ವ್ಯಂಗ್ಯ ಸಿಡಿಸಿ ಮುಕ್ತಾಯಗೊಳ್ಳುತ್ತದೆ. ಹೀಗೆ ಕಥೆ ಆ ಕಾಲದ ಸಾಮಾಜಿಕ, ಕೌಟುಂಬಿಕ ವ್ಯವಸ್ಥೆಯಲ್ಲಿ ಸ್ತ್ರೀಕೇಂದ್ರಿತ ಶೋಷಣೆಯ ಮೇಲೆ ಬೆಳಕು ಚೆಲ್ಲುತ್ತದೆ. ಹೆಣ್ಣಿನ ಸ್ವಾಭಿಮಾನ ಮತ್ತು ಬದುಕುವ ಛಲವನ್ನು ಈ ಕತೆಯಲ್ಲಿ ಗುರುತಿಸಬಹುದು.

ಮೊಗ್ಗೆಯ ಮಾಲೆ, ಕುಂಕುಮ ಬಲ ಎಂಬ ಎರಡು ಕತಾ ಸಂಕಲನಗಳನ್ನು ರಚಿಸಿದ ಶಾಂತಾದೇವಿ ಮಾಳವಾಡ ಅವರು ಸಹ ಮೊದಲಿನ ಕತೆಗಾರ್ತಿಯರ ಸಾಲಿನಲ್ಲಿ ನಿಲ್ಲುತ್ತಾರೆ. ಇವರ ಕಾಲದ ಇನ್ನೊಬ್ಬ ಲೇಖಕಿಯೆಂದರೆ ಕರಾವಳಿಯ ಉತ್ತರ ಕನ್ನಡ ಜಿಲ್ಲೆ ಗೋಕರ್ಣದ ದೇವಾಂಗನಾ ಶಾಸ್ತ್ರಿಯಾಗಿದ್ದಾರೆ. ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಸ್ಥಿತ್ಯಂತರಗಳು ವೇಗವಾಗಿ ಹೆಜ್ಜೆಯಿಡುತ್ತಿದ್ದ ಕಾಲದಲ್ಲಿ ಅಂದಿನ ಲೇಖಕಿಯರ ಬರಹಗಳ ಪ್ರಧಾನ ಆಶಯ ಮಹಿಳೆ ಮತ್ತು ಕುಟುಂಬಗಳಾಗಿದ್ದವು ಎಂಬುದು ಮಹತ್ವದ ಅಂಶವಾಗಿದೆ. ಇವರು ಬರೆದ ಎಂಟೂ ಕತೆಗಳು ಸ್ತ್ರೀಶೋಷಣೆಯ ವಿಭಿನ್ನ ರೂಪಗಳನ್ನು ಪರಿಚಯಿಸುತ್ತವೆ. ಪುರುಷಕೇಂದ್ರಿತ ಏಕಮುಖ ವ್ಯವಸ್ಥೆಯು ಸ್ತ್ರೀಯರ ಪಾಲಿಗೆ ಅಮಾನವೀಯವಾಗಿದ್ದು, ಕೇಶಮುಂಡನ, ಬಾಲ್ಯವಿವಾಹ, ವೈಧವ್ಯ, ಅತ್ಯಾಚಾರ ಮುಂತಾದ ವೈದಿಕ ಸಮಾಜದ ಸ್ತ್ರೀವಿರೋಧಿ ನೈತಿಕತೆಯ ಘೋರ ಯಾತನೆಗೆ ಈಡು ಮಾಡಿರುವುದನ್ನು ಹೇಳುತ್ತವೆ. ಇವರ 'ಹಾರೆಗೋಲು', ಗಂಡ-ಹೆಂಡತಿಯ ಸಂಬಂಧವನ್ನು ಅಧೀನ ಪ್ರಧಾನ ನೆಲೆಯಲ್ಲಿಯೇ ನಿರೂಪಿಸಿರುವ ವಿವಾಹ ವ್ಯವಸ್ಥೆಯನ್ನು ವಿಧಿನಿಯಮಗಳ ರೂಪದಲ್ಲಿಟ್ಟು, ಹೆಣ್ಣಿಗೆ ವೈಧವ್ಯವನ್ನು ಶಾಪವಾಗಿಸಿದ ಪರಿಯನ್ನು ಹೇಳುವ ಕತೆಯಾಗಿದೆ. ಶ್ರೀಮಂತ ಅವಧಾನಿ ಹತ್ತು ಖಂಡುಗದ ಆಸ್ತಿಯನ್ನು ಸಾವಿರಾರು ರೂಪಾಯಿಗಳ ಒಡವೆಗಳನ್ನು ಹೆಣ್ಣಿಗೆ ಕೊಡುವುದಾಗಿ ನಂಬಿಸಿ ಬಡ ಶಾಂಭಟ್ಟರ ಹಿರಿಯ ಮಗಳು ಭುವನೇಶ್ವರಿಯನ್ನು ನಾಲ್ಕನೆಯ ಮದುವೆಯಾಗುತ್ತಾನೆ ಮತ್ತು ತನ್ನ ಒಂಬತ್ತು ಮಕ್ಕಳಿಗೆ ಮಲತಾಯಿ ಆಗುವಂತೆ ಮಾಡುತ್ತಾನೆ. ಅವಳು ಮುದುಕನ ಹೆಂಡತಿಯೆಂಬ ನಿಂದೆ ಹೊತ್ತು ಅವಧಾನಿಗಳ ಸೇವೆ ಮಾಡುತ್ತಾಳೆ. ವಾತ ರೋಗದಿಂದ ಮರು ವರ್ಷ ಅವಧಾನಿಗಳು ಮರಣ ಹೊಂದಿದಾಗ, ಮಕ್ಕಳು ಭುವನೇಶ್ವರಿಗೆ ಆಸ್ತಿಯಲ್ಲಿ ಭಾಗ ಕೊಡದೆ ಹೊರಗೆ ಹಾಕುತ್ತಾರೆ. ನಂಬಿದವರೆಲ್ಲ ಕೈಬಿಟ್ಟಾಗ, ರಟ್ಟೆಯನ್ನು ನಂಬಿ ಬದುಕುವ ಮಾರ್ಗ ಕಂಡುಕೊಳ್ಳುತ್ತಾಳೆ. ಅವರಿವರ ಮನೆಯ ಭತ್ತ ಅವಲಕ್ಕಿ ಕುಟ್ಟುವ ವೃತ್ತಿ ಹಿಡಿದು, ಹಾರೆಗೋಲು ಅವಳ ಹೊಟ್ಟೆ ತುಂಬಿಸುವ ಸಂಗಾತಿಯಾಗುತ್ತದೆ. ಶೀಲ ರಕ್ಷಣೆಯ ಆಯುಧವೂ ಆಗುತ್ತದೆ.

ವರದಕ್ಷಿಣೆ ಸಮಸ್ಯೆ ಕುರಿತಂತೆ ಅಂದಿನ ಲೇಖಕಿಯರ ವಿಭಿನ್ನ ನೆಲೆಗಳ ಚಿಂತನೆಯನ್ನು ಕಥನ ಸಾಹಿತ್ಯದಲ್ಲಿ ಕಾಣಬಹುದು. ಕೊಡಗಿನ ಗೌರಮ್ಮ ಅವರ 'ಆಹುತಿ' ಕತೆಯಲ್ಲಿ ಮದುವೆಯ ಗಂಡು

(ಕಥಾನಾಯಕ) ವರದಕ್ಷಿಣೆಗಾಗಿ ಶಾಂತಿ ಎಂಬ ಹುಡುಗಿಯನ್ನು ನಿರಾಕರಿಸಿದಾಗ, ಬಡವರಾದ ಅವರು ಅವಳನ್ನು ಮುದುಕನಿಗೆ ಮದುವೆ ಮಾಡಿ ಕೊಡಲೆತ್ನಿಸುತ್ತಾರೆ. ಸಂದರ್ಭವನ್ನು ಎದುರಿಸಲಾರದ ಶಾಂತಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಶ್ಯಾಮಲಾದೇವಿ ಬೆಳಗಾಂವಕರ ಅವರ 'ಸವತಿಯರು' ಮತ್ತು 'ಮೂರುನೂರಾ ಅರವತ್ತೈದು' ಕತೆಗಳು ವರದಕ್ಷಿಣೆ ಕುರಿತಾಗಿದ್ದರೂ ಬೇರೆ ಆಯಾಮವನ್ನು ಪರಿಚಯಿಸುತ್ತವೆ. ದೇವಾಂಗನಾಶಾಸ್ತ್ರಿಯವರ 'ವರದಕ್ಷಿಣೆ' ಕತೆಯಲ್ಲಿ ಗಂಡಿನ ತಂದೆಯ ವರದಕ್ಷಿಣೆಯ ದಾಹಕ್ಕೆ ಮಗ ಮತ್ತು ಸೊಸೆಯಾಗಬೇಕಿದ್ದ ಹುಡುಗಿಯರು ಬಲಿಯಾದರೆ, ಶಾಂತಾದೇವಿ ಮಾಳವಾಡರ 'ಲೀಲೆಯ ಭಾಗ್ಯ' ಕತೆಯಲ್ಲಿ ಗಂಡಿನ ತಾಯಿ ಮತ್ತು ಸ್ನೇಹಿತರ ಸಹಾಯದಿಂದ ಕತೆ ಸುಖಾಂತ್ಯವಾಗುತ್ತದೆ. ಒಂದೇ ಸಮಸ್ಯೆಯನ್ನು ದು:ಖಾಂತ್ಯ ಮತ್ತು ಸುಖಾಂತ್ಯಗಳ ಮೂಲಕ ಚರ್ಚಿಸುತ್ತ, ಹಲವರು ಸಮಸ್ಯೆಗೆ ಪುರುಷರನ್ನು ಕಾರಣವಾಗಿಸಿದರೆ ಇನ್ನು ಕೆಲವರು ಮಹಿಳೆಯನ್ನು ಹೊಣೆಯಾಗಿಸಿದ್ದಾರೆ. ಒಟ್ಟಾರೆ ಇಂತಹ ಪ್ರಜ್ವಲ ಸಮಸ್ಯೆಗೆ ಅಜ್ಞಾನ, ಸಂಪ್ರದಾಯ ಮತ್ತು ಮೂಢನಂಬಿಕೆಗಳು ಕಾರಣ ಎಂಬ ಒಮ್ಮತಾಭಿಪ್ರಾಯಕ್ಕೆ ಬರುತ್ತಾರೆ. ಹೀಗೆ ಅಂದಿನ ಲೇಖಕಿಯರ ದೃಷ್ಟಿಕೋನಗಳು ವಿಭಿನ್ನವಾಗಿರುವುದು ಕಥನ ಸಾಹಿತ್ಯದ ವೈಶಿಷ್ಟ್ಯವಾಗಿದೆ.

'ಈ ರಚನೆಗಳ ಕೇಂದ್ರದಲ್ಲಿರುವ ಸ್ತ್ರೀಯರು ಪುರುಷನಿರ್ಮಿತ ವ್ಯವಸ್ಥೆಯ ವಿರುದ್ಧ ಬಂಡೇಳುವುದಿಲ್ಲವಾದರೂ ಅದನ್ನು ಸಮರ್ಥಿಸುವುದಿಲ್ಲ. ಬದುಕಿನೊಡನೆ ಅವರು ನಡೆಸಿದ ಹೋರಾಟದಲ್ಲಿ ಅವರು ಹಿಮ್ಮೆಟ್ಟುತ್ತಾರೆ. ಆದರೆ ಇಲ್ಲಿ ಒತ್ತು ಇರುವುದು ಅವರ ವಿವೇಕ, ವಾಸ್ತವ ಪ್ರಜ್ಞೆ, ಬದುಕುಳಿಯುವ ಸಾಹಸ ಹಾಗೂ ಹೃದಯವಂತಿಕೆಗಳ ಮೇಲೆ ಎನ್ನುವುದು ಮಹತ್ವದ್ದಾಗಿದೆ' ಎಂಬ ಜಿ.ಎಸ್. ಆಮೂರರ ಅಭಿಪ್ರಾಯ ಒಪ್ಪುವಂತಹುದಾಗಿದೆ. ಇಲ್ಲಿ ಮಹಿಳೆಯರ ಪ್ರತಿಭಟನೆಗೆ ಅಕ್ಷರ ರೂಪ ಮಾತ್ರವಿದೆ, ಅದು ವಾಕ್ಸಮರ ರೂಪ ಪಡೆದಿಲ್ಲ. ಇದಕ್ಕೆ ಅವರ ನಿರ್ಬಂಧಿತ ಶಿಕ್ಷಣ ವ್ಯವಸ್ಥೆಯೂ ಕಾರಣ ಎನ್ನಬಹುದು. ಅಲ್ಲದೆ ಇಲ್ಲಿನ ಬಹುತೇಕ ಲೇಖಕಿಯರು ಮೇಲ್ಜಾತಿ/ಮೇಲ್ವರ್ಗದಿಂದ ಬಂದವರು, ಪ್ರತಿಭಟನಾತ್ಮಕ ಸ್ವಭಾವ ಇವರಲ್ಲಿ ಕಡಿಮೆ. ಅದು ಹೆಚ್ಚಿರುವ ಕೆಳಜಾತಿ/ವರ್ಗದ ಮಹಿಳೆಯರು ಲೇಖನಿಯನ್ನು ಇನ್ನೂ ಹಿಡಿದಿರಲಿರಲ್ಲ ಎಂಬುದೂ ಒಂದು ಕಾರಣವೆನ್ನಬಹುದು. ಇದಕ್ಕೆ ಕೆಲವು ಅಪವಾದಗಳೂ ಉಂಟು. ದೇವಾಂಗನಾಶಾಸ್ತ್ರಿ, ಗೌರಮ್ಮನವರ ಹಲವು ಕತೆಗಳು ಪ್ರತಿಭಟನೆಯ ಸ್ಥಾಯಿಭಾವವನ್ನು ಮೈಗೂಡಿಸಿಕೊಂಡಿದ್ದುದು ಕಂಡುಬರುತ್ತದೆ. ಉದಾಹರಣೆಗೆ ದೇವಾಂಗನಾ ಅವರ ಹಾರೆಗೋಲು ಕತೆಯ ಭುವನೇಶ್ವರಿಯ ಈ ಮಾತನ್ನು ಕೇಳೋಣ. 'ನೋಡಿ! ನಾನು ಹ್ಯಾಗೆ ಜೀವನ ನಿರ್ವಾಹ ಮಾಡಬೇಕು? ಅವಧಾನಿಗಳು ಕಾಡಿರುಳಿನಲ್ಲಿ ಕುತ್ತಿಗೆ ಕೊಯ್ದಂತೆ ಮಾಡಿ ನಡೆದರು. ನನಗೀಗ ಆಧಾರವೆಂದರೆ ಇದೊಂದೇ ಹಾರೆಗೋಲು!'[೨೨] ತನಗಾದ ಅನ್ಯಾಯದ ವಿರುದ್ಧ ಎದ್ದ ಕ್ರೋಧಭಾವವನ್ನು ಇಲ್ಲಿ ಕಾಣಬಹುದು. ತನಗೆ ಇನ್ನು ಮುಂದೆ ಜೀವನ ನಿರ್ವಹಣೆಗೆ ಈ ಹಾರೆಗೋಲು ಗತಿ ಎಂಬ ವ್ಯಗ್ರತೆಯೊಂದಿಗೆ ಮುಂದೊಮ್ಮೆ ಹಾರೆಗೋಲು ಮಹಿಳೆಯ ಆಯುಧವಾದರೆ ಪುರುಷನ ಗತಿ ಎಂಬ ಪ್ರಶ್ನೆಯೂ ಈ ಮಾತಿನ ಮರ್ಮದಲ್ಲಿದೆ.

### ಬ. ಮಹಿಳೆ ಮತ್ತು ಸಮಾಜ : ಶಬ್ದ ಸಂವೇದನೆಗಳು

ರಾಜಕೀಯ ಪರಿವರ್ತನೆಯೊಂದಿಗೆ ಸಾಮಾಜಿಕ, ಶೈಕ್ಷಣಿಕ ಪರಿವರ್ತನೆಗಳಾಗಿ ಬಂದ ಕಾಲಘಟ್ಟದಲ್ಲಿ ಅಂದರೆ, ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಸರಸ್ವತಿದೇವಿ ಗೌಡರ, ಅನುಪಮಾ ನಿರಂಜನ, ಗೀತಾ ಕುಲಕರ್ಣಿ ಇವರು ಪ್ರಮುಖ ಕಥನ ಲೇಖಕಿಯರಾಗಿ ನಿಲ್ಲುತ್ತಾರೆ. ಇವರ ಕಥೆಗಳಲ್ಲಿ, ಸ್ತ್ರೀ ತನ್ನ ಅಸ್ಮಿತೆಯ ಅರಿವು–ಸಾಧನೆಗಳಲ್ಲಿ ಸಾಧಿಸಿದ ಪ್ರಗತಿಯ ಹಾಗೂ ಅವಳ ಕ್ರಿಯಾಶಕ್ತಿಯ ಆವಿಷ್ಕಾರಗಳ ನಿದರ್ಶನಗಳಿವೆ. ಅವಳ ಸಾಮಾಜಿಕ ಪರಿಸರದಲ್ಲಿ ನಡೆದ ಸ್ಥಿತ್ಯಂತರ–ಮುಖ್ಯವಾಗಿ ಶಿಕ್ಷಣದ ಪ್ರಸಾರ ಹಾಗೂ ಸಾಮಾಜಿಕ ಸಮಾನತೆಯ ಸ್ವೀಕಾರ–ಈ ಪರಿವರ್ತನೆಯ ಹಿಂದಿನ ಪ್ರೇರಣೆಗಳಾಗಿವೆ. 'ಸ್ವಾತಂತ್ರ್ಯಾನಂತರ ಅವಳ ಜೀವನ ದುರಂತಗಳಿಂದ ಮುಕ್ತವಾಗಿಲ್ಲವೆಂದು ಅದು ಕಡಿಮೆಯಾಗಿದ್ದರೂ ಜೀವನದ ಹಾದಿ ಸುಗಮವಾಗಿಲ್ಲವೆಂದು ಕತೆಗಾರ್ತಿ ಸರಸ್ವತಿದೇವಿ ಗೌಡರ ೧೯೭೨ರಲ್ಲಿ ಹೇಳುತ್ತಾರೆ.'[೨೩] ಈ ಕಾಲದಲ್ಲಿ ಸ್ತ್ರೀಯರ ಅಂತರಂಗದಲ್ಲಿ ಆದ ಮಹತ್ತರ ಬದಲಾವಣೆಗಳು ಹಾಗೂ ಅವಳು ತನ್ನ ವ್ಯಕ್ತಿತ್ವ ವಿಕಾಸಕ್ಕೆ ಕೊಡುವ ಮಹತ್ವವನ್ನು ಈ ಕಾಲದ ಕತೆಗಳು ಹೇಳುತ್ತವೆ. ಅವಳ ಪ್ರತಿಭಟನೆ ಮೊದಲಿನ ಕತೆಗಾರ್ತಿಯರಲ್ಲಿ ಮೌನವಾಗಿದ್ದರೆ ಈ ಕಾಲದ ಕತೆಗಳಲ್ಲಿ ಅದು ಮಾತು, ಶಬ್ದಗಳಲ್ಲಿ ಒಂದು ಆಕಾರ ಪಡೆದಿದೆ.

ಸರಸ್ವತಿದೇವಿ ಗೌಡರ ಅವರ 'ಹಾಲು ಉಕ್ಕಿತು' ಕತೆಯು ಉತ್ತರ ಕರ್ನಾಟಕದ ದಟ್ಟ ಪ್ರಾದೇಶಿಕ ವಿವರಗಳಿಂದ ಕೂಡಿದೆ. ಈ ಕತೆಯ ಲಕ್ಷ್ಯವಿರುವುದು ಹೆಣ್ಣಿನ ಪ್ರತಿಭಟನೆ ಹಾಗೂ ಅದರ ಪರಿಣಾಮಗಳತ್ತ ಎಂಬುದು ಸ್ಪಷ್ಟ. ಬಾಲ್ಯದಲ್ಲಿಯೇ ಮದುವೆಯಾದ ಗೌರಮ್ಮನ ಸಂಸಾರ, ಗಂಡನ ಸ್ವೇಚ್ಛಾಚಾರದಿಂದ, ಅವಳ ಮುಗ್ಧತೆಯಿಂದ ಹದಗೆಡುತ್ತದೆ. ಗಂಡನ ಓದಿನಿಂದಾಗಿ ತನ್ನ ಯೌವನ ಕಾಲವನ್ನು ಕಳೆದುಕೊಂಡ ಗೌರವ್ಮ್ಮ, ಸರಕಾರಿ ನೌಕರಿ ಬಿಟ್ಟು ವ್ಯಾಪಾರ ಆರಂಭಿಸಿದ ಗಂಡನ ಶ್ರೀವಂತಿಕೆಗೆ ಹೊಂದಿಕೊಳ್ಳಲಾರದವಳಾಗಿದ್ದಾಳೆ. ಗಂಡನ ನಡತೆಯಿಂದ ಬೇಸತ್ತು ಗಂಡನ ಮನೆ, ಮಕ್ಕಳನ್ನು ತೊರೆದು ತವರು ಮನೆ ಸೇರಿದರೂ ಅಲ್ಲಿಯೂ ನೆಮ್ಮದಿ ಕಾಣದೆ ಪರಕೀಯತೆಯನ್ನು ಅನುಭವಿಸಿ, ಪ್ರತಿಭಟಿಸಿ ಹೊರಬರುತ್ತಾಳೆ. ನೆಲೆ ತಪ್ಪಿದ ಅವಳಿಗೆ ಕಮಲಮ್ಮನ ಆಶ್ರಯವೇನೋ ದೊರೆಯುತ್ತದೆ. ಆದರೆ ಹೊಟ್ಟೆ ಬಟ್ಟೆಗಳ ಚಿಂತೆ ತಪ್ಪಿದರೂ ಮನಸ್ಸಿನ ಅತೃಪ್ತಿ, ವ್ಯಗ್ರತೆ ಬಲಿಯುತ್ತಲೇ ಹೋಗುತ್ತವೆ. ಯಾರಾದರೂ ತಿಳಿದೋ ತಿಳಿಯದೆಯೋ ಅವಳನ್ನು ಅಳು ಎಂದು ಕರೆದಾಗ ಹಾಗೂ ತನ್ನ ಮಕ್ಕಳ ನೆನಪು ಮರುಕಳಿಸಿದಾಗ ಅವಳು ತನ್ನ ಸಮತೋಲನವನ್ನು ಕಳೆದುಕೊಳ್ಳುತ್ತಾಳೆ. ಗಂಡನಿಂದ, ಮಕ್ಕಳಿಂದ ದೂರವಾದ ಒಂದು ಹೆಣ್ಣಿನಲ್ಲಿಯ ವ್ಯಗ್ರತೆ, ವ್ಯಾಕುಲತೆ, ದುರ್ಬಲ ಮನಸ್ಸಿನ ದ್ವಂದ್ವ, ಗೊಂದಲಗಳನ್ನು ಗೌಡರು ಯಶಸ್ವಿಯಾಗಿ ಚಿತ್ರಿಸಿದ್ದಾರೆ. ಇಂತಹ ಒಂದು ಸಾಂಸ್ಕೃತಿಕ ಪರಿಸರ ನಿರ್ಮಾಣ ಮಹಿಳಾ ಕಥನ ಸಾಹಿತ್ಯದಲ್ಲಿ ಅಪರೂಪವೆನ್ನಬಹುದು.

ಒಟ್ಟಿನಲ್ಲಿ ಈ ಕಾಲದ ಮಹಿಳಾ ಕಥನ ಸಾಹಿತ್ಯದ ಪಾತ್ರಗಳು ಬದುಕಿನ ಹೊಸ ದಿಕ್ಕುಗಳನ್ನು ಅನ್ವೇಷಿಸಲು ಉದ್ಯುಕ್ತವಾಗಿವೆ. ಹೀಗೆ ಈ ಕಾಲಘಟ್ಟದಲ್ಲಿ ರಚಿತವಾದ ಮಹಿಳಾ ಕಥನ ಸಾಹಿತ್ಯ ಸಾಂಸ್ಕೃತಿಕ, ಕೌಟುಂಬಿಕ, ಆರ್ಥಿಕ ಮತ್ತು ಸಾಮಾಜಿಕ ವಲಯಗಳ ಕೆಲವು ಮುಖ್ಯ ವಿಚಾರ, ನಂಬಿಕೆಗಳನ್ನು ಪ್ರಶ್ನಿಸುವ, ವಿರೋಧಿಸುವ ಆಸಕ್ತಿ ತಾಳಿದ್ದು, ಮೌನಕ್ಕೆ ಮಾತಿನ ರೂಪ ಕೊಟ್ಟಿದ್ದನ್ನು ನಾವು ಗುರುತಿಸುತ್ತೇವೆ.

### ಕ. ಮಹಿಳೆ ಮತ್ತು ಸಾಂಘಿಕ ಸಂವೇದನೆಗಳು

ಮುಂಬಯಿ ಕರ್ನಾಟಕದ ಮಹಿಳಾ ಸಾಹಿತ್ಯ (ಕಥನ) ಯಾವುದೇ ಪಂಥ, ಮಾರ್ಗವನ್ನು ಅನುಸರಿಸಿ ಬೆಳೆದು ಬಂದಿಲ್ಲ. 'ಕನ್ನಡ ಸಾಹಿತ್ಯದಲ್ಲಿ ರೂಪು ತಳೆದ ನವೋದಯ, ನವ್ಯ, ನವ್ಯೋತ್ತರವಾದ ದಲಿತ-ಬಂಡಾಯ ಪಂಥಗಳು ಅಥವಾ ಪ್ರಗತಿಶೀಲ ಪಂಥ ಇತ್ಯಾದಿಗಳ ನೇರ ಪರಿಣಾಮ ಬಹುಪಾಲು ಲೇಖಕಿಯರ ಮೇಲೆ ಆಗಿಲ್ಲ'[೨೫] ಎಂದು ವೀಣಾ ಶಾಂತೇಶ್ವರ ನುಡಿಯುತ್ತಾರೆ. ಜನಪ್ರಿಯ ಕತೆಗಾರ್ತಿಯರಿಗೆ ಮನರಂಜನೆಯೇ ಮುಖ್ಯವಾದುದರಿಂದ ಅವರು ವೈಚಾರಿಕತೆಯ ಸೆಳವಿಗೆ ಸಿಗದೇ ಹೋದುದು ಆಶ್ಚರ್ಯವೆಂದು ತೋರುವುದಿಲ್ಲ. ಆದರೂ ಹಲವಾರು ಲೇಖಕಿಯರು ತಮ್ಮ ಕಾಲದ ವೈಚಾರಿಕತೆಯನ್ನು ಮೈಗೂಡಿಸಿಕೊಂಡು ಬರೆದದ್ದು ತಿಳಿಯುತ್ತದೆ. ೧೯೭೦ರ ದಶಕದ ನಂತರ ಬಂದ ವೈಚಾರಿಕತೆಯ ಸೆಳೆತದಲ್ಲಿ, ಮಹಿಳಾ ಕೇಂದ್ರಿತ ಸಮಸ್ಯೆಗಳ ಕುರಿತು ವೈಯಕ್ತಿಕವಾಗಿ/ಸಾಂಘಿಕವಾಗಿ ಸಂವೇದನೆಗಳನ್ನು ವ್ಯಕ್ತಪಡಿಸುತ್ತ ಕಥನ ಸಾಹಿತ್ಯ ರಚಿಸಿದ, ಮುಂಬಯಿ ಕರ್ನಾಟಕದ ಪ್ರಮುಖ ಮಹಿಳೆಯರೆಂದರೆ ಶಾಂತಾದೇವಿ ಕಣವಿ, ವೀಣಾ ಶಾಂತೇಶ್ವರ, ಮಿತ್ರಾ ವೆಂಕಟರಾಜ, ಮಣಿಮಾಲಿನಿ, ಶಾರದಾ ಶೆಣೈ, ಮಾಲತಿ ಪಟ್ಟಣಶೆಟ್ಟಿ, ನೀಲಗಂಗಾ ಚರಂತಿಮಠ ಮೊದಲಾದವರಾಗಿದ್ದಾರೆ.

ಅಸ್ತಿತ್ವದ ಪ್ರಶ್ನೆ/ಸಮಸ್ಯೆಗಳನ್ನು ಮುಖ್ಯವಾಗಿಟ್ಟುಕೊಂಡು ನೈತಿಕತೆಯನ್ನು ನಿರಾಕರಿಸುತ್ತ ಕಥನ ಸಾಹಿತ್ಯ ರಚಿಸಿದ ವೀಣಾ ಎಲಬುರ್ಗಿ (ಶಾಂತೇಶ್ವರ) ಅವರ 'ಗಂಡಸರು' ಕಾದಂಬರಿ ಯಾಜಮಾನ್ಯ ಸಂಸ್ಕೃತಿಯಲ್ಲಿರುವ ಗಂಡಿನ ಸಾರಥ್ಯವನ್ನು ತಿರಸ್ಕರಿಸುತ್ತ, ಸ್ತ್ರೀಯು ಸ್ವಾತಂತ್ರ್ಯವನ್ನು ಅನುಭವಿಸುವುದರಲ್ಲಿ (ಇದು ಕೇವಲ ಅನುಭವಿಸುವುದರಲ್ಲಿ ಮಾತ್ರ ಸಾಧನೆಯಲ್ಲಿ ಪ್ರಕಟವಾಗಿಲ್ಲ) ಪುರುಷರ ಸಮಾನ ಹಕ್ಕನ್ನು ಹೊಂದಿದ್ದಾಳೆ ಎಂಬುದನ್ನು ಚಿತ್ರಿಸುತ್ತದೆ. ಗಂಡಸರನ್ನು ಪ್ರೀತಿಸುವುದು, ಮುಟ್ಟಿಸಿಕೊಳ್ಳುವುದು ಪಾಪ, ಸೋಂಕು ಎಂಬ ಮುಗ್ಧತೆಯೊಂದಿಗೆ ಬೆಳೆದ ಹೆಣ್ಣೊಬ್ಬಳು, ಕೆಲವು ಗಂಡಸರು (ಶಂಕರ, ಪ್ರೊ. ಮಠದ, ರಮಾಕಾಂತ ಸಿಂಧೆ, ಜಾನ್ ಅಶೋಕ ಕುಮಾರ ಇತ್ಯಾದಿ) ಪ್ರೀತಿ ಅಂದರೆ ಹೆಣ್ಣನ್ನು ಅನುಭವಿಸಿ ಆಳುವುದು ಮಾತ್ರ ಎನ್ನುವ ಅಭಿಪ್ರಾಯ ಹೊಂದಿದ್ದಾರೆ ಎಂಬ ಕಾರಣಕ್ಕೆ ಗಂಡಸರೆಲ್ಲ ಶೋಷಕರೆಂಬ ನಿಲುವು ತಾಳುವುದು ಕಾದಂಬರಿಯ ಆಶಯವಾಗಿದೆ. 'ನಮ್ಮ ಸಮಾಜವೇ ಹೀಗೆ, ಗಂಡಸರು ಏನು ಮಾಡಿದರೂ ತಪ್ಪಲ್ಲ. ಹೆಂಗಸಿಗೇ ಎಲ್ಲ ರೂಲ್ಸು, ಕಟ್ಟು, ಮಣ್ಣು. ನಮ್ಮ ಹಿಂದೂ ಹೆಂಗಸರು ಈ

ಅನ್ಯಾಯ ಅತ್ಯಾಚಾರಗಳನ್ನು ಇನ್ನು ಸಹಿಸಬಾರದು. ಅವರಿನ್ನೂ ಈ ಕಟ್ಟುಪಾಡುಗಳ ವಿರುದ್ಧ ಬಂಡೇಳಬೇಕು. ಸಂಪೂರ್ಣ ಸ್ವಾತಂತ್ರ್ಯಕ್ಕಾಗಿ ಹೋರಾಡಬೇಕು'[೫೮] ಎಂಬ ಸ್ತ್ರೀವಾದಿ ಅಭಿಪ್ರಾಯವು, ಅದೇ ಗಂಡಸಿನ ಆಸರೆಯಲ್ಲಿ ಸ್ವಾತಂತ್ರ್ಯದ ಹೆಸರಿನಲ್ಲಿ ಸ್ವೇಚ್ಛಾಚಾರವನ್ನು ಅನುಸರಿಸುವುದು ಕಾದಂಬರಿಯಲ್ಲಿ ಕಂಡುಬರುತ್ತದೆ. ಆದರೆ ಮಹಿಳೆಯ ಸಾಧನೆಯ ನೆಲೆಯಲ್ಲಿ ಚಿಂತಿಸಿದಾಗ ಅದಕ್ಕೆ ಸಂಬಂಧಿಸಿದ ತಾಂತ್ರಿಕ ಅಂಶಗಳು ಕೃತಿಯಲ್ಲಿ ಎಲ್ಲೂ ಕಾಣುವುದಿಲ್ಲ. ಅಂದಿನ ಕಾಲಘಟ್ಟದಲ್ಲಿ (೧೯೭೫) ಇಂತಹ ಬರವಣಿಗೆ (ದಿಟ್ಟ ಬರವಣಿಗೆ ಎಂಬ ಹಣೆಪಟ್ಟಿ) ಅಪರೂಪವಾಗಿದ್ದು ಸಾಹಿತ್ಯದ ಗಮನ ಸೆಳೆದದ್ದು ಆಶ್ಚರ್ಯವಲ್ಲ! ಹೀಗೆ ಗಂಡಿನ ಹಿಡಿತವನ್ನು ನಿರಾಕರಿಸುತ್ತ ಸಾಗುವ ವೀಣಾರ ಪಾತ್ರಗಳ ಅಭಿಪ್ರಾಯಗಳು, ಇದರ ಮುಂದುವರೆದ ಕಾಲ(ಬಂಡಾಯ)ದ ಭಾಗವೇನೋ ಎಂಬ ಭ್ರಮೆ ಹುಟ್ಟಿಸುವ ಅವರ 'ಶೋಷಣೆ ಬಂಡಾಯ ಇತ್ಯಾದಿ' ಕಾದಂಬರಿಯಲ್ಲಿ ಸೋಲನ್ನಪ್ಪುವುದು ವಿಶೇಷವಾಗಿದೆ. ಈ ಕುರಿತು ವಿಮರ್ಶಿಸುತ್ತ, 'ತನ್ನ ಸುತ್ತಲ ಬಂಡಾಯ ಹಾಗೂ ಶೋಷಣೆಗೆ ಕೂಡ ತೀವ್ರವಾಗಿ ಸ್ಪಂದಿಸಲಾರದ ಈ ಬಂಡಾಯಗಾರ್ತಿ ಎಂತಹ ಬಂಡಾಯವನ್ನು ಪ್ರತಿನಿಧಿಸುತ್ತಾಳೆ?'[೫೯] ಎಂದು ವಿಜಯಾ ದಬ್ಬೆಯವರು ಪ್ರಶ್ನಿಸುತ್ತಾರೆ. 'ಹೆಣ್ಣಿನ ಮನಸ್ಸಿನ ಸೂಕ್ಷ್ಮ ವ್ಯಾಪಾರಗಳನ್ನು ಭಾಷೆಯಲ್ಲಿ ಹಿಡಿದಿಡುವ ಕಾದಂಬರಿ ಇದಾಗಿದ್ದು, ಮಹಿಳೆಗೆ ಪುರುಷ ಸಮಾನ ಸ್ವಾತಂತ್ರ್ಯ ಹಕ್ಕು ಬೇಕೆಂದು ಪ್ರತಿಪಾದಿಸುವ ಕೃತಿ. ಅದು ಅಸಂಭಾವ್ಯವೆಂದು ಮನವರಿಕೆಯಾದಾಗ, ನಾಯಕಿಯ ಮೂಲಕ ಮಹಿಳೆಗೆ ಪುರುಷರಿಗಿರುವ ಲೈಂಗಿಕ ಸ್ವಾತಂತ್ರ್ಯವಾದರೂ ಅಗತ್ಯವೆಂದು ವಾದಿಸುತ್ತ, ಪ್ರತಿಪಾದಿಸುತ್ತ ಮಹಿಳೆಯ ಹಕ್ಕಿನ ಹೋರಾಟದ ಕತೆಯನ್ನು ದಿಕ್ಕುತಪ್ಪಿಸುತ್ತದೆ' ಎಂದು ಅಧ್ಯಯನ ಅಭಿಪ್ರಾಯಿಸುತ್ತದೆ.

ಶಾಂತಾದೇವಿ ಕಣವಿಯವರ ಕತೆಗಳು ಸಂಸಾರ ಸಂಘರ್ಷಗಳ ಸುತ್ತ ಗಿರಕಿ ಹೊಡೆಯುತ್ತಿದ್ದರೂ, ಅಪರೂಪಕ್ಕೊಮ್ಮೆ ಸಾಮಾಜಿಕ ಸಮಸ್ಯೆಗಳನ್ನು ಚರ್ಚಿಸುತ್ತ ಗಮನ ಸೆಳೆಯುತ್ತವೆ. ಇದಕ್ಕೆ 'ಕಳಚಿ ಬಿದ್ದ ಪೈಜಣ' ಮತ್ತು 'ಗುಳದಾಳಿ' ಕತೆಗಳನ್ನು ಗಮನಿಸಬಹುದು. ಶಾಂತಾದೇವಿ ಕಣವಿ ಅವರ 'ಒಂದು ಮೂಗುತಿ ಕತೆ'ಯಲ್ಲಿ ಎರಡು ಕುಟುಂಬಗಳ ವಿಷಮ ದಾಂಪತ್ಯದ ಚಿತ್ರಣವಿದ್ದು, ಸುಶಿಕ್ಷಿತ ಮಹಿಳೆ (ಸುನಂದ) ತನ್ನರಿವಿಗೆ ಬಾರದಂತೆ ಗಂಡಸಿಂದ ಶೋಷಣೆಗೆ ಒಳಗಾದರೆ, ಶ್ರಮಿಕ ಮಹಿಳೆ (ಮಾನವ್ವ) ಬಹಿರಂಗವಾಗಿ ಶೋಷಣೆ ಎದುರಿಸುವ ವಿವರಣೆ ಇದೆ. ಮೂಗುತಿ ಎನ್ನುವುದು ಇಲ್ಲಿ ಕೇವಲ ಒಂದು ಆಭರಣವಲ್ಲ, ಅದು ಮಾನವ್ವಳ ದಾಂಪತ್ಯದ ಸೌಭಾಗ್ಯವೆನ್ನುವ ರೂಪಕ ಕತೆಯಲ್ಲಿ ವ್ಯಕ್ತವಾಗಿದೆ. ತನ್ನ ಸೌಭಾಗ್ಯವೆನಿಸಿದ ಗಂಡ ತನ್ನ ನಂತರ ತನ್ನ ಮಗಳಿಗೆ ಆಸರೆಯಾಗಬೇಕೆಂಬ ಅವಳ ಭಾವ, ಬಯಕೆ ಎಲ್ಲ ಭಾರತೀಯ ಸಂಸಾರಸ್ಥ ಮಹಿಳೆಯರದೂ ಹೌದು. 'ಆ ಬೋಸುಡಿ ಕಡಿಗೂ ನನ್ನ ಮೂಗ್ತಿ ಕೊಡಲೇ ಇಲ್ರಿ ಅವ್ವಾರ'[೬೦] ಎಂದು ಗಂಡನ ಇಟ್ಟುಕೊಂಡಾಕೆಯ (ಮಲ್ಲಿ) ಜೊತೆ ಜಗಳ ಮಾಡಿ ಬಂದ ಮಾನವ್ವ, ತನ್ನ ಗಂಡನಿಗೆ ಜನಿಸಿದ ಮಲ್ಲಿಯ ಮಗನನ್ನು ತನ್ನ ವಂಶದ ಕುಡಿಯೆಂದು ಹೇಳಿ ಸಾಕುತ್ತಾಳೆ. ಕುಟುಂಬಗಾಥೆಯಲ್ಲಿ ಗಂಡು ಹೆಣ್ಣಿನ ಸಂಬಂಧಗಳೊಂದಿಗೆ ಮಾನವೀಯ ಸ್ವಭಾವವನ್ನು ಚಿತ್ರಿಸುವ ಕಣವಿಯವರು ಸುನಂದ ಮತ್ತು ಮಾನವ್ವರ ಸಂಸಾರಗಳನ್ನು ಸಾಮಾಜಿಕವಾಗಿ ಚರ್ಚೆಗೆ ಒಡ್ಡುತ್ತಾರೆ. ಸಮಸ್ಯೆಯ ಮೂಲಕ ಸ್ತ್ರೀತ್ವದ ನೈಜನೆಲೆಯನ್ನು ಗುರುತಿಸುವುದು ಮತ್ತು ಹೆಣ್ಣಿನ ಅಂತರಂಗದ ತುಮುಲಗಳನ್ನು ಬಿಗಿಯುತ್ತಾ ಬದನಿಕೆಯಂತಹ ಅವಳ ಬಾಳಿನ ಗಾಢವಾದ ಪ್ರಜ್ಞೆಯನ್ನು ಕೆದಕುವುದು ಇವರ ಕಥೆಗಳಲ್ಲಿ ಅಮೂರ್ತ್ಯವಾಗಿ ಕಂಡುಬರುತ್ತದೆ. ಶಾಂತಾದೇವಿಯವರ ಬಹುತೇಕ ಕತೆಗಳ ಪರಿಣಾಮಗಳು ಪೂರ್ವೋದ್ದೇಶಿತ ಮುಕ್ತಾಯ ಪಡೆದು ಪರಿಣಾಮಕಾರಿಯಾಗದೆ ಉಳಿಯುವುದು ಇವರ ಕತೆಗಳ ವೈಫಲ್ಯವೆಂದು ಗುರುತಿಸಬಹುದು.

ಮಾಲತಿ ಪಟ್ಟಣಶೆಟ್ಟಿ ಅವರ 'ಮುಗಿಲ ಮಲ್ಲಿಗೆ' ಕತೆ ಮಹಿಳಾ ಸಬಲೀಕರಣದ ಆಶಯದಿಂದ ರಚಿಸಿದ ಕತೆಯಾಗಿದೆ. ಬಾಲ್ಯವಿವಾಹದ ಅಂಧ ಪರಂಪರೆ, ಪತಿಯ ಅನೈತಿಕ ಜೀವನ, ಅತ್ತೆ ಮಾವ ನೆಗಣ್ಣಿಯರ ಶೋಷಣೆಯಿಂದ ಬೇಸತ್ತ ಹೆಣ್ಣಾಗಿ ನಾಗಮ್ಮ ತನ್ನ ಸ್ವಂತ ಕಾಲ ಮೇಲೆ ನಿಲ್ಲಲು ತನ್ನ ಗ್ರಾಮ ನರೇಂದ್ರದ ಬಸ್ ನಿಲ್ದಾಣದ ಹತ್ತಿರ ಚಾ ಅಂಗಡಿ ತೆರೆಯುತ್ತಾಳೆ. ಇವಳ ವ್ಯಾಪಾರ, ಸನ್ನಡತೆಯಿಂದ ದ್ವೇಷಗೊಂಡ ಪುಂಡ ಪೋಕರಿಗಳು ಎರಡು ಬಾರಿ ಅಂಗಡಿಯ ವಸ್ತುಗಳನ್ನು ಕಳವು ಮಾಡುತ್ತಾರೆ, ಒಮ್ಮೆ ಸುಟ್ಟೂ ಹಾಕುತ್ತಾರೆ. ಎದೆಗುಂದದ ನಾಗಮ್ಮ ಗೌಡನ ಸಹಾಯದಿಂದ ಅದೇ ಸುಟ್ಟ ಜಾಗದಲ್ಲಿ ಹೊಸ ಅಂಗಡಿ ಹೂಡಿ ಸ್ವಉದ್ಯೋಗ ಮಾಡಿ ಗೆಲ್ಲುತ್ತಾಳೆ. ಗಂಡ ಎಂದರೆ ಭಯಾನಕ,

ಗಂಡನ ಮನೆ ಕಸಾಯಿಖಾನೆ ಎಂದು ತಿಳಿದಿದ್ದ ನಾಗಮ್ಮನ, 'ದನಗಳನ್ನು ನೋಡಿಯೇ ನಮ್ಮಪ್ಪ ನನ್ನ ಕೊಟ್ಟ ಆ ಮನಿಗೆ' 'ಬದುಕೇ ನೀನು ಕಡಿಯುತ್ತ ಹೋಗು, ನಾ ಚಿಗುರುತ್ತ ಹೋಗುವೆ'[೧೧] ಎಂಬ ಮಾತುಗಳು ಗ್ರಾಮೀಣ ಪರಿಸರದಲ್ಲಿ ಇಂದಿಗೂ ಮಹಿಳೆಯ ಸ್ಥಾನ ಪಶು, ಪ್ರಾಣಿಗಳಿಗೆ ಸಮಾನವಾಗಿದ್ದು, ವೃಕ್ಷಗಳನ್ನು ಕಡಿದಂತೆ ಪುರುಷ ಪ್ರಧಾನ ವ್ಯವಸ್ಥೆ ಮಹಿಳೆಯರ ಹಕ್ಕುಗಳನ್ನು ಕಿತ್ತುಕೊಂಡರೂ, ಚಿಗುರಿ ಬದುಕುವ ಛಲ ಮಹಿಳೆಗೆ ಇರಬೇಕು ಎಂಬುದನ್ನು ಹೇಳುತ್ತವೆ.

ಮಿತ್ರಾ ವೆಂಕಟರಾಜ ಅವರ 'ಒಂದು ಒಸಗೆ ಒಯ್ಯುವುದಿತ್ತು', ಮಾಲತಿ ಪಟ್ಟಣಶೆಟ್ಟಿ ಅವರ 'ನಾ ಯಾಕ ಹುಟ್ಟಿದೆನೋ', ಕಮಲಾ ಹೆಮ್ಮಿಗೆ ಅವರ 'ನಾನು ಅವನು ಮತ್ತು ಅವಳು' ಕಥೆಗಳಲ್ಲಿ ಕಾಣಿಸಿಕೊಳ್ಳುವ ಈ ಹೆಣ್ಣು ಗಂಡಿನ ನಡುವಿನ ಸಂಬಂಧಗಳು ವೈಶಿಷ್ಟ್ಯಪೂರ್ಣವಾಗಿವೆ. ವಿವಿಧ ನಿಟ್ಟಿನಿಂದ ಈ ಸಂಬಂಧಗಳ ಶೋಧನೆಗೆ ಈ ಕಥೆಗಾರ್ತಿಯರು ತೊಡಗುವುದನ್ನು ಕಾಣಬಹುದು. ಜೊತೆಗೆ ಕಳೆದ ಶತಮಾನದ ಅಂತ್ಯದ ವೇಳೆಗೆ ಇಂಗ್ಲೀಷ್ ಶಿಕ್ಷಣ, ವಿಧವಾ ವಿವಾಹ, ನೈತಿಕತೆಯ ಪ್ರಶ್ನೆ, ಸ್ತ್ರೀ ಸ್ವಾತಂತ್ರ್ಯ-ಸಮಾನತೆ ಇತ್ಯಾದಿ ದೇಶೀಯ ಪ್ರಶ್ನೆಗಳನ್ನು ಬದಿಗಿಟ್ಟು, ಮಹಿಳೆಯರ ಕಥನ ಸಾಹಿತ್ಯ ಸ್ತ್ರೀ ಸಂವೇದನೆ, ದಲಿತ ಸಮಸ್ಯೆ, ಪಟ್ಟಣ ಮತ್ತು ನಗರಗಳ ಸಂಘರ್ಷ, ಗ್ರಾಮೀಣ ಬದುಕು, ಪರಿಸರ ಹಾಗೂ ಜಾಗತೀಕರಣದ ಸಂಬಂಧ, ಸಮಾಜ ಮತ್ತು ವಿವಿಧ ಸಮಸ್ಯೆಗಳತ್ತ ಹೊರಳಿದ್ದನ್ನು ಕಾಣಬಹುದಾಗಿದೆ.

**ಡ. ಜಾಗತೀಕರಣ ಮತ್ತು ಮಹಿಳಾ ಸಾಹಿತ್ಯ ಸಂವೇದನೆಗಳು**

ಇತ್ತೀಚಿನ ದಿನಗಳಲ್ಲಿ ಮಹಿಳಾ ಬರಹಗಾರರ ವ್ಯಾಪ್ತಿ ವಿಸ್ತರಿಸಿಕೊಂಡಿದೆಯೆನ್ನಬಹುದು. ಭಾರತದ ಸಂದರ್ಭದಲ್ಲಿ ಲಿಂಗಾಧಾರಿತ ಶೋಷಣೆಗೊಳಗಾದ ಎಲ್ಲ ಜಾತಿ ವರ್ಗದ ಮಹಿಳೆಯರು ದಲಿತರಾಗಿದ್ದಾರೆ ಮತ್ತು ಮಹಿಳೆಯರ ಸಂವೇದನೆಗಳನ್ನು ಕುರಿತು ಸಾಹಿತ್ಯ ರಚಿಸಿದ ಮಹಿಳೆಯರು ದಲಿತ ಬರಹಗಾರರೆಂಬ ಅಭಿಪ್ರಾಯ ಹಲವರಿಂದ ಕೇಳಿಬರುತ್ತಿದೆ. ಇದೇನೆ ಇರಲಿ, ಮಹಿಳಾ ಲೇಖಕಿಯರ ಕಥಾ ವಸ್ತುವಿನ ಆಯ್ಕೆ ಮತ್ತು ಸಂವೇದನೆಗಳು ಮಹಿಳೆ, ಕುಟುಂಬ, ದಾಂಪತ್ಯಗಳಂತಹ ಸಂಸ್ಥೆಗಳನ್ನು ದಾಟಿ ಬರ, ನಿರುದ್ಯೋಗ, ನಗರೀಕರಣ, ಜಾಗತೀಕರಣ ಸೃಷ್ಟಿಸಿದ ಹಲವಾರು ಸಮಸ್ಯೆಗಳಂತಹ ವಸ್ತು ವಿಷಯಗಳನ್ನು ಒಳಗೊಂಡಿರುವುದು, ಮಹಿಳೆ ಜಾಗತೀಕರಣದ ಸಂದರ್ಭದಲ್ಲಿ ಹೊಸ ಸಾಹಿತ್ಯಿಕ ನೆಲೆಯತ್ತ (ಅಂತರ್ದೇಶೀಯ?) ದೃಷ್ಟಿ ಹರಿಸಿರುವುದರ ದ್ಯೋತಕವಾಗಿದೆ. ಇತ್ತೀಚಿನ ಮುಂಬಯಿ ಕರ್ನಾಟಕದ ಲೇಖಕಿಯರಾದ ತುಳಸಿ ವೇಣುಗೋಪಾಲ್ (ಹೊಂಚು), ಉಮಾರಾವ್ (ಬಹುಮುಖಿ), ಕಮಲಾ ಹೆಮ್ಮಿಗೆ, ಸುಧಾಮೂರ್ತಿ (ಅತಿರಿಕ್ತೆ), ಸುನಂದಾ ಕಡಮೆ ಇವರ ಕಥನಗಳಲ್ಲಿ ಇಂತಹ ವಸ್ತುಗಳ ಲಕ್ಷಣಗಳನ್ನು ಅರಸಬಹುದು.

ಕೆಳ, ಮಧ್ಯಮ ವರ್ಗದವರ ನಗರ ವಲಸೆ ಎಂಬ ಪ್ರಕ್ರಿಯೆ ಜಗತ್ತಿನ ಗಮನ ಸೆಳೆದ ಜಾಗತಿಕ ಸಮಸ್ಯೆಗಳಲ್ಲೊಂದಾಗಿದೆ. 'ವಿಶ್ವಬ್ಯಾಂಕ್ ಮತ್ತು ಭಾರತದ ರಾಷ್ಟ್ರೀಯ ಸ್ಯಾಂಪಲ್ ಸಮೀಕ್ಷಾ ವರದಿಯ ಪ್ರಕಾರ, ಇನ್ನು ಹತ್ತು ವರ್ಷಗಳಲ್ಲಿ ೪೦ ಕೋಟಿ ರೈತರು ಭೂಮಿಕಾಣಿ ಬಿಟ್ಟು ನಗರಗಳಿಗೆ ವಲಸೆ ಬರಲಿದ್ದಾರೆ. ಅಂದರೆ ಬ್ರಿಟನ್, ಫ್ರಾನ್ಸ್ ಮತ್ತು ಜರ್ಮನಿಯ ಒಟ್ಟೂ ಜನಸಂಖ್ಯೆಯ ಎರಡು ಪಟ್ಟು ಜನರು ನಿರಾಶ್ರಿತ ವರ್ಗಕ್ಕೆ ಸೇರಲಿದ್ದಾರೆ.'[೨] ಇಂತಹ ಒಂದು ಜಾಗತಿಕ ಜ್ವಲಂತ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲೇಬೇಕಾದ ಸಂದರ್ಭದಲ್ಲಿ, ಈ ವಲಸೆಯ ಮೂಲವನ್ನು ಶೋಧಿಸುವತ್ತ ಸಾಹಿತ್ಯಾಸಕ್ತರ ಗಮನ ಸೆಳೆಯುವ ಕತೆ ತುಳಸಿ ವೇಣುಗೋಪಾಲ ಅವರ 'ಹೊಂಚು'. ಗ್ರಾಮೀಣ ರೈತ ವರ್ಗವನ್ನು ನುಂಗಿ ಹಾಕುವ ಅನಾವೃಷ್ಟಿ, ಆಕರ್ಷಿಸುವ ನಗರೀಕರಣ ಎಂಬ ದೈತ್ಯನ ಸೆಳೆತ, ನಗರ ಸೇರಿದ ರೈತನ ಸರ್ವತೋಮುಖ ಶೋಷಣೆ, ನಗರದ ಕಬಂಧ ಬಾಹುಗಳಲ್ಲಿ ನರಳುವ ಮಧ್ಯಮ ವರ್ಗದ ಜನತೆ, ಹಸಿವು, ಜೈಲು, ಮಾನವೀಯ ಸಂಬಂಧಗಳನ್ನು ನುಂಗಿ ಹಾಕುವ ಆರ್ಥಿಕ ವ್ಯವಸ್ಥೆ ಕುರಿತು ನಿರ್ಲಿಪ್ತವಾದ ಚಿತ್ರಣ ಕೊಡುವ ಕತೆ ಮಹಿಳೆಯರ ಜಾಗತಿಕ ದೃಷ್ಟಿಕೋನವನ್ನು ಸೂಚಿಸುತ್ತದೆ. ಮಹಿಳಾ ಬರಹಗಾರರು ವಿಭಿನ್ನ ವಲಯದತ್ತ ತಮ್ಮ ಕಥಾವಸ್ತುಗಳನ್ನು ವಿಸ್ತರಿಸಿಕೊಂಡಿರುವುದು ಇದರಿಂದ ಸಾಬೀತಾಗುತ್ತದೆ. ಪುರಾತನವಾದ ತ್ಯಾಗಮಯಿ ಸ್ತ್ರೀಯ ಮಾದರಿಗೆ ವಿರುದ್ಧವಾದ, ಸ್ವಂತಿಕೆಯುಳ್ಳ, ಬೌದ್ಧಿಕ ಚಿಂತನೆಯ, ಸ್ವಸಾಮರ್ಥ್ಯದ ಸ್ತ್ರೀ ಇಂದಿನ ಲೇಖಕಿಯರ ಸಾಹಿತ್ಯದ ಆದರ್ಶವಾಗಿದ್ದಾಳೆ. ಈ ಬಗೆಯ ಪಾತ್ರಗಳನ್ನು ಕೇಂದ್ರವಾಗಿರಿಸಿ ಸುನಂದಾ ಬೆಳಗಾಂವಕರ ಅವರು 'ನಾಸೂ', 'ಝುವಾದಿ'ಯಂತಹ ವಿಶಿಷ್ಟ

ಕಾದಂಬರಿಗಳನ್ನು ಬರೆದಿದ್ದಾರೆ. ಆಧುನಿಕ ಶಿಕ್ಷಣ, ಸಾಮಾಜಿಕ ಬದಲಾವಣೆಗಳು, ಆರ್ಥಿಕ ಸ್ವಾತಂತ್ರ್ಯ, ವಿಜ್ಞಾನ, ತಂತ್ರಜ್ಞಾನ ರಾಜಕೀಯ ಹೀಗೆ ವಿವಿಧ ಕ್ಷೇತ್ರಗಳ ಹಿನ್ನೆಲೆಯಿಂದ ಇಂದು ಅಕ್ಷರ ಲೋಕದ ಸ್ತ್ರೀ ಅಭಿವ್ಯಕ್ತಿ ಹಲವು ಆಯಾಮಗಳನ್ನು ಪಡೆದುಕೊಂಡಿದೆ.

ಸುಧಾಮೂರ್ತಿ ಅವರ 'ಅತಿರಿಕ್ತೆ' ಕಾದಂಬರಿಯ ಶ್ರೀಮತಿಯ ಪಾತ್ರವನ್ನು ಈ ಸಂದರ್ಭದಲ್ಲಿ ಚರ್ಚಿಸಬಹುದಾಗಿದೆ. ಕಂಪ್ಯೂಟರ್ ಇಂಜನಿಯರ್ ಶ್ರೀಕಾಂತನ ಹೆಂಡತಿಯಾದ ಶ್ರೀಮತಿಗೆ ತನ್ನವೇ ಆದ ಅಭಿರುಚಿ ವ್ಯಕ್ತಿತ್ವಗಳಿವೆ. ಇತಿಹಾಸ, ಕಲೆಗಳಲ್ಲಿ ಗೌರವ ಆಸಕ್ತಿ ಹೊಂದಿದ ಇವಳಿಗೆ ಮನೆಯಲ್ಲಿ ಎರಡನೇ ಸ್ಥಾನವಿರುವುದು ಸ್ವಾಭಾವಿಕವಾಗಿ ಅತೃಪ್ತಿ ತರುತ್ತದೆ. ಯಾಂತ್ರೀಕೃತ ಮುಂಬಯಿ ಬದುಕಿನಿಂದ ದೂರ ಹೋಗಿ ನೆಮ್ಮದಿಯಿಂದ ಬಾಳಲು, ಕಂಪ್ಯೂಟರ್ ವೇಗದ ಬದುಕಿಗೆ ಹೊಂದಿಕೊಂಡಿದ್ದ ಗಂಡ ಶ್ರೀಕಾಂತ ಒಪ್ಪುವುದಿಲ್ಲ. ಕೊನೆಗೊಮ್ಮೆ ಶ್ರೀಮತಿ ಅಮೇರಿಕದ ಶಿಷ್ಯವೇತನವನ್ನು ಪಡೆದುಕೊಂಡು ಗೃಹಿಣಿ ಪದವಿಯಿಂದ ದೂರವಾಗಲು ನಿರ್ಧರಿಸುತ್ತಾಳೆ. ಹೀಗೆ ಲೇಖಕಿಯರು ಶ್ರೀಮತಿಯರಂತಹ ಪಾತ್ರಗಳ ನಿರ್ಮಾಣದೊಂದಿಗೆ, ಮಹಿಳೆಗೆ ಸಂಸಾರಕ್ಕಿಂತ ತನ್ನ ಅಭಿರುಚಿ, ವ್ಯಕ್ತಿತ್ವದ ಬೆಳವಣಿಗೆ ಮುಖ್ಯ ಎಂಬ ನಿರ್ಧಾರ ಪ್ರಕಟಿಸುತ್ತ, ಜಾಗತೀಕರಣದ ಸಂದರ್ಭದಲ್ಲಿ ಮಹಿಳೆಯರ ಸಾಹಿತ್ಯ ಸಂವೇದನೆಗಳು ಹೊಸ ಮೌಲ್ಯಗಳನ್ನು ಪಡೆಯುತ್ತಿರುವುದನ್ನು ದೃಢೀಕರಿಸುತ್ತಾರೆ.

ಒಟ್ಟಾರೆ ಮುಂಬಯಿ ಕರ್ನಾಟಕದ ಒಂದು ಶತಮಾನದ ಮಹಿಳೆಯರ ಕಥನ ಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆಯನ್ನು ದಟ್ಟವಾಗಿ ಪ್ರಕಟಿಸುವ ಮಹಿಳಾ ಪಾತ್ರಗಳಿವೆ, ಸಾಮಾಜಿಕ ಅನ್ಯಾಯದ ವಿರುದ್ಧ ಬಂಡೇಳುವ ಸ್ತ್ರೀ ಪಾತ್ರಗಳಿವೆ, ಪ್ರೇಮ, ಮದುವೆ, ಕುಟುಂಬ ಇವೇ ಕೇಂದ್ರವಾಗಿರುವ ಕತೆಗಳಿವೆ. ಹೆಣ್ಣು ಗಂಡ ಮಕ್ಕಳ ಜೊತೆಜೊತೆ ಸಂಬಂಧಗಳು, ಹೊಯ್ದಾಟಗಳು, ಭಾವನೆಗಳು ಹಾಗೂ ಎದುರಿಸಬೇಕಾದ ಸಮಸ್ಯೆಗಳಿವೆ. ಹೆಣ್ಣಿನ ಆತ್ಮ ವಿಶ್ಲೇಷಣೆಯ ಜೊತೆಗೆ ಸ್ವಂತ ಅಸ್ತಿತ್ವದ ಪ್ರಶ್ನೆಯ ಕಥೆಗಳೂ ಇಲ್ಲಿವೆ. ಆರ್ಥಿಕ ಸಮಾನತೆ ಹಾಗೂ ಲಿಂಗಬೇಧ ನೀತಿಯನ್ನು ಪ್ರಕಟಿಸುವ ಕಥೆಗಳಿವೆ. ದೈವದಲ್ಲಿ ನಂಬಿಕೆ ಇಟ್ಟ, ಪತಿಯೇ ದೈವ ಎಂದು ನಂಬಿದ, ಸಾಮಾಜಿಕ ಸಂದರ್ಭಗಳಲ್ಲಿ ಅಸಹಾಯಕತೆ ಪ್ರಕಟಿಸುವ ಪಾತ್ರ ನಿರ್ಮಾಣವನ್ನು ಮಾಡಿದ ಕಥನಗಳೂ ಇವೆ. ಜಾಗತಿಕ ವಲಯದ ಸಮಸ್ಯೆಗಳಿಗೆ ಸ್ಪಂದಿಸುತ್ತ ಸೃಷ್ಟಿಸಿದ ಕಥನಗಳೂ ಕಂಡುಬರುತ್ತವೆ.

### ೬. ಜಾಗತೀಕರಣ ಮತ್ತು ಕಥನ ಸಾಹಿತ್ಯ

ಉತ್ಪಾದನಾ ಕೇಂದ್ರವಾದ ಭೂಮಿ ಹಾಗೂ ಅದರ ಒಡೆತನ, ಹಂಚಿಕೆ ವ್ಯವಸ್ಥೆ ವರ್ಗತಾರತಮ್ಯವನ್ನು ಹುಟ್ಟುಹಾಕಿದರೆ, ಔದ್ಯೋಗೀಕರಣ (ಇದರ ಇನ್ನೆರಡು ಮುಖಗಳು ಕೈಗಾರಿಕೀಕರಣ ಮತ್ತು ನಗರೀಕರಣಗಳು) ವರ್ಗ ತಾರತಮ್ಯವನ್ನು ಇನ್ನಷ್ಟು ಕ್ರೂರವಾಗಿಸಿದೆ. ಸಾಮಾನ್ಯ ಜನರು ಮೊದಲ ಕಾಲಘಟ್ಟದ ಆರ್ಥಿಕ ಸಂರಚನೆಯ ಬಿಗಿ ಹಿಡಿತದಿಂದ ಬಿಡುಗಡೆಗೊಂಡಂತೆ ಕಂಡರೂ, ನಂತರ ನಗರೀಕರಣದ ಕರಾಳ ಮುಖ, ಬಂಡವಾಳಶಾಹಿಯ ಹಿಡಿತವನ್ನು ಅನುಭವಿಸುವಂತಾಗಿದೆ. ಕೈಗಾರಿಕೆಗಳ ಅಸ್ವಸ್ಥತೆ, ಸ್ಥಗಿತ, ನಿರುದ್ಯೋಗಗಳಂಥ ಆಘಾತಗಳಿಂದ ಚೇತರಿಸಿಕೊಳ್ಳುವಷ್ಟರಲ್ಲಿ ದೇಶ ಜಗತ್ತಿಗೆ ತನ್ನನ್ನು ಆರ್ಥಿಕವಾಗಿ ತೆರೆದುಕೊಂಡ ಜಾಗತೀಕರಣ, ಉದಾರೀಕರಣ ಮತ್ತು ಮುಕ್ತ ಮಾರುಕಟ್ಟೆಗಳಂತಹ ಬಹುರಾಷ್ಟ್ರೀಯ ಒಪ್ಪಂದದ ಪರಿಣಾಮಗಳನ್ನು ಎದುರಿಸುವಂತಾಗಿರುವುದು ಇನ್ನೊಂದು ಆತಂಕವಾಗಿದೆ. ಪ್ರಶ್ನೆ, ಅಂತಾರಾಷ್ಟ್ರೀಯ ಮಟ್ಟದಲ್ಲಿ ಸ್ಪರ್ಧೆ ಹಾಗೂ ಮುಖಾಮುಖಿಯಾಗಿದ್ದು ಪರಿಣಾಮ ರಾಷ್ಟ್ರಮಟ್ಟದಲ್ಲಿ ಹೊರಹೊಮ್ಮುವುದಾಗಿದೆ.

ಕಳೆದ ಒಂದು–ಒಂದೂವರೆ ದಶಕಗಳಿಂದ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಎದ್ದು ಕಾಣುವಂತಹ ಹಾಗೂ ಪ್ರಭಾವಿಯಾದ ಯಾವ ಚಳುವಳಿಗಳೂ ಕಂಡುಬರುತ್ತಿಲ್ಲ. ಆದರೆ ಕಳೆದೆರಡು ದಶಕಗಳ ಸಾಹಿತ್ಯವನ್ನು ಅವಲೋಕಿಸಿದಾಗ, ಖಚಿತವಾದ ಹೊಸ ದನಿಗಳು, ಹೊಸ ಅನುಭವ ಲೋಕಗಳು, ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿರುವುದು ಕಾಣಿಸುತ್ತದೆ. ಹೊಸ ಕಥನ ಸಾಹಿತ್ಯ ಈ ಕಾಲದಲ್ಲಿ ರಚಿಸಲ್ಪಟ್ಟಿದೆ. ಮುಂಬಯಿ ಕರ್ನಾಟಕದಲ್ಲಿ ರಾಘವೇಂದ್ರ ಪಾಟೀಲರ 'ತೇರು', ವಿವೇಕ ಶಾನುಭಾಗ ಅವರ 'ಒಂದು ಬದಿ ಕಡಲು', ಅಶೋಕ ಹೆಗಡೆ ಅವರ 'ಅಶ್ವಮೇಧ', ಚಂದ್ರಶೇಖರ ಕಂಬಾರ ಅವರ 'ಶಿಖರ ಸೂರ್ಯ'

ಇವೆಲ್ಲ ಹೊಸ ಬಗೆಯ ಕಥನಗಳಾಗಿವೆ. ಇತ್ತೀಚಿನ ಸಾಹಿತ್ಯದ ಮೇಲೆ ಜಾಗತೀಕರಣ ತನ್ನ ಪ್ರಭಾವ ಬೀರಿರುವುದು ಸ್ಪಷ್ಟವಿದೆ. ಈ ಸಮಾಜದ ಸಾಮಾನ್ಯ ಲಕ್ಷಣಗಳಾದ ಸಂಸ್ಕೃತಿ, ಸಾಹಿತ್ಯ, ಭಾಷೆ, ಆರ್ಥಿಕ ಚಿಂತನೆ, ಮಾಹಿತಿ-ತಂತ್ರಜ್ಞಾನ, ವ್ಯಾಪಾರ-ವಹಿವಾಟು, ಮಾರುಕಟ್ಟೆ, ಕೃಷಿ-ಕೈಗಾರಿಕೆಗಳು ತಮ್ಮ ಇರುವಿಕೆಯನ್ನು ಕಳೆದುಕೊಳ್ಳುವ ಭಯದೊಂದಿಗೆ, ಮುಂಬರುವ (ಹೊಸದನ್ನು ಸ್ವೀಕರಿಸುವ ಉತ್ಸಾಹದಲ್ಲಿ) ಪರಿಣಾಮಗಳ ಭ್ರಮಾತ್ಮಕ ಭೀತಿಯೂ ತುಂಬಿದೆ. ಜಾಗತೀಕರಣದ ಪ್ರಕ್ರಿಯೆಗಳಿಂದ ಹುಟ್ಟಿಕೊಂಡ 'ವಿಶ್ವಗ್ರಾಮ' (Global Village) ಎಂಬ ಪರಿಕಲ್ಪನೆ ಸಾಹಿತ್ಯ ಸಂವೇದನೆಗಳ ಮೇಲೆ ಪರಿಣಾಮ ಬೀರಿರುವುದು ಸತ್ಯವಾಗಿದೆ. ವಿದೇಶಿ ಕಂಪನಿಗಳ ಬಂಡವಾಳ ಹೂಡಿಕೆಯಿಂದ ಸಂರಚನೆಗೊಂಡ ಆರ್ಥಿಕ ವ್ಯವಸ್ಥೆಯ ಯಜಮಾನಿಕೆ ಮೊದಲಿದ್ದ ವ್ಯವಸ್ಥೆಗಳಿಗಿಂತ ವಿಭಿನ್ನವಾಗಿದ್ದು, ನಂತರದ ಪರಿಣಾಮಗಳೂ ಸಹ ವಿಭಿನ್ನವಾಗಿ ಗೋಚರಿಸುತ್ತವೆ. ೧೯೮೦ರಿಂದ ಈಚೆಗೆ ರಚನೆಗೊಂಡ ಕಥನಗಳಲ್ಲಿ ಕೈಗಾರಿಕೀಕರಣ, ನಗರೀಕರಣದ ಪ್ರಭಾವಗಳನ್ನು ಗುರುತಿಸುವಂತೆ, ಇತ್ತೀಚಿನ ಕತೆ, ಕಾದಂಬರಿಗಳಲ್ಲಿ ಜಾಗತೀಕರಣದ ಸ್ವಾಗತ ಸಂದರ್ಭದ ದುಗುಡ, ತಲ್ಲಣಗಳು, ನಂತರದ ಪರಿಣಾಮಗಳನ್ನು ಗುರುತಿಸಬಹುದು. ಆರ್ಥಿಕವಾಗಿ, ಮಾನಸಿಕವಾಗಿ ಅಸ್ತವ್ಯಸ್ತಗೊಂಡ ರೈತ, ಕಾರ್ಮಿಕರ ಬದುಕು, ಕೃಷಿ ನಷ್ಟಗೊಂಡಾಗ ಸಂಭವಿಸುವ ರೈತರ ಆತ್ಮಹತ್ಯೆಗಳು, ವಿಘಟನೆಯ ಹಾದಿಯನ್ನು ತುಳಿಯುತ್ತಿರುವ ಕೌಟುಂಬಿಕ, ಮಾನವೀಯ ಸಂಬಂಧಗಳು, ಕೊಳ್ಳುವ ಮಾರುವ ಅಗಾಧವಾದ ಆಸೆಗಳು, ಕೈಗೆಟುಕುವ ಸೌಲಭ್ಯಗಳು, ಮಾರುಕಟ್ಟೆ ವಂಚನೆಗಳು ಇಂತಹ ಕಥನಗಳಲ್ಲಿ ದಾಖಲಾಗಿವೆ. ಜಾಗತೀಕರಣದ ಪರಿಣಾಮಗಳು ಸಾಹಿತ್ಯ ಸಂವೇದನೆಗಳಲ್ಲಿ ವಿಭಿನ್ನತೆ ತಂದಿದ್ದು ನಿಜ. ಇಂತಹ ಸಂವೇದನೆಗಳನ್ನು ಎರಡು ದೃಷ್ಟಿಕೋನಗಳಿಂದ ಅಳೆಯಬಹುದು. ಅವುಗಳನ್ನು ಜಾಗತೀಕರಣದ ಸ್ವಾಗತದಲ್ಲಿ ಕಾಣಿಸಿಕೊಳ್ಳುವ ಆರ್ಥಿಕ, ಸಾಮಾಜಿಕ ಮತ್ತು ಮಾನಸಿಕ ಸಂವೇದನೆಗಳು ಹಾಗೂ ಜಾಗತೀಕರಣದ ಪರಿಣಾಮಗಳಿಂದ ಉಂಟಾದ ಸಂವೇದನೆಗಳೆಂದು ಗುರುತಿಸಿದರೆ ತಪ್ಪಾಗಲಾರದು. ಮುಂಬಯಿ ಕರ್ನಾಟಕದ ಇತ್ತೀಚಿನ ಲೇಖಕರ ಕಥನ ಸಾಹಿತ್ಯದಲ್ಲಿ ಈ ಸಂವೇದನೆಗಳ ಲಕ್ಷಣಗಳನ್ನು ಕಂಡುಕೊಳ್ಳಬಹುದಾಗಿದೆ.

ಭಾರತೀಯ ಸಂದರ್ಭದಲ್ಲಿ, ಜಾಗತೀಕರಣವು ಮಾನವನ ಬದುಕು ಸಂಬಂಧಗಳ ಮೇಲೆ ಬೀರುವ ಪರಿಣಾಮಗಳನ್ನು ವಿವೇಕ ಶಾನುಭಾಗ ಅವರ 'ಹುಲಿಸವಾರಿ' ಕತೆಯಲ್ಲಿ ಕಾಣಬಹುದು. ಇಂತಹ ಕತೆಗಳ ನಾಯಕರು ಗ್ರಾಮೀಣ ಪ್ರದೇಶಗಳಿಂದ ಬಂದವರು ಹಾಗೂ ತಪ್ಪರಾಗಿರುವುದು ವಿಶೇಷವಾಗಿದೆ. ಆರ್ಥಿಕ ವಿನಿಮಯ ಜಗತ್ತು ಜಾಗತೀಕರಣದ ಪ್ರಭಾವದಿಂದ ತಲ್ಲಣಗೊಂಡಿರುವಂತೆ, ಅದರ ಅಂಗಗಳಾದ (Inseperable Parts) ಪಾತ್ರಗಳು ಅನುಭವಿಸುವ ತುಮುಲಗಳು ಇಲ್ಲಿ ವ್ಯಕ್ತವಾಗಿವೆ. ಯಾಂತ್ರಿಕ ಬದುಕಿನ ವೇಗ-ಆವೇಗ, ಅಸಾಧ್ಯ ಕರ್ಷಣ, ನುಚ್ಚುನೂರಾದ ಮಾನವೀಯ ಸಂಬಂಧಗಳಿಂದ ಬಾಧಿತರಾಗಿ ಶಾಂತಿಗಾಗಿ, ನೆಮ್ಮದಿಗಾಗಿ ಹಾತೊರೆಯುವವರು, ಕೊನೆಗೆ ನಿರಾಸೆಗೆ ಒಳಗಾಗುವವರು ಇಲ್ಲಿ ಸಿಗುತ್ತಾರೆ. 'ಹುಲಿಸವಾರಿ' ಕತೆಯಲ್ಲಿ ಬಹುರಾಷ್ಟ್ರೀಯ ಕಂಪನಿಗಳು ಆರ್ಥಿಕ ಲಾಭವನ್ನೆ ಗುರಿಯಾಗಿಟ್ಟುಕೊಂಡು ನಡೆಸುವ ವ್ಯಾವಹಾರಿಕ ಮನೋಧರ್ಮದ ಅಭಿವ್ಯಕ್ತಿಯನ್ನು ಕಾಣುತ್ತೇವೆ. ಮುಂಬಯಿಯಲ್ಲಿ ನಡೆಸುವ ತರಬೇತಿ ಶಿಬಿರದಲ್ಲಿ ದಕ್ಷಿಣ ಆಫ್ರಿಕಾದ ಉಚೆ(ಸಹದ್ಯೋಗಿ)ಯೊಂದಿಗೆ ಭಾಗವಹಿಸಿದ ನಿರೂಪಕ (ಭಾರತೀಯ), ಇತರ ಕಂಪನಿಗಳ ಜೊತೆ ಕೊಳ್ಳುವ ಮಾರುವ ಸ್ಪರ್ಧೆಯಲ್ಲಿ ಅಭಿವೃದ್ಧಿ, ಗೆಲುವು, ಲಾಭ ಗಳಿಸುವ ಕುರಿತು ಮಾದರಿ ಆಟ(Practical Management game, Theroretically played)ವೊಂದರಲ್ಲಿ ಭಾಗವಹಿಸುತ್ತಾನೆ. ಆಯಾ ದೇಶಗಳ ಆರ್ಥಿಕ ನೀತಿ, ವ್ಯಾಪಾರ ನೀತಿ, ಮಾರಾಟ, ಉತ್ಪಾದನೆ, ಯೋಜನೆ ರೂಪಿಸುವುದು, ಬಿಕ್ಕಟ್ಟು ಶಮನ ಮಾಡುವುದು ಇತ್ಯಾದಿ ವಿಷಯಗಳ ಕುರಿತು ಚರ್ಚೆಗಳು ಬರುತ್ತವೆ. ಆದರೆ ಇದಕ್ಕೆ ಅನುಗುಣವಾಗಿ ನಡೆಯುವ ಕ್ರಿಯೆಗಳು ಎಂತಹವು? ಟೆಂಡರ್ ಗಿಟ್ಟಿಸಲು ಅಸೂಯೆಯ ಲೆಕ್ಕಾಚಾರ, ಇನ್ನೊಬ್ಬರ ತಂತ್ರದ ಊಹೆ, ಪ್ರತಿಯೇಟು ಹಾಕುವುದು, ಕೋಪ, ಕೃತಕ ನಗೆ, ಪಿಸುಮಾತಿನ ಚರ್ಚೆ, ಭಯಾನಕ ಸ್ಪರ್ಧೆ, ಗುಟ್ಟು ರಟ್ಟು ಮಾಡುವಿಕೆ ಹೀಗೆ ಒಟ್ಟಾರೆ ಪ್ರತಿಸ್ಪರ್ಧಿ ಮರ್ದನ ಕ್ರಿಯೆಗಳಾಗಿವೆ. 'ನಮ್ಮ ಒಳಗಿನ ಕಾಮದಂತಹ ಯಾವುದೋ ಪ್ರಕೃತಿಯನ್ನು ಹೊಡೆದೆಬ್ಬಿಸಿದ ಹಾಗಿತ್ತು. ಹಾಡು, ಕುಣಿತ, ಹರಟೆಗಳಿಲ್ಲ. ಸಮುದ್ರದ ಮೇಲೆ ವಾಕಿಂಗ್ ಇಲ್ಲ. ಕಟ್ಟಿ ಹಾಕಿ ಹಿಡಿದ ತಲ್ಲಣ'[೩] ಇವುಗಳ ಸಾರ್ಥಕ್ಯವೇನು ಎಂಬ ಪ್ರಶ್ನೆಯನ್ನಿಟ್ಟುಕೊಂಡು ಹುಡುಕಿದರೆ, ಎಲ್ಲೋ ಕುಳಿತು ತಿಂಗಳ ಸಂಬಳ ಕೊಡುವ ಅಪರಿಚಿತ ಮಾಲೀಕನನ್ನು ಶ್ರೀಮಂತಗೊಳಿಸುವುದಾಗಿದೆ. ಈ ಹುಲಿಸವಾರಿ ಮತ್ತೇನೂ ಅಲ್ಲದೆ ಆಧುನಿಕ ಜೀತವೆನ್ನಿಸಿಕೊಳ್ಳುತ್ತದೆ.

ಇವು ಜಾಗತೀಕರಣವನ್ನು ಸ್ವಾಗತಿಸುವ, ಸ್ವಾಗತಿಸುತ್ತಿರುವ ಸಾಮಾನ್ಯ ವರ್ಗದ ಜನರ ಬದುಕಿನ ಸ್ಥಿತಿಗತಿಗಳಾದರೆ, ಇನ್ನು ಜಾಗತೀಕರಣದ ಪ್ರಕ್ರಿಯೆಯ ಒಂದು ಅಂಗವೇ ಆದ ಬಹುರಾಷ್ಟ್ರೀಯ ಕಂಪನಿಗಳ ಉದ್ಯೋಗಿಗಳ ಪಾಡು ಇದಕ್ಕಿಂತ ಶೋಚನೀಯವಾಗಿದೆ. ವಸುಧೇಂದ್ರ ಅವರ 'ಕ್ಷಿತಿಜ ಹಿಡಿಯ ಹೊರಟವರು' ಕತೆಯ ಕ್ಷಿತಿ ಇದಕ್ಕೊಂದು ಉತ್ತಮ ಉದಾಹರಣೆಯಾಗಿದ್ದಾಳೆ. ತನ್ನ ಬುದ್ಧಿವಂತಿಕೆ, ದಕ್ಷತೆ, ಮತ್ತು ಪ್ರಾಮಾಣಿಕತೆಗಳಿಂದ ಉದ್ಯೋಗಗಳನ್ನು ಬದಲಾಯಿಸಿ ಲಕ್ಷಗಟ್ಟಲೆ ಸಂಬಳವನ್ನು ಎಣಿಸಿ ಕಂಪನಿಗಳಲ್ಲಿ ಹೆಸರಾದವಳು, ಮೂವತ್ತೈದಕ್ಕೇ ಮುಪ್ಪು ಬಂದಂತಾಗಿ ಶಕ್ತಿಹೀನಳಾಗುವುದು ಗುಲಾಮಿ ಪದ್ಧತಿಯ ಜೀತದಾಳುಗಳನ್ನು ನೆನಪಿಸುತ್ತದೆ. ಉತ್ತಮ ಈಜುಗಾರ್ತಿಯಾದ ಕ್ಷಿತಿಗೆ ನಿದ್ರಾಹೀನತೆ, ಮಧುಮೇಹ, ಮಲಬದ್ಧತೆ, ಶೀಘ್ರ ಆತಂಕದಂತಹ ಮಾನಸಿಕ ರೋಗಗಳು ಕಾಡಿ ಜೀವನವನ್ನು ಹಿಂಡಿ ಹಿಪ್ಪೆ ಮಾಡುತ್ತವೆ. ಬೆಳಗ್ಗೆ ಎಂಟರಿಂದ ರಾತ್ರಿ ಹತ್ತರವರೆಗಿನ ದುಡಿಮೆ, ಓಡಾಟದಲ್ಲಿನ ಟ್ರಾಫಿಕ್ ಜಾಮ್, ನಾಳೆಯ ಪ್ರಪೋಜಲ್ಲುಗಳನ್ನು ಸಿದ್ಧಪಡಿಸುವ ತರಾತುರಿಯ ಆತಂಕ ಅವಳ ಫಲವತ್ತತೆಯನ್ನು ಕಡಿಮೆ ಮಾಡುತ್ತವೆ. ಮಕ್ಕಳಿಲ್ಲದ, ಕೈತುಂಬ ಸಂಬಳದ ಜೀವನ ನೀರಸವಾಗುತ್ತದೆ. ಸಕಲ ವೈಭವಗಳಿದ್ದೂ ಸುಖ, ನೆಮ್ಮದಿಯಿಲ್ಲದ ಬದುಕು ಜಾಗತೀಕರಣದ ಪ್ರಭಾವವಾಗಿದೆ. 'ಯಾವಾಗಲೋ ಸ್ವಲ್ಪ ಜೋಂಪು ಹತ್ತಿದಾಗ, ಆಫೀಸಿನ ಪ್ರಾಜೆಕ್ಟಿನ ಶೆಡ್ಯೂಲ್‌ಗಳು ತಮ್ಮ ಡೆಡ್‌ಲೈನ್ ತಪ್ಪಿದಂತಹ ಭಯಾನಕ ಕನಸುಗಳು ಬಿದ್ದು ದಿಗ್ಗನೆ ಎಚ್ಚೆತ್ತುಕೊಳ್ಳುತ್ತಾಳೆ. ಮೈಥುನದಲ್ಲಿ ದೇಹವನ್ನು ದಣಿಸಿದರೆ ನಿದ್ದೆ ಆವರಿಸಿಕೊಂಡು ಬರಬಹುದೆಂದು ಮೈಥುನದ ಉತ್ತುಂಗದಲ್ಲಿದ್ದಾಗಲೂ, 'ಇವತ್ತು ನಿದ್ದೆ ಬರಲಪ್ಪಾ ದೇವರೆ' ಎಂಬ ಪ್ರಾರ್ಥನೆ ಮನಸ್ಸಿನ ಮೂಲೆಯಲ್ಲಿ ನಡೆದಿರುತ್ತದೆ'[೪] ಇಂತಹ ಮಾತುಗಳು ಅಧಿಕ ಸಂಬಳ, ಕಾರು, ಬಂಗಲೆ, ಈಜುಗೊಳ, ಬ್ಯಾಂಕ್ ಬ್ಯಾಲೆನ್ಸ್‌ಗಳು ಸುಖದ ಪ್ರತೀಕಗಳಾದ ನೆಮ್ಮದಿಯ ನಿದ್ರೆ, ಮೈಥುನ, ಭೋಜನಗಳನ್ನು ಭರಿಸುವುದಿಲ್ಲ ಎಂಬ ಸಾರ್ವಕಾಲಿಕ ಸತ್ಯವನ್ನು ಸಾರುತ್ತವೆ.

## ಕೊನೆಯ ಟಿಪ್ಪಣಿಗಳು

೧. ಚಂದ್ರಶೇಖರ ಪಾಟೀಲ (ಸಂ), ಸಂಕ್ರಮಣ, ಸಂಪುಟ-೪೨ ಸಂಚಿಕೆ-೨, ಮಾರ್ಚ್-ಏಪ್ರಿಲ್ ೨೦೦೭, ಪುಟ ೩೩
೨. ನಾಯಕ ಜಿ.ಎಚ್., ನಿಜದನಿ, ೧೯೮೮, ಅಕ್ಷರ ಪ್ರಕಾಶನ, ಸಾಗರ, ಪುಟ ೨೨೧
೩. ಅದೆ. ಪುಟ ೨೨೧
೪. ಶಿವರಾಮ ಪಡಿಕ್ಕಲ್, ನಾಡು-ನುಡಿಯ ರೂಪಕ, ೨೦೦೧, ಪ್ರಸಾರಾಂಗ, ಮಂಗಳೂರು.ವಿ.ವಿ., ಪುಟ ೧೭
೫. ವಿಜಯಶ್ರೀ ಕೆ. (ಡಾ), ಕನ್ನಡ ನವ್ಯ ಕಾದಂಬರಿಗಳು, ೨೦೦೨, ಶ್ರೀರಾಮಕೃಷ್ಣ ಪ್ರಕಾಶನ, ಬೆಂಗಳೂರು, ಪುಟ ೧
೬. ಆಮೂರ ಜಿ.ಎಸ್., ಕಥನಶಾಸ್ತ್ರ, , ೨೦೦೧, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರುಪುಟ ೧
೭. ನಾಯಕ ಜಿ.ಎಚ್., ಶತಮಾನದ ಕನ್ನಡ ಸಾಹಿತ್ಯ, ೨೦೦೦, ಶ್ರೀ ರಾಘವೇಂದ್ರ ಪ್ರಕಾಶನ, ಪುಟ ೨
೮. ಅದೇ. ಪುಟ ೨
೯. ಕೃಷ್ಣಮೂರ್ತಿ ಕಿತ್ತೂರ, ಗಳಗನಾಥರ ಕಾದಂಬರಿಗಳು, ೧೯೭೧, ಕರ್ನಾಟಕ ವಿಶ್ವವಿದ್ಯಾಲಯ, ಪುಟ ೩೯
೧೦. ಆಮೂರ ಜಿ.ಎಸ್., ಕನ್ನಡ ಕಥನ ಸಾಹಿತ್ಯ : ಕಾದಂಬರಿ, ೧೯೯೪, ಶ್ರೀಹರಿ ಪ್ರಕಾಶನ, ಧಾರವಾಡ, ಪುಟ ೩೯
೧೧. ಗಳಗನಾಥ, ಮಾಧವಕರುಣಾ ವಿಲಾಸ, ೧೯೬೪, ಗಳಗನಾಥ ಸುರಸ ಗ್ರಂಥಮಾಲೆ, ಪ್ರಸ್ತಾವನೆ
೧೨. ಆಮೂರ ಜಿ. ಎಸ್., ಕನ್ನಡ ಕಥನ ಸಾಹಿತ್ಯ ಕಾದಂಬರಿ, ೧೯೯೪, ಶ್ರೀಹರಿ ಪ್ರಕಾಶನ, ಧಾರವಾಡ, ಪುಟ ೪೧
೧೩. ಕೃಷ್ಣಮೂರ್ತಿ ಕಿತ್ತೂರ, ಗಳಗನಾಥರ ಕಾದಂಬರಿಗಳು, ೧೯೭೧, ಕರ್ನಾಟಕ ವಿಶ್ವವಿದ್ಯಾಲಯ, ಪುಟ ೪೬
೧೪. ಶಿವರಾಮ ಪಡಿಕ್ಕಲ್, ನಾಡು-ನುಡಿಯ ರೂಪಕ, ೨೦೦೧, ಪ್ರಸಾರಾಂಗ ಮಂಗಳೂರು .ವಿ.ವಿ., ಪುಟ ೯೨
೧೫. ಕೆರೂರ ವಾಸುದೇವಾಚಾರ್ಯ, ಇಂದಿರಾ, ೧೯೭೮, (೧೯೦೮) ಉಷಾ ಸಾಹಿತ್ಯ ಮಾಲೆ, ಮೈಸೂರು, ಪುಟ ೪೪, ೪೫
೧೬. ಆಮೂರ ಜಿ.ಎಸ್., ಕನ್ನಡ ಕಥನ ಸಾಹಿತ್ಯ : ಕಾದಂಬರಿ, ೧೯೯೪, ಶ್ರೀಹರಿ ಪ್ರಕಾಶನ, ಧಾರವಾಡ, ಪುಟ ೩೮
೧೭. ಕೆರೂರ ವಾಸುದೇವಾಚಾರ್ಯ, ಇಂದಿರಾ, ೧೯೭೮, ಉಷಾ ಸಾಹಿತ್ಯ ಮಾಲೆ (ವಿ.ಎಂ. ಇನಾಂದಾರ, ಮರು ಮುದ್ರಣದ ಮುನ್ನುಡಿಯಲ್ಲಿ)
೧೮. ಶಿವರಾಮ ಪಡಿಕ್ಕಲ್, ನಾಡು-ನುಡಿಯ ರೂಪಕ, ೨೦೦೧, ಪ್ರಸಾರಾಂಗ, ಮಂಗಳೂರು ವಿ. ವಿ., ಪುಟ ೯೯
೧೯. ಆಮೂರ ಜಿ. ಎಸ್., ಕನ್ನಡ ಕಥನ ಸಾಹಿತ್ಯ : ಸಣ್ಣ ಕತೆ, ೨೦೦೩, ಪ್ರಿಯದರ್ಶಿನಿ ಪ್ರಕಾಶನ, ಪುಟ ೩೦, ೩೧
೨೦. ಅದೇ. ಪುಟ ೩೫, ೩೬
೨೧. ಮಿರ್ಜಿ ಅಣ್ಣಾರಾಯ, ನಿಸರ್ಗ, ೧೯೪೫, ಮನೋಹರ ಗ್ರಂಥಮಾಲಾ, ಧಾರವಾಡ, ಮುನ್ನುಡಿ
೨೨. ಗುಂಜಾಳ ಎಸ್.ಆರ್. (ಸಂ), ಬೆಳಗಾವಿ ಬೆಳಕು, ೨೦೦೩, ಕ.ಸಾ.ಪ., ಪುಟ ೩೭೧
೨೩. ಸಂಪಾದಕರು, ಸುಧಾ, ಯುಗಾದಿ ವಿಶೇಷಾಂಕ, ೧೯೮೬, (ಆಮೂರ ಜಿ.ಎಸ್., ಕನ್ನಡದ ಶ್ರೇಷ್ಠ ಹತ್ತು ಕಾದಂಬರಿಗಳು), ಪುಟ ೮೫
೨೪. ರಂ.ಶಾ. ತಾಯೀಸಾಹೇಬ, ೧೯೭೨, ಮನೋಹರ ಗ್ರಂಥಮಾಲಾ, ಧಾರವಾಡ, ಪುಟ ೨೪೩
೨೫. ಶಾಂತಿನಾಥ ದೇಸಾಯಿ, ಬೀಜ, ೨೦೦೨, ಸ್ವಪ್ನ ಬುಕ್ ಹೌಸ್, ಬೆಂಗಳೂರು, ಪುಟ ೫
೨೬. ಸುಮತೀಂದ್ರ ನಾಡಿಗ (ಸಂ), ತಬ್ಬಲಿಗಳು, ೧೯೮೧, ಶಿಲ್ಪ ಪ್ರಕಾಶನ, ಪುಟ ೧೦
೨೭. ಜೋಶಿ ಜಿ.ಬಿ., ಕೆ.ಡಿ. ಕುರ್ತಕೋಟಿ (ಸಂ), ಮಟಬಂಗಾರ-೧, ೧೯೮೬, ಮನೋಹರ ಗ್ರಂಥಮಾಲಾ, ಪುಟ ೪
೨೮. ಅದೇ. ಪುಟ ೧೩
೨೯. ಮನೋಹರ ಗ್ರಂಥಮಾಲಾ (ಸಂ), ಇನ್ನಷ್ಟು ಹೊಸ ಕತೆಗಳು, ೧೯೭೨, ಮನೋಹರ ಗ್ರಂಥಮಾಲಾ, ಪುಟ ೮೦
೩೦. ದಿವಾಕರ ಎಸ್.(ಸಂ), ಶತಮಾನದ ಸಣ್ಣ ಕತೆಗಳು, ೧೯೯೭, ಪ್ರಿಸಂ ಬುಕ್ ಪ್ರೈಲಿ., ಬೆಂಗಳೂರು, ಪುಟ ೫೦೧
೩೧. ಬಾಳಾಸಾಹೇಬ ಲೋಕಾಪುರ, ಕಂಗಳು ತುಂಬಿದ ಬಳಿಕ, ೨೦೦೩, ಸಿ. ವಿ. ಜಿ. ಪಬ್ಲಿಕೇಷನ್, ಪುಟ ೯೫
೩೨. ವ್ಯಾಸರಾಯ ಬಲ್ಲಾಳ, ವ್ಯಾಸರಾಯ ಬಲ್ಲಾಳರ ಸಮಗ್ರ ಕತೆಗಳು, ೨೦೦೨, ಅಂಕಿತ ಮಸ್ತಕ, ಪುಟ ೪೯, ೫೦
೩೩. ಗುಂಜಾಳ ಎಸ್. ಆರ್., ಬೆಳಗಾವಿ ಬೆಳಕು, ೨೦೦೩, ಕನ್ನಡ ಸಾಹಿತ್ಯ ಪರಿಷತ್ತು, ಪುಟ ೪೧೯, ೪೨೦

೩೪. ಬಸವರಾಜ ಸಾದರ, ಬಸವರಾಜ ಕಟ್ಟಿಮನಿಯವರ ಕಾದಂಬರಿಗಳು : ಒಂದು ಅಧ್ಯಯನ, ೨೦೦೦, ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ, ಪುಟ ೧೦೦
೩೫. ಚೆನ್ನವೀರ ಕಣವಿ, ಕ್ರಾಂತಿಕಾರ ಕಾದಂಬರಿಗಾರ ಕಟ್ಟೀಮನಿ ಬದುಕು, ಬರಹ(ಸಂ), ಪುಟ ೩೩
೩೬. ನಾಡಿಗೇರ ಕೃಷ್ಣರಾಯ, ಪ್ರಜಾಮತ, ೧೮-೧೧-೧೯೫೧
೩೭. ದೇ.ಜ.ಗೌ., ಶ್ರೇಷ್ಠ ಕಾದಂಬರಿಕಾರ, ಕಟ್ಟೀಮನಿ ಬದುಕು, ಬರಹ(ಸಂ), ಪುಟ ೨೫೨
೩೮. ಮಾಲತಿ ಪಟ್ಟಣಶೆಟ್ಟಿ, ಬಸವರಾಜ ಕಟ್ಟೀಮನಿ, ೧೯೯೯ ಕರ್ನಾಟಕ ಸಾಹಿತ್ಯ ಅಕಾಡೆಮಿ, ಪುಟ ೨೯
೩೯. ಭಂಡಾರಿ ಆರ್.ವಿ. (ಡಾ.), ಕನ್ನಡ ಕಾದಂಬರಿಗಳಲ್ಲಿ ವರ್ಣವರ್ಗ ಸಂಘರ್ಷ, ೨೦೦೩, ರಾಘವೇಂದ್ರ ಪ್ರಕಾಶನ ಅಂಕೋಲ, ಪುಟ ೧೦೩
೪೦. ಅದೇ. ಪುಟ ೧೦೭
೪೧. ನಾಯಕ ಬಾಡ ಎಮ್.ಎಚ್., ಮಾಸ್ತಿ, ೧೯೮೨, ರಾಘವೇಂದ್ರ ಪ್ರಕಾಶನ, ಪುಟ ೧೭, ೧೮
೪೨. ವೀರಭದ್ರ ಕೌದಿ, ಬರ ಮತ್ತು ಇತರ ಕತೆಗಳು, ೧೯೯೧, ಅಜೇಯ ಪ್ರಕಾಶನ, ಪುಟ ೮೨
೪೩. ಮಾಲತಿ ಪಟ್ಟಣಶೆಟ್ಟಿ, ಇಂದು ನಿನ್ನಿನ ಕಥೆಗಳು, ೧೯೮೮, ಕೃತಿ ಪ್ರಕಾಶನ, ಧಾರವಾಡ, ಪುಟ ೨೮
೪೪. ಅನಂತಮೂರ್ತಿ ಯು. ಆರ್., ದಲಿತ ಚಳುವಳಿ ಮತ್ತು ಸಂವೇದನಾಶೀಲತೆ, ೧೯೮೮, ಶೂದ್ರ : ೧೪-೧೧
೪೫. ಅಶೋಕ ಟಿ.ಪಿ., ಸಾಹಿತ್ಯ ಸಂಪರ್ಕ, ಅಕ್ಷರ ಪ್ರಕಾಶನ ಸಾಗರ, ಪುಟ ೧೫೫
೪೬. ರಾಮಚಂದ್ರ ಸಿ.ಎನ್., ಶಿಲ್ಪವಿನ್ಯಾಸ, ಪುಟ ೪೫, ೪೯
೪೭. ವಿಜಯಶ್ರೀ ಕೆ. (ಡಾ.), ಕನ್ನಡದ ನವ್ಯ ಕಾದಂಬರಿಗಳು, ೨೦೦೨, ಶ್ರೀ ರಾಮಕೃಷ್ಣ ಪ್ರಕಾಶನ, ಬೆಂಗಳೂರು, ಪುಟ ೧೨೮
೪೮. ನಾರಾಯಣ ಕೆ.ವಿ., ಬೇರು, ಕಾಂಡ, ಚಿಗುರು, ೧೯೯೭ ವಿವೇಕ ಪ್ರಕಾಶನ, ಬೆಂಗಳೂರು, ಪುಟ ೩೫೩
೪೯. ಅರವಿಂದ ಮಾಲಗತ್ತಿ, ಕಾರ್ಯ, ೧೯೮೮ ಶೈಲ ಪ್ರಕಾಶನ ಮುದ್ದೇಬಿಹಾಳ, ಪುಟ ೫೧
೫೦. ಅಂಬೇಡ್ಕರ್ ವಾಹಿನಿ, ಡಿಸೆಂಬರ್ ೧೯೯೦ (ಸಂಪುಟ ೨, ಸಂಚಿಕೆ ೨೪)
೫೧. ಬಾಳಾಸಾಹೇಬ ಲೋಕಾಪುರ, ಕಂಗಳು ತುಂಬಿದ ಬೆಳಕ, ೨೦೦೩, ಸಿ. ವಿ. ಜಿ. ಪಬ್ಲಿಕೇಷನ್, ಪುಟ ೧೦೭
೫೨. ರಾಮಕೃಷ್ಣ ಗುಂದಿ, ಕಡಲ ಬೆಳಕಿನ ದಾರಿಗುಂಟ, ೧೯೯೬, ಶ್ರೀ ರಾಘವೇಂದ್ರ ಪ್ರಕಾಶನ, ಅಂಕೋಲ, ಬೆನ್ನುಡಿ
೫೩. ವಿಜಯಾ ದಬ್ಬೆ (ಸಂ), ಶ್ಯಾಮಲ ಸಂಚಿಕೆ, ೧೯೮೯, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು, ಪುಟ ೪೬
೫೪. ಸರಸ್ವತಿಬಾಯಿ ರಾಜವಾಡೆ (ಗಿರಿಬಾಲೆ), ಕದಂಬ, ೧೯೪೭ ನವಭಾರತ ಪುಸ್ತಕ ಭಂಡಾರ, ಉಡುಪಿ, ಪುಟ ೬೩
೫೫. ದೇವಾಂಗನಾಶಾಸ್ತ್ರಿ, ವೇಣಿಸಂಹಾರ, ೨೦೦೫, ಅವನಿ ರಸಿಕರ ರಂಗ ಪ್ರಕಾಶನ, (ಭಾಗ : ೨ ), ಪುಟ ೪೨
೫೬. ಆಮೂರ ಜಿ. ಎಸ್., ಕನ್ನಡ ಕಥನ ಸಾಹಿತ್ಯ : ಸಣ್ಣ ಕತೆ, ೨೦೦೩, ಪ್ರಿಯದರ್ಶಿನಿ ಪ್ರಕಾಶನ, ಪುಟ ೩೩೯
೫೭. ಅದೇ. ಪುಟ ೩೪೬
೫೮. ವೀಣಾ, ಗಂಡಸರು, ೧೯೭೮, ನೆಲಮನೆ ಪ್ರಕಾಶನ ಮೈಸೂರು, ಪುಟ ೭
೫೯. ವಿಜಯಾ ದಬ್ಬೆ, ಮಹಿಳೆ, ಸಾಹಿತ್ಯ, ಸಮಾಜ, ೧೯೮೯, ರಚನಾ ಪ್ರಕಾಶನ, ಮೈಸೂರು, ಪುಟ ೧೬
೬೦. ಶಾಂತಾದೇವಿ ಕಣವಿ, ಶಾಂತಾದೇವಿ ಕಣವಿಯವರ ಕಥಾಮಂಜರಿ, ೨೦೦೩, ಪ್ರಿಯದರ್ಶಿನಿ ಪ್ರಕಾಶನ, ಪುಟ ೩೦೪
೬೧. ಮಾಲತಿ ಪಟ್ಟಣಶೆಟ್ಟಿ, ಸೂರ್ಯ ಮುಳುಗುವುದಿಲ್ಲ, ೧೯೯೮, ನೆಲೆ ಪ್ರಕಾಶನ, ಸಿಂದಗಿ, ಪುಟ ೧೧೨
೬೨. ತಿಲಕ್‌ಕುಮಾರ ಕೆ. ಎನ್. (ಸಂ. ಪ್ರಜಾವಾಣಿ), ೨೩-೦೮-೨೦೦೭, ಪುಟ ೬
೬೩. ವಿವೇಕ ಶಾನುಭಾಗ, ಹುಲಿ ಸವಾರಿ, ೧೯೯೫, ಅಕ್ಷರ ಪ್ರಕಾಶನ, ಸಾಗರ, ಪುಟ ೬೦
೬೪. ವಸುಧೇಂದ್ರ, ಚೇಳು, ೨೦೦೬, ಛಂದ ಪುಸ್ತಕ, ಪುಟ ೨೩

* * *

## ಅಧ್ಯಾಯ ನಾಲ್ಕು

# ಗ್ರಾಮ, ನಗರ ವ್ಯಾಖ್ಯಾನದ ನೆಲೆಗಳು

ಬೇಟೆಯನ್ನು ವೃತ್ತಿಯಾಗಿಸಿಕೊಂಡಿದ್ದ ಆದಿ ಮಾನವರು ಕೃಷಿ, ಪಶುಪಾಲನೆಗಾಗಿ ಒಂದೆಡೆ ಗುಂಪು ಗುಂಪಾಗಿ ನೆಲೆ ನಿಲ್ಲಲು ಆರಂಭಿಸಿದಾಗ ಗ್ರಾಮ, ಹಳ್ಳಿ, ಪಳ್ಳಿ, ಊರು, ಹಟ್ಟಿ ಮುಂತಾಗಿ ಕರೆಯಲ್ಪಡುವ ನೆಲೆಗಳು ಹುಟ್ಟಿಕೊಂಡಿವೆ. ಆರಂಭದಲ್ಲಿ ಪ್ರಾದೇಶಿಕತೆಯ ಸೊಗಡಿನಿಂದ ಕೂಡಿದ್ದ ಗ್ರಾಮಗಳು ಕ್ರಮೇಣ ವರ್ಣ, ವರ್ಗ, ಜಾತಿಯಾಧಾರಿತ ಗೂಡುಗಳಾಗಿದ್ದುದು ಕಂಡುಬರುತ್ತದೆ. ಗಾತ್ರದಲ್ಲಿ ಜನಸಂಖ್ಯೆ, ನಾಗರಿಕತೆಗೆ ಅನುಲೋಮವಾಗಿ ಬೆಳೆಯುವ ಗ್ರಾಮ ಮತ್ತು ನಗರಗಳು ಎಂದೂ ನಿಂತ ನೀರಾಗಿಲ್ಲ. ಒಂದು ಸಮಾಜ ಬದಲಾವಣೆಗೆ ಒಳಗಾಗಿದೆಯೆಂದರೆ ಆ ಸಮಾಜ ಜೀವಂತಿಕೆಯ ಸಂಕೇತವೂ ಹೌದು. ಶ್ರೇಣೀಕೃತ ವರ್ಣ ವ್ಯವಸ್ಥೆಯ ಗೂಡುಗಳಂತಿರುವ ಭಾರತೀಯ ಗ್ರಾಮ, ಇದರ ನೆಲೆಗಟ್ಟಿನ ಮೇಲೆಯೆ ವರ್ಗ ವ್ಯವಸ್ಥೆಯ ಸ್ಥಾವರಗಳಾಗಿ ನಿರ್ಮಿತವಾಗಿರುವ ಭಾರತೀಯ ನಗರಗಳೂ ಬೆಳವಣಿಗೆಗೆ ಹೊರತಾಗಿಲ್ಲ. ಗ್ರಾಮ/ನಗರಗಳ ರಚನೆ, ಸ್ವರೂಪ, ವೃತ್ತಿ ಮತ್ತು ಆರ್ಥಿಕತೆ, ನ್ಯಾಯ ವ್ಯವಸ್ಥೆ, ಭೂ ಒಡೆತನ, ಜನಾಂಗಿಯ ಶೋಷಣೆ, ಬದಲಾವಣೆಗೆ ಕಾರಣವಾಗಿರುವ ಕೈಗಾರಿಕೀಕರಣ, ಜಾಗತೀಕರಣಗಳ ಪ್ರಭಾವ, ಸಾಮಾಜಿಕ, ಸಾಂಸ್ಕೃತಿಕ ಬದಲಾವಣೆ ಕುರಿತು ಈ ಹೆಜ್ಜೆಯಲ್ಲಿ ಚರ್ಚಿಸಲಾಗುವುದು. ಗ್ರಾಮ ಮತ್ತು ನಗರಗಳ ಈ ಎಲ್ಲ ಆಂತರಿಕ ನೆಲೆಗಳ ವಿಶ್ಲೇಷಣೆಯೇ ಅವುಗಳ ವ್ಯಾಖ್ಯಾನವೆಂದು ಪರಿಗಣಿಸಲಾಗಿದೆ.

## ೧. ಗ್ರಾಮ ಸಮಾಜ

### ಅ. ಸ್ವರೂಪ

ಬೇಟೆ, ಪಶುಪಾಲನೆ, ಕೃಷಿ ಮತ್ತು ಕೈಗಾರಿಕೆಗಳನ್ನು ವೃತ್ತಿಯಾಗಿ ಸ್ವೀಕರಿಸುತ್ತ ಬಂದ ಮನುಷ್ಯರ ಸಮೂಹ ಜೀವನ ಕೇಂದ್ರವೆನಿಸಿದ ಗ್ರಾಮಕ್ಕೆ ನಾಗರಿಕತೆಯೊಂದಿಗೆ ಜೊತೆ ಜೊತೆಯಾಗಿ ನಡೆದು ಬಂದ ದೀರ್ಘ ಇತಿಹಾಸವಿದೆ. ಗ್ರಾಮಗಳಲ್ಲಿರುವ ಬಹುಸಂಖ್ಯಾತರ ವಾಸಸ್ಥಾನಗಳನ್ನು ಗಮನಿಸಿದರೆ ಸಮೂಹ ಬದುಕಿನ ನೆಲೆಗಳೆಂದು ಗುರುತಿಸಲ್ಪಟ್ಟ ಗ್ರಾಮಗಳು ನಿಜ ಬದುಕಿನಲ್ಲಿ ಶ್ರೇಣೀಕೃತ ವಿಷಮ ಜೀವನಚಿತ್ರಗಳನ್ನು ಹೊಂದಿರುವುದು ಕಂಡುಬರುತ್ತದೆ. ವರ್ಣ ವ್ಯವಸ್ಥೆಯ ಆಧಾರದಲ್ಲಿ, ಜಾತೀಕರಣಗೊಂಡ (ಜಾತಿಯಾಧಾರದಲ್ಲಿ ವರ್ಗೀಕರಣಗೊಂಡ) ಗ್ರಾಮ ಸಮಾಜದಲ್ಲಿ ವಾಸಸ್ಥಳ, ಸೇವಿಸುವ ಗಾಳಿ, ಕುಡಿಯುವ ನೀರು, ಆಹಾರ, ವೃತ್ತಿ, ದೇವರು, ಹಬ್ಬಹುಣ್ಣಿಮೆ ಆಚರಣೆ, ಶವಸಂಸ್ಕಾರಾದಿಯಾಗಿ ಮೇಲು, ಕೀಳು ಎಂಬ ತಾರತಮ್ಯವು ಕಂಡುಬರುತ್ತದೆ. ಮೇಲ್ಜಾತಿಯ ಬ್ರಾಹ್ಮಣರು, ಜೈನರು, ವೀರಶೈವರು ಗ್ರಾಮದ ಉತ್ತಮ ಭಾಗದಲ್ಲಿ ಪ್ರತ್ಯೇಕವಾಗಿ ವಾಸಿಸುತ್ತಾರೆ. ಶೂದ್ರರು ಊರಿಗೆ ಹೊಂದಿಕೊಂಡಿರುವ ಇನ್ನಿತರ ಸ್ಥಳಗಳಲ್ಲಿ ವಾಸಿಸಿದರೆ, ಅಸ್ಪೃಶ್ಯರು ಊರ ಹೊರಗಿನ ಕೇರಿಗಳಲ್ಲಿ ವಾಸಿಸುವುದು ಕಂಡುಬರುತ್ತದೆ. ಸಾಮಾನ್ಯವಾಗಿ, ಗ್ರಾಮದ ಪೂರ್ವ ಭಾಗದಲ್ಲಿರುವ ನಿರ್ದಿಷ್ಟ ಸ್ಥಳದಲ್ಲಿ ಅಸ್ಪೃಶ್ಯರ ಕೇರಿಗಳಿರುತ್ತವೆ. ಇದಕ್ಕೆ ಪೂರ್ವ ನಿಯೋಜಿತ ಕಾರಣಗಳಿವೆ. ವರ್ಷದ ಹತ್ತು ತಿಂಗಳ ಕಾಲ ಪಶ್ಚಿಮದಿಂದ ಪೂರ್ವಕ್ಕೆ ಮತ್ತು ಎರಡು ತಿಂಗಳ ಕಾಲ ಪೂರ್ವದಿಂದ ಪಶ್ಚಿಮಕ್ಕೆ ಬೀಸುವ ಪ್ರಕೃತಿದತ್ತ ಗಾಳಿಯ ಚಲನೆ ಮೊದಲ

ಕಾರಣವಾಗಿದ್ದು, ಅಸ್ಪೃಶ್ಯರ ಕೇರಿಗಳ ಮೇಲಿಂದ ಗಾಳಿಯು ಸವರ್ಣೀಯರ ವಾಸಸ್ಥಾನದೆಡೆ ಬಹುಕಾಲ ಬೀಸಬಾರದೆಂಬ ಸವರ್ಣೀಯರ ದೂ(ದು)ರಾಲೋಚನೆ, ಈ ಗ್ರಾಮ ರಚನಾವಿನ್ಯಾಸ(Layout)ದ ಮೂಲದಲ್ಲಿದೆ. ಇನ್ನು ಹಲವು ಗ್ರಾಮಗಳಲ್ಲಿ ಊರಿನ ದಕ್ಷಿಣ ಭಾಗವು ಅಶುಭ ದಿಕ್ಕೆಂಬ ಭಾವನೆ (ಮೂಢನಂಬಿಕೆ) ಸವರ್ಣೀಯರಲ್ಲಿ ರೂಢನಂಬಿಕೆಯಾಗಿದ್ದು ಅಸ್ಪೃಶ್ಯರಿಗೆ ಅಲ್ಲಿ ವಾಸಿಸಲು ಅವಕಾಶ ಮಾಡಿರುವುದು ಕಂಡುಬರುತ್ತದೆ. ಗ್ರಾಮಗಳು ಗಾತ್ರದಲ್ಲಿ ಚಿಕ್ಕವುಗಳಾಗಿದ್ದು, ಗ್ರಾಮೀಣ ಜನತೆಯಲ್ಲಿ ಪರಸ್ಪರ ಪರಿಚಯ ನಿಕಟವಾಗಿರುತ್ತದೆ. ಶ್ರೇಣೀಕೃತ ಸಮಾಜ ವ್ಯವಸ್ಥೆಯಲ್ಲಿ ಗ್ರಾಮಗಳನ್ನು ಜಾತೀಯತೆ, ಅನಕ್ಷರತೆ, ದಾರಿದ್ರ್ಯ, ಬಡತನ, ಅನಾರೋಗ್ಯ, ನಿರುದ್ಯೋಗ ಮೊದಲಾದ ಸಾಮಾಜಿಕ ವಿಷಮತೆಗಳು ಬೆಂಬಿಡದೆ ಕಾಡುತ್ತಿವೆ. ಹಲವಾರು ವಿಷಯಗಳಲ್ಲಿ ಗ್ರಾಮಗಳು ತಾಂಡವ ನೃತ್ಯಗಳನ್ನಾಡುವ ರಂಗಭೂಮಿಗಳಾಗಿವೆ. ಜಾತಿಪದ್ಧತಿಯು ಗ್ರಾಮೀಣ ಸಮಾಜದಲ್ಲಿ ಸಾಮಾಜಿಕ ಸಂಬಂಧಗಳನ್ನು ನಿರ್ಧರಿಸುವುದಾಗಿದ್ದು, ಇದು ಸಮಾನತೆಯ ತತ್ವ ಪ್ರಜಾಪ್ರಭುತ್ವದ ದೃಷ್ಟಿಕೋನಕ್ಕೆ ವಿರೋಧವಾಗಿದೆ. ಡಿ.ಆರ್. ನಾಗರಾಜ ಗುರುತಿಸುವಂತೆ 'ಗಾಂಧಿ ಆದರ್ಶವಾದಿಯಾಗಿ ಬಯಸಿದ್ದು ಸಮಾನ ಅವಕಾಶಗಳಿರುವ, ಸಮಾನ ಹಕ್ಕುಗಳಿರುವ, ಸಮಾನ ಘನತೆಯಿರುವ ರಮ್ಯ ಹಳ್ಳಿಯನ್ನು, ಅಂಬೇಡ್ಕರ್ ವಾಸ್ತವವಾದಿಯಾಗಿಯೇ ಅರ್ಥ ಮಾಡಿಕೊಂಡಿದ್ದು ಈ ರಮ್ಯ ಹಳ್ಳಿಯ ಅಸಾಧ್ಯತೆಯನ್ನು. ಈಗಲೂ ಚಾರಿತ್ರಿಕ ವ್ಯಂಗ್ಯವೆಂಬಂತೆ ಈ ವೈರುಧ್ಯ ಮುಂದುವರೆದಿದೆ.'[೪] ಆದಕ್ಕಾಗಿಯೇ ಅಂಬೇಡ್ಕರರು, 'ಗ್ರಾಮಗಳು ಪ್ರಾದೇಶಿಕತೆಯ ಕೊಳೆಗುಂಡಿಗಳು ಹಾಗೂ ಅಜ್ಞಾನದ, ಸಂಕುಚಿತ ಮನೋಭಾವದ, ಜಾತೀಯತೆಯ ಬಿಲಗಳು'[೫] ಎಂದು ಕರೆದಿದ್ದಾರೆ. (ಘಟನಾ ಸಮಿತಿಯ ಚರ್ಚೆಗಳು, ೪-೧೧-೧೯೪೮)

### ಬ. ಗ್ರಾಮ ಸಮಾಜ : ಕೌಟುಂಬಿಕ ರಚನೆ

ಸಾಮಾಜಿಕ ವ್ಯವಸ್ಥೆಯಲ್ಲಿ ಕುಟುಂಬವು ಅತ್ಯಂತ ಚಿಕ್ಕ ಸಂಸ್ಥೆಯಾದರೂ ಅಷ್ಟೇ ಪ್ರಾಮುಖ್ಯತೆಯನ್ನು ಹೊಂದಿದೆ. ಹಿರಿಕಿರಿಯ ತಲೆಮಾರಿನ ರಕ್ತ ಸಂಬಂಧಿಗಳು (ಅಂದರೆ ಅಜ್ಜ-ಅಜ್ಜಿ, ತಂದೆ-ತಾಯಿ, ಅಣ್ಣ-ತಮ್ಮ-ತಂಗಿ ಮುಂತಾದವರು) ಒಂದೇ ಸೂರಿನಡಿ ವಾಸಿಸುವ ಅವಿಭಕ್ತ ಕುಟುಂಬಗಳು ತಮ್ಮವೇ ಆದ ಕೌಟುಂಬಿಕ ನಿಬಂಧನೆಗಳೊಂದಿಗೆ ಬಂಧಿಸಲ್ಪಟ್ಟಿರುವುದು ಕಂಡುಬರುತ್ತದೆ. ಸಾಮಾನ್ಯವಾಗಿ ತಂದೆ ಮನೆಯ ಯಜಮಾನನಾಗಿದ್ದರೆ ತಾಯಿ ಕುಟುಂಬವನ್ನು ಓಲೈಸುವ ಯಜಮಾನತಿಯಾಗಿರುತ್ತಾಳೆ. ಕರಾವಳಿಯ ಹಲವು ಗ್ರಾಮಗಳಲ್ಲಿ, ಪರಿಶಿಷ್ಟ ಪಂಗಡಗಳಲ್ಲಿ ಮಾತೃಪ್ರಧಾನ ಕುಟುಂಬಗಳು ಕಂಡುಬರುತ್ತವೆ. ಕುಟುಂಬಕ್ಕೆ ಸಂಬಂಧಪಟ್ಟ ಆರ್ಥಿಕ, ಧಾರ್ಮಿಕ, ಸಾಮಾಜಿಕ ನಿರ್ಧಾರಗಳನ್ನು ಕುಟುಂಬದ ಸದಸ್ಯರೆಲ್ಲ ಕಲೆತು ತೆಗೆದುಕೊಳ್ಳುವ ಅಲಿಖಿತ ನಿಯಮಗಳು ಕುಟುಂಬದಲ್ಲಿವೆ. ಇಂದಿಗೂ ಗ್ರಾಮಗಳಲ್ಲಿ ಅವಿಭಕ್ತ ಕುಟುಂಬ ಪದ್ಧತಿಯೇ ಹೆಚ್ಚಾಗಿ ರೂಢಿಯಲ್ಲಿದೆ. ಆದರೆ ಬಡತನ, ನಿರುದ್ಯೋಗ ಮೊದಲಾದವುಗಳಿಂದಾಗಿ ಗ್ರಾಮೀಣ ಜನರು ನಗರಗಳತ್ತ ವಲಸೆ ಹೋಗಲು ಇಷ್ಟಪಡುತ್ತಾರೆ.

### ವ್ಯಕ್ತಿ ಮತ್ತು ಕೌಟುಂಬಿಕ ಸಂಬಂಧ

ಗ್ರಾಮೀಣ ಸಮಾಜದಲ್ಲಿ ವ್ಯಕ್ತಿಯೊಬ್ಬನ ಸಾಮಾಜಿಕ ವರ್ತನಾಂಶಗಳನ್ನು ಪ್ರಾಥಮಿಕ ಸಂಸ್ಥೆಗಳು ಅಂದರೆ ಕುಟುಂಬ, ನೆರೆಹೊರೆ, ಜಾತಿ, ಪಂಥ ಮೊದಲಾದವು ಪ್ರಭಾವಿಸುತ್ತವೆ. ವ್ಯಕ್ತಿಯ ಜನನದಿಂದ ಹಿಡಿದು ಬಾಲ್ಯ, ವಿದ್ಯಾಭ್ಯಾಸ, ವಸ್ತ್ರ ಸಂಹಿತೆ, ವೃತ್ತಿ, ಮದುವೆ ಮುಂತಾಗಿ ಶವಸಂಸ್ಕಾರದವರೆಗಿನ ಅವನ ನಡತೆ ಮತ್ತು ಆಚರಣೆಗಳು ಕುಟುಂಬ ಮತ್ತು ಜಾತಿ ಸಂಸ್ಥೆಗಳಿಂದ ನಿಯಂತ್ರಿಸಲ್ಪಡುತ್ತವೆ. ಮೇಲ್ಜಾತಿ ಅಥವಾ ಸವರ್ಣೀಯ ವ್ಯಕ್ತಿಯ ಕೌಟುಂಬಿಕ ಸಂಬಂಧಗಳು ಮತ್ತು ದಲಿತ, ಕೆಳವರ್ಗದ ವ್ಯಕ್ತಿಯ ಕೌಟುಂಬಿಕ ಸಂಬಂಧಗಳಲ್ಲಿ ಭಿನ್ನವಾದ ಹಿಡಿತ ಕಂಡುಬರುತ್ತದೆ. ವ್ಯಕ್ತಿ ಮತ್ತು ಕೌಟುಂಬಿಕ ಸಂಬಂಧ ಮೂಲಭೂತವಾಗಿ ದೈಹಿಕ ಮತ್ತು ಭಾವನಾತ್ಮಕ ಸಂಬಂಧವಾಗಿದ್ದರೂ, ಅದನ್ನು ಹಿಡಿತದಲ್ಲಿ ಇಟ್ಟುಕೊಳ್ಳುವುದು ಅವರಿಬ್ಬರ ನಡುವಿನ ಆರ್ಥಿಕ ಸಂಬಂಧವಾಗಿದೆ. ಕುಟುಂಬದ ಸದಸ್ಯರೆಲ್ಲರ ದುಡಿಮೆಯನ್ನು ಸಮನಾಗಿ ಹಂಚಿ ಉಪಯೋಗಿಸುವ ಶ್ರಮವಿಭಾಜಕ ಆರ್ಥಿಕ ನೀತಿ ಕುಟುಂಬದಲ್ಲಿದೆ.

### ವಿವಾಹ

ಗ್ರಾಮ ಸಮಾಜದಲ್ಲಿ ಮದುವೆ ವ್ಯಕ್ತಿಗಳ ಬದುಕಿನ ಪ್ರಮುಖ ಘಟ್ಟವಾಗಿದೆ. ಒಬ್ಬ ವ್ಯಕ್ತಿಯ ಉಡುಗೆ, ತೊಡುಗೆ, ಅಚಾರ, ವಿಚಾರ ಮುಂತಾದವುಗಳನ್ನು ಜಾತಿವ್ಯವಸ್ಥೆ ನಿರ್ಧರಿಸುವಂತೆ ಅವರ ದೈಹಿಕ

ಸಂಬಂಧಗಳನ್ನು ಮದುವೆಯ ಮುಖಾಂತರ ನಿರ್ಧರಿಸಲಾಗುತ್ತದೆ. ಗ್ರಾಮೀಣ ಸಮಾಜದಲ್ಲಿ, ಪುರುಷ ಪ್ರಧಾನ ಕೌಟುಂಬಿಕ/ಸಾಮಾಜಿಕ ವ್ಯವಸ್ಥೆಯಲ್ಲಿ ಮದುವೆಯಲ್ಲಿ ಸಂಗಾತಿಯ ಆಯ್ಕೆಯನ್ನು ಕುಟುಂಬದ ಹಿರಿಯರು ತೀರ್ಮಾನಿಸುತ್ತಾರೆ. "ಸ್ತ್ರೀ-ಪುರುಷರಿಗಿರುವ ಸಂಬಂಧವನ್ನು ನಿರ್ಬಂಧಿಸಿ, ನಿಯಮಗಳನ್ನು ಹಾಕಿ, ಸಂಕುಚಿತಗೊಳಿಸುವುದೇ ಮದುವೆ" ಎಂಬ ಅಭಿಪ್ರಾಯವನ್ನು ಈಗಲೂ ಭಾಗಶಃ ಒಪ್ಪಬಹುದು. ಮದುವೆಯಾಗುವ ಪುರುಷ ವಿದ್ಯಾವಂತನಾಗಿದ್ದರೆ ಸಕ್ರಿಯನಾಗಿ ತನ್ನಿಷ್ಟವನ್ನು ಪ್ರಕಟಪಡಿಸುತ್ತಾನೆ. ಆದರೆ ಮದುವೆ ವಿಷಯದಲ್ಲಿ ಮಹಿಳೆಯ ಹಕ್ಕು, ಸಂವೇದನೆಗಳನ್ನು ದಮನಿಸುವುದು ಕಂಡುಬರುತ್ತದೆ. ಅನೇಕ ಸಂದರ್ಭಗಳಲ್ಲಿ ಹೆಣ್ಣನ್ನು ಗಂಡು ನೋಡದೆ, ಗಂಡನ್ನು ಹೆಣ್ಣು ನೋಡದೆ ಅಪ್ಪ, ಅಮ್ಮ, ಹಿರಿಯರು ನಿರ್ಧರಿಸಿ ಸಂಬಂಧಗಳನ್ನು ಬೆಳೆಸುತ್ತಾರೆ. ಇಂತಹ ಸಂಬಂಧಗಳು ವಿಷಮ ದಾಂಪತ್ಯಗಳಾಗಿ ಕೌಟುಂಬಿಕ ಸಂಬಂಧ ಶಿಥಿಲಗೊಂಡು ಬಿರುಗಡೆಯಲ್ಲಿ ಕೊನೆಗೊಳ್ಳುತ್ತವೆ. ವರದಕ್ಷಿಣೆಯ ಮೊತ್ತ, ಮದುವೆಯ ದುಂದುವೆಚ್ಚಗಳು ಪ್ರಬಲ ಮೇಲ್ಜಾತಿಗಳ ವೈಭವದ ಸಂಕೇತಗಳಾಗಿ ಕಾಣಿಸಿಕೊಳ್ಳುತ್ತವೆ. ಆದರೆ ಬಡವರು, ದಲಿತರು ತಮ್ಮ ಜಾತಿ, ಅಂತಸ್ತಿನ ಕುಟುಂಬಗಳ ಜೊತೆ ಸಂಬಂಧ ಬೆಳೆಸಿ ದೇವಸ್ಥಾನದಲ್ಲಿ, ಇಲ್ಲವೇ ತಮ್ಮ ಕೇರಿಯಲ್ಲಿ ಮದುವೆ ಮಾಡುತ್ತಾರೆ. ಮೇಲ್ಜಾತಿ, ಅಲ್ಪಸಂಖ್ಯಾತರಲ್ಲಿ ಬಹುಪತ್ನಿತ್ವ, ಕೆಳವರ್ಗದ ಕುಟುಂಬದಲ್ಲಿ ಅಧಿಕ ಮಕ್ಕಳ ಜನನ ಸಾಮಾನ್ಯವಾಗಿ ಕಾಣುವ ಅಂಶಗಳಾಗಿವೆ.

**ಕ. ಗ್ರಾಮ ಸಮಾಜ : ಸಾಮಾಜಿಕ ರಚನೆ**

ಗ್ರಾಮಗಳ ಜನರು ಜಾತಿ, ಧರ್ಮ, ವಿವಾಹ, ವೃತ್ತಿ ಮತ್ತು ಆಚರಣೆಗಳಲ್ಲಿ ಗಾಢವಾದ ಜಡ ಸಾಂಪ್ರದಾಯಿಕ ಭಾವನೆ ಹೊಂದಿದ್ದಾರೆ. ಈ ನೆಲೆಯಲ್ಲಿ ಅವರು ಅವುಗಳನ್ನು ಉಳಿಸಿಕೊಳ್ಳಲು ಯಾವ ಸಂಘರ್ಷಕ್ಕೂ ಸಿದ್ಧರಾಗಿರುತ್ತಾರೆ. ಗ್ರಾಮ ಸಮಾಜದ ಜನರ ಸಂಪ್ರದಾಯಗಳು, ಜೀವನದ ರೀತಿ ನೀತಿಗಳು, ನಂಬಿಕೆ ಮೌಲ್ಯಗಳು ಜಾತಿ, ಆರ್ಥಿಕ ಭದ್ರತೆ ಆಧಾರಿತವಾಗಿದ್ದು ಜಾತಿಯಿಂದ ಜಾತಿಗೆ ಭಿನ್ನವಾಗಿರುತ್ತವೆ. ಸಮಸ್ತ ಗ್ರಾಮೀಣ ಜನತೆಯು ಜಾತಿ, ವರ್ಗ ಆಧಾರದಲ್ಲಿ ಒಡೆಯಲ್ಪಟ್ಟು, ಒಂದು ಅವಿಚ್ಛಿನ್ನ ಘಟಕದಂತೆ ಕಾರ್ಯ ನಿರ್ವಹಿಸುತ್ತಿದ್ದ ರೀತಿ, ನೀತಿಗಳು ಇಂದು ಕಂಡುಬರುವುದಿಲ್ಲ. ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಗಳಲ್ಲಿ ಜಾತಿ, ಪಂಥಗಳ ಆಧಾರದಲ್ಲಿ ಪಾಲ್ಗೊಳ್ಳುವ ರೀತಿ, ನೀತಿಯ ನಿರ್ಮಾಣ, ಪಾಲನೆ ಇತಿಹಾಸ ಕಾಲದಿಂದಲೂ ಗ್ರಾಮ ಸಮಾಜದಲ್ಲಿದೆ. ಜನರು ಪರಸ್ಪರ ಸುಖ, ದುಃಖಗಳಲ್ಲಿ ಪಾಲ್ಗೊಳ್ಳುವ ನೆಲೆಯಲ್ಲಿ ದಲಿತ, ಕೆಳವರ್ಗಗಳ ಶೋಷಣೆ ಕಂಡುಬರುತ್ತದೆ. ಇಂದು ಗ್ರಾಮಗಳಲ್ಲಿ ಆಗುತ್ತಿರುವ ಬದಲಾವಣೆಗಳು, ಜಾತೀಯತೆಯ ಮನೋಭಾವದ ತೀವ್ರತೆ, ರಾಜಕೀಯ ಪಕ್ಷಗಳ ಪ್ರಭಾವ ಮೊದಲಾದವುಗಳಿಂದ ಗ್ರಾಮೀಣ ಜನರ ನೆರೆಹೊರೆಯ ನಿಕಟ ಜೀವನ ಮಾಯವಾಗಿ, ದ್ವೇಷಾಸೂಯೆಯ ಹಾಗೂ ಸ್ಪರ್ಧಾತ್ಮಕ ಮನೋಭಾವ ಇನ್ನೂ ತೀವ್ರವಾಗಿ ಬೆಳೆದಿದೆ. ಸಾರ್ವಜನಿಕ ಟೀಕೆ, ಟಿಪ್ಪಣಿಗಳಿಗೆ ಅಳುಕುತ್ತಿದ್ದ ಗ್ರಾಮೀಣ ಜನರು ಇಂದು ಹಣಕ್ಕಾಗಿ ಟೀಕೆ, ಟಿಪ್ಪಣಿಗಳನ್ನು ಅರಗಿಸಿಕೊಳ್ಳುತ್ತಾರೆ. ಸಂಪ್ರದಾಯಗಳು, ಪರಂಪರೆಗಳು, ಲೋಕರೂಢಿಗಳು, ನಂಬಿಕೆ, ಮೌಲ್ಯಗಳು ಮತ್ತು ಧಾರ್ಮಿಕ ನಿಯಮಾವಳಿಗಳು ಗ್ರಾಮಗಳಲ್ಲಿನ ಸಾಮಾಜಿಕ ನಿಯಂತ್ರಣದ ಪ್ರಬಲ ಶಕ್ತಿಗಳಾಗಿ ಕೆಳವರ್ಗದ ವ್ಯಕ್ತಿ, ಸಮೂಹವನ್ನು ದಮನಿಸುತ್ತ ಬಂದಿವೆ. ನಗರ ಜೀವನಕ್ಕೆ ಹೋಲಿಸಿದರೆ ತೆರೆದ ಮನಸ್ಸಿನ, ಬಿಚ್ಚು ಮಾತುಗಳ ಗ್ರಾಮೀಣ ವ್ಯಕ್ತಿಗಳಲ್ಲಿ ನಗರ ಜೀವನದ ಕೃತ್ರಿಮತೆ, ವಂಚನೆ, ಮೊದಲಾದ ಪ್ರವೃತ್ತಿಗಳು ಹೆಚ್ಚಾಗಿ ಕಂಡುಬರುವುದಿಲ್ಲವಾದರೂ ಇದಕ್ಕೆ ಅಪವಾದ ಇಲ್ಲದಿಲ್ಲ. ಅತಿಥಿಗಳನ್ನು ಸತ್ಕರಿಸುವ ಮನೋಭಾವ, ಕಷ್ಟ ಸಹಿಷ್ಣುತೆ, ಶಾಂತಿಯುತವಾದ ಸರಳ ಜೀವನ ಅವರ ವಿಶಿಷ್ಟ ಗುಣಗಳಾಗಿದ್ದರೂ, ಇತ್ತೀಚೆಗೆ ನಗರ ಜೀವನದ ಸಂಪರ್ಕಗಳಿಂದಾಗಿ ಇವೆಲ್ಲ ಗುಣಗಳಲ್ಲಿ ಪರಿವರ್ತನೆಗಳಾಗುತ್ತಿವೆ.

**ಗ್ರಾಮ ಸಮಾಜ : ಅಸ್ಪೃಶ್ಯತೆ ಮತ್ತು ಸಂಘರ್ಷ**

ಹಿಂದೂ ಧರ್ಮವು ವರ್ಣ ವ್ಯವಸ್ಥೆಯ ಮೂಲಕ ಕಾಪಾಡಿಕೊಂಡು ಬಂದ ಸ್ಪೃಶ್ಯ ಅಸ್ಪೃಶ್ಯ ಮೇಲು ಕೀಳು ಎಂಬ ತಾರತಮ್ಯಗಳ ಮೂಲನೆಲೆ ಗ್ರಾಮದಲ್ಲಿ ದಟ್ಟವಾಗಿ ಕಂಡುಬರುತ್ತದೆ. ಜೀವನ ವಿಧಾನ ಮತ್ತು ಆಹಾರ ಪದ್ಧತಿಗಳು ಅಸ್ಪೃಶ್ಯತೆಯ ಹುಟ್ಟು ಬೆಳವಣಿಗೆಗೆ ಕಾರಣ ಎಂದು ತಿಳಿಯಲಾಗಿದೆ. 'ಅಸ್ಪೃಶ್ಯತೆ ಕ್ರಿ. ಶ. ೬ನೇ ಶತಮಾನದಿಂದ ಅಸ್ತಿತ್ವಕ್ಕೆ ಬಂದಿತೆಂದು ಅಂಬೇಡ್ಕರ್ ಅವರು ಅಭಿಪ್ರಾಯ ಪಡುತ್ತಾರೆ.' ಸಮಾಜ ಸುಧಾರಕರು, ಶರಣರು, ಗಾಂಧೀಜಿ, ಅಂಬೇಡ್ಕರರು ಅಸ್ಪೃಶ್ಯತೆಯ ನಿವಾರಣೆಗೆ ಹೋರಾಟ ಮಾಡಿದರೂ, ಕಾಲದಿಂದ ಕಾಲಕ್ಕೆ ವಿಭಿನ್ನ ರೂಪಗಳಲ್ಲಿ ಸಂಕೀರ್ಣವಾಗಿ ಗ್ರಾಮಗಳಲ್ಲಿ

ಉಳಿದುಕೊಂಡು ಬಂದಿದೆ. ದಲಿತರು ಮದ್ಯ ಮಾಂಸ ಸೇವಿಸುತ್ತಾರೆಂಬ ಕಾರಣಕ್ಕೆ, ಅವರು ಕೈಗೊಳ್ಳುವ ವೃತ್ತಿಯ ಕಾರಣಕ್ಕೆ ಅಸ್ಪೃಶ್ಯರನ್ನಾಗಿ ಕಾಣಲಾಗುತ್ತದೆ. ಅವರಿಗೆ ಕುಡಿಯುವ ನೀರು, ಸಹಪಂಕ್ತಿ ಭೋಜನ, ದೇವಾಲಯ ಪ್ರವೇಶ, ಸವರ್ಣೀಯ ಬೀದಿಗಳಲ್ಲಿ ಪ್ರವೇಶವನ್ನು ನಿರಾಕರಿಸಲಾಗಿದೆ. ಪ್ರಕೃತಿದತ್ತ ಗಾಳಿ, ನೀರು ಮತ್ತು ಆಹಾರಕ್ಕಾಗಿ ಸವರ್ಣೀಯರು, ಶೂದ್ರರು ಮತ್ತು ಅಸ್ಪೃಶ್ಯರು ಬೇರೆ ಬೇರೆ ವಾಸಸ್ಥಳ, ಕೆರೆ, ಬಾವಿ (ಇತ್ತೀಚಿನ ದಿನಗಳಲ್ಲಿ ಬೋರ್‌ವೆಲ್ ಹಾಗೂ ಓವರ್ ಹೆಡ್ ಜಲಸಂಗ್ರಹ ಟ್ಯಾಂಕ್)ಗಳನ್ನು, ಆಹಾರ ವಸ್ತುಗಳನ್ನು ಉಪಯೋಗಿಸುತ್ತಾರೆ. ಅಗತ್ಯ ವಸ್ತುಗಳ ಮತ್ತು ಇನ್ನಿತರ ವಿಷಯಗಳ ಸಂಬಂಧವಾಗಿ ಪ್ರಬಲ ಜಾತಿ/ಸವರ್ಣೀಯರಿಂದ ದಲಿತರ ಮೇಲೆ ಮಾರಣಾಂತಿಕ ಹಲ್ಲೆಗಳು, ಬಹಿಷ್ಕಾರದಂತಹ ಸಾಮಾಜಿಕ ದೌರ್ಜನ್ಯಗಳು ಸಂಭವಿಸಿರುವುದು ಇತಿಹಾಸದಲ್ಲಿ ದಾಖಲಾಗಿದೆ.

ಅಸ್ಪೃಶ್ಯರನ್ನು ತಲೆತಲಾಂತರದಿಂದ ಹೀನ ಕಾರ್ಯದಲ್ಲಿ ತೊಡಗಿಸಿ, ಸವರ್ಣೀಯರ ಇಷ್ಟದಂತೆ ನಡೆದುಕೊಳ್ಳಲು ನಿರ್ಬಂಧಿಸಿ ದೈಹಿಕ ಮತ್ತು ಮಾನಸಿಕವಾಗಿ ಅವರನ್ನು ದೂರವೇ ಇಡಲಾಗಿದೆ. ಇದಕ್ಕೆ ತಪ್ಪಿದ ಅಸ್ಪೃಶ್ಯರನ್ನು ಬಹಿಷ್ಕಾರ, ದೈಹಿಕ, ಮಾನಸಿಕ ದೌರ್ಜನ್ಯಗಳಿಗೆ ಒಳಪಡಿಸಿದ್ದನ್ನು ಬದನವಾಳು, ಕಂಬಾಲಪಲ್ಲಿ, ಅಣ್ಣಿಗೇರಿ, ಸಿಂಧನೂರು, ಬೆಂಡಿಗೇರಿ, ಅಥನಿ, ತತ್ತೂರು, ಉಮ್ಮತ್ತೂರು ಮುಂತಾದ ಊರುಗಳಲ್ಲಿ ಕಂಡಿದ್ದೇವೆ. ಇದು ಗ್ರಾಮ ಸಮಾಜದಲ್ಲಿ ದಲಿತರ ಮೇಲಿನ ಶೋಷಣೆಯ ಒಂದು ಪರಿಯಾದರೆ, ಈ ಶೋಷಣೆಯನ್ನು ಒಪ್ಪದ, ಪ್ರತಿಭಟಿಸಿದ ದಲಿತರ ಮೇಲಿನ ದೌರ್ಜನ್ಯ ಇನ್ನೊಂದು ಅಮಾನವೀಯ ಮುಖವಾಗಿದೆ. ದೌರ್ಜನ್ಯ ಎಂಬುವುದು ಒಂದು ಆಧುನಿಕ ಸಾಮಾಜಿಕ ಹಾಗೂ ರಾಜಕೀಯ ವಿದ್ಯಮಾನ, ವಿಭಿನ್ನ ಜಾತಿ ಹಾಗೂ ಧರ್ಮಗಳ ನಡುವೆ ರಾಜಕೀಯ ಅಧಿಕಾರ, ಸರ್ಕಾರದ ಹುದ್ದೆಗಳು, ಶೈಕ್ಷಣಿಕ ಗುಣಮಟ್ಟ ಹಾಗೂ ಆರ್ಥಿಕ ಸಾಧನಗಳಲ್ಲಿನ ಪಾಲಿಗಾಗಿ ಸಂಭವಿಸುವ ಘಟನೆ ಎಂದು ಹೇಳುವುದು ಸೂಕ್ತವಾಗುತ್ತದೆ. ಆದರೆ ಇದನ್ನು ಅಲ್ಲಗಳೆಯುವ ಅಭಿಪ್ರಾಯಗಳೂ ಇವೆ. "ದೌರ್ಜನ್ಯವೆಂಬುವುದು ಒಂದು ದೃಷ್ಟಿಯಲ್ಲಿ ಚಾರಿತ್ರಿಕವಾದಂತಹ ಜಡ ಹಾಗೂ ಪಾರಮಾರ್ಥಿಕವಾಗಲಿ ಅಥವಾ ಚಲನಶೀಲವಾಗಲಿ ಅಲ್ಲದ ಗುರುತಿಸುವಿಕೆಯನ್ನು (Identity) ಬೆಳೆಸಿಕೊಳ್ಳುವ ಒಂದು ಬಲವಂತದ ಪ್ರಯತ್ನವಾಗಿದೆ".[8] ಇದು ಸಮಾಜದಲ್ಲಿ ಸ್ಪಷ್ಟವಾಗಿಯೇ ಶೋಷಕ, ಶೋಷಿತ ಅಥವಾ ಶಕ್ತಿವಂತ, ಬಲಹೀನರೆಂಬ ವರ್ಗಪ್ರಜ್ಞೆಯನ್ನು ಬೆಳೆಯಗೊಡುವುದಕ್ಕೆ ವ್ಯತಿರಿಕ್ತವಾಗಿ ಜಾತಿಯ ಹಿನ್ನೆಲೆಯಲ್ಲಿ ಸಮಾಜದ ವಿವಿಧ ಸ್ತರಗಳಲ್ಲಿನ ವ್ಯಕ್ತಿಗಳನ್ನು ಛಿದ್ರಗೊಳಿಸುತ್ತದೆ. ಇದಕ್ಕೆ ಉದಾಹರಣೆಯಾಗಿ ಇತ್ತೀಚಿನ ದಿನಗಳಲ್ಲಿ ಗದಗ ಜಿಲ್ಲೆಯ ಹಳ್ಳಿಕೇರಿಯಲ್ಲಿ ನಡೆದ ದಲಿತರ ಮೇಲಿನ ಬಹಿಷ್ಕಾರವನ್ನು ಗಮನಿಸಬಹುದಾಗಿದೆ. ಈ ಸಂದರ್ಭದಲ್ಲಿ ಪರಿಶಿಷ್ಟ ಪಂಗಡದ ಒಂದು ಕೋಮಿಗೆ ಸೇರಿದ ಜನರು, ಇನ್ನಿತರ ಪ್ರಬಲ ಜಾತಿಯವರ ಸಹಕಾರದೊಂದಿಗೆ ಪರಿಶಿಷ್ಟ ಜಾತಿಗೆ ಸೇರಿದ ಇನ್ನೊಂದು ಕೋಮಿನ ಜನರನ್ನು ಬಹಿಷ್ಕಾರಕ್ಕೆ ಒಡ್ಡಿದ್ದು ಕಂಡು ಬಂದಿದೆ. ಇದಕ್ಕೆ ಸರಕಾರದ ಕಾರ್ಯವಿಫಲತೆಯೂ ಕಾರಣವೆನ್ನಲಾಗಿದೆ.

ಇಂತಹ ದೌರ್ಜನ್ಯಗಳು ಏಕೆ ನಡೆಯುತ್ತವೆ, ಏಕೆ ಮರುಕಳಿಸುತ್ತವೆ, ಇದು ಅಂಬೇಡ್ಕರ್ ನಂತರದ ರಾಜಕೀಯದ ಅಸಫಲತೆಯೆ, ಇದು ಅಪೂರ್ಣಗೊಂಡಿರುವ ಪ್ರಜಾಪ್ರಭುತ್ವ ಯೋಜನೆಯ ಫಲಿತಾಂಶವೆ? ಎಂಬ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ದಲಿತರ ಮೇಲಾಗುತ್ತಿರುವ ದೌರ್ಜನ್ಯವನ್ನು ಅರ್ಥಮಾಡಿಕೊಳ್ಳಬೇಕಾದರೆ ಬದಲಾಗುತ್ತಿರುವ ವೈರುಧ್ಯಗಳನ್ನು ಕೂಡ ಅರ್ಥ ಮಾಡಿಕೊಳ್ಳಬೇಕು. ದಲಿತ ರಾಜಕಾರಣ, ಹೋರಾಟಗಾರರು ಇವತ್ತು ಕೂಡ ಮೇಲ್ಜಾತಿಯನ್ನು ತನ್ನ ಮೊದಲ ವಿರೋಧಿ ಎಂದುಕೊಂಡಿರುವುದು ವಾಸ್ತವ. ಆದರೆ ವಾಸ್ತವವಾಗಿ ದಲಿತರ ವಿರೋಧಿ ಎಂದು ಬಿಂಬಿತವಾಗಿರುವುದು ಮಧ್ಯಮ ಮತ್ತು ಬಲಾಢ್ಯ ಜಾತಿಗಳೆಂಬುದು ಸರ್ವವಿದಿತ. ಕರ್ನಾಟಕದ ಮಟ್ಟಿಗೆ ಒಕ್ಕಲಿಗರು, ಲಿಂಗಾಯಿತರು ಬಲಾಢ್ಯ ಜಾತಿಗಳಾದಂತೆ ವಿವಿಧ ರಾಜ್ಯದಲ್ಲಿ ವಿವಿಧ ಜಾತಿಗಳನ್ನು ಗುರುತಿಸಬಹುದು. ಇಂತಹ ಸನ್ನಿವೇಶಗಳಲ್ಲಿ ಭಾರತದ ಮಟ್ಟದಲ್ಲಿ ಪ್ರಾಥಮಿಕ ವಿರೋಧಿಗಳನ್ನು ಗುರುತಿಸುವುದು ಕಷ್ಟವಾದರೂ, ಆ ಕೆಲಸ ಮೊದಲು ಮಾಡಬೇಕಾಗಿರುವುದು ಹೋರಾಟಗಾರರ ಕರ್ತವ್ಯವಾಗಿದೆ. ಒಂದಂತೂ ತೀರಾ ವಾಸ್ತವವೆಂದರೆ ಕರ್ನಾಟಕದಲ್ಲಿ ಪರಿಶಿಷ್ಟ ಪಂಗಡದ ಕೆಲವು ಜಾತಿಗಳು ದಲಿತರ ವಿರೋಧಿ ನೆಲೆಯಲ್ಲಿ ವರ್ತಿಸುತ್ತಿರುವುದೂ ಸ್ಪಷ್ಟವಾಗಿದೆ. ಇದು ಒಳ ಜಾತೀಯತೆಯ ಉತ್ಪಾದನೆಯಾಗಿದ್ದು, ಶೋಷಣೆಗೊಳಗಾದ ಎರಡು ಜಾತಿಗಳ ನಡುವೆ ಜರುಗಿದ ಇಂತಹ ಘರ್ಷಣೆಯಿಂದ ಆಗುವ ನಷ್ಟ ಅಪಾರವಾದದ್ದೆಂದು ಎರಡೂ ಜಾತಿಗಳು ಅರ್ಥೈಸಿಕೊಳ್ಳಬೇಕಾಗಿದೆ.

## ಗ್ರಾಮ ಸಮಾಜ : ಲೈಂಗಿಕ ಶೋಷಣೆಯ ಸ್ವರೂಪ

ಖಾಸಗಿ ಆಸ್ತಿ ಒಡೆತನದ ವ್ಯವಸ್ಥೆಯು ಸೃಜಿಸಿದ್ದು ಪುರುಷ ಪ್ರಧಾನ ಮೌಲ್ಯವನ್ನು. ಆದ್ದರಿಂದ ಪ್ರತಿ ಸಮಾಜದಲ್ಲೂ, ಎಲ್ಲ ಕಾಲದಲ್ಲೂ ಮಹಿಳೆ ದ್ವಿತೀಯ ದರ್ಜೆಯ ಪ್ರಜೆಯಾಗಿ ಬಾಳುತ್ತಿದ್ದಾಳೆ. ಭಾರತೀಯ ಸಾಮಾಜಿಕ ವ್ಯವಸ್ಥೆಯೂ ಇದಕ್ಕೆ ಹೊರತಾಗಿಲ್ಲ. ಶತಮಾನಗಳಿಂದ ಗ್ರಾಮಗಳಲ್ಲಿ ನಡೆಯುವ ಮಹಿಳೆಯರ ಲೈಂಗಿಕ ಶೋಷಣೆಗೆ ಆರ್ಥಿಕ, ಸಾಮಾಜಿಕ ಮತ್ತು ಲಿಂಗಾಧಾರಿತ ಹೀಗೆ ಮೂರು ನೆಲೆಗಳನ್ನು ಗುರುತಿಸುತ್ತೇವೆ. ಇದಕ್ಕೆ ಮಹಿಳೆಯರ ಸಾಂಪ್ರದಾಯಿಕ ನಿಲುವು, ಅನಕ್ಷರತೆ, ಮುಗ್ಧತೆಗಳೂ ಕಾರಣವಾಗಿವೆ. "ಮಹಿಳೆಯರ ಪರಿಸ್ಥಿತಿಯನ್ನು ಸುಧಾರಿಸುವ ಎಲ್ಲ ಪ್ರಯತ್ನಗಳೂ ಸಂಪ್ರದಾಯವಾದಿಗಳ ಭಾರಕ್ಕೆ ಸಿಕ್ಕಿ ನುಚ್ಚು ನೂರಾಗುತ್ತಲೇ ಇವೆ. ಸಾರ್ವಜನಿಕವಾಗಿ ಮಹಿಳೆಯರನ್ನು ಹೊಗಳಿಸುವ ಜಾಣತನವನ್ನು ಬಳಸುತ್ತಲೇ ಅವರನ್ನು ಅಲಂಕಾರಿಕ ವಸ್ತುಗಳ ಮಟ್ಟಕ್ಕೆ ಇಳಿಸಲಾಗುತ್ತಿದೆ. ಅವರನ್ನು ಸಂಪೂರ್ಣವಾಗಿ ಬಳಸಿಕೊಳ್ಳುತ್ತಲೇ ಕುಟಿಲೋಪಾಯಗಳ ಮೂಲಕ ಅವರನ್ನು ಕೆಳಕ್ಕೆ ದೂಡಲಾಗುತ್ತದೆ" ಎಂಬ ಅಭಿಪ್ರಾಯ ಗ್ರಾಮೀಣ ಪ್ರದೇಶಕ್ಕೆ ಹೆಚ್ಚು ಅನ್ವಯವಾಗುತ್ತದೆ. ಗ್ರಾಮ ಸಮಾಜದಲ್ಲಿ ಮಹಿಳೆಯರ ಮೇಲಿನ ಲೈಂಗಿಕ ಶೋಷಣೆಯ ಸ್ವರೂಪವನ್ನು, ಧರ್ಮದ ಅಂಗೀಕಾರ ಪಡೆದು ನಡೆಯುವ ಲೈಂಗಿಕ ಶೋಷಣೆ, ಊಳಿಗಮಾನ್ಯ ವ್ಯವಸ್ಥೆಯಲ್ಲಿ ನಡೆಯುವ ಆರ್ಥಿಕ ಶಕ್ತಿಯಿಂದ ಸಂಭವಿಸುವ ಲೈಂಗಿಕ ಶೋಷಣೆ ಮತ್ತು ಕೌಟುಂಬಿಕ ನೆಲೆಯಲ್ಲಿ ನಡೆಯುವ ಪುರುಷರ ದೌರ್ಜನ್ಯಗಳು ಎಂದು ಮೂರು ವಿಧವಾಗಿ ಗುರುತಿಸುತ್ತೇವೆ.

೧. ದೇವರ ಹೆಸರಿನಲ್ಲಿ ನಡೆಯುವ ಶೋಷಣೆಗಳು ಜೋಗತಿ ಪದ್ಧತಿ ಎಲ್ಲಮ್ಮನ (ಶಕ್ತಿ ದೇವತೆ) ಹೆಸರಿನಲ್ಲಿ ನಡೆಯುವ ವೇಶ್ಯಾವೃತ್ತಿಯಾಗಿದೆ. ಅನಕ್ಷರಸ್ಥ ದಲಿತ, ಕೆಳವರ್ಗದ ಜನಾಂಗ ಜೋಗತಿ ಪದ್ಧತಿಯನ್ನು ಮುಗ್ಧವಾಗಿ ಹಾಗೂ ಕೆಲವೊಮ್ಮೆ ಜೀವನಾಧಾರವಾಗಿ ಒಪ್ಪಿಕೊಂಡಿರುವುದು ಕಂಡುಬರುತ್ತದೆ.

೨. ಕೆಳ, ದಲಿತ ವರ್ಗದ ಮಹಿಳೆ ಸುಂದರಳಾಗಿರುವುದು ಮತ್ತು ಅವಳ ಕುಟುಂಬ ಆರ್ಥಿಕವಾಗಿ ದುರ್ಬಲವಾಗಿರುವುದು ಮೇಲ್ವರ್ಗ/ಮೇಲ್ಜಾತಿಯ ಪುರುಷರಿಂದ ನಡೆಯುವ ದೌರ್ಜನ್ಯಗಳಿಗೆ ಕಾರಣಗಳಾಗಿವೆ.

೩. ಕುಟುಂಬದ ಸದಸ್ಯರಾದ ಗಂಡ, ಮಾವ, ಅತ್ತೆ, ನಾದಿನಿ (ಸ್ತ್ರೀರೂಪಿ ಪುರುಷ ಮನಸ್ಸುಗಳು) ಇವರಿಂದ ಆಗುವ ದೌರ್ಜನ್ಯಗಳು. ಇದಕ್ಕೆ ಲೈಂಗಿಕ ಅತೃಪ್ತಿ, ವರದಕ್ಷಿಣೆ, ಮೂಢನಂಬಿಕೆ, ಕುಟುಂಬದಲ್ಲಿ ಹೆಣ್ಣು ದ್ವಿತೀಯ ದರ್ಜೆಯ ನಾಗರಿಕಳೆಂಬ ಸಾಂಪ್ರದಾಯಿಕ ನಿಲುವುಗಳು ಕಾರಣಗಳಾಗಿವೆ.

ಮೊದಲೆರಡು ಸಂದರ್ಭಗಳಲ್ಲಿ ಶೋಷಣೆಗೆ ಒಳಗಾಗುವ ಮಹಿಳೆಯರು ದಲಿತ, ಕೆಳವರ್ಗದ ಮಹಿಳೆಯರಾಗಿದ್ದಾರೆ. ದಲಿತರ ಆರ್ಥಿಕ, ಸಾಮಾಜಿಕ ಅಸಹಾಯಕತೆಗಳು ಇಂತಹ ಶೋಷಣೆಗಳು ನಡೆಯಲು ಕಾರಣಗಳಾಗಿವೆ. ದಲಿತ ಕುಟುಂಬಗಳು ಸವರ್ಣೀಯರ ಹೊಲ, ಗದ್ದೆಗಳಲ್ಲಿ ದುಡಿಯಲು, ತಮ್ಮ ಸ್ತ್ರೀಯರನ್ನು ಬೆತ್ತಲೆ ಸೇವೆ, ಬಸವಿ ಬಿಡುವುದು, ಗೆಜ್ಜೆಪೂಜೆ, ಸಿಡಿ ಹಾಯುವುದು ಮುಂತಾದ ಅನಿಷ್ಟ ಕಾರ್ಯಗಳಿಗೆ ಒಳಪಡಿಸಬೇಕೆಂಬ ನಿಯಮಗಳಿಗೆ ಬದ್ಧರಾಗಿರಬೇಕೆಂಬುದು ಗ್ರಾಮಗಳಲ್ಲಿ ಅಲಿಖಿತ ಶಾಸನವಾಗಿದೆ. ಇಂದು ವಿದ್ಯಾವಂತ ದಲಿತ ಮಹಿಳೆಯೂ ಲೈಂಗಿಕ ಶೋಷಣೆಯ ಆತಂಕದಿಂದ ಮುಕ್ತಳಾಗಿಲ್ಲ. ಬಾನ್ವರಿದೇವಿಯ ಪ್ರಕರಣವನ್ನೇ ನೆನಪಿಸಿಕೊಂಡರೆ ಸಾಕು, ಸವರ್ಣೀಯ ಸಮಾಜ, ಹೊಸ ಎಚ್ಚರ ಪಡೆದು ತಲೆ ಎತ್ತಿ ನಿಲ್ಲುವ ದಲಿತ ಸಮುದಾಯವನ್ನು ಅಂಕಿತದಲ್ಲಿಟ್ಟುಕೊಳ್ಳಲು ದಲಿತ ಮಹಿಳೆಯ ಮೇಲೆ ಲೈಂಗಿಕ ಹಲ್ಲೆ ನಡೆಸುವ ಸಾಧ್ಯತೆಯನ್ನು ಮರೆಯುವಂತಿಲ್ಲ. ಇಂತಹ ಶೋಷಣೆಗಳಿಗೆ ಪರಿಹಾರವೆಂದರೆ, ಶಿಕ್ಷಣ, ಸಂಘಟನೆಯ ಹೊಸ ಎಚ್ಚರ, ಆರ್ಥಿಕ ಸ್ವಾವಲಂಬನೆ ಎಂಬುದನ್ನು ಅಂಬೇಡ್ಕರರು ಬಹು ಹಿಂದೆಯೇ ಸೂಚಿಸಿದ್ದನ್ನು ಪ್ರತಿ ಆಡಳಿತವು ಗಮನಿಸಬೇಕಾಗಿದೆ.

ಗ್ರಾಮೀಣ ಪ್ರದೇಶದಲ್ಲಿ ಕೇಳಿಬರುವ 'ಮಳೆ ಬಂದ್ರೆ ಕೇಡಲ್ಲ, ಮನಿ ಮಗ ಉಂಡ್ರ ಕೇಡಲ್ಲ' ಎಂಬ ಗಾದೆಯಂತೆ, ಒಂದು ಕುಟುಂಬದಲ್ಲಿ ಜನಿಸಿದ ಗಂಡು ಮಗುವಿಗೆ ಕೊಡುವ ಆಹಾರ, ಬಟ್ಟೆ, ಆಟಿಕೆ, ಶಿಕ್ಷಣಗಳಿಂದ ಹೆಣ್ಣು ಮಗುವನ್ನು ವಂಚಿಸಲಾಗುತ್ತದೆ. ಬೆಳೆಯುತ್ತಲೆ ಎಷ್ಟೋ ಬಡ ಕುಟುಂಬದ ಹೆಣ್ಣು ಮಕ್ಕಳು ಮನೆಗೆಲಸದ ಜವಾಬ್ದಾರಿ ಹೊತ್ತು, ಶಿಕ್ಷಣ, ಸ್ವಾತಂತ್ರ್ಯಗಳಿಂದ ದೂರ ಇಡಲ್ಪಡುತ್ತಾರೆ. ಹೆತ್ತ ತಂದೆ ತಾಯಿಗಳಿಂದ ವರದಕ್ಷಿಣೆ ತೆರಲು ಹುಟ್ಟಿದ ಶಾಪವೆಂಬಂತೆ ತಿರಸ್ಕರಿಸಲ್ಪಡುತ್ತಾರೆ. ಮಕ್ಕಳನ್ನು

ಹೆತ್ತು, ಸಾಕಿ, ಮೈಮುರಿಯುವ ಮನೆಗೆಲಸ, ಹೊಲ, ಗದ್ದೆಗಳಲ್ಲಿ ಪುರುಷರಿಗೆ ಸಮಾನವಾಗಿ ನಿಂತು ದುಡಿದರೂ, ಗಂಡಸರಿಗಿಂತ ಕಡಿಮೆ ಕೂಲಿ ತೆಗೆದುಕೊಂಡು ಗಂಡಂದಿರಿಂದ ದೈಹಿಕ ಹಿಂಸೆ, ಉಚ್ಚ ಕುಲದವರಿಂದ ಮಾನಸಿಕ ಹಿಂಸೆಗೆ ಒಳಗಾಗಬೇಕಾದ ಪರಿಸ್ಥಿತಿ ದಲಿತ, ಅಸ್ಪೃಶ್ಯ ಸ್ತ್ರೀಯರದಾಗಿದೆ. ಎಷ್ಟೋ ಬಾರಿ ದಲಿತ ಹೆಂಗಸರು ದಲಿತ ಗಂಡಸರಿಂದಲೇ ಶೋಷಣೆಗೆ ಒಳಗಾಗಬೇಕಾಗುತ್ತದೆ. ಪ್ರೀತಿಯ ನೆಪದಲ್ಲಿ ಮದುವೆಗೆ ಮೊದಲೇ ತಾಯಿಯಾಗಿ, ಪ್ರಿಯಕರನಿಂದ ತಂದೆ ತಾಯಿಯರಿಂದ, ಸಮಾಜದಿಂದ ಬಹಿಷ್ಕಾರಗೊಂಡ (ಹಾವೇರಿ ಜಿಲ್ಲಾ ಬ್ಯಾಡಗಿ ತಾಲೂಕಿನ ಕೆಂಗೊಂಡ ಗ್ರಾಮದಲ್ಲಿ ನಡೆದ ಘಟನೆಯು ಇದಕ್ಕೆ ಸಾಕ್ಷಿಯಾಗಿದೆ) ಅನೇಕ ಅಬಲೆಯರು ಗ್ರಾಮಗಳಲ್ಲಿ ದೊರಕುತ್ತಾರೆ.

### ಭೂಮಿ ಒಡೆತನ

ಭಾರತೀಯ ಸಂದರ್ಭದಲ್ಲಿ, ಆಧುನಿಕಪೂರ್ವ ಕಾಲದಿಂದಲೂ ಭೂಮಿ ಒಡೆತನ ಕೆಲವೇ ಬಲಾಢ್ಯ ಜಾತಿ/ಶಕ್ತಿಗಳ ಪಾಲಾಗಿದೆ. ರಾಜಪ್ರಭುತ್ವ, ಜಮೀನ್ದಾರಿ ಪದ್ಧತಿ, ಬಂಡವಾಳಶಾಹಿ ಪದ್ಧತಿ ಮುಂತಾದ ವ್ಯವಸ್ಥೆಗಳು ಊಳಿಗಮಾನ್ಯ ಸಂಬಂಧಗಳ ಪಳಯುಳಿಕೆಗಳಾಗಿವೆ. ಕೃಷಿಪ್ರಧಾನ ವೃತ್ತಿಪರತೆಯ ಗ್ರಾಮಗಳಲ್ಲಿ ಮೇಲ್ಜಾತಿ/ಸವರ್ಣೀಯರು ಭೂಮಿಯ ಒಡೆತನ ಹೊಂದಿದ್ದು ಹಿಂದುಳಿದ, ದಲಿತವರ್ಗಗಳ ಜನರು ಭೂರಹಿತರಾಗಿದ್ದಾರೆ. ಕೃಷಿ ಭೂಮಿಯಲ್ಲಿ ಕೃಷಿಕೂಲಿಗಳಾಗಿ ದುಡಿಯುವುದು ಇವರ ಉದ್ಯೋಗವಾಗಿದೆ. ನಗರೀಕರಣ, ಜಾಗತೀಕರಣಗಳಂತ ಪ್ರಕ್ರಿಯೆಗಳು ಭಾರತವನ್ನು ಪ್ರವೇಶಿಸುವ ಮೊದಲು ದಲಿತರು ಕೃಷಿಭೂಮಿಯಲ್ಲಿ ಜೀತ ಮಾಡುತ್ತಿದ್ದುದು ದಾಖಲಾಗಿದೆ. ರಾಜಪ್ರಭುತ್ವ ಮತ್ತು ವಸಾಹತುಶಾಹಿ ಕಾಲಘಟ್ಟದಲ್ಲಿ ಆಡಳಿತದಿಂದ ಸಾವಿರಾರು ಎಕರೆ ಇನಾಮಿನ ರೂಪದಲ್ಲಿ ಪಡೆದ ಭೂಮಿಯ ಮಾಲೀಕ ಜಮೀನ್ದಾರ (ಒಡೆಯ) ಎನ್ನಿಸಿಕೊಂಡರೆ, ಕೆಳವರ್ಗದ ರೈತ ಆ ಭೂಮಿಯನ್ನು ಸಾಗುವಳಿ ಮಾಡಿ ಗೇಣಿ ರೈತನಾಗಿದ್ದ. ಭೂ ಒಡೆಯನಲ್ಲಿ ದಲಿತ ಕುಟುಂಬಗಳು ಜೀತ ಮಾಡುತ್ತ ಕೃಷಿಕೂಲಿಗಳಾಗಿದ್ದರೂ ಅವರಿಗೆ ಭೂಮಿಯಿಂದ ಬಂದ ಉತ್ಪನ್ನದ ಮೇಲೆ ಯಾವುದೇ ಹಕ್ಕಿರಲಿಲ್ಲ. ಸ್ವಾತಂತ್ರ್ಯಾನಂತರ, ಆಡಳಿತದಿಂದ ಜಾರಿಯಾದ 'ಇನಾಮಿ ರದ್ಧತಿ ಕಾನೂನು', 'ಭೂ ಸುಧಾರಣಾ ಕಾನೂನು', 'ಜೀತ ಮುಕ್ತಿ ಕಾನೂನು' ಮುಂತಾದ ಕಾನೂನುಗಳಿಂದ ಗೇಣಿ ರೈತರಿಗೆ ಭೂಮಿ ದೊರೆತರೆ, ಜೀತಮುಕ್ತ ದಲಿತ ಯಾವುದೇ ಪ್ರತಿಫಲವಿಲ್ಲದೆ ಆರ್ಥಿಕವಾಗಿ ಅತಂತ್ರನಾದ ಸ್ಥಿತಿ ನಿರ್ಮಾಣವಾಯಿತು. 'ದಲಿತರಿಗೆ ಬೇಕಾಗಿರುವುದು ಊಟ, ಬಟ್ಟೆ, ಭೂಮಿ ಮತ್ತು ಮಳೆ ಬಂದರೂ ಬೀಳದಿರುವ ಮನೆಗಳು'[2] ಎಂಬ ಅಭಿಪ್ರಾಯವನ್ನು ಇಂದಿನ ಆಡಳಿತಗಳು ಗಮನಿಸಬೇಕಾಗಿದೆ. ದಲಿತ ಸ್ವತಂತ್ರನಾದರೆ ಸಾಲದು ಅವನಿಗೆ ಮೂಲಭೂತ ಸೌಕರ್ಯ ದೊರಕಬೇಕು. ಶ್ರೇಣೀಕೃತ ಸಮಾಜದ ಜೀವವಿರೋಧಿ ನಿಲುವುಗಳಿಂದಾಗಿ ದಲಿತರು ಇತ್ತೀಚಿನವರೆಗೂ ಭೂಮಿಯ ಒಡೆತನದಿಂದ ವಂಚಿತವಾಗಿ ಬದುಕಿದ್ದಾರೆ. 'ತಾನು ವ್ಯವಸಾಯ ಮಾಡಬಲ್ಲಷ್ಟು ಭೂಮಿಯಿರುವ ರೈತ ಇತರರನ್ನು ಶೋಷಿಸಲಾರ'[3] ಎಂದಿದ್ದ ಗಾಂಧೀಜಿಯವರ ಅಭಿಪ್ರಾಯವನ್ನು ಮತ್ತು ಭೂ ಒಡೆತನದ ಆರ್ಥಿಕ ಭದ್ರತೆ ಮಾತ್ರ ದಲಿತ, ಹಿಂದುಳಿದವರಿಗೆ ಸಾಮಾಜಿಕ ನ್ಯಾಯ ಒದಗಿಸಬಲ್ಲದು ಎಂಬ ನಿಲುವನ್ನು ಅಧ್ಯಯನ ಸಮರ್ಥಿಸುತ್ತದೆ. ದಲಿತರ ಮೇಲೆ ತೀವ್ರತರವಾಗುತ್ತಿರುವ ಶೋಷಣೆ ಮತ್ತು ದೌರ್ಜನ್ಯಕ್ಕೆ ಅಸಮರ್ಪಕ ಭೂಮಿ ಹಂಚಿಕೆ ವ್ಯವಸ್ಥೆಯೂ ಅಷ್ಟೇ ಕಾರಣ ಎಂಬುದೂ ಸಮಸ್ಯೆಯ ಇನ್ನೊಂದು ಮುಖವಾಗಿದೆ.

### ವೃತ್ತಿ ಮತ್ತು ಆರ್ಥಿಕತೆ

ಗ್ರಾಮಗಳಲ್ಲಿ ಕೆಳವರ್ಗ, ದಲಿತರು ಭೂರಹಿತರಾಗಿದ್ದು ಕೂಲಿ, ಕೃಷಿಕೂಲಿ, ಆಯಗಾರ ವೃತ್ತಿಗಳನ್ನು ಅವಲಂಬಿಸಿದ್ದಾರೆ. ಇತ್ತೀಚೆಗೆ ಕೃಷಿಗೆ ಆಧುನಿಕ ಬೇಸಾಯ ಪದ್ಧತಿ, ರಾಸಾಯನಿಕ ಗೊಬ್ಬರ, ಉತ್ತಮ ತಳಿಯ ಅಂತರಾಷ್ಟ್ರೀಯ ಬೀಜಗಳನ್ನು ಉಪಯೋಗಿಸಿದರೂ ರೈತ ತನ್ನ ನಂಬಿಕೆಗಳನ್ನು ಇನ್ನೂ ಬೇರು ಸಮೇತ ಕಿತ್ತು ಹಾಕಿಲ್ಲ ಹಾಗೂ ಶ್ರಮ ವಿಭಜನೆಯ ತತ್ವಕ್ಕೆ (Principle of Division of labour) ಹೆಚ್ಚಿನ ಪ್ರಾಧಾನ್ಯತೆ ದೊರೆತಿಲ್ಲ. ಗ್ರಾಮ ಸಮಾಜದಲ್ಲಿ ವೃತ್ತಿಗಳು ವರ್ಣ ವ್ಯವಸ್ಥೆಯ ಕಠೋರ ನಿಯಮವನ್ನು ಪಾಲಿಸುವಂತಿದ್ದು ಇತ್ತೀಚೆಗೆ ಕೈಗಾರಿಕೀಕರಣ, ಸರ್ಕಾರದ ಶೈಕ್ಷಣಿಕ ನೀತಿಗಳಿಂದ ಇದು ಬಹಳಷ್ಟು ಶಿಥಿಲಗೊಂಡಿದೆ. ವಿದ್ಯಾವಂತ ಬಡ, ದಲಿತ ಯುವಕರು ತಮ್ಮ ಆಯಾಗಾರ ವೃತ್ತಿಯನ್ನು ತ್ಯಜಿಸಿ ಉದ್ಯೋಗವನ್ನು ಅರಸುತ್ತ ನಗರಕ್ಕೆ ವಲಸೆ ಹೋಗುತ್ತಾರೆ. ಶಿಕ್ಷಣ ಪಡೆದ ಯುವ ಜನಾಂಗ ವ್ಯಾಪಾರ, ನೌಕರಿ, ಸರಕಾರಿ ಉದ್ಯೋಗದತ್ತ ಹೆಚ್ಚಿನ ಒಲವು ತೋರಿಸುತ್ತಿರುವುದು ಇತ್ತೀಚಿನ ಬೆಳವಣಿಗೆಯಾಗಿದೆ.

ಸಾಂಪ್ರದಾಯಿಕ ವೃತ್ತಿಗಿಂತ ಭಿನ್ನವಾದ ವೃತ್ತಿಗಳನ್ನು ಕೈಗೊಂಡವರು ಬದುಕಲ್ಲಿ ಊರ್ಜಿತರಾಗುತ್ತಾರೆ ಮತ್ತು ಪಟ್ಟಣದ ಸಂಪರ್ಕ ಹೊಂದಿದ ವೃತ್ತಿಯಲ್ಲಿದ್ದವರು ಆರ್ಥಿಕವಾಗಿ, ಬೌದ್ಧಿಕವಾಗಿ ಪ್ರಗತಿ ಹೊಂದುತ್ತಾರೆ ಎಂಬ ನಂಬಿಕೆ ಗ್ರಾಮೀಣರಲ್ಲಿದೆ. ದಲಿತರು ಸರಕಾರಿ ಉದ್ಯೋಗದಲ್ಲಿ ಹೆಚ್ಚಿನ ಆಸಕ್ತಿ ಹೊಂದಲು ಗ್ರಾಮೀಣ ಪರಿಸರದ ಜಾತಿನೆಲೆಯ ಶೋಷಣೆ ಮತ್ತು ನಗರದ ಮುಕ್ತ ವಾತಾವರಣ ಕಾರಣಗಳಾಗಿವೆ. 'ತಾನು ಉತ್ಪತ್ತಿ ಮಾಡಿದ ವಸ್ತು ತನ್ನ ಶೋಷಣೆಯ ಸಾಧನವಾದಾಗ, ತನ್ನ ಶ್ರಮದ ಮೇಲಣ ವಾರಸುದಾರಿಕೆಯನ್ನು ಶ್ರಮಿಕ ತಾನೇ ಕಳಕೊಳ್ಳುವ ವಿಪರೀತ ಪರಿಸ್ಥಿತಿ ಉದ್ಭವವಾಗುತ್ತದೆ. ತನ್ನ ಶ್ರಮದ ಉತ್ಪನ್ನವನ್ನು ಮತ್ತಾರದೋ ಎಂಬಂತೆ ಗ್ರಹಿಸುತ್ತಾನೆ' ಎಂಬ ಮಾತಿನಂತೆ ಗ್ರಾಮೀಣ ಶ್ರಮಿಕವರ್ಗ ಗ್ರಾಮ ನಿರಾಕರಿಸಿ ನಗರ ಸೇರುವುದು ಕಂಡುಬರುತ್ತದೆ. ಕೃಷಿಗೆ ಅಳವಡಿಸುವ ಆಧುನಿಕ ವಿಧಾನಗಳಿಂದ ಕೆಲಸವಿಲ್ಲದ ಕೃಷಿ ಕಾರ್ಮಿಕರ ನಗರ ವಲಸೆಯೂ ಸಾಮಾನ್ಯವಾಗಿದೆ. ಭೂಮಿಯನ್ನು ಹೊಂದಿದ ಪ್ರಬಲ ಜಾತಿಯ ಯುವಕರು ಹಣ ಹಾಗೂ ರಾಜಕೀಯ ಬಲದಿಂದ ಮಾದರಿ ಕೃಷಿವಿಧಾನ, ಗ್ರಾಮೀಣ ಕೈಗಾರಿಕೆಗಳನ್ನು ಆರಂಭಿಸುತ್ತಾರೆ. ದೊಡ್ಡ ರೈತರು ಬೆಳೆದ ಬೆಳೆಗಳನ್ನು ನೇರವಾಗಿ ನಗರ ವಾಣಿಜ್ಯ ಕೇಂದ್ರಕ್ಕೆ ಸಾಗಿಸಿ ಮಾರಿದರೆ, ಸಣ್ಣ, ಅತಿಸಣ್ಣ ರೈತರು ದಲ್ಲಾಳಿಗಳ ಮುಖಾಂತರ ಮಾರಿ ಅವರಿಗೆ ಕಮೀಶನ್ (ಗ್ರಾಮ್ಯ ಭಾಷೆಯಲ್ಲಿ ದಲಾಲಿ) ಕೊಡುತ್ತಾರೆ. ಇನ್ನೂ ಕೆಲವು ಗ್ರಾಮಗಳಲ್ಲಿ ದಲ್ಲಾಳಿಗಳು ರೈತರಿಗೆ ಬಡ್ಡಿಗೆ ಹಣಕೊಟ್ಟು ಬೆಳೆ ಬಂದಾಗ ಕಡಿಮೆ ದರಕ್ಕೆ ಅವರ ಮನೆಯ ಹತ್ತಿರವೇ ಬಂದು ಬೆಳೆಗಳ ರೂಪದಲ್ಲಿ ವಸೂಲಿ ಮಾಡುತ್ತ ಶೋಷಿಸುವ ರೀತಿಯೂ ಇದೆ. ಆದರೆ ಪ್ರಬಲ ರೈತರು ತಾವು ಬೆಳೆದ ಬೆಳೆಗಳನ್ನು (ಉದಾ: ಅಡಿಕೆ, ತೆಂಗು, ಈರುಳ್ಳಿ ಇತ್ಯಾದಿ) ಕಡಿಮೆ ದರವಿದ್ದಾಗ ಹಾಗೆಯೇ ತೆಗೆದಿಟ್ಟು ದರ ಹೆಚ್ಚಾದಾಗ ಮಾರಿ ಲಾಭ ಮಾಡಿಕೊಳ್ಳುವ ಜಾಣಾಕ್ಷತನವನ್ನು ಹೊಂದಿದ್ದಾರೆ. ಕೃಷಿಯ ಉತ್ಪಾದನೆ, ಗ್ರಾಮೀಣ ಕೈಗಾರಿಕೆಗಳು ಶ್ರೀಮಂತ ಕೃಷಿಕರನ್ನು (ಮೊದಲು ಇವರು ಜಮೀನ್ದಾರರಾಗಿದ್ದುದು ಇಲ್ಲಿ ಗಮನೀಯ) ಬಂಡವಾಳಶಾಹಿಗಳನ್ನಾಗಿ ಮಾಡಿವೆ. ರೈತ ಸಂಘಟನೆ, ಹೋರಾಟಗಳು ಇವರ ನಿಯಂತ್ರಣದಲ್ಲಿದ್ದು ಸರ್ಕಾರದ ಎಲ್ಲ ಕೃಷಿ ಉದ್ಧಾರದ ಕಾನೂನುಗಳು, ಸೌಲಭ್ಯಗಳು ದೊಡ್ಡ ರೈತರಿಗೆ ಪೂರಕವಾಗಿವೆ.

ಗ್ರಾಮಗಳಲ್ಲಿ ಹಲವಾರು ಶೋಷಣೆಯ ವಿಧಾನಗಳನ್ನು ಕಾಣುತ್ತೇವೆ. ಬಡರೈತರನ್ನು ಅವನದೇ ಜಾತಿಯ ದೊಡ್ಡ ರೈತ ಆರ್ಥಿಕ ಸಹಾಯ ಮಾಡುವ ನೆಪದಲ್ಲಿ, ದಲಿತರನ್ನು ಸವರ್ಣೀಯರು ದುಡಿಸಿಕೊಳ್ಳುವ ರೂಪದಲ್ಲಿ, ಶ್ರೀಮಂತ ಎಲ್ಲ ಜಾತಿಯ ಜನರಿಗೆ ಬಡ್ಡಿಗೆ ಹಣಬಿಟ್ಟು ಬಂಡವಾಳವನ್ನು ಗಳಿಸಿಕೊಳ್ಳುವ ರೀತಿಯಲ್ಲಿ ಕಾಣುತ್ತೇವೆ. ಹೀಗೆ ಅಶಕ್ತರ ಶ್ರಮ, ಹಣ, ಆಸ್ತಿ ಮುಟ್ಟುಗೋಲು, ಬಹಿಷ್ಕಾರ, ದೌರ್ಜನ್ಯಗಳ ರೂಪದಲ್ಲಿ ನಿರಂತರ ಶೋಷಣೆ ನಡೆಯುತ್ತದೆ. ಗ್ರಾಮದ ಪ್ರಬಲ ಜಾತಿಯ ಕೃಷಿಕನ ಜಮೀನುಗಳಲ್ಲಿ ದುಡಿಯುವ ಆಳು, ಕೂಲಿಗಳು ಕೆಳವರ್ಗದ ದಲಿತ ಕುಟುಂಬಕ್ಕೆ ಸೇರಿದವರಾಗಿರುತ್ತಾರೆ. ಕೃಷಿಕನ ಮನೆಯೊಳಗೆ ಕೆಲಸ ಮಾಡುವ ಆಳು ಶೂದ್ರನಾಗಿರುತ್ತಾನೆ. ಕೃಷಿಕ ಅಥವಾ ಗೌಡನಿಗೆ ಅನ್ನ ಬೇಯಿಸುವ, ಅವನ ಮಕ್ಕಳನ್ನು ಹೆತ್ತು ಸಾಕುವ ಹೆಂಡತಿ ಅವನದೇ ಜಾತಿಯ ಹೆಣ್ಣಾಗಿದ್ದು ಈ ಮೂವರೂ ಊಳಿಗಮಾನ್ಯ ವ್ಯವಸ್ಥೆಯ ಶೋಷಣೆಗೆ ಒಳಗಾಗಿದ್ದರೂ, ಇವರ ಶೋಷಣೆಯ ತೀವ್ರತೆಯಲ್ಲಿ ವ್ಯತ್ಯಾಸವಿರುತ್ತದೆ. ಮೂಲತಃ ಇವರಲ್ಲಿ ಒಗ್ಗಟ್ಟು ಇಲ್ಲದಿರುವುದು ಇವರ ವ್ಯವಸ್ಥಿತ ಶೋಷಣೆಗೆ ಕಾರಣವಾಗಿದೆ. ಇಲ್ಲಿ ಇನ್ನೊಂದು ಕಠೋರವಾದ ವಾಸ್ತವಿಕ ಅಂಶವೆಂದರೆ, ಗೌಡನಿಂದ ಶೋಷಣೆಗೊಳಪಟ್ಟ ಅವನ ಹೆಂಡತಿ ಹಲವು ಸಂದರ್ಭಗಳಲ್ಲಿ ಗೌಡತಿಯಾಗಿ ಉಳಿದಿಬ್ಬರನ್ನು ಶೋಷಿಸುವುದು, ಇಲ್ಲವೆ ಮನೆಯೊಳಗಿನ ಶೂದ್ರ ಆಳು ಮನೆ ಹೊರಗಿನ ಆಳಾದ ದಲಿತನ ಪಾಲಿಗೆ ಮರಿಗೌಡನಾಗಿ ಶೋಷಿಸುವುದೂ ಆಗಿದೆ. ಈ ಮೂರೂ ಜನ ಶೋಷಿತರು ಸಂಘಟನೆಗೊಂಡು ವ್ಯವಸ್ಥೆಯನ್ನು ಎದುರಿಸಿ ನಿಲ್ಲುವ ಚಳುವಳಿಗಳ ಅವಶ್ಯಕತೆ ಈಗ ಬೇಕಾಗಿದೆ.

**ಧಾರ್ಮಿಕ ಆಚರಣೆಗಳು**

ಗ್ರಾಮ ಸಮಾಜದಲ್ಲಿ ಶ್ರೇಣೀಕೃತ ಜಾತಿ ವ್ಯವಸ್ಥೆ ಇದ್ದಂತೆ, ಅವರು ಆರಾಧಿಸುವ ದೇವರಲ್ಲಿಯೂ ಶ್ರೇಣೀಕೃತ ದೇವತೆಗಳು ಕಾಣಿಸಿಕೊಳ್ಳುತ್ತವೆ. ಗ್ರಾಮ ಸಮಾಜದಲ್ಲಿ ಜಾತಿಗೊಂದು, ಕುಟುಂಬಕ್ಕೊಂದು ದೇವರು, ದೇವಸ್ಥಾನಗಳಿದ್ದು ಅವು ಧಾರ್ಮಿಕ ಸಂಪ್ರದಾಯ, ನಂಬಿಕೆ, ನಿಯಮಗಳ ಬೇರುಗಳನ್ನು ಹೊಂದಿವೆ. ದಲಿತರು ಸವರ್ಣೀಯರ ದೇವಾಲಯಗಳನ್ನು ಪ್ರವೇಶಿಸದಂತೆ ಈ ನಂಬಿಕೆಗಳು ಆಳವಾಗಿ ಬೇರೂರಿ ಕೆಳವರ್ಗಗಳ ಧಾರ್ಮಿಕ ನಂಬಿಕೆ, ಭಾವನೆಗಳನ್ನು ನಿಯಂತ್ರಿಸುತ್ತವೆ. ಹಿಂದುಳಿದವರು, ದಲಿತರನ್ನು

ಧಾರ್ಮಿಕ ಶಿಕ್ಷಣದಿಂದ ದೂರವಿಟ್ಟು ಧಾರ್ಮಿಕ ಕೀಳರಿಮೆಯಿಂದ ಬಳಲುವಂತೆ ಈ ವ್ಯವಸ್ಥೆ ನೋಡಿಕೊಂಡಿದೆ. ಮೇಲ್ಜಾತಿಯವರು ಆರ್ಯ ದೇವತೆಗಳಾದ ವಿಷ್ಣು, ಶಿವ, ಇಂದ್ರ ಮುಂತಾದವರನ್ನು ಪೂಜಿಸಿದರೆ, ಕೆಳವರ್ಗದ ಜನರು ಎಲ್ಲಮ್ಮ, ಮಾರಮ್ಮ, ಚಂಡಿ, ಮದ್ದೂರಮ್ಮ, ಮಹಾಮಾಯಿ, ಜಟಿಂಗ, ಭೂತಪ್ಪ ಇತ್ಯಾದಿ ದೇವರುಗಳನ್ನು ಪೂಜಿಸುತ್ತಾರೆ. ಗ್ರಾಮೀಣ ಕೆಳಸ್ತರದ ದೇವತೆಗಳಲ್ಲಿ ಸ್ತ್ರೀ ದೇವತೆಗಳೆ ಹೆಚ್ಚು. ಅದರಲ್ಲೂ ಇವರು ಪ್ರಕೃತಿಗೆ ಬಹಳಷ್ಟು ಹತ್ತಿರದಲ್ಲಿ ಜೀವಿಸುವವರಾದ್ದರಿಂದ ಪ್ರಕೃತಿ ಪೂಜನೀಯ. ಇವರಲ್ಲದೆ ಸೂರ್ಯ, ಚಂದ್ರ, ತಾರೆ, ಮಳೆ, ಸಿಡಿಲು, ಮಿಂಚು ಶಕ್ತಿರೂಪದಲ್ಲಿ ಪೂಜನೀಯವಾಗಿವೆ. ಗ್ರಾಮಗಳಲ್ಲಿ ಹಬ್ಬ ಮತ್ತು ಜಾತ್ರೆ ಉತ್ಸವಗಳನ್ನು ಸಾಮೂಹಿಕವಾಗಿ ಆಚರಿಸುವ ಸಂಪ್ರದಾಯವಿದೆ. ಇಂತಹ ಸಮಾರಂಭಗಳಲ್ಲಿ ಪುರೋಹಿತವರ್ಗ, ಪ್ರಬಲ ಜಾತಿಗಳು ಪ್ರಮುಖ, ಸಕ್ರಿಯ ಪಾತ್ರ ವಹಿಸುತ್ತವೆ. ವಂಶಪಾರಂಪರ್ಯವಾಗಿ ಬಂದ ದೇವರ ಸೇವಾಕಾರ್ಯದಲ್ಲಿ ಶೂದ್ರರು, ಶೂದ್ರಾತಿಶೂದ್ರರು ಭಾಗವಹಿಸಿದರೂ, ಅವರಿಗೆ ಅರ್ಚನೆಯಲ್ಲಿ, ದೇವಾಲಯಗಳ, ಪೂಜಾ ಸ್ಥಳ/ಕ್ಷೇತ್ರಗಳ ಪ್ರವೇಶದಲ್ಲಿ ಸಾರ್ವತ್ರಿಕವಾದ ಅಧಿಕಾರ ಇರುವುದಿಲ್ಲ. ತಮ್ಮ ಜಾತಿ, ಪಂಗಡಗಳ ದೇವತಾ ಕಾರ್ಯದಲ್ಲಿ ಇವರಿಗೆ ಹೆಚ್ಚು ಸ್ವಾತಂತ್ರ್ಯವಿದ್ದರೂ ಬಡತನ, ಮೂಢನಂಬಿಕೆಗಳಿಂದ ಇವರಿನ್ನೂ ಹೊರಬಂದಿಲ್ಲ.

## ನ್ಯಾಯ ವ್ಯವಸ್ಥೆ

ಗ್ರಾಮ ಸಮಾಜ ಕುರಿತಂತೆ 'ಗ್ರಾಮರಾಜ್ಯ ರಾಮರಾಜ್ಯ' ಎಂಬ ಮಾತೊಂದಿದೆ. ಆದರೆ ರಾಮರಾಜ್ಯ ಯಾರಿಗೆ ಎಂಬ ಪ್ರಶ್ನೆಯ ಹಿಂದೆ, ರಾಮರಾಜ್ಯವೆಂಬುದು ಆರ್ಥಿಕ ಬಲ ಹೊಂದಿರುವ ಮೇಲ್ಜಾತಿ, ವರ್ಗಕ್ಕೆ ಸಂಬಂಧವಿರುವ ಅಂಶ ಎಂಬುದು ಸ್ಪಷ್ಟವಾಗಿ ಗೋಚರವಾಗುತ್ತದೆ. ಗ್ರಾಮ ಎಂದೊಡನೆ ಭಾರತೀಯ ಸಾಂಪ್ರದಾಯಿಕ ನ್ಯಾಯವ್ಯವಸ್ಥೆಯ ಸಂಸ್ಥೆಯಾದ ಪಂಚಾಯಿತಿ ನೆನಪಿಗೆ ಬರುತ್ತದೆ. ಈಗಿನ ಪೊಲೀಸ್ ಠಾಣೆ, ಕೋರ್ಟು ಮುಂತಾದ ಆಡಳಿತ ಅಂಗಗಳ ಕಾರ್ಯ ನಿರ್ವಹಿಸುತ್ತಿದ್ದ ಪಂಚಾಯಿತಿ ಪ್ರಬಲ ಜಾತಿ, ವರ್ಗಗಳ ಬಿಗಿ ಹಿಡಿತದಲ್ಲಿದ್ದುದು ಕಂಡುಬರುತ್ತದೆ. ಜಾತಿ ಮತ್ತು ಲಿಂಗಾಧಾರಿತ ಶ್ರೇಣೀಕೃತ ವ್ಯವಸ್ಥೆಯನ್ನು ಕಾಯ್ದುಕೊಂಡು ಬರುವ ಪಂಚಾಯಿತಿ ಎಂಬ ಸಂಸ್ಥೆ ಆಧುನಿಕ ಜನತಂತ್ರದ, ಸಮಾಜವಾದದ ಯಾವ ಮೌಲ್ಯಗಳನ್ನೂ ಪ್ರತಿಪಾದಿಸುವುದಿಲ್ಲ. ನ್ಯಾಯ ಪಂಚಾಯಿತಿ ವ್ಯವಸ್ಥೆ ಸದಾ ಸವರ್ಣೀಯರ ಹಿತಕಾಯುವ ಮತ್ತು ಕೆಳವರ್ಗಗಳ ಸಾಮಾಜಿಕ ಮತ್ತು ಆರ್ಥಿಕ ಹಕ್ಕುಗಳನ್ನು ನಿಗ್ರಹಿಸುವ ಕೆಲಸದಲ್ಲಿ ನಿರತವಾಗಿರುತ್ತದೆ ಎಂಬುದು ಅಧ್ಯಯನದ ನಿಲುವು ಆಗಿದೆ. "ಸಾಂಪ್ರದಾಯಿಕ ಭಾರತೀಯ ನ್ಯಾಯ ಎಂದರೆ ಮೂಲತಃ ಜಾತಿ ಪದ್ಧತಿಯ ಕ್ರೌರ್ಯವನ್ನು ಒಪ್ಪಿಕೊಂಡ ನ್ಯಾಯ. ಅದು ನಿಂತಿರುವುದು ಒಮ್ಮತದ ಮೇಲೆ. ಈ ಒಮ್ಮತದ ಪರಿಕಲ್ಪನೆಯೇ ಆಧುನಿಕ ಜನತಂತ್ರಕ್ಕೆ ವಿರೋಧಿಯಾದದ್ದು, ಎಂದೇ ಅಂಬೇಡ್ಕರರು ನ್ಯಾಯಕ್ಕೆ ಬುನಾದಿಯಾಗಿ ಹಳ್ಳಿಯನ್ನು ಒಪ್ಪಿಕೊಳ್ಳಲಿಲ್ಲ."[10] ಗ್ರಾಮೀಣ ನ್ಯಾಯ ವ್ಯವಸ್ಥೆಯಲ್ಲಿ ಜರುಗುವ ವಿಚಾರಣೆ, ತೀರ್ಮಾನ, ಶಿಕ್ಷಾವಿಧಿಗಳಿಗೆ ದಲಿತರು, ಹಿಂದುಳಿದವರು, ಮಹಿಳೆಯರು ತಲೆ ಬಾಗುವಂತೆ ಮಾಡುವ ಸವರ್ಣೀಯರ, ಪುರುಷರ, ಆರ್ಥಿಕ ಬಲಾಢ್ಯರ ಬಿಗಿ ಹಿಡಿತ ಪಂಚಾಯಿತಿಯಲ್ಲಿರುವುದು ದುರಂತವಾಗಿದೆ. ಇದೇ ಕಾರಣದಿಂದ ಪರಂಪರಾಗತ ಪಂಚಾಯಿತಿಗಳ ಅಧಿಕಾರದ ವ್ಯಾಪ್ತಿಯನ್ನು ಮೊಟಕುಗೊಳಿಸಿ ನ್ಯಾಯಾಲಯಗಳ ಅಧಿಕಾರವನ್ನು ಭದ್ರಪಡಿಸಿರುವುದು ಕಂಡುಬರುತ್ತದೆ. ಇಂದಿನ ಗ್ರಾಮಗಳಲ್ಲಿ, ನ್ಯಾಯ ಪಂಚಾಯಿತಿಗಳಲ್ಲಿ ನ್ಯಾಯ ತೀರ್ಮಾನ ಕಡಿಮೆಯಾಗುತ್ತಿದ್ದು, ಆ ಸ್ಥಾನವನ್ನು ಗ್ರಾಮ ಪಂಚಾಯಿತಿಗಳು ಆಕ್ರಮಿಸುತ್ತಿರುವುದು ಇನ್ನೊಂದು ಆತಂಕಕಾರಿ ವಿಚಾರವಾಗಿದೆ.

## ಶಿಕ್ಷಣ ಮತ್ತು ಸರಕಾರಿ ಯೋಜನೆಗಳು

ರಾಜಪ್ರಭುತ್ವ ಕಾಲದಿಂದ ಸಾಂಪ್ರದಾಯಿಕ ನೆಲೆಯಲ್ಲಿಯೇ ಉಳಿದಿದ್ದ ಶಿಕ್ಷಣವು ವಿದೇಶಿಯರ ಆಡಳಿತದಲ್ಲಿ ಸಾರ್ವತ್ರಿಕವಾಯಿತು. ಶೂದ್ರರಿಗೇ ನಿರಾಕೃತವಾಗಿದ್ದ ಶಿಕ್ಷಣ ದಲಿತರಿಗೆ ಕನಸಿನಲ್ಲಿಯೂ ಪಡೆಯಲಾಗದ ವಿಷಯವಾಗಿತ್ತು. ಸ್ವಾತಂತ್ರ್ಯಾನಂತರ ಬಂದ ಸರಕಾರಗಳು ಸರ್ವರಿಗೂ ಶಿಕ್ಷಣದ ಹಕ್ಕನ್ನು ನೀಡಿದಾಗ ಪ್ರತಿ ಗ್ರಾಮಗಳಲ್ಲಿಯೂ ಶಾಲೆಗಳು ಸ್ಥಾಪಿಸಲ್ಪಟ್ಟವು. ಮೊದಮೊದಲು ಸರಕಾರಿ ಶಾಲೆಗಳು ಮಾತ್ರ ಅಸ್ತಿತ್ವದಲ್ಲಿದ್ದು ಅವು ಸವರ್ಣೀಯರನ್ನು ಮಾತ್ರ ಸೆಳೆಯುತ್ತಿದ್ದುದು ಕಂಡುಬರುತ್ತದೆ. ಸವರ್ಣೀಯರಲ್ಲಿ ಆರ್ಥಿಕಬಲ ಇರುವ ಕುಟುಂಬಗಳ ಮಕ್ಕಳು ಶಾಲಾ ಪ್ರವೇಶ ಪಡೆಯುತ್ತಿದ್ದರೆ, ಕೆಳ, ದಲಿತ ವರ್ಗದ ಮಕ್ಕಳು ಬಾಲಕಾರ್ಮಿಕರಾಗಿ ಕೂಲಿ, ಕೃಷಿಕೂಲಿ ಮಾಡುತ್ತಿದ್ದ ವಿಚಾರ ತಿಳಿದುಬರುತ್ತದೆ. ನಂತರ

ನಡೆದ ರಾಜಕೀಯ, ಸಾಮಾಜಿಕ ಪಲ್ಲಟಗಳಿಂದ ಅವರು ಶಾಲೆಯಲ್ಲಿ ಪ್ರವೇಶ ಪಡೆದಾಗ ಸವರ್ಣೀಯರಿಂದ ವಿರೋಧವನ್ನು ಎದುರಿಸಬೇಕಾಯ್ತು. ಇತ್ತೀಚೆಗೆ ಕಾನೂನಿನ ಭಯದಿಂದ ಅವರ ಮೇಲಿನ ದೈಹಿಕ, ಮಾನಸಿಕ ದೌರ್ಜನ್ಯಗಳು ಕಡಿಮೆಯಾದರೂ, ಗ್ರಾಮಗಳಲ್ಲಿ ಸವರ್ಣೀಯರ ಸಮಾನ ಶೈಕ್ಷಣಿಕ ಹಕ್ಕು ಬಾಧ್ಯತೆಗಳು ದೊರಕಿಲ್ಲವೆಂದೇ ಹೇಳಬೇಕಾಗಿದೆ. ಬೋಧನೆ ಮತ್ತು ಬಿಸಿಯೂಟದ ಸಂದರ್ಭದಲ್ಲಿ ದಲಿತ, ಕೆಳಜಾತಿಯ ಮಕ್ಕಳು ಪ್ರತ್ಯೇಕವಾಗಿ ಕುಳಿತು ಶಿಕ್ಷಣ ಮತ್ತು ಊಟ ಪಡೆಯುವುದು ಕಂಡುಬರುತ್ತದೆ. ಬಿಸಿಯೂಟ ತಯಾರಿಕೆ, ಬಡಿಸುವಂತ ಕಾರ್ಯವ್ಯವಸ್ಥೆಯಲ್ಲಿ ಈ ಸಮುದಾಯದ ಜನರನ್ನು ಅನೇಕ ಗ್ರಾಮಗಳಲ್ಲಿ ಕಾನೂನಿನ ಕಣ್ಣು ತಪ್ಪಿಸಿ ಹೊರಗಿಡಲಾಗಿದೆ. ಸ್ವಾತಂತ್ರ್ಯ ಸಿಕ್ಕು ಆರು ದಶಕಗಳು ಕಳೆದರೂ ಇಂದಿಗೂ ನಾವು ಸಂಪೂರ್ಣ ಸಾಕ್ಷರತೆಯನ್ನು ಗಳಿಸುವಲ್ಲಿ ವಿಫಲರಾಗಿದ್ದೇವೆ. ಇದಕ್ಕೆ ಆಡಳಿತಗಳ ಇಚ್ಛಾಶಕ್ತಿಯ ಕೊರತೆ, ನಿರ್ಲಕ್ಷ್ಯ ಕಾರಣವೆಂದು ಕಂಡುಕೊಳ್ಳಬಹುದು. ಸಮವಸ್ತ್ರ, ಪಠ್ಯಪುಸ್ತಕ ವಿತರಣೆ, ಶಿಕ್ಷಕರು, ಆಟದ ಮೈದಾನ, ಶೌಚಾಲಯಗಳಂತಹ ಸೌಲಭ್ಯಗಳ ಕೊರತೆ ಅನೇಕ ಗ್ರಾಮೀಣ ಶಾಲೆಗಳಲ್ಲಿ ಕಂಡು ಬಂದರೂ, ಬಹು ಜನಪ್ರಿಯತೆ ಪಡೆಯಲು ಮಕ್ಕಳಿಗೆ ಸೈಕಲ್ ವಿತರಣೆಯಂತಹ ಯೋಜನೆಗಳು ಜಾರಿಗೊಳ್ಳುತ್ತಲಿವೆ. ಇನ್ನು ಶಿಕ್ಷಣ ಪಡೆದ ಕೆಳವರ್ಗದವರ ಪಾಡು ಹೇಳತೀರದಾಗಿದೆ. ದಲಿತ ಜನಾಂಗದಲ್ಲಿ ಶಿಕ್ಷಣ ಪಡೆದವರಿಗಿಂತ ಪಡೆಯದವರ ಸಂಖ್ಯೆ ಹೆಚ್ಚಾಗಿದೆ. ಶಿಕ್ಷಣ ಪಡೆದ ಮೊದಲ ತಲೆಮಾರಿನ ದಲಿತರ ಸಮಸ್ಯೆಗಳು ಮತ್ತು ಸಂದಿಗ್ಧತೆಗಳು ಕೂಡ ತುಂಬ ಸಂಕೀರ್ಣವಾದವುಗಳಾಗಿವೆ. ‘ಆದಿ ಜನಾಂಗದೋನು ಓದಿ ಅಲ್ಪಸ್ವಲ್ಪ ಪ್ರಜ್ಞೆ ಪಡೆಯೋದು ಅಪರೂಪ. ಪಡೆದರೆ ಅದೊಂದು ರೌರವ ನರಕ ಅವನಿಗೆ ಕಾಣುತ್ತೆ. ತನ್ನ ಸಂಬಂಧಿಗಳು ಹಸಿವಿನಿಂದ ಸಾಯೋದು, ಬೀದೀಲಿ ಭಿಕ್ಷೆ ಬೇಡೋದು, ಜೀವಂತ ಸುಡಿಸಿಕೊಳ್ಳೋದು, ಪಶು ಥರ ದುಡಿಯೋದು. ಅವ ದುಡಿಯೋದು ಅವಗೆ ದಕ್ಕದಿರೋದು’ ಓರ್ವ ವಿದ್ಯಾವಂತ ಸಂವೇದನಾಶೀಲ ದಲಿತನ ನೋವಿನ ಸಂಕೀರ್ಣತೆಗಳು ಇಲ್ಲಿವೆ. ಮೊದಲ ತಲೆಮಾರಿನ ನಂತರ ಬಂದ ದಲಿತರು ಆಧುನಿಕ ಶಿಕ್ಷಣದಿಂದ ಆರ್ಥಿಕ, ಸಾಮಾಜಿಕ ಎಚ್ಚರ ಪಡೆದುದನ್ನು ಅಲ್ಲಗಳೆಯುವಂತಿಲ್ಲ. ನಗರಗಳು ಇಂದು ವೃತ್ತಿಪರ ಶೈಕ್ಷಣಿಕ ಕ್ಷೇತ್ರಗಳ ದೈತ್ಯ ಕೇಂದ್ರಗಳಾಗಿ ಬೆಳೆಯುತ್ತಿವೆ. ಖಾಸಗೀಕರಣದತ್ತ ಚಲಿಸುತ್ತಿರುವ ಶೈಕ್ಷಣಿಕ ಕ್ಷೇತ್ರ ಇಂದು ಡೊನೇಶನ್, ಶುಲ್ಕ ಇತ್ಯಾದಿಗಳಿಂದ ಕೆಳವರ್ಗಗಳಿಗೆ ತಲುಪದಂತಾಗಿದೆ. ವೈದ್ಯಕೀಯ, ದಂತ ವೈದ್ಯಕೀಯ, ಇಂಜನಿಯರಿಂಗ್, ಬ್ಯಾಂಕಿಂಗ್, ವಾಣಿಜ್ಯ ಮುಂತಾದ ವಿದ್ಯಾಲಯಗಳನ್ನು ಸ್ಥಾಪಿಸಿ ನಡೆಸುವಲ್ಲಿ ಜಾತೀಯ ಶಿಕ್ಷಣ ಸಂಸ್ಥೆಗಳು, ಮಠಗಳು ಸ್ಪರ್ಧಾತ್ಮಕವಾಗಿ ಸಾಗುತ್ತ, ಶಿಕ್ಷಣವು ತನ್ನ ಮೂಲ ಉದ್ದೇಶದಿಂದ ದೂರ ಸರಿದು ವ್ಯಾಪಾರೀಕರಣಗೊಂಡಿದೆ.

ಗ್ರಾಮೋದ್ಧಾರವನ್ನು ಉಸಿರಾಗಿ ಹೊಂದಿದ್ದ ಗಾಂಧೀಜಿಯವರ ಕನಸನ್ನು ನನಸಾಗಿಸಲು ಸ್ವಾತಂತ್ರ್ಯೋತ್ತರ ಸರಕಾರಗಳು ಗ್ರಾಮೀಣ ಮತ್ತು ನಗರ ಪ್ರದೇಶದ ಎಲ್ಲ ವರ್ಗ, ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಅನೇಕ ಯೋಜನೆಗಳನ್ನು ರೂಪಿಸಿವೆ. ಇವುಗಳ ಅನುಷ್ಠಾನಕ್ಕೆ ಪ್ರಯತ್ನಿಸಿರುವುದು ಹಾಗೂ ಪ್ರಯತ್ನಿಸುತ್ತಿರುವುದು ಕಂಡುಬರುತ್ತದೆ. ಶಿಕ್ಷಣ, ಸಹಕಾರ, ವಿದ್ಯುತ್, ಕೃಷಿ, ನೀರಾವರಿ, ಬರ ಕಾಮಗಾರಿ, ಮಕ್ಕಳ-ಮಹಿಳಾ ಕಲ್ಯಾಣ ಮುಂತಾದ ವಿವಿಧ ಕ್ಷೇತ್ರಗಳನ್ನು ಪರಿಗಣಿಸಿರುವ ಅಭಿವೃದ್ಧಿ ಯೋಜನೆಗಳಲ್ಲಿ ಹಲವು ಅನುಷ್ಠಾನಗೊಂಡರೆ, ಉಳಿದವು ಅಪೂರ್ಣವಾಗಿವೆ. ಯಾವುದೇ ಒಂದು ಯೋಜನೆಯು ಸರಕಾರದಲ್ಲಿ ಅನುಮೋದನೆಯನ್ನು ಪಡೆದು ಅನುಷ್ಠಾನಗೊಳ್ಳುವ ಹಂತದಲ್ಲಿರುವಾಗ ಶಾಸಕಾಂಗ, ಕಾರ್ಯಾಂಗದಲ್ಲಿ ಶಕ್ತಿಶಾಲಿಗಳಾಗಿರುವ ಮೇಲ್ವರ್ಗ/ಮೇಲ್ಜಾತಿಯ ಪರಿವಾರಗಳು ಅದರ ಫಲಾನುಭವಿಗಳಾಗುವುದು, ಅದರ ಫಲ ಕೆಳವರ್ಗದವರನ್ನು ತಲುಪದಂತೆ ನೋಡಿಕೊಳ್ಳುವುದು ಯೋಜನೆಗಳ ವಿಫಲತೆಯೆಂದು ಪರಿಗಣಿಸಬಹುದು. ಪೂರ್ಣಗೊಂಡಿರುವ ಯೋಜನೆಗಳ ಫಲಾನುಭವಿಗಳು ಬಹುತೇಕ ಮೇಲ್ವರ್ಗದ, ರಾಜಕೀಯ ಪಕ್ಷಗಳ ಕಾರ್ಯಕರ್ತರು ಮತ್ತು ಅನುಯಾಯಿಗಳೂ ಆಗಿರುವುದು ವಿಶೇಷವಾಗಿದೆ. ಇಂತಹ ಅಭಿವೃದ್ಧಿ ಯೋಜನೆಗಳ ದಲಿತ, ಹಿಂದುಳಿದವರ ಕೋಟಾದಲ್ಲಿ ಪಾಲು ಪಡೆಯುವ ಹಿಂದುಳಿದ, ಪರಿಶಿಷ್ಟರು ಸಹ ಆರ್ಥಿಕವಾಗಿ, ರಾಜಕೀಯವಾಗಿ ಬಲಶಾಲಿಗಳೇ ಆಗಿರುತ್ತಾರೆ.

### ಡ. ಬದಲಾವಣೆಯತ್ತ ಗ್ರಾಮ ಸಮಾಜ : ಸ್ವಾಗತಗಳು, ಆತಂಕಗಳು

ಗ್ರಾಮ ಸಮಾಜ ನಿರಂತರವಾಗಿ ಬದಲಾವಣೆಗೆ ಒಳಪಡುತ್ತಿದೆ. ವಸಾಹತುಶಾಹಿ ಆಡಳಿತದ ಸಂದರ್ಭದಲ್ಲಿ ಹಾಗೂ ಇಂದಿನ ಜಾಗತೀಕರಣದ ಹೊತ್ತಿನಲ್ಲಿ ಇದನ್ನು ಗುರುತಿಸಬಹುದಾಗಿದೆ. ಈ

ಬದಲಾವಣೆಗೆ ಮೂಲ ಕಾರಣ ಸಾಮ್ರಾಜ್ಯಶಾಹಿ ದೇಶಗಳ ಆರ್ಥಿಕ ಆಕ್ರಮಣ ಎನ್ನುವುದು ಮುಚ್ಚಿಟ್ಟ ಸತ್ಯವಾಗಿದೆ. ಇವು ತೃತೀಯ ಜಗತ್ತಿನ ರಾಷ್ಟ್ರಗಳನ್ನು ತಮ್ಮ ಮಾರುಕಟ್ಟೆಗಳಾಗಿ ಮಾಡಿಕೊಂಡು, ಆರ್ಥಿಕ, ಅಧಿಕಾರ ಕೇಂದ್ರೀಕರಣ ಮಾಡಿಕೊಂಡು, ಬಡ ಅಭಿವೃದ್ಧಿಶೀಲ ರಾಷ್ಟ್ರಗಳ ಸಮಾಜವನ್ನು ತಲ್ಲಣಗೊಳಿಸಿವೆ. ಬದಲಾಗುತ್ತಿರುವ ಗ್ರಾಮ ಸಮಾಜದ ಪ್ರವೃತ್ತಿಗಳನ್ನು ಹಲವು ಅಂಶಗಳ ಆಧಾರದ ಮೇಲೆ ಗುರುತಿಸಬಹುದಾಗಿದೆ. ನಗರ ಸಂಪರ್ಕದಿಂದ ಉಂಟಾಗುವ ಸೌಲಭ್ಯಗಳು, ಬದಲಾದ ಕುಟುಂಬ ವ್ಯವಸ್ಥೆ, ಮನುಷ್ಯ ಸಂಬಂಧಗಳಲ್ಲಿ, ಉದ್ಯೋಗದಲ್ಲಿ ಹೀಗೆ ಹಲವಾರು ಹಿನ್ನೆಲೆಗಳಲ್ಲಿ ಗಮನಿಸಿದಾಗ ಬದಲಾವಣೆಯ ಸ್ವರೂಪ ವಿಸ್ತರಿಸುತ್ತ ಹೋಗುತ್ತದೆ.

ಜಾಗತೀಕರಣದ ಈ ದಿನಗಳಲ್ಲಿ ಎಲ್ಲ ಗ್ರಾಮಗಳು ಆಧುನಿಕತೆಯತ್ತ ಸರಿಯುತ್ತ ನಡೆದಿವೆ. ಈ ಗ್ರಾಮಗಳಿಗೆ ಬಂದಿರುವ ಸಾರಿಗೆ, ಸಂಪರ್ಕ ಮಾಧ್ಯಮಗಳ ಪ್ರವೇಶ, ಆಧುನಿಕ ಯಂತ್ರ ಸಲಕರಣೆಗಳು ಈ ಬದಲಾವಣೆಗೆ ಸಹಕಾರಿಯಾಗಿದ್ದರೂ ಈ ಪ್ರಮಾಣ ನಗರ ಸೌಲಭ್ಯಗಳನ್ನು ಮೀರಿಸಿಲ್ಲ. ಸರಕಾರದ ಯೋಜನೆಗಳಾದ ಶಾಲೆ, ವಿದ್ಯುತ್, ರಸ್ತೆ, ಸೇತುವೆ, ಕೊಳವೆಬಾವಿ ಮುಂತಾದ ಸೇವೆಗಳು ಗ್ರಾಮಕ್ಕೆ ತಲುಪಿದ್ದರೂ ಸರಕಾರ ನಿರೀಕ್ಷಿಸಿದ ಪ್ರಗತಿಯಾಗಿಲ್ಲವೆಂಬ ಅಭಿಪ್ರಾಯವಿದೆ. ನಗರ, ಮಹಾನಗರಗಳು ಬೆಳೆದಂತೆಲ್ಲ ನಗರಗಳ ಅಂಚಿನಲ್ಲಿರುವ ಗ್ರಾಮಗಳು ಅಲ್ಲಿನ ಕೃಷಿಭೂಮಿ ಸಮೇತ ನಗರಗಳಲ್ಲಿ ವಿಲೀನವಾಗುತ್ತಿವೆ ಅಥವಾ ಬಡಾವಣೆಗಳ ಹೆಸರಿನಲ್ಲಿ ಕರಗಿ ಹೋಗುತ್ತಿವೆ. ಫಲವತ್ತಾದ ಕೃಷಿಭೂಮಿಯಲ್ಲಿ ಸಿಮೆಂಟ್ ಕಟ್ಟಡಗಳು ತಲೆಯೆತ್ತಿ ವಿದ್ಯಾಸಂಸ್ಥೆ, ವಿಮಾನ ನಿಲ್ದಾಣ, ಕೈಗಾರಿಕೆ, ಆಟದ ಮೈದಾನ, ಬಡಾವಣೆ, ವ್ಯಾಪಾರಿ ಮಳಿಗೆಗಳಿಗೆ ಜನ್ಮ ಕೊಡುತ್ತಿವೆ. ಗ್ರಾಮ, ಗ್ರಾಮದ ಕೃಷಿಭೂಮಿ ಹೀಗೆ ಸೈಟುಗಳಾಗಿ ಬಂಡವಾಳಶಾಹಿಗಳ ಕಪಿಮುಷ್ಟಿಯಲ್ಲಿ ಸಿಲುಕುತ್ತದೆ. ಮಹಾನಗರಗಳಿಂದ ಮುಖ್ಯ ರಸ್ತೆಗಳ ಮುಖಾಂತರ ಸಂಪರ್ಕ ಪಡೆದ ಗ್ರಾಮಗಳಲ್ಲಿ ಬದಲಾವಣೆ ತೀವ್ರತರವಾಗಿರುವುದೂ ಎದ್ದು ಕಾಣುತ್ತದೆ. ಮುಖ್ಯ ರಸ್ತೆಯ ಅಂಚಿನಲ್ಲಿ ಬರುವ ಪ್ರತಿ ಗ್ರಾಮಗಳಲ್ಲಿಯೂ ಡಾಬಾಗಳು, ಬಾರ್‌ಗಳು, ಆಟೋ ದುರಸ್ತಿ ಗ್ಯಾರೇಜುಗಳು, ಇಂಧನ ಸಂಗ್ರಹ(ಬಂಕ್)ಗಳು ಕೃಷಿಭೂಮಿಯನ್ನು ಆವರಿಸಿಕೊಂಡಿವೆ. ಕೃಷಿ ಮಾಡುವ ರೈತರ ಕೈಗಳು ಇಂತಹ ಡಾಬಾಗಳಲ್ಲಿ ಕೆಲಸ ಮಾಡುವುದನ್ನು ಕಾಣಬಹುದು. ಈ ರೀತಿ ಹಲವಾರು ವಿಧಾನಗಳಿಂದ ಕೃಷಿ ಭೂಮಿಯನ್ನು ವಿಲೇವಾರಿ ಮಾಡಿದ ರೈತರು, ಆ ಹಣದಿಂದ ಅವೇ ನಗರಗಳ ಹೊಸ ಬಡಾವಣೆಯಲ್ಲಿ ಚಿಕ್ಕಮಟ್ಟ ವ್ಯಾಪಾರ, ಗೂಡಂಗಡಿ, ಆಟೋ ಚಾಲನೆ, ಹಸು, ಎಮ್ಮೆ ಕಟ್ಟಿ ಹೈನುಗಾರಿಕೆಗಳನ್ನು ನಿರ್ವಹಿಸುತ್ತಾರೆ. ಇವರಲ್ಲಿ ಹಲವರು ಆಧುನಿಕ ಕೃಷಿಕರು ಹೊಸಹೊಸ ವಿಧಾನಗಳಿಂದ ತರಕಾರಿ ಬೆಳೆ, ಹೂವಿನ ಕೃಷಿ ಕೈಗೊಂಡು ಲಾಭ ಮಾಡಿಕೊಂಡರೆ, ಉಳಿದವರು ಕಾರ್ಖಾನೆಗಳಲ್ಲಿ ಕಾರ್ಮಿಕರಾಗಿ ದುಡಿಯುತ್ತಾರೆ. ಈ ರೀತಿ ಆಹಾರಬೆಳೆ (Food crafts) ಬೆಳೆದು ದೇಶಕ್ಕೆ ಆಹಾರ ಕೊಟ್ಟು ನಾಡಿನ ಬೆನ್ನೆಲುಬು ಎನ್ನಿಸಿಕೊಂಡಿದ್ದ ರೈತರು ಈಗ ಹಣಕ್ಕಾಗಿ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತ ವ್ಯಾಪಾರಿ ಕೃಷಿಕರಾಗಿದ್ದಾರೆ. ಈ ಪ್ರಕ್ರಿಯೆ ಗ್ರಾಮೀಣ ಜನರ, ರೈತರ ಒಂದು ರೂಪಾಂತರವಾಗಿದ್ದು ಇದು ಕೃಷಿ ಕಾರ್ಮಿಕರನ್ನೂ ಒಳಗೊಂಡಿದೆ.

ಈ ರೀತಿಯ ವ್ಯಾಪಾರಕ್ಕೆ ವಾಣಿಜ್ಯ ಬೆಳೆಗಳೂ ಸಿಲುಕಿವೆ. ಉದಾಹರಣೆಗೆ ಬ್ಯಾಡಗಿಯಲ್ಲಿ ಬೆಳೆದ ಮೆಣಸಿನಕಾಯಿಗೆ ಸರಿಯಾದ ಬೆಲೆ ಸಿಗದೆ ರೈತರು ಕಂಗಾಲಾಗುವ ಪರಿಸ್ಥಿತಿ ಇದ್ದಾಗ, 'ಸೂನಾ ಮಸಾಲಾ', 'ಚಿಕನ್ ಮಸಾಲಾ', 'ಮಟನ್ ಮಸಾಲಾ', 'ಗರಂ ಮಸಾಲ'ಗಳಾಗಿ ಪರಿವರ್ತಿತ ಸ್ವರೂಪದಲ್ಲಿ ಹೆಚ್ಚು ಬೆಲೆಗೆ ಮಾರಾಟವಾಗುತ್ತವೆ. ಮುಂಬಯಿ ಕರ್ನಾಟಕದ ಗ್ರಾಮೀಣ ಪ್ರದೇಶದಲ್ಲಿ ಸುಲಭ ಬೆಲೆಗೆ ಸಿಗುವ ಮೀನು ನಗರ ತಲುಪುತ್ತಿದ್ದಂತೆ ಬೆಲೆಯಲ್ಲಿ ಹತ್ತು ಪಟ್ಟು ಹೆಚ್ಚಾಗುತ್ತದೆ. ಬಯಲು ಸೀಮೆಯಲ್ಲಿ ನಾಲ್ಕು ರೂಪಾಯಿಗೆ ಒಂದು ಕಿಲೋಗ್ರಾಂ ಸಿಗುವ ಟೊಮ್ಯಾಟೋ ಕರಾವಳಿಯ ನಗರಗಳಲ್ಲಿ ಇಪ್ಪತ್ತು ರೂಪಾಯಿ ಬೆಲೆಗೆ ಮಾರಾಟವಾಗುತ್ತದೆ. ಇದಕ್ಕೆ ಮೂಲಕಾರಣ ಬಂಡವಾಳಶಾಹಿ ವ್ಯಾಪಾರಸ್ಥರು ಹಾಗೂ ಧನದಾಹಿ ದಲ್ಲಾಳಿಗಳಾಗಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ಕಷ್ಟಪಟ್ಟು ಬೆಳೆ ತೆಗೆದ ರೈತರು ಬೆಲೆ ಸಿಗದೇ ಒದ್ದಾಡುತ್ತಿದ್ದರೆ ಅದರ ಪ್ರತಿಫಲ ಇನ್ನೊಬ್ಬರು ವ್ಯಾಪಾರಿ, ದಲ್ಲಾಳಿಗಳ ಪಾಲಾಗುತ್ತದೆ. ಒಟ್ಟಾರೆ ಇಡೀ ಗ್ರಾಮದ ಉತ್ಪನ್ನ ನಗರದ ಲಾಭ, ಸಂಪತ್ತಾಗಿ ಪರಿವರ್ತನೆಯಾಗುತ್ತಿದೆ.

ಗ್ರಾಮ ಸಮಾಜದಲ್ಲಿ ಹನ್ನೆರಡು ಜನ ಆಯಗಾರರು ಪ್ರಾಚೀನ ಕಾಲದಿಂದಲೂ ಕಾರ್ಯ ನಿರ್ವಹಿಸುತ್ತಿದ್ದುದು ಕಂಡುಬರುತ್ತದೆ. ಅವರಲ್ಲಿ ಗೌಡ, ಬಣಕಾರ, ಬಡಗಿ, ಕಮ್ಮಾರ, ಅಕ್ಕಸಾಲಿ, ಕುಂಬಾರ,

ನಾಯಿಂದ, ಬಾರಿಕೆ, ತಳವಾರ, ಅಗಸ, ಚಲವಾದಿ, ಮಾದಿಗ ಮೊದಲಾದವರಿದ್ದು ಅವರು ಗ್ರಾಮದ ನರನಾಡಿಗಳಂತೆ ಕಾರ್ಯನಿರ್ವಹಿಸುತ್ತಿದ್ದರು. ಇದು ಆಧುನಿಕಪೂರ್ವ ಸಮಾಜದ ಶ್ರೇಣೀಕೃತ ವ್ಯವಸ್ಥೆಯಾಗಿದ್ದರೂ, ಇವರೆಲ್ಲರೂ ಊರ ಕೆಲಸಗಳಲ್ಲಿ ಪರಸ್ಪರ ಒಪ್ಪಂದದಿಂದ, ಸಹಾನುಭೂತಿಯಿಂದ, ಸಹಕಾರದಿಂದ ಕೆಲಸ ನಿರ್ವಹಿಸುತಿದ್ದುದು ಕಂಡುಬರುತ್ತದೆ. ಹಲವೊಮ್ಮೆ ಇವರಲ್ಲಿನ ದಲಿತರಿಗೆ, ಶೂದ್ರರಿಗೆ ಸವರ್ಣೀಯರಿಂದ ಶೋಷಣೆ-ದೌರ್ಜನ್ಯಗಳು ನಡೆದು ಘರ್ಷಣೆಗಳು ಸಂಭವಿಸುತ್ತಿದ್ದುದನ್ನೂ ಅಲ್ಲಗಳೆಯುವಂತಿಲ್ಲ. ಈ ಕ್ರಮ ಅಂದಿನ ಸಮಾಜದಲ್ಲಿ ಈ ವರ್ಗಗಳಿಗೆ ಆರ್ಥಿಕ, ಸಾಮಾಜಿಕ ಭದ್ರತೆಯನ್ನು ಒದಗಿಸುತ್ತಿತ್ತೆಂಬ ವಾದವೂ ಇದೆ. ಇಂದಿನ ಗ್ರಾಮ ಸಮಾಜದಲ್ಲಿ ಆಯಗಾರ ಪದ್ಧತಿ ಕಾಣುವುದಿಲ್ಲ ಹಾಗೂ ಅದು ಹಣದ ವ್ಯವಹಾರವಾಗಿ ಪರಿವರ್ತನೆಗೊಂಡಿದೆ. ಗ್ರಾಮೀಣ ಪ್ರದೇಶದ ದಲಿತ ಹಿಂದುಳಿದವರೂ ಸಹ ಮಾರುಕಟ್ಟೆ ವ್ಯವಸ್ಥೆಯತ್ತ ಆಕರ್ಷಿತರಾಗಿ ಅತ್ತ ಸರಿಯುತ್ತಿದ್ದಾರೆ. ದಲಿತನೊಬ್ಬ ಚರ್ಮದ ಹಲಗೆ ಭಾರಿಸುವುದನ್ನು ತೊರೆದು ಇಲೆಕ್ಟ್ರಾನಿಕ್ಸ್ ಹಲಗೆ ಬಾರಿಸುವುದಕ್ಕೆ ಒಲವು ತೋರಿಸುತ್ತಿದ್ದಾನೆ. ಪರಂಪರಾಗತ ವೃತ್ತಿಗಳು ಮಾರುಕಟ್ಟೆ (Market Oriented)ವೃತ್ತಿಗಳಾಗಿ ಬದಲಾಗುತ್ತಿವೆ.

ಈ ಎಲ್ಲ ಬದಲಾವಣೆಗಳ ಪ್ರಭಾವ ವ್ಯಕ್ತಿ, ಕುಟುಂಬ ಹಾಗೂ ಮಾನವ ಸಂಬಂಧಗಳ ಮೇಲೂ ಪರಿಣಾಮ ಬೀರಿದೆ. ಸಂಬಂಧಗಳು ಕೇವಲ ತಾತ್ವಿಕ (ವ್ಯವಹಾರಿಕ) ಸ್ವರೂಪಕ್ಕೆ ಮಾತ್ರ ಸೀಮಿತವಾಗಿದ್ದು ಆಳ ನೆಲೆಯನ್ನು ಕಳೆದುಕೊಂಡಿವೆ. ಅಣ್ಣ, ತಮ್ಮ, ತಂದೆ, ಮಗ, ಅತ್ತೆ ಸೊಸೆ ಸಂಬಂಧಗಳು ಸಿನಿಕಗೊಂಡು ಎಲ್ಲವೂ ವ್ಯಾವಹಾರ, ಆರ್ಥಿಕ ಸಂಬಂಧದ ರೂಪ ಪಡೆದಿವೆ. ಪರಸ್ಪರ ಅಪನಂಬಿಕೆ, ಬೇಜವಾಬ್ದಾರಿ ಹೆಚ್ಚಾಗಿ ಸಂಬಂಧಗಳಲ್ಲಿ ಬಿರುಕು ಕಾಣಿಸಿಕೊಳ್ಳುತ್ತಿದೆ. ನಗರಗಳಲ್ಲಿ ಓದಿ ವೃತ್ತಿ ಗಳಿಸಿದ ಯುವ ಜನಾಂಗ ಹಳ್ಳಿಗೆ ಬಂದು, ಅವಿಭಕ್ತ ಕುಟುಂಬದ ಜವಾಬ್ದಾರಿ ವಹಿಸಿಕೊಳ್ಳಲು ನಿರಾಕರಿಸುತ್ತಿದ್ದಾರೆ. ಕುಟುಂಬಕ್ಕೆ ಆರ್ಥಿಕ ಸಹಾಯ ನೀಡದೆ ನಗರಗಳಲ್ಲಿ ಸಕಲ ಸೌಲಭ್ಯಯುತ ಜೀವನ ನಡೆಸಲು ಆಶಿಸುತ್ತಾರೆ. ಹಿಂದೆ ಮೂರು, ನಾಲ್ಕು ದಿನಗಳು ಜರುಗುತ್ತಿದ್ದ ಹಬ್ಬ, ಹುದಿನ, ಜಾತ್ರೆ, ಮದುವೆಗಳು ಕೂಡ ಇಂದು ಹಲವು ಗಂಟೆಗಳ ಆಚರಣೆಗೆ ಸೀಮಿತವಾಗಿವೆ. ಅತ್ಯಾಧುನಿಕ ತಂತ್ರಜ್ಞಾನವು ಗ್ರಾಮೀಣ ಕೃಷಿ ಸಂಬಂಧಿತ ಕೆಲಸಗಳಿಗೆ ಪ್ರವೇಶ ಪಡೆದಂದಿನಿಂದ, ಕೃಷಿ ಉತ್ಪನ್ನ ಚಟುವಟಿಕೆಗಳು ತಮ್ಮ ಅಂದಿನ ಸ್ವರೂಪವನ್ನು ಕಳೆದುಕೊಳ್ಳುವಂತಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಪಶುಪಾಲನೆ ಆರಂಭವಾದಾಗಿನಿಂದ ಹೆಚ್ಚು ಕಡಿಮೆ ಮಹಿಳೆಯೇ ಪ್ರಮುಖ ಒಡೆತನವನ್ನು ಹೊಂದಿದ್ದಳು. ಆಹಾರದ ಬೆಳೆಗಳು ಹಿಂದಿನ ದಿನಗಳಲ್ಲಿ ವ್ಯವಹಾರಿಕ ಸ್ವರೂಪವನ್ನು ಪಡೆದಿರಲಿಲ್ಲ. ಅಂದು ಆಹಾರದ ಧಾನ್ಯಗಳು ಕೊಡು-ಕೊಳ್ಳುವಿಕೆಯ ಸಂಬಂಧಗಳಾಗಿ ನೆರವೇರುತ್ತಿದ್ದವು. ಯಂತ್ರ ನಾಗರಿಕತೆಯ ಉತ್ಪಾದಿತ ವಸ್ತುಗಳು ಗ್ರಾಮ ಸಮಾಜದಲ್ಲಿ ಒಂದೊಂದಾಗಿ ಆಗಮನ ಪಡೆಯುತ್ತಿವೆ. ಕೃಷಿಯ ಚಟುವಟಿಕೆಗಳಲ್ಲಿ ಕಳೆ ಕೀಳುವ, ಸಸಿ ನಾಟಿ ಮಾಡುವ ಯಂತ್ರಗಳೆಲ್ಲ ಗ್ರಾಮ ಸಮಾಜದಲ್ಲಿ ಪ್ರವೇಶ ಪಡೆಯುತ್ತಿವೆ. ಇವೆಲ್ಲ ಸಾರ್ವತ್ರಿಕವಾಗಿಲ್ಲ, ಬದಲಾಗಿ ದೊಡ್ಡದೊಡ್ಡ ಜಮೀನು ಹೊಂದಿದವರಲ್ಲಿ ಮಾತ್ರ ಇಂತಹ ಉಪಕರಣಗಳನ್ನು ಕಾಣಬಹುದಾಗಿದೆ. ಆಹಾರದ ಬೆಳೆಗಳ ಸ್ಥಾನದಲ್ಲಿ ಇಂದು ವಾಣಿಜ್ಯ ಬೆಳೆಗಳು ಪ್ರಮುಖ ಪಾತ್ರ ವಹಿಸುತ್ತಲಿವೆ.

## ೨. ನಗರ ಸಮಾಜ

### ಅ. ಸ್ವರೂಪ

ಎಲ್ಲ ನಗರಗಳ ಮೂಲಸ್ಥಾನ (Origin) ಗ್ರಾಮ ಎಂಬ ಮಾತು, ಗ್ರಾಮಗಳು ನಾಗರಿಕ ಸೌಲಭ್ಯಗಳಿಂದ ಬೆಳೆದು ನಗರಗಳಾಗಿದ್ದುದನ್ನು ಸೂಚಿಸುತ್ತದೆ. ನಗರ ಸಮಾಜದ ಜೀವನಕ್ರಮದ ವಿಶಿಷ್ಟ ಗುಣ ಲಕ್ಷಣಗಳೇ ಅದನ್ನು ಗುರುತಿಸುವ ಮೂಲಾಧಾರಗಳಾಗಿವೆ. 'ನಾಗರಿಕತೆಯ ಸೊಗಸು ಮೆರುಗುಗಳನ್ನುಳ್ಳ, ವೈವಿಧ್ಯಮಯವಾದ ವಿಷಮ ಪರಿಸರವನ್ನುಳ್ಳ, ಆನುಷಂಗಿಕ ಸಂಬಂಧಗಳನ್ನು ಹೊಂದಿದ, ಔಪಚಾರಿಕ ಸಾಮಾಜಿಕ ನಿಯಂತ್ರಣವನ್ನುಳ್ಳ, ಉಚ್ಚತಮ ಮತ್ತು ಐಷಾರಾಮದ ಸೌಲಭ್ಯ-ಸೌಕರ್ಯಗಳನ್ನುಳ್ಳ ಜನಸಮುದಾಯವನ್ನು ನಗರ ಸಮಾಜವೆಂದು ಹೇಳಬಹುದು' ಎಂಬುದು ಸಾಮಾಜಿಕ ತಜ್ಞರ ಅಭಿಪ್ರಾಯವಾಗಿದೆ. ಆದರೆ ಮೇಲಿನ ಎಲ್ಲ ಗುಣಗಳಿಗೆ ಅಪವಾದಗಳು ಇಂದು ನಗರ ಸಮಾಜದಲ್ಲಿ ಕಂಡುಬರುತ್ತಿವೆ. ಒಟ್ಟಾರೆ ಗ್ರಾಮೀಣ ಸಮುದಾಯಕ್ಕಿಂತ ವಿಭಿನ್ನವಾದ, ವಿರೋಧವಾದ ಜೀವನ ಕ್ರಮಗಳನ್ನುಳ್ಳ ಸಮುದಾಯವನ್ನು ನಗರ ಸಮಾಜ ಎಂದು ಕರೆಯಬಹುದು.

ಬ. ಕೌಟುಂಬಿಕ ರಚನೆ : ವ್ಯಕ್ತಿ ಮತ್ತು ಕೌಟುಂಬಿಕ ಸಂಬಂಧ, ವಿವಾಹ ಇತ್ಯಾದಿ

ನಗರದಲ್ಲಿ ಅವಿಭಕ್ತ ಕುಟುಂಬಗಳು ಕಂಡುಬರುವುದಿಲ್ಲ. ಗ್ರಾಮೀಣ ಪ್ರದೇಶದಿಂದ ನಗರಕ್ಕೆ ವಲಸೆ ಬಂದ ಕುಟುಂಬಗಳು ನೌಕರಿ, ವ್ಯಾಪಾರ ವೃತ್ತಿಗಳನ್ನು ಅವಲಂಬಿಸಿದ್ದು, ಗಂಡ ಹೆಂಡತಿ ಒಂದು ಅಥವಾ ಎರಡು ಮಕ್ಕಳ ಅಣು ಕುಟುಂಬಗಳು ನಗರದಲ್ಲಿ ಕಂಡುಬರುತ್ತವೆ. ಗ್ರಾಮ ಸಮಾಜದಲ್ಲಿನ ವ್ಯಕ್ತಿ ಮತ್ತು ಕೌಟುಂಬಿಕ ಸಂಬಂಧಕ್ಕೆ ಹೋಲಿಸಿದಲ್ಲಿ ನಗರದಲ್ಲಿ ಈ ಸಂಬಂಧ ಶಿಥಿಲಗೊಂಡಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ನಗರದ ಕೌಟುಂಬಿಕ ವ್ಯವಸ್ಥೆಯಲ್ಲಿ ಅಣ್ಣ, ತಮ್ಮ, ಅಕ್ಕ, ತಂಗಿ ವಯೋವೃದ್ಧ ಪಾಲಕರ ಬಗ್ಗೆ ಕನಿಷ್ಠ ಕಾಳಜಿ ವಹಿಸುವುದನ್ನು ಮರೆಯುವ ಅಮಾನವೀಯತೆ ಹೊಸ ತಲೆಮಾರಿನ ಮಕ್ಕಳಲ್ಲಿ ಕಂಡುಬರುತ್ತಿದೆ. ಬೃಹತ್ ನಗರಗಳಲ್ಲಿ ತಲೆ ಎತ್ತುತ್ತಿರುವ ಮಕ್ಕಳನ್ನು ಆಡಿಸುವ ಕೇಂದ್ರಗಳು (Baby Sittings), ವೃದ್ಧಾಶ್ರಮಗಳು ಒಂದು ಕುಟುಂಬದ ಬೇರು ಮತ್ತು ಚಿಗುರುಗಳನ್ನು ವ್ಯವಸ್ಥಿತವಾಗಿ ಕತ್ತರಿಸಿ ಬೇರ್ಪಡಿಸುವ ವ್ಯವಸ್ಥೆಗಳಾಗಿವೆ. ಮಹಾನಗರಗಳಲ್ಲಿ ವಾಸಿಸುವ ವಯೋವೃದ್ಧರ ಮತ್ತು ಮಕ್ಕಳ ಅಭದ್ರ ಬದುಕು ಮತ್ತು ಅಗತ್ಯಗಳು ಕುಟುಂಬದ ದುಡಿಯುವ ಯುವಜನರ ನಯನಾಜೂಕು ಬದುಕಿನ ಹಿಂದಿರುವ ಮುಖವಾಡಗಳನ್ನು ಕಳಚಿ ಹಾಕಿದ್ದುದು ತಿಳಿದುಬರುತ್ತದೆ.

ವೇದಗಳ ಕಾಲದಿಂದಲೂ ವಿವಾಹ (Marriage) ವರ್ಣಾಶ್ರಮ ಧರ್ಮವನ್ನು ಸ್ಥಿರಪಡಿಸುವ ನೆಲೆಯಲ್ಲಿ ಕೆಲಸ ಮಾಡುತ್ತ ಬಂದಿದೆ. ಆಯಾ ವರ್ಣ, ಜಾತಿ, ಕುಲಗಳ ಒಳಗೆ ನಡೆವ ವಿವಾಹಗಳನ್ನು ಮಾತ್ರ ಸಮಾಜ ಮಾನ್ಯ ಮಾಡುತ್ತ ಬಂದಿದೆ. ಆಧುನಿಕ ಶಿಕ್ಷಣ, ನಗರೀಕರಣ, ನಗರ ವಾಸಗಳ ಹೊಸ ಬದಲಾವಣೆಯ ಪರಿಣಾಮವಾಗಿ ಸಾಂಪ್ರದಾಯಿಕ ಸಮಾಜದಲ್ಲಿ ಬದಲಾವಣೆ ಕಾಣಿಸಿಕೊಂಡಿದೆ. ವಿದ್ಯಾವಂತ ಯುವ ಜನತೆ ಹಿರಿಯರು ಮಾಡುವ ವೈವಾಹಿಕ ಸಂಬಂಧಗಳನ್ನು ಪ್ರಶ್ನಿಸುವ ಮತ್ತು ಅಂತರ್ ಧರ್ಮ, ಜಾತಿ, ಕುಲಗಳ ವಿವಾಹಗಳು ನಗರಗಳಲ್ಲಿ ನಡೆಯುತ್ತವೆ. ವಧುವರರಿಗೆ ಕೆಲವು ಕಡೆ ಆಯ್ಕೆಯ ಸ್ವಾತಂತ್ರ್ಯ ದೊರಕಿದೆ. ಪ್ರೇಮವಿವಾಹಗಳ ಹೆಸರಿನಲ್ಲಿ ಸಾಂಪ್ರದಾಯಿಕ ಮದುವೆ, ಮದುವೆ ಖರ್ಚು, ಕಾಲ, ಶ್ರಮ ಉಳಿತಾಯಗಳು ಮದುವೆಯ ಬಂಧವನ್ನೂ ಸಡಿಲಗೊಳಿಸುತ್ತಿವೆ ಎಂಬ ಅಭಿಪ್ರಾಯ ಉಂಟು. ಜಾಗತೀಕರಣದ ಪರಿಣಾಮವಾಗಿ ಅಂತರ್ ಜಾಲದಲ್ಲಿ ಮದುವೆಯ ಮತ್ತು ವಿಚ್ಛೇದನಗಳನ್ನು ಪಡೆಯುವ ತಂತ್ರಜ್ಞಾನವನ್ನು ಯುವಜನತೆ ಕರಗತಮಾಡಿಕೊಂಡಿದ್ದಾರೆ. ಇದು ಕೌಟುಂಬಿಕ ಸಂಬಂಧಗಳನ್ನು ಶಿಥಿಲಗೊಳಿಸುವ ದಾರಿಯಲ್ಲಿದೆ ಎಂಬ ವಾದವೂ ಉಂಟು. ಇದರ ಜೊತೆಗೆ ದಾಂಪತ್ಯ ವಿಚ್ಛೇದನಗಳು ಹೆಚ್ಚುತ್ತಿರುವ ಆತಂಕವೂ ಸೃಷ್ಟಿಯಾಗುತ್ತಿದೆ. ವರ್ಷವರ್ಷವೂ ಏರುತ್ತಿರುವ ವಿವಾಹ ವಿಚ್ಛೇದನಗಳ ಸಂಖ್ಯೆ ಭಾರತೀಯ ಕುಟುಂಬ ವ್ಯವಸ್ಥೆಗಳು ಶಿಥಿಲಗೊಳ್ಳುತ್ತಿರುವ ಸೂಚನೆಯಾಗಿದೆ ಹಾಗೂ ಇದು ವಿದ್ಯಾವಂತ, ಶ್ರೀಮಂತ ವರ್ಗಗಳು ಭಾರತೀಯ ವಿವಾಹ ಮತ್ತು ಕುಟುಂಬ ವ್ಯವಸ್ಥೆಯಲ್ಲಿ ನಂಬಿಕೆ ಕಳೆದುಕೊಳ್ಳುತ್ತಿರುವ ಸಂಕೇತ ಎಂಬ ಅಭಿಪ್ರಾಯವಿದೆ.

ಕ. ಸಾಮಾಜಿಕ ರಚನೆ

## ಅಸ್ಪೃಶ್ಯತೆ ಮತ್ತು ಸಂಘರ್ಷ

ಗ್ರಾಮ/ನಗರಗಳಲ್ಲಿ ಸ್ಪೃಶ್ಯ ಅಸ್ಪೃಶ್ಯ ಎನ್ನುವ ಕಾರಣದಿಂದಾಗಿಯೇ ಸಮಾಜದ ಒಂದು ಗುಂಪು ಮೇಲರಿಮೆಯಿಂದ ಮೆರೆದರೆ ಇನ್ನೊಂದು ಗುಂಪು ಕೀಳರಿಮೆಯಿಂದ ಬಳಲಬೇಕಾಗಿದೆ. ಇಂತಹ ವಿಭಜಿತ ಕ್ರಮ ಗ್ರಾಮ/ನಗರ ಎರಡರಲ್ಲೂ ವಿಭಿನ್ನ ರೂಪಗಳಲ್ಲಿ ಕಂಡುಬರುತ್ತದೆ. ಗ್ರಾಮದಲ್ಲಿ ಘರ್ಷಣೆ, ದೈಹಿಕ ಸಂಘರ್ಷಕ್ಕೆ ಕಾರಣವಾದರೆ, ನಗರದಲ್ಲಿ ಮಾನಸಿಕ, ಬೌದ್ಧಿಕ ಸಂಘರ್ಷಗಳನ್ನು ಹುಟ್ಟು ಹಾಕುತ್ತದೆ. ಸವರ್ಣೀಯ ವಿದ್ಯಾವಂತರು ಶಾಲೆಯಲ್ಲಿ ಮಕ್ಕಳನ್ನು, ಕಛೇರಿಯಲ್ಲಿ ಸಹೋದ್ಯೋಗಿಗಳನ್ನು ಸರಕಾರ ಅವರಿಗೆ ನೀಡುವ ಸೌಲಭ್ಯ ಕುರಿತಂತೆ ಹಂಗಿಸಿ ನೋಯಿಸುತ್ತಾರೆ. ಅವರು ಅಸ್ಪೃಶ್ಯ, ದಲಿತ ಎಂದು ತಿಳಿದೊಡನೆ ಅವರ ಸ್ನೇಹ, ಸಾಂಗತ್ಯವನ್ನು ಎರಡನೇ ದರ್ಜೆಯ ಮೌಲ್ಯದಂತೆ ಪರಿಗಣಿಸುತ್ತಾರೆ. ಇದೇ ಕಾರಣಕ್ಕೆ ದಲಿತ, ಹಿಂದುಳಿದವರನ್ನು ಎರಡನೇ ದರ್ಜೆಯ ಪ್ರಜೆಗಳಂತೆ ನಡೆಸಿಕೊಳ್ಳುವ ಅಸ್ವಸ್ಥ ಮನಸ್ಸುಗಳು ಜನ್ಮತಳೆಯುತ್ತವೆ. ಗ್ರಾಮಕ್ಕೆ ಹೋಲಿಸಿದರೆ ನಗರದಲ್ಲಿ ಅಸ್ಪೃಶ್ಯತೆಯ ಆಚರಣೆ ತೀವ್ರಗತಿಯಲ್ಲಿ ಇಲ್ಲ ಎಂಬುದಾದರೂ ಅದು ಸಂಪೂರ್ಣ ನಿಂತು ಹೋಗಿಲ್ಲ. ಆಧುನಿಕ ಶಿಕ್ಷಣದ ಫಲವಾಗಿ ದೊರೆತ ಚಿಂತನಾ ಕ್ರಮದಿಂದ ಹೊಸ ದಲಿತ ಪೀಳಿಗೆ ಅಸ್ಪೃಶ್ಯತೆಯನ್ನು ನಿರಾಕರಿಸುವ, ವಿರೋಧಿಸುವ, ಪ್ರತಿಭಟಿಸುವ ಮನೋಭಾವ ಹೊಂದುತ್ತಿರುವುದು ಆಶಾಭಾವನೆಯಾಗಿದೆ.

## ನಗರ ಸಮಾಜ : ಲೈಂಗಿಕ ಶೋಷಣೆಯ ಸ್ವರೂಪ

ಗ್ರಾಮ ಸಮಾಜದಲ್ಲಿ ನಡೆಯುವ ಮಹಿಳೆಯರ ಶೋಷಣೆ, ದೌರ್ಜನ್ಯಕ್ಕೂ ನಗರ ಸಮಾಜದಲ್ಲಿ ನಡೆಯುವ ಶೋಷಣೆ, ದೌರ್ಜನ್ಯಕ್ಕೂ ವಿಭಿನ್ನ ನೆಲೆಗಳಿರುವುದು ಕಂಡುಬರುತ್ತದೆ. ಗ್ರಾಮದಲ್ಲಿ, ಸಂಪ್ರದಾಯವಾದಿ ನೆಲೆಯಲ್ಲಿ ಮಹಿಳೆಯನ್ನು ಸಾಮಾಜಿಕ, ಆರ್ಥಿಕ ಸಂಬಂಧಗಳಿಂದ ವಿಮುಖಗೊಳಿಸಿ, ಅವಳನ್ನು ವಸ್ತುವನ್ನಾಗಿಸಿ(ಪವಿತ್ರ ದೇವತೆಗೆ ಹೋಲಿಸಿ)ಕೊಂಡ ಊಳಿಗಮಾನ್ಯ ವ್ಯವಸ್ಥೆ, ಪುರುಷ ಶೋಷಕರು ನಗರದಲ್ಲಿ ಬದಲಾದ ರೂಪದಲ್ಲಿ ಕಾಣಿಸಿಕೊಳ್ಳುತ್ತಾರೆ. ಬಂಡವಾಳಶಾಹಿ, ದುಡಿಯುವ ಹೆಂಡತಿಯ ಗಂಡ, ಕೊಳೆಗೇರಿ/ವೇಶ್ಯಾಜಾಲದ ಮಧ್ಯವರ್ತಿ, ಜಾಹಿರಾತುಗಳ ಗುತ್ತಿಗೆದಾರ ಹೀಗೆ ಅವನ ರೂಪಗಳು ಬದಲಾದರೂ ಮಹಿಳಾ ಶೋಷಣೆಯ ಮನಃಸ್ಥಿತಿ ಮಾತ್ರ ಒಂದೇ ಆಗಿದೆ. ಗ್ರಾಮೀಣ ಅವಿದ್ಯಾವಂತ ಮಹಿಳೆಗಿಂತ ನಗರದ ವಿದ್ಯಾವಂತ ಮಹಿಳೆಯ ಶೋಷಣೆಗಳು ಹೆಚ್ಚು ಸಂಕೀರ್ಣವಾಗಿವೆ. ಹೊಲದಲ್ಲಿ ದುಡಿಯುವ ಮಹಿಳೆಗಿಂತ ಕಚೇರಿಯಲ್ಲಿ ದುಡಿಯುವ ಮಹಿಳೆಯರು ಶೀಲ, ಪಾವಿತ್ರ್ಯ ಮರ್ಯಾದೆಯ ಹೆಸರಿನಲ್ಲಿ ಅನುಭವಿಸುವ ನೋವುಗಳಿಗೆ ಬಹುಮುಖಗಳಿವೆ. ಜಾಗತೀಕರಣ, ಉದಾರೀಕರಣಗಳ ನಾಗರಿಕ ಜಗತ್ತಿನಲ್ಲಿ ಉತ್ಪಾದನಾ ಸಂಬಂಧ ಮತ್ತು ಉತ್ಪಾದನೆಯ ಮೇಲಿನ ಹಿಡಿತದ ಹಿನ್ನೆಲೆಯಲ್ಲಿ, ಹೊಸರೂಪಕ್ಕೆ ತೆರೆದುಕೊಂಡ ಪುರುಷಪ್ರಧಾನ ಮೌಲ್ಯಗಳು ಒಟ್ಟು ಮಹಿಳೆಯ ಅಸ್ತಿತ್ವದ ಮೇಲೆ ಬಿಗಿಯಾದ ಹಿಡಿತ ಸಾಧಿಸತೊಡಗಿವೆ.

ಜಾಗತೀಕರಣ ಒಡ್ಡಿದ ಆರ್ಥಿಕ, ಸಾಂಸ್ಕೃತಿಕ ದಿಕ್ಕಟ್ಟಿನಡಿಯಲ್ಲಿ ವ್ಯಾಪಾರಿ ಮೌಲ್ಯಗಳು ನುಗ್ಗತೊಡಗಿ ಮಹಿಳೆಯರನ್ನು ಅಕ್ಷರಶಃ ಗ್ರಾಹಕ ಸರಕಾಗಿಸಿವೆ. ಬಂಡವಾಳ ವ್ಯವಸ್ಥೆಯು ಆ ವ್ಯಾಪಾರದ ಚುಕ್ಕಾಣಿ ಹಿಡಿದು ಮಹಿಳೆಯರ ಅಂಗಾಂಗಗಳೆಲ್ಲವನ್ನು ಸ್ಪರ್ಧೆಗಿಟ್ಟು ವಿಕ್ರಯಿಸತೊಡಗಿದೆ. ಗರ್ಭದಲ್ಲಿ ಹೆಣ್ಣು ಭ್ರೂಣ ಮೂಡಿದ ತಕ್ಷಣ ಆರಂಭವಾಗುವ ವ್ಯಾಪಾರಿ ಪ್ರಕ್ರಿಯೆ ಹೆಣ್ಣು ಭ್ರೂಣ ಹತ್ಯೆ, ಶಿಶು ಮಾರಾಟ, ಬಾಲವೇಶ್ಯಾವೃತ್ತಿ, ವೇಶ್ಯಾವೃತ್ತಿ, ಸೌಂದರ್ಯ ಸ್ಪರ್ಧೆ, ಜಾಹಿರಾತು ಜಾತ್ರೆ, ಸ್ತ್ರೀಯರ ನಗ್ನ ಪ್ರದರ್ಶನ ಮುಂತಾದ ಮಹಿಳಾ ಕೇಂದ್ರಿತವಾದ ಮಾರುಕಟ್ಟೆ ವ್ಯವಸ್ಥೆಯನ್ನು ಹುಟ್ಟುಹಾಕುತ್ತವೆ. ಮೂಲಭೂತವಾಗಿ ಹೆಣ್ಣಿನ ಬಗ್ಗೆ ತಿರಸ್ಕಾರ ಹೊಂದಿದ ಪುರುಷಪ್ರಧಾನ ಮೌಲ್ಯಗಳನ್ನು ಒಪ್ಪಿಕೊಂಡ ಅಸಂಖ್ಯಾತ ಬಡ ಕುಟುಂಬಗಳು ಮಾರಲು ತಮ್ಮ ಹೆಣ್ಣು ಕೂಸುಗಳನ್ನು ಆಯ್ಕೆ ಮಾಡಿಕೊಳ್ಳುತ್ತವೆ. ಇಲ್ಲಿ ಬಡತನ ಒಂದು ಆಂಶಿಕ ಸತ್ಯವಾಗಿ ಮಹಿಳೆಯರ ಕುರಿತು ಇರುವ ತಿರಸ್ಕಾರ ಪ್ರಧಾನ ಅಂಶವಾಗಿದೆ. ಹೆಣ್ಣಿನ ಬಗ್ಗೆ ತಿರಸ್ಕಾರ, ಹೆಣ್ಣನ್ನು ಬೆಳೆಸುವುದು ದುಬಾರಿ, ಹೆಚ್ಚುತ್ತಿರುವ ವರದಕ್ಷಿಣೆ ಮೊತ್ತ ಭರಿಸಲಾಗದಿರುವುದು, ಕಿತ್ತು ತಿನ್ನುವ ಬಡತನ ಮತ್ತು ನಿರುದ್ಯೋಗಗಳು ನಗರದ ಕೊಳೆಗೇರಿಯ ಕುಟುಂಬಗಳು ಹೆಣ್ಣು ಮಕ್ಕಳನ್ನು ವಿಲೇವಾರಿ ಮಾಡಲು ಕಾರಣಗಳಾಗಿವೆ. "ಕೆಳವರ್ಗದ ಸಮಾಜಕ್ಕೆ ಕಾಡಿದ್ದು ಪಾವಿತ್ರ್ಯದ ಪ್ರಶ್ನೆಯಲ್ಲ ಉಳಿವಿನ ಪ್ರಶ್ನೆ (Question of Survival)"[೨] ಎಂಬ ನಿಲುವು ಅಧ್ಯಯನದ ನಿಲುವೂ ಆಗಿದೆ.

ಇನ್ನು ಮಧ್ಯಮ ವರ್ಗದ ಕುಟುಂಬಗಳಲ್ಲಿ ನಡೆಯುವ ಮಹಿಳಾ ಹತ್ಯೆಗಳು, ಮಕ್ಕಳೊಂದಿಗೆ ಮಹಿಳೆಯ ಆತ್ಮಹತ್ಯೆಗಳು ವರದಕ್ಷಿಣೆ, ಪುರುಷರ ದೌರ್ಜನ್ಯ, ಮಾನಸಿಕ ಶೋಷಣೆಯ ಒತ್ತಡದಂತಹ ಅಮಾನವೀಯ ಕ್ರೌರ್ಯಗಳನ್ನು ಅನಾವರಣಗೊಳಿಸುತ್ತವೆ. ಕರ್ಮಸಿದ್ಧಾಂತದ ನಂಬಿಕೆಯಲ್ಲಿ ಬದುಕುವ ಕೋಟ್ಯಂತರ ಮಹಿಳೆಯರು ಆಧುನಿಕ ಜಗತ್ತಿನ ವಿಭಿನ್ನ ಶೋಷಣೆಯ ನೆಲೆಗಳಲ್ಲಿ ತಮ್ಮ ಬದುಕನ್ನು ಸವೆಸುತ್ತಿದ್ದಾರೆ. ವಿದ್ಯೆ ಬುದ್ಧಿ ಎನ್ನುವುದು ಇಂದು ಉದ್ಯೋಗದ ಅರ್ಹತೆಗಳಲ್ಲ, ಬಣ್ಣ ಮೈಕಟ್ಟು ಮಾತ್ರ ಉದ್ಯೋಗದ ಬೇಟೆಗೆ ಅತ್ಯಂತ ಸಮರ್ಥ ಅಸ್ತ್ರಗಳು ಎಂಬ ಭ್ರಮೆಯ ಸಂದೇಶದ ಹಿಂದೆ ಹೆಣ್ಣಿನ ಲೈಂಗಿಕ ಸಂಬಂಧಿ ವಿಷಯವಿದೆ. ಉದ್ಯೋಗ ಅರಸಿ ನಗರಗಳಿಗೆ ವಲಸೆ ಬರುವ ಯುವಕ, ಯುವತಿಯರು ಆಧುನಿಕ ಬದುಕಿನ ಸುಳಿಯಲ್ಲಿ ಸಿಕ್ಕು ಸಮಾಜ ಮತ್ತು ಕುಟುಂಬಗಳ ಹಿಡಿತದಿಂದ ಜಾರುತ್ತಿದ್ದಾರೆ. ದುಡಿಮೆ, ಶ್ರಮಗಳು ಆರೋಗ್ಯವಂತಿಕೆಯ ಲಕ್ಷಣವೆನ್ನುವ ಶ್ರಮಾಧಾರಿತ ಮೌಲ್ಯ ಅಂಕಿ ಸಂಖ್ಯೆಗಳಿಗೆ ಮೈ ಒಗ್ಗಿಸಿಕೊಳ್ಳಲು ಪರದಾಡುವ ಮಹಿಳೆಯರ ದೃಷ್ಟಿಯಲ್ಲಿ ಅರ್ಥ ಕಳೆದುಕೊಂಡಿದೆ. ಜಾಹಿರಾತು, ಸಿನೆಮಾ, ಕಿರುತೆರೆ, ಸೌಂದರ್ಯ ಸ್ಪರ್ಧೆ, ಕಾಲ್ ಸೆಂಟರ್, ಐ.ಟಿ., ಬಿ.ಟಿ., ಸಾಫ್ಟ್‌ವೇರ್ ಕಂಪನಿಗಳು ಮೊದಲಾಗಿ ಮಧ್ಯಮ ವರ್ಗದ ಮಹಿಳೆಯ ಶೋಷಣೆಯ ಜಾಲ ಬೆಳೆಯುತ್ತ ನಡೆದಿದೆ. ಒಂದು ಕಾಲಕ್ಕೆ ಹೌಸ್ ಕೀಪರ್ ಆಗಿ ಶೋಷಣೆಗೊಳಗಾಗಿದ್ದ ಮಹಿಳೆ ಆಧುನಿಕ ಜಗತ್ತಿನಲ್ಲಿ ಹೌಸ್ ಮೇಕರ್ ಆಗಿದ್ದರೂ ಶೋಷಣೆ, ಹಿಂಸೆ, ದೌರ್ಜನ್ಯಗಳ ಹಂತಗಳಿಂದ ಮೇಲೇರಲಾಗಿಲ್ಲ ಎಂಬುದು ಸ್ಪಷ್ಟವಾಗಿದೆ.

**ವೃತ್ತಿ ಮತ್ತು ಆರ್ಥಿಕತೆ**

ನಗರ ಪ್ರದೇಶದ ಜನತೆ ವೃತ್ತಿನಿಷ್ಠರಲ್ಲ. ಇವರು ತಾವು ಕೈಗೊಂಡ ವೃತ್ತಿ ಲಾಭದಾಯಕವಲ್ಲ ಎನ್ನಿಸಿದೊಡನೆ ಅದನ್ನು ಬದಲಾಯಿಸಬಲ್ಲರು. ವ್ಯಾಪಾರ, ಕೈಗಾರಿಕೆಗಳು ನಗರ ಜನತೆಯ ಪ್ರಮುಖ ಉದ್ಯೋಗಗಳಾಗಿವೆ. ಚಿಂದಿ ಆರಿಸುವುದರಿಂದ ಹಿಡಿದು, ಬಹುರಾಷ್ಟ್ರೀಯ ಕಂಪನಿಗಳಲ್ಲಿ ಉನ್ನತ ಹುದ್ದೆಯ ಅಧಿಕಾರಿಯವರೆಗೆ ನೂರಾರು ವೃತ್ತಿ, ದಂದೆಗಳನ್ನು ನಗರದ ಜನರು ನಿರ್ವಹಿಸುತ್ತಾರೆ. ಈ ವೃತ್ತಿಗಳನ್ನು ಮುಖ್ಯವಾಗಿ ದೈಹಿಕ ಮತ್ತು ಬೌದ್ಧಿಕ ಶ್ರಮದ ವೃತ್ತಿಗಳು ಎಂದು ವಿಭಾಗಿಸಬಹುದು. ಕಾರ್ಖಾನೆಗಳಲ್ಲಿ ದುಡಿಯುವ ನೌಕರರು, ದಿನಗೂಲಿ ನೌಕರರು, ಪೌರ ಕಾರ್ಮಿಕರು ಮೊದಲಾದವರು ಮೊದಲ ವರ್ಗವನ್ನು ಪ್ರತಿನಿಧಿಸಿದರೆ, ಪ್ರಾಧ್ಯಾಪಕರು, ವೈದ್ಯರು, ಇಂಜನಿಯರುಗಳು, ಆಡಳಿತಾಧಿಕಾರಿಗಳು ಎರಡನೇ ವರ್ಗವನ್ನು ಪ್ರತಿನಿಧಿಸುತ್ತಾರೆ. ಇತ್ತೀಚೆಗೆ ಐ.ಟಿ., ಬಿ.ಟಿ. ಕಂಪನಿಗಳಿಂದ ಈ ಬೌದ್ಧಿಕ ಶ್ರಮವು ಶೋಷಣೆಗೊಳಗಾಗಿದೆ. "ಐ.ಟಿ. ಕಛೇರಿಯ ವಾತಾವರಣ ೧೯ನೇ ಶತಮಾನದ ಜೈಲುಗಳಂತೆ ಇದ್ದು, ಉದ್ಯೋಗಿಗಳನ್ನು ರೋಮನ್ ಗುಲಾಮರಂತೆ ನೋಡಿಕೊಳ್ಳಲಾಗುತ್ತದೆ. ಈ ವಲಯದಲ್ಲಿ ಕಾರ್ಮಿಕ ಕಾನೂನನ್ನು ಅಳವಡಿಸಬೇಕು"[೨] ಎಂಬ ಅಭಿಪ್ರಾಯವೂ ಉಂಟು. ಇದು ಒಪ್ಪುವ ಮಾತಾಗಿದೆ. ಇತ್ತೀಚಿನ ದಿನಗಳಲ್ಲಿ ಯಾವೊಂದು ಕುಗ್ರಾಮಗಳು ಕೂಡ ಅಸಲಿ ಗ್ರಾಮಗಳಾಗಿ ಉಳಿದಿಲ್ಲ. ಸಾರಿಗೆ, ಶಿಕ್ಷಣ, ಆಧುನಿಕತೆ ಮೊದಲಾದ ಸೌಲಭ್ಯಗಳನ್ನು ಪಡೆದಿವೆ. ನಗರದಲ್ಲಿರುವ ಸೌಲಭ್ಯಗಳಿಗಿಂತ ಗ್ರಾಮಗಳಲ್ಲಿಯ ಸೌಲಭ್ಯಗಳು ಸ್ವರೂಪದಲ್ಲಿ ಬೇರೆ ರೀತಿಯವುಗಳಾಗಿರಬಹುದು. ಮಹಾನಗರ, ಪಟ್ಟಣಗಳಲ್ಲಿಯೂ ಕೂಡ ಕೊಳೆಗೇರಿಗಳಂತಹ ಪ್ರದೇಶಗಳು ಇರುವುದನ್ನು ಕಾಣುತ್ತೇವೆ. ನಾಗರಿಕ ಸೌಲಭ್ಯಗಳಿಲ್ಲದ ಈ ಕೊಳಚೆ ಪ್ರದೇಶಗಳು ಹಲವಾರು ವಿಷಯಗಳಲ್ಲಿ ಗ್ರಾಮಗಳಿಗಿಂತಲೂ ಹಿಂದೆ ಬಿದ್ದಿರುವುದನ್ನು ಕಾಣುತ್ತೇವೆ.

**ಡ. ಬದಲಾವಣೆಯತ್ತ ನಗರ ಸಮಾಜ**

ಒಂದು ಸಮಾಜ ಬದಲಾವಣೆಯಾಗುವತ್ತ ಚಲಿಸಿದೆ ಎಂದರೆ, ಅದರ ಮುಂದೆ ಆದರ್ಶಕ್ಕಾಗಿ/ ಅನುಕರಣೆಗಾಗಿ, ಪ್ರಭಾವಕ್ಕಾಗಿ ಇನ್ನೊಂದು ವ್ಯವಸ್ಥೆ ಇರಲೇಬೇಕೆಂಬುದು ಸಾಮಾನ್ಯ ಸಂಗತಿ. ಗ್ರಾಮ ಸಮಾಜ ಬದಲಾವಣೆಯತ್ತ ನಗರಮುಖಿಯಾದರೆ, ನಗರ ಸಮುದಾಯ ಬದಲಾವಣೆಯತ್ತ ವಿದೇಶಿ ಸಂಸ್ಕೃತಿಯತ್ತ ಹೊರಳುತ್ತಿರುವುದು ಕಂಡುಬರುತ್ತದೆ. ಇದಕ್ಕೆಲ್ಲ ಪ್ರಮುಖ ಕಾರಣ ಜಾಗತೀಕರಣ ಅಂದರೆ ಬಹುರಾಷ್ಟ್ರೀಯ ಕಂಪನಿಗಳ ಪ್ರವೇಶ ಮತ್ತು ಜಾಗತಿಕ ಗ್ರಾಮ (Global Village) ಸಿದ್ಧಾಂತಗಳು.

ಜಾಗತೀಕರಣ ಇತ್ತೀಚಿನ ದಿನಗಳಲ್ಲಿ ಬಹು ಆಯಾಮಗಳ ಚರ್ಚೆಗೆ ಗ್ರಾಸವಾಗಿದೆ. ಜಾಗತೀಕರಣವನ್ನು ವಿವಿಧ ವಲಯಗಳಲ್ಲಿ ಬೇರೆಬೇರೆಯಾಗಿಯೇ ಅರ್ಥೈಸಿಕೊಳ್ಳಲಾಗುತ್ತದೆ. ಜಾಗತೀಕರಣವನ್ನು ಸ್ವಾಗತಿಸುವಂತೆ ವಿರೋಧವೂ ಇದೆ. ಅಧಿಕಾರ ರಾಜಕಾರಣದಲ್ಲಿ ದೇಶದ ಅಭಿವೃದ್ಧಿಗೆ ಅನಿವಾರ್ಯವೆಂದು ಭಾವಿಸಿದರೆ ಎಡಪಂಥೀಯ ಸಂಘಟನೆಗಳು ವಿರೋಧಿಸುತ್ತವೆ. ಸಾಹಿತ್ಯ, ಸಂಸ್ಕೃತಿ ಕ್ಷೇತ್ರದಲ್ಲಿ ಜಾಗತೀಕರಣ ಉಂಟುಮಾಡುವ ಭೀಕರತೆಗಳನ್ನು ಚರ್ಚಿಸಲಾಗುತ್ತದೆ. ಇದರಿಂದ ಪ್ರಾದೇಶಿಕ ವೈವಿಧ್ಯತೆಗಳು, ಬಹುರೂಪಿ ಸಂಸ್ಕೃತಿಗಳು ನಾಶವಾಗುತ್ತವೆ ಎಂಬುದು ಇವುಗಳ ವಾದವಾಗಿದೆ. ಜಾಗತೀಕರಣದಿಂದ ಬಹುರಾಷ್ಟ್ರೀಯ ಕಂಪನಿಗಳು, ಸಾಮ್ರಾಜ್ಯಶಾಹಿ ದೇಶಗಳ ಸಾಲಗಳು ಗ್ರಾಮ/ ನಗರಗಳ ಬದುಕನ್ನು ತನ್ನ ಗುತ್ತಿಗೆಗೆ ತೆಗೆದುಕೊಂಡಂತಿವೆ. ರಾಜಕೀಯ, ಆರ್ಥಿಕ, ಮಾರುಕಟ್ಟೆ, ವ್ಯಾಪಾರ ವಹಿವಾಟು, ಕೃಷಿ, ಕೈಗಾರಿಕೆ, ಮಾಹಿತಿ ತಂತ್ರಜ್ಞಾನ, ಸಾಹಿತ್ಯ ಸಂಸ್ಕೃತಿ ಮುಂತಾದ ಕ್ಷೇತ್ರಗಳು ಆಕರ್ಷಕ ವಸ್ತು ವಿಷಯಗಳಾಗಿವೆ. ಜಾಗತೀಕರಣ, ಖಾಸಗೀಕರಣ, ಉದಾರೀಕರಣ ತೊಂಬತ್ತರ ದಶಕದಲ್ಲಿ ಉದಾರವಾದಿ ಆರ್ಥಿಕತೆಗೆ ಸಂಬಂಧಿಸಿದ್ದೆಂದು ತಿಳಿದರೂ ಅದರ ಮೂಲ ವಸಾಹತುಶಾಹಿ ನೀತಿಯಿಂದಲೇ ಬೇರೆ ರೂಪಗಳನ್ನು ಪಡೆದುಕೊಂಡು ಬಂದಿದೆ. ಇದೆಲ್ಲ ವ್ಯಾಪಾರ ವಹಿವಾಟುಗಳು ಮಾರುಕಟ್ಟೆ ಬಂಡವಾಳಕ್ಕೆ ಸಂಬಂಧಿಸಿದ್ದಾಗಿದೆ. ವಸಾಹತುಗಳ ಆಡಳಿತವು ನೇರ ಹಾಗೂ ಪ್ರತ್ಯಕ್ಷವಾಗಿತ್ತು. ವಸಾಹತುಶಾಹಿಗಳ ಆಡಳಿತ ಮೂರ್ತರೂಪವಾದದ್ದರಿಂದ ಹೋರಾಟಗಳಿಗೆ ಎಡೆ ಮಾಡಿಕೊಡುವಂತಹ ಸ್ಥಿತಿಯನ್ನು ಹೊಂದಿತ್ತು. ಭಾರತದಲ್ಲಿ ನವವಸಾಹತು ರೀತಿಯು ರಾಷ್ಟ್ರ ರಾಜಕಾರಣಗಳೊಂದಿಗೆ ಒಳ ಸಂಬಂಧಗಳನ್ನು ಏರ್ಪಡಿಸಿಕೊಂಡಿದೆ. ಇದರ ಶೋಷಣೆಯು ಸರಳ ಹಾಗೂ ನೇರವಾಗಿರುವುದಿಲ್ಲ. ವಸಾಹತುಗಳ ಆಡಳಿತಕ್ಕೆ ಸ್ಥಳೀಯರಿಂದ ಕ್ರಾಂತಿ, ದಂಗೆಗಳ ನಿರ್ಮಾಣ ಸಹಜವಾಗಿತ್ತು. ನವ

ವಸಾಹತುಗಳಿಗಾಗಲಿ, ಜಾಗತೀಕರಣಕ್ಕಾಗಲಿ ಇಂತಹ ನೇರ ಹೋರಾಟಗಳು ಇನ್ನೂ ವ್ಯಾಪಕವಾಗಿ ನಡೆಯಬೇಕಾದ ಅನಿವಾರ್ಯತೆ ಇದೆ.

ನಗರಗಳು ಹೊಂದುತ್ತಿರುವ ಅತ್ಯಾಧುನಿಕ ಸೌಲಭ್ಯಗಳು, ಬೆಳೆಯುತ್ತಿರುವ ತಂತ್ರಜ್ಞಾನ, ಬಹುರಾಷ್ಟ್ರಗಳೊಂದಿಗಿನ ಸಾಂಸ್ಕೃತಿಕ ಸಂಪರ್ಕಗಳು ಇಂತಹ ಬದಲಾವಣೆಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಇದರ ಪರಿಣಾಮವಾಗಿ ಇಂದಿನ ಆಧುನಿಕ ನಗರಗಳಲ್ಲಿ ಪ್ಲೈಓವರ್ ರಸ್ತೆಗಳು, ಅಂತಾರಾಷ್ಟ್ರೀಯ ವಿಮಾನ ನಿಲ್ದಾಣಗಳು, 'ಇ' ಮೇಲ್ ಸೌಲಭ್ಯ, ಅತ್ಯಾಧುನಿಕ ಮೊಬೈಲ್ ಸಂಪರ್ಕ ಜಾಲ, ಕಂಪ್ಯೂಟರ್‌ಗಳು ಹಾಗೂ ಇಂಟರ್‌ನೆಟ್ ಸಂಪರ್ಕ ಜಾಲಗಳನ್ನು ಕಾಣಬಹುದು. ಇಂತಹ ನಗರಗಳಲ್ಲಿ ಕುಳಿತು ಇಡೀ ವಿಶ್ವವನ್ನು, ವಿಶ್ವದ ಯಾವುದೇ ಭಾಗವನ್ನು ನಿಮಿಷಾರ್ಧದಲ್ಲಿ ಸಂಪರ್ಕಿಸಬಹುದು. ಈ ಸಂವಹನ ಸಹಾಯದಿಂದ ಉದ್ಯೋಗ ಅನ್ವೇಷಣೆ, ಮದುವೆಗೆ ವಧುವರಾನ್ವೇಷಣೆ, ಡೈವೋರ್ಸ್ ಕೊಡಲು, ವ್ಯಾಪಾರ, ಆಮದು, ರಫ್ತು ವಹಿವಾಟು ನೋಡಿಕೊಳ್ಳಬಹುದು. ಈ ಕೊಡುಕೊಳ್ಳುವಿಕೆಯ ವ್ಯವಹಾರದಲ್ಲಿ ರಾಷ್ಟ್ರಕ್ಕೆ, ರಾಜ್ಯಕ್ಕೆ ಹಲವು ಕೋಟಿ ರೂಪಾಯಿಗಳು ಕರದ ರೂಪದಲ್ಲಿ ಸಂದಾಯವಾಗುತ್ತದೆ.

ನಗರ ಜೀವನದ ಈ ಬದಲಾವಣೆಗಳು ಮನುಷ್ಯ ಸಂಬಂಧಗಳ ಹಾಗೂ ಕೌಟುಂಬಿಕ ಸಂಬಂಧಗಳ ಮೇಲೆ ಮಹತ್ತರ ಪರಿಣಾಮವನ್ನು ಬೀರಿರುವುದೂ ಉಂಟು. ಒಂದು ಕಾಲಕ್ಕೆ ಅವಿಭಕ್ತ ಕುಟುಂಬ ನೆಲೆಯಲ್ಲಿ ಸಂತೃಪ್ತ ಜೀವನ ಕಂಡಿದ್ದ ಕುಟುಂಬ ಪದ್ಧತಿ, ಇಂದು ಛಿನ್ನವಿಚ್ಛಿನ್ನವಾಗಿ ಅಣು ಕುಟುಂಬವಾಗಿ ಮಾರ್ಪಡುತ್ತಿದೆ. ಗಂಡ, ಹೆಂಡತಿ, ಒಂದು ಅಥವಾ ಮಗುವಿಲ್ಲದ ಕುಟುಂಬಗಳಾಗುತ್ತಿವೆ. 'ಅದರಲ್ಲೂ ಸಾಮಾಜಿಕ, ಕೌಟುಂಬಿಕ, ವೈಯಕ್ತಿಕ ಸಂಬಂಧಗಳನ್ನು ವಿಘಟಿಸುವ ಸಂಸ್ಥೆ ಎಂದು ನಗರವನ್ನು ವ್ಯಾಖ್ಯಾನಿಸಲಾಗುತ್ತದೆ.'[೪] ಐ.ಟಿ, ಬಿ.ಟಿ. ಉದ್ಯಮಗಳಲ್ಲಿ ಕಾರ್ಯ ನಿರ್ವಹಿಸುವ ಗಂಡ, ಹೆಂಡತಿಯರಿಗೆ ಮಗು ಪಡೆಯಲೂ ವೇಳೆಯಿಲ್ಲದ ಜೀವನ ಸನ್ನಿವೇಶಗಳು, ಸಂದರ್ಭಗಳು ಇಂದು ಅನೇಕ ಕುಟುಂಬಗಳಿಗೆ ಒದಗಿವೆ. ಇದರ ಜೊತೆಗೆ ನಗರೀಕರಣದಿಂದ, ಜಾಗತೀಕರಣದಿಂದ ಭಾರತೀಯ ಸಂಸ್ಕೃತಿ ನಾಶವಾಗುತ್ತಿದೆ ಎಂಬ ಆರೋಪ ಸಹ ಕೇಳಿ ಬರುತ್ತಿದೆ. ಇಂದಿನ ಗ್ರಾಮ, ನಗರಗಳು ಅಸಲಿ ಗ್ರಾಮ, ನಗರಗಳಾಗಿ ಉಳಿದಿಲ್ಲ. ವರ್ಣ, ವರ್ಗ ವ್ಯವಸ್ಥೆಯ ಪ್ರತಿರೂಪದಂತಿವೆ. ಗ್ರಾಮ ಬದಲಾವಣೆಯ ಗಾಳಿಗೆ ಸ್ಪಂದಿಸುತ್ತ ನಗರದತ್ತ, ನಗರಗಳು ಅಭಿವೃದ್ಧಿಯ ದಾಳಿಗೊಳಗಾಗಿ ಪಾಶ್ಚಾತ್ಯರತ್ತ ಮುಖ ಮಾಡಿವೆ. ಬಹುಸಂಖ್ಯಾತರ ವೃತ್ತಿಯಾದ ಕೃಷಿ, ಕೈಗಾರಿಕೆಗಳು, ಐ.ಟಿ., ಬಿ.ಟಿ.ಗಳಂತಹ ಬೃಹತ್ ಉದ್ದಿಮೆಗಳು ಪ್ರಬಲ ವರ್ಗಗಳ ಪಾಲಾಗಿವೆ. ಗ್ರಾಮದಿಂದ ಬಡ, ದಲಿತ, ಹಿಂದುಳಿದವರ ವಲಸೆ ನಿರಂತರವಾಗಿದೆ ಮತ್ತು ನಗರದಲ್ಲಿ ಕೊಳೆಗೇರಿಗಳೆಂಬ ಗ್ರಾಮಗಳು ನಿರ್ಮಾಣವಾಗುತ್ತಿವೆ. ಗ್ರಾಮದ ಶ್ರಮ, ಉತ್ಪನ್ನಗಳು ನಗರದ ಬಂಡವಾಳಶಾಹಿಗಳ ವಶವಾಗುತ್ತಿದ್ದು, ಹೈಟೆಕ್ ಸಂಸ್ಕೃತಿಯ ವರ್ಗ ಮಾತ್ರ ದೇಶದ ಆಸ್ತಿಯೆಂಬಂತೆ ಆರ್ಥಿಕ ಚಲನೆ ಕಂಡುಬರುತ್ತದೆ.

## ಕೊನೆಯ ಟಿಪ್ಪಣಿಗಳು

೧. ನಾಗರಾಜ ಡಿ. ಆರ್., ೧೯೮೮, ನಾಗರಿಕ ಸಮಾಜದ ಹಿಂಸೆಯಿಂದ ಪ್ರಭುತ್ವದ ಹಿಂಸೆಯ ಕಡೆಗೆ - ಶೂದ್ರ, ಸಂಪುಟ ೧೪, ಸಂಚಿಕೆ ೧೧ ಪುಟ ೩
೨. ನಾಗೇಶ್ ಎಚ್.ವಿ., ಗ್ರಾಮಾಂತರ, ೧೯೮೮, ಸುಜಾತಾ ಪ್ರಕಾಶನ, ಪುಟ ೨೨೮
೩. ತಾಪಿ ಧರ್ಮರಾವ್, ವಿವಾಹ (ಅನುವಾದ), ೧೯೮೩, ನವಕರ್ನಾಟಕ ಪ್ರಕಾಶನ, ಬೆಂಗಳೂರು, ಪುಟ ೧೭
೪. ಕುಮಾರ ವೆಂಕಣ್ಣ (ಅನು), ಅಸ್ಪೃಶ್ಯರು, ೧೯೮೮ (ತೃ. ಮು.), ಪಾಪಚ್ಚಿ ಪ್ರಕಾಶನ, ಪುಟ ೧೬೪-೧೭೮
೫. ಚಂದ್ರಶೇಖರ ಪಾಟೀಲ (ಸಂ), ಸಂಕ್ರಮಣ, ಸಂಪುಟ-೩೮, ಸಂಚಿಕೆ-೫, ೨೦೦೩, ಪುಟ ೪೯
೬. ವೆಂಕಟಲಕ್ಷ್ಮಿ ಬಿ.ಎಸ್., ಬದುಕು, ಬವಣೆ ಭರವಸೆ-ಮಹಿಳಾ ಜಗತ್ತಿನ ಅನಾವರಣ, ಪುಟ ೧೬೧
೭. ಸಿದ್ಧಲಿಂಗಯ್ಯ, ಹಕ್ಕಿನೋಟ, ೧೯೯೦, ಕಲ್ಯಾಣಿ ಪ್ರಕಾಶನ, ಬೆಂಗಳೂರು, ಪುಟ ೩೦
೮. ಗಾಂಧಿ ಮೋ. ಕ., ನನ್ನ ಆದರ್ಶ ಗ್ರಾಮ, ೧೯೮೪, ಗಾಂಧಿ ಸ್ಮಾರಕ ಗ್ರಂಥಮಾಲೆ, ಪುಟ ೩೫
೯. ಆರ್ಯ ಮಣಿಪಾಲ, ಸಾಹಿತ್ಯ ಆಶಯ ವಿನ್ಯಾಸ, ೧೯೮೮, ಸಂಕ್ರಮಣ ಪ್ರಕಾಶನ, ಧಾರವಾಡ, ಪುಟ ೪೦
೧೦. ನಾಗರಾಜ್ ಡಿ. ಆರ್., ನಾಗರಿಕ ಸಮಾಜದ ಹಿಂಸೆಯಿಂದ ಪ್ರಭುತ್ವದ ಹಿಂಸೆಯ ಕಡೆಗೆ- ಶೂದ್ರ, ಸಂಪುಟ ೧೪, ಸಂಚಿಕೆ ೧೧, ೧೯೮೮, ಪುಟ ೧, ೨
೧೧. ಭೂಮಿಗೌಡ, ಕನ್ನಡ ಕಾದಂಬರಿಗಳಲ್ಲಿ ದಲಿತ ಜಗತ್ತು, ೨೦೦೪, ಚೇತನ್ ಬುಕ್ ಹೌಸ್, ಪುಟ ೨೧೧
೧೨. ವಿಜಯಶ್ರೀ ಸಬರದ (ಸಂ), ಮಹಿಳೆ : ಶೋಷಣೆ-ಸವಾಲುಗಳು, ೨೦೦೫, ಪ್ರಸಾರಾಂಗ ಗುಲ್ಬರ್ಗ ವಿ. ವಿ., ಪುಟ ೨೫
೧೩. ಸಂಪಾದಕರು ಪ್ರಜಾವಾಣಿ, ೨೬ ಅಕ್ಟೋಬರ್ ೨೦೦೫, (ಎಮ್.ಕೆ. ಪಾಂಡೆ ಸಿ.ಐ.ಟಿ.ಯು. ಅಧ್ಯಕ್ಷ), ಪುಟ ೮
೧೪. ಉಮೇಶ, ನವೋದಯ ಕಾದಂಬರಿಗಳಲ್ಲಿ ಗ್ರಾಮ ಸಮಾಜ; (ಕನ್ನಡ ವಿ.ವಿ. ಯ ಭಾಷಾಂತರ ವಿಭಾಗಕ್ಕೆ ಸಲ್ಲಿಸಿರುವ ಅಪ್ರಕಟಿತ ಪಿಹೆಚ್. ಡಿ. ಪ್ರಬಂಧ)

## ಅಧ್ಯಾಯ ಐದು

# ದ್ವಂದ್ವಾತ್ಮಕತೆಯೆಂದರೆ. . . . . . .

ಪ್ರಕೃತಿ ಮತ್ತು ಮನುಷ್ಯರ ಸಂಬಂಧವು ಸಾಪೇಕ್ಷ ಸಂಬಂಧವಾಗಿದೆ. ಬದಲಾವಣೆಯ ಸೃಷ್ಟಿ ನಿಯಮಕ್ಕೆ ಪರಸ್ಪರ ಸ್ಪಂದಿಸುತ್ತ ಇವರಿಬ್ಬರು (ಪ್ರಕೃತಿ ಮತ್ತು ಮನುಷ್ಯರು) ಚಲನಮುಖಿಯಾಗುತ್ತಾರೆ. ಅಭಿವ್ಯಕ್ತಿ ಮನುಷ್ಯರ ಹುಟ್ಟು ಗುಣ. ಸಮೂಹ ಜೀವಿಗಳಾದ ಮನುಷ್ಯರು ಸಂಕೇತ, ಭಾಷೆ, ಮಾತು, ಭಾವ, ನಡತೆ ಮೊದಲಾದ ಅಭಿವ್ಯಕ್ತಿಗಳ ಮೂಲಕ ಪ್ರಕೃತಿ ಮತ್ತು ಇತರರೊಂದಿಗೆ ಸಂಪರ್ಕ ಸಾಧಿಸುತ್ತಾರೆ. ವಿಭಿನ್ನ ವ್ಯಕ್ತಿತ್ವಗಳ ಅಭಿವ್ಯಕ್ತಿ ವಿಭಿನ್ನ ನೆಲೆಯಲ್ಲಿ ವೈರುಧ್ಯಮಯವಾಗಿ ಪ್ರಕಟವಾಗುತ್ತದೆ. ಹೀಗೆ ಪ್ರಕಟವಾದ ಅಭಿವ್ಯಕ್ತಿಯು ಧನಾತ್ಮಕ ಅಥವಾ ಋಣಾತ್ಮಕ ಪ್ರತಿಕ್ರಿಯೆಯಾಗಿ ಹೊರಹೊಮ್ಮುತ್ತದೆ. ದ್ವಂದ್ವಾತ್ಮಕತೆ ನಿಸರ್ಗ ಮತ್ತು ಮನುಷ್ಯರ ಮೂಲ ಗುಣದಲ್ಲಿಯೇ ನೆಲೆಸಿದೆ ಎನ್ನಬಹುದು. ದ್ವಂದ್ವಾತ್ಮಕತೆ ಎಂದರೇನು, ಅದು ನಿಸರ್ಗ ಮತ್ತು ಮನುಷ್ಯರಲ್ಲಿ ಯಾವ ಯಾವ ರೂಪ, ರೀತಿಗಳಲ್ಲಿ ಪ್ರಕಟವಾಗುತ್ತದೆ ಎಂಬುದರ ಕುರಿತು ಚರ್ಚೆಯನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

### ೧. ದ್ವಂದ್ವಾತ್ಮಕತೆ ಎಂದರೆ . . .

ದ್ವಂದ್ವಾತ್ಮಕತೆ ಎಂಬುದು ಸರಳ, ಸ್ಪಷ್ಟವಾದ ವಿಚಾರವಲ್ಲ. ಹಲವಾರು ವಸ್ತು, ವಿಷಯಗಳನ್ನು ತನ್ನ ಅಂತರಂಗದಲ್ಲಿ ಹುದುಗಿಸಿಕೊಂಡು ಸಂಕೀರ್ಣಸ್ವರೂಪದ್ದಾಗಿದೆ. ಪ್ರಕೃತಿ ಮತ್ತು ಪ್ರಕೃತಿ, ಪ್ರಕೃತಿ ಮತ್ತು ಮನುಷ್ಯರು, ಪ್ರಕೃತಿ ಮತ್ತು ಸಮಾಜ, ಸಮಾಜ ಮತ್ತು ಸಮಾಜ, ಮನುಷ್ಯರು ಮತ್ತು ಮನುಷ್ಯರು, ಮೌಲ್ಯ ಮತ್ತು ಅಪಮೌಲ್ಯ, ಭಾವನೆ ಮತ್ತು ಭಾವನೆಗಳು ಇತ್ಯಾದಿ ಪ್ರಕೃತಿ, ವ್ಯಕ್ತಿ, ವಸ್ತು, ವಿಷಯ, ವರ್ತನೆಗಳು ಮುಖಾಮುಖಿಯಾದಾಗ ಹುಟ್ಟಬಹುದಾದ ಭಾವನೆ, ತರ್ಕ, ಚಿಂತನೆ, ಗ್ರಹಿಕೆ, ನುಡಿ, ನಿರ್ಧಾರ, ನಡಾವಳಿಗಳು, ಮಾನಸಿಕ ಸ್ಥಿತಿ, ಜಿಜ್ಞಾಸೆಗಳು ಮುಂತಾದ ಸಂಕೀರ್ಣ ವಿದ್ಯಮಾನಗಳು ಎನ್ನಬಹುದು.

೧. 'ಎರಡು ವಿರುದ್ಧಾತ್ಮಕ ಸಿದ್ಧಾಂತಗಳಿಂದ, ಯಾವುದು ಸತ್ಯ ಎಂಬುದನ್ನು ಸಂಶೋಧಿಸುವ ವಿಶಿಷ್ಟ ರೀತಿಯು ದ್ವಂದ್ವಾತ್ಮಕತೆಯೆನ್ನಿಸಿಕೊಳ್ಳುತ್ತದೆ.'

೨. 'ಒಂದು ವಸ್ತು ವಿಷಯ ಕುರಿತು ನಿರ್ಣಾಯಕ ಅಂಶಗಳಲ್ಲಿರಬೇಕಾದ ವಿರೋಧೋಕ್ತಿ ವಿಚಾರಗಳನ್ನು ದ್ವಂದ್ವಾತ್ಮಕತೆ ಎನ್ನುತ್ತಾರೆ.'

ಮೂರು ಪರಿಕಲ್ಪನೆಗಳ ತಳಹದಿಯ ಮೇಲೆ ದ್ವಂದ್ವಾತ್ಮಕತೆ ನಿಂತಿದೆ.

ಅ. ಪ್ರತಿಯೊಂದು ವಸ್ತು ವಿಷಯಗಳು ವಿರೋಧಾತ್ಮಕ ಬಲ/ಚಿಂತನೆ/ವಾದ ಅಥವಾ ವಿರೋಧಾತ್ಮಕ ಭಾಗಗಳಿಂದ ನಿರ್ಮಿತವಾಗಿವೆ.

ಬ. ಒಂದು ಬಲ/ಚಿಂತನೆ/ವಾದ ಇನ್ನೊಂದು ಬಲ/ಚಿಂತನೆ/ವಾದವನ್ನು ಹಿಂದಿಕ್ಕುವಾಗ ನಿರಂತರ ಬದಲಾವಣೆಯ ಹೊಸ ತಿರುವಿಗೆ ದಾರಿ ಮಾಡಿಕೊಡುತ್ತದೆ.

ಕ. ನಿರಂತರಬದಲಾವಣೆಗಳುವೃತ್ತೋಪಾದಿಯಲ್ಲಿಸುತ್ತದೆ,ಸುರುಳಿಯೋಪಾದಿಯಲ್ಲಿಮುಂದುವರಿಯುತ್ತವೆ. ಹಲವು ಸಂದರ್ಭಗಳಲ್ಲಿ ಈ ಪ್ರಕ್ರಿಯೆಯನ್ನು 'ನಿರಾಕರಣೆಯ ನಿರಾಕರಣೆ' ಎಂದು ಉಲ್ಲೇಖಿಸಬಹುದು.

ದ್ವಂದ್ವಾತ್ಮಕತೆ ಎಂಬುದು ಪ್ರಕೃತಿ ಮತ್ತು ಮನುಷ್ಯರ ಚಲನಶೀಲತೆ, ಸ್ವಭಾವ, ನಡತೆ, ಮತ್ತು ಅವರ ಜೀವನ ವಿಧಾನವನ್ನು ಕುರಿತು ಹೇಳುವ ಶಬ್ದವಾಗಿದೆ ಎಂಬ ಅಭಿಪ್ರಾಯವೂ ಉಂಟು. ಇದು ಮನುಷ್ಯರ ಮತ್ತು ಈ ಪ್ರಕೃತಿಯ ಬದಲಾವಣೆ ಕುರಿತೂ ವ್ಯಾಖ್ಯಾನಿಸುತ್ತದೆ. ಸೃಷ್ಟಿ ಮತ್ತು ಮನುಷ್ಯರ ಸ್ವಭಾವ ಸೂಚಿಯಾದ ದ್ವಂದ್ವಾತ್ಮಕತೆ ಪದಪ್ರಯೋಗಕ್ಕೆ ನಿಶ್ಚಿತವಾದ ಅರ್ಥ ವಿವರಣೆಯನ್ನು ಕೊಡುವುದು ಕಷ್ಟಸಾಧ್ಯವಾದರೂ, ಅದರ ಒಟ್ಟು ಸಾರವನ್ನು ಹಲವು ನಿದರ್ಶನಗಳ ಆಧಾರದ ಮೇಲೆ ವಿವರಿಸಬಹುದು. 'ದ್ವಂದ್ವ' ಪದಕ್ಕೆ ಸಾಮಾನ್ಯವಾಗಿ ಎರಡು (ದ್ವಿ), ವಿರುದ್ಧ ವಸ್ತು ಜೋಡಿ, ದ್ವೈತ ಭಾವ, ವೈರುಧ್ಯತೆ, ಹೊಯ್ದಾಟ, ಎರಡು ಕಡೆ ಮನಸ್ಸು, ಸುಖ-ದುಃಖ, ಶೀತ-ಉಷ್ಣ, ಮುಂತಾದ ಜೊತೆಜೊತೆ ಭಾವನೆಗಳು ಎಂಬ ಅರ್ಥವನ್ನು ಸೂಚಿಸುತ್ತವೆ. ಮೇಲ್ನೋಟಕ್ಕೆ ಈ ಅರ್ಥಗಳು ಭೌತಿಕ ದೇಹಕ್ಕೆ ಅನ್ವಯಿಸುತ್ತಿದ್ದರೂ ಇವುಗಳ ಒಳ ಅರ್ಥ ಬಹುಪಾಲು ಲೇಪವಾಗುವುದು ವ್ಯಕ್ತಿಗಳ ಮಾನಸಿಕ ಹಾಗೂ ಭಾವುಕ (ಭಾವನೆ) ಸ್ಥಿತಿಗಳಿಗೆ ಎಂಬುದು ಹೆಚ್ಚು ಅರ್ಥಪೂರ್ಣವಾಗುತ್ತದೆ.

## ೨. ದ್ವಂದ್ವಾತ್ಮಕತೆ : ಒಂದು ಚರ್ಚೆ

೧

ದ್ವಂದ್ವಾತ್ಮಕತೆ ಎಂದರೆ, ಎರಡು ವಸ್ತು, ವಿಷಯ, ವ್ಯಕ್ತಿಗಳ ವಿರುದ್ಧಾತ್ಮಕ ಸಂಬಂಧ. ಇದು ಬದಲಾವಣೆಯಾಗುತ್ತ ಹೋಗುತ್ತದೆ. ಈ ಬದಲಾವಣೆಗೆ ಕಾರಣವಾಗುವ ತತ್ವಗಳು, ಸಿದ್ಧಾಂತಗಳು, ಸಂಬಂಧಗಳು ಹಲವಾರು. ಅವು ಏಕವ್ಯಕ್ತಿ, ಸಮುದಾಯ, ದೇಶಗಳ ಸಂಬಂಧಗಳನ್ನು ಒಳಗೊಂಡಿರಬಹುದು.

ಸುಖ ಮತ್ತು ದುಃಖ ಪರಸ್ಪರ ವಿರುದ್ಧವಾದ ಭಾವನೆಗಳನ್ನು ಸ್ಫುರಿಸುವ ಅನಿಸಿಕೆಗಳಾಗಿವೆ. ಸುಖ-ದುಃಖ ಒಂದೇ ನಾಣ್ಯದ ಎರಡು ಮುಖಗಳು. ಅಂದರೆ ಸುಖವಿದ್ದಾಗ ದುಃಖ, ದುಃಖವಿದ್ದಾಗ ಸುಖ ಇರುವುದಿಲ್ಲ ಎಂಬುದು ಸಾಮಾನ್ಯ ಅನಿಸಿಕೆಯಾಗಿದೆ. ಸುಖ-ದುಃಖಗಳು ಪರಸ್ಪರ ವಿರೋಧಿ ನೆಲೆಯಲ್ಲಿ ಸ್ಥಾಪಿತಗೊಂಡವುಗಳು ಎಂಬ ಸರಳ ಚಿಂತನೆ ಇದಾಗಿದ್ದು ಮಿಥ್ಯೆಯಿಂದ ಕೂಡಿದೆ. ಅಂದರೆ ತರ್ಕ ಇದನ್ನು ಅಲ್ಲಗಳೆಯುತ್ತದೆ. ಸುಖ ಮತ್ತು ದುಃಖಗಳು ಪರಸ್ಪರ ಸಂಬಂಧ ಹೊಂದಿದ್ದು, ಈ ಸಂಬಂಧ ವಿಲೋಮಾನುಪಾತದಲ್ಲಿ ಕಂಡುಬರುತ್ತದೆ. ಒಬ್ಬ ವ್ಯಕ್ತಿ ಸಂಪೂರ್ಣ ದುಃಖದಲ್ಲಿ ಮುಳುಗಬಹುದು, ಇನ್ನೊಬ್ಬ ಸಕಲ ಸುಖದಲ್ಲಿ ಸಂಪೂರ್ಣ ತೇಲಾಡಬಹುದು. ಇವರ ಜೊತೆಗೆ ಇನ್ನೂ ಹಲವರು ಸುಖ ದುಃಖವನ್ನು ಸಮನಾಗಿ ಹಂಚಿಕೊಂಡು ಜೀವಿಸಬಹುದಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಸುಖ ಕಡಿಮೆಯಾದಂತೆ ದುಃಖ, ದುಃಖ ಕಡಿಮೆಯಾದಂತೆ ಸುಖ ಹೆಚ್ಚುತ್ತ ಅಥವಾ ಕಡಿಮೆಯಾಗುತ್ತ ಹೋಗುತ್ತವೆ. ಸುಖದ ಆರಂಭ ದುಃಖದ ಪ್ರಮಾಣವನ್ನು ಕಡಿಮೆಗೊಳಿಸುವುದಾಗಿದ್ದು ಇದೇ ಅನುಪಾತದಲ್ಲಿ ದುಃಖದ ಪ್ರಮಾಣವನ್ನೂ ಪರಿಗಣಿಸಬಹುದು. ಈ ರೀತಿ ಆಸೆ-ನಿರಾಸೆ, ನೋವು-ನಲಿವು ಮುಂತಾದ ವಿಲೋಮ ಸಂಬಂಧಿತ ವಿಷಯಗಳ ವಿರುದ್ಧಾತ್ಮಕ ಸಂಬಂಧಗಳ ಗ್ರಹಿಕೆ, ಚಿಂತನೆ ದ್ವಂದ್ವಾತ್ಮಕತೆಯಿಂದ ಕೂಡಿದೆ.

ದ್ವಂದ್ವ ಎರಡು ನೈಸರ್ಗಿಕ ಕ್ರಿಯೆಗಳ ವಿರೋಧಾತ್ಮಕ ಸಂಬಂಧವಾಗಿದೆ. ಒಂದು ನೈಸರ್ಗಿಕ ಕ್ರಿಯೆ ಜಾಸ್ತಿಯಾಗುತ್ತಾ ಹೋದಂತೆ ಇನ್ನೊಂದು ನೈಸರ್ಗಿಕ ಕ್ರಿಯೆ ಕಡಿಮೆಯಾಗುತ್ತಾ ಬರುತ್ತದೆ. ನಿಸರ್ಗದ ಕ್ರಿಯೆಯಾದ ಬೆಳಗು ಮತ್ತು ಸಂಜೆಯ ಮುಖಾಮುಖಿಯನ್ನು ಗಮನಿಸೋಣ. ಪ್ರಾತಃಕಾಲದಲ್ಲಿ ಬೆಳಗು ಆರಂಭವಾಗುತ್ತಿದ್ದಂತೆ ನಿಧಾನವಾಗಿ ಕತ್ತಲು ಕಡಿಮೆಯಾಗುತ್ತ ಹೋಗುತ್ತದೆ. ಇಲ್ಲಿ ಬೆಳಗು (ಬೆಳಕು) ಮತ್ತು ಸಂಜೆ(ಕತ್ತಲು)ಗಳ ಪ್ರಮಾಣವೂ ಮುಖ್ಯ. ಇವುಗಳ ಪ್ರಮಾಣವು ಪ್ರತಿಶತ ೧ ಮತ್ತು ೯೯, ೨ ಮತ್ತು ೯೮, ೩ ಮತ್ತು ೯೭ರ ಅನುಪಾತದಲ್ಲಿ ಮುಂದುವರೆದು ಅಂತಿಮವಾಗಿ ೧೦೦ ಮತ್ತು ೦ (ಶೂನ್ಯ)ಯಲ್ಲಿ ಮುಕ್ತಾಯವಾಗುತ್ತದೆ. ಇದು ವಿಲೋಮಾನುಪಾತವಾಗಿದ್ದು ನಿಸರ್ಗದ ಎರಡು ಅಂಶಗಳ, ಕ್ರಿಯೆಗಳ ವಿರೋಧಾತ್ಮಕ ಗುಣಗಳಿಂದ ಕೂಡಿದೆ. ಒಂದು ಹೆಚ್ಚುವುದು ಇನ್ನೊಂದನ್ನು ಕಡಿಮೆಗೊಳಿಸುವುದಕ್ಕಾಗಿಯೇ ಅಥವಾ ಇನ್ನೊಂದು ಕಡಿಮೆಯಾಗುವುದು ಒಂದನ್ನು ಹೆಚ್ಚಿಸುವುದಕ್ಕಾಗಿಯೇ ಎಂಬ ಸಂಜ್ಞೆ ನಿಸರ್ಗದ ದ್ವಂದ್ವಗುಣ ಎನ್ನಿಸಿಕೊಳ್ಳುತ್ತದೆ. ಇದನ್ನು ಗ್ರಹಿಸುವ ಸಮಸ್ತ ಜೀವಿಗಳ ಮನೋಭಾವವೂ ಇದೇ ವೈರುಧ್ಯಗಳಿಂದ

ಕೂಡಿದೆ. ಬೆಳಗು ಎಂಬುದು ಒಂದು ಆರಂಭಿಕ ಕ್ರಿಯೆಯ ಗ್ರಹಿಕೆಯಾಗಿದೆ. ನಿಸರ್ಗದ, ಜೀವಿಗಳ ದೈನಂದಿನ ಕ್ರಿಯೆ/ಕರ್ಮಗಳು ಅಥವಾ ಕಾರ್ಯಕಲಾಪಗಳು ಬೆಳಗಿನೊಂದಿಗೆ ಆರಂಭವಾಗುತ್ತವೆ. ಬೆಳಗು ಆರಂಭದ ಸೂಚನೆಯಾದಂತೆ, ಸಂಜೆಯ ಪ್ರಾರಂಭ ಮುಕ್ತಾಯದ ಸೂಚನೆಯಾಗಿದೆ. ದೈನಂದಿನ ಕಾರ್ಯಗಳನ್ನು (ಬೆಳಗಿನ ದೃಷ್ಟಿಯಿಂದ) ಮುಕ್ತಾಯಗೊಳಿಸಿ, ರಾತ್ರಿಯ ಕೆಲಸಕಾರ್ಯಗಳ ಆರಂಭಿಸುವ ಸೂಚನೆ, ಅನಿವಾರ್ಯತೆ(?) ಸಂಜೆಯ ಪ್ರಾರಂಭದೊಂದಿಗೆ ಮೊದಲುಗೊಳ್ಳುತ್ತದೆ. ಬೆಳಗು, ಸಂಜೆ ನಿಸರ್ಗದ ಕ್ರಿಯೆಗಳಾದರೂ ಹಲವು ವಿರೋಧಾತ್ಮಕ ಅಂಶ, ಕ್ರಿಯೆ, ಪ್ರತಿಕ್ರಿಯೆಗಳ ವಿರೋಧದ ಮೊತ್ತವಾಗಿವೆ.

## ೨

ದ್ವಂದ್ವಾತ್ಮಕತೆ ಎನ್ನುವುದು ಒಂದು ಚಿಂತನೆ, ತತ್ವ, ಸಿದ್ಧಾಂತ, ತರ್ಕ, ನಿಯಮ ಮತ್ತು ಇವುಗಳು ಸಾಗುವ ದಾರಿ ಎಂದೂ ವ್ಯಾಖ್ಯಾನಿಸಬಹುದು. ಒಂದು ಸಿದ್ಧಾಂತ/ಅಭಿಪ್ರಾಯದ ಸತ್ಯ ಶೋಧನೆಯಲ್ಲಿ, ತರ್ಕಬದ್ಧ ಚರ್ಚೆಯನ್ನು ಮಾಡಲು ಅಳವಡಿಸಿಕೊಂಡ ಕಲೆ ಅಥವಾ ಆಚರಣೆ ಎಂದೂ ಹೇಳಬಹುದು. ಒಂದು ವಸ್ತು, ವಿಷಯ ಮತ್ತು ವ್ಯಕ್ತಿ ಕುರಿತಂತೆ ಚಿಂತನೆ, ತರ್ಕಗಳು ವ್ಯಕ್ತಿಯಿಂದ ವ್ಯಕ್ತಿಗೆ, ಕಾಲದಿಂದ ಕಾಲಕ್ಕೆ, ಸಂದರ್ಭದಿಂದ ಸಂದರ್ಭಕ್ಕೆ ವಿಭಿನ್ನವಾಗಿರುತ್ತವೆ. ಚಿಂತನೆಯ ಮೂಲದಲ್ಲಿ ದ್ವಂದ್ವ ನಿಲುವನ್ನು ಗ್ರಹಿಸುತ್ತೇವೆ, ಮತ್ತು ದ್ವಂದ್ವಾತ್ಮಕತೆ ಚಿಂತನೆ ಸರಳ ಚಿಂತನೆಯಾಗಿರದೆ ವ್ಯಕ್ತಿ, ವಸ್ತು ವಿಷಯಗಳನ್ನು ಹಲವು ದಿಕ್ಕುಗಳಲ್ಲಿ ಎಳೆಎಳೆಯಾಗಿ ವಿಶ್ಲೇಷಿಸುವ ಫಲಾಪೇಕ್ಷೆಯಿಲ್ಲದ ತರ್ಕವೆನ್ನಬಹುದು. ಇದಕ್ಕೆ ಹಲವಾರು ಐತಿಹಾಸಿಕ ಸಂದರ್ಭಗಳನ್ನು ಪರಿಗಣಿಸೋಣ.

ಭಕ್ತಿಯ ಆವೇಶದಲ್ಲಿ ದೇವರ ಅಸ್ತಿತ್ವ, ಆಕಾರ ಕುರಿತು ಕೀರ್ತಿಸುವ ಈ ಕವಿತೆಯನ್ನು ಗಮನಿಸೋಣ. "ಯಾಕೆ ನೀನಿಲ್ಲಿ ಪವಡಿಸಿದ್ಯೋ ಹರಿಯೇ । ಜಗದೇಕ ವಿಖ್ಯಾತ ಪಶ್ಚಿಮ ರಂಗನಾಥಾ । ಇನ್ನಷ್ಟು ಕಾಲ ನೀನಿಲ್ಲಿ ಮಲಗಿದ್ದರು । ನಿನ್ನನೆಬ್ಬಿಸುವರೊಬ್ಬರನು ಕಾಣೆ ।"[೧] ನಿರಾಕಾರ, ನಿರ್ಗುಣ, ನಿರಾಮಯನೆಂದು ವರ್ಣಿತನಾದ ಶ್ರೀಹರಿಯು ಪಶ್ಚಿಮ ರಂಗನಾಥನಾಗಿ ಪವಡಿಸಿದಾಗ ಹುಟ್ಟಿಕೊಳ್ಳುವ ಗ್ರಹಿಕೆಯ ದ್ವಂದ್ವ ಇದಾಗಿದೆ. ಜಗದೇಕ ವಿಖ್ಯಾತ ಪವಡಿಸುವುದು ಏಕೆ? ಯಾರಿಗಾಗಿ? ಆತನನ್ನು ಎಬ್ಬಿಸುವವರು ಒಬ್ಬರೂ ಇಲ್ಲವೇಕೆ? ಈ ಗ್ರಹಿಕೆ, ಈ ಜಿಜ್ಞಾಸೆ ಒಬ್ಬ ಆಸ್ತಿಕನದು ಎನ್ನುವಾಗ ಕುತೂಹಲಕ್ಕಿಂತ ಆಶ್ಚರ್ಯವಾಗುತ್ತದೆ. ಆಕಾರ ನಿರಾಕಾರಗಳ ದ್ವಂದ್ವ ಇಲ್ಲಿ ದಾಖಲಾಗಿದೆ. ಒಂದನ್ನು ಒಪ್ಪಿಕೊಂಡು ಇನ್ನೊಂದನ್ನು ನಿರಾಕರಿಸುವ ಖಚಿತಭಾವ ಕಾಣುವುದಿಲ್ಲ. ಇಲ್ಲಿ ಎರಡನ್ನೂ ಒಪ್ಪಿಕೊಳ್ಳುವ ಗ್ರಹಿಕೆ ದ್ವಂದ್ವ ಮೂಲದ್ದಾಗಿದೆ. ಮೂರ್ತ ಅಮೂರ್ತ, ಆಕಾರ ನಿರಾಕಾರಗಳ ದ್ವಂದ್ವ ಗ್ರಹಿಕೆ ಕೇವಲ ಒಬ್ಬ ಕವಿ ಅಥವಾ ಆಸ್ತಿಕನದಾಗಿರದೆ, ಆ ಕಾಲಮಾನ, ಯುಗದ ದ್ವಂದ್ವವಾಗಿ ದಾಖಲಾಗುತ್ತದೆ. "ಏಕೆಂದರೆ ಮೂಲತಃ ಈ ಗ್ರಹಿಕೆಯೆ, ಭಕ್ತಿಯ ಆಚರಣೆಯ ಹಿನ್ನೆಲೆಯಲ್ಲಿ ದೇವರ ಅಸ್ತಿತ್ವವನ್ನು ಪರಿಭಾವಿಸುವ, ಪ್ರಶ್ನಿಸುವ ಸಂದೇಹವಾದಿ (Sceptic) ನೆಲೆಯದು. ನೇರತೆ, ಮುಗ್ಧತೆಯಿಂದ ಕೂಡಿದ ನಿಷ್ಠುರತೆ ನಾಸ್ತಿಕ ಮೂಲದ್ದು. ಇಂಥದೊಂದು ವೈಚಾರಿಕ ನೆಲೆಯನ್ನು ಮುಟ್ಟುವ ಮನಸ್ಸು ಯುಗದ ದ್ವಂದ್ವಗಳನ್ನು, ವೈರುಧ್ಯಗಳನ್ನು ಸೂಕ್ಷ್ಮವಾಗಿ ದಾಖಲಿಸಬಲ್ಲದು."[೨] ಇದೇ ಕವಿ/ಕೃತಿಗಾರನ 'ನೀ ಮಾಯೆಯೊಳಗೋ, ನಿನ್ನೊಳು ಮಾಯೆಯೋ' ಎಂಬ ಕವಿತೆ ಸಹ ಆಕಾರ ನಿರಾಕಾರಗಳ ಗತಿತರ್ಕವನ್ನು ಕುರಿತದ್ದಾಗಿದೆ. ಧಾರ್ಮಿಕ ಸಂವೇದನೆಯಲ್ಲಿ ನಾಸ್ತಿಕರ ಗುಣವೆನ್ನಬಹುದಾದ ಜಿಜ್ಞಾಸೆ-ಸಂದೇಹಗಳು ಒಬ್ಬ ಆಸ್ತಿಕ ಕವಿಯಲ್ಲಿ ಕಾಣಿಸಿಕೊಳ್ಳುವುದು, ಕಾಲಮಾನದ ಭಕ್ತಿಪಂಥದ ಮನಸ್ಸುಗಳ ವಿರೋಧಾಭಾಸ ಮತ್ತು ದ್ವಂದ್ವ ಗ್ರಹಿಕೆಗಳ ಸಂಗತಿಯಾಗಿದೆ.

ಈ ರೀತಿಯಾದ ದ್ವಂದ್ವ ಚಿಂತನೆಗಳು, ದ್ವಂದ್ವ ತರ್ಕಗಳು ಶರಣರ ಕಾಲದಲ್ಲೂ ಕಾಣಿಸಿಕೊಂಡಿವೆ. ಹನ್ನೆರಡನೇ ಶತಮಾನದಲ್ಲಿ ಶರಣರು, ಸಮಾಜದಲ್ಲಿನ ವಿಷಮತೆಗೆ ವ್ಯಕ್ತಿಗಳ ನಡೆ ನುಡಿಗಳಲ್ಲಿರುವ ಅಂತರ ಕಾರಣ,ಅದನ್ನುಅವರುತಮ್ಮಸ್ವಪ್ರಯತ್ನದಿಂದಅಂತರಂಗಸಾಕ್ಷಿಯನ್ನುಒಪ್ಪುವಮೂಲಕಸರಿಪಡಿಸಿಕೊಳ್ಳಬೇಕೆಂದು ಸೂಚಿಸಿದ್ದಾರೆ. ಅಂತರಂಗ ಸಾಕ್ಷಿಯನ್ನು ಒಪ್ಪಿದವರು ಶರಣರಾಗುತ್ತಾರೆ. ಒಪ್ಪಿದಂತೆ ಸೋಗು ಹಾಕಿದವರು, ಪ್ರಜ್ಞೆಯ ಹೊರಗುಳಿದು ಸಮಯ ಸಾಧಕರಾಗುತ್ತಾರೆ. ಶರಣರಾಗುವುದರಿಂದ ಶೋಷಣೆಯಿಂದ ವಿಮುಕ್ತಿ ಪಡೆಯುವುದು ಸಾಧ್ಯವೆಂದು ತಿಳಿದು, ಅಂತಸ್ಸಾಕ್ಷಿ ಪ್ರಜ್ಞೆಯಿಂದ ಹೊರಗೇ ಉಳಿದು ಶರಣರಾದವರು ತಲೆಮಾರುಗಳು ಕಳೆದ ಮೇಲೂ ವರ್ಣವ್ಯವಸ್ಥೆಯ ಎಂದಿನ ನೆಲೆಯಲ್ಲಿಯೇ ಉಳಿಯುತ್ತಾರೆ. ಇದು

ಚರಿತ್ರೆಯಲ್ಲಿನ ಸಾಮಾಜಿಕ ವಿರೋಧಾಭಾಸಗಳನ್ನು, ಚಿಂತನೆಯ ದ್ವಂದ್ವಗಳನ್ನು ಸೂಚಿಸುತ್ತದೆ. ಇನ್ನೊಂದು ಚಿಂತನೆಯ ಪ್ರಸ್ತುತತೆ ಇಲ್ಲಿ ಅಗತ್ಯವಾಗುತ್ತದೆ. ಕಾಯಕವೆ ಕೈಲಾಸ ಎಂಬ ಶರಣರ ತತ್ವದಂತೆ, ಶರಣರು ದುಡಿಮೆಯಲ್ಲಿ ಮಗ್ನರಾಗಬೇಕೆಂದು ಹೇಳಿದರು. ವಾಸ್ತವಿಕ ಸತ್ಯ, ಮಗ್ನರಾಗುವುದು ಮತ್ತು ತೊಡಗುವುದು ಭೌತಿಕ ಕ್ರಿಯೆಗಳಾದರೂ ಮನಸ್ಸಿನ ತಲ್ಲೀನತೆಗೆ ಸಂಬಂಧಿಸಿದ ಶಬ್ದಗಳಾಗಿವೆ. ಕಾಯಕದಲ್ಲಿ ತೊಡಗಬೇಕೆಂದು ಹೇಳುವಾಗ ಶರಣರು ದುಡಿಮೆಗೆ ಇರುವ ಇವೆರಡು ಮುಖಗಳನ್ನು ಖಚಿತಪಡಿಸಿದಂತೆ ತೋರುವುದಿಲ್ಲ. ವಸ್ತು ಜಗತ್ತಿನ ನಡುವೆ ಸಂಬಂಧ ಸೂಚಿಸಲು ಮನುಷ್ಯರಿಗೆ ದುಡಿಮೆ ಒಂದು ಸಾಧನ ಎಂಬುದನ್ನು ಗುರುತಿಸಿದ್ದ ಶರಣರು ದುಡಿಮೆಯಲ್ಲಿ ಭಾಗಿಯಾಗದೇ ಇದ್ದವರನ್ನು ಸಾಕಬೇಕೆಂಬ ತತ್ವ(ದಾಸೋಹ)ದ ಫಲವಾಗಿ ವಿರೋಧಕ್ಕೆ ಸಿಕ್ಕುತ್ತಾರೆ. ಯಾವ ವಿಷಯವನ್ನು ಕಾಯಕ ಚಿಂತನೆಯಿಂದ ವಿರೋಧಿ ನೆಲೆಯಲ್ಲಿ ನಿಲ್ಲಿಸಿದ್ದರೋ, ಅದನ್ನು ದಾಸೋಹ ತತ್ವದಿಂದ ಪುರಸ್ಕರಿಸುವುದು ಕಂಡುಬರುತ್ತದೆ. "ಒಂದು ಸಮಾಜ ಸದಾ ಕಾಲವೂ ಪರಸ್ಪರ ವಿರೋಧವನ್ನುಳ್ಳ ಸಂಗತಿಗಳ ಮೊತ್ತವಾಗಿದೆ"[೨] ಎಂಬ ನಿಲುವು ಸಮರ್ಥನೀಯವಾದುದು.

ದ್ವಂದ್ವಾತ್ಮಕತೆ ಮನುಷ್ಯ ಸ್ವಭಾವದ ಸಹಜ ವಿರೋಧಾಭಾಸವೂ ಹೌದು, ಜಿಜ್ಞಾಸೆಯ ಗ್ರಹಿಕೆಯೂ ಹೌದು. ಗಾಂಧೀಜಿಯವರು ಗ್ರಹಿಸಿದ್ದ ಆದರ್ಶದ ಕಲ್ಪನೆಯನ್ನು ಗಮನಿಸೋಣ. ಗಾಂಧೀಜಿಯವರು 'ಗ್ರಾಮರಾಜ್ಯ ರಾಮರಾಜ್ಯ' ಎಂದು ಹೇಳಿದರು. ಇಲ್ಲಿಯ ಸಂದರ್ಭದಲ್ಲಿ ಅವರದು ಆದರ್ಶ ಕುರಿತು ಸರಳ ಮತ್ತು ರಮ್ಯ ಕಲ್ಪನೆಯಾಗಿದೆ. ಗಾಂಧೀಜಿಯವರು ನಗರಗಳಿಗಿಂತ ಗ್ರಾಮಗಳತ್ತ ಹೆಚ್ಚು ಒಲವು ತೋರಿದ್ದರು ಎಂಬುದರ ಸೂಚನೆ ಇದಾಗಿದೆ. ಆದರೆ ವಾಸ್ತವದ ಸಂದರ್ಭದಲ್ಲಿ ಈ ಆದರ್ಶದ ಗ್ರಹಿಕೆ ಜಿಜ್ಞಾಸೆಗೆ ಒಳಗಾಗುತ್ತದೆ. ಸಮಾನ ಅವಕಾಶ, ಹಕ್ಕು, ಘನತೆಗಳಿಲ್ಲದ ಗ್ರಾಮಗಳು ಕೆಳ, ದಲಿತವರ್ಗಕ್ಕೆ ಯಾವ ಆದರ್ಶದಡಿ ರಮ್ಯತೆಯಾಗಿ ನಿಲ್ಲಬಲ್ಲವು? ಎಂಬುದು ಜಿಜ್ಞಾಸೆಯಿಂದ ತುಂಬಿದೆ. ಗ್ರಾಮ ಸಂದರ್ಭಗಳ ಅರಿವಿದ್ದೂ ಗಾಂಧೀಜಿಯವರು ಈ ವೈರುಧ್ಯದ ಗ್ರಹಿಕೆಗೊಳಗಾಗಿದ್ದುದು ದ್ವಂದ್ವಾತ್ಮಕ ನಿಲುವಿನಿಂದ ಎನ್ನಬಹುದು.

೩

ದ್ವಂದ್ವಾತ್ಮಕತೆ ಎನ್ನುವುದು ನಿರಂತರ ಬದಲಾವಣೆಯ ನಿಯಮವಾಗಿದೆ ಮತ್ತು ಇದೊಂದು ಸಾಮಾಜಿಕ ತತ್ವವೂ ಹೌದು. ಬದಲಾವಣೆಯ ಪರಿಣಾಮ ಧನಾತ್ಮಕ ಅಥವಾ ಋಣಾತ್ಮಕವಾಗಿರಬಹುದು. ಒಂದು ವಸ್ತು, ವಿಷಯದ ಹುಟ್ಟು ಇನ್ನೊಂದರ ನಾಶ, ಅವನತಿಗೆ ಕಾರಣವಾಗಬಹುದು.

ಮೊಟ್ಟೆಯೊಂದು ಮರಿಯಾಗುವ ಜೈವಿಕ ಕ್ರಿಯೆ ಹುಟ್ಟು ಸಾವಿನ ಮಧ್ಯದ ದ್ವಂದ್ವಾತ್ಮಕ ಪ್ರಕ್ರಿಯೆಯಾಗಿದೆ. ಕಾವು ಕೊಟ್ಟಾಗ ಮೊಟ್ಟೆಯೊಳಗಿನ ಜೀವನಾಂಶಗಳು, ಪೋಷಕಾಂಶಗಳು ಜೀವ ಧರಿಸುವ ರೂಪಾಂತರ ಕಾರ್ಯ ಒಂದು ಹಂತದ್ದಾದರೆ, ಮೊಟ್ಟೆಯೊಡೆದು ಮರಿ ಹೊಸ ಜಗತ್ತನ್ನು ಪ್ರವೇಶಿಸುವುದು ಎರಡನೇ ಹಂತ. ಇಲ್ಲಿ ಹೊಸ ಜೀವಿಯ ಹುಟ್ಟು ಹಳೆ ವಸ್ತುವನ್ನು ಕಳೆದುಕೊಳ್ಳುವುದರ ಸಂಕೇತ. ಹೊಸದರ ಆಗಮನ ಹಳೆಯದರ ನಿರ್ಗಮನವೂ ಆಗಿದೆ. ಒಂದನ್ನು ಹೊಸದಾಗಿ ಪಡೆದ ಕೌತುಕ, ಅಚ್ಚರಿಗಳು ಇನ್ನೊಂದನ್ನು ಕಳೆದುಕೊಳ್ಳುವ ನಿರಾಸೆಯನ್ನು ಹುಟ್ಟಿಸುವುದು ಪ್ರಕೃತಿ ಕ್ರಿಯೆಯ ದ್ವಂದ್ವ ಕ್ರಿಯೆ ಎನ್ನಬಹುದು. ಮೊಟ್ಟೆ ಮರಿಯಾಗಿ ಹೊರಬರುವುದು ಹೊಸಸೃಷ್ಟಿಯ ದ್ಯೋತಕವಾಗಿದೆ. ಹೊಸಸೃಷ್ಟಿ ಹೊಸದನ್ನು ನಿರ್ಮಿಸುತ್ತ ಆಶಾವಾದದತ್ತ ಸರಿಯುವುದು ಸರಳ ಗ್ರಹಿಕೆಯಾಗಿ ಕಂಡುಬರುತ್ತದೆ. ಆದರೆ ಎಷ್ಟೋ ಸಂದರ್ಭಗಳಲ್ಲಿ ಮೊಟ್ಟೆ ಮರಿಯಾಗುವುದಿಲ್ಲವೆಂಬುದು ಹಳೆಯದರ ನಾಶವನ್ನು ಸಂಕೇತಿಸುವ ನಿರಾಶಾವಾದವಾಗಿದೆ. ಆಸೆ, ನಿರಾಸೆ ಇವೆರಡೂ ಹೀಗೆ ಸೃಷ್ಟಿ–ಮರುಸೃಷ್ಟಿ–ನಾಶಗಳನ್ನು ಸಂಕೇತಿಸುತ್ತ ದ್ವಂದ್ವಭಾವವನ್ನು ಹುಟ್ಟುಹಾಕುತ್ತವೆ. ಅದೇ ರೀತಿ ಬೀಜ ಮೊಳೆತು ಸಸಿಯಾಗುವ ಪ್ರಕೃತಿ ಕ್ರಿಯೆ ಬೀಜದ ನಾಶದೊಂದಿಗೆ ಹೊಸ ಸಸ್ಯದ ಹುಟ್ಟು ಬೆಳವಣಿಗೆಯನ್ನು ಸೂಚಿಸುತ್ತದೆ.

ಒಂದು ವಸ್ತು, ವ್ಯಕ್ತಿ, ವಿಷಯಗಳ ಸಂಬಂಧ ನಿಂತ ನೀರಲ್ಲ. ಆ ಸಂಬಂಧಕ್ಕೆ ನಿರಂತರ ಬದಲಾವಣೆಯ ನಿಯಮಗಳಿವೆ. ಗರ್ಭಾವಸ್ಥೆಯ ತಾಯಿ ಮಗುವಿನ ಜೈವಿಕ ಸಂಬಂಧವೂ ಈ ನಿಯಮಗಳಿಗೆ ಒಳಪಟ್ಟ ದೈಹಿಕ ಸಂಬಂಧವಾಗಿದೆ. ಭ್ರೂಣಾವಸ್ಥೆಯಲ್ಲಿರುವ ಮಗು ತಾಯಿಯ ಶರೀರದೊಂದಿಗೆ ಅಂಗರಚನೆ, ಉಸಿರಾಟ, ರಕ್ತ ಪರಿಚಲನೆ, ಪೋಷಕಾಂಶ ಅವಲಂಬನೆಯ ಜೈವಿಕ ಸಂಬಂಧವನ್ನು ಹೊಂದಿರುತ್ತದೆ.

ಇದು ಒಂಬತ್ತು ತಿಂಗಳು ಅವಧಿಯ ಜೈವಿಕ ಅವಲಂಬನೆಯಾಗಿದೆ. ತಾಯಿ ಮಗುವನ್ನು ಬೇರ್ಪಡಿಸುವ ಹೆರಿಗೆ ಎಂಬ ಪ್ರಕ್ರಿಯೆ ಸಂಬಂಧವನ್ನು ಕೊನೆಗೊಳಿಸುವ ಸಂಗತಿಯಾಗಿದೆ. 'ಹೆರಿಗೆ' ತಾಯಿ ಮಗುವಿನ ಜೈವಿಕ ಸಂಬಂಧ(ಅವಲಂಬನೆ)ವನ್ನು ಮುಕ್ತಾಯಗೊಳಿಸಿ ಸಾಮಾಜಿಕ ಅವಲಂಬನೆಯತ್ತ ಒಯ್ಯುವ ಸಾಮಾಜಿಕ ತತ್ವವಾಗಿದೆ. ವ್ಯಕ್ತಿ ಮತ್ತು ಸಮಾಜದ ಉಳಿದ ವರ್ಷಗಳ ಸಾಮಾಜಿಕ ಸಂಬಂಧ ಒಂದು ಅಂಶವಾಗಿ ಮೂಲ ಸಂಬಂಧದಿಂದ ಬಿಡುಗಡೆಗೊಳ್ಳುವಿಕೆ ಬದಲಾಗುವ ನೈಸರ್ಗಿಕ ತತ್ವವೂ ಆಗಿದೆ. ಮೊಟ್ಟೆ, ಕೋಳಿ ಮರಿ ಸಂಬಂಧದ ಹಾಗೆ ಈ ಸಂದರ್ಭದಲ್ಲಿಯೂ ಜೈವಿಕ ಮತ್ತು ಸಾಮಾಜಿಕ ಸಂಬಂಧಗಳೆಂಬ ಎರಡು ದ್ವಂದ್ವ ಬಂಧಗಳನ್ನು ಕಾಣುತ್ತೇವೆ.

೪

ಬದಲಾವಣೆ ಒಂದು ನೈಸರ್ಗಿಕ ನಿಯಮ. ಮನುಷ್ಯರ ಸಂದರ್ಭದಲ್ಲಿ ಅವರ ಪರಸ್ಪರ ಸಾಮಾಜಿಕ, ಆರ್ಥಿಕ, ಧಾರ್ಮಿಕ ಮೊದಲಾದ ಸಂಬಂಧಗಳು ಬದಲಾಗುತ್ತ ಹೋಗುತ್ತವೆ. ಈ ಬದಲಾವಣೆ ಆಯಾ ಕಾಲಮಾನ ಮತ್ತು ಸಂದರ್ಭವನ್ನು ಅವಲಂಬಿಸಿದೆ. ಯಾವ ಆಧಾರ, ತರ್ಕ, ನಿಯಮದ ಮೇಲೆ ಈ ಸಂಬಂಧಗಳು ಬದಲಾವಣೆಯಾದವು ಎಂಬುದನ್ನು ಚಿಂತಿಸುವ ರೀತಿಯು ದ್ವಂದ್ವಾತ್ಮಕತೆಯೆನ್ನಿಸುತ್ತದೆ.

ಭಾರತದ ಸಂದರ್ಭದಲ್ಲಿ, ಈ ದೇಶದ ಜನಸಾಮಾನ್ಯ ಶತಮಾನಗಳ ಕಾಲ ಪರಕೀಯರ ಆಡಳಿತಕ್ಕೆ ಒಳಪಟ್ಟಿದ್ದುದು ತಿಳಿದ ವಿಚಾರವಾಗಿದೆ. ವಿದೇಶಿಯರ ಕಾಲದಲ್ಲಿ ಆರ್ಥಿಕ, ರಾಜಕೀಯ, ಸಾಮಾಜಿಕ ಕಾರಣಗಳಿಗಾಗಿ ಅವರಿಗೆ ಹೋರಾಟ ಅನಿವಾರ್ಯವಾಗಿತ್ತು. ಭಾರತಕ್ಕೆ ಸ್ವಾತಂತ್ರ್ಯ ಸಿಗುವವರೆಗೆ, ಅಂದರೆ ೧೯೪೭ ಅಗಸ್ಟ್ ಹದಿನೈದರವರೆಗೆ ಅವರ ಎಲ್ಲ ಸಮಸ್ಯೆಗಳಿಗೆ ವಿದೇಶಿ ಆಡಳಿತವನ್ನು ಹೊಣೆಯಾಗಿಸಿದ್ದು, ಅವರ ಪ್ರತಿಭಟನೆ, ಹೋರಾಟ ಏನಿದ್ದರೂ ಅದರ ವಿರುದ್ಧವೇ ಆಗಿದ್ದುದು ಕಂಡುಬರುತ್ತದೆ. ಅವರ ಮೊದಲ ವೈರಿ ಬ್ರಿಟೀಶರು ಮತ್ತು ಅವರ ಆಡಳಿತ ಯಂತ್ರಗಳಾಗಿದ್ದವು. ಸ್ವಾತಂತ್ರ್ಯ ಸಿಕ್ಕ ಕ್ಷಣದಿಂದ ಜನಸಾಮಾನ್ಯರಿಗೆ ಭಾರತೀಯ ಸರಕಾರ ಮತ್ತು ಆಡಳಿತ ಯಂತ್ರಗಳು ಈ ವಿಷಯದಲ್ಲಿ ಮೊದಲ ವಿರೋಧಿ ಸ್ಥಾನ ಪಡೆದುಕೊಂಡವು. ಆರ್ಥಿಕ, ರಾಜಕೀಯ ಹೋರಾಟ, ಪ್ರತಿಭಟನೆ ಏನಿದ್ದರೂ ಅವರ ದೇಶದ ಪ್ರಜೆಗಳಾದ ನಾಯಕರೇ ಅವರಿಗೆ ವೈರಿಗಳಾಗಿ ಕಾಣಿಸಿಕೊಂಡಿರುವುದು ಪರಿಸ್ಥಿತಿಯ ವೈರುಧ್ಯವೆನ್ನಬಹುದು. ಇಲ್ಲಿ ಜನಸಾಮಾನ್ಯರ ಚಿಂತನೆ ಮತ್ತು ಬದಲಾದ/ಬದಲಾಗುತ್ತಿರುವ ದೃಷ್ಟಿಕೋನವನ್ನು ಗಮನಿಸಬಹುದು. ಸ್ವಾತಂತ್ರ್ಯ ಪೂರ್ವದ ವೈರಿ ನಮ್ಮವರಲ್ಲ. ಅವರ ದೇಶ, ಜನಾಂಗ, ಭಾಷೆ, ಸಂಸ್ಕೃತಿ, ಆಚಾರ ವಿಚಾರ, ನಡತೆ, ವ್ಯಾಪಾರ ವಹಿವಾಟು ಎಲ್ಲವೂ ಪರಕೀಯ. ಅವರು ಪರಕೀಯ ಎಂಬ ಒಂದೇ ಕಾರಣಕ್ಕೆ ಅವರಿಗೆ ಸಂಬಂಧಿಸಿದ ಎಲ್ಲವೂ ಪರಕೀಯವೆನಿಸುವ ಗ್ರಹಿಕೆ ಇಲ್ಲಿದೆ. ಅವರ ನಡೆ, ವರ್ತನಾಂಶಗಳನ್ನು ರಾಜಕೀಯ ಕಾರಣಗಳಿಗಾಗಿ ವಿರೋಧಿಸುತ್ತಿದ್ದ ಭಾರತೀಯ ಜನಸಾಮಾನ್ಯರು ಅವರ ಸ್ಥಾನದಲ್ಲಿ ಸ್ವದೇಶಿ ನಾಯಕರು ಕುಳಿತಾಗ, ಮೊದಲಿನ ಚಿಂತನೆಗೆ ವಿರುದ್ಧವಾದ ನೆಲೆಯಲ್ಲಿ ಚಿಂತಿಸಲು ಆರಂಭಿಸುತ್ತಾರೆ. ನಮ್ಮ ದೇಶದ ನಮ್ಮೊಂದಿಗೆ ಹುಟ್ಟಿ ನಮ್ಮೊಂದಿಗೆ ಬೆಳೆದ ನಾಯಕರು, ನಮ್ಮನ್ನು ಆಳುತ್ತಿರುವವರು, ಆಡಳಿತ, ಭ್ರಷ್ಟಾಚಾರ, ಶೋಷಣೆ, ಹಣದುಬ್ಬರ ಬೆಲೆಯೇರಿಕೆ, ಕೃಷಿ, ಕಾರ್ಮಿಕ ಸಮಸ್ಯೆಗಳು ಮುಂತಾಗಿ ಇನ್ನೊಂದು ದಿಕ್ಕಿನಲ್ಲಿ ಚಲಿಸುವ ಚಿಂತನೆಗಳು ಹೋರಾಟದ ಮುಂಚೂಣಿಗೆ ಬಂದವು. ಬದಲಾದ ಸಂದರ್ಭದಲ್ಲಿ, ಈ ದೇಶದ ಸಂಪತ್ತು ವಿದೇಶಿಯರ ಪಾಲಾಗುತ್ತದೆ ಎಂಬ ಗ್ರಹಿಕೆ ತಕ್ಷಣ ಬದಲಾಗಿ ಈ ದೇಶದ ಸಂಪತ್ತು ಸ್ವದೇಶಿಯರಿಂದ ಪೋಲಾಗುತ್ತಿದೆ ಎಂಬ ರೂಪಾಂತರ ಪಡೆದಿದ್ದು, ಇಲ್ಲಿ ವಿರೋಧಾತ್ಮಕ ಚಿಂತನೆಗಳನ್ನು/ ದೃಷ್ಟಿಕೋನವನ್ನು ಗುರುತಿಸುತ್ತೇವೆ. ಇಂತಹ ವಿರುದ್ಧ ಚಿಂತನೆಗಳ ಮೊತ್ತವು ದ್ವಂದ್ವಾತ್ಮಕತೆಯೆನ್ನಿಸಿಕೊಳ್ಳುತ್ತದೆ. ಹಲವು ಚಾರಿತ್ರಿಕ, ಸಾಮಾಜಿಕ ಸನ್ನಿವೇಶಗಳಲ್ಲಿ ದ್ವಂದ್ವಾತ್ಮಕತೆ ಘಟಿಸುತ್ತದೆ ಎಂದೂ ಹೇಳಬಹುದು. ಇನ್ನೊಂದು ಅರ್ಥದಲ್ಲಿ ತತ್ವಬದ್ಧ ವಾಗ್ವಾದಗಳ ರೀತಿ, ಸ್ವರೂಪ ದ್ವಂದ್ವಾತ್ಮಕತೆಯೆನ್ನಿಸಿಕೊಳ್ಳುತ್ತದೆ ಎಂದೂ ಹೇಳಬಹುದು.

೫

ಮನುಷ್ಯ ಸಮಾಜ ಮತ್ತು ಮನುಷ್ಯ ಸಮಾಜ ಮುಖಾಮುಖಿಯಾದಾಗ ದ್ವಂದ್ವಗಳು, ಸಂಘರ್ಷಗಳು, ವಿರೋಧಾತ್ಮಕ ಕರ್ಷಣಗಳು ಹುಟ್ಟಿಕೊಳ್ಳುತ್ತವೆ. ಮನುಷ್ಯ ಸಮಾಜವು ಜೀವನ್ಮುಖಿ ಬದುಕಿನ ಪರ ಮತ್ತು ವಿರೋಧಗಳ ಒಟ್ಟು ಮೊತ್ತವಾಗಿದೆ. ಗಂಡಸು–ಹೆಂಗಸು, ಬಂಡವಾಳ–ಶ್ರಮ, ಮಾಲೀಕ–ಕಾರ್ಮಿಕ, ಒಡೆಯ–

ಆಳು, ಬಡವ–ಶ್ರೀಮಂತ, ಸ್ಪೃಶ್ಯ–ಅಸ್ಪೃಶ್ಯ ಮುಂತಾದ ಪದಗಳು ಜೊತೆ ಜೊತೆ ಮತ್ತು ಎರಡಾಗಿ ಬರುತ್ತವೆ ಎಂಬ ಸರಳ ಅರ್ಥವನ್ನು ಕೊಡುವ ಸಾಮಾನ್ಯ ಗ್ರಹಿಕೆ ಇಲ್ಲಿದೆ.

ಸರಳ ನೋಟಕ್ಕೆ ವಿರುದ್ಧ ವ್ಯಕ್ತಿ, ವಸ್ತು ಮತ್ತು ವಿಷಯಗಳ ದ್ವಂದ್ವಾರ್ಥಕ ಅರ್ಥ ಮೂಲದಲ್ಲಿ ಅಡಗಿರುವುದನ್ನು ಕಾಣುತ್ತೇವೆ. ಉದಾಹರಣೆಗೆ ಗಂಡಸು ಮತ್ತು ಹೆಂಗಸು ಹುಟ್ಟಿನಿಂದ ಲಿಂಗಾಧಾರಿತವಾಗಿ ಬೇರ್ಪಡಿಸಿದ ಶಬ್ದಗಳಾಗಿವೆ. ಇವು ಎರಡು ವಿಭಿನ್ನ ಲಿಂಗಿಗಳ ಭೌತಿಕ ದೇಹ ರಚನೆಗೆ ಕೊಟ್ಟ ಹೆಸರುಗಳಾಗಿರದೆ, ಅವರ ದೈಹಿಕ ರಚನೆ, ವಸ್ತ್ರ, ಆಚಾರ ವಿಚಾರ, ನಡತೆ, ಹಕ್ಕು ಭಾಧ್ಯತೆಗಳು, ರೀತಿ ನೀತಿಗಳು, ಶ್ರಮ, ದುಡಿಮೆ, ದುಡಿಮೆಯಅಪಮೌಲ್ಯ(ಕಡಿಮೆ ಕೂಲಿ),ಸಾಮಾಜಿಕಸ್ಥಾನಮಾನಗಳುನಿರ್ದಿಷ್ಟನೆಲೆಯಲ್ಲಿವಿಂಗಡಿಸಲ್ಪಟ್ಟಿರುವುದರ ಸೂಚನೆಗಳಾಗಿವೆ. ಹೆಂಗಸು ಎಂದರೆ ದುರ್ಬಲ, ವಿಧೇಯ, ನೀಚ, ಚಂಚಲ, ಒಂದು ವಸ್ತು, ಪದಾರ್ಥ, ಹೆರುವ ಯಂತ್ರ, ಕಡಿಮೆ ಕೂಲಿ ಇತ್ಯಾದಿ ಕಲ್ಪನೆಗಳು ಕಣ್ಣ ಮುಂದೆ ನಿಲ್ಲುತ್ತವೆ. ಗಂಡಸೆಂದರೆ ಧೈರ್ಯ, ಆಕ್ರಮಶೀಲತೆ, ಬುದ್ಧಿಮತ್ತೆ, ಸ್ವೇಚ್ಛೆ ಮುಂತಾದ ಕಲ್ಪನೆಗಳು ಬರುತ್ತವೆ. ಇದಕ್ಕೆಲ್ಲ ಸಾಂಪ್ರದಾಯಿಕ ದೃಷ್ಟಿಕೋನ ಕಾರಣವಾದರೂ ಇವೆರಡೂ ದ್ವಂದ್ವಾತ್ಮಕತೆಯನ್ನು ಪ್ರತಿನಿಧಿಸುವ ವ್ಯಕ್ತಿತ್ವಗಳಾಗಿವೆ. ಲಿಂಗಾಧಾರಿತ ಗುರುತಿಸುವಿಕೆ(Identity)ಯನ್ನು ಪ್ರತಿನಿಧಿಸುವ ಶಬ್ದಗಳು, ಲೈಂಗಿಕ ಶೋಷಣೆಯಂಥ ಅಮಾನವೀಯ ಕ್ರೌರ್ಯವನ್ನು ಒಡಲಲ್ಲಿ ಅಡಗಿಸಿಕೊಂಡಿರುವುದು ಸ್ಪಷ್ಟವಿದೆ. ಸುಸಂಸ್ಕೃತ ಸಮಾಜವೆನ್ನಿಸಿಕೊಂಡ ಆಧುನಿಕ ಸಮಾಜದಲ್ಲಿ ಇವು ಯಾವ ಮೌಲ್ಯವನ್ನು ಬಿತ್ತುತ್ತವೆ, ನೆಲೆಗೊಳಿಸುತ್ತವೆ ಎಂಬುದನ್ನು ತೂಗಿ ನೋಡಬಹುದು. ಜಾತಿಯಾಧಾರಿತ ಶೋಷಣೆಯ ಕ್ರೌರ್ಯ ಬಿಂಬಿಸುವ ಸ್ಪೃಶ್ಯ ಮತ್ತು ಅಸ್ಪೃಶ್ಯ ಶಬ್ದಗಳನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ದುಡಿಮೆ ಮತ್ತು ಉದ್ಯೋಗವನ್ನು ವ್ಯಕ್ತಿಯ ಮೂಲಭೂತ ಹಕ್ಕಾಗಿಸದೆ, ಖಾಸಗಿ ಆಸ್ತಿ–ಹಿತಾಸಕ್ತಿಗಳನ್ನು ರಕ್ಷಿಸುತ್ತ ಬಂದ ಸಾಂಪ್ರದಾಯಿಕ ಸಾಮಾಜಿಕ ವ್ಯವಸ್ಥೆ, ಊಳಿಗಮಾನ್ಯ, ಬಂಡವಾಳಶಾಹಿ ವ್ಯವಸ್ಥೆಗಳು ಅಸಮಾನತೆಯನ್ನು ಗಟ್ಟಿಗೊಳಿಸುವ ಇಂತಹ ಪದಪುಂಜಗಳ ಹುಟ್ಟಿಗೆ ಕಾರಣವಾಗಿವೆ. ಬಂಡವಾಳ–ಶ್ರಮ, ಮಾಲೀಕ–ಕಾರ್ಮಿಕ, ಒಡೆಯ–ಆಳು ಖಾಸಗಿ ಆಸ್ತಿ ಆಧಾರಿತ, ಪುರುಷಪ್ರಧಾನ ಸಮಾಜ ರಚನೆಯನ್ನು ಬಿಂಬಿಸುವ ಶಬ್ದಗಳಾಗಿವೆ. ಮೇಲಿನ ಜೋಡಿ ಶಬ್ದಗಳ ಮೊದಲಿನ ಪದಗಳು ಮೇಲ್ವರ್ಗವನ್ನು ಪ್ರತಿನಿಧಿಸಿದರೆ, ಎರಡನೇ ಪದಗಳು ಅಶಕ್ತ ವರ್ಗವನ್ನು ಪ್ರತಿನಿಧಿಸುತ್ತವೆ. ಇವುಗಳನ್ನು ಉಚ್ಚರಿಸಿದೊಡನೆ ವಂಶಪಾರಂಪರ್ಯದ ಅಧಿಕಾರ, ಅಂತಸ್ತು, ದರ್ಪ, ಆಸ್ತಿ ಹಿತಾಸಕ್ತಿ, ಆರ್ಥಿಕ ಬಲ, ದಬ್ಬಾಳಿಕೆ, ಕಾನೂನು ಹಿಡಿತದಂತಹ ವ್ಯಕ್ತಿ ಚಿತ್ರಣ ಕಣ್ಣು ಮುಂದೆ ನಿಲ್ಲುತ್ತದೆ. ಇವು ಕೇವಲ ಶಬ್ದಗಳಾಗಿರದೆ ಪಾರಂಪರಿಕವಾಗಿ ಬಂದ ವ್ಯವಸ್ಥೆಯಲ್ಲಿನ ಜೀವಂತ ಪಾತ್ರಗಳಾಗಿ ಆಕ್ರಮಣ ಮಾಡುತ್ತವೆ. ಶ್ರಮ, ಕಾರ್ಮಿಕ, ಆಳು ಮೊದಲಾದ ಪದಗಳು ಈ ವರ್ಗಕ್ಕೆ ವಿರುದ್ಧವಾದ ವ್ಯಕ್ತಿತ್ವ ಸೂಚಕಗಳಾಗಿದ್ದು ಬಡತನ, ಶೋಷಣೆ, ದೀನತೆ, ಹಸಿವು, ನಿರಕ್ಷರತೆ, ಅಸಂಘಟಿತ ವರ್ಗದ ವ್ಯಕ್ತಿತ್ವಗಳನ್ನು ಪ್ರತಿನಿಧಿಸುತ್ತವೆ. ಅಕ್ಷರಗಳಿಂದ ಎರಡು ವಿಭಿನ್ನ ವರ್ಗಗಳ ಜೀವನಶೈಲಿ, ಆರ್ಥಿಕ, ಸಾಮಾಜಿಕ ಬದುಕಿನ ನೆಲೆಗಳನ್ನು ತಿಳಿಸುವ ದ್ವಂದ್ವಾತ್ಮಕ ಶಬ್ದಗಳು ಆ ವರ್ಗಗಳ ದ್ವಂದ್ವಾತ್ಮಕ ಸಂಬಂಧವನ್ನು ತಿಳಿಸುವುದು ವಿಶೇಷವಾಗಿದೆ. ಆಳು, ಕಾರ್ಮಿಕರ ಶ್ರಮ, ದುಡಿಮೆಯಿಂದ ಬದುಕುವ ಒಡೆಯ, ಮಾಲೀಕನಂತಹ ಬಂಡವಾಳಶಾಹಿಗಳು ಅವರ ದುಡಿಮೆಯಿಂದಲೇ ಗಳಿಸಿದ ಆರ್ಥಿಕ ಬಲದಿಂದ ಅವರನ್ನೇ ಶೋಷಿಸುವುದು ಎರಡೂ ವರ್ಗಗಳ ಅಂತಸ್ಸಂಬಂಧವೂ ಆಗಿದೆ.

ಗಂಡಸು ಹೆಂಗಸಾಗುವ, ಮಾಲೀಕ ಕಾರ್ಮಿಕನಾಗುವ, ಸ್ಪೃಶ್ಯ ಅಸ್ಪೃಶ್ಯನಾಗುವ ಅಥವಾ ಇದರ ವಿರುದ್ಧ ಚಲನೆಯಲ್ಲಿ ಪರಿವರ್ತನೆಯಾಗುವ ವ್ಯಕ್ತಿ, ವಸ್ತು, ವಿಷಯಗಳ ಸಂಕ್ರಮಣ ಸ್ಥಿತಿಯನ್ನೂ ದ್ವಂದ್ವಾತ್ಮಕತೆ ಪ್ರತಿಬಿಂಬಿಸುತ್ತದೆ. ಹೆಂಗಸು ಗಂಡಸಾಗಿ ಪರಿವರ್ತನೆಗೊಳ್ಳುವಾಗ ಕೇವಲ ಅವಳ ದೈಹಿಕ ಅಂಗಗಳು, ಜೈವಿಕ ಸಂಬಂಧಗಳುಬದಲಾವಣೆಯಾಗುವುದಿಲ್ಲ.ಅವಳಮಾನಸಿಕರಚನೆ,ಬಟ್ಟೆ,ಆಚಾರವಿಚಾರ,ವರ್ತನಾಂಶಗಳು, ಹಕ್ಕು ಬಾಧ್ಯತೆಗಳು, ಸಾಮಾಜಿಕ ಸಂಬಂಧಗಳು, ರೀತಿ ನೀತಿಗಳು, ದುಡಿಮೆಯ ಪ್ರತಿಫಲಗಳು ಒಂದು ನೆಲೆಯಿಂದ ಇನ್ನೊಂದು ನೆಲೆಗೆ ಪಲ್ಲಟಗೊಳ್ಳುತ್ತವೆ. ಈ ಸಂಕ್ರಮಣ ಕಾಲದ ಅವನ/ಅವಳ ಮಾನಸಿಕ ಸ್ಥಿತಿ ಹಲವಾರು ದ್ವಂದ್ವ, ತಲ್ಲಣ, ತುಮುಲಗಳಿಂದ ಕೂಡಿ, ಒಟ್ಟಾರೆ ಇದನ್ನು ದ್ವಂದ್ವಾತ್ಮಕ ಸ್ಥಿತಿ ಎಂದು ಹೇಳುತ್ತೇವೆ. ಸೇವಕ ಮಾಲೀಕನಾಗುವ, ಅಸ್ಪೃಶ್ಯ ಸ್ಪೃಶ್ಯನಾಗುವ ಪಲ್ಲಟಗಳು, ಮಾನಸಿಕ ರೂಪಾಂತರದೊಂದಿಗೆ ಅವನ ಭೌತಿಕ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಸಂಬಂಧಗಳ ರೂಪಾಂತರವೂ ಆಗಿದೆ. ಇಂತಹ ಸಂದಿಗ್ಧ ಸ್ಥಿತಿಯಲ್ಲಿ ಸ್ಪೃಶ್ಯ–ಅಸ್ಪೃಶ್ಯ, ಶೂದ್ರ–ಕ್ಷತ್ರಿಯ, ವರ್ಣ ರೂಪಾಂತರಗಳ ಉದಾಹರಣೆಗಳನ್ನು ಭಾರತೀಯ ಪುರಾಣ, ಇತಿಹಾಸಗಳಲ್ಲಿ ಗಮನಿಸುತ್ತೇವೆ. ಸೂತಪುತ್ರನಾದ ಕರ್ಣ, ತಾನು ಕುಂತಿಪುತ್ರನಾಗಿದ್ದು ಕ್ಷತ್ರಿಯ ಕುಲಸಂಜಾತ ಎಂದು ತಿಳಿದಾಗ ಅನುಭವಿಸುವ ಮಾನಸಿಕ ಸಂಘರ್ಷ ಸ್ಪೃಶ್ಯ–ಅಸ್ಪೃಶ್ಯ, ಮೇಲು–ಕೀಳುಗಳ ದ್ವಂದ್ವಾತ್ಮಕ

ನಿಲುವಾಗಿದೆ. ಗೊಲ್ಲರವನಾಗಿದ್ದ ಕೃಷ್ಣ ಕ್ಷತ್ರಿಯ ರಾಜಕುಮಾರನೆಂಬ ವಿಷಯ ತಿಳಿದಾಗಲೂ ಇದೇ ಮಾನಸಿಕ ಸ್ಥಿತಿಯನ್ನು ಅನುಭವಿಸುತ್ತಾನೆ. ಸಂಪ್ರದಾಯವಾದಿಗಳ ದೃಷ್ಟಿಯಲ್ಲಿ ದೇವಪುರುಷನಾದ್ದರಿಂದ ಆತಂಕದ ಬಾಧೆ ಇವನನ್ನು ಬಹಳ ದಿನ ಕಾಡುವುದಿಲ್ಲ, ಹೊಸ ವ್ಯವಸ್ಥೆಗೆ ಹೊಂದಿಕೊಳ್ಳುತ್ತಾನೆ. ಈ ಸ್ಥಿತ್ಯಂತರದ ಭೌತಿಕ ಪರಿಣಾಮಗಳನ್ನು ಬೀಜ ಮೊಳೆತು ಸಸಿಯಾಗುವ, ಮೊಟ್ಟೆ ಕಾವು ಪಡೆದು ಮರಿಯಾಗುವ, ಶಕ್ತಿಗಳ ರೂಪಾಂತರ, ಜೈವಿಕ ಅಂಗಾಂಗಗಳ ರೂಪಾಂತರ ಹಂತದಲ್ಲಿ ಗಮನಿಸುತ್ತೇವೆ.

೬

ದ್ವಂದ್ವಾತ್ಮಕ ಚಿಂತನೆ ಯಾವುದೇ ವ್ಯಕ್ತಿ, ವಸ್ತು, ವಿಷಯ ಕುರಿತ ಸರಳ ರೇಖಾ ಚಿಂತನೆಯಲ್ಲ. ಆ ವಸ್ತು, ವಿಷಯದ ಮೇಲೆ–ಕೆಳಕ್ಕೆ, ಎಡ–ಬಲಕ್ಕೆ, ಹಿಂದೆ–ಮುಂದೆ ವಿರುದ್ಧ ದಿಕ್ಕಿನಲ್ಲಿ ಚಿಂತನೆ ಮಾಡುವುದಾಗಿದೆ. ಇದನ್ನು ವಕ್ರರೇಖಾ ಚಿಂತನೆಯೆನ್ನಬಹುದು ಅಥವಾ ತರ್ಕಬದ್ಧವಾದ ಸರಣಿ ಎಂತಲೂ ಕರೆಯಬಹುದಾಗಿದೆ. ವಕ್ರ ರೇಖಾ ಚಿಂತನೆಯ ಫಲಗಳು ಧನಾತ್ಮಕ ಅಥವಾ ಋಣಾತ್ಮಕವಾಗಿ ಪರಿಣಮಿಸುತ್ತವೆ. ಸತ್ಯವನ್ನು ಎರಡು ವಿರುದ್ಧ ದಿಕ್ಕಿನ ತರ್ಕದಲ್ಲಿ ಹುಡುಕುವುದು ದ್ವಂದ್ವಾತ್ಮಕ ಚಿಂತನೆ ಎನ್ನಿಸುತ್ತದೆ.

ಸರಿ ಮತ್ತು ತಪ್ಪು, ನ್ಯಾಯ ಮತ್ತು ಅನ್ಯಾಯ ಹಾಗೂ ಸತ್ಯ ಮತ್ತು ಸುಳ್ಳು ಶಬ್ದಗಳು ಮನುಷ್ಯ ಸಮಾಜದಲ್ಲಿ ಪ್ರಚಲಿತದಲ್ಲಿರುವ ಮೌಲ್ಯಸೂಚಕ ಶಬ್ದಗಳಾಗಿವೆ. ಮೌಲ್ಯವನ್ನು ಸೂಚಿಸುವ/ ಪ್ರತಿಪಾದಿಸುವ, ಜೊತೆ ಜೊತೆ ಚಲಾವಣೆಗೊಳ್ಳುವ ಇಂತಹ ಶಬ್ದಗಳು ವಿರುದ್ಧ ಮೌಲ್ಯಗಳ ಸಾಪೇಕ್ಷ ಸಂಬಂಧವನ್ನು ಹೊಂದಿವೆ. ಇಲ್ಲಿ ಪ್ರತಿಪಾದಿಸಲ್ಪಡುವ ಮೌಲ್ಯ ವ್ಯಕ್ತಿಯಿಂದ ವ್ಯಕ್ತಿಗೆ, ಸಂದರ್ಭದಿಂದ ಸಂದರ್ಭಕ್ಕೆ ಬದಲಾವಣೆಗೊಳ್ಳಬಹುದು. ಒಂದು ವಸ್ತು, ವಿಷಯ ಒಬ್ಬ ವ್ಯಕ್ತಿಗೆ/ವರ್ಗಕ್ಕೆ ಸರಿ ಎಂದು ಕಂಡರೆ, ಇನ್ನೊಂದು ವ್ಯಕ್ತಿ/ವರ್ಗಕ್ಕೆ ತಪ್ಪಾಗಿ ಗೋಚರಿಸಬಹುದು. ಒಂದು ವರ್ಗಕ್ಕೆ ಕೊಡುವ/ ಅನ್ವಯಿಸುವ 'ನ್ಯಾಯ' ಶಬ್ದ ಇನ್ನೊಂದು ವರ್ಗಕ್ಕೆ ಅನ್ಯಾಯವೆನಿಸಬಹುದು/ ಅನ್ಯಾಯವೆಸಗಬಹುದು ಅಥವಾ ಏನನ್ನೂ ಕೊಡದೆ ತಟಸ್ಥವಾಗಬಹುದು. ಸಾಂದರ್ಭಿಕವಾಗಿ ಸತ್ಯ ಸುಳ್ಳಾಗಬಹುದು, ಸುಳ್ಳು ಸತ್ಯವಾಗಬಹುದು. ಕರ್ನಾಟಕ ಸರಕಾರ ಜಾರಿಗೆ ತಂದಿರುವ ಗ್ರಾಮೀಣ ಕೃಪಾಂಕ ಕಾನೂನು ಇದಕ್ಕೆ ಒಂದು ನಿದರ್ಶನವಾಗಿದೆ. ಕಾನೂನು ಮೇಲ್ವರ್ಗದ ಮಕ್ಕಳಿಗೆ ನ್ಯಾಯ ಒದಗಿಸಿದರೆ ಕೆಳ, ದಲಿತವರ್ಗದ ಮಕ್ಕಳಿಗೆ ಅನ್ಯಾಯವೆಸಗಿತು. ಇದನ್ನು ಜಾರಿಗೊಳಿಸುವ ಸರಕಾರದ ನಿರ್ಧಾರ ಗ್ರಾಮೀಣ ಜನರಿಗೆ ಸರಿಯಾಗಿ ಕಂಡರೆ, ನಗರದ ಕುಟುಂಬಗಳಿಗೆ ತಪ್ಪಾದ ನಿರ್ಧಾರವಾಗಿ ಕಾಣುತ್ತದೆ. ಹೆಚ್ಚುತ್ತಿರುವ ಭಯೋತ್ಪಾದನೆ ಒಂದು ಧರ್ಮದ ದೃಷ್ಟಿಯಲ್ಲಿ ಧರ್ಮಯುದ್ಧದ ತ್ಯಾಗದ ನೆಲೆಯಲ್ಲಿ ಸರಿ ಎನ್ನಿಸಿದರೆ, ಆಡಳಿತದ ದೃಷ್ಟಿಯಲ್ಲಿ ಪಾತಕವೆನ್ನಿಸಿಕೊಂಡು ತಪ್ಪಾಗುತ್ತದೆ. ಆದ್ದರಿಂದ ಮನುಷ್ಯ ಸಮಾಜದಲ್ಲಿ ಹಲವು ಸಂಗತಿಗಳು, ವಿದ್ಯಮಾನಗಳು, ವರ್ತನಾಂಶಗಳು, ನಡಾವಳಿ, ನಿರ್ಧಾರಗಳು ದ್ವಂದ್ವಾತ್ಮಕ ರೂಪ/ ನಿಲುವುಗಳಿಗೆ ಒಳಗಾಗುತ್ತವೆ.

### ನಿಸರ್ಗದ ದ್ವಂದ್ವಾತ್ಮಕತೆ : ಒಂದು ಚರ್ಚೆ

ಪ್ರಕೃತಿ ಮತ್ತು ಮನುಷ್ಯರ ಸಂಬಂಧ ಮಾತೃತ್ವ ನೆಲೆಯ ಸಹಬಾಳ್ವೆಯ ಸಂಬಂಧವಾಗಿದೆ. ಪ್ರಕೃತಿ ಸಾಂಗತ್ಯ ಬಿಟ್ಟು ಮನುಷ್ಯ ಬದುಕಲಾರ ಎಂದು ಹೇಳಿದರೆ ಕ್ಲೀಷೆಯಾಗಲಾರದು. ತನ್ನ ದೈನಂದಿನ ಎಲ್ಲ ಅಗತ್ಯಗಳಿಗೆ, ಆಹಾರ, ಬಟ್ಟೆ, ವಸತಿ, ಅಭಿವೃದ್ಧಿಯಂತಹ ಕಾರ್ಯಗಳಿಗೆ, ನಿಸರ್ಗದ ನೆರವನ್ನು ಮಾನವರು ನಂಬಿದರೆ, ಅವನನ್ನು ಪೋಷಿಸುವ ಮಾತೃತ್ವ ನೆಲೆಯಲ್ಲಿ ಪ್ರಕೃತಿ ಕಾರ್ಯ ನಿರ್ವಹಿಸುತ್ತದೆ. ಪ್ರಕೃತಿ ಚಿರಂತರ, ಚಿರಸ್ಥಾಯಿ ಎಂದು ನಂಬಿದ್ದ ಮಾನವರ ನಂಬಿಕೆಗಳು ಬದಲಾಗಿವೆ. ಪ್ರಕೃತಿ ಚಿರಸ್ಥಾಯಿಯಲ್ಲ, ನಿರಂತರ ಬದಲಾವಣೆಗೆ ಒಳಗಾಗುತ್ತದೆ. ಈ ಬದಲಾವಣೆಗಳು ಸ್ವೇಚ್ಛೆಯಿಂದ ಕೂಡಿರದ ನಿಯಮಬದ್ಧ ಮತ್ತು ತತ್ವಬದ್ಧ ಬದಲಾವಣೆಗಳಾಗಿವೆ.

ಹದಿನೆಂಟನೇ ಶತಮಾನದ ಮೊದಲರ್ಧದ ಕಾಲದವರೆಗೂ ಪ್ರಕೃತಿ ವಿಜ್ಞಾನವು 'ಪ್ರಕೃತಿ ಚಿರ–ಸ್ಥಿರ' ಎಂಬ ನಂಬಿಕೆ ಹೊಂದಿತ್ತು. "ಪ್ರಕೃತಿಯು ಯಾವುದೇ ರೂಪದಲ್ಲಿ ಅಸ್ತಿತ್ವಕ್ಕೆ ಬಂದಿರಬಹುದಾದರೂ, ಒಮ್ಮೆ ಬಂದ ಮೇಲೆ ಅದು ಎಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆಯೋ ಅಲ್ಲಿಯವರೆಗೆ ಮೊದಲಿನಂತೆ ಇರುತ್ತದೆ. ಗ್ರಹಗಳೂ ಅವುಗಳ ಉಪಗ್ರಹಗಳೂ ಮೊದಲ ನೂಕಿನ (First Push) ರಭಸದಿಂದ ಚಲನೆಗೆ ಬಂದ ಬಳಿಕ, ತಮ್ಮ ಪೂರ್ವ ನಿರ್ಧಾರಿತ ಅಂಡ ವೃತ್ತಗಳಲ್ಲಿ ಚಿರಕಾಲದವರೆಗೂ ಸುತ್ತುತ್ತಲೇ ಇರುತ್ತವೆ ಅಥವಾ ಏನೇ

ಆಗಲಿ ಪ್ರಳಯ ಕಾಲದವರೆಗೂ ಸುತ್ತುತ್ತಲೇ ಇರುತ್ತವೆ. ನಕ್ಷತ್ರಗಳು ಸದಾ ಕಾಲಕ್ಕೂ ತಮ್ಮ ಸ್ಥಳಗಳಲ್ಲೇ ಚಲನೆಯಿಲ್ಲದೇ ಸ್ಥಿರವಾಗಿ ಉಳಿದಿರುತ್ತವೆ. ಒಂದನ್ನೊಂದು ಸಾರ್ವತ್ರಿಕ ಗುರುತ್ವಾಕರ್ಷಣೆಯ ಮೂಲಕ ಸ್ವಸ್ಥಳಗಳಲ್ಲಿ ಇರಿಸಿರುತ್ತವೆ. ಭೂಮಿಯೂ ಯಾವುದೇ ಬದಲಾವಣೆಗಳಿಲ್ಲದೆ, ಮೊದಲ ದಿನದಿಂದಲೂ ಇದ್ದಂತೆಯೇ ಮುಂದೆಯೂ ಇರುತ್ತದೆ. ಇಂದಿನ ಆರು ಖಂಡಗಳು ಎಂದಿನಿಂದಲೂ ಅಸ್ತಿತ್ವದಲ್ಲಿದ್ದವು. ಅವುಗಳಲ್ಲಿ ಯಾವೊತ್ತೂ ಅವೇ ಪರ್ವತಗಳು, ಅವೇ ಕಣಿವೆಗಳು ಹಾಗೂ ಅವೇ ನದಿಗಳು ಇದ್ದವು, ಮುಂದೆಯೂ ಇರುತ್ತವೆ" ಎಂಬ ಮೂಲಭೂತವಾದಿಗಳ ಸಿದ್ಧಾಂತವು ಇದಾಗಿದೆ.

ಈ ಸಿದ್ಧಾಂತವು ಖಗೋಳಶಾಸ್ತ್ರಕ್ಕೆ ಮಾತ್ರವಲ್ಲದೇ, ಜೀವಶಾಸ್ತ್ರ, ರಸಾಯನಶಾಸ್ತ್ರ ಮತ್ತು ಭೌತಶಾಸ್ತ್ರಕ್ಕೂ ಅನ್ವಯವಾಗುತ್ತಿತ್ತು. ೧೭೫೫ರಲ್ಲಿ 'ಕ್ಯಾಂಟ್' ಎಂಬ ತತ್ವಶಾಸ್ತ್ರಜ್ಞ ಬರೆದ 'ಸಾಮಾನ್ಯ ನೈಸರ್ಗಿಕ ಇತಿಹಾಸ ಹಾಗೂ ಆಕಾಶದ ಸಿದ್ಧಾಂತ' ಎಂಬ ಕೃತಿಯು ಪ್ರಕಟಣೆಯಾಗಿ ನಿಸರ್ಗದ ದ್ವಂದ್ವಾತ್ಮಕತೆಯ ಮೇಲೆ ಪ್ರಖರವಾದ ಜ್ಞಾನದ ಬೆಳಕನ್ನು ಚೆಲ್ಲಿದೆ. ಪೂರ್ವಕಾಲದ ಜಡ ಮನೋಭಾವವನ್ನು ಬದಲಾಯಿಸಿದ ಕೀರ್ತಿ ಒಬ್ಬ ತತ್ವಜ್ಞಾನಿಯದು ಎನ್ನಬಹುದು. ಇದು ತತ್ವಶಾಸ್ತ್ರ ಕೃತಿಯಾದ್ದರಿಂದ ತಕ್ಷಣದ ಫಲಿತಾಂಶವನ್ನು ನೀಡದೆ ಹೋಯಿತು. ಅನಂತರ ಬಂದ ಲಾಪ್ಲಾಸ್ ಅವರು ಮತ್ತು ಹರ್ಷಲ್ ಅವರು ಅದರ ಒಳ ವಿಷಯಗಳನ್ನು ವಿಸ್ತಾರವಾಗಿ ವಿವರಿಸಿ ಸಿದ್ಧಾಂತಕ್ಕೆ ಆಳವಾದ ಅಡಿಪಾಯ ಹಾಕಿದ್ದಾರೆ. "ಸೃಷ್ಟಿಯು ಬದಲಾಗದಂತಹ ಜೀವಾಂಗಗಳನ್ನು ಹೊಂದಿಲ್ಲ ಮತ್ತು ಬದಲಾಗುತ್ತಿರುವ ಜೀವಾಂಗಗಳನ್ನು ಹೊಂದಿದೆ. ನಿಸರ್ಗವು ಎಂದೋ ಇದ್ದಂತೆಯೇ ಇಂದೂ ಕೂಡ ಅದೇ ರೀತಿಯಲ್ಲಿ ಇಲ್ಲ. ಅದು ತನ್ನೊಳಗೆ ನಿರಂತರವಾಗಿ ಬದಲಾಗುತ್ತಿದೆ. ಕೆಲವು ಹೊಸ ಅಂಶಗಳು ಕಾಣಿಸುತ್ತಿವೆ ಮತ್ತೆ ಕೆಲವು ಅಂಶಗಳು ನಾಶವಾಗುತ್ತಿವೆ" (ಅದೇ. ಪುಟ ೨೭೫, ೨೭೬) ಎಂಬುದು ಆ ಸಿದ್ಧಾಂತದ ಕೇಂದ್ರಬಿಂದುವಾಗಿದೆ. ಇದಕ್ಕೆ ಆಧಾರವಾಗಿ ಭೂಗರ್ಭಶಾಸ್ತ್ರ ಹುಟ್ಟಿಕೊಂಡು ಭೂಮಿಯ ಸ್ತರಗಳು ಒಂದಾದ ಮೇಲೆ ಒಂದರಂತೆ ರೂಪಗೊಂಡು, ಸಿಕ್ಷೇಪಗೊಂಡಿದ್ದನ್ನು ತೋರಿಸಿಕೊಟ್ಟಿತು. ಅಲ್ಲದೇ, ಈ ಸ್ತರಗಳು ಒಳಗೊಂಡಿದ್ದ (ನಾಶವಾಗಿದ್ದ ಪ್ರಾಣಿಗಳ) ಗಡುಸು ಹೊರ ಹೊದಿಕೆಗಳನ್ನು ಅಸ್ತಿಪಂಜರಗಳನ್ನು ಮತ್ತು ಆಗ ಅಸ್ತಿತ್ವದಲ್ಲಿರದ ಸಸ್ಯಗಳ ಕಾಂಡ, ಎಲೆ ಹಾಗೂ ಹಣ್ಣುಗಳನ್ನು ತೋರಿಸಿಕೊಟ್ಟಿದೆ. ಇಡಿಯಾಗಿ ಭೂಮಿಯಷ್ಟೇ ಅಲ್ಲ. ಅದರ ಈಗಿನ ಹೊರಮೈಯೂ ಅದರ ಮೇಲೆ ಜೀವಿಸುತ್ತಿರುವ ಸಸ್ಯಗಳೂ, ಪ್ರಾಣಿಗಳೂ ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದಿವೆ ಎಂಬುದನ್ನು ತೋರಿಸಿಕೊಟ್ಟಿದೆ.

ಭೌತಶಾಸ್ತ್ರವೂ ಸಹ ಈ ತತ್ವಗಳಿಂದ ಹೊರತಾಗಿಲ್ಲವೆಂಬ ವಿಷಯವನ್ನು ಸಂಶೋಧನೆಗಳು ಅನಾವರಣಗೊಳಿಸಿವೆ. ೧೮೪೨ರಲ್ಲಿ ಹೈಲ್‌ಬ್ರಾನ್‌ನಲ್ಲಿ ಮಾಯೆರ್‌ರೂ ಮಾಂಚೆಸ್ಟರ್‌ನಲ್ಲಿ ಜ್ವಲ ಎಂಬ ಭೌತಶಾಸ್ತ್ರಜ್ಞರು ಶಾಖವು ಯಾಂತ್ರಿಕ ಶಕ್ತಿಯಾಗಿಯೂ, ಯಾಂತ್ರಿಕ ಶಕ್ತಿಯು ಶಾಖವಾಗಿಯೂ ಪರಿವರ್ತನೆಗೊಳ್ಳುವುದನ್ನು ಪ್ರಯೋಗ ಮಾಡಿ ತೋರಿಸಿದರು. ಅದೇ ರೀತಿ ವಿಜ್ಞಾನಿಗಳು ಭೌತಶಾಸ್ತ್ರದಲ್ಲಿ ಬರುವ ವಿವಿಧ ಶಕ್ತಿ ರೂಪಗಳಾದ ಭೌತಶಕ್ತಿಗಳು, ಯಾಂತ್ರಿಕ ಶಕ್ತಿ, ಶಾಖ, ಬೆಳಕು, ವಿದ್ಯುತ್, ಕಾಂತ ಶಕ್ತಿ, ರಾಸಾಯನಿಕ ಶಕ್ತಿಗಳು ನಿರ್ದಿಷ್ಟ ಪರಿಸ್ಥಿತಿಗಳಲ್ಲಿ ಒಂದು ಶಕ್ತಿ ಇನ್ನೊಂದು ಶಕ್ತಿಯಾಗಿ ಪರಿವರ್ತನೆಗೊಳ್ಳುತ್ತವೆ. ಹಾಗಾಗುವಾಗ ಯಾವ ರೀತಿಯ ಶಕ್ತಿಯೂ ನಷ್ಟವಾಗುವುದಿಲ್ಲ ಎಂಬುದನ್ನು ಸಾಧಿಸಿ ತೋರಿಸಿದ್ದಾರೆ. ಜಗತ್ತಿನಲ್ಲಿ ಅಸ್ತಿತ್ವದಲ್ಲಿದ್ದ, 'ಚಲನೆಯ ಪ್ರಮಾಣವು ಸ್ಥಿರವಾದದ್ದು' ಎಂಬ ಡೇಕಾರ್ಟ್ ಅವರ ಸೂತ್ರವನ್ನು ಅಲ್ಲಗಳೆದು ವಿಜ್ಞಾನಿಗಳು 'ಭೌತಶಕ್ತಿಗಳು ಮತ್ತು ಚಲನಶಕ್ತಿಗಳು ಸ್ಥಿರವಾದವುಗಳಲ್ಲ, ಅವು ನಿರ್ದಿಷ್ಟ ನಿಯಮಗಳಿಗೆ ಅನುಗುಣವಾಗಿ ಒಂದು ರೂಪದಿಂದ ಮತ್ತೊಂದಕ್ಕೆ ಸಾಗಿಹೋಗುತ್ತವೆ, ಅವುಗಳು ಅಂತರ ಸಂಬಂಧಿತವಾದವು ಮತ್ತು ಒಂದು ಇನ್ನೊಂದಾಗಿ ಪರಿವರ್ತನೆಗೊಳ್ಳುತ್ತವೆ' ಎಂಬುದನ್ನು ಶಾಸ್ತ್ರ ರೀತಿಯಲ್ಲಿ ಸಾಧಿಸಿ ತೋರಿಸಿದರು. ಈ ಸಂಶೋಧನೆಗಳು ಒಂದು ವಸ್ತುವಿನ ನಿರಂತರ ಚಲನೆಯ ಆವರ್ತವೇ (ರೂಪಾಂತರ) ಅಥವಾ ಆ ವಸ್ತುವಿನ ದ್ವಂದ್ವಾತ್ಮಕತೆಯೆಂಬುದನ್ನು ತೋರಿಸಿಕೊಟ್ಟಿವೆ.

ಒಂದು ವಸ್ತುವನ್ನು ಸುಟ್ಟಾಗ ಅದರ ಸ್ಥಿರಶಕ್ತಿ (Potential Energy, An energy which acquired by its position), ದ್ರವ್ಯರಾಶಿಗಳು ಸುಟ್ಟು ಅವು ಶಾಖಶಕ್ತಿ(Heat Energy)ಯಾಗಿ ರೂಪಾಂತರ ಹೊಂದುತ್ತವೆ. ಜಲಾಶಯದಲ್ಲಿ ನಿಂತ ನೀರಿನ ಸ್ಥಿರಶಕ್ತಿ (Potential Energy) ಕೊಳವೆಗಳಲ್ಲಿ ಚಲಿಸುವಾಗ ಚಲನಶಕ್ತಿ(Kinetic Energy)ಯಾಗಿ ರೂಪಾಂತರಗೊಂಡು, ಜಲಚಕ್ರಗಳಿಗೆ ರಭಸವಾಗಿ ತಾಗಿ(Impact)ದಾಗ, ಅದು ನಿಯತಾವರ್ತಕ (Rotary Motion) ಶಕ್ತಿಯಾಗಿ ವಿದ್ಯುತ್‌ಶಕ್ತಿ ಉತ್ಪಾದಿಸುವುದನ್ನು ನೋಡಿದ್ದೇವೆ. ಹೀಗೆ, Potential Energy > Kinetic Energy > Rotary Motion > Electricity ಒಂದು ಶಕ್ತಿ ಇನ್ನೊಂದು

ಶಕ್ತಿಯ ರೂಪ ಪಡೆಯುವುದನ್ನು ಮತ್ತು ನಾಶವಾಗದೆ ಉಳಿಯುವುದನ್ನು ಪ್ರಕೃತಿ ದ್ವಂದ್ವಾತ್ಮಕತೆಯ ರೂಪದಲ್ಲಿ ಕಾಯ್ದುಕೊಂಡು ಬಂದಿದೆ. ಮೋಡ, ಮಳೆ, ನೀರು, ಆವಿ ಮತ್ತು ಪುನಃ ಮೋಡಗಳಾಗುವ ಪ್ರಕೃತಿಯ ಪುನರಾವರ್ತನೆಯ ಚಕ್ರಗಳು ಇದೇ ತತ್ವ, ನಿಯಮಗಳಡಿ ನಡೆಯುತ್ತವೆ.

ಇದು ಜೀವಶಾಸ್ತ್ರದ ಪ್ರಕ್ರಿಯೆಗೂ ಅನ್ವಯಿಸುತ್ತದೆ. ಜೀವಿಗಳ ಅಂಗಭಾಗಗಳು, ಜೀವಕೋಶಗಳು ಹುಟ್ಟುತ್ತವೆ, ಬದುಕುತ್ತವೆ ಮತ್ತು ಕ್ರಮೇಣ ಸವೆದು ನಾಶವಾಗುತ್ತವೆ ಎಂಬುದನ್ನು ಎತ್ತಿ ಹಿಡಿಯಲಾಗಿದೆ. ಇದು ಜೈವಿಕ ಹಾಗೂ ಅಜೈವಿಕ ಪ್ರಕೃತಿಯ ನಡುವಿನ ಅಂತರವನ್ನು ಕನಿಷ್ಠ ಪ್ರಮಾಣಕ್ಕಿಳಿಸಿತಷ್ಟೇ ಅಲ್ಲ, ಜೀವಾಂಗಗಳ ವಂಶಾನುಕ್ರಮ ಬೆಳವಣಿಗೆಯ ಸಿದ್ಧಾಂತದ ಮಾರ್ಗದಲ್ಲಿ ಮೊದಲಿದ್ದ ತೊಂದರೆಗಳನ್ನು ನಿವಾರಿಸಿದೆ. ಇಡೀ ಪ್ರಕೃತಿಯನ್ನು ನಿರಂತರ ವ್ಯತ್ಯಾಸ ಹೊಂದುತ್ತಿರುವ (ದ್ವಂದ್ವಾತ್ಮಕತೆ) ಹರಿವಿನಲ್ಲಿ ಚಕ್ರಗತಿಯಲ್ಲಿ ಆವರ್ತಿಸುವ ಮಾರ್ಗದಲ್ಲಿ ಚಲಿಸುತ್ತಿರುವುದಾಗಿ ಈ ತತ್ವಗಳು ಒಪ್ಪಿಕೊಂಡಿವೆ. ಅದು, 'ಇಡೀ ಪ್ರಕೃತಿಯು, ಅತ್ಯಂತ ಸಣ್ಣ ಮೂಲವಸ್ತುವಿನಿಂದ ಹಿಡಿದು ಅತ್ಯಂತ ದೊಡ್ಡ ಮೂಲ ವಸ್ತುವಿನವರೆಗೆ, ಮರಳ ಕಣದಿಂದ ಹಿಡಿದು ಸೂರ್ಯನವರೆಗೆ, ಪ್ರೋಟಿಸ್ಟ್‌ಗಳಿಂದ ಹಿಡಿದು ಮಾನವನವರೆಗೆ, ಇಡೀ ಪ್ರಕೃತಿಯು, ಸತತವಾಗಿ ಅಸ್ತಿತ್ವಕ್ಕೆ ಬರುತ್ತ ನಾಶವಾಗುತ್ತ ಹೋಗುತ್ತಿರುತ್ತದೆ, ತಡೆ ಇಲ್ಲದೇ ಹರಿವಿನಿಂದ ಕೂಡಿರುತ್ತದೆ, ವಿಶ್ರಾಂತಿಯಿಲ್ಲದೇ ಚಲನೆಯಲ್ಲಿರುತ್ತದೆ, ಬದಲಾಗುತ್ತಲೇ ಇರುತ್ತದೆ'' ಎಂಬ ಸಿದ್ಧಾಂತ ದ್ವಂದ್ವಾತ್ಮಕತೆಯಿಂದ ಕೂಡಿದೆ.

## ಪ್ರಕೃತಿ ಮತ್ತು ಮನುಷ್ಯ ಸಮಾಜ : ದ್ವಂದ್ವಾತ್ಮಕ ಸಂಬಂಧ

ಪ್ರಕೃತಿ ಮತ್ತು ಮನುಷ್ಯ ಸಮಾಜ, ಭೌತಿಕ ಪರಿಸರ ಮತ್ತು ಮನುಷ್ಯ ಸಮಾಜ, ಪ್ರಕೃತಿ ಮತ್ತು ಭೌತಿಕ ಪರಿಸರ, ಆಕಾಶ ಮತ್ತು ಭೂಮಿ, ಮೋಡ ಮತ್ತು ಮಳೆ, ಕತ್ತಲು ಮತ್ತು ಬೆಳಕು, ಬೆಳಗು ಮತ್ತು ಸಂಜೆ, ಹಗಲು ಮತ್ತು ರಾತ್ರಿ ಮುಂತಾದ ವಸ್ತು, ವಿಷಯ, ವಿದ್ಯಮಾನಗಳ ಮುಖಾಮುಖಿಯಲ್ಲಿ ನಾವು ಪ್ರಕೃತಿ ಮತ್ತು ಮನುಷ್ಯ ಸಮಾಜದ ದ್ವಂದ್ವಾತ್ಮಕ ಸಂಬಂಧವನ್ನು ಕಾಣುತ್ತೇವೆ.

ಭೂಮಿಯ ಸಂದರ್ಭದಲ್ಲಿ, ಪ್ರಕೃತಿ ಮತ್ತು ಮಾನವರು ಸಹಜೀವಿಗಳು. ಪ್ರಕೃತಿಯಿಲ್ಲದೆ ಮನುಷ್ಯ ಸಮಾಜವಿಲ್ಲ. ಹಸಿರು, ಬೆಟ್ಟ, ಕಾಡು, ನದಿ, ಹಳ್ಳ, ಸಾಗರ, ವನ್ಯ ಸಂಪತ್ತು, ಪಶು ಪಕ್ಷಿ ಪ್ರಾಣಿ ಸಂಕುಲ ಪ್ರಕೃತಿದತ್ತ ಸಂಪತ್ತುಗಳಾಗಿವೆ. ಆದಿ ಮಾನವರಿಂದ ನಾಗರಿಕತೆಯತ್ತ ಸಾಗಿದ ಮನುಷ್ಯರು ಪ್ರಕೃತಿಯ ಮಡಿಲಲ್ಲಿ ಮನುಷ್ಯ ಸಮಾಜವನ್ನು ನಿರ್ಮಿಸಿಕೊಂಡು ಬಂದಿದ್ದಾರೆ. ಯಾವ ಮಟ್ಟದಲ್ಲಿ ಎಂಬ ಪ್ರಶ್ನೆಯ ಹಿಂದೆಯೇ, ಪ್ರಕೃತಿ ನಾಶದಲ್ಲಿ ಮನುಷ್ಯ ಸಮಾಜದ ನಿರ್ಮಾಣ ಇದೆ. ನಿಸರ್ಗದ ಬದಲಾಗುವ ನಿಯಮಗಳನ್ನು ಮನುಷ್ಯ ತನ್ನ ನಾಗರಿಕತೆಯ ಹುಟ್ಟು ಬೆಳವಣಿಗೆಗೆ ಧಾರಾಳವಾಗಿ ಬಳಸಿಕೊಂಡಿದ್ದಾನೆ. ಗ್ರಾಮ, ನಗರಗಳ ನಿರ್ಮಾಣ, ಕೃಷಿ, ಕೈಗಾರಿಕೆಗಳಿಗಾಗಿ ಕಾಡು ನಾಶ, ಗಣಿಗಾರಿಕೆ, ಪಶು, ಪಕ್ಷಿ, ಪ್ರಾಣಿಗಳ ಬೇಟೆ ಮುಂತಾದ ಮನುಷ್ಯ ಸಮಾಜದ ನಿರ್ಮಾಣ/ಕಾರ್ಯಗಳು ಪ್ರಕೃತಿ ನಾಶವನ್ನು ಸೂಚಿಸುತ್ತವೆ. ಪ್ರಕೃತಿ ಮತ್ತು ಮನುಷ್ಯ ಸಮಾಜವನ್ನು ನಾವು ಎರಡು ವಿರುದ್ಧ ಕ್ರಿಯೆ ಮತ್ತು ಪ್ರತಿಕ್ರಿಯೆಗಳಲ್ಲಿ ಇಟ್ಟು ನೋಡಬಹುದು. ಒಂದು ನಿರಂತರ ಬದಲಾವಣೆಯೊಂದಿಗೆ ಸೃಷ್ಟಿಕ್ರಿಯೆ ಮಾಡುತ್ತ ಜೀವಪರ ನಿಲುವು ಹೊಂದಿದರೆ, ಇನ್ನೊಂದು ನಾಶ (ಲಯ) ಕ್ರಿಯೆಯನ್ನು ಪ್ರತಿನಿಧಿಸುತ್ತ ನಿರಂತರ ಜೀವ ವಿರೋಧಿ ನಿಲುವನ್ನು ಹೊಂದಿದೆ. ಎರಡೂ ದ್ವಂದ್ವಾತ್ಮಕ ಕ್ರಿಯೆಗಳನ್ನು ಪ್ರತಿನಿಧಿಸುವುದು ಸ್ಪಷ್ಟವಿದೆ. ಇದೇ ನೆಲೆಯಲ್ಲಿ ಭೌತಿಕ ಪರಿಸರ ಮತ್ತು ಮನುಷ್ಯ ಸಮಾಜದ ಮುಖಾಮುಖಿಯನ್ನು ಗಮನಿಸುತ್ತೇವೆ. ಭೌತಿಕ ಪರಿಸರದ ಅಂಗಗಳಾದ ಭೂಮಿ, ಗಾಳಿ, ನೀರು, ಬೆಳಕು, ಶಬ್ದ ಮನುಷ್ಯ ಸಮಾಜದ ನಿರಂತರ ಆಕ್ರಮಣಕ್ಕೆ ಒಳಗಾಗುವುದನ್ನು ಕಾಣುತ್ತೇವೆ. ಮನುಷ್ಯ ಸಮಾಜದ ನಿರ್ಮಾಣ,ಬೆಳವಣಿಗೆಗಳಲ್ಲಿ ಭೌತಿಕ ಪರಿಸರ ಮಾಲಿನ್ಯಗೊಂಡು,ತಮ್ಮ ಮೂಲಗುಣಗಳನ್ನು ಕಳೆದುಕೊಳ್ಳುತ್ತಿವೆ. ನಗರೀಕರಣ, ಜಾಗತೀಕರಣದಂತಹ ಆಧುನಿಕ ಪ್ರಕ್ರಿಯೆಗಳು ಭೌತಿಕ ಪರಿಸರದ ನಾಶವನ್ನು ಪ್ರತಿನಿಧಿಸುತ್ತಿವೆ. ಭೌತಿಕ ಪರಿಸರದ ನಾಶ/ಮಾಲಿನ್ಯ ಸೂರ್ಯನ ಅಪಾಯಕಾರಿ ಕಿರಣಗಳನ್ನು ತಡೆ ಹಿಡಿಯುತ್ತಿದ್ದ ಭೂಮಿಯ ಮೇಲಿನ ಓಝೋನ್ ಅನಿಲ ಪರದೆಯನ್ನು ಛಿದ್ರಗೊಳಿಸುತ್ತಿರುವುದು, ಪರಿಣಾಮ ಧ್ರುವ ಭಾಗಗಳಲ್ಲಿರುವ ಹಿಮ ಬಂಡೆಗಳು ನೀರಾಗಿ ಹರಿದು ಸಮುದ್ರ ಮಟ್ಟವನ್ನು ಏರಿಸುತ್ತಿರುವಂತೆ, ಅಪಾಯದ ಅಂಚಿಗೆ ಮನುಷ್ಯ ಸಮಾಜವನ್ನು ತಳ್ಳುತ್ತಿದೆ. ಮನುಷ್ಯ ಸಮಾಜ ವಿಸ್ತೀರ್ಣವಾದಂತೆ ಪ್ರಕೃತಿ ನಾಶವಾಗುತ್ತ, ನಾಗರಿಕತೆ ಹೆಚ್ಚಾದಂತೆ ಭೌತಿಕ ಪರಿಸರ ಹಾನಿ(ಲಯ)ಗೊಳಗಾಗುವ ದ್ವಂದ್ವಾತ್ಮಕ ಪರಿಣಾಮಗಳನ್ನು ಕಾಣುತ್ತೇವೆ.

ಪ್ರಕೃತಿ ಮತ್ತು ಪ್ರಕೃತಿ, ಪ್ರಕೃತಿ ಮತ್ತು ಭೌತಿಕ ಪರಿಸರಗಳು ಮುಖಾಮುಖಿಯಾದಾಗ ಪ್ರಕೃತಿಯ ನಿರಂತರ ಬದಲಾವಣೆಯೊಂದಿಗೆ ನಿಸರ್ಗದ ಮರುಸೃಷ್ಟಿಯನ್ನು ಕಾಣುತ್ತೇವೆ. ಮೋಡದಿಂದ ಸುರಿದ ಮಳೆ ನೀರು ನದಿ, ಸಾಗರ ಸೇರುವ, ನಂತರ ಸೂರ್ಯನ ಶಾಖದಿಂದ ಆವಿಯಾಗಿ, ಮೋಡವಾಗಿ ಮಳೆಯ ಸೃಷ್ಟಿಯಾಗುವ ಕ್ರಿಯೆ ಶಕ್ತಿಗಳ ರೂಪಾಂತರವಾಗಿದೆ. ಈ ವರ್ತುಲದಲ್ಲಿ ಶಕ್ತಿ ನಾಶವಾಗದೆ, ಪ್ರಕೃತಿಯ ಮರುಸೃಷ್ಟಿಯಲ್ಲಿ ಲೀನವಾಗುವುದು ಸೃಷ್ಟಿಯ ದ್ವಂದ್ವಾತ್ಮಕತೆಯ ಒಂದು ಅಂಶವಾಗಿದೆ.

## ಗ್ರಾಮ-ನಗರ ಮತ್ತು ನಗರ-ಗ್ರಾಮಗಳ ದ್ವಂದ್ವ

ಗ್ರಾಮ ಮತ್ತು ನಗರ ಇವೆರಡೂ ಮನುಷ್ಯರ ಸಮೂಹ ಬದುಕಿನ ಎರಡು ವೈರುಧ್ಯಮಯ ಜೀವ ಕೇಂದ್ರಗಳು. ಗ್ರಾಮವು ಸಮೂಹ ಬದುಕಿನ ಸಣ್ಣ ಘಟಕ. ಗ್ರಾಮವೆಂದರೆ ಸೀಮಿತ ಆರ್ಥಿಕ, ಧಾರ್ಮಿಕ, ಸಾಮಾಜಿಕ ಸ್ವಾತಂತ್ರ್ಯ, ಸೌಲಭ್ಯಗಳ ಸಂಕೇತವಾಗಿದೆ. ಕ್ರಮೇಣ ಗ್ರಾಮವು ಆಧುನಿಕ ಸೌಲಭ್ಯ, ತಂತ್ರಜ್ಞಾನ, ಬಂಡವಾಳ ಕೇಂದ್ರೀಕರಣಗೊಂಡು ಬೆಳೆದು ಗಾತ್ರ, ಸ್ವಭಾವ, ವರ್ತನಾಂಶಗಳಿಂದ ನಗರವೆನ್ನಿಸಿಕೊಳ್ಳುತ್ತದೆ. ಇವು, ಒಂದು ಇನ್ನೊಂದಕ್ಕೆ ಪೂರಕವಾಗಿವೆ ಎಂಬುದನ್ನು ಪೂರ್ಣ ಒಪ್ಪಿಕೊಳ್ಳದ, ಒಂದು ಇನ್ನೊಂದಕ್ಕೆ ವಿರೋಧವಾಗಿವೆ ಎಂಬುದನ್ನೂ ಪುರಸ್ಕರಿಸದ ಚಲನಶೀಲ ವ್ಯವಸ್ಥೆಗಳಾಗಿವೆ. ಇವೆರಡಕ್ಕೂ ತಮ್ಮವೇ ಆದ ವಿಶಿಷ್ಟತೆ, ಸಾಂಸ್ಕೃತಿಕವಾದ ನೆಲೆಗಳೂ ಇವೆ.

ಗ್ರಾಮವು ಸೀಮಿತ ಚೌಕಟ್ಟಿನ ಆರ್ಥಿಕ, ಧಾರ್ಮಿಕ, ಸಾಮಾಜಿಕ ಹಾಗೂ ರಾಜಕೀಯ ವ್ಯವಸ್ಥೆಗಳನ್ನು ಹೊಂದಿದ್ದರೆ, ನಗರ ಪ್ರಗತಿಯತ್ತ ತೆರೆದುಕೊಂಡು ಶೀಘ್ರ ಅಭಿವೃದ್ಧಿ ಹೊಂದುತ್ತಿರುವ ನೆಲೆಯಾಗಿದೆ. ಗ್ರಾಮದಲ್ಲಿ ಮಂದ ಚಲನಶೀಲತೆ, ಅರೆ ಮುಚ್ಚಿದ ಸಂಸ್ಕೃತಿ, ಜಡ ಪ್ರವೃತ್ತಿಯ ವ್ಯವಸ್ಥೆಯಿದ್ದರೆ, ನಗರವು ಶೀಘ್ರ ಚಲನಶೀಲತೆ, ತೆರೆದ ಸಾಂಸ್ಕೃತಿಕ ವಾತಾವರಣ, ವೇಗದ ಬದುಕು, ದುಗುಡ ತುಂಬಿದ ಯಾಂತ್ರಿಕ ಜೀವನ, ಜಾತಿ, ಮತ ಕೇಂದ್ರಿತ ನೆಲೆಗಳಿಂದ ಬಿಡುಗಡೆಯ ದಿಕ್ಕಿನತ್ತ ಮುಖ ಮಾಡಿದ ವ್ಯವಸ್ಥೆಯಾಗಿದ್ದು ಇವು ದ್ವಂದ್ವ ಪ್ರವೃತ್ತಿಯನ್ನು ಬಿಂಬಿಸುವ ವ್ಯವಸ್ಥೆಗಳ ಎರಡು ನೆಲೆಗಳೆಂದು ಗುರುತಿಸಲ್ಪಟ್ಟಿವೆ.

ಗ್ರಾಮ ನಗರಗಳು ಎರಡು ವೈರುದ್ಧ್ಯಮಯ ಜೀವಕೇಂದ್ರಗಳು. ಗ್ರಾಮ/ನಗರ ಸಮುದಾಯವನ್ನು ಒಂದು ಅವಿಚ್ಛಿನ್ನ ಘಟಕವಾಗಿ ಪರಿಗಣಿಸಿ, ಈ ಘಟಕದ ನಗರ/ಗ್ರಾಮ ಸ್ಥಳಾಂತರ, ಸಂಘರ್ಷ ಮತ್ತು ಗ್ರಾಮ/ನಗರಕ್ಕೆ ಮರಳಿ ಬರುವ ಇಡೀ ಪ್ರಕ್ರಿಯೆ ದ್ವಂದ್ವಾತ್ಮಕತೆ ಎನ್ನಿಸಿಕೊಳ್ಳುತ್ತದೆ. ಈ ಸಮುದಾಯ(ಘಟಕ)ದ ಮೂಲನೆಲೆ ನಿರಾಕರಣೆ, ಹೊಸನೆಲೆ ಪ್ರವೇಶ ಮತ್ತು ಮರಳಿ ಮೂಲನೆಲೆಗೆ ಸ್ಥಳಾಂತರಗಳು ದ್ವಂದ್ವಾತ್ಮಕ ಪ್ರಕ್ರಿಯೆಗಳನ್ನು ಪ್ರತಿನಿಧಿಸುತ್ತವೆ.




ನಿರಾಕರಣೆ, ಆಯ್ಕೆ ಮತ್ತು ಮರು ಆಯ್ಕೆ ಇವು ವ್ಯಕ್ತಿಗಳ ನಿರ್ಧಾರಗಳಾಗಿವೆ. ನಿರಾಕರಣೆ ಮತ್ತು ಆಯ್ಕೆಗಳ ಅಂತಸ್ಸಂಬಂಧ ದ್ವಂದ್ವಾತ್ಮಕತೆಯಿಂದ ಕೂಡಿದೆ. ನಿರಾಕರಣೆಯ ನಿರ್ಧಾರದ ಅಂತ್ಯದಲ್ಲಿ ಆಯ್ಕೆ ಪ್ರಕ್ರೀಯೆ ಹುಟ್ಟಿಕೊಳ್ಳುತ್ತದೆ ಮತ್ತು ಬೆಳೆಯುತ್ತ ಹೋಗುತ್ತದೆ. ಆದ್ದರಿಂದ ನಿರಾಕರಣೆ ಮತ್ತು ಆಯ್ಕೆ ಪ್ರಕ್ರಿಯೆಗಳು ಅರ್ಥ, ಕ್ರಿಯೆ, ನಿರ್ಧಾರ ಮತ್ತು ಫಲಿತಗಳಲ್ಲಿ ವಿರುದ್ಧಾರ್ಥಕ ಮತ್ತು ವಿರೋಧಾತ್ಮಕ ಪ್ರಕ್ರಿಯೆಗಳೆಂದು ಹೇಳಬಹುದು. ಒಂದು ಕುತೂಹಲಕರ ಸಂಗತಿಯೆಂದರೆ ನಿರಾಕರಣೆ ಮತ್ತು ಆಯ್ಕೆ ನಿರ್ಧಾರಗಳು ವಿರೋಧಾತ್ಮಕ ಪ್ರಕ್ರಿಯೆಗಳಾದರೂ ಹಲವು ಸಂದರ್ಭಗಳಲ್ಲಿ ಇವುಗಳ ಪ್ರಮಾಣ ಸಮಾನುಪಾತ ಸಂಬಂಧವನ್ನು ಹೊಂದಿದೆ.

ನಿರಾಕರಣೆಯ ನಿರ್ಧಾರ ಪ್ರತಿಶತ ಸೊನ್ನೆ ಇದ್ದಾಗ ಆಯ್ಕೆ ನಿರ್ಧಾರವೂ ಪ್ರತಿಶತ ಸೊನ್ನೆಯಾಗಿರುತ್ತದೆ. ನಿರಾಕರಣೆಯ ನಿರ್ಧಾರ ಗಟ್ಟಿಗೊಂಡಾಗ (೧೦೦ ಪ್ರತಿಶತ) ಆಯ್ಕೆಯ ನಿರ್ಧಾರವೂ ಗಟ್ಟಿಯಾಗುತ್ತದೆ. ಇನ್ನೂಕೆಲವುಸಂದರ್ಭಗಳಲ್ಲಿನಿರಾಕರಣೆಯನಿರ್ಧಾರಮೂರ್ತಗೊಂಡನಂತರಆಯ್ಕೆಯಅಂಕುರವಾಗುತ್ತದೆ. ಹೀಗೆ ವ್ಯಕ್ತಿಯ ಗ್ರಾಮ/ನಗರ ನಿರಾಕರಣೆ, ಆಯ್ಕೆ ಪ್ರಕ್ರಿಯೆಗಳು ವಿರೋಧಾತ್ಮಕ ಕ್ರಿಯೆ, ಅರ್ಥ, ಫಲಿತಗಳನ್ನು ಹೊಂದಿದ್ದರೂ ಸಮಾನುಪಾತ ಅಥವಾ ಪ್ರತ್ಯೇಕವಾದ ಪ್ರಮಾಣಗಳಲ್ಲಿ ಕಾಣಿಸಿಕೊಳ್ಳುತ್ತವೆ.

ಇನ್ನು, ನಿರ್ಧಾರ (ನಿರಾಕರಣೆ, ಆಯ್ಕೆ ಮತ್ತು ಮರು ಆಯ್ಕೆ) ಮತ್ತು ದ್ವಂದ್ವಾತ್ಮಕತೆಗೆ ವಿಲೋಮಾನುಪಾತ ಸಂಬಂಧವಿದೆ. ನಿರಾಕರಣೆಯ ಆರಂಭದ ಹಂತದಲ್ಲಿ, ನಿರ್ಧಾರ ಪ್ರತಿಶತ ಸೊನ್ನೆ ಇದ್ದಾಗ ದ್ವಂದ್ವಾತ್ಮಕತೆ ಪ್ರತಿಶತ ೧೦೦ ಇರುತ್ತದೆ. ನಂತರ ಇವುಗಳ ಪ್ರಮಾಣ ಅನುಕ್ರಮವಾಗಿ ೧ % – ೯೯ %, ೨ % – ೯೮ % ಅನುಪಾತದಲ್ಲಿ ಬದಲಾಗುತ್ತ ಹೋಗುತ್ತದೆ. ನಿರ್ಧಾರ ಗಟ್ಟಿಗೊಂಡ (೧೦೦ ಪ್ರತಿಶತ) ಹಂತದಲ್ಲಿ ದ್ವಂದ್ವಾತ್ಮಕತೆ ಸೊನ್ನೆ ಪ್ರತಿಶತವಾಗುವುದು ಗಮನಾರ್ಹವಾಗಿದೆ.

ವ್ಯಕ್ತಿಗಳ ಮೂಲನೆಲೆ ನಿರಾಕರಣೆ, ಹೊಸನೆಲೆ ಆಯ್ಕೆ, ಸ್ಥಳಾಂತರ, ಸಂಘರ್ಷ ಮತ್ತು ಪುನಃ ಮೂಲನೆಲೆಯ ಆಯ್ಕೆಯಂತಹ ಅವಸ್ಥೆಗಳಲ್ಲಿ ದ್ವಂದ್ವಾತ್ಮಕತೆ ಹುಟ್ಟಿಕೊಳ್ಳುತ್ತದೆ. ದ್ವಂದ್ವಾತ್ಮಕತೆ ಎಂಬುದು ಒಂದು ಮಾನಸಿಕ ಹೊಯ್ದಾಟ. ಮನಸ್ಸಿನ ಮೇಲಾಗುವ ವಿರುದ್ಧ ದಿಕ್ಕಿನ ಬಲ/ಸೆಳೆತಗಳು ಮತ್ತು ಪರಿಣಾಮಗಳು ದ್ವಂದ್ವಾತ್ಮಕ ಮನಸ್ಥಿತಿಯನ್ನು ನಿರ್ಮಿಸುತ್ತವೆ. ಉದಾಹರಣೆಗೆ ಗ್ರಾಮ ನಗರಗಳ ವಾಸ್ತವಿಕ ಅಂಶಗಳನ್ನು ತೆಗೆದುಕೊಳ್ಳೋಣ. ಗ್ರಾಮದಲ್ಲಿ ಜನಿಸಿದ ಪ್ರತಿಯೊಬ್ಬ ಮನುಷ್ಯರ ಜೀವನ ವಿಧಾನವು ಪೂರ್ವನಿರ್ಧಾರಿತವಾಗಿರುತ್ತದೆ. ಅವರು ಧರಿಸುವ ಬಟ್ಟೆ, ಸ್ವೀಕರಿಸುವ ಆಹಾರ, ಪೂಜಿಸುವ ದೇವರು, ನಿತ್ಯ ಆಚರಣೆಗಳು, ಸಂಪ್ರದಾಯಗಳು, ಅವರ ಜನ್ಮಕ್ರಿಯೆಗಳಿಂದ ಹಿಡಿದು ಮರಣಾನಂತರದ ಆಚರಣೆಗಳವರೆಗೆ ಎಲ್ಲವೂ ಅವರ ಹುಟ್ಟಿನೊಂದಿಗೆ ಪೂರ್ವನಿರ್ಧಾರಿತವಾಗಿರುತ್ತವೆ. ಇವೆಲ್ಲ ಪ್ರಕ್ರಿಯೆಗಳು ಅವರು ಜನ್ಮ ತಾಳಿದ ಧರ್ಮ, ಜಾತಿಗಳನ್ನು ಬಹಳಷ್ಟು ಅವಲಂಬಿಸಿರುತ್ತವೆ. ಅವರ ದೈಹಿಕ, ಮಾನಸಿಕ ಬೆಳವಣಿಗೆ, ವಿದ್ಯಾಭ್ಯಾಸಗಳು ಈ ವ್ಯವಸ್ಥೆಗಳನ್ನೇ ಅವಲಂಬಿಸಿದ್ದು ಎಲ್ಲವೂ ಒಂದು ಮಿತಿಯೊಳಗೆ ಜರುಗುತ್ತವೆ. ಸಾಮಾನ್ಯವಾಗಿ ಕೃಷಿ, ಪಶುಪಾಲನೆಯನ್ನು ಅವಲಂಬಿಸಿರುವ ಕುಟುಂಬದ ಉತ್ಪನ್ನವೂ ಸಹ ಒಂದು ಪರಿಮಿತಿಯಲ್ಲಿದ್ದು ಸದಸ್ಯರ ಜೀವನ ಶೈಲಿ, ಸೌಲಭ್ಯಗಳ ಮೇಲೆ ನಿಯಂತ್ರಣದ ಪರಿಣಾಮ ಬೀರುತ್ತದೆ.

ಆದರೆ ನಗರದ ವಾತಾವರಣವು ತನ್ನದೇ ಆದ ಸ್ವಂತಿಕೆಯನ್ನು ಹೊಂದಿದ್ದು, ಅದು ತೆರೆದ ಜೀವನ ಶೈಲಿಯಾಗಿದೆ. ಇಲ್ಲಿ ಧಾರ್ಮಿಕ, ಸಾಮಾಜಿಕ, ಆರ್ಥಿಕ ಚೌಕಟ್ಟುಗಳಿಲ್ಲ. ನಗರ ವ್ಯಕ್ತಿಗಳ ವೈಯಕ್ತಿಕ ಕೆಲಸ, ಧಾರ್ಮಿಕ ಆಚರಣೆ ಮುಂತಾದ ಕ್ರಿಯೆಗಳನ್ನು ಸಾಮಾನ್ಯವಾಗಿ ಸಮಾಜ ಗಮನಿಸುವುದಿಲ್ಲ, ಪ್ರಶ್ನಿಸುವುದಿಲ್ಲ. ಆ ಮಟ್ಟಿಗೆ ಅವರು ಸ್ವತಂತ್ರವೆಂದು ಹೇಳಬೇಕು. ಗ್ರಾಮೀಣ ಜೀವನ ವಿಧಾನದಲ್ಲಿ ಹಲವಾರು ವರ್ಷ ನಿರ್ಬಂಧಿತ ಬದುಕಿನಲ್ಲಿ ಬಾಳಿದ ವ್ಯಕ್ತಿಗಳು, ನಗರದ ಸ್ವಚ್ಛಂದ ವಾತಾವರಣಕ್ಕೆ ಹೊಂದಿಕೊಳ್ಳಲು ಪರದಾಡಬೇಕಾಗುತ್ತದೆ. ನಗರದ ಅನೇಕ ಸಮಸ್ಯೆಗಳಿಗೆ ಅವರು ಮುಖಾಮುಖಿ ಆದಾಗ ಹಳ್ಳಿಯ ತಮ್ಮ ಗತ ಜೀವನ, ಅದನ್ನು ಕಳೆದ ಕಾಲ, ಅಲ್ಲಿನ ಸ್ಥಿತಿಗತಿ ಕುರಿತು ಅವರ ಮನವು ಮಿಡಿದು ದ್ವಂದ್ವಭಾವವನ್ನು ಮೂಡಿಸುತ್ತದೆ. ಈ ರೀತಿಯ ಭೌತಿಕ, ಭಾವನಾತ್ಮಕ ದ್ವಂದ್ವಾತ್ಮಕತೆಯ ಅನುಭವ ಹೊಂದಿದ ಒಂದು ಮನಸ್ಸು, ಗ್ರಾಮ, ನಗರದ ಬದುಕಿನ ಎರಡೂ ಮಜಲುಗಳನ್ನು ಅನುಭವಿಸಿದಾಗ ಗಳಿಸಿಕೊಳ್ಳುವ ಬದುಕಿನ ಪರಿಪೂರ್ಣತೆಯನ್ನು ಕಥನ ಸಾಹಿತ್ಯದ ಅನೇಕ ಕೃತಿಗಳು ಬಿಂಬಿಸಿವೆ. ಮನುಷ್ಯರ ಈ ಭಾವನಾತ್ಮಕ ದ್ವಂದ್ವವು ಅವರ ನಿತ್ಯ ಜೀವನದ ಮೇಲೆ ಪರಿಣಾಮಗಳನ್ನು ಬೀರುತ್ತದೆ. ಅವರ ಬಟ್ಟೆ, ಆಹಾರ, ಆಚಾರ, ವಿಚಾರಗಳು ತಕ್ಷಣ ಬದಲಾವಣೆಯಾಗದೇ ಒಂದು ರೀತಿಯ ಸಂಕ್ರಮಣ ಕಾಲಘಟ್ಟ ಸ್ಥಿತಿಯಲ್ಲಿ ಅವರು ಬಾಳುತ್ತಾರೆ, ಅನುಭವಿಸುತ್ತಾರೆ. ಗ್ರಾಮ, ನಗರಗಳ ಭಾವನಾತ್ಮಕ ದ್ವಂದ್ವದಲ್ಲಿ ತೊಳಲಾಡುತ್ತಾರೆ.

ದ್ವಂದ್ವ/ದ್ವಂದ್ವಾತ್ಮಕತೆ ಎಂಬುದು ಖಚಿತತೆ ಇಲ್ಲದ, ಡೋಲಾಯಮಾನ ಮಾನಸಿಕ ಸ್ಥಿತಿಯ ಸೂಚನೆಯೂ ಆಗಿದೆ. ದ್ವಂದ್ವಾತ್ಮಕತೆ ಹಲವು ಹತ್ತು ರೂಪಗಳಲ್ಲಿ ಪ್ರಕಟವಾಗುತ್ತದೆ. ವ್ಯಕ್ತಿಗಳ ಮಾನಸಿಕ ಸ್ಥಿತಿ, ಭಾವನೆ, ವರ್ತನಾಂಶಗಳು, ನಿರ್ಧಾರ, ಮಾತು/ನುಡಿ, ತರ್ಕ, ಚಿಂತನೆ, ಗ್ರಹಿಕೆ ಹೀಗೆ ಬದುಕಿನ ವಿವಿಧ ಹಂತ, ವಿವಿಧ ಸಂದರ್ಭಗಳಲ್ಲಿ ಇದನ್ನು ಗುರುತಿಸಬಹುದು. ಅದೇ ರೀತಿ ನಿಸರ್ಗದ ವರ್ತನಾಂಶಗಳಲ್ಲಿ ದ್ವಂದ್ವ ಹಾಸುಹೊಕ್ಕಾಗಿದೆ.

## ಕೊನೆಯ ಟಿಪ್ಪಣಿಗಳು

೧. ಭಕ್ತ ಕನಕದಾಸರು (ಪದಗಳು), ೧೯೭೫, ಬೆಂಗಳೂರು, ಪುಟ ೧೫೦, ೧೫೧

೨. ಆರ್ಕೆ ಮಣಿಪಾಲ (ಡಾ), ವಿಮರ್ಶೆಯ ಸವಾಲು, ೨೦೦೬, ಸಂವಾದ ಪ್ರಕಾಶನ, ಪುಟ ೨೭೨

೩. ನಾರಾಯಣ ಕೆ. ವಿ., ಬೇರು ಕಾಂಡ ಚಿಗುರು, ೧೯೯೭, ವಿವೇಕ ಪ್ರಕಾಶನ, ಪುಟ ೧೬೩ - ೧೬೫

೪. ಫ್ರೆಡರಿಕ್ ಎಂಗೆಲ್ಸ್, 'ನಿಸರ್ಗದ ದ್ವಂದ್ವಾತ್ಮಕತೆ' (ಮುನ್ನುಡಿಯಲ್ಲಿ), ಪ್ರಗತಿ ಪ್ರಕಾಶನ, ಸೋವಿಯತ್ ಒಕ್ಕೂಟ ಮಾಸ್ಕೋ, ೧೯೯೦, ಪುಟ ೨೭೧

೫. ಅದೇ. ಪುಟ ೨೮೦

## ಅಧ್ಯಾಯ ಆರು

## ಕಥನ ಸಾಹಿತ್ಯ : ಗ್ರಾಮ/ ನಗರ ಜೀವನದ ನಿರಾಕರಣೆಯ ನೆಲೆಗಳು

ಮುಂಬೈ ಕರ್ನಾಟಕದ ಕಥನ ಸಾಹಿತ್ಯವು ಗ್ರಾಮ ನಗರ ಜೀವನದ ದಟ್ಟವಾದ ನೋವು-ನಲಿವು, ಸುಖ-ದುಃಖ ಮೊದಲಾದ ಜೀವನಾನುಭವಗಳ ಮೂಲಕ ಗ್ರಾಮ ಹಾಗೂ ನಗರ ಜೀವನದ ಮುಖಾಮುಖಿಯನ್ನು ದಾಖಲಿಸಿದೆ. ಆಯಾ ಲೇಖಕರು ತಮ್ಮ ತಮ್ಮ ಜೀವನಾನುಭವಗಳ ಹಿನ್ನೆಲೆಯಲ್ಲಿ ಗ್ರಾಮ ಜೀವನವನ್ನೂ, ನಗರ ಜೀವನವನ್ನೂ ಗ್ರಹಿಸಿದ್ದಾರೆ. ಅವುಗಳನ್ನು ಮುಖಾಮುಖಿ ಮಾಡಿದ್ದಾರೆ. ಅವುಗಳ ಒಟ್ಟಾರೆ ಆಸಕ್ತಿ ಗ್ರಾಮಗಳ ಕಡೆಗೆ ಇದೆಯೊ ಅಥವಾ ನಗರ/ಪಟ್ಟಣಗಳ ಕಡೆಗೆ ಇದೆಯೊ ಎಂಬುದು ಅಧ್ಯಯನದ ದೃಷ್ಟಿಯಿಂದ ತುಂಬ ಮುಖ್ಯವಾದ ವಿಷಯ. ಇದಲ್ಲದೆ ಕಥನ ಸಾಹಿತ್ಯವು, ಮನುಷ್ಯರು ನಗರ/ಪಟ್ಟಣಗಳನ್ನು ನಿರಾಕರಿಸಲು ಕಾರಣಗಳೇನು ಹಾಗೂ ಗ್ರಾಮಗಳನ್ನು ನಿರಾಕರಿಸಲು ಕಾರಣಗಳೇನು ಎಂಬ ಹುಡುಕಾಟವನ್ನು ನಮ್ಮೆದುರು ತೆರೆದಿಡುತ್ತದೆ. ಈ ಅಧ್ಯಾಯದಲ್ಲಿ, ನಿರಾಕರಣೆಗೆ ಕಾರಣವಾಗುವ ಎಲ್ಲ ಆಯಾಮಗಳನ್ನು (ಉಪ ಭಾಗಗಳಾಗಿ ವಿಂಗಡಿಸಿಕೊಂಡು) ಮತ್ತು ನಿರಾಕರಣೆಯಂತಹ ನಿರ್ಧಾರ ಸೃಷ್ಟಿಸುವ ದ್ವಂದ್ವಾತ್ಮಕತೆಯ ಅಂಶಗಳನ್ನು ಕಥನ ಸಾಹಿತ್ಯದ ಮೂಲಕ ಹುಡುಕಲು ಪ್ರಯತ್ನಿಸಲಾಗುವುದು.

### ೧. ವ್ಯಕ್ತಿಗತ ನೆಲೆಗಳು ಮತ್ತು ನಿರಾಕರಣೆ

### ಅ. ಶಿಕ್ಷಣಾಕಾಂಕ್ಷೆ

ಶಿಕ್ಷಣಾರ್ಥಿಗಳ ನಗರ ವಲಸೆ ಎಂದಿನಿಂದ ಆರಂಭವಾಯ್ತು ಎಂಬ ಪ್ರಶ್ನೆಗೆ ನಿಖರವಾದ ಉತ್ತರ ದೊರಕುವುದಿಲ್ಲ. ಗ್ರಾಮಗಳಿಂದ ಶಿಕ್ಷಣ ಕೇಂದ್ರಿತ ನಗರ ಪ್ರದೇಶಗಳಿಗೆ ವಲಸೆ  ಇತಿಹಾಸ ಕಾಲದಿಂದಲೂ ನಡೆದು ಬಂದಿದೆ. ಸ್ವಾತಂತ್ರ್ಯಪೂರ್ವ ದಿನಗಳಲ್ಲಿ ಶಿಕ್ಷಣ ಅರಸಿ ಗ್ರಾಮದಿಂದ ನಗರ ಪ್ರವೇಶಿಸುವ ವ್ಯಕ್ತಿಗಳು ಮೇಲ್ಜಾತಿಯ  ಮತ್ತು ಆರ್ಥಿಕ ಬಲ ಹೊಂದಿದ ಕುಟುಂಬದವರಾಗಿದ್ದುದು ಕಂಡುಬರುತ್ತದೆ. ಅಪ್ರತಿಮ ಪ್ರತಿಭಾವಂತರಾದ ಕೆಳವರ್ಗದ ವ್ಯಕ್ತಿಗಳು ರಾಜರ, ಸಂಘ ಸಂಸ್ಥೆಗಳ ಸಹಾಯದಿಂದ ಉನ್ನತ ಶಿಕ್ಷಣಕ್ಕಾಗಿ ನಗರ, ವಿದೇಶಗಳಿಗೆ ಹೋಗಿದ್ದುದೂ ಉಂಟು. ಸ್ವಾತಂತ್ರ್ಯಾನಂತರ ತಾಲೂಕು, ಜಿಲ್ಲಾ ಕೇಂದ್ರಗಳು, ರಾಜಧಾನಿಗಳು ಶೈಕ್ಷಣಿಕ ಕೇಂದ್ರಗಳೆನ್ನಿಸಿದರೆ, ಜಾಗತೀಕರಣದ ಇಂದಿನ ದಿನಗಳಲ್ಲಿ ಮೆಟ್ರೋಪಾಲಿಟನ್ ಸಿಟಿಗಳು ಸಹ ಪ್ರಮುಖವಾಗಿವೆ. ಶೈಕ್ಷಣಿಕ ಅಸಮತೋಲನಕ್ಕೆ ಬಡತನ, ವರ್ಣ-ವರ್ಗ ವ್ಯವಸ್ಥೆ, ಮೂಲಭೂತ ಸೌಲಭ್ಯವಂಚಿತ ಗ್ರಾಮಗಳು ಹಾಗೂ ಅಸಮಾನತೆಯ ಆಡಳಿತ ಕಾರಣವಾದರೂ, ಇಲ್ಲಿ ಇನ್ನೂ ವಿಶಾಲವಾಗಿ ಗುರುತಿಸಬಹುದಾದ ಬಾಹ್ಯ ಮತ್ತು ಆಂತರಿಕ ಕಾರಣಗಳೂ ಇವೆ.

### ಶಿಕ್ಷಣ ಮತ್ತು ನಿರಾಕರಣೆ : ಸವರ್ಣೀಯರ ನೆಲೆಯಿಂದ

ಶಿಕ್ಷಣ ಗ್ರಾಮೀಣ ಕೆಳವರ್ಗದ ಜನರನ್ನು ಏಕೆ ತಲುಪಲಿಲ್ಲ ಮತ್ತು ಅದು ಅವರಿಗೆ ಆಕರ್ಷಣೀಯವಾಗಿ ಏಕೆ ತೋರಲಿಲ್ಲ ಎಂಬ ಪ್ರಶ್ನೆಗಳನ್ನು ಮುಂದಿಟ್ಟುಕೊಂಡು ಕಥನ ಸಾಹಿತ್ಯವನ್ನು

ಪ್ರವೇಶಿಸಿದರೆ ಅದಕ್ಕೆ ಅನೇಕ ಕಾರಣಗಳು ದೊರಕುತ್ತವೆ. ಗ್ರಾಮೀಣ ಪ್ರದೇಶದ ಜನರಲ್ಲಿ ಶಿಕ್ಷಣ ಕುರಿತ ಅಜ್ಞಾನ, ಮೂಢನಂಬಿಕೆ, ಬಡತನ ಮತ್ತು ವರ್ಣ/ವರ್ಗ ವ್ಯವಸ್ಥೆಯ ದ್ವೇಷದ ದಳ್ಳುರಿಗಳು ಇದಕ್ಕೆ ಕಾರಣಗಳಾಗಿವೆ. ಕುಂದರನಾಡ ಪಾಟೀಲ ಅವರ 'ಉಲ್ಲಂಘನೆ' ಕಾದಂಬರಿಯ ಚನ್ನಬಸು ಮೆಟ್ರಿಕ್ ಪಾಸಾದ ನಂತರ, ಗೌಡರು ಎರಡನೆ ಮಗನನ್ನು ಗೌಡಿಕೆಗೆ ಇಟ್ಟುಕೊಂಡು ಇವನನ್ನು ಬೆಳಗಾವಿಗೆ ಓದಿಸಲು ಕರೆತರುತ್ತಾರೆ. ಬೆಳಗಾವಿಯ ಅವರ ದೂರದ ಸಂಬಂಧಿ ಫಕೀರಪ್ಪ ಗೌಡರಿಗೆ, 'ಅಷ್ಟೊಂದು ಹೊಲಾಮನಿ ಬಿಟ್ಟು ಸಾಲಿ ಕಲಿಸೂದ್ರಾಗ ಏನೈತಿ ಹೇಳ್ರಿ ಗೌಡ್ರ? ಕೋಟಿ ವಿದ್ಯಾದೊಳಗ ಮೇಟಿ ವಿದ್ಯಾ ಮೇಲಂತ ನಮ್ಮ ಹಿರೇರು ಹೇಳಿದಾರು. ಶ್ಯಾರದೊಳಗ ಸಾಲಿ ಕಲಿಸೋದಂದ್ರ ಘುಕ್ಕಟ ಆಗತ್ತೈತಿ?'[೧] ಎಂದು ಅಧೈರ್ಯಗೊಳಿಸುತ್ತಾನೆ. ಕುಸುಮಾಕರ ದೇವರಗೆಣ್ಣೂರು ಅವರ 'ಸಿರಿಂದ್ರಿಯ' ಕಾದಂಬರಿಯಲ್ಲೂ ಇದೇ ರೀತಿಯ ಸಂದರ್ಭವಿದೆ. ರೊಳ್ಳಿ ಮತ್ತು ದೇಸಾಯಿ ಮನೆತನಗಳ ದ್ವೇಷದ ದಳ್ಳುರಿಯಲ್ಲಿ ರೊಳ್ಳಿಯ ಮಕ್ಕಳೆಲ್ಲ ಅಶಿಕ್ಷಿತರೂ, ರೌಡಿಗಳೂ ಆಗುತ್ತಾರೆ. ಮೂರನೆ ಮಗ ಕಲ್ಲಪ್ಪನನ್ನು ಶಾಲೆಗೆ ಹಾಕಿ ಶಿಕ್ಷಣ ಕೊಡಲು ತಾಯಿ ನಿರ್ಧರಿಸಿ ತಂದೆಯ ಮುಂದೆ ಪ್ರಸ್ತಾಪಿಸುತ್ತಾಳೆ. ತಂದೆ,

> 'ನಮ್ಮ ಮನೆಯಲ್ಲಿ ಯಾರೂ ನೌಕರಿ ಮಾಡಿಲ್ಲ. ಇವನನ್ನು ಶಾಲೆಗೆ ಹಾಕಿ, ಇವನು ನೌಕರಿ ಮಾಡಬೇಕೆನ್ನುತ್ತೀಯ?' ತಾಯಿಯ ಮನಸ್ಸಿನಲ್ಲಿ ಬಂತು. 'ನೀವು ಹಾಳಾದದ್ದು ಸಾಕು. ನಿಮ್ಮ ಮಕ್ಕಳಿಗೆ ನಿಮ್ಮ ಬಾಳು ಬೇಡ. ಅವರಾದರೂ ನೌಕರಿ ಹಿಡಿದು ಸಂಸಾರ ಮಾಡಲಿ.'[೨]

ಫಕೀರಪ್ಪ, ರೊಳ್ಳಿಯರ ಮನಸ್ಸಿನಲ್ಲಿರುವುದು ಒಂದೇ ವಿಷಯವಾಗಿದ್ದು ಅದು, ಶಿಕ್ಷಣ ಭೂ ಒಡೆಯರಿಗೆ ಅನಾವಶ್ಯಕ. ಸಾಕಷ್ಟು ಭೂಮಿಕಾಣಿಗಳಿಂದ ದುಡಿದು ಉಳಿದವರಿಗೆ ಅನ್ನ ಹಾಕುವುದನ್ನು ಬಿಟ್ಟು ಓದಿ ನೌಕರಿಗೆ ಹೋದರೆ ಭೂಮಿ ನೋಡಿಕೊಳ್ಳುವವರು ಯಾರು ಎಂಬ ದೃಷ್ಟಿಕೋನ ಎದ್ದು ಕಾಣುತ್ತದೆ. ಇದು ಭೂ ಒಡೆಯರ ಮತ್ತು ಅವರ ಸಂಬಂಧಿಗಳ ಆತ್ಮಪ್ರತಿಷ್ಠೆಯಂತೆ ಕಂಡುಬಂದರೂ, ಇದರ ಮೂಲದಲ್ಲಿ ಅಹಂ, ಮೂಢನಂಬಿಕೆಗಳು ಹರಳುಗಟ್ಟಿರುವುದು ಮತ್ತು ಶಿಕ್ಷಣ ಅಂದು ಭೂಮಾಲೀಕ ವರ್ಗದಿಂದ ಹೇಗೆ ನಿರ್ಲಕ್ಷಿಸಲ್ಪಟ್ಟಿತ್ತು ಎಂಬುದು ತಿಳಿದುಬರುತ್ತದೆ. ಇವರ ಈ ಅಭಿಪ್ರಾಯ ಅತಿಶಯೋಕ್ತಿಯೂ ಅಲ್ಲ. ಮಳೆಬೆಳೆ ಸುಭಿಕ್ಷವಾಗಿದ್ದ ಕಾಲದಲ್ಲಿ ರೈತರು ಸಾಕಷ್ಟು ಬೆಳೆ ಬೆಳೆದು ದೇಶದ ಬೆನ್ನೆಲುಬು ಅನ್ನಿಸಿಕೊಂಡಿದ್ದುಂಟು. ನೌಕರಿಯಂತಹ ಕೆಲಸಕ್ಕಾಗಿಯೇ ಓದುವುದು ಅವರ ದೃಷ್ಟಿಯಲ್ಲಿ ಎರಡನೇ ದರ್ಜೆಯ ಕೆಲಸವೆನ್ನಿಸಿಕೊಂಡಿದ್ದೂ ನಿಜ. ಆದರೆ ಇಂದಿನ ಮಳೆ, ಬೆಳೆಗಳನ್ನು ನಂಬಿದ ರೈತ ಜಾಗತೀಕರಣದಿಂದ ಜರ್ಜರಿತನಾಗಿದ್ದು, ಕೃಷಿಯು ಲಾಭದಾಯಕ ಕ್ಷೇತ್ರವಾಗಿ ಉಳಿದಿಲ್ಲ. ಈ ಹಿನ್ನೆಲೆಯಲ್ಲಿ ರೈತರ ಮೂಲ ನಂಬಿಕೆಗಳು ಇಂದು ಅರ್ಥ ಕಳೆದುಕೊಳ್ಳುತ್ತಲಿವೆ. ಈ ಎರಡೂ ಸಂದರ್ಭಗಳಲ್ಲಿ ಇನ್ನೂ ಒಂದು ಸಾಮಾಜಿಕ ಸಂಕೀರ್ಣತೆಯನ್ನು ಗುರುತಿಸಬಹುದು. ಚನಬಸು, ಕಲ್ಲಪ್ಪ ರೊಳ್ಳಿ ಇಬ್ಬರೂ ಶಿಕ್ಷಣಕ್ಕೆ ನಗರ ಸೇರುವುದು ಅವರ ಪಾಲಕ, ಪೋಷಕರ ಪ್ರೋತ್ಸಾಹದಿಂದಲ್ಲ. ಬದಲಾಗಿ ದಾಯಾದಿಗಳ, ಎದುರಾಳಿಗಳ ಮುಂದೆ ಮಗನನ್ನು ಶಹರಕ್ಕೆ ಓದಿಸಲು ಬಿಟ್ಟಿದ್ದೇನೆ ಎಂಬ ಅಹಂನ ಪ್ರದರ್ಶನಕ್ಕೆ ಎಂಬುದು ಅಧ್ಯಯನ ಗುರುತಿಸಿದ ಅಂಶವಾಗಿದೆ. ಗೌಡನ ದಾಯಾದಿಯ ಮಗ, ಊರ ಭೇರ್ಮನ್ನನ ಮಗ ಶಹರಕ್ಕೆ ಶಿಕ್ಷಣಕ್ಕಾಗಿ ಹೋಗುತ್ತಾರೆಂದು ತಿಳಿದಾಗ ಚನಬಸುವನ್ನು ಗೌಡ ಓದಿಸುವ ನಿರ್ಧಾರ ತೆಗೆದುಕೊಳ್ಳುವಂತೆ, ನಿಮ್ಮ ಮಗನನ್ನು ಓದಿಸಿ ವಕೀಲನನ್ನಾಗಿ ಮಾಡಿದರೆ ವೈರಿ ದೇಸಾಯಿಯನ್ನು ಬಗ್ಗು ಬಡಿಯಬಹುದು ಎಂಬ ಸಲಹೆಗೆ ಸಹಮತ ವ್ಯಕ್ತಪಡಿಸಿ ರೊಳ್ಳಿ ತನ್ನ ಮಗನನ್ನು ನಗರಕ್ಕೆ ಕಳಿಸಲು ಒಪ್ಪಿಗೆ ಸೂಚಿಸುತ್ತಾನೆ. ಮೇಲ್ವರ್ಗದ/ಜಮೀನ್ದಾರಿಕೆಯ ಅಹಂ ಅವರ ಮಕ್ಕಳನ್ನು ಶಿಕ್ಷಣಕ್ಕಾಗಿ ನಗರಮುಖಿಯಾಗಿ ಮಾಡಿದ್ದು, ಶಿಕ್ಷಣ ಅವರಿಗೆ ಬದುಕಿನ ಅನಿವಾರ್ಯತೆ ಆಗಿರಲಿಲ್ಲ ಎಂಬುದು ಸ್ಪಷ್ಟವಿದೆ. ದಾನಪ್ಪಗೌಡ ಮತ್ತು ಕಲ್ಲಪ್ಪ ರೊಳ್ಳಿಯ ತಂದೆಯರಲ್ಲಿ ಜಮೀನ್ದಾರಿಕೆಯ ಅಹಂ ಇದೆ ಆದರೆ ಆರ್ಥಿಕ ಶಿಥಿಲತೆ(ಅಸಹಾಯಕತೆ) ಅವರನ್ನು ಗ್ರಾಮ–ನಗರಗಳ ಕುರಿತು ದ್ವಂದ್ವಕ್ಕೆ ತಳ್ಳಿದೆ. ಒಂದನ್ನು ಪುರಸ್ಕರಿಸಿದರೆ ಇನ್ನೊಂದು ಛಿದ್ರವಾಗುವ ಭಯ, ಅತಂಕಗಳು ಕಾಡಿವೆ. ಈ ಭಾವನೆಗಳು ನಗರ ಎಂಬ ಜೀವಕೇಂದ್ರದ ಸಂಪರ್ಕದಿಂದ ವ್ಯತ್ಪತ್ತಿಯಾದವುಗಳೆಂದು ಕಥನಗಳಲ್ಲಿ ಅನಾವರಣಗೊಂಡಿದೆ.

ವ್ಯಾಸರಾವ್ ನಿಂಜೂರ ಅವರ 'ಉಸಿರು' ಕಾದಂಬರಿಯ ರವಿ, ಕೇಶವರು ಶಿಕ್ಷಣಕ್ಕಾಗಿ ಗ್ರಾಮ ನಿರಾಕರಿಸುವುದು ಇದೇ ನೆಲೆ(ಅಹಂ/ಪ್ರತಿಷ್ಠೆ)ಯಲ್ಲಿ ಎಂದು ಹೇಳಬಹುದು. ಪಡಮುನ್ನೂರಿನ ವಾಸಿ

ಅನಂತಯ್ಯನವರಿಗೆ ಸುರಾಲಿನಲ್ಲಿ ಗೇಣಿ ಜಮೀನುಗಳಿದ್ದು ಅವುಗಳಿಂದ ವರ್ಷಕ್ಕಾಗುವಷ್ಟು ಉತ್ಪನ್ನ ದೊರಕುತ್ತಿರುತ್ತದೆ.

> 'ಓದಿನ ವಿಷಯದಲ್ಲಿ ಇವರು ತಮ್ಮ ಎರಡನೆಯ ಮಗ(ಕೇಶವ)ನ ಮೇಲೆ ಅಪಾರ ವಿಶ್ವಾಸವನ್ನು ಇಟ್ಟುಕೊಂಡಿರುತ್ತಾರೆ. ಕಲಿಯುವುದರಲ್ಲಿ ಪ್ರಚಂಡನಾದ ತನ್ನ ಮಗ ಅವರ ಮಾಗಣೆಯಲ್ಲಿ (ನಾಲ್ಕಾರು ಗ್ರಾಮಗಳ ಸಮೂಹ) ಹೆಚ್ಚು ಓದಿದವನು ಎನ್ನಿಸಿಕೊಳ್ಳಬೇಕು, ಮೊದಲಿಗನಾಗಿ ಇಂಜನಿಯರೋ, ಡಾಕ್ಟರೋ ಆಗಬೇಕೆಂಬ ಹಮ್ಮು, ಬಿಮ್ಮಿನಿಂದ, ಚೂರು ಗೇಣಿ ಭೂಮಿಯನ್ನು ಮಾರುವ ತ್ಯಾಗಕ್ಕೂ ಸಿದ್ಧರಾಗಿ ಮಂಗಳೂರಿನಲ್ಲಿ ಮೆಟ್ರಿಕ್ ಮುಗಿಸಿದ ಕೇಶವನನ್ನು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಬೆಂಗಳೂರು ಸೇರಿಸಲು ನಿರ್ಧರಿಸುತ್ತಾರೆ.'[೩]

ಈ ನಿರ್ಧಾರ ತೆಗೆದುಕೊಳ್ಳುವ ಮೊದಲು ಅನಂತಯ್ಯನವರು ಮೂರು ದಿನಗಳ ಕಾಲ ಆರ್ಥಿಕ ಅಸಹಾಯಕತೆ ಮತ್ತು ಆತ್ಮವಿಶ್ವಾಸದ ದ್ವಂದ್ವದಲ್ಲಿ ಬಳಲುವುದನ್ನು ಕಾಣುತ್ತೇವೆ. ಇದಕ್ಕಾಗಿ ಗೆಳೆಯ ಪುಟ್ಟಣ್ಣಯ್ಯನವರ ಸಲಹೆಯನ್ನೂ ಕೇಳುತ್ತಾರೆ. ಮಗ ಮೊದಲಿಗನಾಗಿ ಇಂಜನಿಯರೋ, ಡಾಕ್ಟರೋ ಆಗಬೇಕೆಂಬ ಹಮ್ಮು ಒಂದೆಡೆ. 'ಮನೆ ಖರ್ಚಿನೊಂದಿಗೆ ಅವನ ಖರ್ಚು ಕುತ್ತಿಗೆಗೆ ಬಂದಿದೆ. ಅವನಿನ್ನು ಮೆಡಿಕಲ್ ಕಾಲೇಜಿಗೋ, ಇಂಜನಿಯರಿಂಗ್ ಕಾಲೇಜಿಗೋ ಸೇರಿದರೆ ನಾನು ಪಡ್ಚ' (ಪುಟ ೩೧) ಎಂಬ ಆರ್ಥಿಕ ಅಸಹಾಯಕತೆಯ ಎಳೆತ ಇನ್ನೊಂದೆಡೆಯಾಗಿ, ಅನಂತಯ್ಯ ಮೂರು ದಿನ ದ್ವಂದ್ವಾತ್ಮಕತೆಯಲ್ಲಿ ತೊಳಲಾಡುತ್ತಾರೆ.

ಆದರೆ ಈ ದ್ವಂದ್ವ, ಆತಂಕ, ಆರ್ಥಿಕ ತಲ್ಲಣಗಳು ಅಧ್ಯಸಧ್ಧದ ಅಡಿಕೆ ತೋಟಗಳ ಒಡೆಯ ಸುಬ್ರಾಯಬಟ್ಟರನ್ನು ಕಾಡುವುದಿಲ್ಲ. ತನ್ನ ಮಗ (ಸಾಮಾನ್ಯ ವಿದ್ಯಾರ್ಥಿ) ರವಿಯನ್ನು ಒಬ್ಬ ಇಂಜನೀಯರ್ ಮಾಡಬೇಕೆಂಬ ಆಕಾಂಕ್ಷೆ(ಇದು ಜಮೀನ್ದಾರಿಕೆಯ ಆರ್ಥಿಕ ಬಲದ ಮಹತ್ವಾಕಾಂಕ್ಷೆ)ಯಿಂದ ಅಪಾರ ಆಸ್ತಿ ಹೊಂದಿದ್ದ ಇವರು ಕ್ಯಾಪಿಟೇಶನ್ ಫೀಜ್ ಕೊಟ್ಟು ಮಣಿಪಾಲದ ಇಂಜನಿಯರಿಂಗ್ ಕಾಲೇಜಿಗೆ ಸೇರಿಸಲು ತೀರ್ಮಾನಿಸುತ್ತಾರೆ. ಕಥನದಲ್ಲಿ ಗಮನಿಸಬೇಕಾದ ಅಂಶವೆಂದರೆ, ರವಿ ಒಬ್ಬ ಸೃಜನಶೀಲ ವ್ಯಕ್ತಿ ಮತ್ತು ಕಲಾರಾಧಕ. ಯಕ್ಷಗಾನ ಕಲೆಯಲ್ಲಿ ಅಪಾರ ಆಸಕ್ತಿ ಹೊಂದಿದ ರವಿಗೆ ಇಂಜನಿಯರಿಂಗ್ ವಿಷಯ ಶುಷ್ಕ ಶುಂಠಿ. ಆದರೆ ಅಪ್ಪನ ಅಣತಿಯನ್ನು ಮೀರುವಂತಿಲ್ಲ. ಒಂದೆಡೆ ಕಲೆಯ ಕುರಿತು ಆಸಕ್ತಿ, ಪ್ರಾಣಪ್ರೀತಿ, ಇನ್ನೊಂದೆಡೆ ಅಪ್ಪನ ಭೀತಿ. ಈ ಎರಡು ವಿರುದ್ಧಾತ್ಮಕ ಬಲಗಳ ಒತ್ತಡದಲ್ಲಿ ರವಿ ಒದ್ದಾಡುತ್ತಾನೆ. 'ಅದಕ್ಕೇ ನೋಡು ದುರಂತ ಅನ್ನುವುದು. ನನ್ನನ್ನು ಅಪ್ಪ ಓದಿಸಬಲ್ಲರು. ಆದರೆ ಕಲಿಯುವ ತಾಕತ್ತು ನನಗಿಲ್ಲ. ನಿನಗೆ ಪ್ರತಿಭೆ ಇದೆ. ಆದರೆ ಮತ್ತೊಂದು ಇಲ್ಲ' ಎಂಬ ರವಿಯ ಮಾತು ಸಾಹಿತ್ಯ ರೂಪದಲ್ಲಿ ವಾಸ್ತವಿಕ ಬದುಕಿನ ದ್ವಂದ್ವಾತ್ಮಕತೆಯನ್ನು ಕಟ್ಟಿಕೊಡುತ್ತದೆ. ಗ್ರಾಮ ಬಿಟ್ಟು ನಗರ ಸೇರಲು ಇಷ್ಟಪಡದ ರವಿ ತನ್ನ ತಂದೆಯ ಅಭೀಪ್ಸೆಯಂತೆ ಮನಸ್ಸಿಲ್ಲದ ಮನಸ್ಸಿನಿಂದ ಗ್ರಾಮ ನಿರಾಕರಣೆ ಮಾಡುತ್ತಾನೆ.

ಮೇಲಿನ ಸಂದರ್ಭಗಳನ್ನು ಗಮನಿಸಿದರೆ, ಒಳ್ಳೆಯ ಉತ್ಪನ್ನ ಬರುವ ಭೂಮಿಕಾಣಿ ಹೊಂದಿದ ಮೇಲ್ವರ್ಗದ ಗ್ರಾಮೀಣ ಕುಟುಂಬಗಳು ತಮ್ಮ ಮಕ್ಕಳು ಮನೆತನದ ಅಂತಸ್ತಿಗೆ ತಕ್ಕ ಹಾಗೆ ನಗರ ಸೇರಿ ಓದಿ ಇಂಜನಿಯರೋ, ಡಾಕ್ಟರೋ, ವಕೀಲರೋ ಆಗಬೇಕೆಂಬ ಹಂಬಲ ಇತ್ತೀಚಿನ ಬೆಳವಣಿಗೆಯಾಗಿದೆ. ಇದಕ್ಕೆ ಕಾರಣವಾಗಿ ಇತ್ತಿತ್ತಲಾಗಿ ಹಣ ಬಲದಿಂದ ತಲೆ ಎತ್ತುತ್ತಿರುವ ಖಾಸಗಿ ಇಂಜನಿಯರಿಂಗ್, ಮೆಡಿಕಲ್ ಕಾಲೇಜುಗಳು, ಅವು ಸುಲಿಯುವ ಡೋನೇಶನ್, ಶುಲ್ಕ ಇತ್ಯಾದಿ ಹಣವೂ ಸಹ ಅಂತಸ್ತಿನ ಕುರುಹಾಗಿ ತೊರುತ್ತಿದೆ. ಹಣದಿಂದ ಶಿಕ್ಷಣ ಕೊಳ್ಳುವ ಪರಿಪಾಠದ ಆರಂಭಕ್ಕೆ ಆರ್ಥಿಕ ಅಸಮಾನತೆಯ ವ್ಯವಸ್ಥೆ ಮೂಲಕಾರಣವೆನ್ನಬಹುದು. ಇದು ಆರ್ಥಿಕ ವ್ಯವಸ್ಥೆಯ ಒಂದು ಮುಖವನ್ನು ತೋರಿಸಿದರೆ ಇನ್ನೊಂದು ಮುಖ ವಿಭಿನ್ನವಾಗಿದೆ. ಸಣ್ಣ ಹಿಡುವಳಿದಾರ, ಕೃಷಿ ಕಾರ್ಮಿಕರ ಮಕ್ಕಳು ಭೂಮಿಯ ಕೊರತೆಯಿಂದ ಶಿಕ್ಷಣದತ್ತ ಮುಖ ಮಾಡುತ್ತಾರೆ. ಮನುಷ್ಯರು ಮಕ್ಕಳಿಗೆ ಜನ್ಮ ಕೊಡಬಹುದು, ಆದರೆ ಕೃಷಿ ಭೂಮಿಯನ್ನು ಹುಟ್ಟಿಸಲಿಕ್ಕಾಗು(ವಿಸ್ತರಿಸು)ತ್ತದೆಯೆ? ಮಕ್ಕಳನ್ನು ಹೆಚ್ಚಾಗಿ ಪಡೆದ ಕುಟುಂಬಗಳಲ್ಲಿ ಒಬ್ಬಿಬ್ಬರನ್ನು ಬೇಸಾಯಕ್ಕೆ ಇಟ್ಟುಕೊಂಡು (ಇರುವ ಅಲ್ಪ ಭೂಮಿಯನ್ನು ಒಡೆದು

ಹಂಚಲು ಮನಸ್ಸಾಗದೆ) ಉಳಿದ ಮಕ್ಕಳನ್ನು ಶಿಕ್ಷಣಕ್ಕೆ ಮತ್ತು ನೌಕರಿಗಾಗಿ ನಗರಕ್ಕೆ ಕಳಿಸುವ ಕುಟುಂಬಗಳನ್ನು ಕಥನ ಸಾಹಿತ್ಯದಲ್ಲಿ ಕಾಣುತ್ತೇವೆ.

**ಶಿಕ್ಷಣ ಮತ್ತು ನಿರಾಕರಣೆ : ಕೆಳವರ್ಗಗಳ ನೆಲೆಯಿಂದ**

ಗ್ರಾಮ/ನಗರಗಳಲ್ಲಿ ಕೆಳ, ದಲಿತ ವರ್ಗದ ಕುಟುಂಬಗಳ ಮಕ್ಕಳು ಶಾಲೆಯತ್ತ ಮುಖವನ್ನು ಮಾಡದ ಸಂದರ್ಭಗಳನ್ನು ನೋಡುತ್ತೇವೆ. ಕೂಲಿ, ಕೃಷಿಕೂಲಿ ಮಾಡುತ್ತ ಜೀವನ ನಿರ್ವಹಿಸುವ ಕುಟುಂಬಗಳು ಮಕ್ಕಳನ್ನು ಶಾಲೆಗೆ ಕಳಿಸುವುದರ ಬದಲಾಗಿ, ಕೂಲಿಗೆ ಕಳಿಸುವುದು ಅವರ ಆರ್ಥಿಕ ದುರ್ಬಲತೆಯ ಸಂಕೇತವಾಗಿದೆ. ಗ್ರಾಮಗಳಲ್ಲಿ ಕೃಷಿಕೂಲಿ, ಕುರಿ, ದನ ಕಾಯುವ, ನಗರಗಳಲ್ಲಿ ದಿನಗೂಲಿಯಲ್ಲಿ ತೊಡಗಿರುವ ಕೋಟ್ಯಂತರ ಮಕ್ಕಳನ್ನು ಈಗಲೂ ಕಾಣಬಹುದು. ಕೆಲವು ವಿಶಿಷ್ಟ ಸಂದರ್ಭಗಳಲ್ಲಿ ಮಕ್ಕಳನ್ನು ಶಿಕ್ಷಣಕ್ಕಾಗಿ ನಗರಕ್ಕೆ ಕಳಿಸುವ ಕೆಳವರ್ಗದ ಜನತೆಯ ದೃಷ್ಟಿಯಲ್ಲಿ ಶಿಕ್ಷಣವು ಪ್ರತಿಷ್ಠೆಯ ವಿಷಯವಾಗಿರದೆ, ಜೀವನೋಪಾಯದ ಮಾರ್ಗವೆನ್ನಿಸಿದೆ. ಇತ್ತೀಚೆಗೆ ಸರಕಾರದ ಪ್ರೋತ್ಸಾಹ, ಸೌಲಭ್ಯಗಳು ದಲಿತ, ಕೆಳವರ್ಗದ ಮಕ್ಕಳನ್ನು ಶಿಕ್ಷಣದತ್ತ ಸೆಳೆಯಲು ಪ್ರಯತ್ನಿಸುತ್ತಿವೆ. ಇದರ ಮೂಲಕ ಶಿಕ್ಷಣ ಪಡೆದರೆ ಗ್ರಾಮ/ನಗರಗಳಲ್ಲಿ ಜೀವನ ನಿರ್ವಹಣೆ ಸುಲಭ ಎಂಬ ಅರಿವು ಕೆಳವರ್ಗದವರಲ್ಲಿ ಹುಟ್ಟತೊಡಗಿರುವುದು ಆಶಾದಾಯಕ ಬೆಳವಣಿಗೆಯಾಗಿದೆ.

ವ್ಯಾಸರಾವ್ ನಿಂಜೂರ ಅವರ 'ಉಸಿರು' ಕಾದಂಬರಿಯ ಶಾರದ ಕೆಳವರ್ಗದ ಕುಟುಂಬದ ಯುವತಿ. ಇವಳ ಗ್ರಾಮ ನಿರಾಕರಣೆಯಲ್ಲಿ ಇವಳ ಶಿಕ್ಷಣಾಶಕ್ತಿ ಪ್ರಮುಖ ಪಾತ್ರ ವಹಿಸಿದೆ. ಮುಂದೆ ಓದಿ ನರ್ಸಾಗುತ್ತೇನೆ ಎಂದು ಹಠ ಹಿಡಿಯುತ್ತಾಳೆ. ತಾಯಿ, ಊರ ಪಟೇಲ (ಇವಳ ತಾಯಿಯನ್ನು ಇಟ್ಟುಕೊಂಡಾತ) ಒಪ್ಪುವುದಿಲ್ಲ. ಅನ್ನ ಕೊಟ್ಟ ಪಟೇಲರು ಹೇಳಿದಂತೆ ಕೇಳಲು ಒತ್ತಾಯಿಸಿದ ತಾಯಿಯ ಮಾತನ್ನು ತಿರಸ್ಕರಿಸಿ,

> 'ಅನ್ನ ಕೊಟ್ಟವರು ಬಿಟ್ಟಿಗೆ ಕೊಡುವುದಿಲ್ಲಮ್ಮ, ಅನ್ನ ಕೊಟ್ಟದ್ದಕ್ಕೆ ಬಡ್ಡಿ ಸಮೇತ ನಿನ್ನಿಂದ ವಸೂಲು ಮಾಡಿದ್ದಾರೆ. ನಾನು ಮಾತ್ರ ಅವರ ಅನ್ನದ ಆಸೆಗಾಗಿ ಮೈಗೆ ಕನ್ನ ಇಡುವುದನ್ನು ಸಹಿಸಲಾರೆ.'[೪]

ಇಲ್ಲಿ ಶಾರದಳ ತಾಯಿಯ ಸಂದಿಗ್ಧ ಸ್ಥಿತಿಯನ್ನು ಗಮನಿಸಬಹುದು. ಒಂದೆಡೆ ಕೆಲಸ ಕೊಡಿಸುತ್ತೇನೆ ಎನ್ನುತ್ತ ಶಾರದಳನ್ನು ಗ್ರಾಮದಲ್ಲಿಯೇ ಹಿಡಿದಿಟ್ಟುಕೊಳ್ಳಲು ಯತ್ನಿಸುವ ಪಟೇಲ (ಗ್ರಾಮವನ್ನು ಪ್ರತಿನಿಧಿಸಿದರೆ), ಇನ್ನೊಂದೆಡೆ ಹೊಸಸ್ಪಂದನೆ(ನಗರ)ಗೆ ತನ್ನನ್ನು ತೆರೆದುಕೊಂಡ ಮಗಳು ಶಾರದಳ ಹಠ. ಇವೆರಡೂ ಮುಖಾಮುಖಿಯಾಗಿವೆ. ಮಗಳ ಆಯ್ಕೆ ತನ್ನ ಆಯ್ಕೆಯೂ ಆಗಿ, ಅದು ತನ್ನ ಹಾಗೂ ಪಟೇಲನ ಸಂಬಂಧದ ಮೇಲೆ ಪರಿಣಾಮ ಬೀರಬಹುದಾದ ಭಯ, ಆತಂಕ ಅವಳನ್ನು ಕಾಡಿದೆ. ಪ್ರಸ್ತುತ ಸಂದರ್ಭದಲ್ಲಿ ಪ್ರಸ್ತಾಪವಾಗುವ ಅನ್ನದ(ಋಣ) ಪ್ರಶ್ನೆ ಇಡೀ ಕೆಳವರ್ಗದವರನ್ನು ಹಿಡಿದಿಟ್ಟಿರುವುದು ಸ್ಪಷ್ಟವಿದೆ. ಗ್ರಾಮೀಣ ಸಾಮಾಜಿಕ ವ್ಯವಸ್ಥೆ ದಲಿತ, ಕೆಳವರ್ಗಗಳ ಕುಟುಂಬಗಳನ್ನು ಅನ್ನ ಕೊಟ್ಟವರ ಹಂಗಿನಲ್ಲಿರುವಂತೆ ಮಾಡಿ ಕೆಳವರ್ಗದ ಗಂಡು ಹೆಣ್ಣುಗಳ ಶೋಷಣೆಗೆ ಕಾರಣವಾಗಿದ್ದರೆ, ಶಿಕ್ಷಣ, ಶಿಕ್ಷಣದ ಆಕಾಂಕ್ಷೆಗಳು ಇಂತಹ ಅನ್ನದ ಋಣವನ್ನು ತಿರಸ್ಕರಿಸುವಂತೆ ಪ್ರೇರೇಪಿಸುವುದು ಕಥನ ಸಾಹಿತ್ಯದಲ್ಲಿ ದಾಖಲಾಗಿದೆ. ನಿತ್ಯ ಕೂಲಿ ಮಾಡಿ ಮಕ್ಕಳಿಗೆ ಓದಲು ಹಣ ಕಳಿಸುವ ಕೆಳವರ್ಗದ ಸಾವಿರಾರು ಕುಟುಂಬಗಳನ್ನು ಗ್ರಾಮ/ನಗರಗಳಲ್ಲಿ ಕಾಣುತ್ತೇವೆ. ಮೇಲೆ ಚರ್ಚಿಸಿದ ಸಂದರ್ಭಗಳಲ್ಲಿ ಶಿಕ್ಷಣಾಕಾಂಕ್ಷಿ ಕುಟುಂಬದ ಸದಸ್ಯ ಮಾತ್ರ ಗ್ರಾಮ ನಿರಾಕರಿಸುವುದು ಕಂಡುಬರುತ್ತದೆ. ಹೀಗೆ ನಿರಾಕರಿಸಿದ ಸದಸ್ಯ (ಕಲ್ಲಪ್ಪ, ಚೆನಬಸು, ಕೇಶವ, ರವಿ, ಶಾರದ, ಇತ್ಯಾದಿ ವ್ಯಕ್ತಿಗಳು) ಓದಿ ನೌಕರಿ/ವೃತ್ತಿ ಹಿಡಿದು ಮದುವೆಯಾಗಿ ನಗರದವನೇ ಆಗುವುದು, ಮೂಲ ನೆಲೆಯನ್ನು ಶಾಶ್ವತ ನಿರಾಕರಿಸುವುದು ಅಧ್ಯಯನ ಕಂಡುಕೊಂಡ ಅಂಶವಾಗಿದೆ.

**ಬ. ಉದ್ಯೋಗಾನ್ವೇಷಣೆ ಮತ್ತು ನಿರಾಕರಣೆ : ಸ್ವಜನರ ಒತ್ತಡ**

ಔದ್ಯೋಗೀಕರಣ, ಜಾಗತೀಕರಣದ ಇತ್ತೀಚಿನ ಸ್ಪರ್ಧಾತ್ಮಕ ದಿನಗಳಲ್ಲಿ ಉದ್ಯೋಗದಲ್ಲಿ ಶಿಕ್ಷಣವು ಮಹತ್ವದ ಪಾತ್ರ ವಹಿಸಿದ್ದು ಎರಡೂ ಒಂದರೊಳಗೊಂದು ಬೆಸೆದುಕೊಂಡಿವೆ. ಶಿಕ್ಷಣ, ಉದ್ಯೋಗ

ಮತ್ತು ಗ್ರಾಮ/ನಗರ ನಿರಾಕರಣೆಗೆ ಒಂದು ಸೈದ್ಧಾಂತಿಕ ನೆಲೆಗಟ್ಟಿನ ಸಂಬಂಧವಿದೆ. ಉದ್ಯೋಗಕ್ಕಾಗಿ ಗ್ರಾಮ/ನಗರ ನಿರಾಕರಿಸುವ ವರ್ಗ ಯಾವುದು, ಇದಕ್ಕೆ ಕಾರಣವಾಗುವ ಅಂಶಗಳಾವುವು, ಯುವ ಜನತೆ ತಾವಾಗಿಯೇ ಉದ್ಯೋಗಕ್ಕಾಗಿ ಗ್ರಾಮ/ನಗರ ನಿರಾಕರಿಸುತ್ತಾರಾ ಅಥವಾ ಸಾಂದರ್ಭಿಕ/ಸ್ವಜನರ ಒತ್ತಡ ಕಾರಣವೇ ಎಂಬುದನ್ನು ಕಥನ ಸಾಹಿತ್ಯದಿಂದ ಗ್ರಹಿಸಬಹುದು.

ಪಾಟೀಲ ಪುಟ್ಟಪ್ಪ ಅವರ 'ಮಗ ಮನೆಗೆ ಬಂದ' ಕತೆಯ ಶಿವುಮಾಸ್ತರು ತಮ್ಮ ಮಗ ಗುರುವಿನ ಬಗ್ಗೆ ಕಟ್ಟಿಕೊಂಡ ಕನಸುಗಳು ಗ್ರಾಮೀಣ ಹಿರಿಯ ತಲೆಮಾರಿನ ವ್ಯಕ್ತಿಗಳ ಸಾಂಪ್ರದಾಯಿಕ ನಂಬಿಕೆ, ಸಾಮಾಜಿಕ ಮೌಢ್ಯ ಮತ್ತು ಅವರ ಆರ್ಥಿಕ ಸ್ಥಿತಿಯ ಮೇಲೆ ಬೆಳಕು ಚೆಲ್ಲುವಂತಹುಗಳಾಗಿವೆ. ಬಿ.ಎ. ಮುಗಿಸಿದ ಮಗ ಮದುವೆಯಾಗಿ (ಆದರ್ಶಕ್ಕಾಗಿ ವರದಕ್ಷಿಣೆ ಇಲ್ಲದೆ) ದುಡಿಯದೆ ಮನೆಯಲ್ಲಿ ಕುಳಿತಾಗ ಮಾಸ್ತರು ಸ್ನೇಹಿತನೆದುರು ಹೇಳುವ, 'ನನ್ನ ಕೆಲಸ ಹೋಯಿತು. ಅವನಿಗೆ ಕೆಲಸ ಇನ್ನೂ ಬರಲಿಲ್ಲ. ಊಟ ಹಾಕುವುದಕ್ಕೆ ನಾನಿರುವಾಗ ಅವನೆಲ್ಲಿ ಕೆಲಸ ಹುಡುಕುತ್ತಾನೆ. ಕೆಲಸವೇ ಅವನನ್ನು ಹುಡುಕಿಕೊಂಡು ಬರಬೇಕು'[3] ಎಂಬ ಮಾತು ಮಾರ್ಮಿಕವಾಗಿದೆ. ಮಾಸ್ತರ ಮಾತಿನ ಸೂಕ್ಷ್ಮ, ಮಗ ಗ್ರಾಮ ನಿರಾಕರಿಸಿ ನಗರದತ್ತ ಹೋಗದೆ ನೌಕರಿ ಸಿಕ್ಕುವುದಿಲ್ಲ ಎಂಬುದನ್ನು ಅಭಿಪ್ರಾಯಿಸುತ್ತದೆ. ಸುನಂದಾ ಪ್ರಕಾಶ ಕಡಮೆ ಅವರ 'ನೋ ಎಂಟ್ರಿ' ಕಥೆಯ ಕಡಲ ತಡಿಯ ಗ್ರಾಮದ ಗಿರಿಧರನ ಪರಿಸ್ಥಿತಿ ಇದಕ್ಕಿಂತ ಭಿನ್ನವಾಗಿಲ್ಲ. ವಿದ್ಯುತ್ತಿಗೆ ಹೆದರಿ (ಇಲ್ಲಿ, ವಿದ್ಯುತ್ ಉತ್ಪಾದನಾ ಪ್ರದೇಶವೊಂದರ ಗ್ರಾಮೀಣ ಮುಗ್ಧ ಜನರು, ವಿದ್ಯುತ್‌ನ ಅಪಾಯಗುಣ ಕುರಿತು ತಳೆದಿರುವ ಮೂಢನಂಬಿಕೆಯ ವ್ಯಂಗ್ಯದ ಆಯಾಮವನ್ನೂ ಗ್ರಹಿಸಬಹುದಾಗಿದೆ) ಓದುವುದೇ ಬೇಡವೆಂದ ತಾಯಿಯ ವಿರೋಧದ ಮಧ್ಯೆಯೂ ಗಿರಿಧರ ಕಾರವಾರದ ಐ. ಟಿ. ಐ. ಕಾಲೇಜು ಸೇರಿ ಇಲೆಕ್ಟ್ರಿಕಲ್ ಕೋರ್ಸನ್ನು ಮುಗಿಸುತ್ತಾನೆ. ತನ್ನ ಪುಟ್ಟ ಹಳ್ಳಿಯಲ್ಲಿ ವಿದ್ಯುತ್ ಉಪಕರಣಗಳ ದುರಸ್ತಿ ಅಂಗಡಿ ಹಾಕುವ ಉದ್ದೇಶ ಹೊಂದಿದ್ದ ಗಿರಿ, ಅವರಿವರ ಮನೆಯ ಇಸ್ತ್ರಿಬಾಕ್ಸ್‌ನಂತಹ ಸಣ್ಣಪುಟ್ಟ ಉಪಕರಣಗಳನ್ನು ದುರಸ್ತಿ ಮಾಡುವಾಗ ಮೇನ್‌ಫ್ಯೂಜ್ ಹಾರಿಸಿ ಮನೆಯೆಲ್ಲ ಕತ್ತಲೆ ಮಾಡುತ್ತಾನೆ. ತಂದೆ ಇವನ ಕೆಲಸ ನೋಡಿ ಹೆಂಡತಿ ಮುಂದೆ 'ಊರು ಬಿಟ್ಟರೆ ಉದ್ಧಾರ ಆಗ್ತಾನೆ'[4] ಎಂದು ಆಡಿಕೊಂಡಿದ್ದುಂಟು. ತಂದೆಯ ಮಾತಿನ ಗುರಿ ಅರಿತ ಗಿರಿ ಧಾರವಾಡ(ನಗರ) ಸೇರಿ ವಿದ್ಯುತ್ ಉಪಕರಣಗಳ ರಿಪೇರಿ ಅಂಗಡಿ ಇಡುತ್ತಾನೆ.

ಗುರು ಮತ್ತು ಗಿರಿ (ಯುವಕರ) ಇವರಿಬ್ಬರ ಗ್ರಾಮ ನಿರಾಕರಣೆಗೆ ಅವರ ತಂದೆಯವರ ಕಠೋರ ಮಾತುಗಳು ಕಾರಣವೆಂದು ಗ್ರಹಿಸಿದ ನಿಲುವು ತಪ್ಪಾಗುತ್ತದೆ. ವಿದ್ಯಾವಂತ ಮಗ ದುಡಿದು ಸಂಪಾದಿಸಬೇಕು ಎಂಬುದು ಪಾಲಕರ ಅನಿಸಿಕೆಯಾಗಿದ್ದು, ಇದು ಗ್ರಾಮ/ನಗರಗಳ ಬಹಳಷ್ಟು ಅಪ್ಪ, ಅಮ್ಮಂದಿರ ಅಭಿಪ್ರಾಯವೂ ಆಗಿದೆ. ಗಿರಿಯ ತಂದೆಗೂ, ಶಿವು ಮಾಸ್ತರರಿಗೂ ಸ್ವಭಾವದಲ್ಲಿ ವ್ಯತ್ಯಾಸವೇನೂ ಇಲ್ಲ. ಭೂಮಿಕಾಣಿ ಇಲ್ಲದ, ನಿವೃತ್ತ ಶಿವೂ ಮಾಸ್ತರರು ಮಗನಿಗೆ ಕುಟುಂಬದ ಜವಾಬ್ದಾರಿ ವಹಿಸಿಕೊಳ್ಳಲು ಕೋಪಗೊಂಡು ಗಲಾಟೆ ಮಾಡುತ್ತಾರೆ. ಗಿರಿಯ ತಂದೆ (ವಯಸ್ಸಾದ ರೈತ) ಅಲ್ಪ ಭೂಮಿಕಾಣಿ ಹೊಂದಿದ್ದರೂ ಮಗ ಕಲಿತ ವಿದ್ಯೆಯ ಸದುಪಯೋಗವಾಗಲು ಉದ್ಯೋಗ ಕೇಂದ್ರಿತ ಸ್ಥಳಗಳಿಗೆ ಹೋಗಲು ಪ್ರೇರಣೆ ನೀಡುತ್ತಾನೆ. ಜಾಗತೀಕರಣದ ಸಂದರ್ಭದಲ್ಲಿ, ಕೃಷಿಯನ್ನು ನಂಬಿದ ಭಾರತೀಯ ಸಣ್ಣ ಹಿಡುವಳಿದಾರ ರೈತರ ಆತ್ಮಹತ್ಯೆಯಂತಹ ದಾರುಣ ಸನ್ನಿವೇಶಗಳನ್ನು ಗ್ರಹಿಸಿದ ಇವರಿಬ್ಬರಲ್ಲಿಯೂ ಉದ್ಯೋಗಾನ್ವೇಷಣೆಯ ದೂರದೃಷ್ಟಿತ್ವವನ್ನು ಅಧ್ಯಯನ ಗುರುತಿಸುತ್ತದೆ. ಇದು ಒಂದು ಅಭಿಪ್ರಾಯವಾದರೆ, ಗ್ರಾಮೀಣ ಜನತೆಯು ಮಕ್ಕಳ ಮೇಲೆ ಇಟ್ಟ ಮಹತ್ವಾಕಾಂಕ್ಷೆ, ಸ್ವ–ಉದ್ಯೋಗ ಮಾಡಿ ಸ್ವಾಭಿಮಾನದಿಂದ ಬದುಕಬಹುದೆಂಬ ಅರಿವಿನ ಕೊರತೆ, ಗ್ರಾಮೀಣ ಯುವ ಪ್ರತಿಭೆಗಳು ನಗರದ ಪಾಲಾಗಲು ಕಾರಣವಾಗುತ್ತವೆ ಎಂಬುದು ಇನ್ನೊಂದು ಅಭಿಪ್ರಾಯವಾಗಿದೆ. ಮೇಲಿನ ಕಥನಗಳಲ್ಲಿ ಇಬ್ಬರು ತಂದೆಯರು ಉದ್ಯೋಗ(ನಗರ)ವನ್ನು ಪುರಸ್ಕರಿಸಿದರೆ, ತಾಯಂದಿರು ಮಕ್ಕಳ(ಗ್ರಾಮ) ಪರ ವಹಿಸಿಕೊಳ್ಳುತ್ತಾರೆ. ಗ್ರಾಮ ಮತ್ತು ನಗರ ಕುರಿತು ಒಂದು ಕುಟುಂಬದ ಸದಸ್ಯರಲ್ಲಿರುವ ವಿರುದ್ಧಾತ್ಮಕ ಅಭಿಪ್ರಾಯ, ಗ್ರಹಿಕೆ, ಸ್ವಭಾವ ಮತ್ತು ಗೊಂದಲಗಳನ್ನು ಕಥನ ಸಾಹಿತ್ಯ ಕಟ್ಟಿಕೊಟ್ಟಿರುವುದು ಸಾಹಿತ್ಯಕ ವೈಶಿಷ್ಟ್ಯತೆಯಾಗಿದೆ.

### ಸ್ವಪ್ರೇರಣೆ ಮತ್ತು ಉದ್ಯೋಗಾನ್ವೇಷಣೆ

'ಉದ್ಯೋಗಂ ಪುರುಷ ಲಕ್ಷಣಂ' ಎಂಬ ಮಾತು ಇಂದು ಅರ್ಥ ಕಳೆದುಕೊಂಡಿದೆ. ಬಡತನ, ಮನೆಯ ಜವಾಬ್ದಾರಿ ಅರಿತ ಕೆಳ, ಮಧ್ಯಮ ವರ್ಗದ ಕುಟುಂಬಗಳ ಮಹಿಳೆಯರು ಪ್ರತಿಯೊಂದು

ಕಾರ್ಯಕ್ಷೇತ್ರಗಳನ್ನು ಪ್ರವೇಶಿಸಿ ದುಡಿಯುತ್ತಿದ್ದಾರೆ. ಗಂಡು ಮಕ್ಕಳಿಲ್ಲದ ಕುಟುಂಬಗಳಲ್ಲಿ ವೃದ್ಧ ತಂದೆ, ತಾಯಿಯರನ್ನು ಸಾಕಲು, ಚಿಕ್ಕ ತಮ್ಮ ತಂಗಿಯರನ್ನು ಓದಿಸಲು ಗ್ರಾಮ/ನಗರ ನಿರಾಕರಿಸಿ ನಗರ/ಗ್ರಾಮಗಳಲ್ಲಿ ನೆಲೆಸುವ ಮಹಿಳೆಯರನ್ನು ಕಾಣುತ್ತೇವೆ.

ರಾಮಕೃಷ್ಣ ಗುಂದಿ ಅವರ 'ಆರು ಮೇಡಂ ಮತ್ತು ಉದ್ಯೋಗ ಪರ್ವ' ಕಥೆಯಲ್ಲಿ ಆರತಿಯ ನಗರದ ತಂದೆ ನಿವೃತ್ತ ಸರಕಾರಿ ನೌಕರ. ಅಲ್ಪ ಪೆನ್‌ಶನ್‌ನಲ್ಲಿ ಹೇಗೂ ಜೀವನ ಮಾಡುತ್ತಿದ್ದ ಸಂಸಾರಕ್ಕೆ ಹಳ್ಳಿಯ ಗೇಣಿ ಜಮೀನಿನಿಂದ ಬರುವ ಆದಾಯ ಮೂಲ ಆಸರೆಯಾಗಿರುತ್ತದೆ.

> 'ತಾನು ಟ್ರೇನಿಂಗ್ ಮುಗಿಸುವಷ್ಟರಲ್ಲೇ ಅಪ್ಪ ಪ್ಯಾರಲಿಸಿಸ್ ಅಟ್ಯಾಕ್‌ನಿಂದ ಹಾಸಿಗೆ ಹಿಡಿದಿದ್ದ. ಗುಮಾಸ್ತಗಿರಿಯ ಪೆನ್ಶನ್ ಹಣಕ್ಕೆ ಜಮೀನಿನಿಂದ ಬರುವ ಗೇಣಿಯೂ ಸೇರಿ ಜೀವನಕ್ಕೆ ತೊಂದರೆಯಿಲ್ಲ ಅಂದುಕೊಳ್ಳುವಾಗಲೇ ಭೂಮಿಯೆಲ್ಲ ರೈತರ ಪಾಲಿಗಾಯಿತು. ಆದಾಯವಿಲ್ಲದೆ ಮನೆಯ ಆರ್ಥಿಕ ಸ್ಥಿತಿ ಹದಗೆಟ್ಟರೂ ಹೇಗೂ ತಾನು ಟ್ರೇನಿಂಗ್ ಮುಗಿಸಿ ಪ್ರಥಮ ದರ್ಜೆಯಲ್ಲಿ ಪಾಸಾಗಿ ಬಂದಿದ್ದೆ. ಉದ್ಯೋಗದ ಅನ್ವೇಷಣೆ ಆರಂಭವಾಗಿತ್ತು.'[೪]

ಮನೆಯ ಜವಾಬ್ದಾರಿ ಹೆಗಲಿಗೇರಿದಾಗ ಶಿಕ್ಷಕರ ತರಬೇತಿ ಮುಗಿಸಿದ್ದ ಆರು ಮೇಡಂ ಉದ್ಯೋಗ ಅನ್ವೇಷಣೆ ಆರಂಭಿಸಿ, ನಗರವನ್ನು ನಿರಾಕರಿಸಿ ಶಿಕ್ಷಕಿಯಾಗಿ ಗ್ರಾಮಕ್ಕೆ ಬರುತ್ತಾಳೆ. ರಮಾನಂದ ಅಮೀನ ಅವರ 'ಗದ್ದೆಯ ಸೆರಗು' ಕಾದಂಬರಿಯ ಹದಿನೆಂಟರ ವೇಣುಗೋಪಾಲನ ಸ್ಥಿತಿ ಇನ್ನೂ ಚಿಂತಾಜನಕವಾಗಿದೆ. ವೃದ್ಧ ತಂದೆತಾಯಿಯರ ಜವಾಬ್ದಾರಿ, ಮುಂಬಯಿ ಸೇರಿ ಕುಟುಂಬದತ್ತ ತಿರುಗಿಯೂ ನೋಡದ ಅಣ್ಣ ಚಿದಂಬರ, ಕಿತ್ತು ತಿನ್ನುವ ಬಡತನಗಳ ನಡುವೆ ಅವನು ಮನೆಯನ್ನು ಮುನ್ನಡೆಸಬೇಕಿದೆ. ಊರೆಲ್ಲ ತಿರುಗಿದರೂ ಮೆಟ್ರಿಕ್ ಪಾಸಾದ ಇವನಿಗೆ ಯಾರೂ ನೌಕರಿ ಕೊಡುವುದಿಲ್ಲ. 'ಮುಂಬಯಿಗೆ ಬಂದು ಅಣ್ಣನಾಸರೆಯಲ್ಲಿ ಒಂದು ಹೋಟೆಲ್ ಮಾಣಿಯಾದರೂ ಸರಿ ದುಡಿಯಬೇಕು'[೫] ಎಂಬ ನಿರ್ಧಾರದಿಂದ ಮಣ್ಣುಗುಡ್ಡೆ ಗ್ರಾಮವನ್ನು ನಿರಾಕರಿಸುತ್ತಾನೆ.

ಇಲ್ಲಿ ಆರತಿ ಹಾಗೂ ವೇಣುಗೋಪಾಲರ ಆರ್ಥಿಕ ದುಃಸ್ಥಿತಿಗೆ ಕಾರಣ ಕೌಟುಂಬಿಕ ಸ್ವಯಂಕೃತ ಅಪರಾಧ ಎನ್ನಬಹುದು. ಕುಟುಂಬದ ಚಿಂತಾಜನಕ ಆರ್ಥಿಕ ಸ್ಥಿತಿಗೆ ಸಾಲುಸಾಲಾಗಿ ಮಕ್ಕಳನ್ನು ಹೆತ್ತು ಮದುವೆ ಖರ್ಚು ನಿಭಾಯಿಸಲು ಆಸ್ತಿ ಮಾರಿಕೊಂಡ ವೃದ್ಧ ತಂದೆ ತಾಯಿಯರು, ಮನೆತನದ ಜವಾಬ್ದಾರಿಯನ್ನು ಹೊರಲು ಒಪ್ಪದೆ ನಗರ ಪಾಲಾದ ಅಣ್ಣಂದಿರು ಇವರೆಲ್ಲ ಕಾರಣರಾಗಿದ್ದಾರೆ. ಇಂದಿನ ಬಹುತೇಕ ಕುಟುಂಬಗಳ ಸ್ಥಿತಿ ಇದಾಗಿದ್ದು ಕೌಟುಂಬಿಕ ಸಂಬಂಧಗಳು ಶಿಥಿಲಗೊಳ್ಳುವ ಪರಿಯನ್ನು ಕಥನ ಸಾಹಿತ್ಯದಲ್ಲಿ ಕಾಣುತ್ತೇವೆ. ಓದಿ ವಿದ್ಯಾವಂತನಾಗಿದ್ದರೂ ಶಿವು ಮಾಸ್ತರರ ಮಗ ಗುರು, ವೇಣುಗೋಪಾಲನ ಅಣ್ಣ ಚಿದಾನಂದರು ತಮ್ಮ ಕಿರಿಯ ಸಹೋದರ, ಸಹೋದರಿಯರ ಕುರಿತು ಚಿಂತಿಸುವುದಿಲ್ಲ, ಅವರ ವಿದ್ಯಾಭ್ಯಾಸ, ಮದುವೆ, ತಂದೆ ತಾಯಿಗಳ ನಿವೃತ್ತಿ ಕುರಿತು ಯೋಚಿಸುವುದಿಲ್ಲ. ಇಂತಹ ಕಳಚಿದ ಕೌಟುಂಬಿಕ ಸಂಬಂಧಗಳು ಯುವ ಜನತೆ ಗ್ರಾಮ/ನಗರ ನಿರಾಕರಿಸಲು ಪರೋಕ್ಷವಾಗಿ ಸಹಕರಿಸುತ್ತವೆ ಎಂದು ಅಧ್ಯಯನ ಗುರುತಿಸುತ್ತದೆ. ಕುಟುಂಬವನ್ನು ಮುನ್ನಡೆಸಲು ಇವರಿಬ್ಬರ ಹೋರಾಟ (ಇದಕ್ಕೆ ಕೌಟುಂಬಿಕ ಕಾಳಜಿ ಅನ್ನೋಣ) ಗ್ರಾಮ/ನಗರ ನಿರಾಕರಿಸುವಂತೆ ಮಾಡಿದರೆ, ಕೇಶವ ಮಳಗಿ ಅವರ 'ಕಡಲತೆರೆಗೆ ದಂಡೆ' ಕತೆಯ ಸತ್ಯಪ್ರಮೋದ ಹಾಗೂ ಉಲ್ಲಾಸ ಹೆಗಡೆ ಅವರ 'ನನ್ನ ನೋವಿನ ಮೂಲ' ಕಥೆಯ ಮಾದೇವಿ ಭಟ್ಟ ಇವರು ಕೌಟುಂಬಿಕ ಕರ್ಷಣೆಯ ನೆಲೆಯಲ್ಲಿ ಗ್ರಾಮ/ನಗರ ನಿರಾಕರಣೆ ಮಾಡುತ್ತಾರೆ. ಸತ್ಯಪ್ರಮೋದ ನಗರ ಸೇರಿ ಗೆಳೆಯ ಅಚ್ಯುತನ ಮುಂದೆ ಹೇಳುವ ಮಾತು, ಗ್ರಾಮೀಣ ಸಾಂಪ್ರದಾಯಿಕ/ಸಾಮಾಜಿಕ ವ್ಯವಸ್ಥೆಯ ಒಳ ನೋಟವನ್ನು ಹೊರ ಹಾಕುತ್ತದೆ.

> 'ಎಲ್ಲಾರು ನಂದ ತಪ್ಪಂತ ಆಡಕೋತಾರ, ನಾ ಸಣ್ಣಾಂವ ಇದ್ದಾಗಿಂದ್ಲೂ. ಆದರ ಅಜ್ಜಾ, ನಮ್ಮಪ್ಪಂದು ಯಾರಿಗೂ ಗೊತ್ತಿಲ್ಲ. ಮ್ಯಾಲ ಸಂಭಾವಿತ ಬ್ರಾಹ್ಮನನಂಗ ಕಾಣವ. ಒಳಗ ನೂರಾ ಎಂಟೂ ಹರಕತ್ತು ನಡಸತಿದ್ದ.  ಅವಗ ಮಠದಗ ಎಲ್ಲರೂ, . .ಕಳ್ಳ, ಕಚ್ಚೆಹರುಕ ಅಂತಾ'. 'ಅವನ ಎತ್ರ ಬೆಳೆದ ಮಕ್ಕಳಿದ್ರಾ? ಅದನ್ನ ಅಂವಾ ಮರತು, ಅವ್ವಾ ಖುಷಿ ಪಂಚಮಿ ಹಿಡಿಯೂ ವಯಸ್ಸನಾಗ ಮಕ್ಕಳನ್ನ ಹೆರೂ ಹಂಗ ಮಾಡಿದ. ಒಟ್ಟ ನನಗ ಮನಿನ ಬ್ಯಾಸರಾಗಿತ್ತು. ಅಪ್ಪನ ವೈದಿಕ ಮ್ಯಾಲ ಅಸಹ್ಯ ಬಂದಿತ್ತು. ಆದರ ನಾ ಏನ್ ಹೆಚ್ಚು ಓದಿದವನ? ಮಂದಿನ್ನ ಸೆಳಕೊಳ್ಳದಕ್ಕ. ನನ್ನ ಹತ್ತಿರ ಉಳಿದದ್ದು ಮಾತೊಂದೆ, ಆವಾಗನ ನಾ ನಿರ್ಧಾರ ಮಾಡಿದ್ದೆ. ಮಂದಿನ್ನ ಕೊಂದ್ರೂ ಚಿಂತಿಲ್ಲ, ನಾ ಬದುಕಬೇಕು'[೬]

ಈ ಮಾತುಗಳು ಸಭ್ಯ ಬ್ರಾಹ್ಮಣರು ಅಗ್ರಹಾರದಂತಹ ಧಾರ್ಮಿಕ ಕ್ಷೇತ್ರದಲ್ಲಿ ನಡೆಸುವ ಅವ್ಯವಹಾರಗಳನ್ನು ಬಹಿರಂಗಪಡಿಸುತ್ತಲೇ, ವ್ಯಕ್ತಿಯ ಅಸಹಾಯಕತೆ ರೋಷವಾಗಿ ಬದಲಾಗುವ ಪರಿಯನ್ನು ಸೂಚಿಸುತ್ತವೆ. ಗಂಡ, ಹೆಂಡತಿಯರ ಕೌಟುಂಬಿಕ ಸಂಘರ್ಷದ ಪರಿಣಾಮ ಕುಟುಂಬದ ಮಕ್ಕಳ ಮೇಲೆ ಬೀರುವುದು ಹಾಗೂ ಸತ್ಯಪ್ರಮೋದ ತಾಯಿಯ ಕೌಟುಂಬಿಕ ಶೋಷಣೆಯ ನೆಲೆಯಲ್ಲಿ ತಂದೆಯನ್ನು, ಅಗ್ರಹಾರವನ್ನು, ಗ್ರಾಮ ಸಮುದಾಯವನ್ನು ದ್ವೇಷಿಸುವುದು ಸ್ಪಷ್ಟವಾಗುತ್ತದೆ. ಗಂಡ ಹಾಕಿದ ಬರೆ(ಸುಟ್ಟ ಗಾಯ)ಯನ್ನು ತಾಯಿ ತನಗೆ ತೋರಿಸಿದ್ದನ್ನು ಹೇಳುವಾಗ, ಮಹಿಳೆಯ ವೈರಿ ಮತ್ತು ಶೋಷಕ ಕುಟುಂಬದ ಹೊರಗಿನ ವ್ಯಕ್ತಿ ಮಾತ್ರವಾಗಿರದೆ, ಒಳಗಿನ ವ್ಯಕ್ತಿಯೂ ಆಗಿದ್ದಾನೆ ಎಂಬುದು ಅಧ್ಯಯನದ ನಿಲುವಾಗಿದೆ. ಅಗ್ರಹಾರ ಗ್ರಾಮ ತೊರೆದು ಹೊರಟು ಹೋಗಲು ನಿರ್ಧರಿಸುವ ಸತ್ಯಪ್ರಮೋದನ ಈ ನಿರ್ಧಾರದ ಹಿಂದೆ ಭೂ ಸುಧಾರಣೆ ಕಾನೂನಿನಿಂದ ಬಂದ ಬಡತನ, ಗೋಮುಖ ವ್ಯಾಘ್ರ ತಂದೆ, ಶೋಷಣೆ ಸಹಿಸಿ/ಎದುರಿಸಿ ಚಂಡಿಯಾದ ತಾಯಿ, ಇವನನ್ನು ಮಗುವಾಗಿ ನೋಡದೇ, ತಿದ್ದಿ ಸಂಬಾಳಿಸಲು ಪ್ರಯತ್ನಿಸದ ಅಗ್ರಹಾರದ ಬ್ರಾಹ್ಮಣ ಸಮುದಾಯದ ಅಪರಾಧಗಳೂ ಸೇರಿಕೊಂಡಿವೆ. ಒಂದು ಕಡೆ ತಂದೆಯ ಒರಟುತನದಿಂದ ಹುಟ್ಟಿದ ಕೌಟುಂಬಿಕ ದ್ವೇಷ ಇನ್ನೊಂದು ಕಡೆ ಸಾಮಾಜಿಕ ಅಸಹಾಯಕತೆ (ಅಗ್ರಹಾರ ಗ್ರಾಮ ಇವನಿಗೆ ಉಡಾಳ ಎಂಬ ಪಟ್ಟಗಟ್ಟಿದೆ) ಇವುಗಳ ನಡುವೆ ಸಿಲುಕಿದ ಸತ್ಯಪ್ರಮೋದ ಕೆಟ್ಟ ಚಟಗಳಿಗೆ ಬಲಿಯಾಗುತ್ತಾನೆ. ಸತ್ಯಪ್ರಮೋದ ಗ್ರಾಮವನ್ನು ನಿರಾಕರಿಸುವುದಿಲ್ಲ, ಗ್ರಾಮವೇ ಅವನನ್ನು ನಿರಾಕರಿಸುತ್ತದೆ.

ತಂದೆ ತಾಯಿಯರ ಆಸೆಯ ಮೇರೆಗೆ ಅಮೇರಿಕದ (ಫಾರೀನ್ ಸೆಟಲ್ಡ್) ಡಾಕ್ಟರರನ್ನು ವರಿಸಿ, ಮನಸ್ಸಿಲ್ಲದಿದ್ದರೂ ಅಮೇರಿಕಕ್ಕೆ ಹೋದ 'ನನ್ನ ನೋವಿನ ಮೂಲ' ಕತೆಯ ಮಹಾದೇವಿ ಭಟ್ಟ, ಗಂಡನ ದೌರ್ಜನ್ಯವನ್ನು ಗೆಳೆಯ ಉಲ್ಲಾಸನೆದುರು ಹೇಳುತ್ತಾಳೆ. 'ಯಾವುದಕ್ಕೂ ಸ್ಪಂದಿಸದ, ಯಂತ್ರದಂತೆ ಬದುಕುತ್ತಿರುವ ಎಲ್ಲರಿಂದ ದೂರ ದೂರ ಒಬ್ಬಿ'[೧೦] ಎಂದು ಗೋಳಿಡುತ್ತಾಳೆ. ಅವನಿಂದಲೂ ನಿರೀಕ್ಷಿಸಿದ ಸಹಾಯ ದೊರೆಯುವುದಿಲ್ಲ. ಅಪ್ಪನ ಸಹಾಯ ಕೇವಲ ಸಾಂಪ್ರದಾಯಿಕ ಬುದ್ಧಿವಾದದ ನೆಲೆಯಲ್ಲಿ ನಿಲ್ಲುತ್ತದೆ. ವಿಚ್ಛೇದನ ಪಡೆದು ಮಹಾದೇವಿ ಗಂಡ, ಗೆಳೆಯ, ತವರು, ಗ್ರಾಮ, ವಿದೇಶ ಎಲ್ಲರನ್ನೂ/ ಎಲ್ಲವನ್ನೂ ನಿರಾಕರಿಸಿ ನಗರವೊಂದರಲ್ಲಿ ಅಧ್ಯಾಪಕ ವೃತ್ತಿ ಹಿಡಿಯುತ್ತಾಳೆ.

ಶಿಕ್ಷಣ, ಉದ್ಯೋಗಾನ್ವೇಷಣೆಯ ಕಾರಣಗಳಿಗಾಗಿ ಗ್ರಾಮ/ನಗರಗಳ ನಿರಾಕರಣೆಯ ಹಿಂದಿರುವ ಅಂಶಗಳನ್ನು ಪ್ರಸ್ತುತ ಕಥನ ಸಾಹಿತ್ಯ ಹೀಗೆ ಗ್ರಹಿಸಿದೆ. • ಭಾರತೀಯ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಹಿಂದೆ ಶಿಕ್ಷಣ, ಉದ್ಯೋಗದಂತಹ ಪ್ರಗತಿಶೀಲ ಅಂಶಗಳು ಪ್ರಬಲರ, ಸವರ್ಣೀಯರ ಹಕ್ಕು ಮಾತ್ರವಾಗಿದ್ದು, ಈಗ ಕ್ರಮೇಣ ಎಲ್ಲರ ಆಸಕ್ತಿಯನ್ನು ಸೆಳೆದಿವೆ. • ಬಹು ಆಯಾಮಗಳ ಚರ್ಚೆಗೆ ಒಳಪಟ್ಟಂತ ಆಡಳಿತದ ನೀತಿಗಳಾದ ಮೀಸಲಾತಿ ಮತ್ತು ಪ್ರತಿಭಾ ಪಲಾಯನದಂತಹ ಮಹತ್ವದ ಅಂಶಗಳಿಗೆ ಕಥನ ಸಾಹಿತ್ಯದಲ್ಲಿ ಉತ್ತರವನ್ನು ಕಂಡುಕೊಳ್ಳಬಹುದು. ಕೆಳಜಾತಿಯ ಆರ್ಥಿಕವಾಗಿ ಹಿಂದುಳಿದ ಕುಟುಂಬಗಳ ಸದಸ್ಯರು (ಗುರು, ಕಲ್ಲಪ್ಪ ರೊಳ್ಳಿ, ಚಿದಂಬರ, ವೇಣುಗೋಪಾಲ ಇತರರು) ಶಿಕ್ಷಣ, ಉದ್ಯೋಗಕ್ಕಾಗಿ ಗ್ರಾಮ/ ನಗರ ನಿರಾಕರಿಸುವುದು ಕಂಡುಬರುತ್ತದೆ.. • ಉಚ್ಚ ಜಾತಿ/ಪ್ರಬಲ ವರ್ಗಕ್ಕೆ ಸೇರಿದ ಸಮುದಾಯಗಳ ಸದಸ್ಯರು (ಕೇಶವ, ರವಿ, ಉಲ್ಲಾಸ ಇತರರು) ಶಿಕ್ಷಣಾರ್ಥಿಗಳಾಗಿ ಗ್ರಾಮ/ನಗರ ನಿರಾಕರಣೆ ಮಾಡಿದರೂ ಅದು ಅವರಿಗೆ ಜೀವನಾವಶ್ಯಕವಲ್ಲ. • ಉಚ್ಚ ಜಾತಿ/ಮೇಲ್ವರ್ಗದ ಮಕ್ಕಳು ಉತ್ತಮ ಉದ್ಯೋಗ ಹುಡುಕಿಕೊಂಡು ವಿದೇಶಗಳಿಗೆ ಹೋಗುವುದು (ಉಲ್ಲಾಸ, ಮಾದೇವಿ) ಮುಂಬಯಿ ಕರ್ನಾಟಕದಲ್ಲಿ ಸಾಮಾನ್ಯ ಅಂಶವಾಗಿದೆ. • ಗ್ರಾಮ ನಿರಾಕರಿಸಿ ನಗರ ಸೇರುವ ಶಿಕ್ಷಣ, ಉದ್ಯೋಗಾರ್ಥಿಗಳು ಹಾಗೂ ಅವರ ಕುಟುಂಬದ ಸದಸ್ಯರು ಆರ್ಥಿಕ ಮತ್ತು ಸಾಮಾಜಿಕ ನೆಲೆಯಲ್ಲಿ ದ್ವಂದ್ವಾತ್ಮಕತೆಗೆ ಸಿಲುಕುವುದು ಪ್ರಸ್ತುತ ಸಾಹಿತ್ಯದಲ್ಲಿ ದಾಖಲಾಗಿದೆ. • ಸಂಪ್ರದಾಯ, ಊಳಿಗಮಾನ್ಯ, ಪುರುಷ ಪ್ರಧಾನ ವ್ಯವಸ್ಥೆಗೆ ಮುಖಾಮುಖಿಯಾಗಿ ನಿಲ್ಲುವ ಹೊಸ ಪೀಳಿಗೆಯ ದಲಿತ, ಹಿಂದುಳಿದ ಮಹಿಳಾ ಪಾತ್ರಗಳ ಗ್ರಾಮ/ ನಗರ ನಿರಾಕರಣೆ ಇತ್ತೀಚಿನ ಆಶಾದಾಯಕ ಬೆಳವಣಿಗೆಯಾಗಿದೆ.

**ಕ. ವಿವಾಹೇತರ ಸಂಬಂಧಗಳು ಮತ್ತು ನಿರಾಕರಣೆ**

ಭಾರತೀಯ ಸಮಾಜದಲ್ಲಿ ವೈವಾಹಿಕ ಸಂಬಂಧಕ್ಕೆ ತನ್ನದೇ ಆದ ವಿಶಿಷ್ಟ ಮೌಲ್ಯವಿದೆ. ವಿವಾಹೇತರ ದೈಹಿಕ ಸಂಬಂಧಗಳು ಸಮಾಜಬಾಹಿರ ಮತ್ತು ಕಾನೂನುಬಾಹಿರವೆನಿಸಿದ್ದು, ಕೌಟುಂಬಿಕ ನೆಲೆಯಲ್ಲಿ

ಇವು ಸಂಕೀರ್ಣ ಸ್ವರೂಪವನ್ನು ಹೊಂದಿವೆ. ವಿವಾಹೇತರ ಸಂಬಂಧಗಳು ಹೇಗೆ ಮತ್ತು ಏಕೆ ಹುಟ್ಟಿಕೊಳ್ಳುತ್ತವೆ ಎಂಬ ಪ್ರಶ್ನೆಗೆ ಉತ್ತರವು ಸುಲಭವಾಗಿ ದೊರೆಯುವುದಿಲ್ಲ. ಮಾನವನ ಕೌಟುಂಬಿಕ ಮತ್ತು ಸಾಮಾಜಿಕ ಸಂಬಂಧಗಳ ಸ್ವರೂಪ ಇಂತಹ ವಿಷಮ ಸಂಬಂಧಗಳ ನಂಟಿಗೆ ಕಾರಣವೆನ್ನಬಹುದು. ವಿವಾಹೇತರ ಸಂಬಂಧಗಳು ವ್ಯಕ್ತಿಗಳಿಬ್ಬರ ಜಾತಿ, ಕೌಟುಂಬಿಕ ಮತ್ತು ಆರ್ಥಿಕ ಸ್ವರೂಪಗಳೊಂದಿಗೆ ಬೆಸೆದುಕೊಂಡಿವೆ.

**ವಿವಾಹೇತರ ಸಂಬಂಧ : ಮೇಲ್ವರ್ಗಗಳ ನಿರಾಕರಣೆಯ ನೆಲೆಗಳು**

ಭಾರತೀಯ ಸಮಾಜದಲ್ಲಿ ಘಟಿಸುವ ವಿವಾಹೇತರ ಸಂಬಂಧಗಳನ್ನು ಸಜಾತಿ/ಸಧರ್ಮಿ ಸಂಬಂಧಗಳು ಮತ್ತು ವಿಜಾತಿ/ವಿಧರ್ಮಿ ಸಂಬಂಧಗಳು ಎಂದು ಎರಡು ಪ್ರಕಾರಗಳಲ್ಲಿ ಗುರುತಿಸಬಹುದು. ಹಿಂದಿನಿಂದಲೂ ತನ್ನ ಜಾತಿ/ವರ್ಗದ ಅಥವಾ ಕೆಳಜಾತಿ/ವರ್ಗದ ಮಹಿಳೆಯೊಂದಿಗೆ ವಿವಾಹೇತರ ಸಂಬಂಧ ಹೊಂದುವುದು ಮೇಲ್ವರ್ಗದ ಪುರುಷರ ದೃಷ್ಟಿಯಲ್ಲಿ ಪ್ರತಿಷ್ಠೆಯ ವಿಷಯವಾಗಿದೆ. ಮೇಲ್ವರ್ಗದ ಮಹಿಳೆ ಇಂತಹ ಸಂಬಂಧಗಳನ್ನು ಸ್ಮಿತಪ್ರಜ್ಞೆಯಿಂದ ಸಹಿಸುವುದವನ್ನು ಕಲಿತುಕೊಂಡಿದ್ದಾಳೆ. ಉಪಪತ್ನಿ ಎಂಬ ಹೆಸರಿನಡಿ ನಡೆಯುವ ಈ ರೀತಿಯ ಸಂಬಂಧಕ್ಕೆ ಸಮಾಜ ವಿರೋಧವನ್ನು ವ್ಯಕ್ತಪಡಿಸುವುದಿಲ್ಲ. ಎರಡು ಕುಟುಂಬಗಳಿಗೆ ಸಂಬಂಧಪಟ್ಟ ವಿಷಯವು ಕುಟುಂಬದ ಸದಸ್ಯರಿಂದ ವಿರೋಧಿಸಲ್ಪಟ್ಟು ಗ್ರಾಮ/ನಗರ ನಿರಾಕರಣೆಯಲ್ಲಿ ಕೊನೆಗೊಳ್ಳುತ್ತದೆ.

ಹ.ಪಿ. ಜೋಶಿ ಅವರ 'ಮಾವಿನ ತೋಪು' (ಗ್ರಾಮದ ಹೆಸರಿನಲ್ಲಿಯೇ ಸುಖ, ಸಮೃದ್ಧತೆಯ ವ್ಯಂಗ್ಯವಿರುವುದು ಗಮನಾರ್ಹ) ಕಾದಂಬರಿಯ ಡಾ. ಭುಜಂಗರಾಯರು ಮನೆಯ ಕೆಲಸದಾಳು ಪದ್ದಕ್ಕಳ ಸಂಗ ಮಾಡಿರುತ್ತಾರಲ್ಲದೆ, ಮಾವಿನ ತೋಪು ಗ್ರಾಮಕ್ಕೆ ಬಂದ ಬನಕ್ಕ ಎಂಬ ಶ್ರೀಮಂತ ವಿಧವೆಯ ಜೊತೆ ಸಂಬಂಧವಿರಿಸಿಕೊಳ್ಳುತ್ತಾರೆ. ಇವರ ಹೆಂಡತಿ ಅಕ್ಕವ್ವ ಆ ಗ್ರಾಮದ ಶ್ರೀಮಂತರಾದ ಅಣ್ಣಾರಾಯ-ರಾಧಾಬಾಯಿಯವರ ಏಕಮಾತ್ರ ಪುತ್ರಿಯಾದರೂ ಮತ್ತು ಗಂಡ ಮಾವನ ಮನೆಯಲ್ಲಿ ಅಳಿಯತನಕ್ಕಾಗಿ ಇದ್ದಂಥ ಸಂದರ್ಭದಲ್ಲೂ ಈ ಸಂಬಂಧವನ್ನು ಸಹಿಸಿ ಮೌನ ವಹಿಸುತ್ತಾಳೆ. ಈ ಸುದ್ದಿ ಊರಲ್ಲಿ ಪ್ರಚಾರವಾದಾಗ ಬನಕ್ಕಳ ಮನೆಗೆ ಹೋಗಿ ವಿಷಯ ತಿಳಿಸಿ, ಸಂಬಂಧ ಅಂತ್ಯಗೊಳಿಸಲು ವಿನಂತಿಸುತ್ತಾಳೆ, ಆದರೆ ಪ್ರತಿಭಟಿಸುವುದಿಲ್ಲ. ಶ್ರೀಮಂತರಾದ ಇವಳ ತಂದೆತಾಯಿಯರು ಈ ಸಂಬಂಧವನ್ನು ವಿರೋಧಿಸುತ್ತಾರೆ. ಆದರೂ ಅಳಿಯನನ್ನು ಎದುರು ಹಾಕಿಕೊಳ್ಳುವುದಿಲ್ಲ. ಅಕ್ಕವ್ವನ ಗೆಳತಿ ನರಸಿ ಮಾತ್ರ ಗೆಳತಿಯರೆದುರು ಹೇಳುವ 'ಅಲ್ಲ ತಗಿ. ಇವು ಧರ್ಮಸಾಲೀ ಮ್ಯಾಲಿನ ಹಂಚು, ಮನಿಮ್ಯಾಲ ನಿಂದರಂದರ ಹ್ಯಾಂಗ ನಿಂತಾವು'[೧] ಎಂಬ ಮಾತುಗಳು ಕಾಮದಿಂದ ಪ್ರೇರಿತನಾದ ವ್ಯಕ್ತಿ(ವಿಶೇಷವಾಗಿ ಪುರುಷ)ಗೆ ಸಂಪತ್ತು, ಸೌಂದರ್ಯ, ಮಾನವೀಯ/ಕೌಟುಂಬಿಕ ಸಂಬಂಧಗಳು ನಗಣ್ಯವಾಗುತ್ತವೆ ಎಂದು ಹೇಳುತ್ತವೆ. ಭುಜಂಗರಾಯರು ಬನಕ್ಕಳೊಂದಿಗೆ ಗ್ರಾಮ ನಿರಾಕರಣೆ ಮಾಡುತ್ತಾರೆ. ರಾಘವೇಂದ್ರ ಖಾಸನೀಸ ಅವರ 'ಅಲ್ಲಾವುದ್ದೀನನ ಅದ್ಭುತ ದೀಪ' ಕತೆಯಲ್ಲಿರುವ ಈ ವಾಕ್ಯವನ್ನು ಗಮನಿಸಬಹುದು. 'ಕೇಳು ವಾಸು, ಇಷ್ಟು ಒಳ್ಳೆಯವನಿದ್ದ ಸತ್ಯಬೋಧ, ನಡುರಾತ್ರಿಯಲ್ಲಿ ಮುಖ ತಪ್ಪಿಸಿ ಏಕೆ ಓಡಿ ಹೋದ ಎಂದು ಕೇಳಿದರೆ ನಾನು ನಿನಗೆ ಹೇಗೆ ತಿಳಿಸಿ ಹೇಳಬೇಕು? ಅವನು ಪಾಪಕ್ಕೆ ಬಲಿಯಾದ ಎಂದು ಹೇಳಿದರೆ ನಿನಗೇನು ತಿಳಿಯಬೇಕಾಗಿದೆ.'[೨] ಸತ್ಯಬೋಧನ ವೃಂದಾ ಅತ್ತಿಗೆ ಅವನ ಕುರಿತು ಹೇಳುವ ಈ ಮಾತುಗಳು ಅವರ ಮನೆಯಲ್ಲಿ ನಡೆದ ವಿವಾಹೇತರ ಸಂಬಂಧ ಕುರಿತದ್ದಾದರೂ ಪುರುಷನ ಗ್ರಾಮ ನಿರಾಕರಣೆಯನ್ನು ಸೂಚಿಸುತ್ತದೆ. ಇಲ್ಲಿ ಮಹಿಳೆಯಾಗಿ ತನ್ನ ಸ್ವಂತ ಮೈದುನನನ್ನು ವಿವಾಹೇತರ ಸಂಬಂಧಕ್ಕೆ ಎಳೆದ ಅಂಬಕ್ಕ ಪಶ್ಚಾತ್ತಾಪ ಪಡುವುದಿಲ್ಲ. ವಿಷಯ ತಿಳಿದ ಹಿರಿಯಣ್ಣ ಮಾನಸಿಕ ಆಘಾತಕ್ಕೊಳಗಾಗಿ ತೀರಿಕೊಳ್ಳುತ್ತಾನೆ. ತನ್ನದಲ್ಲದ ತಪ್ಪಿಗೆ ಸತ್ಯಬೋಧ ಅವಮಾನ ಹೊಂದಿ ನಗರದ ಪಾಲಾಗುತ್ತಾನೆ. ವೃಂದಾ ಅತ್ತಿಗೆಯ ಪ್ರತಿಭಟನೆ, ರೋಷ (ತನ್ನ ಬಂಗಾರದ ಪಾಟಲಿಗಳನ್ನು ಕಳೆದುಕೊಳ್ಳುವ ಭೀತಿಯ ಜೊತೆಗೆ) ಮೈದುನನನ್ನು ಕಳೆದುಕೊಂಡಿದ್ದಕ್ಕಾಗಿ, ಮನೆತನದ ಮಾನವನ್ನು ಹರಾಜು ಹಾಕಿದ್ದಕ್ಕಾಗಿಯೂ ಇರಬಹುದು. ಬಾಲಚಂದ್ರ ಘಾಣೇಕರ ಅವರ 'ನಾನೇ ಹೊಲೆಯ' (೧೯೩೦) ಕತೆಯಲ್ಲಿ, ರಾಯರ ಮಗಳು ರಮೆಯ ಮೇಲೆ ಕಣ್ಣಿಟ್ಟಿದ್ದ ಅಣ್ಣಾಚಾರ್ಯ ಅವಳ ಮೇಲೆ ಬಲಾತ್ಕಾರ ಮಾಡುತ್ತಾನೆ. ಈ ಸಂದರ್ಭದಲ್ಲಿ ಪ್ರವೇಶಿಸಿದ ರಾಯರಿಗೆ ಅವಳೇ ತನ್ನನ್ನು ಕಾಮದಾಟಕ್ಕೆ ಎಳೆದಳೆಂದು ಸುಳ್ಳು ಆರೋಪ ಮಾಡುತ್ತಾನೆ. ರಾಯರು ಈ ಸಂದರ್ಭದಲ್ಲಿ ಅಣ್ಣಾಚಾರ್ಯ(ಪುರುಷ)ನನ್ನು ನಂಬುತ್ತಾರೆಯೆ ವಿನಹ

ತಮ್ಮ ಸ್ವಂತ ಮಗಳನ್ನು ನಂಬುವುದಿಲ್ಲ. ಬಲಾತ್ಕಾರದ ಸಂದರ್ಭದಲ್ಲಿ ವಾಗ್ವಾಳಿ ಮಾಡಿ, ದೈಹಿಕವಾಗಿ ಪ್ರತಿಭಟಿಸಿದ ರಮೆ ಅಪ್ಪನ ಆರೋಪಕ್ಕೆ ತಣ್ಣಗಾಗುತ್ತಾಳೆ. 'ಹಾಯ್ ಪರಮಾತ್ಮ ನನ್ನನ್ನು ನೀನೇ ಕಾಯಬೇಕು. ದೀನಬಂಧು ರಕ್ಷಿಸು'[೧೩] ಎಂದು ದೇವರನ್ನು ಮೊರೆಯಿಡುತ್ತ ಮನೆ/ಗ್ರಾಮ ನಿರಾಕರಿಸಿ ನಗರದತ್ತ ಹೊರಡುತ್ತಾಳೆ.

ಮೇಲಿನ ಸಂದರ್ಭಗಳು ಮೇಲ್ವರ್ಗದ ಕುಟುಂಬಗಳಲ್ಲಿ ನಡೆಯುವ ವಿವಾಹೇತರ ಸಂಬಂಧಗಳು, ಅದಕ್ಕೆ ಕುಟುಂಬದ ಸದಸ್ಯರ ಪ್ರತಿಕ್ರಿಯೆ ಮತ್ತು ಅವರ ಗ್ರಾಮ/ನಗರ ನಿರಾಕರಣೆಯನ್ನು ಹೇಳುತ್ತವೆ. ಮೇಲ್ವರ್ಗದ ಮಹಿಳೆಯರು ಸಾಮಾಜಿಕ ಗೌರವವನ್ನು ಉಳಿಸಿ ಬೆಳೆಸಿಕೊಳ್ಳುವ ಕಾರಣಕ್ಕೆ ಮೌನವಾಗುತ್ತಾರೆ. ವೃಂದಾ ಅತ್ತಿಗೆ, ರಮೆಯಂತವರು ಪ್ರತಿಭಟಿಸಿದರೂ ಅವರ ಪ್ರತಿಭಟನೆಗೆ ಧ್ವನಿಯಿಲ್ಲದಿರುವುದು ಇಲ್ಲಿ ಗಮನಿಸಬೇಕಾದ ಅಂಶವಾಗಿದೆ. ಪುರುಷವರ್ಗ ಪುರುಷನನ್ನು ಬೆಂಬಲಿಸುವುದೂ (ರಾಯರು ಅಣ್ಣಾಚಾರ್ಯನನ್ನು) ಕಂಡುಬರುತ್ತದೆ. ಸಾಮಾಜಿಕ ಅಗೌರವಕ್ಕೆ ಅಂಜಿದ ಹಿರಿಯರು ಮಾನಸಿಕ ಆಘಾತಕ್ಕೆ ಒಳಗಾಗುತ್ತಾರೆ. ಸಮಾಜದ ಪ್ರತಿಕ್ರಿಯೆ ಹಲವು ಕಥನಗಳಲ್ಲಿ ದಾಖಲಾಗಿಲ್ಲ. ಇಂತಹ ಸಂಬಂಧಕ್ಕಿಳಿದ ಪುರುಷರನ್ನು ಮಹಿಳೆಯರು ವ್ಯಂಗ್ಯವಾಗಿ ಜರಿಯುವುದು ಮಾವಿನ ತೋಪು ಕತೆಯಲ್ಲಿ ದಾಖಲಾಗಿದೆ. ಮೇಲ್ವರ್ಗದ ಪುರುಷರ ದೃಷ್ಟಿಯಲ್ಲಿ ಕಾಮದ ತೃಪ್ತಿಯೇ ಮುಖ್ಯ, ಮಹಿಳೆಯರ ಮತ್ತು ಸಮಾಜದ ಅಭಿಪ್ರಾಯ ನಗಣ್ಯ ಎಂಬ ಅಂಶವನ್ನು ಅಧ್ಯಯನ ಗಮನಿಸುತ್ತದೆ. ವಿವಾಹೇತರ ಸಂಬಂಧ ಮತ್ತು ಸತ್ಯಬೋಧನ ಗ್ರಾಮ ನಿರಾಕರಣೆಯ ಹಿನ್ನೆಲೆಯಲ್ಲಿ ವೃಂದಾ ಅತ್ತಿಗೆ ಧರ್ಮ ಮತ್ತು ಪಾಪಗಳ ಕುರಿತು ತೀವ್ರವಾದ ದ್ವಂದ್ವಾತ್ಮಕತೆಯನ್ನು ಅನುಭವಿಸುತ್ತಾಳೆ. ತಾಯಿ ಸತ್ತ ಮೈದುನರಾದ ಸತ್ಯಬೋಧ, ನಾಣಿಯರಿಗೆ ಪೂಜ್ಯ ತಾಯಿಸ್ಥಾನ ತುಂಬಿದ್ದ ಅತ್ತಿಗೆ, ನಾಣಿಯ ಹೆಂಡತಿ ಅಂಬಕ್ಕಳಿಗೆ ಆ ಸ್ಥಾನ ಬಿಟ್ಟುಕೊಟ್ಟು ಧರ್ಮ ಪಾಲಿಸುತ್ತಾಳೆ. ಆದರೆ ಅಂಬಕ್ಕನ ಸ್ವೇಚ್ಛಾ ವರ್ತನೆ ಪಾಪವಾಗಿ ಕುಟುಂಬವನ್ನು ಸುತ್ತಿಕೊಳ್ಳುತ್ತದೆ. 'ಎದ್ದಾಗ, ಕೂತಾಗ, ಕತ್ತಲೆಯಲ್ಲಿ, ಅರೆನಿದ್ರೆಯಲ್ಲಿ, ಅರೆ ಸ್ವಪ್ನದಲ್ಲಿ ಸತ್ಯಬೋಧ ಬಂದು ನನಗೆ ಪುನಃ ಪುನಃ ಛೇಡಿಸುತ್ತಾನೆ. ಚಿಕ್ಕ ಮಗುವಿನಂತೆ ಬಿಕ್ಕುತ್ತ ಕಣ್ಣು ತಿಕ್ಕಿಕೊಳ್ಳುತ್ತಾನೆ. ಗಾಯದ ಕಡೆ ಕೈತೋರಿಸಿ 'ಅತ್ತಿಗೆ, ನನ್ನದೇನೂ ತಪ್ಪಿಲ್ಲ' ಎಂದು ತೊದಲುತ್ತಾನೆ.' (ಪುಟ ೧೦೩) ಮಗ ವಾಸುವಿಗೆ ಹೇಳುವ ಮಾತುಗಳು, ಪುಣೆ ಎಂಬ ನಗರ ತನ್ನ ಮಗನನ್ನು ತನ್ನಿಂದ ಕಿತ್ತುಕೊಂಡು ಸತ್ಯಬೋಧನ ಪಾಲಿಗೆ ಮಲತಾಯಿ ಮತ್ತು ತನ್ನ ಪಾಲಿಗೆ ಸವತಿಯಾಗಿದೆ ಎಂಬ ಆರೋಪ ವೃಂದಾ ಅತ್ತಿಗೆಯ ಅನಿಸಿಕೆಗಳಲ್ಲಿ ಕಂಡು ಬರುತ್ತದೆ.

**ವಿವಾಹೇತರ ಸಂಬಂಧ : ಕೆಳವರ್ಗಗಳ ನಿರಾಕರಣೆಯ ನೆಲೆಗಳು**

ವಿಷಮ ದಾಂಪತ್ಯ, ಶ್ರೀಮಂತಿಕೆಯ ಭೋಗ, ಅತೃಪ್ತ ವೈವಾಹಿಕ ಬದುಕು, ಸ್ತ್ರೀ-ಪುರುಷರ ದೇಹ ಸುಖದ ಅತಿವಾಂಛೆ, ವರ್ಣ ವರ್ಗ ಅಹಂಕಾರಗಳು ಮೇಲ್ವರ್ಗದ ಜನರಲ್ಲಿ ವಿವಾಹೇತರ ಸಂಬಂಧಗಳಿಗೆ ಕಾರಣವಾಗಿ ಗ್ರಾಮ/ನಗರಗಳ ನಿರಾಕರಣೆಯಲ್ಲಿ ಕೊನೆಗೊಳ್ಳುತ್ತವೆ. ಆದರೆ ಕೆಳವರ್ಗದ ಜನರಲ್ಲಿ ಹಸಿವು, ಬಡತನ, ವರ್ಣ/ವರ್ಗ ಶೋಷಣೆ, ಅಸಹಾಯಕತೆ, ಆಶ್ರಯದಂತಹ ಸಮಸ್ಯೆಗಳು ವಿವಾಹೇತರ ಸಂಬಂಧಗಳಿಗೆ ಜನರನ್ನು ಸಿಲುಕಿಸಿ ಗ್ರಾಮ/ನಗರ ನಿರಾಕರಿಸುವಂತೆ ಮಾಡುತ್ತವೆ. ವಿವಾಹೇತರ ಸಂಬಂಧಗಳಲ್ಲಿ ಹಸಿವು ಮತ್ತು ಆಶ್ರಯಗಳ ಪಾತ್ರ ಕುರಿತು ವಿಶ್ಲೇಷಿಸುವಾಗ, ವ್ಯಾಸರಾವ್ ನಿಂಜೂರ ಅವರ 'ಉಸಿರು' ಕಾದಂಬರಿಯ ಈ ವಾಕ್ಯಗಳನ್ನು ಗಮನಿಸೋಣ. 'ಸುಮ್ಮನಿರೆ ಪಾಪ ಅವರು ಅನ್ನ ಕೊಟ್ಟವರು. ಹಾಗೆಲ್ಲ ಮಾತನಾಡಬಾರದು'[೧೪] ಎಂದು ಶಾರದೆಯ ತಾಯಿ ಪಟೇಲರ ವಿರುದ್ಧ ಮಾತನಾಡಿದ ಮಗಳಿಗೆ ಹೇಳುವ ಮಾತು ಅವಳ ಇಡೀ ಬದುಕಿನ ಅಸಹಾಯಕ ಸ್ಥಿತಿಯನ್ನು ಸೂಚಿಸುತ್ತದೆ. ಪಟೇಲರನ್ನು ಇಟ್ಟುಕೊಂಡಾಕೆಯಾಗಿ, ಅವರ ಆದೇಶದಂತೆ ಗಂಡನನ್ನು ಕೊಂದು, ಮಗಳು ಶಾರದಳನ್ನು ಪಟೇಲರ ಅನ್ನ ಆಶ್ರಯದಲ್ಲಿ ಬೆಳೆಸಿದ ಅಸಹಾಯಕ ಸ್ಥಿತಿ ಅವಳದು. ಈ ವ್ಯವಸ್ಥೆಯನ್ನು ಅವಳು ಒಪ್ಪಿಕೊಂಡಿದ್ದಾಳೆ. ಆದರೆ ಕೆಳವರ್ಗದ ಯುವ ಜನತೆಯ ಪ್ರತಿನಿಧಿಯಾದ ಶಾರದ ಒಪ್ಪಿಕೊಂಡಿಲ್ಲ. ವಯಸ್ಸಿಗೆ ಬಂದ ತನ್ನನ್ನು ತಿನ್ನುವಂತೆ ನೋಡುವ ಪಟೇಲರ ಆಶ್ರಯದಿಂದ ದೂರ ಹೋಗಲು ತೀರ್ಮಾನಿಸಿಕೊಂಡ ಶಾರದ ತಾಯಿಯ ಸ್ಥಿತಿಯನ್ನು ಪ್ರತಿಭಟಿಸುತ್ತಾಳೆ. ಕಥನದಲ್ಲಿ ದಾದಿಯರ ಶಿಕ್ಷಣ ಒಂದು ನೆಪವಾಗಿ ತಾಯಿಯಿಂದ ಅವಳನ್ನು ದೂರ ಮಾಡುತ್ತದೆ.

ಅಶೋಕ ಕುಲಕರ್ಣಿ ಅವರ 'ನಿರ್ಗತಿಕರು' ಕಾದಂಬರಿಯ ಚೋದು, ತನ್ನ ಹೆಂಡತಿ ಗೌಳಿಗಿ ಮಾರುತಿಯೊಂದಿಗೆ ವಿವಾಹೇತರ ಸಂಬಂಧದಿಂದ ಗರ್ಭಿಣಿಯಾದಾಗ ಕುಡಿದು ಬಂದು ಮನಸಾರೆ ಹೊಡೆಯುತ್ತಾನೆ. ಈ ಘಟನೆಯನ್ನು ಕಾದಂಬರಿ ಅವನ ಪೌರುಷದ ನೆಲೆಯಲ್ಲಿ ಗುರುತಿಸದೆ ಶರಾಬಿನ ಮತ್ತಿನಲ್ಲಿ ಹುಟ್ಟಿದ ಪೌರುಷವೆಂಬಂತೆ ನಿರೂಪಿಸಿದೆ. 'ಪೌರುಷ' ಕುರಿತ ಸವರ್ಣೀಯ ಲೇಖಕರ ಅನುಕೂಲಕರ ವ್ಯಾಖ್ಯಾನಗಳು ಹಾಗೂ ಸಾಮಾಜಿಕ ನೀತಿ ನಿಯಮಗಳ ನಡಾವಳಿಗಳು ಸ್ಪೃಶ್ಯ ಮತ್ತು ಅಸ್ಪೃಶ್ಯತೆಯ ಹಿನ್ನೆಲೆಯಲ್ಲಿ ಹೇಗೆ ವಿಭಿನ್ನ ರೂಪ ತಾಳುತ್ತವೆ ಎಂಬುದಕ್ಕೆ ಈ ಸಂದರ್ಭ ಉದಾಹರಣೆಯಾಗಿದೆ.

> 'ತಾಂಡೇದ ಗಂಡಸರೆಲ್ಲ ಕಳುವು ಮಾಡುವುದರಲ್ಲಿ ಸಾಣಿ ಇಮ್ಯಾನ ಹೆಂಡ ಕುಡಿಯುವುದರಲ್ಲಿ ವೇಳೆ ಹಾಳು ಮಾಡುತ್ತ ಎರಡು ಹೊತ್ತಿಗೆ ಬೇಕಾಗುವ ಮುಷ್ಠಿ ಅಕ್ಕಿಯನ್ನು ತರದೇ ಇರುವಾಗ, ಮತ್ತೆ ಹೆಂಗಸರು ತಮ್ಮ ಮಾನ, ಶೀಲ, ಎಲ್ಲವನ್ನೂ ಒತ್ತಿ ಇಟ್ಟು ಮುಷ್ಠಿ ಅಕ್ಕಿ ತರಲೇ ಬೇಕಲ್ಲ. ಇವೆಲ್ಲ ನೈತಿಕತೆಯನ್ನು ಮೀರಿದ್ದು'[೧೫]

ಎಂಬ ಕಾದಂಬರಿಯ ಶೀಲವೆಂಬ ಮೌಲ್ಯದ ವ್ಯಾಖ್ಯಾನವನ್ನು ಜಾತಿ ನೆಲೆಯಲ್ಲಿ ನಿರ್ಧರಿಸಿದ ಸಿದ್ಧ ನಿಲುವು ಎಂದು ಹೇಳಬಹುದು. ಯಾಕೆಂದರೆ, ದೈಹಿಕ ಮಿಲನವಾದ ದಿನ ಮಾರುತಿ ಸುಖದ ಮತ್ತಿನಲ್ಲಿ ನರಳಿ ದೋತರದಿಂದ ಒಂದು ರೂಪಾಯಿ ತೆಗೆದು ಚೋದುವಿನ ಹೆಂಡತಿಗೆ ಕೊಡುತ್ತಾನೆ. ಅದನ್ನು ಧನ್ಯತೆಯಿಂದ ಸ್ವೀಕರಿಸಿದ ಅವಳು ಸೀರೆಗೆ ಅಂಟಿದ ಧೂಳನ್ನು ಜೋರಾಗಿ ಕೊಡವಿ (ಶೀಲವೆಂಬ ಮೌಲ್ಯದ ಬೆಲೆಯೂ ಅಷ್ಟೇ ಎಂಬ ವ್ಯಂಗ್ಯ ಧ್ವನಿ ಇಲ್ಲಿದೆ) ಏನೂ ಆಗಿಲ್ಲವೆಂಬಂತೆ ಹೊರಟು ಹೋಗುತ್ತಾಳೆ. ಈ ವಿವಾಹೇತರ ಸಂಬಂಧದ ಸಂಗತಿಯನ್ನು ತಮ್ಮ ಸ್ವಾರ್ಥಕ್ಕೆ ಉಪಯೋಗಿಸಿಕೊಂಡ ಕೋದು, ಎಡನ್ ಸಾಹೇಬ, ದೌಲಸಾಬ, ಸಾಣಿ ಇಮ್ಯಾ, ಸೋಂಬಳ್ಯಾ ಇವರೆಲ್ಲರೂ ದಲಿತ, ಕೆಳವರ್ಗದವರಾಗಿದ್ದುದು ವಿಶೇಷವಾಗಿದೆ. ಜಾತಿಜನ್ಯ ನೆಲೆಯಲ್ಲಿ ಕೋದುವಿಗೆ ಶಿಕ್ಷೆಯಾಗಿ, ಮಾನಸಿಕ, ದೈಹಿಕ ಹಿಂಸೆ, ಅವಮಾನ ತಾಳಲಾರದ ಚೋದು ಮಾರುತಿಯನ್ನು ಕೊಂದು ಕೃತಪುರವನ್ನು ನಿರಾಕರಿಸುತ್ತಾನೆ. ಯಾವುದೇ ಒಂದು ವ್ಯವಸ್ಥೆ ತನ್ನಷ್ಟಕ್ಕೆ ತಾನು ಒಳ್ಳೆಯದು, ಕೆಟ್ಟದ್ದು ಆಗಿರಲು ಸಾಧ್ಯವಿಲ್ಲ. ಅದನ್ನು ನಡೆಸುವ, ಉಪಯೋಗಿಸುವ, ಸ್ವೀಕರಿಸುವ ವ್ಯಕ್ತಿಗಳ ನೆಲೆಯಲ್ಲಿ ಅದರ ರೂಪವನ್ನು ಕಾಣಬಹುದೆಂಬ ನಿಲುವು ಅಧ್ಯಯನದ್ದಾಗಿದೆ.

ಕೋರಗಲ್ ವಿರುಪಾಕ್ಷಪ್ಪ ಅವರ 'ಕತೆ ಅಂದ್ರ ಕತೆ ಅಲ್ಲ' ಕತೆಯ ಪಾರ್ವತೆವ್ವ ಕುಡಿದು ಬಂದು ಹೊಡೆಯುತ್ತಿದ್ದ ಗಂಡ ಉಡಚಪ್ಪನನ್ನು ಬಿಟ್ಟು, ಗಿರಿಯಪ್ಪನೊಂದಿಗೆ ಗ್ರಾಮ/ನಗರ (ಕತೆಯೊಳಗೆ ಎಲ್ಲಿಂದ ಬಂದಳು ಎಂಬುದು ಸ್ಪಷ್ಟವಿಲ್ಲ) ನಿರಾಕರಿಸಿ ಗ್ರಾಮಕ್ಕೆ ಬಂದವಳು. ಈ ಸಂಬಂಧ ಕುರಿತು ಅವಳಲ್ಲಿ ಪಶ್ಚಾತ್ತಾಪವಿಲ್ಲ. ಬದಲಿಗೆ ಒಬ್ಬ ಒಳ್ಳೆಯ ಪುರುಷನಿಗೆ ಕೂಡಿಕೆ ಹೆಂಡತಿಯಾದ ಹೆಮ್ಮೆ ಇದೆ. ಕತೆಯಲ್ಲಿ ಗಿರಿಯಪ್ಪನ ಜಾತಿ ಪ್ರಸ್ತಾಪವಾಗದಿದ್ದರೂ ಪಾರವ್ವ ಶ್ರಮಿಕ ವರ್ಗಕ್ಕೆ ಸೇರಿದವಳಾಗಿದ್ದಾಳೆ. 'ನಮ್ಮ ಹಿರಿಯಾಗ ಆರಾಮಾದರ, ಬರ ಕಾರ್ತಿಕಕ್ಕ ದೀಡ್ ನಮಸ್ಕಾರಾ ಹಾಕಿ ನಿನಗ ಎಲಿ ಚೆಟ್ಟು ಕಟ್ಟಸ್ತೀನಪ್ಪ ನಮ್ಮಪ್ಪ ಹನುಮಪ್ಪ'[೧೬] ಎಂದು ಅವನನ್ನು ತನ್ನ ಬದುಕಿನ ಹೊಸ ನೆಲೆಯಲ್ಲಿ ಹಿರಿಯ (ಗಂಡ) ಎಂದು ಒಪ್ಪಿಕೊಂಡಿದ್ದಾಳೆ. ಪಾರ್ವತೆವ್ವ ಗಿರಿಯಪ್ಪನನ್ನು ಕೂಡಿಕೆ (ಮರು ಮದುವೆ) ಮಾಡಿಕೊಂಡು, ಮಹಿಳೆಯರ ಕುರಿತಾದ ಸಂಪ್ರದಾಯದ ಜೀವವಿರೋಧಿ ನೀತಿಯ ಗೆರೆ ದಾಟಿ ಪ್ರತಿಭಟಿಸಿದ್ದಾಳೆ. ಮಲಮಗನನ್ನು ಶಿಕ್ಷಣಮುಖಿ ಮಾಡುವ ಗಿರಿಯಪ್ಪ, ಶಿಕ್ಷಣ ಮಾತ್ರ ಸಾಮಾಜಿಕ ಆರೋಪ (ಓಡಿ ಬಂದವಳ ಮಗನೆಂಬ ಅರೋಪ)ಗಳಿಂದ ಮುಕ್ತವಾಗುವ ಹಾದಿ ಎಂಬ ಆದರ್ಶವನ್ನು ಎತ್ತಿ ಹಿಡಿಯುತ್ತಾನೆ. ನಾ. ಡಿಸೋಜ ಅವರ 'ಪ್ರೀತಿಯೊಂದೇ ಸಾಲದೆ?' ಕಾದಂಬರಿಯಲ್ಲಿ ಗಂಡ ಸತ್ತ ನಂತರ ತನ್ನ ಬಡತನಕ್ಕೆ ಆಸರೆಯಾಗಿ ಬಂದ ದುಮಿಂಗನನ್ನು ಪೌಲೀನ ಕೂಡಿಕೊಳ್ಳುತ್ತಾಳೆ. ಪ್ರತಿಭಟಿಸಿದ ಅಕ್ಕನ ಮಗ ಮನುವೇಲನಿಗೆ 'ಬರಲಿ ಬಿಡು ನಮಗೆ ಬೇರೆ ಯಾರಿದ್ದಾರೆ'[೧೭] ಎಂದು ಸಮಜಾಯಿಸುತ್ತಾಳೆ. ಮನುವೇಲು ಗ್ರಾಮ ನಿರಾಕರಿಸಿ ಹೊರಟು ಹೋಗುತ್ತಾನೆ. ಇಲ್ಲಿ ಪೌಲೀನಳು ಅನೈತಿಕ ಹೆಣ್ಣು ಎಂಬ ಆರೋಪವಿದ್ದರೂ ಅದಕ್ಕೆ ಕಾರಣವಾದ ಅವಳ ಅಸಹಾಯಕತೆಯನ್ನು ಅಧ್ಯಯನ ಗುರುತಿಸುತ್ತದೆ. ಕಾದಂಬರಿಯಲ್ಲಿ ನೈತಿಕತೆ ಮತ್ತು ಅನೈತಿಕತೆಗಳ ಮೌಲ್ಯಮಾಪನ ಕುರಿತಂತೆ ಸಮಾಜದ ಒಂದು ಗುಂಪಿನ ಅನುಕೂಲಕರ ವ್ಯಾಖ್ಯಾನಗಳು ಹಾಗೂ ನಡಾವಳಿಗಳು ಮಹಿಳೆಯೊಬ್ಬಳ ಅಸಹಾಯಕ ಸ್ಥಿತಿಯನ್ನು ಗುರುತಿಸುವಲ್ಲಿ ಸೋಲುತ್ತವೆ. ಶ್ರೀರಂಗ ಅವರ 'ವಿಶ್ವಾಮಿತ್ರನ ಸೃಷ್ಟಿ' ಕಾದಂಬರಿಯಲ್ಲಿ ಕುಲಕರ್ಣಿ ಮತ್ತು ಶೂದ್ರ

ಮಹಿಳೆಯೊಬ್ಬಳ ವಿವಾಹೇತರ ಸಂಬಂಧದ ಫಲವಾಗಿ ತುಳಜಿ ಹುಟ್ಟುತ್ತಾಳೆ. ದೊಡ್ಡವಳಾದ ಮಗಳ ಮೇಲೆ ಕುಲಕರ್ಣಿ ಕಣ್ಣು ಹಾಕುತ್ತಾನೆ. ತಾಯಿ ವಿರೋಧಿಸುವುದಿಲ್ಲ. 'ಕುಲಕರ್ಣಿ (ಕೂಡಿಕೆಯಿಂದ ಹುಟ್ಟಿದ ತನ್ನ ಮಗಳ ಮೇಲೆ) ಮಾಡಿದ ಬಲಾತ್ಕಾರದ ವಿಷಯ ಮಗಳಿಂದ ತಿಳಿದು ತಾಯಿ ನಿಟ್ಟುಸಿರು ಬಿಡುತ್ತಾಳೆ.'[೮] ತುಳಜಿಯ ತಾಯಿಯನ್ನು ಗಂಡ ಕ್ರೂರವಾಗಿ ಕೊಲೆ ಮಾಡುತ್ತಾನೆ. ತುಳಜಿ ನಾರಾಯಣನೊಂದಿಗೆ ಗ್ರಾಮೋದ್ಧಾರ ಕಾರ್ಯಕ್ಕೆ ಗ್ರಾಮ ನಿರಾಕರಿಸಿ ಹೊರಟು ಹೋಗುತ್ತಾಳೆ. ವ್ಯಾಸರಾವ್ ನಿಂಜೂರ್ ಅವರ 'ಮಂಚ' ಕತೆಯ ಗುರ್ಕಾರ ದಾಸಣ್ಣ ಹೆಗಡೆ ಕುರ್ಕುಪ್ಪಾಡಿ ಬಿರ್ಮಣ್ಣಶೆಟ್ಟರ ಮನೆಯ ವರ್ಷಾವಧಿ ಕೋಲದಲ್ಲಿ ಪೂಜಾರಿ ಚೀಂಕ್ರನ ಹೆಂಡತಿ ಯಶೋದೆಯನ್ನು ಬಲಾತ್ಕಾರ ಮಾಡಲು ಪ್ರಯತ್ನಿಸಿ ಸೋಲುತ್ತಾನೆ. ಹೆಂಡತಿಯಿಂದ ವಿಷಯ ತಿಳಿದ ಚೀಂಕ್ರ ದಾಸಣ್ಣ ಹೆಗ್ಡೆಗೆ ಮುಖ, ಮೂತಿ ನೋಡದೆ ಊರ ಮಧ್ಯೆ ನಿಲ್ಲಿಸಿ ಬಾರಿಸುತ್ತಾನೆ. 'ನಿನ್ನ ಹೆಂಗಸನ್ನು ಕಂಡ ಕಂಡವರಿಗೆ ಕಣ್ಣು ಮಿಟುಕಿಸುವ ಲೌಡಿಯಾಗಿ ಮಾಡದಿದ್ದರೆ ನಾನು ಅಪ್ಪನಿಗೆ ಹುಟ್ಟಿದವನೇ ಅಲ್ಲ'[೯] ಎಂದು ದಾಸಣ್ಣ ಶಪಥ ಮಾಡಿ ದೈಹಿಕ, ಮಾನಸಿಕ ಹಿಂಸೆ, ಅವಮಾನಗಳಿಂದ ಸೇಡು ತೀರಿಸಿಕೊಳ್ಳಲು ಗ್ರಾಮ ನಿರಾಕರಣೆ ಮಾಡುತ್ತಾನೆ.

ಕೆಳವರ್ಗದ ಗಂಡು ಹೆಣ್ಣುಗಳು ಕಾಮ, ಅನೈತಿಕ ಸಂಬಂಧಗಳ ಕುರಿತು ವಾಸ್ತವಿಕ ನೆಲೆಯಲ್ಲಿ ಚಿಂತಿಸುವುದು ಕಂಡುಬರುತ್ತದೆ. ಶಾರದಳ ತಾಯಿ, ಪಾರ್ವತೆವ್ವ, ಪೌಲೀನ, ಜೂಲಿ ಬಡ್ಡೋಲ, ತುಳಜಿಯ ತಾಯಿ ಬದುಕಿನ ಹೋರಾಟದಲ್ಲಿ ಶೀಲ, ದಾಂಪತ್ಯದ ಪವಿತ್ರತೆ ಕುರಿತು ಚಿಂತಿಸಿದವರಲ್ಲ. ಇವರಿಗೆ ಕೌಟುಂಬಿಕ ಆಶ್ರಯಕ್ಕಾಗಿ ಪುರುಷರ (ಅವನು ಯಾವ ಜಾತಿ, ಧರ್ಮದವನೇ ಆಗಿರಲಿ) ಆಸರೆಯ ಆವಶ್ಯಕತೆಯಿದ್ದು ಅದನ್ನು ಪೂರೈಸಿಕೊಳ್ಳುವುದರತ್ತ ಹೆಚ್ಚಿನ ಒಲವಿದೆ. ಆದ್ದರಿಂದ ಇವರು ಮೇಲ್ವರ್ಗದ/ ಕೆಳವರ್ಗದ ಪುರುಷ ಪ್ರಧಾನ ವ್ಯವಸ್ಥೆಯನ್ನು ಧಿಕ್ಕರಿಸಿ ನಿಲ್ಲುವುದು ಕಥನಗಳಲ್ಲಿ ಕಂಡುಬರುವುದಿಲ್ಲ. ಆದರೆ ಹೊಸ ಪೀಳಿಗೆಯ ಯುವತಿಯರಾದ ಶಾರದ, ತುಳಜಿ ಮುಂತಾದವರು ವ್ಯವಸ್ಥೆಯನ್ನು ಪ್ರತಿಭಟಿಸಿ ಗ್ರಾಮ/ನಗರ ನಿರಾಕರಿಸುವುದು ಕಂಡುಬರುತ್ತದೆ. ಯಶೋದೆಯಂತಹ ಗಂಡನ ಆಸರೆಯಿದ್ದ ಶೂದ್ರ ಮಹಿಳೆ ಅಕ್ರಮ ಸಂಬಂಧಕ್ಕೆ ಎಳೆಸಲು ಪ್ರಯತ್ನಿಸಿದ ಮೇಲ್ವರ್ಗದ ಪುರುಷನನ್ನು ತಿರಸ್ಕರಿಸಿದ್ದಲ್ಲದೆ, ಅವನಿಗೆ ಶಿಕ್ಷೆಯನ್ನೂ ಕೊಡಿಸುತ್ತಾಳೆ. ಇವಳಿಗೆ ಬದುಕಿನ ಭದ್ರತೆ ಇರುವುದು ಇಲ್ಲಿ ಗಮನಾರ್ಹವಾಗಿದೆ.

ಮೇಲ್ವರ್ಗದ ಅಕ್ಕವ್ವ ತನ್ನ ಗಂಡನ ವಿವಾಹೇತರ ಸಂಬಂಧ ಕುರಿತು ಬನಕ್ಕನ ಹತ್ತಿರ ಹೋಗಿ ವ್ಯಕ್ತಪಡಿಸಿದ ಪ್ರತಿರೋಧ (ಮೌನ ಕಣ್ಣೀರು), ರಮೆ ಅಗ್ನಾಚಾರಿಯನ್ನು ದೈಹಿಕವಾಗಿ, ವ್ಯಾಚ್ಯವಾಗಿ ನಿಂದಿಸಿದ ಪ್ರತಿರೋಧ, ವೃಂದಾ ಅತ್ತಿಗೆ ಮನೆತನದ ಗೌರವ ಎಂದು ಅಂಬಕ್ಕಳನ್ನು ಎದುರಿಸಿದ ಪ್ರತಿಭಟನೆ ಕೆಳವರ್ಗದ ಮಹಿಳೆಯರಲ್ಲಿ (ಅದರಲ್ಲೂ ಹಿರಿಯ ತಲೆಮಾರು) ಕಂಡುಬರುವುದಿಲ್ಲ. ಮೇಲ್ವರ್ಗದ ಗಂಡು ಹೆಣ್ಣುಗಳು ಕೆಳವರ್ಗದ ಗಂಡು ಹೆಣ್ಣುಗಳೊಂದಿಗೆ ವಿವಾಹೇತರ ಸಂಬಂಧ ಬೆಳೆಸಿದಾಗ ಇವರೇಕೆ ಪ್ರತಿಭಟಿಸುವುದಿಲ್ಲ. ಈ ವಿಲೋಮ ಸಂಬಂಧಗಳ ಕುರಿತು ಅವರಲ್ಲಿ ಹೆಮ್ಮೆ ಇದೆಯೇ, ಇಲ್ಲವೆ ಕೀಳರಿಮೆ ಇದೆಯೇ ಎಂಬ ಪ್ರಶ್ನೆ ಅಧ್ಯಯನದ ಮುಂದಿದೆಯಾದರೂ ಹಸಿವು, ಬಾಯಾರಿಕೆಯಂತೆ ಕಾಮ ಕೂಡ ಒಂದು ದೈಹಿಕ ಅಪೇಕ್ಷೆ ಮಾತ್ರ ಎಂಬ ಉಪೇಕ್ಷೆ ಅಥವಾ ತಾತ್ಸಾರ (ಇಲ್ಲಿ ಚೋದುವಿನ ಹೆಂಡತಿಯ ಸೀರೆ ಕೊಡವಿ ಹಾಕುವ ಪ್ರತಿಕ್ರಿಯೆಯನ್ನು ನೆನಪಿಸಿಕೊಳ್ಳಬಹುದು) ಅವರಲ್ಲಿ ಉಂಟಾಗಿರಬಹುದು. ಈ ವಿಲೋಮ ಸಂಬಂಧಗಳು ತಲೆತಲಾಂತರದಿಂದ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಕಂಡುಬರುತ್ತಿದ್ದು ಇದು ಸಾಮಾನ್ಯ ಎಂಬ ಜಡ್ಡುಗಟ್ಟಿದ, ವಿಧಿವಾದದ ಮೂಢನಂಬಿಕೆ ಅವರ ಪ್ರತಿರೋಧ, ಪ್ರತಿಭಟನೆಯನ್ನು ಹತ್ತಿಕ್ಕಿರಬಹುದು. ಇಲ್ಲವೆ ಹಸಿವು, ಅನ್ನ, ಬಡತನ, ಅಸಹಾಯಕತೆಗಳು ಅವರ ಪ್ರತಿಭಟನೆಯನ್ನು ನುಂಗಿ ಹಾಕಿರಬಹುದೆಂಬ ನಿಲುವಿನತ್ತ ಅಧ್ಯಯನ ಬರುತ್ತದೆ.

ವೈಯಕ್ತಿಕ ನೆಲೆಯಲ್ಲಿ ವಿವಾಹೇತರ ದೈಹಿಕ ಸಂಬಂಧಗಳು ಮತ್ತು ನಿರಾಕರಣೆ ಕುರಿತಂತೆ ಪ್ರಸ್ತುತ ಕಥನ ಸಾಹಿತ್ಯ ಗ್ರಹಿಸಿರುವ ಅಂಶಗಳು ಇಂತಿವೆ. * ಸಜಾತಿ/ವಿಜಾತಿಯೊಳಗಿನ ವಿವಾಹೇತರ ಸಂಬಂಧಗಳು ಲೈಂಗಿಕವಾಗಿ ಅಶಕ್ತ ಲಿಂಗಿಗಳನ್ನು ಗುರಿಯಾಗಿಟ್ಟು ಘಟಿಸುವಂತಹ ಘಟನೆಗಳಾಗಿವೆ. * ಆರ್ಥಿಕವಾಗಿ, ಜಾತಿಯಿಂದ ಸಬಲರಾಗಿರುವ ಜನಾಂಗದವರ ದೌರ್ಜನ್ಯ, ಆಕ್ರಮಣ ಪ್ರವೃತ್ತಿ ಘಟನೆಗಳಿಗೆ ಮೂಲ (ಉಸಿರು ಕಾದಂಬರಿಯ ಶಾರದ, ಮಂಚ ಕತೆಯ ಯಶೋದ) ಕಾರಣವೆನ್ನಬಹುದು. ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಪುರುಷ ಹಿತಾಸಕ್ತ ಮೂಢನಂಬಿಕೆಗಳು ಇವುಗಳಿಗೆ ಪೂರಕವಾಗಿವೆ * ವಿವಾಹೇತರ ಸಂಬಂಧಗಳ ನೆಲೆಯಲ್ಲಿ, ಉಳಿವಿಗಾಗಿ ಹೋರಾಟ(Struggle for Existence)ದ ಪ್ರಶ್ನೆ

ಬಂದಾಗ, ಬಹಳಷ್ಟು ಸಂದರ್ಭಗಳಲ್ಲಿ ಮಹಿಳೆಯರು (ನಾನೇ ಹೊಲೆಯ ಕತೆಯ ರಮೆ, ಉಸಿರು ಕತೆಯ ಶಾರದ ಮುಂತಾದವರು) ಗ್ರಾಮ/ನಗರ ನಿರಾಕರಣೆ ಮಾಡುತ್ತಾರೆ. * ಇಲ್ಲವೇ ಆರ್ಥಿಕ/ದೈಹಿಕ/ಮಾನಸಿಕವಾಗಿ ಅಶಕ್ತರಾದವರ (ಮಂಚದ ದಾಸಣ್ಣ ಹೆಗ್ಡೆ, ಅಲ್ಲಾವುದ್ದೀನನ ಅದ್ಭುತದೀಪದ ಸತ್ಯಬೋಧ) ನಿರಾಕರಣೆ ಕಂಡುಬರುತ್ತದೆ. * ವಿವಾಹೇತರ ಸಂಬಂಧಗಳನ್ನು ತಡೆಗಟ್ಟಿ ಸಾಮಾಜಿಕ ಸ್ವಾಸ್ಥ್ಯ ಕಾಯಬೇಕಾದ ಧಾರ್ಮಿಕ ಸಂಸ್ಥೆಗಳು (ಅಲ್ಲಾವುದ್ದೀನನ ಅದ್ಭುತ ದೀಪ ಕತೆಯಲ್ಲಿನ ಮಠ, ಪ್ರೀತಿಯೊಂದೇ ಸಾಲದೆ? ಕತೆಯಲ್ಲಿನ ಇಗರ್ಜಿ, ನಾನೇ ಹೊಲೆಯ ಕತೆಯಲ್ಲಿನ ಸನಾತನ ಧರ್ಮೋದ್ಧಾರ ಸಂಘ ಇತ್ಯಾದಿ., ಅವು ಹಾಗೇ ಹೇಳಿಕೊಳ್ಳುತ್ತವೆ) ಇಂತಹ ಸಂದರ್ಭಗಳಲ್ಲಿ ಅನುಕೂಲಸಿಂಧು ಸ್ವಭಾವವನ್ನು ಪ್ರದರ್ಶಿಸುವುದು ಕಂಡುಬರುತ್ತದೆ.

**ಡ. ಆಂತರಿಕ ತುಡಿತಗಳು ಮತ್ತು ನಿರಾಕರಣೆ : ಬದುಕು ಕಟ್ಟುವ ಬಯಕೆ**

ಪ್ರತಿಯೊಬ್ಬ ಸ್ತ್ರೀ-ಪುರುಷರು ತಮ್ಮದೇ ಆದ ಸುಖ, ನೆಮ್ಮದಿಯ ಸಂಸಾರದಲ್ಲಿ ಬದುಕಲು ಇಚ್ಛಿಸುತ್ತಾರೆ. ಅವರು ಯಾವುದೇ ಜಾತಿ, ಧರ್ಮದವರಿರಲಿ, ನೌಕರಿ, ವ್ಯಾಪಾರ, ಕೃಷಿ, ಕೃಷಿಕೂಲಿ ಮುಂತಾಗಿ ವೃತ್ತಿ ಯಾವುದೇ ಆಗಿರಲಿ, ಕೌಟುಂಬಿಕ ಬದುಕು ಕಟ್ಟುವ ಬಯಕೆ ಮಾನವರಿಗೆ ಜನ್ಮ ಮೂಲದಲ್ಲಿಯೆ ದೊರೆತ ಸ್ವಭಾವವೆನ್ನಬಹುದು. ತಮ್ಮ ವೃತ್ತಿ ಬದುಕಿನಲ್ಲಿ ಸೋತವರು, ದುರಂತಗಳಿಗೆ ಈಡಾದವರು, ವರ್ಣ, ವರ್ಗ, ಲಿಂಗಪ್ರಧಾನ ವ್ಯವಸ್ಥೆಯಲ್ಲಿ ಶೋಷಣೆಗೊಳಗಾದವರು ಕೌಟುಂಬಿಕ ಜೀವನದಿಂದ ವಿಮುಖರಾಗುವುದು, ಅಧೈರ್ಯಗೊಂಡು ಜೀವನ ಕೊನೆಗೊಳಿಸಲು ಮುಂದಾಗುವುದು ಕಂಡುಬರುತ್ತದೆ. ಮೊದಲ ಹಂತದ ಬದುಕು ನಿರಾಸೆ, ದುರಂತಗಳನ್ನು ತಂದಾಗ ಸ್ತ್ರೀ ಪುರುಷರ ಮುಂದಿನ ಯೋಚನೆಗಳಾವುವು, ಅವರು ತೆಗೆದುಕೊಳ್ಳುವ ನಿರ್ಧಾರಗಳಾವುವು, ಅವರ ದೃಷ್ಟಿಯಲ್ಲಿ ಸಾಮಾಜಿಕ ವ್ಯವಸ್ಥೆಯ ಸ್ಥಾನವೇನು, ಅವರು ಸಮಾಜವನ್ನು ಎದುರಿಸಿ ನಿಲ್ಲುವ ಬಗೆ ಹೇಗೆ ಎಂಬ ಪ್ರಶ್ನೆಗಳಿಗೆ ಮುಂಬಯಿ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಉತ್ತರಗಳನ್ನು ಹುಡುಕಬಹುದು. ಅದರಲ್ಲೂ ಮಹಿಳಾ ಪಾತ್ರಗಳು ತಮ್ಮ ಎರಡನೇ ಹಂತದ ಬದುಕನ್ನು ಕಟ್ಟಲು, ಜಾತಿ ಮತ, ಧರ್ಮದ ಹಂಗಿಲ್ಲದೆ ಪುರುಷರ ಆಸರೆ ಬಯಸಿ, ಗ್ರಾಮ/ನಗರ ನಿರಾಕರಣೆ ಮಾಡುವುದು ತಿಳಿದುಬರುತ್ತದೆ.

ವ್ಯಾಸರಾಯ ಬಲ್ಲಾಳ ಅವರ 'ಹೆಜ್ಜೆ' ಕಾದಂಬರಿಯ ಶಾಂಭವಿ ಬಾಲ್ಯದಲ್ಲಿ ಅಕಾಲ ವೈಧವ್ಯಕ್ಕೆ ಒಳಗಾದರೂ, ಪ್ರಗತಿಶೀಲ ವ್ಯಕ್ತಿತ್ವದ ಅತ್ತಿಗೆ ಸಾವಿತ್ರಿಯ ಸಹಾಯದಿಂದ ಕೇಶಮುಂಡನ ಮಾಡಿಸಿಕೊಳ್ಳುವುದಿಲ್ಲ. ಅಂದಿನ ಕಾಲದ (ಕಾದಂಬರಿ ಕಾಲ ೧೯೩೦ ಎಂದು ಲೇಖಕರು ದಾಖಲಿಸಿದ್ದಾರೆ) ಸಂಪ್ರದಾಯ ಮುರಿದು ಉಡುಪಿಗೆ ಹೋಗಿ ಓದಿ, ಹಿಂದಿಯಲ್ಲಿ ಪದವೀಧರೆಯಾಗುತ್ತಾಳೆ. ಪುತ್ತೂರಿನ ಬೋರ್ಡ್ ಶಾಲೆಯೊಂದರಲ್ಲಿ ಶಿಕ್ಷಕಿಯಾಗಿ, ತನ್ನ ಸಹದ್ಯೋಗಿ ಗೌಡರ ಜಾತಿಯ ರಘುವನ್ನು ವರಿಸಿ ಹೊಸ ಬದುಕನ್ನು ಕಟ್ಟಿಕೊಳ್ಳುತ್ತಾಳೆ. 'ವಿಧವೆಗೆ ಮದುವೆಯೆ? ಅದೂ ಬೇರೆ ಜಾತಿ ಹುಡುಗನೊಡನೆ. ನನ್ನ ಮಗಳಿಗೆ ನಾನೇ ಘಟಶ್ರಾದ್ಧ ಮಾಡುತ್ತೇನೆ'[೨೦] ಎಂದು ಅವಳ ತಂದೆ ನಾರಾಯಣಶಾಸ್ತ್ರಿ ಕೂಗಾಡುತ್ತಾರೆ. ಶಾಂಭವಿ ಅನೇಕ ವಿರೋಧಗಳ ನಡುವೆ, ಕೊಡದೂರನ್ನು (ಗ್ರಾಮ) ನಿರಾಕರಿಸಿ ಅನಿವಾರ್ಯವಾಗಿ ಬದುಕಿನ ಆಸರೆಯಾಗಿ ಪುತ್ತೂರನ್ನು (ಪಟ್ಟಣ) ಆಯ್ಕೆ ಮಾಡಿಕೊಳ್ಳುತ್ತಾಳೆ. ಉಲ್ಲಾಸ ಹೆಗಡೆ ಅವರ 'ನನ್ನ ನೋವಿನ ಮೂಲ' ಕತೆಯ ಮಾದೇವಿಭಟ್ಟಳ ಸಂದರ್ಭವೂ ಇದನ್ನೆ ಹೋಲುತ್ತದೆ. ಅಮೇರಿಕದ ಅರ್ಬಾನಾ ಕ್ಯಾಂಪೇನ್‌ನಲ್ಲಿ ವೈದ್ಯ ಗಂಡ ಮಹಾದೇವಿಗೆ ಚಿತ್ರಹಿಂಸೆ ಕೊಡುತ್ತಾನೆ. ಹೆತ್ತ ತಂದೆ, ತಾಯಿ ಗಂಡನೊಂದಿಗೆ ಹೊಂದಿಕೊಳ್ಳು ಎಂದು ಉಪದೇಶ ಮಾಡುತ್ತಾರೆ. ಅಪರೂಪಕ್ಕೆ ಸಿಕ್ಕ ಬಾಲ್ಯದ ಗೆಳೆಯ ಸಹಾಯ ಮಾಡುವುದಿಲ್ಲ. ನಗರದ ಯಾಂತ್ರಿಕ, ಶಿಲೆಯಂತಹ ಬದುಕು ಅವಳನ್ನು ಕುಡಿತ, ಆತ್ಮಹತ್ಯೆಯತ್ತ ತಳ್ಳುತ್ತದೆ. 'ಮಾದೇವಿ ಧೈರ್ಯಗೆಡದೆ ಏಕಾಂಗಿಯಾಗಿ ವಿಚ್ಛೇದನಕ್ಕೆ ಅರ್ಜಿ ಸಲ್ಲಿಸಿ, ಪಡೆದು ಅಮೇರಿಕವನ್ನು ನಿರಾಕರಿಸಿ ಭಾರತಕ್ಕೆ ಹೊರಟು ಬರುತ್ತಾಳೆ.'[೨೧]

ನಾ. ಡಿಸೋಜ ಅವರ 'ಪ್ರೀತಿಯೊಂದೇ ಸಾಲದೆ?' ಕಾದಂಬರಿಯ ಜೂಲಿ(ಯುವತಿ)ಯ ಗಂಡ ಬಡ್ತೋಲ ಹಾವು ಕಡಿದು ಸತ್ತಾಗ, ಬಡತನ, ಹಸಿವು ತಾಳಲಾರದೆ ಅಡಿಕೆ ಸುಲಿಯುವ ವೃತ್ತಿ ಕೈಗೊಳ್ಳುತ್ತಾಳೆ. ತಮ್ಮ ಸಮಾಜದ ಪುರುಷರ ಆಸೆಗಣ್ಣುಗಳಿಂದ ಪಾರಾಗಲು ಅಡಿಕೆ ಮಂಡಿಯ ಮಂಜುನಾಥ ಎಂಬ ಬೇರೆ ಧರ್ಮದ ಯುವಕನನ್ನು ಧರ್ಮಸ್ಥಳದಲ್ಲಿ ಮದುವೆಯಾಗುವ ನಿರ್ಧಾರದಿಂದ ಗ್ರಾಮ/ನಗರ

ನಿರಾಕರಣೆ ಮಾಡುತ್ತಾಳೆ. ಇವಳಿಗೆ ದಂಡ ಹಾಕಲು ಇಗರ್ಜಿಯಿಂದ ವಿಚಾರಣೆಗೆ ಬಂದ ಗುರ್ಕಾರ ಮಾಮನಿಗೆ ಹೇಳುವ ಅವಳ ಮಾತು ಗಮನಾರ್ಹವಾಗಿದೆ. 'ಮಾಮ, ನಾನು ಸೂಳೇನೆ ಆಗೋ ಹಾಗಿದ್ರೆ ಯಾವತ್ತೋ ಆಗ್ತಿದ್ದೆ. ಅವರು ಬದುಕಿರುವಾಗಲೆ'[೨೨] ಎಂಬ ಅವಳ ಮಾತು ಬದುಕು ಕಟ್ಟುವ ಧ್ಯೇಯವನ್ನು ಹೊಂದಿರುವುದರ ಸಂಕೇತವಾಗಿದೆ. ಇದು ಹೆಣ್ಣೊಬ್ಬಳ ಅಂತರ್ಯದ ಬಯಕೆಯ ಸೆಲೆಯೂ ಹೌದು! ಕೋರಗಲ್ ವಿರೂಪಾಕ್ಷಪ್ಪ ಅವರ 'ಮಣ್ಣಿನ ಗುಣ' ಕತೆಯ ಗಂಗವ್ವ ಗಂಡನ ಮನೆಯಲ್ಲಿ 'ಮದುವೆ ನಿಂತ ಹೆಣ್ಣು, ಗಂಡುಬೀರಿ' ಎಂಬ ಪಟ್ಟ ಹೊತ್ತು ಹೊರದೂಡಲ್ಪಟ್ಟಾಗ ಅವಳ ಬದುಕು ಕುಸಿದು ಹೋಗುತ್ತದೆ. ಗಟ್ಟಿಗಿತ್ತಿ ಗಂಗವ್ವ ಹೆದರದೆ ಗಂಡನ ಮನೆ ಮತ್ತು ಗ್ರಾಮ ನಿರಾಕರಿಸಿ ಕೊಪ್ಪಳ ನಗರಕ್ಕೆ ಬರುತ್ತಾಳೆ. ಅಲ್ಲಿ ಚಿಕ್ಕ ಕೋಣೆಯೊಂದನ್ನು ಬಾಡಿಗೆಗೆ ಪಡೆದು ಹಾಲಿನ ವ್ಯಾಪಾರ ಕೈಗೊಳ್ಳುತ್ತಾಳೆ. 'ನನ್ನ ಖಜಾನಿ, ನನ್ನ ಸಂಸಾರ, ನನ್ನ ಮಣ್ಣಿನ ಗುಣ, ನನ್ನ ತಾಯಿಯ ಮೊಲೆ ಹಾಲು ಇದು'[೨೩] ಎಂದು ತಾನು ಮದುವೆಯಾದ ಹೊಸದರಲ್ಲಿ ಗಂಡನೊಂದಿಗೆ ತೆಗೆಸಿಕೊಂಡ ಫೋಟೋ ತೋರಿಸುವುದು ಅವಳ ಬದುಕು ಕಟ್ಟುವ ಬಯಕೆಯ ಹಿಂದಿರುವ ಭಾವನಾತ್ಮಕ ಒತ್ತಡ ಹಾಗೂ ದ್ವಂದ್ವಗಳನ್ನು ತೋರಿಸುತ್ತದೆ.

ಇಂತಹ ಸಂದರ್ಭಗಳ ಸಾಹಿತ್ಯಿಕ ಚರ್ಚೆಯಲ್ಲಿ ಎರಡು ವರ್ಗದ ಮಹಿಳೆಯರನ್ನು ಕಾಣುತ್ತೇವೆ. ಮೇಲ್ಜಾತಿಯ ಮಹಿಳೆಯಾದ ಶಾಂಭವಿಗೆ ಪ್ರಗತಿಶೀಲ ವ್ಯಕ್ತಿಗಳಾದ ವಿದ್ಯಾಧರ, ಸಾವಿತ್ರಿ (ಅಣ್ಣ ಅತ್ತಿಗೆ)ಯರ ಸಹಾಯ, ಆಸರೆ, ಅನುಕಂಪ ದೊರೆಯುತ್ತದೆ. ಅವಳು ಸಂಪ್ರದಾಯ, ಪ್ರತಿಗಾಮಿ ವಿರೋಧಿಗಳನ್ನು ನೈತಿಕ ನೆಲೆಯಲ್ಲಿ ನಿವಾರಿಸಿಕೊಂಡು, ತನ್ನ ಬದುಕನ್ನು ಜಾತ್ಯತೀತ ನೆಲೆಯಲ್ಲಿ ಕಟ್ಟಿಕೊಳ್ಳುತ್ತಾಳೆ. ಅಂತರ್ಜಾತಿ ವಿವಾಹ ತರಬಹುದಾದ ಸಾಮಾಜಿಕ ಸಂಘರ್ಷದ ಶಮನಕ್ಕೆ ನಗರ ಸಮಾಜ ಸೂಕ್ತ ಎಂಬ ಅರಿವು ಶಾಂಭವಿ, ವಿದ್ಯಾಧರ, ಸಾವಿತ್ರಿಯರಲ್ಲಿ ಮೂಡಿದಂತಿದೆ. ಮಾದೇವಿ ಭಟ್ಟಳಿಗೆ ಮೂರ್ತ ವ್ಯಕ್ತಿಗಳ ಆಸರೆ ಇಲ್ಲದಿದ್ದರೂ, ಉಚ್ಚ ಜಾತಿಗೆ ಸೇರಿದ ಅವಳಿಗೆ ಅಮೂರ್ತ ರೂಪದ ವಿದ್ಯೆಯ ಆಸರೆ ಇದೆ. ಇವರಿಬ್ಬರ ನಿರಾಕರಣೆಯ ಹಿಂದೆ ಪ್ರಗತಿಶೀಲ ಭಾವನೆ, ಸ್ವತಂತ್ರ ಬದುಕು ಗಳಿಸುವ ಸ್ವಾವಲಂಬಿ ಹೆಜ್ಜೆ ಗುರುತುಗಳಿವೆ. ಇನ್ನಿಬ್ಬರು ಕೆಳವರ್ಗದ ಮಹಿಳೆಯರಾದ ಜೂಲಿ, ಗಂಗವ್ವರಿಗೆ ಕುಟುಂಬ, ಸಮಾಜ ಎದುರಿಸಿ ನಿಲ್ಲುವ ಛಾತಿಯನ್ನು ಕೊಟ್ಟವರಾರು? ಗುರ್ಕಾರ ಮಾಮ, ನಿರೂಪಕ ಇವರಿಬ್ಬರೂ ಕಥೆಗಳಲ್ಲಿ ನೆಪಮಾತ್ರವಾಗಿದ್ದು, ಸಾಮಾಜಿಕ ವ್ಯವಸ್ಥೆಯನ್ನು ಎದುರಿಸಿ ನಿಲ್ಲುವ ಧೈರ್ಯವು ಅವರಿಗೆ ಬದುಕಬೇಕೆನ್ನುವ ಛಲ ಕಲಿಸಿಕೊಟ್ಟಿದೆ ಎನ್ನಬಹುದು. ಗುರ್ಕಾರ ಮಾಮ ಹೇಳುವ 'ಈ ಜೀವನ ನಿಮ್ಮದು, ಅದನ್ನು ನೀವೆ ಸಂಭಾಳಿಸಿಕೊಂಡು ಹೋಗಬೇಕಾದವರು' (ಪುಟ ೭೫) ಎಂಬ ಮಾತು ಇಂತಹ ಅನಾಥ ಹೆಣ್ಣುಗಳಲ್ಲಿ ನೈತಿಕ ಸ್ಥೈರ್ಯ ತುಂಬುವ ಮಾತಾಗಿದ್ದು ದಾರಿದೀಪವಾಗುತ್ತದೆ. ಮಹಿಳೆಯರ ಪಾಲಿಗೆ ಜೀವವಿರೋಧಿ ಮೌಲ್ಯಗಳನ್ನು ಪ್ರತಿಪಾದಿಸುವ ಸಾಮಾಜಿಕ ವ್ಯವಸ್ಥೆಯಲ್ಲಿ ಕುಸಿದುಹೋದ ತಮ್ಮ ಬದುಕನ್ನು ಕಟ್ಟಿಕೊಳ್ಳುವಾಗ ಸ್ತ್ರೀಯರು ಮೊದಲು ಕುಟುಂಬ ಮತ್ತು ಸಮಾಜಗಳನ್ನು ಎದುರಿಸಬೇಕಾಗುತ್ತದೆ. ಭಾರತೀಯ ಸಂದರ್ಭದಲ್ಲಿ ಇವು ಪುರುಷರ, ಅವರ ಕಟ್ಟುಪಾಡುಗಳ ಹಿಡಿತದಲ್ಲಿರುವುದರಿಂದ ಮಹಿಳೆ ಎದುರಿಸಬೇಕಾಗಿರುವುದು ಇವುಗಳನ್ನು ನಿರ್ಮಿಸಿದ ಪುರುಷನನ್ನು ಎಂಬುದು ವಿದಿತ. ಮಹಿಳೆ ಪುರುಷಪ್ರಧಾನತೆಯನ್ನು ವಿರೋಧಿಸಿ ಪ್ರತಿಭಟಿಸಲು ಮಹಿಳೆಯ ಆಸರೆ ಕೋರುತ್ತಾಳಾ ಅಥವಾ ಇನ್ನೊಬ್ಬ ಪುರುಷನ ಆಸರೆಯನ್ನು ಕೋರುತ್ತಾಳಾ? ಎಂಬುದು ಸಹ ಚಿಂತನೆಗೆ ಒಡ್ಡುವ ವಿಷಯವಾಗಿದೆ. ಒಟ್ಟಾರೆ ಚರ್ಚೆಯಲ್ಲಿ ಮಹಿಳೆ ಪುರುಷ ಪ್ರಧಾನ ವ್ಯವಸ್ಥೆಯನ್ನು ನಿರಾಕರಿಸದೆ, ಇನ್ನೊಬ್ಬ ಪುರುಷನ ಸಾಂಗತ್ಯ/ಸಲಹೆಯೊಂದಿಗೆ ಬದುಕು ಕಟ್ಟುತ್ತ, ಚಲನಶೀಲ ಆಯಾಮವನ್ನು ಕೊಡುವ ಬದ್ಧತೆಯನ್ನು ಪ್ರದರ್ಶಿಸುವುದು ಕಂಡುಬರುತ್ತದೆ. ಈ ಮಹಿಳೆಯರು ಗ್ರಾಮ/ನಗರ ನಿರಾಕರಣೆ ಮಾಡುವಾಗ ದ್ವಂದ್ವವನ್ನು ಅನುಭವಿಸುವುದು ಕಥನಗಳಲ್ಲಿ ದಾಖಲಾಗಿದೆ. ಶಾಂಭವಿಗೆ ತನ್ನ ಗ್ರಾಮ, ವಿದ್ಯಾಧರ, ಸಾವಿತ್ರಿಯರ ನೆನಪುಗಳು ಕಾಡಿದಾಗ ಪತ್ರ ಮುಖೇನ ಅವಳು ಅದನ್ನು ಅಣ್ಣನಿಗೆ ವ್ಯಕ್ತಪಡಿಸುತ್ತಾಳೆ. ಬೇರೆ ಜಾತಿಯ ಗಂಡ (ನಗರ) ಮತ್ತು ತನ್ನ ಅಪ್ಪ (ಗ್ರಾಮ), ಹೀಗೆ ಇಬ್ಬರ ಕುರಿತಾದ ಒಲವು (ಎರಡು ವಿರೋಧಾತ್ಮಕ ಸೆಳೆತ/ಶಕ್ತಿ) ಇಲ್ಲಿಯ ದ್ವಂದ್ವಕ್ಕೆ ಕಾರಣ. ಇದನ್ನು ಸಂಪ್ರದಾಯ ಮತ್ತು ಪ್ರಗತಿಶೀಲತೆ ಅಥವಾ ಪ್ರತಿಗಾಮಿ ಮತ್ತು ಪ್ರಗತಿಪರತೆಯ ದ್ವಂದ್ವಗಳೆಂದೂ ಗುರುತಿಸಬಹುದು. ಒಂದನ್ನು ಕಳೆದುಕೊಂಡಾಗ ಇನ್ನೊಂದು ಲಭ್ಯವಾಗುವುದೂ ಇಲ್ಲಿನ ಸಾಹಿತ್ಯಕ ಸಂಕೇತವಾಗಿದೆ. ಮಾದೇವಿಭಟ್ಟ ತನ್ನ ಗ್ರಾಮೀಣ ಜೀವನ, ಬಾಲ್ಯ ನೆನೆದು ಉಲ್ಲಾಸನ ತೊಡೆ ಮೇಲೆ ಮುಖವಿಟ್ಟು ಅತ್ತರೆ, ಗಂಗವ್ವ ನಿರಾಕರಣೆಯ ಹಂತದಲ್ಲಿ ಮಕ್ಕಳನ್ನು ನೆನಪಿಸಿಕೊಳ್ಳುವುದು

ಭಾವನಾತ್ಮಕ ದ್ವಂದ್ವವಾಗಿದೆ. ಜೂಲಿ ಮಾತ್ರ ತಾನು 'ದಂದೆ ಪ್ರಾರಂಭಿಸಿದ್ದೇನೆ' (ಗರ್ಭಿಣಿಯಾದ ಹಂತದಲ್ಲಿ) ಎಂಬ ತನ್ನ ಸಮಾಜ ಮತ್ತು ಚರ್ಚ್‌ನ ಆರೋಪದಿಂದ ಮುಕ್ತಳಾದ ಸಂತೋಷದಿಂದ ಮಂಜುನಾಥನೊಂದಿಗೆ ಹೊರಟುಬಿಡುತ್ತಾಳೆ.

**ಆಂತರಿಕ ತುಡಿತಗಳು ಮತ್ತು ನಿರಾಕರಣೆ : ಅನುಭವಗಳ ಅನ್ವೇಷಣೆ**

ಮೂಲ ನೆಲೆಯ ಸಾಂಪ್ರದಾಯಕ ಪರಿಸರ, ಏಕತಾನತೆಯ ಅಸ್ವಸ್ಥ ಬದುಕು, ಕಠೋರ ಸ್ವಭಾವದ ಕುಟುಂಬದ ಹಿರಿಯರು ಮುಂತಾದ ಅಸಹನೀಯ ವಾತಾವರಣಗಳು ಯುವ ಜನಾಂಗ ಮತ್ತು ಮಹಿಳೆಯರನ್ನು ನಿರಾಕರಣೆಗೆ ಪ್ರೇರೇಪಿಸುತ್ತವೆ. ಕಥನ ಸಾಹಿತ್ಯದಲ್ಲಿ ಇಂತಹ ವ್ಯಕ್ತಿಗಳ ಸ್ವಭಾವ ಮೂಲದಲ್ಲಿ ಅಡಗಿರಬಹುದಾದ ಗುಣ ಲಕ್ಷಣ ಮತ್ತು ಸ್ವಭಾವಗಳಾದರೂ ಎಂತಹವು, ಅವು ಏನನ್ನು ಪ್ರತಿನಿಧಿಸುತ್ತವೆ, ಅವರಿಗೆ ಬೇಕಾಗಿರುವುದೇನು, ಯಾವ ವರ್ಗದ, ಯಾವ ವಯಸ್ಸಿನ ಜನರು ಹೆಚ್ಚಾಗಿ ಹೊಸ ಅನುಭವಗಳನ್ನು ಹುಡುಕುತ್ತ ಹೊರಡುತ್ತಾರೆ ಎಂಬುದು ಚರ್ಚಾರ್ಹ ವಿಷಯವಾಗಿದೆ.

ವ್ಯಾಸರಾವ್ ನಿಂಜೂರ ಅವರ 'ಅನುಭವ' ಕತೆಯ ವಿಶ್ವನಾಥ ಸುಶಿಕ್ಷಿತ ಯುವಕ. ಅಪ್ಪನ ಕಠೋರ ವ್ಯಕ್ತಿತ್ವವನ್ನು ಚಿಕ್ಕಂದಿನಿಂದ ತಣ್ಣಗೆ ದ್ವೇಷಿಸುತ್ತ ಅಮ್ಮನ ಅಸಹಾಯಕತೆಗೆ ಮರುಗುತ್ತ ಬೆಳೆದು ದೊಡ್ಡವನಾಗಿ, ಗ್ರಾಮೀಣ ಅನುಭವಗಳ ಹಿನ್ನೆಲೆಯಲ್ಲಿ ತನ್ನ ದೈಹಿಕ ಆಸೆಗಳನ್ನು ಅನುಭವಿಸುವ ಕನಸು ಹೊತ್ತು ಹೊಸಹೊಸ ಅನುಭವ ಹುಡುಕುತ್ತ ನಗರದತ್ತ ಹೊರಡುತ್ತಾನೆ. ಅವನ ಕೌಟುಂಬಿಕ ಸಮಸ್ಯೆಗಳು, ತಂದೆ, ಮಗನಲ್ಲಿರುವ ಸ್ವಭಾವ ಭಿನ್ನತೆ, ಪರಿಸರಗಳ ಪ್ರಭಾವ ಇದಕ್ಕೆ ಕಾರಣಗಳಾಗಿವೆ. ಏಕಮಾತ್ರ ಪುತ್ರನಾಗಿ ಹುಟ್ಟಿ ಬೆಳೆದ ವಿಶ್ವ, ತಂದೆಗಿಂತ ಬೇರೆಯದಾದ ವ್ಯಕ್ತಿತ್ವವನ್ನು ಕಟ್ಟಿಕೊಳ್ಳುತ್ತಾನೆ.

> 'ನಾನೇಕೆ ನನ್ನ ಅಸ್ತಿತ್ವವನ್ನು ಅಲ್ಲಗಳೆಯುತ್ತಿದ್ದೇನೆ. ಇದ್ದು ಬಿಡುವುದು. ಸುಮ್ಮನೆ ಇದ್ದು ಬಿಡುವುದು. ಅಷ್ಟೆ ಈ ಇರುವಿಕೆ ನನಗೆ ಇದೆಯೆ? ಆ ಇರುವಿಕೆ ಎಂತಹುದು? ಎರೆ ಹುಳದ ಹಾಗೆ. ನೊಣದ ಹಾಗೆ. ಇಲಿಯ ಹಾಗೆ, ಹದ್ದಿನ ಹಾಗೆ, ಹುಲಿಯ ಹಾಗೆ?.....?'[37]

ವಿಶ್ವನ ಈ ಅನಿಸಿಕೆಗಳು ಶ್ರೀರಂಗ ಅವರ 'ವಿಶ್ವಾಮಿತ್ರನ ಸೃಷ್ಟಿ' ಕಾದಂಬರಿಯ ನಾರಾಯಣನ ಅನಿಸಿಕೆಗಳೂ ಆಗಿವೆ. ಅಪ್ಪ/ಅಮ್ಮನ ಬಿಗಿ ಹಿಡಿತದಲ್ಲಿ ಬೆಳೆದು ವ್ಯಕ್ತಿಸ್ವಾತಂತ್ರ್ಯ ಕಳೆದುಕೊಂಡು ಹೊಸ ಅನುಭವ, ಹೊಸ ಗಾಳಿಗೆ ಹಂಬಲಿಸುವ ಎಲ್ಲ ಯುವಕರ ಅನಿಸಿಕೆ, ಹಂಬಲ, ದ್ವಂದ್ವಗಳೂ ಆಗುತ್ತವೆ. ವಿಶ್ವ ಓದುತ್ತಾನೆ. ಓದಿಗಾಗಿ ಓದು, ಕ್ಲಾಸು ಬರುತ್ತದೆ. ಮೈಸೂರಿನಲ್ಲಿ ಅಧ್ಯಾಪಕ ವೃತ್ತಿ ಮಾಡುವಾಗಲೂ ಅನುಭವಶೂನ್ಯ ಬದುಕು ಅವನದಾಗುತ್ತದೆ. ಅದೇ ಪಾಠ, ಅದೇ ಕಾಲೇಜು, ಪ್ರತಿವರ್ಷ ಬದಲಾಗುವ ವಿದ್ಯಾರ್ಥಿ ಮುಖಗಳು ಹೊಸ ಅನುಭವ ಅನ್ವೇಷಣೆಯ ಹಂಬಲವನ್ನು ಹೆಚ್ಚಿಸುತ್ತವೆ. ಈ ಮಾಸ್ತರಿಕೆಯನ್ನು ತೊರೆದು ಅನುಭವಗಳನ್ನು ಅರಸುತ್ತ ಮುಂಬಯಿಗೆ ಬಂದು ಕಾರಕೂನನಾಗಿ ಸೇರುತ್ತಾನೆ. ಸುನಂದ ಬೆಳಗಾಂವಕರ ಅವರ 'ಕಾಯಕ ಕೈಲಾಸ' ಕಾದಂಬರಿಯ ಶಿವಲಿಂಗಯ್ಯ, ಹೊಟ್ಟೆ ಬಟ್ಟೆಗೆ ಕೊರತೆಯಿಲ್ಲದಿದ್ದರೂ, ಹೊಸ ರುಚಿ, ಹೊಸ ಅನುಭವಗಳನ್ನು ಬಯಸುವ ಇನ್ನೊಬ್ಬ ತರುಣನಾಗಿದ್ದಾನೆ.

> 'ನಾ ಎಡಿಯೂರಪ್ಪನ್ನ ನಂಬಿದೆ. ದುಪ್ಪಟ್ಟು ಮಾಡಿಕೊಡತೀನಿ ಅಂದ. ನಿನ್ನ ಬಂಗಾರೆಲ್ಲಾ ಅವಗ ಕೊಟ್ಟೆ ಒತ್ತೀ ಇಟ್ಟೇನಿ ಅಂತ ಹೇಳಂದ. ಹೇಳಿದೆ. ದುಡ್ಡಿನ ಆಶಾ ಎಂಥಾದ್ದು? ಬೆಲ್ಲಾ ಮಾರಿ ಗೋಣಿ ಚೀಲ ನೆಕ್ಕಿದ್ರಂತ. ಉಚ್ಚಿದ ದಾರದುಂಡೆ ಹಾಂಗ ಬಿಚ್ಚಿಗೋತ ಅವನ ಹಿಂಬಾಲೆ ಓಡಿದೆ. ತಾರುಣ್ಯದಾಗ ಮಜಾ ಅನುಸ್ತು, ಸಂಸಾರ ಹಾಳಾತು.'[38]

ಇಲ್ಲಿ ಅವನು ಉಪಯೋಗಿಸಿದ 'ಮಜಾ ಅನ್ನಿಸ್ತು' ಎಂಬ ಪದವು ಅವನ ಹೊಸ ಅನುಭವಗಳ ಅನ್ವೇಷಣೆಯ ಇಚ್ಛೆಯನ್ನೂ ವ್ಯಕ್ತಪಡಿಸಿದೆ. ಈ ಮಜವನ್ನು ಅನುಭವಿಸುತ್ತ ಊರೂರು ತಿರುಗುತ್ತ ಯಡಿಯೂರಪ್ಪನ ಹಿಂದೆ ಹೊರಟು ಹೋಗುತ್ತಾನೆ. ಇಲ್ಲಿನ ಎರಡೂ ಸಂದರ್ಭಗಳಲ್ಲಿ, ವಿಶ್ವ ಮತ್ತು ಶಿವಲಿಂಗಯ್ಯ ಇಬ್ಬರೂ ಉಚ್ಚ ಜಾತಿಗೆ ಸೇರಿದವರು ಮತ್ತು ತರುಣರಾಗಿದ್ದಾರೆ. ಇವರು ಅನುಭವಿಸಬೇಕು ಎಂದು ಆಶಿಸಿದ, ಮೋಜಿನ ಬದುಕಾದರೂ ಎಂತಹದು ಎಂದು ಅರಿಯಲು, ಅವರು ಯೌವನದಲ್ಲಿ ಸಿದ್ಧಪಡಿಸಿಕೊಂಡ ಭೂಮಿಕೆಯತ್ತ ಗಮನ ಹರಿಸಬಹುದು. ಗ್ರಾಮೀಣ ಅನುಭವಗಳ ಸಂಕೀರ್ಣ ವ್ಯಕ್ತಿತ್ವ

ಹೊಂದಿದ ವಿಶ್ವನ ಅನುಭವಿಸುವ ಬಯಕೆಯ ಮೊದಲ ಹಂತ ತೆರೆದುಕೊಳ್ಳುವುದು ಗ್ರಾಮ ಪರಿಸರದಲ್ಲಿ ಎಂಬುದು ಕುತೂಹಲಕರವಾದ ಅಂಶವಾಗಿದೆ. ಬಾಲ್ಯ ಕುತೂಹಲದಿಂದ ಬೆಳೆಸಿಕೊಂಡ ಹವ್ಯಾಸ, ಅಭ್ಯಾಸ(ಇವಕ್ಕೆ ಚಟಗಳು ಎಂದೂ ಕರೆಯಬಹುದು)ಗಳು ಹೊಸ ಅನುಭವದ ಅನ್ವೇಷಣೆಯತ್ತ ತಿರುಗುತ್ತವೆ. ಬೆಳೆಯುತ್ತಿದ್ದಂತೆ, ಅಶ್ವತ್ಥ ಮರಕ್ಕೆ ವ್ಯರ್ಥ ಸುತ್ತು ಹಾಕುವ ವಿಶಾಲಿಯ ದೇಹವನ್ನು ಕಿಡಕಿಯಲ್ಲಿ ಕದ್ದು ನೋಡುತ್ತ, ಇದೂ ಒಂದು ಹೊಸ ಅನುಭವ ಎಂದುಕೊಳ್ಳುತ್ತಾನೆ. ಹೊಸಹೊಸ ನೋಟಗಳು, ಅನುಭವಗಳು ಅವನನ್ನು ಅನ್ವೇಷಣೆಯ ಮನೋಸ್ಥಿತಿಗೆ ತಳ್ಳುತ್ತವೆ. ಹೊಸ ಅನುಭವಗಳಿಗೆ ಚಿಮ್ಮಿ ಚಿಮ್ಮಿ ನೆಗೆದು ಉಸಿರು ಬಿಡಲು ಯತ್ನಿಸುತ್ತಿರುವ ವಿಶ್ವ, ತನ್ನ ಮೂಕ ಸಂವೇದನೆಗಳಿಗೆ ಜೀವ ತುಂಬಬೇಕೆಂದು ಮುಂಬಯಿ(ನಗರ)ಗೆ ಪಲಾಯನ ಮಾಡುತ್ತಾನೆ. ಅದೇ ರೀತಿ ಶಿವಲಿಂಗಯ್ಯ ದಾರಿ ತಪ್ಪಿದ ರೀತಿ, ಪಟ್ಟ ಪಶ್ಚಾತ್ತಾಪ, ಹೆಂಡತಿ, ಮಗನನ್ನು ನೆನೆದು ಅನುಭವಿಸಿದ ದ್ವಂದ್ವ, ಹಳ್ಳಿಗೆ ಹಿಂತಿರುಗುವ ಕಾತುರಗಳನ್ನು ಗಮನಿಸಿದರೆ ಅನುಭವ ಅರಸುತ್ತ ಹೊರಡುವ ಯುವ ಜನಾಂಗಕ್ಕೆ ಆರ್ಥಿಕ, ಸಾಮಾಜಿಕ ಭದ್ರತೆ ಇಲ್ಲದಿದ್ದರೆ ಸಮಾಜದಲ್ಲಿ ಅವರ ಶಕ್ತಿ, ಬದುಕು ಶೂನ್ಯವೆಂದು ಹೇಳಬಹುದು. ಸಾಂಸಾರಿಕ ಬದುಕನ್ನು ತೊರೆದು ಸನ್ಯಾಸಿ ವೇಷದಲ್ಲಿ ಬದುಕನ್ನು ಅನುಭವಿಸುವ ಆತುರದ ನಿರ್ಧಾರಕ್ಕೆ ಯೌವನ ಕಾರಣವೆಂದರೂ, ಹಲವು ಕುಟುಂಬಗಳಲ್ಲಿ ಕಂಡು ಬರುವ ಡಾಂಬಿಕ ಭಕ್ತಿಯ ಕುರಿತ ಜಿಗುಪ್ಸೆ ಇದರ ಹಿಂದಿದೆಯೇ ಎಂಬ ಪ್ರಶ್ನೆ ಅಧ್ಯಯನವನ್ನು ಕಾಡುತ್ತದೆ.

ವ್ಯಾಸರಾಯ ಬಲ್ಲಾಳ ಅವರ 'ಹೆಜ್ಜೆ' ಕಾದಂಬರಿಯ ವೇಣು ಮತ್ತು ರುಕ್ಕು ಹೊಸ ಅನುಭವಗಳನ್ನು ಹುಡುಕುತ್ತ ಗ್ರಾಮ ನಿರಾಕರಿಸಿದ ಕೆಳವರ್ಗದ ಪಾತ್ರಗಳಾಗಿದ್ದಾರೆ. ಕಲಾವಂತರ ಮನೆಯ ನಾಗಿಯ ತಮ್ಮ ವೇಣು ಮೊಂಡು ಸ್ವಭಾವದ ಹಠಮಾರಿ ಹುಡುಗ. ಮನೆಯಲ್ಲಿ ಅಕ್ಕ ನಾಗಿ, ತಾಯಿ ಬಾಗಿಯರ ಕಸುಬು ಹಿಡಿಸದೆ ಗಾಂಧಿವಾದಕ್ಕೆ ಮನಸೋತು ಧಾರವಾಡಕ್ಕೆ ಓಡಿಹೋಗುತ್ತಾನೆ. ಹಾಗೂ ಹೀಗೂ ಕಷ್ಟಪಟ್ಟು ಗಾಂಧಿವಾದಿ ಶಂಕರನ ಸಹಾಯದಿಂದ ಮೆಟ್ರಿಕ್ ಮುಗಿಸಿ ಶಿರಸಿ-ಸಿದ್ಧಾಪುರದಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕುತ್ತಾನೆ. ಶ್ರೀಕಂಠಶಾಸ್ತ್ರಿಗಳ ಮನೆಯಾಳು ರುಕ್ಕು ಸಹ ಮುಂಬಯಿಯ ರಾಧು ಎಂಬವಳ ಸಹವಾಸ ಮಾಡಿ, ತಾನೂ ಮುಂಬಯಿ ಸೇರಿ ಕೆಲಸ ಗಿಟ್ಟಿಸಿಕೊಂಡು (ನಟಿ ಮಾಡುವ ಆಮಿಷವನ್ನು ರಾಧು ತೋರಿಸಿದ್ದನ್ನು ಕಾದಂಬರಿ ದಾಖಲಿಸಿದೆ) ಹೊಸ ಬದುಕು ಪಡೆಯುವ ಆಸೆಯಿಂದ ಕೊಡದೂರನ್ನು ನಿರಾಕರಿಸುತ್ತಾಳೆ. ಇಲ್ಲಿ ಎರಡೂ ಪಾತ್ರಗಳ ನಿರಾಕರಣೆಯಲ್ಲಿ ಆರ್ಥಿಕ, ಸಾಮಾಜಿಕ ಅಭದ್ರತೆಯ ಕಾರಣಗಳು ಎದ್ದು ಕಾಣುತ್ತವೆ. ಜೊತೆಗೆ ವೇಣು ತಮ್ಮ ಮನೆಗೆ ಐತಾಳರು ಬರುವುದನ್ನು ಅರಿತು ಬಾಲ್ಯ ಸಹಜ ಅಸಹಾಯಕತೆಯಿಂದ ಅವರನ್ನು ಎದುರಿಸಿ ನಿಲ್ಲಲಾರದೆ ಹೊಸ ಪರಿಸರದತ್ತ ಆಕರ್ಷಿತನಾಗಿ ಮನೆ/ಗ್ರಾಮ ನಿರಾಕರಿಸುತ್ತಾನೆಂದು ಹೇಳಬಹುದು. ಆದರೆ ರುಕ್ಕು ಹಾಗೂ ಅವಳ ಗಂಡ ಅಣ್ಣುವಿಗೆ ಶಾಸ್ತ್ರಿಗಳ ಮನೆಯಲ್ಲಿ ಕೆಲಸವಿದ್ದರೂ, ಅವಳು ಗ್ರಾಮ ನಿರಾಕರಿಸಲು ಕಾರಣ ಹೆಚ್ಚಿನ ಸಂಪಾದನೆಯ ಕೆಲಸ ಪಡೆಯುವ ಮತ್ತು ನಗರಸೆಳೆತವೆಂದೂ ಹೇಳಬಹುದು. ಕೇವಲ ಥ್ರಿಲ್‌ಗಾಗಿ ಉಪನ್ಯಾಸಕ ಹುದ್ದೆ ಬಿಟ್ಟು ಮುಂಬಯಿಗೆ ಬರುವ ವಿಶ್ವ, ಹೊಸ ರುಚಿಯ ಊಟ, ಗಾಂಜಾ ರುಚಿಗೆ ಮನಸೋತು ಕಾವಿಯ ಹಿಂದೆ ಬೀಳುವ ಶಿವಲಿಂಗಯ್ಯ ಇವರ ವ್ಯಕ್ತಿತ್ವ ಒಂದು ವರ್ಗವನ್ನು ಪ್ರತಿನಿಧಿಸಿದರೆ, 'ನೀನು ಸುಮ್ಮನಿರಕ್ಕಾ, ಸ್ವಾಭಿಮಾನ, ಸ್ವಂತ ಪರಿಶ್ರಮ ಇರದ ಕಾರಣವೆ ನಮ್ಮ ದೇಶ ಈ ಸ್ಥಿತಿಗೆ ಬಂದಿದ್ದು, ಈ ಬ್ರಾಹ್ಮಣನಿಗೆ ಇಷ್ಟು ವಯಸ್ಸಾದರೂ....'[೨೫] ಎಂಬ ಸ್ವಾಭಿಮಾನ ತುಂಬಿ ಮಾತಾಡುವ ವೇಣು, ರುಕ್ಕು ಇವರು ಶ್ರಮಿಕ ವರ್ಗವನ್ನು ಪ್ರತಿನಿಧಿಸುತ್ತಾರೆ. ವ್ಯಕ್ತಿಗಳ ಅನುಭವದ ಅನ್ವೇಷಣೆ ಅಪರೋಕ್ಷವಾಗಿ ಮುಕ್ತ ಸ್ವಾತಂತ್ರ್ಯವನ್ನು ಬಯಸುವ ಮಾನಸಿಕ ದ್ವಂದ್ವಾತ್ಮಕತೆಯಾಗಿದೆ. ಹಳೆ ಪರಿಸರದ ಒಂದು ಜೀವನ ಪದ್ಧತಿಯಿಂದ ಬಂಧಮುಕ್ತರಾಗಿ ಸ್ವಚ್ಛಂದ ಬದುಕು ಅನುಭವಿಸುವ ಕಾತರದಲ್ಲಿ ಹೊಸ ಜೀವನ ಪದ್ಧತಿ ಮತ್ತು ಹೊಸಗಾಳಿಗೆ ತೆರೆದುಕೊಳ್ಳುವ ಬಯಕೆಗಳು ಇವರಲ್ಲಿ ತಾಕಲಾಟ ನಡೆಸಿರುವುದು ಸ್ಪಷ್ಟವಿದೆ. ಹಳೆ ಬದುಕಿನ ಏಕತಾನತೆಯ ಅಂತ್ಯದ ಅಂಚಿನಲ್ಲಿ ಹೊಸಗಾಳಿಗೆ ತೆರೆದುಕೊಳ್ಳುವ ಆಸೆ ಕುಡಿಯೊಡೆಯುವುದನ್ನು ಕಥನಗಳು ದಾಖಲಿಸಿವೆ.

ಪ್ರಸ್ತುತ ಕಥನ ಸಾಹಿತ್ಯ ವ್ಯಕ್ತಿಗಳ ಗ್ರಾಮ/ನಗರ ನಿರಾಕರಣೆಗೆ ಕಾರಣವಾಗುವ ಆಂತರಿಕ ತುಡಿತಗಳನ್ನು ಹೀಗೆ ಗ್ರಹಿಸುತ್ತದೆ. * ವೈವಾಹಿಕ ಬದುಕು ದುರಂತಕ್ಕೆ ಈಡಾದಾಗ ಅಂತಹ ಮಹಿಳೆಯರಲ್ಲಿ ಕಂಡುಬರುವ ನೋವು ನುಂಗಿ ಹೊಸ ಬದುಕು ಕಟ್ಟುವ ಛಲ (ಶಾಂಭವಿ, ಮಾದೇವಿಭಟ್ಟ, ಜೂಲಿ ಮುಂತಾದವರು)

ಅವರು ತಮ್ಮ ಮೂಲ ನೆಲೆಯನ್ನು ನಿರಾಕರಿಸುವಂತೆ ಮಾಡುತ್ತದೆ. * ಮಹಿಳೆಯರು ಗಂಡನ ಮನೆಯಲ್ಲಿ (ವ್ಯಕ್ತಿ ಮತ್ತು ವ್ಯಕ್ತಿ, ವ್ಯಕ್ತಿ ಮತ್ತು ಕುಟುಂಬ ಸಂಘರ್ಷ), ಸಮಾಜದ (ವ್ಯಕ್ತಿ ಮತ್ತು ಸಮುದಾಯ ಸಂಘರ್ಷ) ದೌರ್ಜನ್ಯಕ್ಕೊಳಗಾಗಿ, ಅಂತಹ ಪರಿಸರದಿಂದ ಹೊರಬಂದು, ವೈಯಕ್ತಿಕ ಬದುಕು ಕಟ್ಟಿ ಬಾಳುವ ಛಲವನ್ನು ಹೊತ್ತು ನಿಲ್ಲುವುದು ಕಂಡುಬರುತ್ತದೆ. * ಮೇಲ್ವರ್ಗ/ಮೇಲ್ಜಾತಿ ಕುಟುಂಬದ ಯುವಜನರ (ಕಾಯಕ ಕೈಲಾಸ ಕಾದಂಬರಿಯ ಶಿವಲಿಂಗಯ್ಯ) ಹೊಸ ರುಚಿಯ ಬಯಕೆ, ಹಣ ಮಾಡುವ ದುರಾಸೆಗಳು ಹೊಸ ಅನುಭವಗಳನ್ನು ಹುಡುಕಲು ಪ್ರೇರೇಪಿಸುತ್ತವೆ. ಹಳೆಯ ಅನುಭವಗಳನ್ನು ಮೆಟ್ಟಿನಿಂತು ಹೊಸ ಅನುಭವವಕ್ಕೆ ಸ್ಪಂದಿಸುವ ವ್ಯಕ್ತಿಗಳ ಬಯಕೆ (ಅನುಭವ ಕತೆಯ ವಿಶ್ವನಾಥ), ಸ್ವಂತ ಸಂಸಾರ ಕಟ್ಟಿ ಬದುಕುವ ಕನಸು (ಮಣ್ಣಿನ ಗುಣ ಕತೆಯ ಗಂಗವ್ವ) ಅವರನ್ನು ಗ್ರಾಮ/ನಗರ ನಿರಾಕರಿಸುವಂತೆ ಮಾಡುತ್ತದೆ.

## ೨. ಕೌಟುಂಬಿಕ ನೆಲೆಗಳು ಮತ್ತು ನಿರಾಕರಣೆ

### ಅ. ಶಿಕ್ಷಣಾಕಾಂಕ್ಷೆ

ಸ್ವಾತಂತ್ರ್ಯಾನಂತರ ಬಂದ ಸರಕಾರಗಳು ಶಿಕ್ಷಣ ಸೌಲಭ್ಯಗಳನ್ನು ಗ್ರಾಮಗಳಿಗೆ ವಿಸ್ತರಿಸಿದರೂ, ಇವು ಇನ್ನೂ ಅನೇಕ ಗ್ರಾಮಗಳನ್ನು ತಲುಪಿಲ್ಲ. ಶಿಕ್ಷಣಕ್ಕಾಗಿ ಶಿಕ್ಷಣ ಎಂಬ ಮಾತಿನಂತೆ, ಕೇವಲ ಅಕ್ಷರ ಕಲಿಯಲು ಸೀಮಿತವಾದ ವ್ಯವಸ್ಥೆ ಸರ್ವತೋಮುಖ ಶಿಕ್ಷಣ ನೀಡುವತ್ತ ಗಮನ ಹರಿಸಬೇಕಾಗಿದೆ. ಒಂದು ಹಂತದ ಶಿಕ್ಷಣ(ಮೆಟ್ರಿಕ್ಯುಲೇಷನ್)ದ ನಂತರ ಗ್ರಾಮೀಣ ಜನತೆ ನಗರದತ್ತ ಮುಖ ಮಾಡಬೇಕಾದ ಅನಿವಾರ್ಯತೆ ಇದ್ದು, ಆರ್ಥಿಕ/ಸಾಮಾಜಿಕವಾಗಿ ಹಿಂದುಳಿದ, ದಲಿತರ ಮಕ್ಕಳಿಗೆ ಇಂದಿಗೂ ಉನ್ನತ ಶಿಕ್ಷಣ ಮರೀಚಿಕೆಯಾಗಿದೆ. ಮಕ್ಕಳ ಉನ್ನತ ಶಿಕ್ಷಣಕ್ಕಾಗಿ ಗ್ರಾಮ ನಿರಾಕರಿಸುವ ಕುಟುಂಬಗಳು ಯಾವ ವರ್ಗಕ್ಕೆ ಸೇರುತ್ತವೆ, ಇಂತಹ ಕುಟುಂಬಗಳ ಆರ್ಥಿಕ, ಸಾಮಾಜಿಕ ಸ್ಥಿತಿ ಹೇಗಿರುತ್ತದೆ, ಶಿಕ್ಷಣ ಪ್ರಾಮುಖ್ಯತೆ ಪಡೆಯುವುದು, ಅನಿವಾರ್ಯತೆಯಾಗುವುದು ಯಾವ ಯಾವ ವರ್ಗಗಳಲ್ಲಿ ಎಂಬುದನ್ನು ಕಥನ ಸಾಹಿತ್ಯದಿಂದ ಅರಿಯಬಹುದಾಗಿದೆ.

### ಶಿಕ್ಷಣ : ಸವರ್ಣೀಯ ಕುಟುಂಬಗಳ ನೆಲೆಯಿಂದ

ರಾಘವೇಂದ್ರ ಪಾಟೀಲ ಅವರ 'ಮಾಯಿಯ ಮುಖಗಳು' ಕಥೆಯ ಕೃಷ್ಣೋಪಂತರ ಕುಟುಂಬ ತಮ್ಮ ಮೂವರು ಹೆಣ್ಣು ಮಕ್ಕಳ ಸಂಗೀತ ಶಿಕ್ಷಣಕ್ಕಾಗಿ ಕಳ್ಳಗುದ್ದಿ ಗ್ರಾಮ ನಿರಾಕರಿಸುತ್ತದೆ. ಕನ್ನಡ ಶಾಲೆಯನ್ನು ಸೇರಿದ ಮೂರೂ ಹುಡುಗಿಯರ ಸುಮಧುರ ಧ್ವನಿ ಕೇಳಿದ ಮಾಸ್ತರರು ಮನೆಗೆ ಬಂದು, ಸಂಗೀತ ಶಿಕ್ಷಣ ಕೊಡಿಸಲು ಮಾಡಿದ ಶಿಫಾರಸ್ಸು ಇದಕ್ಕೆ ಪ್ರೇರಣೆಯಾಗಿದೆ. ಸುನಂದಾ ಬೆಳಗಾಂವಕರ ಅವರ 'ಕಾಯಕ ಕೈಲಾಸ' ಕಾದಂಬರಿಯಲ್ಲಿ ಮಾನಪ್ಪಗೌಡರ ಕುಟುಂಬ ಮಕ್ಕಳ ಶಿಕ್ಷಣಕ್ಕಾಗಿ ಗ್ರಾಮ ನಿರಾಕರಿಸುವುದನ್ನು ಕಾಣುತ್ತೇವೆ. ಕ್ಲಾಸಿಗೆ ಮೊದಲಿಗನಾಗಿ ಪಾಸು ಮಾಡುತ್ತಿದ್ದ ಮಗ ವೃಷಭ, ಗೌಡರ ಮಗಳು ಶಾಲ್ಮಲೆಯ ಮಕ್ಕಳಾದ ಸಿದ್ದು, ಶಾಂಭವಿಯರ ಕಾಲೇಜು ವಿದ್ಯಾಭ್ಯಾಸಕ್ಕೆ ಹತ್ತಿರದ ಶಿಕ್ಷಣ ಕೇಂದ್ರವಾದ ಧಾರವಾಡ ನಗರವನ್ನು ಈ ಕುಟುಂಬವು ಆಯ್ಕೆ ಮಾಡಿಕೊಳ್ಳುತ್ತದೆ. ಆರ್ಥಿಕಬಲ ಹೊಂದಿದ ಇಂತಹ ಕುಟುಂಬಗಳು ಗ್ರಾಮ ನಿರಾಕರಣೆ ಮಾಡುವಾಗ ಅವರನ್ನು ಕಾಡುವ ಸಮಸ್ಯೆಯೆಂದರೆ ಗ್ರಾಮದ ಅವರ ಆಸ್ತಿಯ ಉಸ್ತುವಾರಿಯನ್ನು ಯಾರಿಗೆ ವಹಿಸಬೇಕು ಎಂಬುದಾಗಿದೆ. 'ತ್ವಾಟಾ ಹೊಲಾ ವಾರಕ್ಕೊಮ್ಮೆ ಬಂದು ದೇಖರೇಕಿ ಮಾಡಿಕೊಂಡ ಹ್ವಾದರ ಆಗತದ. ಸುಗ್ಗೀ. ಫಾಣಾ ಅಂತನ್ನೂವಾಗ ನಾಕದಿನಾ ಇಲ್ಲೇ ಇದ್ದರಾತು. ಕೂಪ ಮಂಡೂಕದಂಗ ಇಲ್ಲೇ ಯಾಕ ಕೂಡೂದು.'[೨೭] ಕೃಷ್ಣೋಪಂತರು ತಮ್ಮ ಗೇಣಿ ಒಕ್ಕಲುಗಳ ಕುರಿತು ಹೇಳುವ ಮಾತುಗಳು ಉಚ್ಚ ಜಾತಿ/ವರ್ಗದ ಕುಟುಂಬಗಳು ಕೃಷಿಗಿಂತ ಶಿಕ್ಷಣಕ್ಕೆ ಕೊಡುವ ಆದ್ಯತೆಯನ್ನು ಸೂಚಿಸುತ್ತವೆ. ಇಡೀ ಕುಟುಂಬ ಗ್ರಾಮ/ನಗರ ನಿರಾಕರಿಸಲು ಇವರಿಗೆ ಆರ್ಥಿಕ ತೊಂದರೆ ಇರುವುದಿಲ್ಲ. ಇದೇ ರೀತಿ 'ಕಾಯಕ ಕೈಲಾಸ' ಕಾದಂಬರಿಯ ಗಂಗವ್ವನಿಗೆ ರಾಮಪ್ಪ ಮಾಸ್ತರು ಹೇಳುವ ಈ ಮಾತನ್ನು ಗಮನಿಸೋಣ.

> 'ಗಂಗವ್ವ ನೀನು, ಸೋಮು ಸಂಕೋಚ ಮಾಡಿಕೋಬ್ಯಾಡ್ರಿ, ಗೌಡ್ರು ಓದುಸ್ತಾನ ಅವ ಓದಲಿ, ಸ್ಕಾಲರಶಿಪ್ ಹಣ ಬರ್ತದ. ಮತ್ತ ಏನ ಇದ್ರು ನಿನ್ನ ಮೊಮ್ಮಕ್ಕಳನ್ನಂತೂ ಓದುಸಾಕ ಬೇಕ. ಹ್ಯಾಂಗೂ ಮನಿ ಮಾಡ್ತಾರ. ಹೊಟ್ಯಾಗ ಹೊಟ್ಟೆ ನಡೀತೈತಿ. ಗೌಡರಿಗೇನು ಕಡಿಮೆ ಆಗ್ಯತಿ, ನಾಲ್ಕ ಪೀಳಿಗಿ ಕುಂತ ತಿಂದ್ರೂ ಸವಿದಷ್ಟು ಆಸ್ತಿ ಐತಿ.'[೨೮]

ಗ್ರಾಮ ನಿರಾಕರಣೆಯ ಹಂತದಲ್ಲಿ, ಕನ್ನಡ ಶಾಲೆ ಮಾಸ್ತರರ ಸಂಗೀತ ಕಲಿಸೋ ಸಲಹೆ, ಅದಕ್ಕೆ ಹೆಂಡತಿಯ ಒತ್ತಾಯ, ತಮ್ಮ ಗ್ರಾಮದಲ್ಲಿ ಸಂಗೀತ ಕಲಿಸೋ ಗವಾಯಿಗಳು ಇಲ್ಲದಿರೋದು ಇತ್ಯಾದಿ ವಿಚಾರಗಳು ಕಲ್ಲೋಪಂತರ ಮನಸ್ಸನ್ನು ಗೊಂದಲದಲ್ಲಿ ಹಾಕುತ್ತವೆ. ಗ್ರಾಮ ಬಿಡಬೇಕು ಅಂದರೆ ಎಲ್ಲಿಗೆ ಹೋಗಬೇಕು ಎಂಬ ವಿಚಾರಗಳ ತಾಕಲಾಟ ವೃದ್ಧಜೀವಗಳಾದ ಕಲ್ಲೋಪಂತರಿಗೂ ಮಾನಪ್ಪಗೌಡರಿಗೂ ಆರಂಭವಾಗುತ್ತದೆ. ಇವರಿಗೆ ಗ್ರಾಮದಲ್ಲಿ ಜಮೀನು, ಆಸ್ತಿ ಇದ್ದು ಅದನ್ನು ನಿರ್ವಹಿಸುವ ಜವಾಬ್ದಾರಿ ಇವರಿಬ್ಬರ ಚಿಂತೆಯನ್ನು ಹೆಚ್ಚಿಸಿದೆ. ಒಂದೆಡೆ ಮಕ್ಕಳ ಶಿಕ್ಷಣ ಇನ್ನೊಂದೆಡೆ ಆಸ್ತಿ, ಸರಂಜಾಮು ಸಂರಕ್ಷಣೆ, ಇವೆರಡೂ ಬಲಗಳು ಅವರ ನಿರ್ಧಾರವನ್ನು ಜಟಿಲಗೊಳಿಸಿವೆ. 'ಕಲ್ಲೋಪಂತರಿಗೆ ತಲೆ ಕೆಟ್ಟಂಗಾತು' (ಪುಟ ೪) ಎಂಬ ಮಾತು ನಿರಾಕರಣೆಯ ಹಂತದಲ್ಲಿ ವೃದ್ಧಜೀವಿಗಳ ಮಾನಸಿಕ ತೊಳಲಾಟ ಅಥವಾ ದ್ವಂದ್ವಾತ್ಮಕತೆಯನ್ನು ಸೂಚಿಸುತ್ತದೆ.

**ಶಿಕ್ಷಣ : ದಲಿತ, ಕೆಳವರ್ಗದ ಕುಟುಂಬಗಳ ನೆಲೆಯಿಂದ**

ಶಾಂತಾದೇವಿ ಕಣವಿ ಅವರ 'ಹೊಸ ಅಲೆ' ಕತೆಯ ದಲಿತರ ಹುಡುಗ ಮರಿಯ ಸವರ್ಣೀಯರ ವಿರೋಧದ ಮಧ್ಯೆಯೂ ಮುಲ್ಕಿ ಪರೀಕ್ಷೆಯನ್ನು ಪಾಸು ಮಾಡುತ್ತಾನೆ. ಮುಂದೆ ಓದುವ ಅವನ ಆಸೆಗೆ ಅದೇ ಸವರ್ಣೀಯರಿಂದ ವಿರೋಧ ಬಂದರೂ, ಲೆಕ್ಕಿಸದೆ ಜೀತಕ್ಕಿದ್ದ ತಾಯಿ, ತಂದೆಯರೊಂದಿಗೆ ಗ್ರಾಮ ನಿರಾಕರಣೆ ಮಾಡುತ್ತಾನೆ. ಇದಕ್ಕೆ ಗಾಂಧಿವಾದಿ ಬೂದಿಹಾಳ ಮಾಸ್ತರರ ಮಾರ್ಗದರ್ಶನ, ಗೌಡನ ಹೆಂಡತಿ ಕೆಂಚವ್ವರ ಆರ್ಥಿಕ ಸಹಾಯ ಪ್ರೇರಣೆ ನೀಡುತ್ತವೆ. 'ಇಕಾ ದ್ಯಾಮಾ, ಈ ರೊಕ್ಕಾ ತೊಗೋ, ಮಗನ್ನ ಸಾಲಿಗೆ ಹಾಕು. ಮತ್ತ ಈ ವರ್ಷ ಜೀತಾ ಮುಗದ ಮ್ಯಾಲೆ ನೀವೂ ಹೋಗಿ ಅವನ ಹಂತ್ಯಾಕ ಇದ್ದು ಬದ್ರಿ, ಇಲ್ಲಿ ದುಡಿಯೂದ ಅಲ್ಲೇ ದುಡಕೊಂಡು ಇರ್ರಿ'[೫] ಎಂಬ ಕೆಂಚವ್ವನ ಮಾತು ಒಂದು ದಲಿತ ಕುಟುಂಬ ಗ್ರಾಮ ನಿರಾಕರಿಸಿ ಶಿಕ್ಷಣದತ್ತ ಮುಖ ಮಾಡಲು ಕಾರಣವಾಗಿದೆ. ಕಥೆಯಲ್ಲಿ ಸಂಪ್ರದಾಯಸ್ಥ ವ್ಯಕ್ತಿತ್ವ ಕ್ರಮೇಣ ಬೆಳೆದು, 'ಎಲ್ಲರ ಹಸಿವು ಒಂದೇ, ನೋವು ಒಂದೇ, ಸಾವೂ ಒಂದೇ' ಎಂಬ ಮಾನವೀಯತೆಯ ಅರಿವಿನ ಹಂತವನ್ನು ತಲುಪುತ್ತದೆ. ರಮಾನಂದ ಅಮೀನ ಅವರ 'ಗದ್ದೆಯ ಸೆರಗು' ಕಾದಂಬರಿಯ ವೇಣುಗೋಪಾಲ ಮಣ್ಣುಗುಡ್ಡೆ ಗ್ರಾಮ ನಿರಾಕರಿಸುವುದು ಉದ್ಯೋಗ ಅರಸಲು ಎಂಬುದು ನಿಜವಾದರೂ ಅವನ ಒಳ ಆಸೆ ಶಿಕ್ಷಣ ಪಡೆಯುವುದಾಗಿದೆ. ವಿವೇಕ ಶಾನಭಾಗ ಅವರ 'ಗುರುತು' ಕತೆಯ ಆನಂದ, ಹೇಮಲತಾ ಮಹಿಷಿ ಅವರ 'ತ್ರಿಶಂಕು' ಕತೆಯ ಡಾಕ್ಟರು (ಇವರು ದಲಿತರು) ಶಿಕ್ಷಣಕ್ಕಾಗಿ ಗ್ರಾಮ ನಿರಾಕರಣೆಯನ್ನು ಇದೇ ನೆಲೆಯಲ್ಲಿ ಮಾಡಿದ್ದು ಕಂಡುಬರುತ್ತದೆ. ಮರಿಯ, ಡಾಕ್ಟರು, ವೇಣುಗೋಪಾಲರಂತಹ ಕೆಳವರ್ಗದ ಯುವಕರಿಗೆ ಗ್ರಾಮಗಳಲ್ಲಿ ಸ್ಥಿರಾಸ್ತಿ ಇರದೆ ದುಡಿದು ಉಣ್ಣಲು ಯಾವ ಸ್ಥಳವಾದರೇನು, ಎಂಬ ನಿರ್ಧಾರದ ನಿರಾಳತೆ ಅವರಲ್ಲಿ ಇರುವುದನ್ನು ಅಧ್ಯಯನ ಗುರುತಿಸುತ್ತದೆ. ಸ್ಥಿರಾಸ್ತಿ ಇರುವ ಕೃಷ್ಣೋಪಂತ, ಮಾನಪ್ಪಗೌಡನಂತವರು ಅದರ ನಿರ್ವಹಣೆಗೆ ಗ್ರಾಮ/ನಗರಗಳಲ್ಲಿ ದ್ವಂದ್ವವನ್ನು ಅನುಭವಿಸಿದರೆ, ಮರಿಯ ತನ್ನ ಅಪ್ಪ, ಅಮ್ಮಂದಿರ ಬದುಕಿನ ಜವಾಬ್ದಾರಿಯನ್ನೂ ಹೊರಬೇಕಾಗಿದೆ. ಇಲ್ಲಿ ಮರಿಯ ಒಂದು ಪಾತ್ರವಾಗಿ ಉಳಿಯದೆ ಇಡೀ ದಲಿತ ಸಮುದಾಯದ ಪ್ರತಿನಿಧಿಯಾಗಿ ನಿಲ್ಲುತ್ತಾನೆ. ಈ ಎಲ್ಲ ಕುಟುಂಬಗಳು ಶಿಕ್ಷಣಕ್ಕಾಗಿ ಗ್ರಾಮ ನಿರಾಕರಣೆ ಮಾಡಲು ಇವರಿಗೆ ಆರ್ಥಿಕ ಬಲ ಇಲ್ಲದಿರುವುದು ಕಾರಣವಾಗಿದೆ. ಅದಲ್ಲದೆ ಇವರಿಗೆ ಗ್ರಾಮದಲ್ಲಿ ಸಾಮಾಜಿಕ ಭದ್ರತೆ ಕೂಡ ಇರುವುದಿಲ್ಲ. ಸರಕಾರ ಕಲ್ಪಿಸಿದ ಮೀಸಲಾತಿ ಸೌಲಭ್ಯವು ಮರಿಯ ಮತ್ತು ಡಾಕ್ಟರರನ್ನು ಗ್ರಾಮ ನಿರಾಕರಿಸುವಂತೆ ಮಾಡುತ್ತದೆ. ಇಂತಹ ಸೌಲಭ್ಯಗಳು ದಲಿತ ಯುವಕರಲ್ಲಿ ಆರ್ಥಿಕ ದೃಡತೆ, ಮಾನಸಿಕ ಭದ್ರತೆಯನ್ನು ಒದಗಿಸಿ, ಅವರು ಶಿಕ್ಷಣದತ್ತ ಆಕರ್ಷಿಸಲ್ಪಡುವುದಕ್ಕೆ ಕಾರಣವಾಗಿವೆ. ಇವರೆಲ್ಲರ ನಿರ್ಧಾರಗಳ ಹಿಂದೆ ಮಾರ್ಗದರ್ಶನ ನೀಡಿದ ಬೂದಿಹಾಳ ಮಾಸ್ತರು, ಮುಕುಂದ ಮಾಸ್ತರುಗಳಂತಹ ಪ್ರೇರಕಶಕ್ತಿಗಳಿರುವುದನ್ನು ಅಧ್ಯಯನ ಗುರುತಿಸುತ್ತದೆ. ಕೆಳವರ್ಗದ ಮಕ್ಕಳು ಶ್ರೀಮಂತರ ಆಶ್ರಯದಲ್ಲಿ ಅವರ ಮಕ್ಕಳ ಜೊತೆ ಓದುವ, ಅವರ ಮನೆಗೆಲಸ ಮಾಡುತ್ತ ಶಿಕ್ಷಣ ಮುಗಿಸುವುದನ್ನು ಇಂದಿಗೂ ಕಾಣಬಹುದು. ಶ್ರೀಮಂತ ರೈತರು, ಗೌಡರುಗಳು ತಮ್ಮ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ನಗರದಲ್ಲಿ ಬಾಡಿಗೆ/ಸ್ವಂತ ಮನೆಗಳನ್ನು ಮಾಡುವುದು ಕಂಡುಬಂದರೆ ಕೆಳ, ದಲಿತ ವರ್ಗದ ಮಕ್ಕಳು ಸರ್ಕಾರ ಕಲ್ಪಿಸಿದ ವಿದ್ಯಾರ್ಥಿ ನಿಲಯ, ವಸತಿ ಶಾಲೆಗಳನ್ನು ಸೇರಿ ಓದುವುದು ಸಹ ಕಂಡುಬರುತ್ತದೆ. ಇವೆರಡೂ ವರ್ಗಕ್ಕೆ ಸೇರದ ಬಡ ವಿದ್ಯಾರ್ಥಿಗಳು ನಗರದಲ್ಲಿ ವಾರಾನ್ನದ ಮನೆ, ಬಾಡಿಗೆ ರೂಮಿನಲ್ಲಿ ಅಡಿಗೆ ಮಾಡಿಕೊಳ್ಳುತ್ತ ಓದುತ್ತಾರೆ.

## ಬ. ಉದ್ಯೋಗಾನ್ವೇಷಣೆ ಮತ್ತು ಕುಟುಂಬಗಳ ನಿರಾಕರಣೆ

ಭಾರತದ ಸಂದರ್ಭದಲ್ಲಿ ಉದ್ಯೋಗ/ನೌಕರಿ ಹುಡುಕುತ್ತ ವ್ಯಕ್ತಿಗಳು ಗ್ರಾಮ/ ನಗರ ನಿರಾಕರಿಸುವುದು ಸಾಮಾನ್ಯವಾಗಿ ಕಂಡುಬರುವ ಪ್ರಕ್ರಿಯೆಯಾಗಿದೆ. ಇದಕ್ಕೆ ಅವರ ಕುಟುಂಬದ ಆರ್ಥಿಕ, ಸಾಮಾಜಿಕ ಸಮಸ್ಯೆಗಳು ಕಾರಣವಾಗಿವೆ. ಆದರೆ, ಉದ್ಯೋಗ/ನೌಕರಿ ಹುಡುಕುತ್ತ ಇಡೀ ಕುಟುಂಬವು ಗ್ರಾಮ/ ನಗರ ನಿರಾಕರಿಸುವುದೆಂದರೆ, ಇಲ್ಲಿ ಆ ಕುಟುಂಬದ ಆರ್ಥಿಕ ಅಭದ್ರತೆಯ ಜೊತೆಗೆ ಮೂಲನೆಲೆಯ ಆಸರೆಯನ್ನು ಕಳೆದುಕೊಳ್ಳುವ ಸಾಮಾಜಿಕ ಅಭದ್ರತೆಯನ್ನೂ ಕಾಣುತ್ತೇವೆ. ಇಂತಹ ಕುಟುಂಬಗಳು ಎದುರಿಸುವ ಅಭದ್ರತೆ, ಆತಂಕವನ್ನು ವಿವರಿಸುವ ಸಂದರ್ಭಗಳು ಮುಂಬಯಿ ಕರ್ನಾಟಕದ ಕಥನ ಸಾಹಿತ್ಯದಲ್ಲಿ ದಾಖಲಾಗಿವೆ.

ಪಾಟೀಲ ಪುಟ್ಟಪ್ಪ ಅವರ 'ಹೊನ್ನಯ್ಯನ ಬದುಕು' ಕತೆಯಲ್ಲಿ ಹನುಮಯ್ಯನದು ಹೆಂಡತಿ ಓಬವ್ವ, ಮಗ ಹೊನ್ನಯ್ಯ, ಸೊಸೆ ಪುಟ್ಟತಾಯಿಯರೊಂದಿಗಿನ ಸಂತೃಪ್ತ ಸಂಸಾರ. ಹನುಮಯ್ಯನ ಜುಗಾರಿ ಆಡುವ ದುಂದು ಹವ್ಯಾಸದಿಂದ ಮನೆ, ಹೊಲಗಳನ್ನು ಕಳೆದುಕೊಂಡು ಕುಟುಂಬ ಬೀದಿಗೆ ಬಿದ್ದಾಗ, ಹೊನ್ನಯ್ಯ ಕುಟುಂಬ ಸಮೇತ ಹೊಸಕೊಪ್ಪ (ಗ್ರಾಮ) ನಿರಾಕರಿಸಲು ನಿರ್ಧರಿಸುತ್ತಾನೆ. ತುಳಸಿ ವೇಣುಗೋಪಾಲ ಅವರ 'ಹೊಂಚು' ಕತೆಯ ಪಾಂಡು ಗ್ರಾಮದಲ್ಲಿ ಬಿದ್ದ ಅನಾವೃಷ್ಟಿಯ ತಾಪ ತಾಳಲಾರದೆ ಸಂಸಾರದೊಂದಿಗೆ ಗ್ರಾಮ ನಿರಾಕರಿಸಲು ನಿರ್ಧರಿಸುತ್ತಾನೆ. 'ಉರಿ ಕಾರುತ್ತಿದ್ದ ನಡು ಮಧ್ಯಾಹ್ನ ಗದ್ದೆಯಲ್ಲಿ ಒಣಗಿ ನಿಂತ ಪೈರು, ಗಿಡಮರಗಳೆಲ್ಲಾ ಕಪ್ಪು ಕನ್ನಡಕದಲ್ಲಿ ಹಸಿರಾಗಿ, ತಂಪಾಗಿ ಕಾಣಿಸುತ್ತಿದ್ದ ಹೊತ್ತಿಗೆ ಪಾಂಡು ಗ್ರಾಮ ನಿರಾಕರಿಸುವ ನಿರ್ಧಾರ ಮಾಡಿಯೇ ಬಿಟ್ಟ.'[೩೦] ಪಾಂಡುವಿನ ಗ್ರಾಮ ನಿರಾಕರಣೆಯ ಕಾರಣ ಅನಾವೃಷ್ಟಿಯಾದರೂ, ಅದರ ಹಿಂದಿರುವ ಇನ್ನೊಂದು ಕಾರಣ ಸಾಮಾಜಿಕ ಅಭದ್ರತೆಯಾಗಿದೆ. ತಾಯಿ ಸತ್ತ ನಂತರ ಬರದಿಂದ ಬಸವಳಿಯುವ ಈ ಬದುಕು ಅವನಿಗೆ ಆರ್ಥಿಕ ಅಭದ್ರತೆಯೊಂದಿಗೆ ಸಾಮಾಜಿಕ ಅಭದ್ರತೆಯನ್ನು ತಂದುದರಲ್ಲಿ ಆಶ್ಚರ್ಯವಿಲ್ಲ. ಅದೇ ರೀತಿ ಹೊನ್ನಯ್ಯನ ಬದುಕು ಕತೆಯಲ್ಲಿ 'ಅಪ್ಪ ಹಳ್ಳಿಯಲ್ಲಿ ತಾನೂ ಕೆಟ್ಟು ಕುಟುಂಬವನ್ನು ಕೆಡಿಸಿದಾಗ, ಸಮಾಜದಲ್ಲಿ ಮುಖ ತೋರಿಸಲು ಇಚ್ಛಿಸದ ಮಗ ಹೊನ್ನಯ್ಯ ಪಟ್ಟಣ ಸೇರಲು ನಿರ್ಧರಿಸುತ್ತಾನೆ'[೩೧] ಎಂಬ ಮಾತು ದಾಖಲಾಗಿದೆ. ಬಡತನ, ಸಾಮಾಜಿಕ ಅಭದ್ರತೆಯಿಂದ ಉದ್ಯೋಗ ಹುಡುಕುತ್ತ ಕುಟುಂಬ ಸಮೇತ ಗ್ರಾಮ/ನಗರ ನಿರಾಕರಿಸುವ ಅನೇಕ ಪಾತ್ರಗಳನ್ನು ಕಥನ ಸಾಹಿತ್ಯದಲ್ಲಿ ಕಾಣುತ್ತೇವೆ. ಮಿತ್ರಾ ವೆಂಕಟರಾಜ್ ಅವರ 'ಕೊನೆಯ ದಿನ' ಕತೆಯ ಮೋರಿಬಾಯಿ, ಅವಳ ದೂರದ ಸಂಬಂಧಿ ರಾಜಿ, ಸುನಂದಾ ಬೆಳಗಾಂವಕರ ಅವರ 'ಕಾಯಕ ಕೈಲಾಸ' ಕಾದಂಬರಿಯ ಕಲ್ಲವ್ವ, ರಾಚಪ್ಪ (ಇವರ ಕುಟುಂಬವು ಹೊಸನೆಲೆಯಲ್ಲಿ ಗೌಡರ (ಶ್ರೀಮಂತರ) ಕುಟುಂಬದ ಕೆಲಸ ಕಾರ್ಯಗಳನ್ನು ನಿರ್ವಹಿಸಲು, ಇದೊಂದು ಆಧುನಿಕ ಜೀತವೆನ್ನಬಹುದು) ಗ್ರಾಮ ನಿರಾಕರಿಸುವ ಕಾರಣಗಳು ಇವೇ ಆಗಿವೆ. ನಾ. ಡಿಸೋಜ ಅವರ 'ದ್ವೀಪ' ಕಾದಂಬರಿಯ ಹಸಲರ ಹಾಲ ಮತ್ತು ಭೈರನ ಕುಟುಂಬಗಳು (ಇವು ಹುಟ್ಟಾಳು ಕುಟುಂಬಗಳು) ತಮ್ಮ ಒಡೆಯರ ಕುಟುಂಬಗಳನ್ನು ಅನುಸರಿಸಿ ಗ್ರಾಮ ನಿರಾಕರಣೆಯನ್ನು ಮಾಡುತ್ತವೆ. ರಾಚಪ್ಪ, ಹಾಲ ಮತ್ತು ಭೈರನಂತಹ ಕುಟುಂಬಗಳು ಕೆಳವರ್ಗ/ದಲಿತರ ಕುಟುಂಬಗಳಾಗಿದ್ದು ಸ್ಥಿರಾಸ್ತಿಗಳನ್ನು ಹೊಂದಿರುವುದಿಲ್ಲ. ಇಂತಹವರಿಗೆ ಗ್ರಾಮ/ನಗರ ಪ್ರದೇಶದ ಮೇಲ್ವರ್ಗದ ಜನರು ಸಾಮಾಜಿಕ ಭದ್ರತೆಯನ್ನು ನೀಡದೆ ಆಸರೆಯ ಹೆಸರಿನಲ್ಲಿ ಅವರನ್ನು ಶೋಷಿಸುವುದೂ ಕಂಡುಬರುತ್ತದೆ. ಈ ಕಥನ ಸಂದರ್ಭಗಳಲ್ಲಿ ಮೇಲ್ವರ್ಗದವರ ಸ್ವಾರ್ಥ, ಕ್ರೌರ್ಯ ಮತ್ತು ಸಮಯಸಾಧಕತನಗಳಿಗೆ ವಿರುದ್ಧವಾಗಿ ಕೆಳವರ್ಗದವರ ಮಾನವೀಯ, ಜೀವಪರ ಮೌಲ್ಯಗಳ ಪ್ರತಿಪಾದನೆ ಕಂಡುಬರುತ್ತದೆ. ಆದರೆ ಈ ಪ್ರತಿಪಾದನೆ ಆರ್ಥಿಕ, ಸಾಮಾಜಿಕ ಅಸಹಾಯಕತೆ ಮತ್ತು ಅನಿವಾರ್ಯತೆಗಳಿಂದ ಹುಟ್ಟಿದುದೇನೋ ಎಂಬ ಸಂಶಯ ಅಧ್ಯಯನವನ್ನು ಕಾಡಿದೆ. ಕಥನ ಸಾಹಿತ್ಯದಲ್ಲಿ ಕಾಣುವ ಇಂತಹವರು ಮುಗ್ಧರು, ಅನಕ್ಷರಸ್ಥರು, ಕರ್ಮಸಿದ್ಧಾಂತವನ್ನು ನಂಬಿದವರು, ಶ್ರಮಜೀವಿಗಳು ಮತ್ತು ಶೋಷಿತರಾಗಿದ್ದಾರೆ.

## ಕ. ಕೌಟುಂಬಿಕ ನೆಲೆಯಲ್ಲಿ ವಿವಾಹೇತರ ಸಂಬಂಧಗಳು ಮತ್ತು ನಿರಾಕರಣೆ

ವಿವಾಹೇತರ ಸಂಬಂಧಗಳು ವ್ಯಕ್ತಿಗಳ ವೈಯಕ್ತಿಕ ನೆಲೆಯಲ್ಲಿ ಸಂಭವಿಸುವ ಘಟನೆಗಳಾಗಿವೆ. ಇವು ಕೌಟುಂಬಿಕ ವಿಘಟನೆಯಲ್ಲಿ ಅಂತ್ಯಗೊಂಡಾಗ ಪುರುಷ ಅಥವಾ ಮಹಿಳೆಯರು ಗ್ರಾಮ/ನಗರವನ್ನು

ನಿರಾಕರಿಸುತ್ತಾರೆ. ಇಂತಹ ಸಂಬಂಧಗಳಿಗೆ ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ಕುಟುಂಬದ ಸದಸ್ಯರು ಪ್ರೇರಣೆಯಾದಾಗ/ಕಾರಣವಾದಾಗ, ಪರಿಣಾಮವಾಗಿ ವ್ಯಕ್ತಿ ಇಲ್ಲವೆ ಇಡೀ ಕುಟುಂಬ ಗ್ರಾಮ/ನಗರ ನಿರಾಕರಿಸುವುದು ಕಂಡುಬರುತ್ತದೆ. ವಿವಾಹೇತರ ಸಂಬಂಧಗಳಲ್ಲಿ ಮುಖ್ಯವಾಗಿ ಮಹಿಳೆಯನ್ನು ಅಪರಾಧಿ ಎಂದು ಪರಿಗಣಿಸಲಾಗುತ್ತದೆ. ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಒಂದಕ್ಕಿಂತ ಹೆಚ್ಚು ವೈವಾಹಿಕ/ವಿವಾಹೇತರ ಸಂಬಂಧಗಳನ್ನು ಹೊಂದುವ ಹಕ್ಕನ್ನು (ಸ್ವಾತಂತ್ರ್ಯೋತ್ತರ ಕಾನೂನುಗಳು ಇದಕ್ಕೆ ಅವಕಾಶ ಕೊಡದಿರುವುದು ಬೇರೆ ವಿಚಾರ) ಪುರುಷ ಹಿಂದಿನಿಂದಲೂ ಪಡೆದುಕೊಂಡು ಬಂದಿರುವುದು ಇದಕ್ಕೆ ಕಾರಣವಾಗಿದೆ. ಮಹಿಳೆಯು ಯಾವ ತಪ್ಪು ಎಸಗದಿದ್ದರೂ, ತಪ್ಪು ಮಾಡುವಂತೆ ಪ್ರೇರೇಪಿಸಿ ಅವಳು ಅಸಹಾಯಕಳಾದಾಗ ಗ್ರಾಮವನ್ನು ನಿರಾಕರಿಸುವಂತೆ ಮಾಡುವ ಕುಟುಂಬ, ಸಮಾಜಗಳು ವ್ಯಕ್ತಿ/ಕುಟುಂಬ ನಿರಾಕರಣೆಗೆ ಪ್ರೇರಣೆ ನೀಡಿದ ಹೊಣೆ ಹೊರಬೇಕಾಗುತ್ತದೆ.

ಲೋಹಿತ ನಾಯ್ಕರ ಅವರ 'ನಿರ್ಧಾರ' ಕತೆಯ ಮಾಲತಿ ವಿವಾಹೇತರ ಸಂಬಂಧ ಬೆಳೆಸಲು ಗಂಡನ ಮನೆಯ ಸದಸ್ಯರು ಕಾರಣವೆನ್ನಬಹುದು. ಅಪ್ರಾಪ್ತ ವಯಸ್ಸಿನಲ್ಲಿ ಅರಿವಿಲ್ಲದೆ ನಡೆದು ಹೋದ ಮದುವೆ, ದುಡಿಯುವ ಏಕೈಕ ಗಂಡನ ಕಾಮಣಿ ರೋಗದಿಂದುಂಟಾದ ಸಾವು, ಅಸ್ತಮಾ ಪೀಡಿತ ಮಾವ, ಸಿಡುಕು ಸ್ವಭಾವದ ಅತ್ತೆ, ಕನ್ನಡಿ ಮುಂದೆ ನಿಲ್ಲುವ ನಾದಿನಿ, ಉಡಾಳ ಮೈದುನರನ್ನು ಹೊತ್ತ ಸಂಸಾರದ ರಥ ಎಳೆಯುವ ಜವಾಬ್ದಾರಿಗಳು ಅವಳನ್ನು ದುಡಿಯಲು ಹೊಸ್ತಿಲಿನಿಂದ ಹೊರಗೆ ಹೆಜ್ಜೆಯಿಡುವಂತೆ ಮಾಡುತ್ತವೆ. ಗಂಡನ ಸ್ನೇಹಿತನಾದ ಪಕ್ಕದ ಮನೆಯ ಯುವಕ ರಮೇಶನ ಸಂಗಡ, ಓಡಾಡುವ ರೈಲುಗಳಲ್ಲಿ ಪ್ರಯಾಣಿಕರಿಗೆ ತಿಂಡಿ, ಪಾನೀಯ ಮಾರುವ ಗಂಡನ ವೃತ್ತಿಯನ್ನು ಕೈಗೊಂಡಾಗ ರಮೇಶನೊಂದಿಗೆ ದೈಹಿಕ ಸಂಬಂಧ ಬೆಳೆಸಿ ಮನೆಯಿಂದ ಹೊರದೂಡಲ್ಪಡುತ್ತಾಳೆ. ಶಾಂತಾದೇವಿ ಕಣವಿ ಅವರ 'ಗುಳದಾಳಿ' ಕತೆಯ ಚೆನ್ನಿಯದು ಸಹ ಇದೇ ಬಗೆಯ ಅಸಹಾಯಕ ಸ್ಥಿತಿಯಾಗಿದೆ. ಬಾಲ್ಯ ವಿವಾಹವಾದ ಹನ್ನೆರಡು ವರ್ಷ ವಯಸ್ಸಿನ ಚೆನ್ನಿಯನ್ನು ದೊಡ್ಡಪ್ಪನ ಮಗಳು ಜಾತ್ರೆಗೆ ಕರೆದುಕೊಂಡು ಹೋದಾಗ, ಬಂಗಾರದಿಂದ ಮಾಡಿದ ಗುಳದಾಳಿ ಕಳೆದುಹೋಗುತ್ತದೆ. ಮುಂದೆ ಚೆನ್ನಿಯ ತಾಯಿಯಿಂದ ಘಟಿಸುವುದು ಅಸಾಧಾರಣ ತಪ್ಪು, ಅಜ್ಞಾನದ ಪರಮಾವಧಿ ಎನ್ನಬಹುದು. ಬಂಗಾರ ಕಳೆದುಕೊಂಡು ಬಂದ ಮಗಳೇ ದುಡಿದು ಬಂಗಾರ ತರಬೇಕೆಂಬ ತಾಯಿಯ ದಾರ್ಷ್ಟ್ಯ, ಚೆನ್ನಿಯನ್ನು ಇಟ್ಟಿಗೆ ಬಟ್ಟಿಯಲ್ಲಿ ಕೆಲಸಕ್ಕೆ ಕಳಿಸುತ್ತದೆ. ಚೆನ್ನಿ ಇಲ್ಲಿ ತನ್ನ ಶೀಲವನ್ನು ಕಳೆದುಕೊಂಡು ಗರ್ಭಿಣಿಯಾಗಿ ತಾಯಿ ಮತ್ತು ಗಂಡನ ಮನೆ(ಗ್ರಾಮ)ಯನ್ನು ನಿರಾಕರಿಸುತ್ತಾಳೆ.

ಮೇಲಿನ ಸಂದರ್ಭಗಳನ್ನು ಗಮನಿಸಿದಾಗ ಕುಟುಂಬದ ಜವಾಬ್ದಾರಿ ಏನು ಎಂಬ ಪ್ರಶ್ನೆ ಎದುರಿಗೆ ನಿಲ್ಲುತ್ತದೆ. ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಕುಟುಂಬವು ಸಂಬಂಧಗಳನ್ನು ದೈಹಿಕವಾಗಿ, ಭಾವನಾತ್ಮಕವಾಗಿ ಬೆಸೆಯುವ ಸಂಸ್ಥೆಯೆನ್ನಿಸಿದೆ ನಿಜ. ಆದರೆ ಕುಟುಂಬದ ಹಿರಿಯರು ಶಿಸ್ತು, ಸಭ್ಯತೆ, ಸೌಜನ್ಯ(ಅಜ್ಞಾನ)ದ ನೆಪದಲ್ಲಿ ಎಸಗುವ ಅಪರಾಧಗಳಾದರೂ ಎಂತಹವು. ಕುಟುಂಬದ ಕಿರಿಯ ಸದಸ್ಯರ ಭಾವನೆ, ಅನಿಸಿಕೆಗಳಿಗೆ ಬೆಲೆಯೆ ಇಲ್ಲವೇ ಮುಂತಾಗಿ ವಿಶ್ಲೇಷಿಸಿದಾಗ ಅನೇಕ ಹಿರಿಯರ ಸ್ವಯಂಕೃತ ಅಪರಾಧಗಳು ಅನಾವರಣಗೊಳ್ಳುತ್ತವೆ. ಕುಟುಂಬದ ಹಿರಿಯ ಸದಸ್ಯರು ತೋರಬೇಕಾದ ತಾಳ್ಮೆ, ಸಂಯಮ, ಅನುಕಂಪಗಳು ಈ ಎರಡೂ ಕಥಾ ಸಂದರ್ಭಗಳಲ್ಲಿ ಕಂಡುಬರುವುದಿಲ್ಲ. ತಿಳುವಳಿಕೆ ಹೇಳಿ ತಿದ್ದಿ ಬೆಳೆಸಬೇಕಾದ ತಾಯಿ ಹನ್ನೆರಡು ವರ್ಷದ ಚೆನ್ನಿಯನ್ನು ಇಟ್ಟಿಗೆ ಬಟ್ಟಿ ತಯಾರಿಸುವ ಘಟಕಕ್ಕೆ ಕೂಲಿಗೆ ಕಳಿಸುತ್ತಾಳೆ. ನಂತರದ ತಪ್ಪು ಸಮಾಜದ ಪುರುಷವರ್ಗದ್ದಾದರೂ, 'ನಿನ್ನ ಹೇಂಡ್ತಿ ಹಾದರಾ ಮಾಡಿ ಯಾರಿಗೋ ಬಸರಾಗಿ, ಊರ ಬಿಟ್ಟು ಅವ್ನ ಹಿಂದ ಓಡಿಹೋಗ್ಯಾಳ'[೨೨] ಎಂದು ಅತ್ತೆಯೂ ಸುಳ್ಳು ಹೇಳಿ ಚೆನ್ನಿಯ ಗಂಡನಿಗೆ ಇನ್ನೊಂದು ಮದುವೆ ಮಾಡುತ್ತಾಳೆ. ನಿರ್ಧಾರ ಕತೆಯಲ್ಲಿ, ಮಾಲತಿ ಎಷ್ಟೇ ಕೇಳಿಕೊಂಡರೂ ಕುಟುಂಬದ ಪುರುಷ ಸದಸ್ಯರು (ಮಾವ, ಮೈದುನ) ಸಂಸಾರದ ಜವಾಬ್ದಾರಿ ವಹಿಸಿಕೊಳ್ಳುವುದಿಲ್ಲ. ಇವಳು 'ಅದು ತಪ್ಪು ನಾನು ಮದುವೆಯಾದವಳು'[೨೩] ಎಂದು ಕೇಳಿಕೊಂಡರೂ ರಮೇಶ ನಯವಾಗಿ ಪ್ರೀತಿಸುವ ನಾಟಕವಾಡಿ ಅವಳನ್ನು ಅಡ್ಡದಾರಿಗೆ ಎಳೆಯುತ್ತಾನೆ. ಹೀಗೆ ಹಿರಿಯರ ಬೇಜವಾಬ್ದಾರಿ, ಪುರುಷರ ನಯವಂಚನೆ, ದೌರ್ಜನ್ಯದ ಫಲವಾಗಿ ಅನೇಕ ಮಹಿಳೆಯರು ವಿವಾಹೇತರ ಸಂಬಂಧಗಳಲ್ಲಿ ಸಿಲುಕಿಕೊಳ್ಳುತ್ತಾರೆ. ಸಮಾಜವು ಹೆಂಗಸಿನ ಮೇಲೆ ಹೇರಿದ ಪಾವಿತ್ರ್ಯದ ಮತ್ತು ಪಾತಿವ್ರತ್ಯದ ಪರಿಕಲ್ಪನೆಯನ್ನು ಪುರಸ್ಕರಿಸುವ ನೆಲೆ ಈ ಎರಡೂ ಕಥನಗಳಲ್ಲಿ ವ್ಯಕ್ತವಾಗಿದೆ. ಇದಕ್ಕೆ ಕಾರಣ ಭಾರತೀಯ

ಸಮಾಜದ ಸಾಂಪ್ರದಾಯಕ ಕಟ್ಟಳೆಗಳು, ಪುರುಷಕೇಂದ್ರಿತ ಚಿಂತನೆಗಳು ಎನ್ನುವುದು ಅಧ್ಯಯನದ ನಿಲುವಾಗಿದೆ.

ಶ್ಯಾಮಲಾ ಬೆಳಗಾಂವಕರ ಅವರ 'ಕರುಳ ಕತ್ತರಿ' ಕತೆಯ ಚಂದ್ರಾ ತನ್ನ ತಂದೆ ತಾಯಿಯರಿಂದಲೇ ವೇಶ್ಯಾವೃತ್ತಿಗೆ ನೂಕಲ್ಪಟ್ಟು, ವೆಂಕಪ್ಪನಾಯ್ಕರ ಹಿಂದೆ ಗ್ರಾಮ ನಿರಾಕರಿಸಿ ಶಹರಕ್ಕೆ ಬರುತ್ತಾಳೆ. ತಂದೆ ಅವಳು ದೇಹಮಾರಿ ಸಂಪಾದಿಸಿದ ಹಣ, ವಸ್ತ್ರ, ವಡವೆ ದೋಚುತ್ತಾನೆ. ಜಯಂತ ಕಾಯ್ಕಿಣಿ ಅವರ 'ಇದ್ದಾಗ ಇದ್ದಾಂಗ' ಕತೆಯಲ್ಲಿ ಪ್ರಭಾಕರ ದಂಡೊ ಹರಿಕಾಂತ(ಪಬ್ಲೂ)ನ ತಾಯಿ, ತಂಗಿ(ಗಂಗೆ)ಯರು ಇಡೀ ಸಂಸಾರಕ್ಕೆ ಗೊತ್ತಿರುವ ಹಾಗೆ ಮೇಸ್ತ್ರಿ, ಪ್ರಭು ಮುಂತಾದ ಗಂಡಸರ ಸಹವಾಸ ಮಾಡಿ ಕೊನೆಗೆ ಊರು ಬಿಟ್ಟು ಹೊರಟು ಹೋಗುತ್ತಾರೆ (ಗಂಗೆ ಸಾಯುತ್ತಾಳೆ). ವೆಂ.ಮು. ಜೋಶಿ ಅವರ 'ಸೆಳೆತದ ಸಿಲುಬೆ' ಕತೆಯ ನಿಂಗಿ ಮಲತಾಯಿಯ ದೈಹಿಕ ಹಿಂಸೆ ತಾಳಲಾರದೆ ಸಂಚಾರಿ ವೈದ್ಯನನ್ನು ನಂಬಿ, ಅವನೊಂದಿಗೆ ಗ್ರಾಮ ನಿರಾಕರಿಸಿ ಜಬಲಪುರ್ ಪಟ್ಟಣಕ್ಕೆ ಬರುತ್ತಾಳೆ. ತಂದೆ ತಾಯಿ, ಮಲತಾಯಿ, ಅತ್ತೆ ಮುಂತಾದ ಕುಟುಂಬದ ಸದಸ್ಯರ ಹಿಂಸೆ/ಪ್ರೇರಣೆಯಿಂದ ವಿವಾಹೇತರ ಸಂಬಂಧಕ್ಕೆ ಎಳೆಸಲ್ಪಟ್ಟು ಗ್ರಾಮ/ ನಗರ ನಿರಾಕರಿಸುವ ನೂರಾರು ಸಂದರ್ಭಗಳನ್ನು ಮುಂಬಯಿ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಕಾಣುತ್ತೇವೆ. ಮಡಿವಂತರಿಗೆ ಒಪ್ಪಿಕೊಳ್ಳಲು ಕಷ್ಟವಾಗುವ ಇಂತಹ ವಿಷಯಗಳಿಗೆ ಕಾರಣವಾದರೂ ಏನು ಎಂಬುದು ಸ್ಪಷ್ಟ ಗೋಚರವಿದೆ. ಇವು ಸಂಭವಿಸುವುದಕ್ಕೆ ಗ್ರಾಮೀಣ ಪ್ರದೇಶದ ಬಡತನ, ಮೌಢ್ಯ, ಹಸಿವುಗಳು ಕಾರಣವಾದರೂ ಮೇಲ್ವರ್ಗಗಳ ಸಮಯ ಸಾಧಕತನವನ್ನೂ ಇಲ್ಲಿ ದಾಖಲಿಸಬೇಕಿದೆ.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಕೆಳವರ್ಗದ ಮಹಿಳೆಯರಾದ ಮಾಲತಿ, ಚಿನ್ನಿ, ನಿಂಗಿ, ಚಂದ್ರಾ, ಗಂಗೆಯರು ಒಂದು ವ್ಯವಸ್ಥೆಯನ್ನು ಎದುರಿಸಲಾರದ ಅಸಹಾಯಕರಾಗಿ ಗ್ರಾಮ ನಿರಾಕರಣೆಯನ್ನು ಮಾಡುವುದು ಮತ್ತು ಪುರುಷಪ್ರಧಾನ ಸಮುದಾಯದ ನಿರಂತರ ಶೋಷಣೆಗೆ ಒಳಗಾಗುವುದು ಪ್ರಮುಖವಾಗಿದೆ. ಇವರ ಕುಟುಂಬದ ಹಿರಿಯರು ಅಪ್ಪೇಕೆ ಅಮ್ಮಂದಿರು ಆ ವ್ಯವಸ್ಥೆಯ ಮುಖವಾಗಿ ವರ್ತಿಸುವುದು, ವ್ಯವಸ್ಥೆಯ ಬಿಗಿ ಹಿಡಿತವನ್ನು ತೋರಿಸುತ್ತದೆ ಅಥವಾ ವ್ಯವಸ್ಥೆ ಇವರ ಮುಖಾಂತರ ಮಹಿಳಾ ಶೋಷಣೆಯನ್ನು ವ್ಯವಸ್ಥಿತವಾಗಿ ಯಥಾಸ್ಥಿತಿಯಲ್ಲಿ ಇಡಬಯಸುತ್ತದೆ. ಮಹಿಳೆಯನ್ನೇ ಶೋಷಣೆಗೈವ ಇಂತಹ ಮಹಿಳೆಯರನ್ನು ಮಹಿಳಾದೇಹಿ ಪುರುಷ ಚೈತನ್ಯಮಯಿಗಳು ಎನ್ನಬಹುದು. ಇವರ ಮನೋಭಾವಕ್ಕೆ ಕಾರಣವೇನು, ಶೀಲಗೆಟ್ಟವರೆಲ್ಲ ಬೀದಿಗೆ ಬಿದ್ದು ವೇಶ್ಯೆಯರಾಗುತ್ತಾರೆಯೇ ಎಂಬ ಪ್ರಶ್ನೆಗಳು ಎದುರಾಗುತ್ತವೆ. ಇಲ್ಲಿಯ ಸಮಸ್ಯೆ ಶೀಲವೆಂಬ ಕೃತ್ರಿಮ ಮೌಲ್ಯದಲ್ಲಿಲ್ಲ. ಅದನ್ನು ಮೌಲ್ಯವೆಂದು ನಂಬಿದ ಕೆಳವರ್ಗದ ಜನರ/ಮಾತೆಯರ ಬಡತನ, ಮೌಢ್ಯ, ಅವ್ಯೆಚಾರಿಕ ಮನೋಭಾವದಲ್ಲಿದೆ ಎನ್ನಬಹುದು.

**ಡ. ಹಳೆ-ಹೊಸ ತಲೆಮಾರುಗಳ ಆಸಕ್ತಿ ಮತ್ತು ನಿರಾಕರಣೆ : ಜಾತಿ, ಸಂಪ್ರದಾಯಗಳ ನೆಲೆಯಿಂದ**

ಈ ನೆಲದಲ್ಲಿ ಜನಿಸಿ ವರ್ಣ, ವರ್ಗ ವ್ಯವಸ್ಥೆಗಳನ್ನು ನಿರಾಕರಿಸಿ, ಹೊಸ ವ್ಯವಸ್ಥೆಯನ್ನು ಅರಸುತ್ತ ಹೊರಟು, ಅದನ್ನು ಅಂಗೀಕರಿಸಿದ ಭಾರತೀಯರ (ಬುದ್ಧ, ಬಸವರು ಉತ್ತಮ ಉದಾಹರಣೆಯಾಗಿ ನಿಲ್ಲುತ್ತಾರೆ) ಕುರಿತು ಇತಿಹಾಸದಲ್ಲಿ ದಾಖಲಿಸಲಾಗಿದೆ. ಜಾಗತೀಕರಣ, ನಗರೀಕರಣದಂತಹ ಇಂದಿನ ಸಂದರ್ಭಗಳಲ್ಲಿ ಜಾತಿ, ವರ್ಣ, ವರ್ಗ, ನಂಬಿಕೆಗಳ ನಿರಾಕರಣೆ ಯುವಜನಾಂಗದಿಂದ ನಿರಂತರವಾಗಿದೆ ಹಾಗೂ ಅದು ಗ್ರಾಮ/ನಗರಗಳ ನಿರಾಕರಣೆಗೆ ಪ್ರೇರಣೆಯಾಗಿದ್ದನ್ನು ಕಥನ ಸಾಹಿತ್ಯದಲ್ಲಿ ಕಾಣುತ್ತೇವೆ.

ಶ್ರೀರಂಗರ 'ವಿಶ್ವಾಮಿತ್ರ ಸೃಷ್ಟಿ' ಕಾದಂಬರಿಯ ನಾರಾಯಣನ ತಂದೆ ಶ್ರೀನಿವಾಸನಾಯಕ ಸಂಪ್ರದಾಯವಾದಿ ಮತ್ತು ಹಠವಾದಿಯಾಗಿದ್ದಾನೆ. ಇಂಥ ವ್ಯಕ್ತಿ ಮಗನನ್ನು ಹಾಗೂ ಹೆಂಡತಿಯನ್ನು ಬಿಗಿಯಾದ ಹದ್ದುಬಸ್ತಿನಲ್ಲಿ ಇಟ್ಟುಕೊಂಡಿರುವುದು ಕಂಡುಬರುತ್ತದೆ. ಹೊಸ ಸುಧಾರಣಾವಾದಿ ಮೌಲ್ಯಗಳಿಗೆ ಸ್ಪಂದಿಸಿದ ಮಗ ಮತ್ತು ತಂದೆಯ ನಡುವೆ ಸೈದ್ಧಾಂತಿಕ ಭಿನ್ನಾಭಿಪ್ರಾಯದ ತೆಳು ಪರದೆಯೊಂದು ನಿರ್ಮಾಣವಾಗುತ್ತದೆ. ಮದುವೆಯಾದ ಹೆಂಡತಿಯನ್ನೂ ತೊರೆದು ನಾರಾಯಣ ಸಣ್ಣೂರು (ಸಣ್ಣ ಊರು, ಪಟ್ಟಣದ ಹೆಸರಿನಲ್ಲೆ ಒಂದು ವ್ಯಂಗ್ಯ ಕೂಡ ಇದೆ. ಇಲ್ಲಿ ಪಟ್ಟಣವು ವ್ಯಂಗ್ಯಕ್ಕೆ ಒಳಗಾಗಿರುವ ಆಯಾಮವನ್ನೂ ಗಮನಿಸಬಹುದು) ನಿರಾಕರಿಸುತ್ತಾನೆ. ಅಶೋಕ ಹೆಗಡೆ ಅವರ 'ಆಲಿಕಲ್ಲು' ಕತೆಯ ನಾಗರಾಜ ಮತ್ತು ವ್ಯಾಸರಾವ್ ನಿಂಜೂರ ಅವರ 'ನಿರಾಕರಣೆ' ಕತೆಯ ಕೇಶವ ಬ್ರಾಹ್ಮಣ್ಯದ

ಕಟ್ಟುಪಾಡುಗಳನ್ನು ತಿರಸ್ಕರಿಸಿ ಗ್ರಾಮ ನಿರಾಕರಿಸಿದ ಯುವಕರಾಗಿದ್ದಾರೆ. ಈ ಕೆಳಗಿನ ಕತೆಯ ಭಾಗವನ್ನು ಗಮನಿಸೋಣ.

> 'ಜನಿವಾರ ಇದ್ದರೆ ಸಾಕು ಬದುಕಬಹುದು. ಊಟ, ತಿಂಡಿ, ವಾಸ್ತವಕ್ಕೆ ಕೊರೆಯಾಗದಂತೆ ಬಾಳಲು ಸಹಕರಿಸುವ ಜನಿವಾರ ಧರಿಸುವ ಅಪರ ಕರ್ಮವೊಂದಿದ್ದರೆ ಸಾಕು, ಇಂಗ್ಲೀಷ ಶಿಕ್ಷಣ ಯಾಕೆ?'[೩೪]

ತನ್ನದು ಬಿಳಿ ಗಡ್ಡದ ಋಷಿಗಳ ಗೋತ್ರ, ಶ್ರಮವಿಲ್ಲದೆ ತಿಂದು ತಿರುಗುವ ಜಾತಿ ಎಂದು ತನ್ನ ಕುಲವನ್ನೇ ನಾರಾಯಣ ವಿಡಂಬನೆಗೆ ಒಳಪಡಿಸುತ್ತಾನೆ ಮತ್ತು ತನ್ನ ಜಾತಿಯ ಬಗ್ಗೆ ಒಂದು ರೀತಿಯ ಅಸಡ್ಡೆ, ತಿರಸ್ಕಾರವನ್ನು ಬೆಳೆಸಿಕೊಳ್ಳುತ್ತಾನೆ. ಅದೇ ರೀತಿ ನಾಗರಾಜ,

> 'ಆಗ ಇಂತಲ್ಲಿಯೇ ಸೇರಬೇಕೆಂಬ ಯಾವ ಗರಜೂ ಇರಲಿಲ್ಲ. 'ಮೂರು ಹೊತ್ತು ಸಂಧ್ಯಾವಂದನೆ ಮಾಡುತ್ತಾ, ದೇವರ ಪೂಜೆ ಮಾಡು' ಎಂದು ಪೀಡಿಸುವ ಅಪ್ಪನಿರಲಿಲ್ಲ. ಕಾಲ್ತೊಳೆದು ಶುಭ್ರವಾಗಿ ಮಡಿಯುಟ್ಟ ಆಯಿ, 'ತಮ್ಮ ಎಲ್ಲಿ ತಪ್ಪಿದನೋ' ಎಂದು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕಾಯುವಂತಿರಲಿಲ್ಲ. ಎಣ್ಣೆ ಹಾಕಿ ತನ್ನ ಉದ್ದ ಕೂದಲಿನಲ್ಲಿ ಕೇದಗೆಯ ಹೂ ಮುಡಿದ ಅಕ್ಕನಿಗೆ ತನ್ನ ದಿನಚರಿಯ ಲೆಕ್ಕ ಒಪ್ಪಿಸುವಂತಿರಲಿಲ್ಲ. ಹೆಜ್ಜೆ ಹೊರ ಇಟ್ಟರೆ ಸಾಕು 'ಏನೋ ನಾಗರಾಜ' ಎಂದು ಕರೆಕರೆದು ರಗಳೆ ಎಬ್ಬಿಸುವ ಊರ ಮಂದಿ....'[೩೫]

ಇಂತಹ ಮಾತುಗಳು ನಾರಾಯಣ ಮತ್ತು ನಾಗರಾಜರ ಮನೆಯಲ್ಲಿದ್ದ ಕಟ್ಟುನಿಟ್ಟಾದ ಬದುಕನ್ನು ವಿವರಿಸುತ್ತ, ಅವರ ಮನದಲ್ಲಿ ಮೂಡಿದ್ದ ಸ್ವಾತಂತ್ರ್ಯ ಅನುಭವಿಸುವ ಸುಪ್ತ ಬಯಕೆ, ಗ್ರಾಮ ನಿರಾಕರಣೆಯ ನಿರ್ಧಾರದ ಹಿಂದೆ ಹೇಗೆ ಸಾಕಾರಗೊಂಡಿದೆ ಎಂಬುದನ್ನು ಸೂಚಿಸುತ್ತವೆ.

ನಾಗರಾಜ ಮತ್ತು ನಾರಾಯಣ ಇವರ ಗ್ರಾಮ/ನಗರ ನಿರಾಕರಣೆಗೆ ಸ್ಪಷ್ಟ ಗುರಿ ಇಲ್ಲದಿದ್ದರೂ, ಸ್ಪಷ್ಟ ಕಾರಣಗಳಿವೆ. ಮನೆ, ಮನೆಯ ಸಂಪ್ರದಾಯ, ಜಾತಿ ಆಚರಣೆಗಳು ಅವರಿಗೆ ಜುಗುಪ್ಸೆ ಹುಟ್ಟಿಸಿದ್ದು ಇವುಗಳಿಂದ ದೂರ ಹೋಗುವ (ಸ್ವತಂತ್ರಗೊಳ್ಳುವ) ಆತುರದಲ್ಲಿ ಸಿಕ್ಕ ರೇಲ್ವೆಬೋಗಿ ಮತ್ತು ಬಸ್ಸು ಹತ್ತಿ ಗುರಿ ರಹಿತ ಪ್ರಯಾಣ ಮಾಡುತ್ತಾರೆ. ಇದು ಅಪ್ಪ ಮಕ್ಕಳ ಘರ್ಷಣೆ (ವ್ಯಕ್ತಿ ಮತ್ತು ವ್ಯಕ್ತಿ) ಅನಕ್ಷರತೆ ಮತ್ತು ಅಕ್ಷರಸ್ಥರ ನಡುವಿನ ಸಂಘರ್ಷ(ದ್ವಂದ್ವಾತ್ಮಕತೆ)ವನ್ನೂ ಸೂಚಿಸುತ್ತದೆ. ಪ್ರಮುಖವಾಗಿ ನಾರಾಯಣನ ತಂದೆ ಶ್ರೀನಿವಾಸ ಅನಕ್ಷರಸ್ಥ. ಮಗನನ್ನು ತನ್ನ ಧೋರಣೆಗೆ ಮತ್ತು ಸ್ವಭಾವಕ್ಕೆ ಅನುಗುಣವಾಗಿ ತನ್ನ ಹತೋಟಿಯಲ್ಲಿ ಇಟ್ಟುಕೊಳ್ಳಬೇಕೆಂಬ ಹಟ ತಂದೆಯದು. ತಂದೆಯ ಧೋರಣೆಗೆ, ಸ್ವಭಾವಕ್ಕೆ ತಾನು ಒಳಗಾಗಿರಬಾರದು, ಅದರಿಂದ ಬಿಡಿಸಿಕೊಳ್ಳಬೇಕು, ಅದರಿಂದ ದೂರ ಹೋಗಬೇಕು ಎಂಬ ಹಂಬಲ ಮಗನದು. ಇದು ತಂದೆ ಮಕ್ಕಳ ಮಧ್ಯೆ ಸಾಮಾಜಿಕ ಬೆಳವಣಿಗೆಯಲ್ಲಿ ಹುಟ್ಟಿರಬಹುದಾದ ಜೀವನದೃಷ್ಟಿ(ಮೌಲ್ಯ)ಯ ತಾಕಲಾಟವಾಗಿದೆ. ಜೊತೆಗೆ ಇದು ಪಟ್ಟಣ ಮತ್ತು ಗ್ರಾಮಗಳ ನಡುವಿನ ಪರೋಕ್ಷ ಪೈಪೋಟಿಯನ್ನೂ ಸೂಚಿಸುತ್ತದೆ.

ಆದರೆ 'ನಿರಾಕರಣೆ' ಕಥೆಯ ಕೇಶವನ ನಿರ್ಧಾರಕ್ಕೆ ವ್ಯಕ್ತಿ (ಹಿರಿಯ ತಲೆಮಾರು) ಮತ್ತು ವ್ಯಕ್ತಿ (ಕಿರಿಯ ತಲೆಮಾರು)ಯ ಕರ್ಷಣೆಯ ಜೊತೆಗೆ ಸಾಮಾಜಿಕ ಘರ್ಷಣೆಯ ಸುಳಿವು ಇರುವುದನ್ನು ಅಧ್ಯಯನ ಗುರುತಿಸುತ್ತದೆ. ಬ್ರಾಹ್ಮಣ್ಯವನ್ನು ನಿರಾಕರಿಸಿ ಅಬ್ರಾಹ್ಮಣನಾಗುವ ಅವನ ಗುರಿಗೆ ಶೂದ್ರರ ತುಕ್ರನ ಸಾವು, ಅಂಗಾರ ಮತ್ತು ಅವನ ತಾಯಿಯ ಶೋಷಣೆಯು ಕಾರಣವಾಗಿದ್ದು ಇದನ್ನು ಕಣ್ಣಾರೆ ಕಂಡಿದ್ದಾನೆ. ಅಡಿಕೆ, ತೆಂಗು ಕೊನೆ ಕೀಳುವ, ಬೇಲಿ ಕಟ್ಟುವ, ಮಡಲು ಹೆಣೆವ, ಮುಡಿ ಕಟ್ಟುವ ಕಾಯಕ ಮಾಡುತ್ತಿದ್ದ ಶ್ರಮಜೀವಿ ತುಕ್ರ, ಕೇಶವನ ತಾಯಿ ಕೊಟ್ಟ ಚೂರು, ಪಾರು ಕಷಾಯ, ನೀರು ಮಜ್ಜಿಗೆಗಳನ್ನು ನಾತ ಬೀರುವ ಕೊಟ್ಟಿಗೆಯ ಮೂಲೆಯಲ್ಲಿ ಕುಳಿತು ಕುಡಿದು, 'ಅವು ಕೀಳು ಜಾತಿಯವು' ಅನ್ನಿಸಿಕೊಳ್ಳುವುದು ಕೇಶವನ ಮನಸ್ಸನ್ನು ಕಲಕುತ್ತದೆ. ಕಾಯಿ ಕೀಳುವಾಗ ಮರದಿಂದ ಬಿದ್ದು ಸತ್ತ ತುಕ್ರ, ಅನಾಥರಾದ ನರ್ಸಿ, ಅಂಗಾರರು, ಕಲ್ಕುಡನ ಶಾಪದ ಬಣ್ಣ ಬಳಿದ ಅಗ್ರಹಾರದ ಬ್ರಾಹ್ಮಣರು ಮನುಷ್ಯ ವರ್ಗಕ್ಕೆ ಸೇರಿದವರೆ ಎಂಬ ಪ್ರಶ್ನೆಗೆ ಕೇಶವನಲ್ಲಿ ಉತ್ತರವಿಲ್ಲ. ವ್ಯಾಸರಾಯ ಬಲ್ಲಾಳ ಅವರ 'ಹೆಜ್ಜೆ' ಕಾದಂಬರಿಯ ವಿದ್ಯಾಧರ, ಸಾವಿತ್ರಿಯರ ಗ್ರಾಮ ನಿರಾಕರಣೆಯ ಹಿಂದೆ ಇದೇ ರೀತಿಯ ವ್ಯಕ್ತಿ ಮತ್ತು ಸಮಾಜದ ಘರ್ಷಣೆಯನ್ನು ಕಾಣುತ್ತೇವೆ. 'ಕೇಶವ ಎಂಬ ಹೆಸರು ಕೆಸರಿನಂತೆ ತನ್ನನ್ನು ಮೆತ್ತಿಕೊಂಡಿದ್ದನ್ನು ಕಳಚಿಕೊಳ್ಳಲೆಂದಲ್ಲವಾ ತಾನು ಮುಂಬಯಿಗೆ ಪುಡ್ಚೋ (ಪಲಾಯನ) ಮಾಡಿದ್ದು'[೩೬]

ಎಂದು ಹೇಳುವ ಕೇಶವ ಬಿರಿಯಾನಿ ತಿಂದು ಬ್ರಾಹ್ಮಣ್ಯದ ಸಂಕೇತವಾದ ಜನಿವಾರವನ್ನು ಪಾಯಖಾನೆಗೆ ಬೀಸಾಕಿದರೆ, ಮನೆಯ ಒಳಗೆ ಹೊರಗೆ ಸುಧಾರಣೆ ಮಾಡುವ ಪ್ರಗತಿಪರ ಮನೋಭಾವದಿಂದ ವಿದ್ಯಾಧರ ಜನಿವಾರವನ್ನು ಬಿಚ್ಚಿ ಬೀಸಾಕುತ್ತಾನೆ.

> "ಅತ್ತೆ ಮಾವಯ್ಯ, ಕೇಳ್ತಾರೆಯೆ ಇದನ್ನೆಲ್ಲ? ದೊಡ್ಡ ಭಾವ ಹೋಟೆಲು ಇಡಲಿಕ್ಕೆ ಹೋದರು. ನೀವು ಊರೇ ಬೇಡಾಂತ?' 'ನನ್ನನ್ನೇ ಊರು ಓಡಿಸ್ತಾ ಇರುವಾಗ ನಾನೇನು ಮಾಡೋಕಾಗುತ್ತೆ ಸುವ್ವಿ?' 'ಯಾರಾದರೂ ನಿಮ್ಮನ್ನು ಊರು ಬಿಡಬೇಕೂಂತ ಹೇಳಿದ್ದಾರೆಯೆ?' 'ಪ್ರತ್ಯಕ್ಷವಾಗಿ ಹೇಳಿಲ್ಲ. ಆದರೆ ನಾವಿಬ್ಬರೂ ಇಲ್ಲಿಂದ ತೊಲಗಿದರೆ ಒಳ್ಳೆಯದೂಂತ ಅವರಿಗೆ ಅನಿಸ್ತಿರೋದು ಮಾತ್ರ ನಿಜ'... 'ಹೊಲೆಯರೊಂದಿಗೆ ಬೆರೆತು ಹೊಲೆಯರಾದ ನಾವಿಬ್ಬರು ಇಲ್ಲಿಂದ ದೂರ ಹೋದರೆ ಅಪ್ಪಯ್ಯನ ಮೇಲಿನ ಅಪವಾದ ತಪ್ಪುತ್ತೆ."[೨೬]

ವಿದ್ಯಾಧರ, ಸಾವಿತ್ರಿಯರ ಗ್ರಾಮ ನಿರಾಕರಣೆಯ ಸಂದರ್ಭದಲ್ಲಿ ಕೇಳುವ ಅವರ ಸಂಭಾಷಣೆಯಿಂದ ವಿದ್ಯಾಧರನ ಗ್ರಾಮ ನಿರಾಕರಣೆಯ ಹಿನ್ನೆಲೆಯಲ್ಲಿ ಎಲ್ಲೋ ಒಂದು ಕಡೆ ಸ್ವಾರ್ಥಭಾವ ಇದೆ ಎಂಬುದನ್ನು ಗುರುತಿಸುತ್ತೇವೆ. ತಂದೆಯನ್ನು ಮಹಾಲಿಂಗೇಶ್ವರ ದೇವಸ್ಥಾನದ ಮೊಕ್ತೇಸರ ಸ್ಥಾನದಲ್ಲಿ ಉಳಿಸಿಕೊಳ್ಳಲು, ಮೇಲ್ವರ್ಗದ ಸಮಾಜದಿಂದ ನಿರಾಕರಿಸಲ್ಪಟ್ಟ ವಿದ್ಯಾಧರ, ಸಾವಿತ್ರಿಯರು ಗ್ರಾಮ ನಿರಾಕರಿಸುತ್ತಾರೆಂಬುದು ಅಧ್ಯಯನದ ನಿಲುವಾಗಿದೆ.

ನಾರಾಯಣ, ನಾಗರಾಜ, ಕೇಶವ, ವಿದ್ಯಾಧರ-ಸಾವಿತ್ರಿಯರು ಸಮಾಜದ ಉಚ್ಚವರ್ಗಕ್ಕೆ ಸೇರಿದವರಾಗಿದ್ದು, ಸ್ವಸಂಸ್ಕೃತಿಯನ್ನು ಪ್ರಗತಿಪರ ನೆಲೆಯಲ್ಲಿ ತಿರಸ್ಕರಿಸಿದವರಾಗಿದ್ದಾರೆ. ಇವರ ನಿರಾಕರಣೆಯಾದರೂ ಯಾವ ಸ್ವರೂಪದ್ದು ಎಂದು ಚಿಂತಿಸಿದರೆ, ಬ್ರಾಹ್ಮಣ್ಯದ ಟೊಳ್ಳು, ಮೌಢ್ಯಗಳ ಜೊತೆಗೆ ಕೆಳವರ್ಗದವರ ಶೋಷಣೆ ಇವರ ಸ್ವಜಾತಿ ವಿಮರ್ಶೆಗೆ, ವಿಡಂಬನೆಗೆ, ನಿರಾಕರಣೆಗೆ ಕಾರಣಗಳಾಗಿವೆ. ಹೆಜ್ಜೆ ಕಾದಂಬರಿಯ ವಿದ್ಯಾಧರ, ಸಾವಿತ್ರಿಯರ ಹೊರತಾಗಿ, ಉಳಿದವರು ಸ್ಥಾಪಿತ ಹಿತಾಸಕ್ತಿಗಳ ವಿರುದ್ಧ ಹೋರಾಟವನ್ನು ನಿರ್ಧರಿಸುವುದಿಲ್ಲ, ಕೆಳವರ್ಗದ ಸಮಾಜವನ್ನು ಸಂಘಟಿಸುವುದಿಲ್ಲ. ಇವರ ಪ್ರತಿಭಟನೆ, ನಿರಾಕರಣೆ ಏನೇ ಇದ್ದರೂ ಅದು ವ್ಯಕ್ತಿಗತ ಮತ್ತು ಕೌಟುಂಬಿಕ ನೆಲೆಯಲ್ಲಿ ಸ್ವಜಾತಿಯ ನಿಂದೆ, ವಿಡಂಬನೆಗಳಲ್ಲಿ ಪರಿಸಮಾಪ್ತಿಯಾಗಿದೆ. ಇವರೆಲ್ಲ ಪಲಾಯನವಾದಿಗಳೂ ಆಗಿದ್ದರಿಂದ ಫಲವು ಶೂನ್ಯ ಮತ್ತು ಇವರ ನಿರಾಕರಣೆ ಸಾಮಾಜಿಕ ವ್ಯವಸ್ಥೆಯ ಮೇಲೆ ಯಾವ ಪ್ರಗತಿಪರ ಪರಿಣಾಮ ಬೀರುವುದಿಲ್ಲ. ಈ ಸಂದರ್ಭಗಳಲ್ಲಿ (ವಿಶೇಷವಾಗಿ ನಾರಾಯಣ, ಕೇಶವರ ಸಂದರ್ಭ) ಜಮೀನ್ದಾರಿ ವ್ಯವಸ್ಥೆಯ ಕುಡಿಗಳು ತಮ್ಮ ಕ್ರೌರ್ಯದ ಬಿಗಿಯನ್ನು ಕಳೆದುಕೊಂಡು, ಜನಪರ ನಿಲುವಿನತ್ತ ಸಾಗಿರುವ ಸಾಹಿತ್ಯಕ ಸನ್ನಿವೇಶಗಳು ಚೇತೋಹಾರಿಯಾಗಿವೆ. ಇವರಿಬ್ಬರೂ ಸುಶಿಕ್ಷಿತ ಯುವಕರಾಗಿ, ಸಾಮಾನ್ಯ ಜನತೆಯ ಸೌಹಾರ್ದಯುತ ಸಂಬಂಧಕ್ಕೆ ಹಾತೊರೆಯುವ ಇವರ ಆಶಯವು ಆಧುನಿಕ ಶಿಕ್ಷಣದ ಸಫಲತೆಯಾಗಿದೆ ಎಂಬ ನಿಲುವಿಗೆ ಅಧ್ಯಯನ ಬರುತ್ತದೆ.

**ಹಳೆ-ಹೊಸ ತಲೆಮಾರುಗಳ ಆಸಕ್ತಿ ಮತ್ತು ನಿರಾಕರಣೆ : ಔದ್ಯೋಗಿಕ ನೆಲೆಯಿಂದ**

ಭಾರತೀಯ ಸಮಾಜದಲ್ಲಿ ಸಾಂಪ್ರದಾಯಿಕ ಉದ್ಯೋಗ ಪದ್ಧತಿಯು ಪುರಾತನ ಕಾಲದಿಂದಲೂ ನಡೆದುಕೊಂಡು ಬಂದಿದೆ. ಒಬ್ಬ ವ್ಯಕ್ತಿ/ಕುಟುಂಬದ ವೃತ್ತಿ ಆತನ ಜಾತಿ, ವರ್ಣವನ್ನು ಅವಲಂಬಿಸಿದ್ದು, ಆಯಾ ಜಾತಿಯವರು ಇಂತಹುದೆ ನಿರ್ದಿಷ್ಟ ವೃತ್ತಿಯನ್ನು ಕೈಗೊಳ್ಳಬೇಕೆಂಬ ನಿಯಮ ಜಾತಿ, ವರ್ಣ ವ್ಯವಸ್ಥೆಗೆ ಎಡೆಮಾಡಿಕೊಟ್ಟಿದೆ. ಇಂದಿನ ಜಾಗತೀಕರಣ, ಔದ್ಯೋಗೀಕರಣಗಳ ಸಂದರ್ಭದಲ್ಲಿ ಶಿಕ್ಷಣವೆಂಬ ಹೊಸ ಗಾಳಿಗೆ ತೆರೆದುಕೊಂಡ ಯುವಜನತೆ ಈ ಕಟ್ಟುಪಾಡಿಗೆ ಒಳಪಡದೆ ಕುಟುಂಬ ವೃತ್ತಿಯನ್ನು ತಿರಸ್ಕರಿಸಿ ಗ್ರಾಮ/ನಗರ ನಿರಾಕರಿಸುವುದು ಮುಂಬಯಿ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಕಂಡುಬರುತ್ತದೆ. ವ್ಯಾಸರಾಯ ಬಲ್ಲಾಳ ಅವರ 'ಹೆಜ್ಜೆ' ಕಾದಂಬರಿಯ ತರ್ಕತೀರ್ಥ ಶ್ರೀಕಂಠಶಾಸ್ತ್ರಿಗಳಿಗೆ ತಮ್ಮ ಹಿರಿಯ ಮಗ ಗಂಗಾಧರ ತಮ್ಮ ಹಾಗೆ ವಿದ್ವತ್ತನ್ನು ಸಂಪಾದಿಸದಿದ್ದರೂ, ಲೌಕಿಕ ವ್ಯವಹಾರ ಅರಿತು ತಮ್ಮ ಉತ್ತರಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಾ ಇರಲೆಂಬ ಆಸೆಯಿದೆ. ಆದರೆ ಇಂಗ್ಲೀಶ್ ಭಾಷೆಗೆ ಮತ್ತು ಸಾಮಾಜಿಕ ಬದಲಾವಣೆಗೆ ಸ್ಪಂದಿಸಿದ ಗಂಗಾಧರ ಶೋಕಿ ಜೀವನ ನಡೆಸದೇ ಈ ಬ್ರಾಹ್ಮಣರ ಸಂತೆಯಲ್ಲಿ ಸಾಯುವತನಕವೂ ಕೊರಗಿ ಬಾಳಬೇಕೆ ಎಂದು ಯೋಚಿಸಿ, ಒಂದು ದಿನ ತನ್ನ ಕೋಣೆಯಲ್ಲಿ ಚೀಟಿ ಬರೆದಿಟ್ಟು ಹೆಂಡತಿ ಮಕ್ಕಳ ಜೊತೆ ಸಕಲೇಶಪುರಕ್ಕೆ ಹೋಟೆಲ್ ನಡೆಸಲು ಹೊರಟು ಹೋಗುತ್ತಾನೆ.

ವ್ಯಾಸರಾವ್ ನಿಂಜೂರ ಅವರ 'ಉಸಿರು' (೧೯೬೭) ಕಾದಂಬರಿಯ ನಾರಾಯಣನೂ ಆರ್ಥಿಕ ಸ್ವಾತಂತ್ರ್ಯ ಬಯಸುವ ಹೊಸ ಸಂವೇದನೆಯ ಯುವಕನಾಗಿದ್ದು ಅಪ್ಪನ ಆಸೆ, ಆಕಾಂಕ್ಷೆಗೆ ಮಣಿಯದೆ ಗ್ರಾಮ ನಿರಾಕರಿಸಿ ಹೋಟೆಲ್ ಹಾಕಲು ಮೈಸೂರಿಗೆ ಹೊರಟು ಹೋಗುತ್ತಾನೆ.

ಶ್ರೀಕಂಠಶಾಸ್ತ್ರಿಗಳು ಮತ್ತು ಅನಂತಯ್ಯನವರು ಹಳೆ ತಲೆಮಾರುಗಳನ್ನು ಪ್ರತಿನಿಧಿಸುವ ಮೇಲ್ಜಾತಿಯ ವ್ಯಕ್ತಿಗಳಾಗಿದ್ದಾರೆ. ಇವರ ವಿರೋಧ ಏನಿದ್ದರೂ ಅದು ಮಕ್ಕಳು ಹೋಟೇಲು ಇಟ್ಟು ಅನ್ನ ವಿಕ್ರಯಮಾಡಿ, ಎಂಜಲು ತೊಳೆವ ಕೆಲಸದ ಕುರಿತದ್ದಾಗಿದೆ. ಇವರ ದೃಷ್ಟಿಯಲ್ಲಿ ಅದು ಅಬ್ರಾಹ್ಮಣ ಕೆಲಸವೆನಿಸಿದೆ. ಆದರೆ  ಮಕ್ಕಳ (ಓಡಿ ಹೋದ ಗಂಗಾಧರ, ನಾರಾಯಣ) ದೃಷ್ಟಿಯಲ್ಲಿ ಅದು ವ್ಯವಹಾರ, ಆರ್ಥಿಕತೆಯ ಹೊಸ ಸಂವೇದನೆಯಾಗಿದೆ. ತಂದೆಯ ಮುಂದೆ ಅಣ್ಣನ ಪಲಾಯನವನ್ನು ವಿದ್ಯಾಧರ ಸಮರ್ಥಿಸುವ ರೀತಿ ಇದನ್ನು ಪುರಸ್ಕರಿಸುತ್ತದೆ.

> '...ನೀವು ಏನೇ ಹೇಳಿದರೂ ಹೋಟೆಲ್ ಇಡುವುದು ಅಬ್ರಾಹ್ಮಣ ಕೆಲಸವೇನಲ್ಲ. ಎಲ್ಲಾ ಹೋಟೆಲು ಆರಂಭಿಸಿ ಬೋರ್ಡ್ ತಗಲಿಸುವುದು 'ಉಡುಪಿ ಬ್ರಾಹ್ಮಣರ ಕಾಫಿ ಹೋಟೆಲು' ಎಂದೇ..'[೩೮]

'ಉಸಿರು' ಕಾದಂಬರಿಯ ಅನಂತಯ್ಯನವರು, ತಮ್ಮ ಮಗ ಗೇಣಿದಾರರ ಉಸ್ತುವಾರಿ ನೋಡಿಕೊಂಡು ಗೇಣಿ, ಹಸಿರುವಾಣಿ, ಬಿಟ್ಟಿ ಚಾಕರಿಗಳನ್ನು ಪಡೆದು ತಾನು ನಡೆಯುತ್ತಿರುವ ದಾರಿಯಲ್ಲಿ (ಸಂಪ್ರದಾಯ/ವಂಶಾಡಳಿತ) ಬರಲಿ ಎಂದು ಆಶಿಸುತ್ತಾರೆ. ಆದರೆ ತಾಯಿ ಮಗನ ಗ್ರಾಮ ನಿರಾಕರಣೆಯನ್ನು ಸಮರ್ಥಿಸುತ್ತಾಳೆ.

> 'ಈಗ ಯಾರೂ ಮಾಡುವ ಕೆಲಸ ಇದು! ಕಾರಂತರ ಮಗ ಹೋಟೇಲು ಇಟ್ಟಿಲ್ಲವೆ? ಕಲ್ಲೂರರ ತಮ್ಮ ಹೋಟೇಲಿನಲ್ಲಿ ಕೆಲಸಕ್ಕಿಲ್ಲವೆ? ನಿಮ್ಮ ಹತ್ತಿರದ ಸ್ನೇಹಿತ-ಕೃಷ್ಣರಾಯರು ಕಲ್ಯಾಣಪುರದಲ್ಲಿ ಹೊಟೇಲು ತೆರೆದಿದ್ದಾರಲ್ಲ'[೩೯]

ಇಂತಹ ಮಾತುಗಳಲ್ಲಿ ಸಾಂಪ್ರದಾಯಿಕ ಕುಟುಂಬಗಳಲ್ಲಿ ವ್ಯಕ್ತವಾಗುವ ವಿರೋಧಾತ್ಮಕ ಅಭಿಪ್ರಾಯ ಮತ್ತು ಗ್ರಹಿಕೆಗಳನ್ನು (ದ್ವಂದ್ವಾತ್ಮಕತೆ) ಗಮನಿಸುತ್ತೇವೆ. ಒಂದು ವಸ್ತು, ವಿಷಯ ಒಂದು ತಲೆಮಾರಿಗೆ ಮೌಲ್ಯಾಧಾರಿತವಾಗಿ ಕಂಡರೆ, ಇನ್ನೊಂದು ತಲೆಮಾರಿಗೆ ಅಪಮೌಲ್ಯಗೊಂಡು ಗೊಡ್ಡಾಗಿ ಕಾಣುತ್ತದೆ. ಇದು ವ್ಯಕ್ತಿ ಮತ್ತು ವ್ಯಕ್ತಿ ಅಥವಾ ವ್ಯಕ್ತಿ ಮತ್ತು ಕೌಟುಂಬಿಕ ಸಂಘರ್ಷವೆನಿಸಿದರೂ ಪ್ರಮುಖವಾಗಿ ಹಳೆ ಮತ್ತು ಹೊಸ ಮೌಲ್ಯಗಳ, ಗ್ರಾಮ ಮತ್ತು ನಗರಗಳ ಸಂಘರ್ಷ(ದ್ವಂದ್ವ)ವೆಂದೇ ಅಧ್ಯಯನ ವ್ಯಾಖ್ಯಾನಿಸುತ್ತದೆ. ಇದಕ್ಕೆ ಹೊಸ ಜನಾಂಗದ ಆರ್ಥಿಕ ನೀತಿಯ ಅರಿವು ಕಾರಣ ಎನ್ನಬಹುದು. ಅನ್ನವಿಕ್ರಯ ಪಾಪ ಕಾರ್ಯವೆಂದು ತಿಳಿದಿದ್ದ ಕಾಲಧರ್ಮದಲ್ಲಿ ಆಧುನಿಕತೆಯ ಗಾಳಿ, ಗಾಂಧಿ, ಹೋಟೆಲ್, ವರ್ಣಸಂಕರ  ಇವೆಲ್ಲ ಕಾಲದ ಮಹಿಮೆಯಾಗಿ ಯುವಕರು ಹೊಸ ಗಾಳಿಗೆ ಸ್ಪಂದಿಸುವ ರೀತಿ ಇದಾಗಿದೆ ಮತ್ತು ಹಳೆಯ ನಂಬಿಕೆಗಳ ಶಿಥಿಲತೆ ಇಲ್ಲಿ ಕಂಡುಬರುತ್ತದೆ. ಅಂದು (ಹೆಜ್ಜೆ ಕಾದಂಬರಿ ಕಾಲ ಕ್ರಿ.ಶ. ೧೦೩೦, ಉಸಿರು ಕಾದಂಬರಿಯ ಕಾಲ ೧೯೬೭) ಹಿರಿಯರ ಮನೋಭಾವದ ವಿರುದ್ಧ ಬದುಕು ಅರಸುತ್ತ ಗ್ರಾಮ ನಿರಾಕರಿಸಿದ ಗಂಗಾಧರ, ನಾರಾಯಣರು ಹಳೆಯ ಸಾಮಾಜಿಕ ಮೌಲ್ಯಗಳಿಗೆ ಸೋಲದೆ ಹೊಸ ರೀತಿಯ ಭದ್ರತೆಯನ್ನು ಅರಸುವತ್ತ ನಡೆಯುವುದು ವಿಶೇಷವಾಗಿದೆ.

ಇದು ಕೇವಲ ಮೇಲ್ವರ್ಗದ ಕುಟುಂಬಗಳಲ್ಲಿ ನಡೆಯುವ ದ್ವಂದ್ವ, ಕರ್ಷಣೆಯಲ್ಲ, ಬದಲಿಗೆ ಕೆಳವರ್ಗ/ಶ್ರಮಿಕ ವರ್ಗದ ಸುಶಿಕ್ಷಿತರಲ್ಲಿ ನಡೆಯುವ ದ್ವಂದ್ವ, ಕರ್ಷಣೆಯೂ ಆಗಿದೆ. ಆರ್. ವಿ. ಭಂಡಾರಿ ಅವರ 'ತಲೆಮಾರು' ಕಾದಂಬರಿಯ ಗಂಪು ಅವನ ಮಗ ವೀರೇಶ ಹಾಗೂ ಭಂಡಾರಿ ಮಾಸ್ತರರು ಅವರ ಮಗ ಲೋಕೇಶರು ಇಂತಹ ಹೊಸ ಮತ್ತು ಹಳೆಯ ತಲೆಮಾರುಗಳ ಮುಖಾಮುಖಿಗೆ ಇನ್ನೊಂದು ಜೋಡಿ ಸಾಕ್ಷಿಯಾಗಿದ್ದಾರೆ. ವೀರೇಶ ತಲೆ ತಲಾಂತರದಿಂದ ಬಂದ ವಾದ್ಯ ನುಡಿಸುವ ವೃತ್ತಿಯನ್ನು ತಿರಸ್ಕರಿಸಿ (ಮೇಳ ಸೇರಲು ನಿರಾಕರಿಸಿ), ಜಾತಿ ವ್ಯವಸ್ಥೆಗೆ ಮುಖಾಮುಖಿಯಾಗುತ್ತಾನೆ.

> 'ಇದು ಮದುವೆ ಅಗ್ಗು. ವಾದ್ಯಕ್ಕೆ ಎರಡು ಮೇಳ ಮಾಡಿದರೆ ಬರ್ತಿಯಾ?' ಎಂದು ಅಪ್ಪ ಮಗನನ್ನು ಕೇಳಿದ. 'ಇಲ್ಲ ನನಗೆ ಈ ತಿಂಗಳಪೂರ್ತಿ ಕೆಲಸ ಇದೆ. ನಾನು ಬರಲಾರೆ' ಎಂದ. 'ಹಂಗಾರ ಮಳೆಗಾಲಕ್ಕೆ ತರಡು ತಿಂದರಾಯ್ತು' ಅಪ್ಪ ಅಂದ. 'ಏನು ನನ್ನನ್ನೊಂದು ಹೊರಗೆ ಹಾಕುವ ಆಲೋಚನೆಯೆ? ಹೆಚ್ಚೆಂದರೆ ಒಂದು ವರ್ಷ, ಅದರೊಳಗೆ ನಾನೇ ಹೊರಬಿದ್ದು ಹೋಗಲುಬಹುದು' ಎಂದ ವೀರೇಶ.[೪೦]

ಕುಲವೃತ್ತಿ ಹಾಗೂ ಗ್ರಾಮ ನಿರಾಕರಣೆ ಕುರಿತ ಸೂಚನೆಯನ್ನು ವೀರೇಶ ಕೊಡುತ್ತಾನೆ. ಇಲ್ಲಿ ಅಪ್ಪ ಗಂಪುವಿನ ತಲ್ಲಣ, ತೀಕ್ಷ್ಣ ಪ್ರತಿಕ್ರಿಯೆ, ಹೊಸಪೀಳಿಗೆಯ ಬಹುನಿರೀಕ್ಷಿತ ಅಪೇಕ್ಷೆ ಎದ್ದು ಕಾಣುತ್ತದೆ. ವೀರೇಶನಂತೆ ದ್ವಂದ್ವದಲ್ಲಿ ಸಿಲುಕದೆ ತನ್ನಷ್ಟಕ್ಕೆ ತಾನು ಸ್ಪಷ್ಟವಾಗಿ ಬಿಡುವ ಇನ್ನೊಂದು ಪಾತ್ರ ಭಂಡಾರಿ ಮಾಸ್ತರರ ಮಗ ಲೋಕೇಶನದು. ತಂದೆಯ ಆಸೆಯಾದ (ಅಪ್ಪನಂತೆ ಮಗ ಮೇಷ್ಟ್ರು ಆಗುವುದು) ಸುತಾರಾಂ ಒಪ್ಪದೆ ಶಿಕ್ಷಕರ ತರಬೇತಿಗೆ ಹೋಗಲು ತಿರಸ್ಕರಿಸಿ ಪದವಿ ಓದಲು ಹುಬ್ಬಳ್ಳಿಗೆ ಹೊರಟು ಹೋಗುತ್ತಾನೆ. ಭಿಕ್ಕೆಯನ್ನಾದರೂ ಬೇಡಿಯೇನೇ ಹೊರತು ಮಾಸ್ತರಕಿ ಮಾಡುವುದಿಲ್ಲ ಎಂಬ ಅವನ ಮಾತು, ಗ್ರಾಮ ನಿರಾಕರಣೆಯೊಂದಿಗೆ ಹಳೆಯ(ಸಾಂಪ್ರದಾಯಿಕ ವೃತ್ತಿ)ದನ್ನು ತಿರಸ್ಕರಿಸುವ ಸ್ಪಷ್ಟ ನಿರ್ಧಾರವಾಗಿದೆ. ನಾರಾಯಣ, ಗಂಗಾಧರ, ವೀರೇಶ, ಲೋಕೇಶರು ಸಾಂಪ್ರದಾಯಿಕ ವೃತ್ತಿ ನಿರಾಕರಿಸುವ ಸಾಂಕೇತಿಕ ಪಾತ್ರಗಳಾಗಿದ್ದಾರೆ. ಜನರು ಮಾಡುವ ಕಾರ್ಯಗಳಿಂದಾಗಿ ವಿವಿಧ ಜಾತಿಗಳ ಸೃಷ್ಟಿಯಾಯಿತೋ ಅಥವಾ ವಿವಿಧ ಜಾತಿಗಳಿಗೆ ಅನುಗುಣವಾಗಿ ಕಾರ್ಯಗಳ ಹಂಚಿಕೆಯಾಗಿತೋ ಎನ್ನುವುದು ಇಲ್ಲಿ ದ್ವಿತೀಯ ಮಹತ್ವ ಪಡೆದ ಅಂಶವಾಗಿದೆ. ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಜನರು ಮಾಡುವ ಕಾರ್ಯಗಳಿಗೂ, ಸಾಮಾಜಿಕವಾಗಿ ಅವರಿಗೆ ಸಿಗುವ ಸ್ಥಾನ-ಮಾನಗಳಿಗೂ ಸಂಬಂಧ ಗಾಢವಾಗಿದೆ ಎಂಬುದು ಪ್ರಾಥಮಿಕ ಮತ್ತು ವಾಸ್ತವಿಕ ಅಂಶವೆನ್ನಬಹುದು. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಶಿಕ್ಷಣಕ್ಕೆ ತೆರೆದುಕೊಂಡ ಕೆಳ, ದಲಿತ ವರ್ಗದ ಯುವಕರು ಔದ್ಯೋಗಿಕ ಕ್ಷೇತ್ರದಲ್ಲಿ ತಮಗೆ ಸಿಕ್ಕಿದ ಅವಕಾಶಗಳನ್ನು ಬಾಚಿಕೊಳ್ಳುತ್ತಿರುವುದು ಕಂಡುಬರುತ್ತದೆ. ನಾವಿತನ ಮಗ ನಾವಿತ, ಸಮಗಾರನ ಮಗ ಸಮಗಾರನಾಗಿ ಮುಂದುವರೆಯುತ್ತ ವರ್ಣವ್ಯವಸ್ಥೆಯನ್ನು ಜೀವಂತವಾಗಿಡುವ ಅಪಾಯದಿಂದ ದೂರ ಸರಿದು, ಸಮಾನ ವೃತ್ತಿ ಹಕ್ಕುಗಳನ್ನು ಹೊಂದುತ್ತಿರುವುದು ಆಶಾದಾಯಕವೆಂಬ ನಿಲುವಿಗೆ ಅಧ್ಯಯನ ಬರುತ್ತದೆ. ಇನ್ನು ವೃತ್ತಿ ವಿಮೋಚನೆಯ ಸಂದರ್ಭದಲ್ಲಿ ಹಳೆ ತಲೆಮಾರಿನ ಪಾತ್ರಗಳು ಅನುಭವಿಸುವ ದ್ವಂದ್ವ, ತಲ್ಲಣಗಳು ಯುವಕರಲ್ಲಿ ಕಾಣದಿದ್ದರೂ, ಗ್ರಾಮ ನಗರಗಳ ಭಾವನಾತ್ಮಕ ದ್ವಂದ್ವ ಅವರನ್ನು ಕಾಡುತ್ತಿರುವುದು ಕಂಡುಬರುತ್ತದೆ. ಹೋಟೇಲ್ ಉದ್ಯಮ ಮಾತ್ರವಲ್ಲದೆ ಇಂದಿನ ಐ.ಟಿ., ಬಿ.ಟಿ., ಸಾಫ್ಟವೇರ್ ಕಂಪನಿಗಳಲ್ಲಿ ಉದ್ಯೋಗ ಮಾಡುತ್ತಿರುವ ಯುವಕರ ದೈಹಿಕ, ಮಾನಸಿಕ ಅನಾರೋಗ್ಯದ ಅಂಕಿ ಅಂಶಗಳು ಈ ದ್ವಂದ್ವವನ್ನು ಸಾಬೀತುಪಡಿಸುತ್ತವೆ.

## ವ್ಯಕ್ತಿ ಮತ್ತು ವ್ಯಕ್ತಿ : ಅಹಂ, ಹಠಗಳು ಮತ್ತು ನಿರಾಕರಣೆ

ಕೇಶವ ಮಳಗಿ ಅವರ 'ಕಡಲ ತೆರೆಗೆ ದಂಡೆ' ಕತೆಯ ಯದುಪತಿ ಕಾಕಾನ ಗ್ರಾಮ ನಿರಾಕರಣೆಗೆ ವ್ಯಕ್ತಿ ಮತ್ತು ವ್ಯಕ್ತಿಗಳ ನಡುವಿನ ಬದುಕಿನ ಮೌಲ್ಯ ಕುರಿತ ಕರ್ಷಣೆ ಕಾರಣವಾಗಿದೆ. ಕೇದಗೆ ಬಣ್ಣದ, ಎತ್ತರದ ನಿಲುವಿನ ಯದುಪತಿ ಮಾಸ್ತರರದು ಶಾಂತಸ್ವಭಾವದ, ನಡೆನುಡಿಯಲ್ಲಿ ಶುದ್ಧತೆ ಕಾಪಾಡಿಕೊಂಡ, ಇಡೀ ಗ್ರಾಮದಲ್ಲಿ ಗೌರವಾನ್ವಿತ ವ್ಯಕ್ತಿತ್ವವಾದರೆ, ಹೆಂಡತಿ ಭೀಮಕ್ಕಳದು ಹೇಳಿದ್ದು ನಿಂತ ಜಾಗದಲ್ಲಿ, ನಿಂತ ವೇಳೆಯಲ್ಲಿ ನಡೆಯಬೇಕೆನ್ನುವ ಹಟಮಾರಿ ಸ್ವಭಾವ. ಅವಳನ್ನು ತಿದ್ದಲು ಮಾಸ್ತರು ಬಹಳ ಪ್ರಯತ್ನಿಸಿ ವಿಫಲರಾಗುತ್ತಾರೆ. ಇಂತಹ ವಿಷಮ ಸಂಸಾರದಲ್ಲಿ ಬಹಳ ದಿನಗಳ ನಂತರ ಯಲಗುರೇಶನೆಂಬ ಗಂಡು ಮಗ (ಹುಟ್ಟುವಾಗಲೆ ವಿಕಲಚೇತನ) ಹುಟ್ಟಿ, ತಾಯಿ, ತಾಯಿಯ ತಮ್ಮ ಕಿಟ್ಟಪ್ಪ ಇವರ ಪಿತೂರಿಯಿಂದ ಸಾವನ್ನಪ್ಪುತ್ತಾನೆ. ಕಾಕಾನ ಪಾಲಿಗೆ ಬದುಕು ಬೇಡವಾಗಿ/ಭಾರವಾಗಿ ಹೆಂಡತಿಯನ್ನು ತಿದ್ದುವ ವಿಷಯದಲ್ಲಿ ಭ್ರಮನಿರಸನವಾಗುತ್ತದೆ. ಅದೇ ದಿನ ರಾತ್ರಿ ಸುರಿವ ಮಳೆಯಲ್ಲಿ ಯದುಪತಿ ಕಾಕಾ ಮನೆ ತೊರೆದು ಹೊರಟು ನಿಲ್ಲುತ್ತಾನೆ. ಹೋಗುವಾಗ ಅಡ್ಡಗಟ್ಟಿದ ಸಾಕುಮಗು ಅಚ್ಯುತನಿಗೆ,

> "ನಿನ್ನ ಅಬಚಿಯನ್ನ ದೇವರಾಂಗ ಪೂಜಿಸಿದೆ. ಆಕೀ ಶಕ್ತಿ ದೇವತೆ, ಸೃಷ್ಟಿ ದೇವತೆ, ನಿಸರ್ಗ ದೇವತೆ ಅನ್ನೋದು ಗೊತ್ತಿತ್ತು. ಆಕೀಗೆ ತಿರುಗಿ ಬೀಳಬಾರದಂತ ಆಕಿ ಹಂಗೇನೇ ನಡಕೊಂಡೆ. ಅವಳಿಗೆ ಹೇಳಿದ್ದನ್ನು ಮಾಡುವ, ಸೃಷ್ಟಿಸುವ ಶಕ್ತಿಯಿತ್ತು. ನನಗೆ ಶಕ್ತಿಯನ್ನು ಪೂಜಿಸುವ ಭಕ್ತಿ ಮಾತ್ರ ಇತ್ತು. ಆದರೆ ನನ್ನ ಭಕ್ತಿ ಅವಳನ್ನು ಒಲಿಸಲಿಲ್ಲ. ಅವಳ ಶಾಕ್ತವೆಲ್ಲ ಕರಗಿ ಶಾಂತವಾಗಲಿ, ಸಾಧ್ಯವಾದ್ರ ಆಗ ಬರತೀನಿ ಎಂದದ್ದೇ ಆ ಕಡೆ ತಿರುಗಿ ಓಡುವ ಶೈಲಿಯಲ್ಲಿ ನಡೆದು ಹೋದ."[೧೧]

ಈ ಮಾತುಗಳು ಎರಡು ವಿರುದ್ಧ ಧ್ರುವಗಳಂತಿದ್ದ ಕಾಕಾ, ಅಬಚಿಯರ ವಿಷಮ ಸಂಸಾರದ ವಿಷಯ ಹಾಗೂ ಯದುಪತಿ ಕಾಕಾನ ಸಂಸಾರ ತ್ಯಾಗದ ಗುಟ್ಟನ್ನು ಬಿಚ್ಚಿಡುತ್ತವೆ. ಜೀವನದಲ್ಲಿ ಯಾವ

ಮೌಲ್ಯವನ್ನು ನಂಬಿಕೊಂಡು ಕಾಕಾ ಅದರಂತೆ ನಡೆದು ಬಂದಿದ್ದನೋ, ಅದಕ್ಕೆ ವ್ಯತಿರಿಕ್ತ ಘಟನೆಗಳು ಕುಟುಂಬದಲ್ಲಿ ಘಟಿಸಿದಾಗ ಸಂಸಾರ, ಮಕ್ಕಳು, ಗ್ರಾಮಗಳನ್ನು ನಿರಾಕರಿಸಿ ಪಲಾಯನ ಮಾಡುತ್ತಾನೆ. ಇಲ್ಲಿ ವ್ಯಕ್ತಿ ಮತ್ತು ವ್ಯಕ್ತಿಗಳ ನಡುವಿನ ಮೌಲ್ಯಗಳ ಘರ್ಷಣೆಯನ್ನು ಗುರುತಿಸುತ್ತೇವೆ. ಒಳ್ಳೆಯದು ತನಗೆ ಬೇಡವಾದದ್ದನ್ನು ನಿರಾಕರಿಸಿ ದೂರ ಹೋಗುವುದನ್ನು ಕಾಣುತ್ತೇವೆ. ಶಾಂತಿನಾಥ ದೇಸಾಯಿ ಅವರ 'ಬೀಜ' ಕಾದಂಬರಿಯ ಶ್ರೇಯಾಂಸ ತಂದೆಯ ಅಹಂ, ಹಠಗಳನ್ನು ಮುರುಟಿ ಹಾಕಲು ಗ್ರಾಮ ನಿರಾಕರಣೆ ಮಾಡುತ್ತಾನೆ.

> '...ಯಾಕಂತಂದ್ರ ಅಂವಗ ಅಹಂ ಜಾಳ, ದೇವರ ಮ್ಯಾಲ ಭಕ್ತಿ ಇದ್ದಿಲ್ಲ, ಯಾವ ಗುರು ಅಂತ ಇಲ್ಲ, ಸ್ವಾಮಿ ಇಲ್ಲ, ಯಾರು ಇಲ್ಲ. ಬರಿ ಅಹಂ! ನೀ ಅವನ ಅಹಂಭಾವಕ್ಕ ಹೊಡೆತ ಕೊಟ್ಟೆ ಅಂತೇ ನಿನಗ ಹೊರಗ ಹಾಕಿ ಬಿಟ್ಟ.' 'ಇಷ್ಟೆ ಜಗತ್ತು ಬದಲಾಗ್ತದ ಅನ್ನೋದ ಅಂವ್ಗ ಅಷ್ಟ ಗೊತ್ತಾಗ್ತಿದ್ದಿಲ್ಲ. ಎಲ್ಲಾನೂ ತನ್ನ ಸ್ವಂತ ದೃಷ್ಟಿಲೇ ನೋಡಾಂವ."[1]

ಕಲ್ಯಾಣಶೆಟ್ಟರ ಮಾತುಗಳು ಶ್ರೇಯಾಂಶನ ಅಪ್ಪ ಹಠಮಾರಿ ಮಾತ್ರ ಆಗಿರಲಿಲ್ಲ, ಜೊತೆಗೆ ಸಾವಯವ ಸಂಸ್ಕೃತಿಯನ್ನು ಪ್ರತಿನಿಧಿಸುವ ನಾಸ್ತಿಕ, ಮುಂಗೋಪಿಯೂ ಆಗಿದ್ದ ಎಂಬುದನ್ನು ಹೇಳುತ್ತವೆ. ಬೆಳೆಯುವ ಮಕ್ಕಳ ಹಕ್ಕುಗಳನ್ನು, ಪ್ರಕೃತಿ ಸಹಜ ಆಸೆಗಳನ್ನು ತನ್ನ ದಮನ, ದಬ್ಬಾಳಿಕೆ ಮೂಲಕ ಹತ್ತಿಕ್ಕಲೆತ್ನಿಸುವ ಪರಿಸರ ಮತ್ತು ಯಾಜಮಾನ್ಯ ಸಂಸ್ಕೃತಿಯ ವಿರುದ್ಧ ವ್ಯಕ್ತಿ (ಯೌವನದಲ್ಲಿ) ಹೋರಾಡುತ್ತಾನೆ. ಇಂತಹ ಹೋರಟದಲ್ಲಿ ಅವನು ಸೋತರೂ ಆಶಾವಾದಿಯಾಗಿ ಉಳಿಯುವುದು ಅಪಾರವಾದ ಆತ್ಮವಿಶ್ವಾಸದ ಪ್ರತೀಕವಾಗಿದೆ ಎಂಬ ಅಂಶವನ್ನು ಶ್ರೇಯಾಂಶನ ಬದುಕು ನಿರೂಪಿಸಿದೆ. ಇಲ್ಲಿ, ಶ್ರೇಯಾಂಶ ಮತ್ತು ಅವನ ತಂದೆಯ ನಡುವೆ ನಡೆದದ್ದು ವೈಯಕ್ತಿಕ ಪ್ರತಿಷ್ಠೆಯ ಕರ್ಷಣವಾಗಿದೆ. ಇದಕ್ಕೆ ಅಪ್ಪನ ನಡತೆ, ಹಠ, ಅಮ್ಮ ಇತ್ಯಾದಿ ಏನೇ ಕಾರಣಗಳಿದ್ದರೂ ಶ್ರೇಯಾಂಶನ ಗ್ರಾಮ ನಿರಾಕರಣೆ ಎರಡು ತಲೆಮಾರುಗಳ ಅಭಿರುಚಿ, ಆಸಕ್ತಿಗಳ ಭಿನ್ನತೆಯಿಂದ ಹುಟ್ಟಿದ ಬಿರುಕಾಗಿ ಉಳಿಯುತ್ತದೆ. ಮನೆಯಲ್ಲಿ ಪಾಲಕರಾದ ತಂದೆ ತೋರುವ ಅತಿ ದರ್ಪ, ಶಿಸ್ತುಗಳು, ಮಕ್ಕಳು ಕವಲು ಹಾದಿ (ಬದಲಾದ ಮೌಲ್ಯಗಳಿಗಾಗಿ) ತುಳಿಯಲು ಕಾರಣವಾಗುವ ನಿರಾಕರಣೆಯನ್ನು ಅಧ್ಯಯನ ಗುರುತಿಸಿದೆ. ಇಲ್ಲಿ ಹಿರಿಯ ಮತ್ತು ಕಿರಿಯ ತಲೆಮಾರಿನ ಗೊಂದಲಗಳು ಭಿನ್ನಭಿನ್ನವಾಗಿವೆ. ಶ್ರೇಯಾಂಸನ ತಂದೆಯ ಅಸ್ವಸ್ಥ ಮನಸ್ಸು (ವ್ಯಕ್ತಿತ್ವ) ಹಾಗೂ ಶ್ರೇಯಾಂಸನ ಅಪರಿಪಕ್ವ ಮನಸ್ಸು(ವ್ಯಕ್ತಿತ್ವ)ಗಳು ಕರ್ಷಣೆಗೆ, ನಿರಾಕರಣೆಗೆ ಕಾರಣವಾಗಿವೆ. ಇದು ಅಸ್ವಸ್ಥತೆ ಮತ್ತು ಅಪರಿಪಕ್ವತೆಯ ನಡುವಿನ ದ್ವಂದ್ವವಾಗಿ ಕುಟುಂಬವನ್ನು ವಿರುದ್ಧಾತ್ಮಕ ಮೌಲ್ಯಗಳ ಬಲ(Force)ಗಳಲ್ಲಿ ಬಂಧಿಸಿದೆ. ಅಧ್ಯಯನವನ್ನು ಕಾಡುವ ಪ್ರಶ್ನೆಯೆಂದರೆ, ಈ ಘರ್ಷಣೆಯಲ್ಲಿ ಶ್ರೇಯಾಂಸ ಇನ್ನೇನು ಮಾಡಬಹುದಾಗಿತ್ತು ಎಂಬುದಾಗಿದೆ. ಗ್ರಾಮದಲ್ಲಿದ್ದು ಅಪ್ಪನ ವಿರುದ್ಧ ಹೋರಾಟ ಮಾಡಲು ಅಷ್ಟಿ ಆತಂಕಗಳು ಅವನಿಗೆ ಎದುರಾಗಿವೆ. ಸಂಪ್ರದಾಯ, ತಾಯಿ, ಕುಟುಂಬ, ಜಾತಿ ಜನರ ವಿರೋಧಗಳ ಹಿನ್ನೆಲೆಯಲ್ಲಿ ಅವನು ಗ್ರಾಮವನ್ನು ನಿರಾಕರಿಸುವುದನ್ನು ಕಾಣುತ್ತೇವೆ. ಕಡಲ ತೆರೆಗೆ ದಂಡೆ ಕತೆಯ (ಕಾಕಾ-ಭೀಮಕ್ಕ ಅಬಚಿ), ಆಲಿಕಲ್ಲು, ವಿಶ್ವಾಮಿತ್ರನ ಸೃಷ್ಟಿ, ಬೀಜ ಕಥನಗಳ ಅಪ್ಪ ಮಕ್ಕಳು ಹೀಗೆ ವ್ಯಕ್ತಿ ಮತ್ತು ವ್ಯಕ್ತಿ ಸಂಘರ್ಷದಲ್ಲಿ ಒಂದು ಪಾತ್ರ ಗ್ರಾಮ ನಿರಾಕರಿಸುವುದು ಕಂಡುಬರುತ್ತದೆ. ಒಂದು ಮಾಲೀಕತ್ವ/ಯಜಮಾನಿಕೆಯ ಹಠ, ದರ್ಪ ಹೊಂದಿದ್ದರೆ, ಇನ್ನೊಂದು ವಿರೋಧದ ತೀವ್ರಗಾಮಿತ್ವ ಹೊಂದಿದ್ದು, ಘರ್ಷಣೆಯ ಪರಿಣಾಮ ನಿರಾಕರಣೆ ಎಂಬುದು ಅಧ್ಯಯನದ ನಿಲುವಾಗಿದೆ.

ಕೌಟುಂಬಿಕ ನೆಲೆಯಲ್ಲಿ ಗ್ರಾಮ/ನಗರ ನಿರಾಕರಣೆಗೆ ಕಾರಣವಾಗುವ ಅಂಶಗಳನ್ನು ಮುಂಬಯಿ ಕರ್ನಾಟಕದ ಕಥನ ಸಾಹಿತ್ಯ ಈ ರೀತಿಯಾಗಿ ಗ್ರಹಿಸಿದೆ. * ಮೇಲ್ಜಾತಿ/ವರ್ಗದ ಕುಟುಂಬಗಳು ತಮ್ಮ ಮಕ್ಕಳ ಆಧುನಿಕ/ಸಾಂಪ್ರದಾಯಿಕ ವಿದ್ಯಾಭ್ಯಾಸಕ್ಕೆ ಮಹತ್ವವನ್ನು ಕೊಟ್ಟು ಗ್ರಾಮ/ನಗರ ನಿರಾಕರಿಸುತ್ತವೆ. * ಸವರ್ಣೀಯರ ಬಿಗಿ ಹಿಡಿತದಿಂದ ಬಿಡಿಸಿಕೊಳ್ಳಲು ಸರಕಾರದ ಮೀಸಲಾತಿಯಂತಹ ಸೌಲಭ್ಯಗಳು ಕೆಳ/ ದಲಿತ ವರ್ಗದ ಕುಟುಂಬಗಳಿಗೆ ನೆರವಾಗುತ್ತವೆ. ಕಥೆಗಳು ಆಧುನಿಕ ಶಿಕ್ಷಣದ ಅವಶ್ಯಕತೆ ಹಾಗೂ ಅದರಿಂದ ದಲಿತರಲ್ಲಿ ಮೂಡುವ ಎಚ್ಚರಗಳನ್ನು ಗಾಂಧಿವಾದಿ/ಪ್ರಗತಿಪರ ಪಾತ್ರಗಳ (ಮಾಸ್ತರುಗಳ) ಮುಖಾಂತರ ದಲಿತರಲ್ಲಿ ಬಿತ್ತುವುದು ಕಂಡುಬರುತ್ತದೆ. * ಯಾವುದೇ ವಿವಾಹಿತ ಮಹಿಳೆ ಸ್ವ-ಇಚ್ಛೆಯಿಂದ ತನ್ನ ಸಂಸಾರವನ್ನು ನಿರಾಕರಿಸಿ ವೇಶ್ಯೆಯಾಗುವುದಿಲ್ಲ. ಗ್ರಾಮದ ಕೆಳವರ್ಗದ ಜನರಲ್ಲಿಯ ಬಡತನ, ಮೂಢನಂಬಿಕೆ, ವರದಕ್ಷಿಣೆಯ ಪಿಡುಗು, ಬಾಲ್ಯವಿವಾಹದಂತಹ ಅನಿಷ್ಟ ಪದ್ಧತಿಗಳು, ಅವೈಜ್ಞಾನಿಕ

ಧಾರ್ಮಿಕ ವಿಧಿಗಳು, ಜನರ ಅಶಿಕ್ಷಿತ ಮನೋಧರ್ಮಗಳು (ನಿರ್ಧಾರ ಕಥೆಯ ಮಾಲತಿ, ಗುಳದಾಳಿ ಕಥೆಯ ಚಿನ್ನಿ) ಅವಳನ್ನು ಸಂಸಾರ ತ್ಯಜಿಸುವಂತೆ ಮಾಡಿ ಆ ವೃತ್ತಿಗೆ ತಳ್ಳುತ್ತವೆ. * ಮಹಿಳೆಯು ಕುಟುಂಬದ ಒಳಗಿನ ಹಾಗೂ ಹೊರಗಿನ ಪುರುಷ ಇಬ್ಬರಿಂದಲೂ ಶೋಷಿತಳಾಗಿರುವುದನ್ನು ಕಥೆ, ಕಾದಂಬರಿಗಳು ನಿರೂಪಿಸಿವೆ. * ಕುಟುಂಬದ ಎರಡು ತಲೆಮಾರುಗಳ ಸಂಬಂಧಗಳ ಶಿಥಿಲತೆಗೆ ಹಿರಿಯ ತಲೆಮಾರಿನ ವ್ಯಕ್ತಿಗಳ ಅಹಂ, ಕೋಪ, ಮೂಲಭೂತವಾದಿತ್ವ, ಸಂಪ್ರದಾಯ ಜಡತೆಗಳು ಕಾರಣವಾಗಿದ್ದಂತೆ, ಮಕ್ಕಳಲ್ಲಿ ಇಂಗ್ಲೀಶ್ ಶಿಕ್ಷಣ, ಆರ್ಥಿಕ ವ್ಯವಸ್ಥೆಯ ಕುರಿತು ವ್ಯಾವಹಾರಿಕ ಅರಿವು, ಪ್ರಗತಿಪರ ನಿಲುವುಗಳು ಅವರು ಗ್ರಾಮ/ನಗರ ನಿರಾಕರಿಸುವಂತೆ ಮಾಡುತ್ತವೆ. ಇದನ್ನು ಸಾಂಪ್ರದಾಯಿಕ ಜಿಗುಟುತನ ಮತ್ತು ಹೊಸತರ ನಿರೀಕ್ಷೆಯಲ್ಲಿರುವ ಎರಡು ತಲೆಮಾರುಗಳ ಮುಖಾಮುಖಿ ಸಂಘರ್ಷ(ದ್ವಂದ್ವಾತ್ಮಕತೆ) ಎನ್ನಬಹುದು.

## ೩. ಸಾಮಾಜಿಕ ನೆಲೆಗಳು ಮತ್ತು ನಿರಾಕರಣೆ

### ಅ. ವರ್ಣ ವ್ಯವಸ್ಥೆ

ಭಾರತೀಯ ಸಾಮಾಜಿಕ ವ್ಯವಸ್ಥೆಯು ವರ್ಣ, ವರ್ಗಗಳಿಂದ ಕೂಡಿದ ಸಂಕೀರ್ಣ ವ್ಯವಸ್ಥೆಯಾಗಿದೆ. ಮೂಲದಲ್ಲಿ ಇದೊಂದು ಆರ್ಥಿಕ, ಔದ್ಯೋಗಿಕ ಆಧಾರಿತ ವ್ಯವಸ್ಥೆಯಾಗಿ ಕಂಡರೂ, ವೃತ್ತಿ ವಿಭಜನೆಯು ವಿವಿಧ ವೃತ್ತಿ ಮಾಡುವವರನ್ನೂ ವಿಭಜಿಸಿ ಮುಂದೆ ಸಾಮಾಜಿಕ ತಾರತಮ್ಯ ಉಂಟಾಯಿತು. ಸಮಾಜದಲ್ಲಿ ಇಂದು ಮೂಲ ವರ್ಣ ವಿಂಗಡಣೆಯು ಕಾಣೆಯಾಗಿದ್ದು, ಅದು ಜಾತಿಗಳ ರೂಪದಲ್ಲಿ ಜೀವಂತವಿದೆ ಹಾಗೂ ಗ್ರಾಮ/ನಗರಗಳಲ್ಲಿ ಸಂಘರ್ಷವನ್ನು ಹುಟ್ಟುಹಾಕುತ್ತಲೇ ಇದೆ. ನಿರಾಕರಣೆ ಯಾವ ಜಾತಿಗಳಲ್ಲಿ ಹೆಚ್ಚು ನಡೆಯುತ್ತದೆ, ಇದಕ್ಕೆ ಯಾವ, ಯಾವ ಜಾತಿಗಳ ಕುಮ್ಮಕ್ಕು, ದೌರ್ಜನ್ಯ ಕಾರಣ, ನಿರಾಕರಣೆಯ ಹಿನ್ನೆಲೆಯಲ್ಲಿ ಹಿರಿಯ ಮತ್ತು ಕಿರಿಯ ತಲೆಮಾರಿನ ಗೊಂದಲಗಳು ಯಾವುವು, ಅವರ ವೈಯಕ್ತಿಕ ಸ್ಪಂದನಗಳು ಯಾವುವು, ಗ್ರಾಮ/ನಗರ ಸಮುದಾಯಗಳು ವ್ಯಕ್ತಿಯ ನಿರಾಕರಣೆಗೆ ಯಾವ ರೀತಿ, ರೂಪದಲ್ಲಿ ಕಾರಣವಾಗಿದೆ ಇತ್ಯಾದಿ ಪ್ರಶ್ನೆಗಳ ಮೂಲಕ ಸಮಸ್ಯೆಗಳನ್ನು ಕಥನ ಸಾಹಿತ್ಯದ ನೆಲೆಯಲ್ಲಿ ಚರ್ಚಿಸಬಹುದು.

### ವ್ಯಕ್ತಿ ಮತ್ತು ಸಾಮಾಜಿಕ ಸಂಘರ್ಷಗಳು ಮತ್ತು ನಿರಾಕರಣೆ

ಶಿವರುದ್ರ ಕಲ್ಲೋಳಿಕರ ಅವರ 'ಹೊಲಗೇರಿಯ ರಾಜಕುಮಾರ' ಕಾದಂಬರಿಯ ಮಾದೇವ ಕುರುಂದವಾಡ ಸಂಸ್ಥಾನದ ರಾಜವಂಶದಲ್ಲಿ ಹುಟ್ಟಿ ಅಲ್ಲಿ ನಡೆದ ಕ್ಷಿಪ್ರ ಕ್ರಾಂತಿಯ ಪರಿಣಾಮವಾಗಿ ತಂದೆ, ತಾಯಿಗಳನ್ನು ಕಳೆದುಕೊಂಡು, ಅರಮನೆಯ ಆಪ್ತ ಸಲಹೆಗಾರನ ಸಹಾಯದಿಂದ ವಡಗಾಂವಿ ನಗರದ ಹೊಲಗೇರಿಯಲ್ಲಿ ಬೆಳೆದು ಮಾನಸಿಕವಾಗಿ, ಸಾಂಸ್ಕೃತಿಕವಾಗಿ ದಲಿತನೇ ಆಗಿರುತ್ತಾನೆ. ಇದ್ದಕ್ಕಿದ್ದಂತೆ ಒಂದು ದಿನ ತಾನು ಜಾತಿಯಿಂದ ಸವರ್ಣೀಯ, ಅದೂ ಕ್ಷತ್ರಿಯ (ಮರಾಠಾ ಛತ್ರಪತಿ ಶಿವಾಜಿಯ) ರಾಜವಂಶಸ್ಥ ಎಂದು ತಿಳಿದಾಗ, ದಲಿತ ಸಂಸ್ಕೃತಿಯನ್ನು ತಣ್ಣಗೆ ದ್ವೇಷಿಸಲಾರಂಭಿಸಿ ನಗರದ ದಲಿತಕೇರಿ ನಿರಾಕರಿಸಿ ಕುರುಂದವಾಡಕ್ಕೆ (ಗ್ರಾಮ) ಬರುತ್ತಾನೆ. ನಾ. ಡಿಸೋಜ ಅವರ 'ಪ್ರೀತಿಯೊಂದೇ ಸಾಲದೆ?' ಕಾದಂಬರಿಯಲ್ಲಿ ಫಕೀರ ಎಂಬ ಬಾಲಕ ಪೀಟರ್ ಆಗಿ ಗ್ರಾಮ/ನಗರ ನಿರಾಕರಿಸುವ ಸಂದರ್ಭವೂ ಸಮಾಜದೊಂದಿಗೆ ವ್ಯಕ್ತಿಯೊಬ್ಬ (ಇಡೀ ಕುಟುಂಬದ ಹೋರಾಟವೆಂದೇ ಪರಿಗಣಿಸೋಣ) ನಡೆಸಿದ ಸಂಘರ್ಷವಾಗಿದೆ.

ಸಾಮಾನ್ಯವೆಂದು ಕಂಡುಬರುವ ಇಂತಹ ನಿರಾಕರಣೆಗಳ ಹಿಂದೆ ದಲಿತ, ಕೆಳವರ್ಗಗಳ ಮೇಲಿನ ಸವರ್ಣೀಯರ ದೌರ್ಜನ್ಯದ ಭೀಕರ ಕ್ರೌರ್ಯವನ್ನು ಕಾಣಬಹುದು. ಮನುಷ್ಯನನ್ನು ಮನುಷ್ಯನನ್ನಾಗಿ ಬಾಳಲು/ಬದುಕಲು ಬಿಡದ ಭಾರತೀಯ ಸಮಾಜದ ಸವರ್ಣೀಯ ಸಮೂಹ ಇಂತಹ ನಿರಾಕರಣೆಗಳ ನೇರ ಹೊಣೆಯನ್ನು ಹೊರಬೇಕಾಗುತ್ತದೆ. ಅಸ್ಪೃಶ್ಯನೆಂದು ತಿಳಿದಿದ್ದ ಮಾದೇವನನ್ನು ನಾಗರಿಕ ಸಮಾಜ ನಡೆಸಿಕೊಂಡ ರೀತಿಯಾದರೂ ಎಂತಹುದು? ವಿದ್ಯಾವಂತ, ಪ್ರತಿಭಾವಂತ ಮಾದೇವ ಮತ್ತು ಅವನ ಕುಟುಂಬ ಹೆಜ್ಜೆಹೆಜ್ಜೆಗೆ ಸಾಮಾಜಿಕ ಅವಮಾನಕ್ಕೆ ಒಳಗಾಗುತ್ತದೆ. ಮಾದೇವನ ಆಫೀಸಿನ ಸುಶಿಕ್ಷಿತ ಮೇಲಾಧಿಕಾರಿಯ ವರ್ತನೆಯನ್ನು ಗಮನಿಸೋಣ,

> 'ಬೇರೆ ದಡ್ಡ ರಂಡೆ ಗಂಡ್ರಾಗಿದ್ರೆ ಅವರನ್ನ ಡಿಸ್ಮಿಸ್ ಮಾಡ್ತಿದ್ದೆ. ಆದ್ರೆ ನೀವಾ ಎಸ್ಸಿ ಜನ. ಏನಾದ್ರ ಮಾಡಾಕ ಹೋದ್ರ ಮೈಮ್ಯಾಗ ಬರ್ತಾದ. ಹೋಗ್ರಿ ಶ್ಯಾಣೆ ಆದೀರಿ ಕೆಲಸಾ ನೋಡ್ಕೋಗ್ರಿ ಎಂದ.'[೬೩]

ದಲಿತರಿಗೆ ಸರಕಾರಿ ಯಂತ್ರ, ಕಾನೂನುಗಳ ಸಹಾಯಹಸ್ತ ಇದೆ. ಈ ಹಿನ್ನೆಲೆಯಲ್ಲಿ ತಪ್ಪು ಮಾಡಿದ ನಿನ್ನನ್ನು ಶಿಕ್ಷಿಸಲು ನಾನು ಅಸಹಾಯಕನಾಗಿದ್ದೇನೆ ಎಂಬ ಒಳಧ್ವನಿ ಈ ಮಾತಿನಲ್ಲಿ ವ್ಯಕ್ತವಾಗಿದೆ. ಜಾತೀಯತೆಯ ಆವರಣದಿಂದ ಈಚೆಗೆ ನಿಂತು ಯೋಚಿಸುವ ವ್ಯಕ್ತಿಯಾಗಿ ಇಂತಹ ಸವರ್ಣೀಯ ಅಧಿಕಾರಿಗಳು ಬೆಳೆದಿಲ್ಲ ಹಾಗೂ ತಪ್ಪು ಮತ್ತು ಒಪ್ಪುಗಳಿಗೆ ಜಾತಿಯ ನಂಟು ಬೆಸೆಯುವ ಪೂರ್ವಗ್ರಹಪೀಡಿತ ನ್ಯಾಯ ತೀರ್ಮಾನ ಕೊಡುವ ರೋಗಗ್ರಸ್ತ ಮನಃಸ್ಥಿತಿ ಇಲ್ಲಿ ವ್ಯಕ್ತವಾಗಿದೆ. ಚಿಕ್ಕಂದಿನಲ್ಲಿ ಅನುಭವಿಸಿದ ಅಸ್ಪೃಶ್ಯತೆಯ ನೋವು, ತಾನು ಓದಿ ರ್‍ಯಾಂಕ್ ಪಡೆದು ಸನ್ಮಾನಿತನಾಗಿ ಒಳ್ಳೆಯ ಸರಕಾರಿ ಕೆಲಸ ಪಡೆದರೂ ತೊಲಗಿ ಹೋಗದ ಸಾಮಾಜಿಕ ಅಸಮಾನತೆ, ಶಾಲೆಯಲ್ಲಿ ಮಕ್ಕಳ ಮೇಲಿನ ದೌರ್ಜನ್ಯ, ಸಹೋದ್ಯೋಗಿಗಳ ಈರ್ಷೆ ಮುಂತಾದವು ಮಾದೇವನು ತನ್ನ ಹೊಲೆತನ, ಸಂಸ್ಕೃತಿ ಕುರಿತು ಒಂದು ರೀತಿಯ ಅಸಡ್ಡೆಯನ್ನು ಬೆಳೆಸಿಕೊಳ್ಳಲು ಕಾರಣವಾಗುತ್ತವೆ. ಅವನ ಮನಸ್ಸಿನಾಳದಲ್ಲಿ ಇದನ್ನು ತೊರೆದು ಹೊರಬರುವ ಒಂದು ಸಣ್ಣ ನಿರ್ಧಾರ ಹುಟ್ಟಿಕೊಳ್ಳುತ್ತದೆ. ಹೀಗೆ ಹೊಲೆಯನೆಂಬ ಕೀಳರಿಮೆಯನ್ನು ತೊರೆಯಲು ಹಾತೊರೆಯುವ ಮನಸ್ಸು ನಗರ ನಿರಾಕರಣೆಗಾಗಿ ತನ್ನೊಳಗೆ ಒಂದು ಸ್ನಿಗ್ಧ ವೇದಿಕೆಯನ್ನು ಸಜ್ಜುಗೊಳಿಸುತ್ತದೆ. ಆದರೆ ಫಕೀರ ಅಸಹಾಯಕ. ಕುಡಿಯುವ ನೀರು, ಆಸ್ಪತ್ರೆಯಲ್ಲಿ ಔಷಧಿ ಪಡೆಯಲು ಸವರ್ಣೀಯ ಸಮಾಜ ಅವಕಾಶ ಕೊಡದಂತಹ ವಾತಾವರಣದಲ್ಲಿ ಅವನಿದ್ದಾನೆ. ತಾಯಿ ಹಸಿವನ್ನು ತಾಳಲಾರದೆ ಯಾರೊಂದಿಗೋ ಓಡಿ ಹೋಗುತ್ತಾಳೆ. ಹಸಿವು ತಾಳಲಾರದೆ ಪೇಟೆಯಲ್ಲಿ ಕದ್ದ ಹುಡುಗ ಫಕೀರ ಪೋಲಿಸ ಠಾಣೆ ಸೇರಿ ಪಾದ್ರಿ ಡಿಕಾಸ್ಟನಿಂದ ಪೀಟರ್ ಆಗುತ್ತಾನೆ.

ಫಕೀರನ ತಂದೆ ತಾಯಿ, ಮಾದೇವ ಇವರು ಶೋಷಣೆಗೆ ಒಳಗಾದ ಅಶಿಕ್ಷಿತ ಅಸ್ಪೃಶ್ಯ ಹಾಗೂ ಸುಶಿಕ್ಷಿತ ಅಸ್ಪೃಶ್ಯ ಎಂಬ ಎರಡು ಗುಂಪುಗಳನ್ನು ಪ್ರತಿನಿಧಿಸುತ್ತಾರೆ. ಈ ಎರಡೂ ಗುಂಪುಗಳ ಶೋಷಣೆಯ ನೆಲೆಗಳು ಭಿನ್ನವಾಗಿರುವುದನ್ನು ಗಮನಿಸುತ್ತೇವೆ.

> 'ಇಗರ್ಜಿಯ ಹತ್ತಿರಾನೇ ಬಾವಿ ಇದೆ. ..ಅಲ್ಲಿ ನೀರು ತೊಕೋ..' ಪಾದರಿ ಮಾತಿಗೆ, 'ಇಲ್ಲ ದಣಿ.. ಇಲ್ಲ.. ಮೇಲು ಜಾತಿಯವರೆಲ್ಲ ಅಲ್ಲಿ ನೀರು ತೆಗೀತಾರೆ... ..ನಾವಲ್ಲಿ ನೀರು ಮುಟ್ಟೋ ಹಾಗಿಲ್ಲ.' ಹೆಂಗಸಿನ ಅಳಲು. 'ದೇವರೇ ಮೇಲು ವರ್ಗದವರು ಓಡಾಡೋ ದಾರೀಲಿ.. ನಾವು..' ಅವನು ದೀನನಾಗಿ ನುಡಿದ.'[೬೪]

ಸವರ್ಣೀಯರ ಇಂತಹ ಸಾಮಾಜಿಕ ವರ್ತನೆಗಳು, ಅಸ್ಪೃಶ್ಯತೆ ಹೇಗೆ ಸವರ್ಣೀಯರನ್ನು ಜಡವಾಗಿಸಿದೆ, ಹೃದಯಹೀನರನ್ನಾಗಿಸಿದೆ ಹಾಗೂ ಅವರ ಮನಸ್ಸಿನಲ್ಲಿ ಅದು ಹೇಗೆ ಆಳವಾಗಿ ಬೇರು ಬಿಟ್ಟಿದೆ ಎಂಬುದನ್ನು ತೋರಿಸುತ್ತವೆ. ಈ ಮಾತು ಹೇಳುವ ಫಕೀರನ ತಂದೆ, ತಾಯಿಯಂತಹ ದಲಿತರು ಮುಗ್ಧರು, ಅನಕ್ಷರಸ್ಥರು, ಶ್ರಮಜೀವಿಗಳು ಹಾಗೂ ಕರ್ಮಸಿದ್ಧಾಂತವನ್ನು ನಂಬಿದ ಶೋಷಿತರು ಆಗಿದ್ದಾರೆ. ಆದ್ದರಿಂದ ಇಲ್ಲಿ ಪ್ರತಿಭಟನೆ ಹುಟ್ಟಿಕೊಳ್ಳದೇ ಎಲ್ಲದಕ್ಕೂ 'ದೇವರೇ...' ಎಂದು ಕಾಣದ ಶಕ್ತಿಯನ್ನು ಮೊರೆ ಹೋಗಿ ತಮ್ಮ ಅಸಹಾಯಕತೆಯನ್ನು ವ್ಯಕ್ತಪಡಿಸುತ್ತಾರೆ. ಸವರ್ಣೀಯರು ಉಪಯೋಗಿಸುವ ನೀರು, ದಾರಿಗಳು ಪ್ರಕೃತಿಯ ಕಾಣಿಕೆಯಾಗಿವೆ. ಅವುಗಳನ್ನು ಸಹಜವಾಗಿ ಉಪಯೋಗಿಸುವ ಕಲ್ಪನೆಯೇ ಅವರನ್ನು ಆತಂಕ, ಭಯ, ಅಭದ್ರತೆ, ಶಿಕ್ಷೆಗಳಿಂದ ಹೆದರಿಸುವ ಭಾವವನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಇದು ಯಥಾಸ್ಥಿತಿಯನ್ನು ಒಪ್ಪಿಕೊಂಡು ಬದುಕುವ ಅಶಿಕ್ಷಿತರ ಬದುಕಾಗಿದೆ. ಮಾದೇವ ಸುಶಿಕ್ಷಿತನಾಗಿದ್ದು, ನಗರದಲ್ಲಿದ್ದು, ಶಿಕ್ಷಣದಿಂದ ದಲಿತರಲ್ಲಿ ಮೂಡುತ್ತಿದ್ದ ಎಚ್ಚರ, ಅದರಿಂದ ಸಾಂಪ್ರದಾಯಿಕ ಸಮಾಜದಲ್ಲಿ ಆಗುತ್ತಿದ್ದ ಪಲ್ಲಟಗಳನ್ನು ನೋಡಿದ್ದಾನೆ, ಸ್ವತಃ ಅನುಭವಿಸಿದ್ದಾನೆ. ಸುಶಿಕ್ಷಿತ ಸವರ್ಣೀಯರ ಕೊಂಕು ಮಾತು, ಸರಕಾರದ ಸೌಲಭ್ಯ ಕುರಿತ ಅಸಹನೆ ಅವನನ್ನು ಮತ್ತು ಅವನ ಕುಟುಂಬವನ್ನು ಆ ಸಮಾಜದಲ್ಲಿ ಆಮೆಯೊಂದು ಚಿಪ್ಪಿನಲ್ಲಿ ಮುದುಡುವಂತೆ ಮಾಡಿವೆ. ಶಿಕ್ಷಣ ಪಡೆದ ಮೊದಲ ತಲೆಮಾರಿನ ದಲಿತರ ಸಮಸ್ಯೆಗಳು, ಸಂದಿಗ್ಧತೆಗಳು ಮತ್ತು ಪಡೆಯುವ ಸಂಕೀರ್ಣತೆಯನ್ನು ಇಲ್ಲಿ ಗುರುತಿಸಬಹುದು. ಸವರ್ಣೀಯರ ಜಡಗಟ್ಟಿದ ವ್ಯವಸ್ಥೆ, ಸ್ವಾರ್ಥಮೂಲ, ಅಸ್ವಸ್ಥ ಮನಸ್ಸುಗಳು ಫಕೀರನ ಕುಟುಂಬ ಗ್ರಾಮ (ತಂದೆ ಸತ್ತು, ತಾಯಿ ಓಡಿಹೋಗಿ) ನಿರಾಕರಣೆ ಮಾಡುವಂತೆ ನೋಡಿಕೊಂಡರೆ, ಅದೇ ಸಮಾಜದ ಸುಶಿಕ್ಷಿತ ದಲಿತ ಮಾದೇವನನ್ನೂ ನಿರಾಕರಣೆಗೆ ಪ್ರೇರೇಪಿಸಿವೆ.

### ಸವರ್ಣೀಯ ಮತ್ತು ದಲಿತ ಕುಟುಂಬಗಳ ಸಂಘರ್ಷ ಮತ್ತು ನಿರಾಕರಣೆ

ದಲಿತ ಹುಟ್ಟಾಳು ಮತ್ತು ಸವರ್ಣೀಯ ಭೂ ಒಡೆಯರ ಕುಟುಂಬಗಳ ನಡುವೆ ನಡೆದ ಸಂಘರ್ಷದಲ್ಲಿ ಗ್ರಾಮ ನಿರಾಕರಣೆ ಮಾಡುವ ನಾ. ಡಿಸೋಜ ಅವರ 'ಮಂಜಿನ ಕಾನು' ಕಾದಂಬರಿಯ ಕೊಲ್ಲ ಸ್ವಾತಂತ್ರ್ಯ ಬಯಸಿದ ದಲಿತರ ಯುವಕನಾಗಿದ್ದಾನೆ. ಭೂ ಒಡೆಯ ಕೃಷ್ಣಪ್ಪ ಹೆಗಡೆಯ ಜೀತದಾಳಾಗಿ ಜೀವಮಾನ ದುಡಿದರೂ ಕೊಲ್ಲನ ಹೆಂಡತಿಯ ಮದ್ದಿನ ಖರ್ಚಿಗೆ ದುಡ್ಡು ಕೊಡದ, ಮನೆ ಸೋರಿದರೆ ಸೋಗೆ ಗರಿ ನೀಡದ ಒಡೆಯನಿಂದ ಸ್ವತಂತ್ರನಾಗುವ ಹಂಬಲ ಅವನಲ್ಲಿ ಚಿಗುರೊಡೆಯುತ್ತದೆ. ಕೊಲ್ಲನ ಆಸೆಯನ್ನು ಅವನ ಜಾತಿ ಬಂಧುಗಳೂ ಪುರಸ್ಕರಿಸುವುದಿಲ್ಲ. ತಲೆತಲಾಂತರದಿಂದ ಬಂದ ತಮ್ಮ ಹುಟ್ಟಾಳು ಜೀತವನ್ನು ಸಮರ್ಥಿಸುತ್ತಾರೆ, ಬಿಡುಗಡೆಯನ್ನು ನಿಂದಿಸುತ್ತಾರೆ, ಆಡಿಕೊಳ್ಳುತ್ತಾರೆ. ಸ್ವಂತ ಸಾಗುವಳಿ ಮಾಡಿದ ಎರಡೆಕರೆಯ ಬೆಳೆಯನ್ನು ಹೆಗಡೆ ರಾತ್ರೋರಾತ್ರಿ ತುಳಿಸಿ ನಾಶ ಮಾಡಿದಾಗ ಕೊಲ್ಲ ಮತ್ತು ದೀವರ ಹನುಮ ನೊಂದುಕೊಳ್ಳುತ್ತಾರಾದರೂ ವಿರೋಧಿಸಿ ಗಟ್ಟಿಯಾಗಿ ಪ್ರತಿಭಟಿಸುವುದಿಲ್ಲ. 'ನಾನು ನಿನ್ನ ಕೆಲಸಕ್ಕೆ ತಕೋಬಹುದು. ಆದ್ರೆ ಕೃಷ್ಣಯ್ಯ ನನ್ನ ಮೇಲೆ ಕೆಂಡ ಕಾರೋದು ಖಂಡಿತ. ಅವನಿಗೆ ನಾನು ಹೆದರತೀನಿ ಅಂತಲ್ಲ. ಆದ್ರೆ ಸುಮ್ಮನೆ ಮನಸ್ತಾಪಕ್ಕೆ ಕಾರಣ ಆಗುತ್ತೆ. ಬೇರೆ ಎಲ್ಲಾದ್ರೂ ನೋಡು'[೪೫] ಪ್ರಗತಿಪರರೆಂದು ಗುರುತಿಸಿಕೊಂಡಿದ್ದ ಮೇಲ್ಜಾತಿ ರಾಮಚಂದ್ರರಾಯರೂ ಸಹ ಸ್ವತಂತ್ರನಾದ ಕೊಲ್ಲನಿಗೆ ಕೂಲಿಗೆ ಸೇರಿಸಿಕೊಳ್ಳಲು ನಿರಾಕರಿಸುವುದು, ಮೇಲ್ವರ್ಗದ ವ್ಯಕ್ತಿಗಳ ಪ್ರಗತಿಶೀಲ ನಿಲುವನ್ನು ಶಂಕಿಸಬಹುದಾದ ಸಂದರ್ಭವಾಗಿದೆ. ಸವರ್ಣೀಯ/ಮೇಲ್ವರ್ಗದ ವ್ಯಕ್ತಿಗಳ ಇಂತಹ ನಿಲುವು ಕೆಳವರ್ಗ, ದಲಿತರನ್ನು ಇಬ್ಬಂದಿಯಲ್ಲಿ ಇಡುವ ಹುನ್ನಾರವಾಗಿದೆ. ಊಳಿಗಮಾನ್ಯ ವ್ಯವಸ್ಥೆಯ ಪ್ರತಿಪಾದಕರ ದೌರ್ಜನ್ಯ, ಸ್ವಜಾತಿಯ ಅಜ್ಞಾನಿ ಪ್ರತಿಗಾಮಿಗಳ ತಣ್ಣನೆಯ ಪ್ರತಿರೋಧಗಳು ಕೊಲ್ಲ ಗ್ರಾಮ ನಿರಾಕರಿಸಿ ಕೂಲಿಗಾಗಿ ಪಟ್ಟಣ ಸೇರುವಂತೆ ಮಾಡುತ್ತವೆ.

ಶಾಂತಾದೇವಿ ಕಣವಿ ಅವರ 'ಹೊಸ ಅಲೆ' ಕತೆಯಲ್ಲಿ ಸವರ್ಣೀಯ ಮತ್ತು ದಲಿತ ಕುಟುಂಬಗಳೆರಡರ ನಡುವೆ ನಡೆಯುವ ಘಟನೆಗಳು ಅಸ್ಪೃಶ್ಯತೆಯ ಮೇಲೆ ಬೆಳಕು ಚೆಲ್ಲುತ್ತವೆ. ಬ್ಯಾತನಾಳು ಗ್ರಾಮದ ಮಾದರ ದ್ಯಾಮ ಅದೇ ಗ್ರಾಮದ ಸವರ್ಣೀಯರ ಶಂಕರಪ್ಪನ ಮನೆಯಲ್ಲಿ ಜೀತಮಾಡುತ್ತಾನೆ. ಇವನ ಮಗ ಮರಿಯನನ್ನು ತಮ್ಮ ಮಕ್ಕಳ ಜೊತೆ ಬೆರೆಯಲು ಬಿಡದ ಕುಟುಂಬ ಅನೇಕ ವಿಧದ ದೌರ್ಜನ್ಯಗಳಿಗೆ ಈಡು ಮಾಡಿ, ಮರಿಯ ಮೆಟ್ರಿಕ್ ಪಾಸಾದ ನಂತರ ಗ್ರಾಮ ನಿರಾಕರಿಸುವಂತೆ ಮಾಡುತ್ತದೆ. ನಿಂಗಣ್ಣ ಸಣ್ಣಕ್ಕಿ ಅವರ 'ಚಂಬಿ' (೧೯೫೦) ಕತೆಯ ಚಂಬಿ ದಲಿತರ ಹೆಣ್ಣಾಗಿ ಸವರ್ಣೀಯರ ಕುಟುಂಬದೊಂದಿಗೆ ಮುಖಾಮುಖಿಯಾಗುತ್ತಾಳೆ. ಸವರ್ಣೀಯ ಹೆಣ್ಣೊಂದರ ಸಹಾಯಕ್ಕೆ ಧಾವಿಸಿದ ಇವಳು (ಇವಳು ಮತ್ತು ಇವಳ ತಮ್ಮ) ಗೌಡನ ದ್ವೇಷ ಕಟ್ಟಿಕೊಂಡು ಗೌಡನ ಕೊಲೆ ಮಾಡಿ ಗ್ರಾಮ ನಿರಾಕರಿಸುತ್ತಾಳೆ. ಆರ್. ವಿ. ಭಂಡಾರಿ ಅವರ 'ತಲೆಮಾರು' ಕಾದಂಬರಿಯ ಕೆಳವರ್ಗದ ಭಂಡಾರಿ ಕುಟುಂಬಕ್ಕೆ ಸೇರಿದ ವೀರೇಶ ತನ್ನ ಪ್ರಗತಿಪರ ಕಾರ್ಯಗಳಿಂದ ಮತ್ತು ಕೆಳವರ್ಗದ ಯುವಕರನ್ನು ಸಂಘಟಿಸಿ ಮೇಲ್ವರ್ಗಗಳ ಸಂಪ್ರದಾಯ, ಶೋಷಣೆಯನ್ನು ವಿರೋಧಿಸಿದ್ದರಿಂದ ಗ್ರಾಮ ನಿರಾಕರಿಸಬೇಕಾಗುತ್ತದೆ.

ಈ ಮೂರೂ ಕಥನಗಳಲ್ಲಿ ಕೆಳ, ದಲಿತ ಕುಟುಂಬಗಳಿಗೆ ಸೋಲುಂಟಾಗುವುದು ಮತ್ತು ಅವುಗಳ ವಿರುದ್ಧ ಊಳಿಗಮಾನ್ಯ ವ್ಯವಸ್ಥೆಯ ಪಟ್ಟಭದ್ರ ಹಿತಾಸಕ್ತಿಗಳು (ಕಾಣದ ಕೈಗಳು) ವ್ಯವಸ್ಥಿತವಾಗಿ ಸಂಘಟಿಸಿ ಇವರ ನಿರಾಕರಣೆಗೆ ಕಾರಣವಾಗುವುದು ಕಂಡುಬರುತ್ತದೆ. ಮರಿಯನನ್ನು ಶಂಕರಪ್ಪ ಕೋಲು ಹಿಡಿದು ಬೆನ್ನಟ್ಟಿದಾಗ ಮರಿಯ ಬಿದ್ದು ಬಾಯಿತುಂಬ ರಕ್ತ ಬಂದಾಗ, ಶಂಕರಪ್ಪನ ತಂದೆ ಮರಿಯನನ್ನು ಕೋಲಿನಿಂದ ಬಾಸುಂಡೆ ಬರುವಂತೆ ಬಾರಿಸಿದಾಗಲೂ ಮರಿಯನ ತಾಯಿ ಮೌನವಾಗಿ ಅಳುತ್ತಾಳೆ. ಅವಳಲ್ಲಿ ಪ್ರತಿಭಟನೆಯ ಶಕ್ತಿ ಕುಂದಿ ಹೋಗಿರುತ್ತದೆ.

> 'ಇಂಥಾ ದರಿದ್ರ ಮುಂಡೇವು ಎಲ್ಲಾ ಸಾಲಿ ಕಲಿತರ ಸರಸೋತಿಗೆ ಮೈಲಿಗೆ ಆಗತದ. ಸುಮ್ಮನ ನಿನ್ನ ಮಗನ್ನ ಜೀತಕ್ಕ ಇಡಲೆ ದ್ಯಾಮ, ಇಲ್ಲದ ಸಲಿಗಿ ಕೊಡಬ್ಯಾಡಾ. ಸಲಿಗೀ ನಾಯಿ ತಲೀಗೆ ಏರಿತಂತ. ಹಾಂಗ ಆದೀತು. ಇಲ್ಲೇ ಇದ್ದರ ಸತ್ತಾಗ ನಿನಗ ಬಾಯಾಗ ಹನಿ ನೀರು ಬಿಟ್ಟಾನು. ಅವನ್ನ ಎಲ್ಲೂ ಕಳಿಸಬ್ಯಾಡ.'[೪೬]

ಮುಂದಿನ ಓದಿಗೆ ನಗರಕ್ಕೆ ತಂದೆತಾಯಿಯರೊಂದಿಗೆ ಹೊರಟ ಮರಿಯನ ಕುರಿತು ಯಜಮಾನನ ಪ್ರತಿಕ್ರಿಯೆ ಇದಾಗಿದೆ! ಶಿಕ್ಷಣ, ಶಿಕ್ಷಣದಿಂದ ದೊರೆಯುವ ಸಾಮಾಜಿಕ ಗೌರವಗಳಿಂದ ದಲಿತರನ್ನು

ದೂರ ಇಟ್ಟು ವಂಚಿಸುವ ಸವರ್ಣೀಯತ್ವದ ಕ್ರೂರ ಹುನ್ನಾರದ ಮನಃಸ್ಥಿತಿಯನ್ನು ಇಲ್ಲಿ ಕಾಣುತ್ತೇವೆ. ಆದರೂ ದ್ಯಾಮ ಚಕಾರವೆತ್ತದೆ ನಿಂತಿರುತ್ತಾನೆ. ದಲಿತರಲ್ಲಿ ತಮ್ಮ ಜಾತಿ ಬಗ್ಗೆ, ಅಸ್ಪೃಶ್ಯತೆಯ ಆಚರಣೆ, ಕ್ರೌರ್ಯದ ಬಗ್ಗೆ ಅಪಮಾನ, ಸಿಟ್ಟು ನೋವನ್ನು ಮೂಡಿಸುವುದೇ ಇಲ್ಲವೆ ಎಂಬ ಭಾವ ಹುಟ್ಟುತ್ತದೆ. ಆದರೆ ಕಥೆಯಲ್ಲಿ ಅಸ್ಪೃಶ್ಯರ ಅಸಹಾಯಕತೆಯ ಹಿಂದೆ ಆರ್ಥಿಕ, ಸಾಮಾಜಿಕ ಅಭದ್ರತೆಯ ಕಾರಣವನ್ನು ಗುರುತಿಸುತ್ತೇವೆ. ಅದೇ ರೀತಿ ಜಾತಿ ಬಲ, ಆರ್ಥಿಕ ಬಲವಿಲ್ಲದ ಚಂಬಿಗೆ ಅನೇಕ ಕಷ್ಟಗಳು ಎದುರಾಗುತ್ತವೆ. ಅವಳ ಸಹಾಯಕ್ಕೆ ಬಂದ ಕೇರಿಯ ಜನರಿಗೆ ದಿಗ್ಬಂಧನ, ರಾತ್ರಿ ಮನೆಯ ಮೇಲೆ ಕಲ್ಲುಗಳು ಬೀಳುವುದು, ಮೆಟ್ಟು ಹೊಲೆಸಿಕೊಳ್ಳಲು ಜನರು ತಿರಸ್ಕರಿಸುವುದು ಒಂದರ ಮೇಲೊಂದು ಆಘಾತಗಳಾಗಿ ಅವಳು ಉಪವಾಸ ಬೀಳಬೇಕಾಗುತ್ತದೆ. ಚಂಬಿ ಮುತ್ತಳ್ಳಿ ತೊರೆದು ಮೂಡಲಗಿ ಪಟ್ಟಣ ಸೇರಲು ನಿರ್ಧರಿಸುತ್ತಾಳೆ.

> 'ಈ ವಿಚಾರವನ್ನು ಯಾರಿಗೂ ಹೇಳಲಿಲ್ಲ. ಏರುವ ಬಿಸಿಲು, ಊರಲ್ಲಿ, ಅಂಗಳದಲ್ಲಿ ಯಾರೂ ಇಲ್ಲ. ತಮ್ಮನ ಕಾಲುಗಳಿಗೆ ಅರಿವೆ ಕಟ್ಟಿದಳು. ತಾನು ಹರುಕು ಚಪ್ಪಲಿ ಮೆಟ್ಟಿದಳು. ಉಡಿಯಲ್ಲಿ ರಂಪಿಗೆ, ಉಳಿ, ಡಬ್ಬಣ, ದಾರ ತುಂಬಿಕೊಂಡಳು. ಗುಡಿಸಲ ಬಾಗಿಲು ಎಳೆದಳು. ಕೇರಿಯ ಹಿಂದೆ ಒಂದೆ ಸವನೆ ಸರಸರ ನಡೆದಳು.'[೫೬]

ಇಲ್ಲಿ ಗಮನಿಸಬೇಕಾದ ವಿಷಯವೆಂದರೆ, ಅಂತಹ ಕಷ್ಟದಲ್ಲೂ ಚಂಬಿ ತಮ್ಮನ ಕಾಲುಗಳ ರಕ್ಷಣೆ, ದುಡಿದುಣ್ಣಲು ಬೇಕಾಗುವ ಕುಲವೃತ್ತಿಯ ಉಪಕರಣಗಳನ್ನು ಮರೆಯದೆ ತೆಗೆದಿರಿಸಿಕೊಳ್ಳುವುದಾಗಿದೆ. ಒಬ್ಬ ದಲಿತ ಹೆಣ್ಣು, ಮುಂದಿನ ತನ್ನ ಸಂಸಾರ ನಿರ್ವಹಣೆಗೆ ದುಡಿಮೆಯನ್ನು ನಂಬಿ ಹೊರಟ ದೃಶ್ಯ ಇದಾಗಿದ್ದು, ಅದಕ್ಕೆ ಗ್ರಾಮ, ನಗರವೆಂಬ ವ್ಯತ್ಯಾಸ/ದ್ವಂದ್ವವನ್ನು ಅವಳಲ್ಲಿ ಕಾಣುವುದಿಲ್ಲ. ಒಬ್ಬಳು ಸವರ್ಣೀಯ ಹೆಣ್ಣಿನ ಮಾನ ಕಾಪಾಡಲು, ಅದೇ ಸವರ್ಣೀಯ ಸಮುದಾಯದ ವಿರೋಧವನ್ನು ದಲಿತ ಅಬಲೆ ಎದುರಿಸಬೇಕಾಗುತ್ತದೆ. ಇದು ಅಪ್ರತ್ಯಕ್ಷ ಬಹಿಷ್ಕಾರವೂ ಆಗಿದೆ. ಹೊಲತಿ ಗ್ರಾಮವನ್ನು ನಿರಾಕರಿಸಲಿಲ್ಲ, ಗ್ರಾಮದ ಪ್ರಬಲ ಜಾತಿವ್ಯವಸ್ಥೆ ಚಂಬಿಯನ್ನು ನಿರಾಕರಿಸಿ ಆಚೆ ತಳ್ಳುತ್ತದೆ. ಕಥೆ ಸವರ್ಣೀಯರ ಕುರಿತು ವ್ಯಗ್ರತೆ, ತಿರಸ್ಕಾರ, ಪ್ರತಿಭಟನೆ ಹೊಂದಿದ ಮಹಿಳಾ ವ್ಯಕ್ತಿತ್ವವೊಂದನ್ನು ಸೃಷ್ಟಿಸಿ ಕಥನ ಸಾಹಿತ್ಯದಲ್ಲಿ ಚೇತೋಹಾರಿಯೆನ್ನಿಸುತ್ತದೆ. ವೀರೇಶನ ಸಂದರ್ಭ ಮರಿಯ, ಚಂಬಿಯರಂತಿಲ್ಲ. ಅವನು ವಿದ್ಯಾವಂತ, ಬುದ್ಧಿವಂತನಾಗಿದ್ದು ಮೇಲ್ಜಾತಿಯ ಜನರನ್ನು ಧೈರ್ಯದಿಂದ ಎದುರಿಸುತ್ತಾನೆ. ಕೆಳವರ್ಗದ ಯುವಕರನ್ನು ಸಂಘಟಿಸಿ ಪ್ರತಿರೋಧ ಒಡ್ಡುತ್ತಾನೆ. ಮೇಲ್ಜಾತಿಯ ಜನರು ಮಾಡುವ ಯಕ್ಷಗಾನ, ಬರವಣಿಗೆ, ಓದು, ಸಹಪಂಕ್ತಿ ಊಟ ಎಲ್ಲದರಲ್ಲೂ ಸರಿಸಮಾನ ಪ್ರತಿಭೆ ಮೆರೆದು ಅವರಿಗೆ ಸರಿಸಾಟಿಯಾಗುತ್ತಾನೆ. ಕಾದಂಬರಿಯಲ್ಲಿ ಕೆಳಜಾತಿ ವ್ಯಕ್ತಿತ್ವ – ಮೇಲ್ಜಾತಿ ವ್ಯಕ್ತಿತ್ವಗಳನ್ನು ಮುಖಾಮುಖಿಯಾಗಿಸಿ ಶಿಷ್ಟ-ಶೂದ್ರ ಸಂಸ್ಕೃತಿಯ ವಿವೇಚನೆಗೆ ಚಾಲನೆ ಕೊಡಲಾಗಿದೆ. ಆದರೆ ವಿಪರ್ಯಾಸವೆಂದರೆ ಇವನಿಗೆ ಮುಖಾಮುಖಿಯಾಗುವುದು ಇವನ ಜಾತಿ ಹಿರಿಯ ವ್ಯಕ್ತಿಗಳು ಎಂಬುದು ಗಮನಾರ್ಹ. ಅದೂ ಮೇಲ್ಜಾತಿಯವರ ಚಿತಾವಣೆಯಿಂದ!

> 'ನೀನು ಮನೆಯಲ್ಲಿ ಇರುವುದು ಬೇಡ. ಎಲ್ಲಿ ಬೇಕಾದರೂ ಬಿಕ್ಕೆ ಬೇಡಲು ಹೋಗು. ಜಾತಿ ಬುದ್ಧಿವಂತನಿಗೆ ತಿಳಿದರೆ ಮಠಕ್ಕೆ ಸುದ್ದಿ ಹೋಗಿ ಜಾತಿ ಕಟ್ಟು ಕೊಡಿಸುತ್ತಾರೆ. ಆಗ ನಾವು ಬದುಕುವುದು ಹೇಗೆ'[೫೭]

ಎಂದು ತಮ್ಮ ಮಕ್ಕಳಿಗೆ ವೀರೇಶನ ಜೊತೆ ಸೇರದಿರಲು ತಾಕೀತು ಮಾಡುತ್ತಾರೆ. ವೀರೇಶನಿಂದ ತಮ್ಮ ಜಾತಿಯ ಯುವಕರು ಹಾದಿ ತಪ್ಪುತ್ತಿದ್ದಾರೆಂದು ಆರೋಪಿಸಿ ಗಂಪುವನ್ನು ವೀರೇಶನ ವಿರುದ್ಧ ಎತ್ತಿಕಟ್ಟಿ ವೀರೇಶನ ಗ್ರಾಮ ನಿರಾಕರಣೆಗೆ ಕಾರಣರಾಗುತ್ತಾರೆ. ಮುಳ್ಳಿನಿಂದಲೆ ಮುಳ್ಳು ತೆಗೆಯಬೇಕೆಂಬ ಮೇಲ್ವರ್ಗದವರ ಕಾರ್ಯತಂತ್ರವು ವೀರೇಶನನ್ನು ನಿವಾರಿಸಿಕೊಳ್ಳುವಲ್ಲಿ ಯಶಸ್ವಿಯಾಗಿದೆ ಎನ್ನಬಹುದು. ಒಂದು ದಿಕ್ಕಿನಲ್ಲಿ ಅಪ್ಪ ಮತ್ತು ಜಾತಿ ಹಿರಿಯರ ವಿರೋಧದಿಂದ ಗ್ರಾಮ ನಿರಾಕರಿಸಬೇಕಾಗಿದೆ. ಇನ್ನೊಂದು ದಿಕ್ಕಿನಲ್ಲಿ ನಾಗವೇಣಿ ಕುರಿತು ಸೆಳೆತವಿದೆ. ಕಾಲೇಜಿನ ಪಾಠ ಕೇಳುತ್ತಿದ್ದಂತೆ 'ಒಮ್ಮೊಮ್ಮೆ ನಾಗವೇಣಿಯಲ್ಲಿ ಓಡಿ ಹೋಗಿಬಿಡಬೇಕು' (ಪುಟ ೧೪೬) ಎಂಬ ಭಾವದ ಒತ್ತಡವಿದೆ. ಮೇಲ್ಜಾತಿಯ ನಾಗವೇಣಿಯನ್ನು, ಅವಳ ಸೆಳೆತವನ್ನು ನಿರಾಕರಿಸುವ ನೆಲೆಯಲ್ಲಿ ವೀರೇಶ ಗ್ರಾಮ ನಿರಾಕರಣೆ ಮಾಡುತ್ತಾನೆ. ಗಿರಿಧರನೊಂದಿಗೆ ರಾತ್ರಿ ಬಹಳ ಹೊತ್ತಿನವರೆಗೂ ಚರ್ಚಿಸಿ ನಿರ್ಧರಿಸುವುದು ಅವನ ಭಾವನಾತ್ಮಕ ದ್ವಂದ್ವವನ್ನು ಸೂಚಿಸುತ್ತದೆ. ಹಿರಿಯ ತಲೆಮಾರಿನ ದಲಿತ, ಕೆಳವರ್ಗದ ವ್ಯಕ್ತಿಗಳಿಗೆ ಅಪಮಾನ, ಕೀಳರಿಮೆ, ತಮ್ಮ ಸ್ಥಿತಿಯ ಬಗ್ಗೆ ಪಶ್ಚಾತ್ತಾಪವಾಗಲಿ ಕಂಡುಬರುವುದಿಲ್ಲ. ಇವು ಕಿರಿಯ ತಲೆಮಾರಿನ ಯುವಕರಲ್ಲಿ ಕಂಡುಬರುತ್ತವೆ.

## ಬ. ವರ್ಗ ವ್ಯವಸ್ಥೆ ಮತ್ತು ನಿರಾಕರಣೆ

ವರ್ಣ ತಾರತಮ್ಯವು ವರ್ಗ ತಾರತಮ್ಯಕ್ಕೆ ದಾರಿ ಮಾಡಿಕೊಡುತ್ತದೆ ಎಂಬ ವಾದವಿದ್ದರೂ, ಆರ್ಥಿಕ ತಳಹದಿಯು ವರ್ಗ ನಿರ್ಮಾಣ ಮತ್ತು ವರ್ಗ ಹೋರಾಟಕ್ಕೆ ಮೂಲ ನೆಲೆಯಾಗಿದೆ. ಸಾಮಾಜಿಕ, ಆರ್ಥಿಕ ಸವಲತ್ತುಗಳನ್ನು ಅನುಭವಿಸುತ್ತ ಬಂದ ಭಾರತೀಯ ಸಮಾಜದ ಒಂದು ವರ್ಗ ಗ್ರಾಮ/ನಗರಗಳ ಆರ್ಥಿಕ ವ್ಯವಸ್ಥೆಯನ್ನು ಹಿಡಿತದಲ್ಲಿಟ್ಟುಕೊಂಡಿದೆ. ಇದ್ದವರ, ಇಲ್ಲದವರ (ಭೂಮಾಲಿಕ-ಕೂಲಿ, ಬಂಡವಾಳಶಾಹಿ-ಕಾರ್ಮಿಕ, ಒಡೆಯ-ಆಳು) ಮಧ್ಯೆ ನಿರ್ಮಾಣವಾದ ಸಂಘರ್ಷದ ಪರಿಣಾಮವಾಗಿ ಅನೇಕ ಜನರು ಗ್ರಾಮ/ನಗರ ನಿರಾಕರಿಸುವ  ಸಂದರ್ಭಗಳನ್ನು ಕಥನ ಸಾಹಿತ್ಯದಲ್ಲಿ ಗಮನಿಸಬಹುದು. ಸರಸ್ವತಿಬಾಯಿ ರಾಜವಾಡೆ ಅವರ 'ಪ್ರಪಂಚ' (೧೯೪೭) ಕತೆಯ ತೋಮ ಒಬ್ಬ ಗೇಣಿ ರೈತ. ದೀಪಾವಳಿ ಹಬ್ಬಕ್ಕಾಗಿ ಬರುವ ಮಗಳು ಮತ್ತು ಅಳಿಯರಿಗಾಗಿ ಮಾಲೀಕನ ಭೂಮಿಯಲ್ಲಿ ಸ್ವಲ್ಪ ತರಕಾರಿ ಬೆಳೆದು ಅದನ್ನು ಕಿತ್ತು ಉಪಯೋಗಿಸಬೇಕೆನ್ನುವಷ್ಟರಲ್ಲಿ, ಅದು ದಣಿಗಳ ಪಾಲಾಗುತ್ತದೆ. ವಿಷಯ ತಿಳಿದ ತೋಮ ತನ್ನ ಗೇಣಿ ಬದುಕಿನ ಬಗ್ಗೆ ಜಿಗುಪ್ಸೆ/ಅಸಹ್ಯ ತಾಳಿ ಆ ಗ್ರಾಮವನ್ನು ನಿರಾಕರಿಸುತ್ತಾನೆ. ಬಸವರಾಜ ಸಾದರ ಅವರ 'ಬಿಕ್ರ' ಕತೆಯಲ್ಲಿ, ಕುಗ್ರಾಮವೊಂದರ ಸಣ್ಣ ರೈತನಾದ ಬಿಕ್ರ ಮಾಡಿದ ಸಾಲದ ಬಡ್ಡಿಗೆ ಊರ ಸಾಹುಕಾರ ಅವನ ಹೊಲವನ್ನು ಬರೆಸಿಕೊಳ್ಳುತ್ತಾನೆ. ಸುಂದರಿಯಾದ ಹೆಂಡತಿಯನ್ನು ಸಾಹುಕಾರನ ಮಗ ಅಪಹರಿಸಿ ತೋಟದ ಮನೆಯಲ್ಲಿಟ್ಟುಕೊಳ್ಳುತ್ತಾನೆ. ಸಾಮಾಜಿಕ ಅವಮಾನಕ್ಕೊಳಗಾದ ಬಿಕ್ರ ಗ್ರಾಮವನ್ನು ನಿರಾಕರಿಸುತ್ತಾನೆ.

ಮೇಲಿನ ಎರಡೂ ಸಂದರ್ಭಗಳಲ್ಲಿ, ಶೋಷಣೆಗೊಳಗಾದ ವ್ಯಕ್ತಿಗಳ ಮನಸ್ಥಿತಿ ಒಂದೇ ಆಗಿರುವುದನ್ನು ನಾವಿಲ್ಲಿ ಗಮನಿಸಬಹುದು. ಗ್ರಾಮೀಣ ಪರಿಸರದ ಶೋಷಣೆಯ ಸ್ವರೂಪ ಮತ್ತು ಕಾರಣಗಳ ದಟ್ಟ ಹಾಗೂ ನೈಜ ಸ್ಥಿತಿಗಳನ್ನು ಈ ಕಥನಗಳು ಹೊರಹಾಕಿವೆ. ಮೇಲ್ಜಾತಿ ವರ್ಗಗಳ ಹಿಡಿತದಲ್ಲಿ ಕೆಳಜಾತಿ-ವರ್ಗಗಳು ಅನುಭವಿಸುತ್ತಿರುವ ಅನ್ಯಾಯ, ಅತ್ಯಾಚಾರ, ದಬ್ಬಾಳಿಕೆಗಳಿಗೆ ಕೆಳವರ್ಗಗಳ ನಿಸ್ಸಹಾಯಕತೆ, ಅಸಂಘಟನೆ ಸ್ಥಿತಿಗಳು ಮುಖ್ಯ ಕಾರಣವಾಗಿವೆ. ಭೂಮಿಯ ಮೇಲಿನ ಸಾಗುವಳಿ ಹಕ್ಕನ್ನು ಕಳೆದುಕೊಂಡ ತೋಮ ಮತ್ತು ಬಿಕ್ರರು, ಅದಕ್ಕೆ ಕಾರಣವಾದ ವ್ಯಕ್ತಿ/ಶಕ್ತಿಯನ್ನು 'ನರಭಕ್ಷಕ, ಸೂಳೆಮಗ' ಎಂಬ ವಿಶೇಷಣಗಳಿಂದ (ದಣಿ/ ಸಾಹುಕಾರರ ಎದುರಿಗಲ್ಲ) ಬಯ್ಯುವಲ್ಲಿ ಅವರ ಹೊಟ್ಟೆಯೊಳಗಿನ ಕಿಚ್ಚಿನ ತೀವ್ರತೆಯನ್ನು ಕಾಣುತ್ತೇವೆ. ಬಡವನ ಸಿಟ್ಟು ದವಡೆಗೆ ಮೂಲ ಎಂಬ ಮಾತಿನಂತೆ ಈ ಪ್ರತಿರೋಧ ಯಾವ ಫಲವನ್ನೂ ನೀಡುವುದಿಲ್ಲ. ತಾನು ಬೆಳೆದ ತರಕಾರಿ ದನಿಗಳ ಪಾಲಾದಾಗ ನಿರಾಸೆಗೊಂಡ ತೋಮನ (ಅವನ ಸಂಸಾರದ) ಪ್ರತಿಕ್ರಿಯೆಯನ್ನು ಗಮನಿಸಬಹುದು.

> 'ಚಿಂತಿಲ್ಲ ಸೋಮಿ, ಈ ನರಭಕ್ಷಕ ಧಣಿಗ್ಳ ಜಾತಿಯೇ ಹಾಗೆ! ಆಗೋದಾಗ್ಲಿ, ನಾನು ಪ್ರಾಣ ಹೋದ್ರೂ ಇವತ್ತು ಬಿಟ್ಟೀಗ್ಹೋಗೋನಲ್ಲ. ನಂಗೂ ಮನೆಯುಂಟು. ಸಂಸಾರವುಂಟು. ಹಬ್ಬವುಂಟು. .'[೪೯]

ಹೀಗೆ ಹೇಳಿದ ತೋಮ ಒಡೆಯರ ಮನೆಗೆ ಹಬ್ಬದ ಬಿಟ್ಟಿಚಾಕರಿಗೆ ಹೋಗುವುದನ್ನು ನಿಲ್ಲಿಸಿ ಪ್ರತಿಭಟಿಸುತ್ತಾನೆ. ಒಡೆಯ ದಂಡ ಹಾಕಿದಾಗ ಇರುವ ಎತ್ತು ಮಾರಿ ದಂಡ ಕಟ್ಟುತ್ತಾನೆ. ತೋಮನ ವೈಯಕ್ತಿಕ ಪ್ರತಿಭಟನೆ ಸಂಘಟನೆಯ ರೂಪ ತಾಳುವುದಿಲ್ಲ. ಉಳಿದ ಗೇಣಿ ರೈತರು ಒಡೆಯರ ಭಯದಿಂದ ಇವನಿಗೆ ಸಹಾಯವನ್ನೂ ಮಾಡುವುದಿಲ್ಲ. ಅಂತಿಮ ನಿರ್ಧಾರ ತೆಗೆದುಕೊಳ್ಳುವ ತೋಮನಲ್ಲಿ ಕಾಣಿಸುವ ಆತ್ಮಸ್ಥೈರ್ಯವನ್ನು ಇಲ್ಲಿ ಅಧ್ಯಯನ ಗುರುತಿಸುತ್ತದೆ. 'ಧನಿಗ್ಳು! ನಾವು ಗುಲಾಮ್ರು! ಥೀ, ಬೇಡಿ ತಿಂದ್ರೂ ಗಾಬ್ರಿ ಇಲ್ಲ ಈ ಒಕ್ಲುತನ ಬೇಡಪ್ಪಾ. ಬೆವ್ರಿಳ್ಸಿ ಮಾಡಿದ್ದು ಸಸಂತ್ರವಾಗಿ ತಿನ್ನಿಕ್ಕಿಲ್ಲ. ಹಬ್ಬಾಯ್ತಲ್ಲಾಂತ ಹಾಯಾಗಿರ್ಲಿಕ್ಕಿಲ್ಲ.' (ಪುಟ ೫೦) ಎಂಬ ಮಾತುಗಳು 'ದಿಕ್ಕೇಡಿಯಾದೆನೆಲ್ಲ' ಎಂಬ ಬಿಕ್ರನ ಮಾತಿನ ಧಾಟಿಯಲ್ಲಿಯೇ ಇವೆ. 'ಹಾಳಾದ ರಂಡಿ ಕೈಕೊಟ್ಟು, ದುಡದವರ್ದು ತಿನ್ನೋ ಸಾವ್ಕಾರ ಸೂಳೆಮಗ ನನ್ನ ಹೊಲಾ ನುಂಗಿದ. ಮನೆ ಮನಸ್ಸು ಎರಡೂ ದಿಕ್ಕೇಡಿ.'[೫೦] ಬಿಕ್ರನ ಈ ಮಾತುಗಳು ಆತ್ಮವಿಶ್ವಾಸದ ಕೊರತೆಯಿಂದ ಅವನು ನರಳುವುದನ್ನು ಹೇಳುತ್ತವೆ. ಬಿಕ್ರನಲ್ಲಿರುವ ದ್ವಂದ್ವ ತೋಮನಲ್ಲಿ ಕಾಣಿಸುವುದಿಲ್ಲ. ಇಂತಹ ಸಂದರ್ಭಗಳು ಶ್ರಮಿಕ ಕೆಳವರ್ಗ ಶೋಷಣೆಯಿಂದ ನಿರಾಸೆಗೊಂಡು/ಜಿಗುಪ್ಸೆಗೊಂಡು ಗ್ರಾಮ/ನಗರ ಜೊತೆ ತಮ್ಮ ಮೂಲ ವೃತ್ತಿಯನ್ನೂ ನಿರಾಕರಿಸುವುದನ್ನು ಅಧ್ಯಯನ ಗುರುತಿಸುತ್ತದೆ.

ಬಸವರಾಜ ಕಟ್ಟೀಮನಿ ಅವರ 'ಬೀದಿಯಲ್ಲಿ ಬಿದ್ದವಳು' (೧೯೫೨) ಕಾದಂಬರಿಯ ಯಮುನೆ, ವೆಂಕಟೇಶ ಹುಣಸೀಕಟ್ಟಿ ಅವರ 'ಕೋಲ್ಮಿಂಚು' ಕಾದಂಬರಿಯ (೧೯೭೩) ವಿನೋದ, ಭಾಗೀರಥಿ ಇವರ ಗ್ರಾಮ ನಿರಾಕರಣೆಯು ಸಹ ವರ್ಗ ತಾರತಮ್ಯದ ಆಯಾಮದಲ್ಲಿ ಹುಟ್ಟಿಕೊಂಡಿದ್ದಾಗಿದೆ. ಇವರೆಲ್ಲರ ಗ್ರಾಮ ನಿರಾಕರಣೆಗೆ ಗ್ರಾಮದ ಗೌಡ/ಸಾಹುಕಾರನೊಂದಿಗಿನ ಸಂಘರ್ಷ, ಪಟ್ಟಭದ್ರ ಹಿತಾಸಕ್ತಿಯ ವಿರೋಧ ಕಾರಣ ಎನ್ನಬಹುದು. ಯಮುನಿ ಗಂಡನ ಊರಿಂದ ತಾಯಿಯ ಊರಿಗೆ ಬಂದಾಗ, ಅಲ್ಲಿ ಯಾವ ವರ್ಗ(ಕೆಳ, ದಲಿತರೂ)ದ ಜನರೂ ಅವಳಿಗೆ ಆಶ್ರಯ ನೀಡುವುದಿಲ್ಲ.

> 'ಗೌಡರನ್ನು ಎದುರು ಕಟ್ಟಿಕೊಂಡು ಈ ಊರಾಗ ಬಾಳೇವು ಮಾಡೋದು ಹ್ಯಾಂಗ? ನೀ ಇಲ್ಲಿ ಇರೋದು ಗೊತ್ತಾದರೆ ಗೌಡರು ನಾಳೆ ನಮ್ಮನ್ನೂ ಪೋಲೀಸರಿಗೆ ಹಿಡಿದು ಕೊಟ್ಟಾರು. ಎಲ್ಲಾದರೂ ಹೋಗಿ ಬದ್ಕುಕೊಳ್ಳವ್ವ' ಎಂದು ಒಬ್ಬರು ಉತ್ತರವಿತ್ತರು. ಯಮುನಾ ನಿರಾಶಳಾಗಿ ಹಿಂದುರಿಗಿ, ಊರು ತ್ಯಜಿಸಿ ಹೊರಟಳು. ಊರಿನಲ್ಲಿ ಯಾರೂ ತನ್ನನ್ನು ಕರೆದುಕೊಳ್ಳಲಿಲ್ಲ.'

ಭಾರತೀಯ ಗ್ರಾಮಗಳ ಅಂದು ಮತ್ತು ಇಂದಿನ ಸ್ಥಿತಿಗಳಲ್ಲಿ ವ್ಯತ್ಯಾಸವೇನೂ ಆಗಿಲ್ಲ. ಗೌಡಿಕೆಯ ವ್ಯವಸ್ಥೆ ಮಾಯವಾಗಿದ್ದರೂ ಉಚ್ಚ ವರ್ಗಗಳು ಗ್ರಾಮದ ಆರ್ಥಿಕ, ಸಾಮಾಜಿಕ ವ್ಯವಸ್ಥೆಯನ್ನು ತಮ್ಮ ಜಿಗಿ ಹಿಡಿತದಲ್ಲಿ ಇಟ್ಟುಕೊಂಡಿವೆ. ಪರಸ್ಪರ ಸಹಕಾರದಿಂದ ಬಾಳುವೆ ಮಾಡುತ್ತಿವೆ ಎಂಬ ಹೆಗ್ಗಳಿಕೆಯ ಗ್ರಾಮಗಳು ಕೆಲವೇ ಜಾತಿಗಳ ಪ್ರಾಬಲ್ಯದಿಂದ ಅಸಹಕಾರ ಕೂಪಗಳಾಗಿವೆ ಎಂಬ ಸತ್ಯವನ್ನು ಈ ಮಾತು ಸಾಬೀತು ಪಡಿಸುತ್ತದೆ. 'ಆಕಿಯ ರೂಪ ಯಾರು ನೋಡುತಾರೆ? ಕೂಲಿ ಮಾಡಿ ಹೊಟ್ಟೆ ತುಂಬಿಸಿಕೊಳ್ಳುವವರ ಕುಲದಾಗ ರೂಪ, ಬಣ್ಣಕ್ಕ ಏನು ಬೆಲೆ ಐತಿ?' (ಪುಟ ೩೦) 'ಅವ ಗಂಡಸು. ಅವ ಎಷ್ಟೋ ಮಂದಿನ್ನ ಬೇಕಾದರೂ ಮಾಡಕೊಳ್ಳಾಕ ಬರತೈತಿ. ನೀನು ಹೆಂಗಸು. ಅವನಿಂದ ಸೋಡಚೀಟಿ ಸಿಕ್ಕಿದ ಮ್ಯಾಲ ನೀ ಬ್ಯಾರೆವನ್ನ ಮಾಡಿಕೊಳ್ಳಾದು'(ಪುಟ ೩೨) ಎಂಬ ಮಾತುಗಳು ಹೆಣ್ಣು ಅದರಲ್ಲೂ ಬಡ ಹೆಣ್ಣು, ಹಳ್ಳಿ, ನಗರ ಎರಡರಲ್ಲಿಯೂ ಭೋಗವಸ್ತು, ಗಂಡ ಬಿಟ್ಟರೆ ಅವಳು ಎರಡನೇ ಮದುವೆಯಾಗುವ ಹಾಗಿಲ್ಲ ಎನ್ನುವುದು ಲಿಂಗ ಶೋಷಣೆಯ ತೀವ್ರತೆಯಾಗಿದೆ. ಯಮುನ ವರ್ಗ, ಲಿಂಗಾಧಾರಿತ ಶೋಷಣೆಯ ಪರಿಣಾಮವಾಗಿ ಗ್ರಾಮ ನಿರಾಕರಿಸುತ್ತಾಳೆ. ಕೋಲ್ಮಿಂಚು ಕಾದಂಬರಿಯಲ್ಲಿ ವಿನೋದನ ಪ್ರತಿಭೆ ಹಾಗೂ ಅವನ ಬಡತನ ಅವನ ಶತ್ರುಗಳಾಗಿವೆ. ಅವನದೇ ಜಾತಿಯ ಎಂ.ಎಲ್.ಎ. ಗಿರಿಗೌಡನ ಮಗಳು ಕಲಾವತಿ ಇವನ ಸರಳತೆ, ಪ್ರತಿಭೆಯನ್ನು ಪ್ರೀತಿಸಿ ಮದುವೆಯಾಗಲು ಒತ್ತಾಯಿಸುತ್ತಾಳೆ. 'ಬಡವರು ಶ್ರೀಮಂತರ ವಿರೋಧವನ್ನು ಕಟ್ಟಿಕೊಳ್ಳುವುದೆಂದರೆ ಉಡಿಯಲ್ಲಿ ಬೆಂಕಿಯನ್ನು ಕಟ್ಟಿಕೊಂಡಂತೆಯೆ. ಬಡವರಾಗಿ ಹುಟ್ಟಿದ್ದೆ ತಪ್ಪೋ' ಎಂಬ ಅಭಿಪ್ರಾಯ ವ್ಯಕ್ತಪಡಿಸುವ ವಿನೋದ ತನ್ನ ತಾಯಿಯ ರಕ್ಷಣೆಗಾಗಿ ಗ್ರಾಮ ನಿರಾಕರಣೆ ಮಾಡುತ್ತಾನೆ. ಒಟ್ಟಾರೆ ಪ್ರಸ್ತುತ ಸಾಹಿತ್ಯದ ಹಲವು ಕಥೆ, ಕಾದಂಬರಿಗಳು ನಿರಾಕರಣೆಯನ್ನು ಒಂದು ಪ್ರತ್ಯೇಕ ಸಮಸ್ಯೆಯಾಗಿ ಪರಿಗಣಿಸಿಲ್ಲ. ಸಾಮಾಜಿಕ ನೆಲೆಯಲ್ಲಿ ಉಂಡುಟ್ಟು ಬದುಕುವ ಕ್ರಿಯೆಯ ಹಾಗೆ ಒಂದು ಸಾಮಾನ್ಯ ಸಂಗತಿ ಎಂಬಂತೆ ಕಾಣಲಾಗಿದೆ.

ಸಾಮಾಜಿಕ ನೆಲೆಯಲ್ಲಿ ವರ್ಣ/ವರ್ಗ ಶೋಷಣೆಯ ಫಲವಾಗಿ ಕಂಡುಬರುವ ನಿರಾಕರಣೆಗೆ ಪ್ರಸ್ತುತ ಕಥನ ಸಾಹಿತ್ಯ ಅನೇಕ ಕಾರಣಗಳನ್ನು ಮುಂದಿಡುತ್ತದೆ. * ಭಾರತೀಯ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಉಚ್ಚ-ನೀಚ, ಸ್ಪೃಶ್ಯ-ಅಸ್ಪೃಶ್ಯ ಎಂಬ ಮೇಲು ಕೀಳು ಈಗಲೂ ಕಂಡುಬರುತ್ತದೆ. ದಲಿತ, ಹಿಂದುಳಿದವರಿಗೆ ಕಾನೂನಿನ ರಕ್ಷಣೆ ಇದ್ದಾಗ್ಯೂ ಆ ಕಾನೂನು ಜಾತಿ ಜಾತಿಗಳ ನಡುವಿನ ಅಂತರವನ್ನು ಇನ್ನೂ ಹೆಚ್ಚಿಸಿದೆ. ಸಮಾಜದಲ್ಲಿ ಸಂಘರ್ಷ ಉಂಟಾದಾಗ ಅದರ ತೀಕ್ಷ್ಣ ಪ್ರತಿಫಲವೆಂಬಂತೆ ದಲಿತ, ಹಿಂದುಳಿದ ಇಲ್ಲವೇ ಆರ್ಥಿಕವಾಗಿ ದುರ್ಬಲರಾದ ವ್ಯಕ್ತಿಗಳು (ಚಂಬಿ, ಯಮುನೆ ಇತರರು) ಗ್ರಾಮ/ನಗರ ನಿರಾಕರಿಸುವುದನ್ನು ನೋಡುತ್ತೇವೆ. * ಕೆಳ, ದಲಿತ ವರ್ಗಗಳ ಪಾತ್ರಗಳು (ಮಾದೇವ, ಮರಿಯ, ಪೀಟರ್) ವ್ಯವಸ್ಥೆಯ ಭೌತಿಕ, ಮಾನಸಿಕ ಶೋಷಣೆಯನ್ನು ಸಹಿಸಲಾರದೇ ಗ್ರಾಮ/ನಗರದಿಂದ ದೂರ ಹೋಗಲು ನಿರಾಕರಣೆಯ ನಿರ್ಧಾರವನ್ನು ತೆಗೆದುಕೊಳ್ಳುತ್ತಾರೆ. * ವರ್ಗ ಸಂಘರ್ಷದ ಅಂತಿಮ ಪರಿಣಾಮವಾಗಿ ಕೆಳವರ್ಗದ ರೈತರು, ಗೇಣಿ ಒಕ್ಕಲುಗಳು, ಕೃಷಿ ಕಾರ್ಮಿಕರು (ಬಿಕ್ರ, ತೋಮ ಮುಂತಾದವರು) ಗ್ರಾಮ ನಿರಾಕರಿಸುವುದು ಕಂಡುಬರುತ್ತದೆ. * ಗ್ರಾಮಗಳಲ್ಲಿ ಮಹಿಳಾ ಶೋಷಣೆಗೆ ಬಲಿಯಾಗುವ ಹೆಚ್ಚಿನವರೆಂದರೆ ಆರ್ಥಿಕವಾಗಿ ಅಬಲರಾದ ದಲಿತ, ಹಿಂದುಳಿದ ಕುಟುಂಬದ

ಮಹಿಳೆಯರಾಗಿದ್ದಾರೆ. * ದಲಿತ, ಬಡವರ ಹಕ್ಕು – ಬಾಧ್ಯತೆಗಳನ್ನು ಎತ್ತಿ ಹಿಡಿದು ರಕ್ಷಣೆ ಕೊಡಬೇಕಾದ ಸಂವಿಧಾನ ರಕ್ಷಕ ನ್ಯಾಯಾಂಗ ತನ್ನ ಕರ್ತವ್ಯದಲ್ಲಿ ಲೋಪವೆಸಗಿದಾಗ, ನ್ಯಾಯದಿಂದ ವಂಚಿತವಾದ ಕುಟುಂಬಗಳು (ಕೋಲ್ಮಿಂಚು ಕಾದಂಬರಿಯ ಫಕೀರಪ್ಪ) ಗ್ರಾಮ/ನಗರಗಳನ್ನು ನಿರಾಕರಿಸುತ್ತವೆ. * ಮನುಷ್ಯರನ್ನು ಮನುಷ್ಯರಂತೆ ಕಾಣದ ಅಸ್ಪೃಶ್ಯತೆಯ ಆಚರಣೆಯು ದಲಿತರ ವ್ಯಕ್ತಿತ್ವಗಳ (ನಿರಾಕರಣೆಯ ನೆಲೆಯಲ್ಲಿ) ಮೇಲೆ ಋಣಾತ್ಮಕ ಮತ್ತು ಧನಾತ್ಮಕ ಹೀಗೆ ಎರಡೂ ವಿಧದ ಪರಿಣಾಮಗಳನ್ನು ಬೀರುತ್ತದೆ. ಹೊಸ ಅಲೆ ಕತೆಯ ಹಳೆಯ ತಲೆಮಾರಿನ ದ್ಯಾಮನ ವ್ಯಕಿತ್ವವು ಕುಬ್ಜವಾಗುತ್ತ, ಭ್ರಮನಿರಸನಗೊಂಡರೆ, ಅವನ ಮಗ ಮರಿಯ ಮತ್ತು ಚಂಬಿ ಕಥೆಯ ಚಂಬಿಯರ ವ್ಯಕ್ತಿತ್ವ ವ್ಯವಸ್ಥೆ ಕುರಿತು ವ್ಯಗ್ರತೆ ಬೆಳೆಸಿಕೊಂಡು ಬಿಡುಗಡೆಗಾಗಿ ಹೊಸ ಪರಿಸರ/ನಗರಗಳತ್ತ ಹೊರಳುತ್ತವೆ.

## ೪. ಆಡಳಿತಾತ್ಮಕ (ಪ್ರಭುತ್ವ) ನೆಲೆ ಮತ್ತು ನಿರಾಕರಣೆ

### ಅ. ಭೂ ಸುಧಾರಣೆ ಕಾನೂನು

ಭೂ ಸುಧಾರಣೆ ಕಾನೂನು (೧೯೭೩) ಸ್ವತಂತ್ರ ಭಾರತ ಜಾರಿಗೊಳಿಸಿದ ಪ್ರಮುಖ ಕಾನೂನಾಗಿದೆ. ಭೂಮಿಯ ಒಡೆತನವಿಲ್ಲದ ಲಕ್ಷಾಂತರ ಗೇಣಿ ರೈತರು ಭೂಮಿಯ ಒಡೆತನವನ್ನು ಪಡೆದುಕೊಂಡು ಫಲಾನುಭವಿಗಳಾದರೆ, ಭೂಮಾಲೀಕರು ಅನೇಕ ವರ್ಷಗಳಿಂದ ಅನುಭವಿಸಿಕೊಂಡು ಬಂದ ಗೇಣಿ ಭೂಮಿಯನ್ನು ಕಳೆದುಕೊಂಡು ಅಭದ್ರತೆಯನ್ನು ಅನುಭವಿಸುವಂತಾದುದು ಈ ಕಾನೂನಿನ ಫಲವಾಗಿದೆ. ಸರಕಾರ ಇಂತಹವರಿಗೆ ಪರಿಹಾರವನ್ನು ಘೋಷಿಸಿದ್ದರೂ ಅದರ ಪೂರ್ಣ ವಿತರಣೆಯಲ್ಲಿನ ಕುಂದುಕೊರತೆಗಳು ಮಾಜಿ ಭೂಮಾಲಿಕರಿಗೆ ನ್ಯಾಯವನ್ನು ಒದಗಿಸಲಿಲ್ಲ ಎನ್ನಬಹುದು. ಹೀಗೆ ತ್ರಿಶಂಕುವಾದ ಕುಟುಂಬಗಳಿಗೆ ಆಡಳಿತವು ಸಾಮಾಜಿಕ, ಆರ್ಥಿಕ ಭದ್ರತೆಯನ್ನು ಒದಗಿಸುವತ್ತ ಗಮನ ಹರಿಸುವ ಅಗತ್ಯವಿತ್ತು ಎಂಬ ಅಂಶ ವಿಚಾರಾರ್ಹವಾಗಿದೆ. ಈ ಕಾನೂನು ಬರುವಾಗ ತಂದ ಬಿರುಗಾಳಿ, ಹುಟ್ಟಿಸಿದ ಆತಂಕ, ತಲ್ಲಣ, ದ್ವಂದ್ವಗಳು ಸಾವಿರಾರು. ಆದರೆ ಸಾಹಿತ್ಯದ ದೃಷ್ಟಿಯಲ್ಲಿ ಅವುಗಳು ಮಹತ್ವದವು ಅನ್ನಿಸಲೇ ಇಲ್ಲ ಎನ್ನಬಹುದು. ಈ ಕಾನೂನಿನ ರಚನೆ, ಅನುಷ್ಠಾನವನ್ನು ನಮ್ಮ ರಾಜಕೀಯ, ಸಾಮಾಜಿಕ ವ್ಯವಸ್ಥೆ ಬಿರುಸಾಗಿ, ಬಿಸಿಯಾಗಿ ಸ್ವೀಕರಿಸಿದರೆ, ಸಾಹಿತ್ಯ ತಣ್ಣಗೆ ಸ್ವೀಕರಿಸಿದೆ. ಇಂತಹ ಆರ್ಥಿಕ, ಸಾಮಾಜಿಕ ಪರಿವರ್ತನೆಗೆ ಕಾರಣವಾದ ಕಾನೂನಿನ ಪರಿಣಾಮಗಳನ್ನು ಹಲವು ದೃಷ್ಟಿಕೋನಗಳಿಂದ ಪರೀಕ್ಷಿಸುವ ಮತ್ತು ವಿಮರ್ಶಿಸುವ ಕ್ರಮ ಯಾಕಾಗಿ ಕಥನ ಸಾಹಿತ್ಯದಿಂದ ಹೊರಹೊಮ್ಮಲಿಲ್ಲ ಎಂಬುದು ಸೋಜಿಗದ ಪ್ರಶ್ನೆಯಾಗಿದೆ. ಒಂದು ಕಾಲಕ್ಕೆ ಗೇಣಿ ರೈತರ ಬೆವರಿನಿಂದ ರಾಜಸುಖ ಅನುಭವಿಸಿದ ಭೂ ಒಡೆಯರು ತಮ್ಮ ದರ್ಪ, ವಿಲಾಸಿ ಜೀವನದಿಂದ ಹಂತಹಂತವಾಗಿ ಹೇಗೆ ಆರ್ಥಿಕ ಸಡಿಲತೆಯತ್ತ ನಡೆದಿದ್ದರು ಎಂಬುದನ್ನು ಕಥನ ಸಾಹಿತ್ಯ ಸಂದರ್ಭಾನುಸಾರ (ಅಲ್ಲಲ್ಲಿ ಮಾತ್ರ) ಕಟ್ಟಿಕೊಡುತ್ತದೆ.

ವ್ಯಾಸರಾವ್ ನಿಂಜೂರ ಅವರ 'ಮಂಚ' ಕತೆಯ ಮೇಣ್ಣ ಹೆಗಡೆಯವರದು ಭೂ ಒಡೆಯರ ಮನೆತನ. ನೂರಾರು ಎಕರೆ ಗದ್ದೆ, ಕಂಬಳ ಗದ್ದೆ ಅದರ ಆಸುಪಾಸಿನಲ್ಲಿ ಬಾಕ್ಯಾರು, ಬೆಟ್ಟುಗದ್ದೆಗಳು, ಸಾವಿರ ಹೆಬ್ಬಲಸಿನ ಮರಗಳು, ನೂರೆಕರೆಗೆ ನೇಜಿ ಪೂರೈಸಬಲ್ಲ ನೀರಿನ ಆಶ್ರಯವುಳ್ಳ ಬಯಲು ಗದ್ದೆಗಳು, ಕೋಟೆಯಂತಹ ಗುತ್ತಿನ ಮನೆ, ಹತ್ತಾರು ಆಳುಕಾಳು ಇವೆಲ್ಲ ಗೇಣಿ ರೈತರ ದುಡಿಮೆಯ ಫಲವಾಗಿತ್ತು. ಇಂಥ ಮನೆತನ ಹೆಗ್ಡೆ ಮತ್ತು ಅವರ ಮನೆ ಅಳಿಯ ದಾಸಣ್ಣ ಹೆಗ್ಡೆಯವರ ದುರ್ವ್ಯಸನಗಳಿಂದ ಹಾಳಾದ ಬಗೆಯನ್ನು ಕತೆಯಲ್ಲಿ ಕಾಣುತ್ತೇವೆ. ಕೋಳಿ ಅಂಕ, ಕಂಬಳ ಕೋಣನ ಅಂಕ, ಬಂಡಾರಿ ಹೆಂಗಸರ ಸಂಗ ಮಾಡುತ್ತ ಆನೆ ಗಾತ್ರದ ಆಸ್ತಿಯನ್ನು ಕ್ರಮೇಣ ಕರಗಿಸುವಾಗಲೇ ಭೂ ಸುಧಾರಣೆ ಕಾನೂನು ಜಾರಿಗೊಳ್ಳುತ್ತದೆ.

> 'ಕೋಟಿಗಟ್ಟಲೆ ಆಸ್ತಿ ಎಲ್ಲ ಒಕ್ಕಲುಗಳ ಪಾಲಾಗಿ ಸ್ವಂತ ಸಾಗುವಳಿ ಮಾಡುತ್ತಿದ್ದ ಬಾಕ್ಯಾರು ಗದ್ದೆ, ಕಂಬಳ ಗದ್ದೆ, ಕೊಳಕೆ ಬೆಳೆ ತೆಗೆಯುವ ಒಂದಿಷ್ಟು ಬೈಲುಗದ್ದೆ ಮಾತ್ರ ಉಳಿದಿದ್ದವು. ಹಾಡಿ, ತೆಂಗಿನ ತೋಟಗಳೂ ಪರಭಾರೆಯಾಗಿದ್ದವು. ಪಂಜುರ್ಲಿಯ ಗುಡಿ ಬಿದ್ದು ಹೋಗಿ ಕಮ್ಮಾರ ಮರದ ನೆರಳೇ ಭೂತಕ್ಕೆ ಛತ್ರವಾಗಿ, ತೆಂಗಿನ ಸೋಗೆಗಳಷ್ಟೇ ಚಾಮರಗಳಾಗಿದ್ದವು.'[೫೩]

ಈ ಮಾತುಗಳು ಭೂ ಒಡೆಯರು ಹೊಂದಿದ ಆಸ್ತಿ ಹೇಗೆ ಗೇಣಿ ರೈತರಿಗೆ ಪರಬಾರೆಯಾಯ್ತು ಎಂಬುದನ್ನು ಹೇಳಿವೆ. ಭೂ ಒಡೆಯರ ವೈಭವದ ಬದುಕಿಗೆ ತೆರೆ ಎಳೆದ ಕಾನೂನು ನೂರಾರು

ರೈತರಿಗೆ ಜಮೀನು ಹಂಚಿದಾಗ ಮೇಣ್ಕ ಹೆಗ್ಡೆಯವರು ಏನನ್ನೂ ತೆಗೆದುಕೊಳ್ಳದೇ ವಿಧಿವಶರಾಗುತ್ತಾರೆ. ನೂರಾರು ಒಕ್ಕಲುಗಳ ಶ್ರಮದಿಂದ ಒಂದು ಕಾಲಕ್ಕೆ ಎದ್ದು ನಿಂತಿದ್ದ ಪಂಜುಗುತ್ತು ಪಾಳೆಗಾರಿಕೆ ನಾಶದತ್ತ ಸರಿದ ರೀತಿಯನ್ನು ಗಮನಿಸುತ್ತೇವೆ. ಇದು ಒಂದು ಕುಟುಂಬದ ನಾಶವಾಗಿ ಕಾಣದೆ, ಒಂದು ವ್ಯವಸ್ಥೆಯ ಅವಸಾನವನ್ನೂ ಹೇಳುತ್ತದೆ. ಮಾವನ ರಾಜಮಾರ್ಗದಲ್ಲಿಯೇ ಮುನ್ನಡೆದ ದಾಸಣ್ಣ ಹೆಗ್ಡೆ ಆದಷ್ಟು ಗುತ್ತಿನ ಮನೆಯ ಅಳಿದುಳಿದ ನಗ, ಪಾತ್ರೆ ಪಗಡೆಗಳನ್ನು, ಕಾಯಿ, ಅಡಿಕೆ, ಭತ್ತ ಧಾನ್ಯಗಳನ್ನು ಮಾರಿ ತನ್ನ ವಿಲಾಸ, ವೈಭೋಗಕ್ಕೆ ಕುಂದು ಬರದಂತೆ ನೋಡಿಕೊಳ್ಳುತ್ತಾನೆ. ಪಂಜುರ್ಲಿ ಭೂತಕ್ಕೆ ಒಂದು ಮಂಚ ಮಾಡಿಸು ಎಂದು ದುಂಬಾಲು ಬಿದ್ದ ಅಕ್ಕಣ್ಣಿ ಶೇಡ್ತಿಗೆ ದಾಸಣ್ಣ ಹೇಳುವ 'ಸ್ವಲ್ಪ ಸುಮ್ಮನಿರಬಾರದೇ ಮಾಮಿಯೆ ನೀನು. ನನ್ನೂ ಕೈಕಟ್ಟಿದೆ. ಗದ್ದೆಗಿದ್ದೆ ಎಲ್ಲ ಒಕ್ಲುಗಳ ಪಾಲಾಗಿದೆ. ಇಲ್ಲಿ ನನ್ನ ಹತ್ರ ವಿಷ ತಿನ್ನಲಿಕ್ಕೂ ಪಾವಾಣೆ ಇಲ್ಲ.' (ಪುಟ ೮) ಈ ಮಾತು ಭೂ ಒಡೆಯರ ಆರ್ಥಿಕ ಬದುಕಿನ ದೀನಸ್ಥಿತಿಯನ್ನು ಬಿಚ್ಚಿಟ್ಟಿದೆ. ಸಾಮಾಜಿಕ ಭದ್ರತೆ, ಆರ್ಥಿಕ ಸ್ಥಿರತೆಯಿಲ್ಲದ ದಾಸಣ್ಣ ಹೆಗ್ಡೆಯ ಮಾತುಗಳು ಉಣ್ಣುವ ಅನ್ನಕ್ಕೂ ತೊಂದರೆ ಅನುಭವಿಸುವ ಭೂ ಒಡೆಯರ ಸ್ಥಿತಿಗತಿಯನ್ನು ಹೇಳುತ್ತವೆ. ಮುಂದೊಮ್ಮೆ ದಾಸಣ್ಣ ಹೆಗಡೆ ಲೈಂಗಿಕ ಹಗರಣವೊಂದರಲ್ಲಿ ಸಿಲುಕಿಕೊಂಡು ಪಡಮುನ್ನೂರು ಗ್ರಾಮ ನಿರಾಕರಿಸಲು ಇಂತಹ ಕಾನೂನಿನ ಬಿಗಿ ಮುಷ್ಟಿಯೇಟೂ ಒಂದು ಕಾರಣವೆನ್ನಬಹುದು. ವ್ಯಾಸರಾಯ ಬಲ್ಲಾಳರ 'ಹೆಜ್ಜೆ' ಕಾದಂಬರಿಯ ಗಂಗೊಳ್ಳಿಯ ಪರಮೇಶ್ವರ ಐತಾಳರ ಮನೆತನದ್ದೂ ಇದೇ ವಿನಾಶದ ಕತೆಯಾಗಿದೆ. ಒಂದು ಕಾಲಕ್ಕೆ ಸುಸ್ಥಿತಿಯಲ್ಲಿದ್ದ ಮನೆತನ ಐತಾಳರ ರಸಿಕತೆ, ಮಗ ಶಂಕರನ ವಿಲಾಸ, ಉಡಾಫೆ, ಹೊಣೆಗೇಡಿತನಗಳು ಮನೆತನದ ಆರ್ಥಿಕ ಸ್ಥಿತಿ ಕುಸಿದು ಊಟಕ್ಕೂ ಗತಿಯಿಲ್ಲದಂತಹ ಅತಂತ್ರ ಸ್ಥಿತಿಯನ್ನು ತಂದೊಡ್ಡುತ್ತವೆ. ಹುಂದಾಡಿ, ಮೋಗೇರಿ, ಶಂಕರನಾರಾಯಣದಲ್ಲಿದ್ದ ಗೇಣಿ ಆಸ್ತಿಯನ್ನು ಐತಾಳರು ಮಾರಿ ತಮ್ಮ ವಿಷಯಲೋಲುಪ ಜೀವನ ಮುಗಿಸಿದರೆ, ಮಗ ಮನೆಯಲ್ಲಿನ ಬಂಗಾರ, ಪಾತ್ರೆಪಗಡೆ ಮಾರಿ ಗಂಗೊಳ್ಳಿ ನಿರಾಕರಿಸಿ ಹೋಗುತ್ತಾನೆ. ಇಂತಹ ಮನೆತನದ ಸೊಸೆ ಪಾರ್ವತಿ ತನ್ನ ಬದುಕಿನ ಶೋಚನೀಯ ಸ್ಥಿತಿಯನ್ನು ಹೇಳುವ, 'ಅವರು ಬಂದಾಗ ಐವತ್ತೋ, ಮೂವತ್ತೋ ಕೊಟ್ಟು ಹೋಗ್ತಾರೆ, ಹಾಗೆ ಒಬ್ಬ ಗೇಣಿ ಒಕ್ಕಲು ಇನ್ನೂ ಮಾವನ ಮೇಲಿನ ಅಭಿಮಾನ ಇಟ್ಕೊಂಡು ಒಂದು ಹತ್ತು ಮುಡಿ ಅಕ್ಕಿ ತಂದು ಹಾಕ್ತಾನೆ, ರಾಮಾನಾಯ್ಕಾಂತ. ಗಂಜಿ ಮಾಡಿಕೊಳ್ತೇನೆ'[೧೫೪] ಎಂಬ ಮಾತುಗಳು ಭೂ ಒಡೆಯರ ಆರ್ಥಿಕ ದೀನತೆ ಗಂಜಿಗೂ ಗತಿಯಿಲ್ಲದ ಸ್ಥಿತಿಗೆ ತಲುಪಿದ್ದನ್ನು ಕಾಣುತ್ತೇವೆ. ಮೇಣ್ಕ ಹೆಗ್ಡೆ, ದಾಸಣ್ಣ ಹೆಗ್ಡೆ, ಪರಮೇಶ್ವರ ಐತಾಳ, ಶಂಕರ ಮೊದಲಾದವರ ವಿಲಾಸಿ ಜೀವನ ಮತ್ತು ಇವರ ಕಾಲಕ್ಕೆ ಜಾರಿಗೊಂಡ ಕಾನೂನು ಭೂ ಒಡೆಯರ ಮನೆತನಗಳ ಶಿಥಿಲತೆಗೆ ಕಾರಣವಾಗಿ ಅವರ ಗ್ರಾಮ/ನಗರ ನಿರಾಕರಣೆಗೆ ದಾರಿ ಮಾಡಿಕೊಟ್ಟಿದೆ. ಇವರ ನಂತರದ ಹೊಸ ತಲೆಮಾರಿನ ಯುವ ಜನತೆ(ಮಕ್ಕಳು, ಮೊಮ್ಮಕ್ಕಳು)ಯು ಸಾಮಾಜಿಕವಾಗಿ ಶೈಕ್ಷಣಿಕವಾಗಿ ಎಚ್ಚೆತ್ತುಕೊಳ್ಳುವಂತೆ ಪ್ರಭಾವಿಸಿ, ಪರಿಣಾಮವಾಗಿ ಉದ್ಯೋಗ ಹುಡುಕುತ್ತ ಗ್ರಾಮ/ನಗರ ನಿರಾಕರಿಸುವುದನ್ನು ಕಾಣುತ್ತೇವೆ.

ರಾಮಕೃಷ್ಣ ಗುಂದಿ ಅವರ 'ಆರು ಮೇಡಂ ಮತ್ತು ಉದ್ಯೋಗ ಪರ್ವ' ಕತೆಯ ಆರತಿಯ ತಂದೆ ನಿವೃತ್ತ ಸರಕಾರಿ ನೌಕರ. ಅಲ್ಪ ಪೆನ್‌ಶನ್‌ನಲ್ಲಿ ಹೇಗೂ ಜೀವನ ಮಾಡುತ್ತಿದ್ದ ಸಂಸಾರಕ್ಕೆ ಹಳ್ಳಿಯ ಗೇಣಿ ಜಮೀನಿನಿಂದ ಬರುವ ಆದಾಯ ಮೂಲ ಆಸರೆಯಾಗಿರುತ್ತದೆ. 'ಜಮೀನಿನಿಂದ ಬರುವ ಗೇಣಿಯೂ ಸೇರಿ ಜೀವನಕ್ಕೆ ತೊಂದರೆಯಿಲ್ಲ ಅಂದುಕೊಳ್ಳುವಾಗಲೇ ಭೂಮಿಯೆಲ್ಲ ರೈತರ ಪಾಲಿಗಾಯಿತು. ಆದಾಯವಿಲ್ಲದೆ ಮನೆಯ ಆರ್ಥಿಕ ಸ್ಥಿತಿ ಹದಗೆಟ್ಟರೂ'[೧೫೫] ಎನ್ನುವ ಕತೆ ಜಮೀನಿನ ಆದಾಯದ ಆಸರೆಯನ್ನು ಒಪ್ಪಿಕೊಂಡು, ವ್ಯವಸ್ಥೆಯ ಕಠೋರತೆಯನ್ನು ನಿಂದಿಸುತ್ತದೆ. ಅಪ್ಪನ ನಿವೃತ್ತಿ, ಪ್ಯಾರಾಲಿಸಿಸ್‌ನಿಂದಾದ ಅಸ್ವಸ್ಥತೆ ಯಾವುವೂ ಆ ಸಂಸಾರವನ್ನು ಕಂಗೆಡಿಸುವುದಿಲ್ಲ. ಆದರೆ ಗೇಣಿ ಭೂಮಿಯೆಲ್ಲ ರೈತರ ಪಾಲಾದಾಗ ಆ ಸಂಸಾರ ಅನುಭವಿಸುವ ಆರ್ಥಿಕ ಅಸಹಾಯಕತೆ, ನೋವು, ಯಾತನೆಯನ್ನು ಅವಳ ಮಾತುಗಳು ಹೊರಹಾಕಿವೆ. ಮನೆಯ ಜವಾಬ್ದಾರಿ ಹೆಗಲಿಗೇರಿದಾಗ ಶಿಕ್ಷಕರ ತರಬೇತಿ ಮುಗಿಸಿದ್ದ ಆರು ಮೇಡಂ ನಗರವನ್ನು ನಿರಾಕರಿಸುತ್ತಾಳೆ. ಕೇಶವ ಮಳಗಿ ಅವರ 'ಕಡಲ ತೆರೆಗೆ ದಂಡೆ' ಕತೆಯಲ್ಲಿ ಅಗ್ರಹಾರದ ಕೋಟೆಮಠದ ಪಾರುಪತ್ಯೆದಾರ, ದಿವಾನ್ ಜಯಾಚಾರ್ಯರಿಗೆ ಸತ್ಯಪ್ರಮೋದ ಹಿರಿಯ ಮಗ, ಉಳಿದಂತೆ ಏಳು ಜನ ಹೆಣ್ಣು ಮಕ್ಕಳು. ದುಡಿಯುವ ಎರಡು ಕೈಗಳು ಇವರವಾದರೆ, ತಿನ್ನುವ ಬಾಯಿ ಇಪ್ಪತ್ತು. ಹುರುಪಳಿಸಿ ಮುಕ್ಕುವ ಚಂಡಿಸ್ವಭಾವದ ಪೂತನಿ ಹೆಂಡತಿ. ಮಗ, ಅಪ್ಪ ಎಲ್ಲರದೂ ದಾರಿಬಿಟ್ಟ ಸ್ವಭಾವ. ಸದಾ ಹೋರಾಟದ (?) ಬದುಕು. ಇಂತಹ ಸಂದರ್ಭದಲ್ಲಿ ಕಾನೂನು ಏಕೈಕ ಆದಾಯದ ಮಾರ್ಗವನ್ನು ಮುಚ್ಚಿಹಾಕುತ್ತದೆ.

> 'ವರ್ಷಕ್ಕೆ ಒಂದೆರಡು ಸಾವಿರ ಉತ್ಪನ್ನ ತೆಗೆಯುವ ಹೊಲಗಳನ್ನಾದರೂ ನೋಡಿಕೊಳ್ಳುವಂತೆ ಹೇಳಬೇಕೆಂದರೆ ಅವೂ ರೈತರ ಪಾಲಾಗಿದ್ದವು. ಏನೂ ದಾರಿಕಾಣದಾದಾಗ ಆಚಾರ್ಯರು 'ಶ್ರೀಹರಿಃ !' ಎಂದು ಗುನುಗಿಕೊಂಡು ಹತಾಶರಾಗಿ ಸುಮ್ಮನಾಗಿ ಬಿಟ್ಟರು.'

ಆಚಾರ್ಯರು ಧೃತಿಗೆಟ್ಟು ನಿರಾಶರಾಗಿ ತಮ್ಮ ದೈವ ಶ್ರೀಹರಿಯ ಮೊರೆ ಹೋಗುವುದನ್ನು ಎರಡು ದೃಷ್ಟಿಯಿಂದ ವಿಶ್ಲೇಷಿಸಬಹುದು. ಮೊದಲನೆಯದು ಮಗ ಸತ್ಯಪ್ರಮೋದ ಉದ್ಯೋಗವಿಲ್ಲದೆ ದಾರಿ ಬಿಟ್ಟು ಪರರ (ದುಶ್ಚಟಗಳ) ಪಾಲಾಗುತ್ತಾನೆ, ಹಾಗೂ ಎರಡನೆಯದು ಭೂಮಿಗಳೆಲ್ಲ ಕೈಬಿಟ್ಟು ಹೋಗಿ ಕುಟುಂಬ ಬೀದಿ ಪಾಲಾಗುವ ಸ್ಥಿತಿ ತಲುಪುತ್ತದೆ. ಇವುಗಳ ಪರಿಣಾಮ ಹಿರಿಯ ಮಗನ ಮೇಲಾಗುವುದು ಸಹಜವಾಗಿದೆ. ಅವುಗಳಲ್ಲಿ ಬಡತನದ್ದೂ ಒಂದು ಕಾರಣವಾದರೆ, ಅದರ ಮೂಲದಲ್ಲಿ ಭೂ ಸುಧಾರಣೆ ಕಾನೂನಿನಂತಹ ಅನೇಕ ಅಂಶಗಳು ಸೇರಿಲ್ಲವೆ ಎಂಬ ಜಿಜ್ಞಾಸೆ ಕಾಡುತ್ತದೆ. ಸತ್ಯಪ್ರಮೋದ ನೌಕರಿ ಹುಡುಕುತ್ತ ಗ್ರಾಮ ನಿರಾಕರಿಸುತ್ತಾನೆ.

ಸ್ವಾತಂತ್ರ್ಯ ಪೂರ್ವದ ದೇಸಾಯರು, ಸಂಸ್ಥಾನಗಳು, ರಾಜಮನೆತನಗಳು ಸಹ ಈ ಕಾನೂನಿನ ಮುಷ್ಟಿಗೆ ಸಿಕ್ಕು ಅವುಗಳ ಕುಟುಂಬ ಸದಸ್ಯರು ಗ್ರಾಮ/ನಗರ ನಿರಾಕರಣೆ ಮಾಡಿದ ಸಂದರ್ಭವನ್ನು ಸ್ವಾತಂತ್ರ್ಯ ನಂತರದ ಇತಿಹಾಸದಲ್ಲಿ ಕಾಣುತ್ತೇವೆ. ಶಿವರುದ್ರ ಕಲ್ಲೋಳಿಕರ ಅವರ 'ಹೊಲಗೇರಿಯ ರಾಜಕುಮಾರ' ಕಾದಂಬರಿಯ ಮಾದೇವ ತಾನು ರಾಜಪುತ್ರನೆಂದು ತಿಳಿದು ವಡಗಾಂವನ ಹೊಲೆಗೇರಿ ತ್ಯಜಿಸಿ ಕುರುಂದವಾಡ ಗ್ರಾಮಕ್ಕೆ ಬರುತ್ತಾನೆ. ಬದಲಾದ ರಾಜಕೀಯ ಸಂದರ್ಭದಲ್ಲಿ ಅವನು ಅಲ್ಲಿ ಕಂಡಿದ್ದೇನು.

> 'ಅಲ್ಲೇನ ಮಣ್ಣು ಐತಿ! ಈಗ ಎಲ್ಲಾ ಅಲ್ಲೆ ಕತ್ತಿ ಮೆಯ್ಯಾಕತ್ತಯಾವ' ಎಂದು. ರಾಜನ ಭೂಮಿಯೆಲ್ಲ ಟಿನೆಂಟುಗಳ ಪಾಲಾಗಿತ್ತು. ಇದ್ದಬಿದ್ದ ಬೆಳ್ಳಿ, ಬಂಗಾರ ಮತ್ತು ಬೆಲೆ ಬಾಳುವ ವಸ್ತುಗಳನ್ನೆಲ್ಲ ಸಂಭಾಜಿಯ ಮಕ್ಕಳೆಲ್ಲ ಪುಣೆ ಮತ್ತು ಮುಂಬಯಿಗೆ ಸಾಗಿಸಿದ್ದರು. ಕಲ್ಲುಗೋಡೆ ಮತ್ತು ಹೆಂಚಿನ ಹೊದಿಕೆ ಬಿಟ್ಟರೆ ಅಲ್ಲಿ ಸಿಗುವುದು ಅಹಲ್ಯಾಬಾಯಿ ಒಬ್ಬಳೆ'

ಎಂಬ ಕಾಕಾಸಾಹೇಬನ ಮಾತು ಎಲ್ಲವನ್ನೂ ನಿರೂಪಿಸಿದೆ. ಈ ರಾಜ್ಯಗಳೆಲ್ಲ ಏಕೆ ಹಾಳಾದವು, ಕುರುಂದವಾಡ ಸಂಸ್ಥಾನ ಅದೇಕೆ ಅಧೋಗತಿಗಿಳಿಯಿತು ಎಂಬ ಪ್ರಶ್ನೆಗಳು ಕಾಡುತ್ತವೆ. ಇಂತಹ ರಾಜ ಮನೆತನಗಳಲ್ಲಿನ ದಾಯಾದಿ ದ್ವೇಷ, ದುರಾಸೆ, ದುಶ್ಚಟಗಳು, ಇವುಗಳೊಂದಿಗೆ ಜಾರಿಗೊಂಡ ಕಾನೂನು ಈ ವೈಭವಗಳಿಗೆ ತೆರೆ ಎಳೆದಿದ್ದು ಗೋಚರವಾಗುತ್ತದೆ. ರಾಜಮನೆತನ ಭೂ ಸುಧಾರಣೆ ಕಾನೂನಿಗೆ ಸಿಲುಕಿ ಆಸ್ತಿಯನ್ನೆಲ್ಲ ಕಳೆದುಕೊಂಡಾಗ ಸಂಭಾಜಿಯ ಮಕ್ಕಳು ಗ್ರಾಮ ನಿರಾಕರಿಸಿ, ಬದುಕಿನ ಆಸರೆ ಹುಡುಕುತ್ತ ಪುಣೆ, ಮುಂಬಯಿ(ನಗರ)ಗಳಿಗೆ ವಲಸೆ ಹೋಗುತ್ತಾರೆ.

ಪ್ರಸ್ತುತ ಸಂದರ್ಭಗಳು ಹಲವು ದೃಷ್ಟಿಗಳಿಂದ ಅಧ್ಯಯನದ ಗಮನ ಸೆಳೆಯುತ್ತವೆ. ಹಣ, ಆಸ್ತಿ, ಐಶ್ವರ್ಯದ ಮದದಿಂದ ದುಷ್ಟ ಚಟಗಳಿಗೆ ಬಲಿಯಾದ ಕುಟುಂಬ ಮತ್ತು ಕುಟುಂಬದ ಸದಸ್ಯರು ದಾರಿ ತಪ್ಪಿದ್ದು ಮಹತ್ವದ ಅಂಶಗಳಾಗಿವೆ. ಇದು ಒಂದು ವ್ಯವಸ್ಥೆಯ ಅವಸಾನವನ್ನು ಸೂಚಿಸುತ್ತದೆ. ಕುಟುಂಬಗಳು ಇಂತಹ ಕಾನೂನಿಗೆ ಒಳಪಟ್ಟಾಗ ಅಥವಾ ಒಳಪಡುವ ಭಯ ಕಂಡುಬಂದಾಗ, ಸದಸ್ಯರು ದುರ್ವ್ಯಸನಗಳಿಗೆ ಬಲಿಯಾದರೋ ಅಥವಾ ದುರ್ವ್ಯಸನಗಳಿಗೆ ಬಲಿಯಾದ ಕುಟುಂಬಗಳನ್ನು ನಿಯಂತ್ರಿಸಲು ಕಾನೂನು ಜಾರಿಯಾಯ್ತೋ ಎಂಬ ಅಂಶಗಳು ಸಾಹಿತ್ಯದ ಹಿನ್ನೆಲೆಯಲ್ಲಿ ಚರ್ಚೆಗೆ ಒಳಪಡಬೇಕಾದ ಅಗತ್ಯವಿದೆ.

### ಭೂ ಸುಧಾರಣೆ ಕಾನೂನುಪೂರ್ವ ದ್ವಂದ್ವ ಮತ್ತು ದ್ವಿಮುಖ (ಪರಸ್ಪರ) ಶೋಷಣೆ

ಭೂ ಸುಧಾರಣಾ ಕಾನೂನು ಜಾರಿಗೊಳ್ಳುವ ಪೂರ್ವದಲ್ಲಿ ಭೂ ಒಡೆಯರು, ಗೇಣಿರೈತರು ಅನುಭವಿಸಿದ ದ್ವಂದ್ವ, ತಲ್ಲಣ, ಆತಂಕಗಳು ಮತ್ತು ಪರಸ್ಪರ ಶೋಷಣೆಯ ಯತ್ನಗಳು ಕಥನ ಸಾಹಿತ್ಯದಲ್ಲಿ ಅಲ್ಲಲ್ಲಿ ದಾಖಲಾಗಿವೆ. ಭೂ ಸುಧಾರಣಾ ಕಾನೂನು ಜಾರಿ ಪೂರ್ವದ ಈ ದ್ವಂದ್ವ ಸ್ಥಿತಿ ಕನ್ನಡ ಕರಾವಳಿಯ ಭೂ ಒಡೆಯರನ್ನೂ ಕಾಡಿದ್ದು ಸ್ಪಷ್ಟವಿದೆ. ಅಂದು (೧೯೭೪ರ ಪೂರ್ವದಲ್ಲಿ) ಒಡೆಯ, ಗೇಣಿ ರೈತರ ಸಂಬಂಧಗಳು ಸಡಿಲಗೊಂಡು ಬಿಡುಗಡೆಯ ಕಾಲಕ್ಕೆ ಕಾಯುವುದು ಅನಿವಾರ್ಯವಾಗಿತ್ತು.

ಈ ಕಾಲದ ಪಾತ್ರಗಳಾಗಿ ವ್ಯಾಸರಾವ್ ನಿಂಜೂರ ಅವರ 'ಉಸಿರು' ಕಾದಂಬರಿಯ ಪಡಮುನ್ನೂರಿನ ಭೂ ಒಡೆಯ ಅನಂತಯ್ಯ, ಮಕ್ಕಳಾದ ನಾರಾಯಣ, ಕೇಶವ, ಗೇಣಿ ರೈತರಾಗಿ ಕುಡುಬರ ಜನಾಂಗದ ಬೊಂಬುನಾಯ್ಕ, ಕರಿಯ, ಪಾಸ್ಕು, ಗೋಟ ಕಾಣಿಸಿಕೊಳ್ಳುತ್ತಾರೆ. ಪಡುಮುನ್ನೂರಿನಿಂದ ಕೊಕ್ಕರ್ಣೆಗೆ ಗೇಣಿ ವಸೂಲಿಗಾಗಿಯೇ ಹೊರಟ ಭೂ ಒಡೆಯ ಅನಂತಯ್ಯನವರ ಮನದಲ್ಲಿ ಈ ಅಭದ್ರತೆ ಈಗಾಗಲೇ (ಕಾದಂಬರಿ ಕಾಲ ೧೯೬೭) ಎದ್ದು ಕಾಣುತ್ತದೆ.

> 'ನಿನ್ನ ಮಾತು ಕೇಳಿದರೆ ಆಯ್ತು ಮಾರಾಯ್ರೆ. ಒಂದು ವಾರ, ತಿಂಗಳೂ ಅಂತ ಕಾದರೆ ಮತ್ತೆ ಆ ಒಕ್ಕಲು ಮಕ್ಕಳು ಇದ್ದ ಅಕ್ಕಿ ಎಲ್ಲ ಮಾರಿ ನಮ್ಮ ಕೈಗೆ ನಾಲ್ಕು ಕಿಲುಬು ಕಾಸು ಹಾಕಿಯಾರು. ಅದನ್ನು ತೆಗೆದುಕೊಂಡರೆ ಅಕ್ಕಿ ಸಿಕ್ಕಿದ ಹಾಗೆ ಆಗುತ್ತದೆಯೆ?'[೨೮] 'ಅದಕ್ಕೇ ಈಗಾಯ್ಕೆ ನಾನೀಗ ಹೊರಟಿರುವುದು. ಇನ್ನು ಆ ಬೊಂಬುನಾಯ್ಕ ಇರುತ್ತಾನೋ ಇಲ್ಲವೋ ಗೇಣಿ ಸಿಗುತ್ತದೋ ಇಲ್ಲವೊ ನೋಡಬೇಕು' (ಪುಟ ೩೦)

ಉಲ್ಲೇಖದಲ್ಲಿ ದುಗುಡದ ಎರಡು ಆಯಾಮಗಳನ್ನು ಗುರುತಿಸುತ್ತೇವೆ. ಮೊದಲನೆಯದು ಗೇಣಿ ರೈತ ಮಕ್ಕಳು ಈಗಾಗಲೇ ಭೂಮಾಲೀಕರ ನಿಯಂತ್ರಣ ಮೀರಿ, ಅವರಿಬ್ಬರ ನಡುವೆ ಭಿನ್ನಾಭಿಪ್ರಾಯದ ಒಂದು ಬಿರುಕಿನ ಕಿಂಡಿ ಕಾಣಿಸಿಕೊಂಡಿದೆ ಅಥವಾ ಸಕಾಲದಲ್ಲಿ ಆದಾಯ ವಸೂಲಿ ಮಾಡದಿದ್ದರೆ ಅದನ್ನು ಅವರು ದುರುಪಯೋಗಪಡಿಸಿಕೊಳ್ಳುವ ಹಂತದಲ್ಲಿದ್ದಾರೆ. ಎರಡನೆಯದಾಗಿ ಗೇಣಿಯು ಬೆಳೆದ ಬೆಳೆಯ ರೂಪದಲ್ಲಿಯೇ ಬಂದರೆ ಸಮರ್ಪಕ ಮತ್ತು ನ್ಯಾಯಯುತ ಎಂಬ ಕಳಕಳಿ ಮಾಲೀಕರದಾಗಿದೆ. ಭೂ ಮಾಲೀಕರೆಲ್ಲ ಕ್ರೂರರು ಅಥವಾ ಸೌಜನ್ಯಮೂರ್ತಿಗಳೆಂದೂ ಒಪ್ಪಲಾಗುವುದಿಲ್ಲ. ಗೇಣಿ ರೈತರ ಮೇಲಿನ ಅವರ ದೌರ್ಜನ್ಯಕ್ಕೆ ಪಾರವೇ ಇರಲಿಲ್ಲ ಎಂದು ಶ್ರೀರಂಗ ಅವರ 'ವಿಶ್ವಾಮಿತ್ರನ ಸೃಷ್ಟಿ' ಕಾದಂಬರಿ ಹೇಳುತ್ತದೆ. ನಾರಾಯಣ ನಗರ ನಿರಾಕರಿಸಿ ಗ್ರಾಮ ಸುಧಾರಣೆಗೆಂದು ಕಮತೂರಿಗೆ (ಕುಗ್ರಾಮ) ಬರುತ್ತಾನೆ. ಗ್ರಾಮದ ಕುಲಕರ್ಣಿಯ ಮನೆಯಲ್ಲಿ ಕುಳಿತಿದ್ದಾಗ ಕುಲಕರ್ಣಿಯ ಗೇಣಿ ರೈತನೊಬ್ಬ ಬಂದು ಕೈ ಮುಗಿಯುತ್ತಾನೆ. ಅವನ ಮೇಲೆ ಕಳುವಿನ ಆರೋಪವಿರುತ್ತದೆ. ತನ್ನ ಮಗು ಹುಷಾರಿಲ್ಲದೆ ಒದ್ದಾಡುವಾಗ ಒಂದು ಹಿಡಿ ಧಾನ್ಯವನ್ನು ಅವನು ದಾನಮಾಡಿ ಕಳ್ಳನೆನಿಸಿಕೊಂಡಿರುತ್ತಾನೆ. 'ಕಳವು ಮಾಡಿ ಕೈ ಮುಗಿದ್ರ ಕೇಳ್ತಾರ್‍ಯಾರೋ, ಕತ್ತೆ ಮಗನೆ'[೨೯] ಎಂಬ ಕುಲಕರ್ಣಿಯ ಮಾತುಗಳು, ತಾನು ಬೆಳೆದ ಹಿಡಿ ಧಾನ್ಯದ ಮೇಲೆ ರೈತನಿಗೇ ಅಧಿಕಾರವಿಲ್ಲದಿರುವುದನ್ನು ಹೇಳುತ್ತವೆ. ಇದು ಶೋಷಣೆಗೊಳಗಾದ ಗೇಣಿ ರೈತರ ದಾರುಣ ಸ್ಥಿತಿಯನ್ನು ಹೇಳುತ್ತದೆ. ಸರಸ್ವತಿಬಾಯಿ ರಾಜವಾಡೆ ಅವರ 'ಪ್ರಪಂಚ' ಕಥೆಯ ತೋಮನ ಸಂಸಾರ ಭೂ ಒಡೆಯರ ಶೋಷಣೆಯ ತೀವ್ರತೆಗೆ ಬೇಸತ್ತು ಗೇಣಿ ವೃತ್ತಿ ಮತ್ತು ಗ್ರಾಮ ಎರಡನ್ನೂ ನಿರಾಕರಿಸುತ್ತದೆ.

ಶೋಷಣೆ ಎಂಬುದು ಬಹುಮುಖಿಯಾದ ಕ್ರೌರ್ಯವಾಗಿದೆ. ಶೋಷಣೆಯ ಕುರಿತು ಮಾತನಾಡುವಾಗಲೆಲ್ಲ ಅವುಗಳಿಗೆ ಎರಡು ಮುಖಗಳಿರುತ್ತವೆ. ಶೋಷಕ ಗ್ರಹಿಸುವುದು ಒಂದು ಮುಖವಾದರೆ, ಶೋಷಿತರು ಅನುಭವಿಸುವುದು ಇನ್ನೊಂದು ಮುಖವಾಗಿದೆ. ಶೋಷಣೆಯಂತಹ ಸಂಕೀರ್ಣ ಆಯಾಮ ಹೊಂದಿದ ಸಮಸ್ಯೆಯನ್ನು ಭೂ ಒಡೆಯರ ಆರ್ಥಿಕ ದುಸ್ಥಿತಿಯನ್ನು ದೃಷ್ಟಿಯಲ್ಲಿಟ್ಟುಕೊಂಡೂ ವಿಶ್ಲೇಷಿಸಬಹುದು. ಜಿ.ಟಿ. ದೇಸಾಯಿ ಅವರ 'ಹೋರಿ' ಕತೆಯ ಮಾಜಿ ಭೂ ಒಡೆಯರ ಮಗ ರಾಘು ಧಾರವಾಡದಲ್ಲಿ ನೌಕರಿ ಮಾಡುತ್ತ, ತನ್ನ ಭೂಮಿಯ ಲಾವಣಿ ವಸೂಲಿಗೆ ಹಳ್ಳಿಗೆ ಬರುತ್ತಾನೆ. ಅವನ ಜಮೀನನ್ನು ಮಾಡುತ್ತಿರುವ ರೈತರು, ಉಳುವವನೇ ಹೊಲದೊಡೆಯ ಎಂಬಂತೆ ವರ್ತಿಸಿ ಹಣ, ಕಾಳುಕಡ್ಡಿ ಕೊಡದಿದ್ದಾಗ ತನ್ನ ಗೆಳೆಯರ ಹತ್ತಿರ, 'ಈಗಿನ ರೈತರೋ ಏನನ್ನುತ್ತೀರಿ? ಮುರಾರಜಿಬಾಯಿ ನಮ್ಮಂಥ ಬಡ ಜಮೀನುದಾರರ ಮೇಲೆ ಟೆನನ್ಸಿನ ಆಗ್ನಸ್ತ್ರ ಎಸೆದು ಬಿಟ್ಟಿದ್ದಾರೆ' ಎಂದು ಗೋಳು ತೋಡಿಕೊಳ್ಳುತ್ತಾನೆ. ತಂಬಾಕದ ಪಕ್ಕೀರಪ್ಪ ಎಂಬ ರೈತ ಗೇಣಿ ಕೊಡಲು ತಕರಾರು ಮಾಡುತ್ತಾ, 'ಖಾದ್ದೆ ಪರಕಾರ ಲಾವಣಿ ಕೊಡತೀನಿ – ಬೇಕಾರ ತಗರ್‍ರಿ, ಬ್ಯಾಡಂದ್ರ ಬಿಡ್ರಿ, ಈಟೂ ಮಿಕ್ಕಿ ಏನಾದ್ರ ಮಾಡೋದಿತ್ತಂದ್ರ ಕೋರ್ಟಿನಾಗ ನಮ್ಮ ನಿಮ್ಮ ಮಾತು ಆಗಲಿ'[೩೦] ಎನ್ನುತ್ತಾನೆ. ವಿಠ್ಠಲ ಪೇರುಮನೆ ಅವರ 'ಬಿಲ್ವ ಪತ್ರೆ' ಕತೆಯಲ್ಲಿ ಗೇಣಿ ರೈತನಿಗೆ ಸೀತಬ್ಬೆ ಶಾಪ(ಈ ಶಾಪವನ್ನು ಭರಿಸುವ ಮುಕ್ಕಾಲು ಹೊಣೆ ಸರಕಾರದ್ದೆಂದು ಬೇರೆ ಹೇಳಬೇಕಾಗಿಲ್ಲ)ವನ್ನೇ ಕೊಟ್ಟು ಬಿಡುತ್ತಾಳೆ. ತನ್ನವರನ್ನೆಲ್ಲ ಕಳೆದುಕೊಂಡು ಏಕಾಂಗಿಯಾಗಿದ್ದ ಸೀತಬ್ಬೆ ಗೇಣಿಯಿಂದಲೇ ಗುಟುಕು ಗಂಜಿ ಕಾಣುವ ವೃದ್ಧೆ. ಉಳುವವನೇ ಹೊಲದೊಡೆಯ ಎಂಬ ಸರಕಾರದ ಕಾನೂನು ರೈತ ವೆಂಕಣ್ಣನ ಬೆನ್ನಿಗಿದ್ದು,

ಸೀತಬ್ಬೆ ಗೇಣಿ ಕೇಳಲು ಮನೆಯ ಹತ್ತಿರ ಬಂದಾಗ ತಿಮ್ಮಕ್ಕ (ವೆಂಕಣ್ಣನ ಹೆಂಡತಿ) ಬೈದು ಅಟ್ಟುತ್ತಾಳೆ. ಸೀತಬ್ಬೆಯ 'ನನ್ನ ಹೊಟ್ಟೆ ಉರಿಸ್ತಿಯೇನೋ. . .ಪಾಪಿ! ನಿನ್ನ ಕುಲದ ಬೇರಿಗೆ ವರ್ಲೆ ಬರ್ದೇ . . ಇರ್ತಿಲ್ಲೆ. ನಿನ್ ನೆಲ್ಗಟ್ಟಿಗೆ ಎಕ್ಕೆಗಿಡ ಹುಟ್ಟುವ್ದನ್ನ ನೋಡೇ. .ಸಾಯ್ತೆ'[೨೧] ಎಂಬ ಶಾಪ ನಿಜವಾಯ್ತೊ ಇಲ್ಲವೋ? ಆದರೆ ಸೀತಬ್ಬೆಯಂತಹ ಆಸರೆ ಇಲ್ಲದ ಮಹಿಳೆ/ವೃದ್ಧ ಜೀವಗಳು ಈ ಕಾನೂನಿನಿಂದ ಅನಾಥರಾಗಿದ್ದು ನಿಜ! ಇಂತಹ ಕುಟುಂಬಗಳಿಗೆ ಆರ್ಥಿಕ ಭದ್ರತೆ ನೀಡದ ಆಡಳಿತ ಈ ಕಾನೂನನ್ನು ಅನುಷ್ಠಾನಗೊಳಿಸಿದ್ದು ಯಾಕೆ ಎಂಬ ಪ್ರಶ್ನೆಗೆ ಕಥನ ಸಾಹಿತ್ಯದಲ್ಲಿ ವಿವರಗಳಿಲ್ಲ. ಭೂ ಒಡೆತನ ಕಳೆದುಕೊಂಡ ಕುಟುಂಬಗಳ ಧ್ವನಿ ಇಲ್ಲಿ ಉಡುಗಿ ಹೋಗುವುದು ಗ್ರಹಿಕೆಯ ವ್ಯಾಪ್ತಿಯ ಹೊರಗುಳಿಯುವ ವಿಷಯವಾಗಿದೆ.

ಗೇಣಿ ರೈತರೆಲ್ಲ ಭೂಮಿಕಾಣಿ ಇಲ್ಲದವರೆ ಎಂಬ ಪ್ರಶ್ನೆ ಇಲ್ಲಿ ತಲೆ ಎತ್ತುತ್ತದೆ. ಕರಾವಳಿ ತೀರದ ಗೇಣಿ ರೈತರೆಲ್ಲ ಬಹುಪಾಲು ಭೂರಹಿತರೇ ಆಗಿದ್ದು, ಬಯಲು ಸೀಮೆಯ ಗೇಣಿ ರೈತರಲ್ಲಿ ಕೆಲವರಿಗೆ ಸಾಕಷ್ಟು ಭೂಮಿ ಇತ್ತು ಎಂದು ರಾಘವೇಂದ್ರ ಪಾಟೀಲ ಅವರ 'ಮಾಯಿಯ ಮುಖಗಳು' ಕತೆಯ ಗೇಣಿ ಜಮೀನುಗಳ ಒಡೆಯ ಕಲ್ಲೋಪಂತರು ಹೇಳುತ್ತಾರೆ. ಬೆಳಗಾವಿಯಲ್ಲಿ ಮಕ್ಕಳ ಸಂಗೀತ ಅಭ್ಯಾಸ ಒಂದು ನಿಲುಗಡೆಗೆ ಬಂದಾಗ ಅಲ್ಲಿಂದ ಧಾರವಾಡಕ್ಕೆ ಮನೆ ಬದಲಾಯಿಸಬೇಕೆಂಬ ಸಲಹೆ ಬರುತ್ತದೆ. ಅಷ್ಟರಲ್ಲಿ ಭೂ ಸುಧಾರಣೆಯ ಕಾನೂನು ಜಾರಿಯಾಗುತ್ತಿದ್ದು ಅದರ ಬಿಸಿ ಕಲ್ಲೋಪಂತರಿಗೂ ತಾಗಿ ನಿದ್ದೆಗೆಡಿಸುತ್ತದೆ.

> 'ಖರೆ ಕೇಳಿದರ ಈಗ ಕಲ್ಲೋಪಂತರ ಪರಿಸ್ಥಿತಿನೂ ನಾಜೂಕಾಗಿ ಕೂತಿತ್ತು. ಇವರು ಈ ಕಡೆ ಬರೂಮುಂದ ಹೊಲಗೋಳನ ಫಾಳೆದಲೆ ಹಚ್ಚಿ ಬಂದಿದ್ದರು.. ಫಾಳೆದಲೆ ಹಿಡಿದ ಮೂರ ಮಂದಿ ರೈತರೊಳಗ ಇಬ್ಬರು ಈಗ ಎರಡು ವರ್ಷದಿಂದ ಫಾಳೆ ಕೊಡೋದನ್ನ ನಿಂದರಿಸಿದ್ದರು. ಅವರು ಟೆನೆಂಟ ಅಂತ ಟ್ರಿಬ್ಯೂನಲ್ಲಿಗೆ ಅರ್ಜಿನೂ ಹಾಕಿದ್ದರು. ಒಬ್ಬ ರೈತ ಮಾತ್ರ, ಅಂವಗ ರೊಕ್ಕದ ಬಲಾ ಇಲ್ಲದ್ದಕ್ಕೊ ಏನೋ ಟ್ರಿಬ್ಯೂನಲ್ಲಿಗೆ ಅರ್ಜೀ ಹಾಕಿದ್ದಿಲ್ಲ. ಹಂಗ ಕೇಳಿದರ ಪಾಪ ಅರ್ಜಿ ಹಾಕದ ಈ ರೈತಗ ಒಂದ ಇಂಚ ಸ್ವಂತ ಭೂಮಿ ಇರಲಿಲ್ಲ. ಅರ್ಜಿ ಹಾಕಿದ ಉಳಿದ ಇಬ್ಬರಿಗರ ರಗಡ ಜಮೀನು ಇತ್ತು. ಇವರು ಹೆಂಗರೆ ಮಾಡಿ ಆ ಇಬ್ಬರು ರೈತರ ಮನವೊಲಿಸಿ..ರಾಜೀಗೆ ಕಟಪಟ ನಡಿಸಿದ್ದರು.[೨]

ಇಂತಹ ಸಂದರ್ಭದಲ್ಲಿ ಗೇಣಿ ರೈತರ ಭೂಮಿಯಾಸೆಯ ಕುತ್ಸಿತ ಬುದ್ಧಿಯನ್ನೂ ಅಧ್ಯಯನ ಗ್ರಹಿಸುತ್ತದೆ. ಲ್ಯಾಂಡ್ ಟ್ರಿಬ್ಯೂನಲ್‌ಗಳು ಭೂಸುಧಾರಣಾ ಕಾನೂನು ಜಾರಿಯಾಗುವ ಜವಾಬ್ದಾರಿಯನ್ನು ವಹಿಸಿಕೊಂಡ ಮೇಲೆ ಭೂಮಿಯಿರುವ ರೈತರೂ ಭೂಮಿ ಇಲ್ಲವೆಂದು ಅರ್ಜಿ ಹಾಕುತ್ತಿದ್ದ ರೀತಿ ಹಾಗೂ ಆ ವ್ಯವಸ್ಥೆಯ ಲೋಪದೋಷಗಳನ್ನು ಇಲ್ಲಿ ಗಮನಿಸುತ್ತೇವೆ. ಕಲ್ಲೋಪಂತರಂತಹ ಭೂ ಒಡೆಯರ ಮಾನಸಿಕ ದ್ವಂದ್ವ, ಅಧೀರತೆ ಇಲ್ಲಿ ಸಾರ್ವತ್ರಿಕವಾಗಿ ವ್ಯಕ್ತವಾಗುತ್ತದೆ. ಇದು ನಾಜೂಕಾದ ಪರಿಸ್ಥಿತಿಯೂ ಹೌದು. ರೈತರಿಗೂ ಜಮೀನು ಸಿಗಬೇಕು, ತಮಗೂ ಸ್ವಲ್ಪ ಉಳಿಯಬೇಕು ಎನ್ನುವ ಆಸೆ ಇಲ್ಲಿಯದು. ಹೇಗಾದರೂ ಮಾಡಿ ಸ್ವಲ್ಪ ಭೂಮಿಯನ್ನು ಉಳಿಸಿಕೊಳ್ಳಬೇಕೆಂಬ ಅವರ ಕಾಳಜಿ 'ಅವರು ಮಾಡಿದ ಜಮೀನಿನೊಳಗ ಎರಡೆರಡು ಎಕರೆ ಅವರಿಗೆ ಬಿಟ್ಟು ಕೊಡುವ ಕರಾರಿನ ಮ್ಯಾಲ ಅವರಿಂದ ರಾಜೀನಾಮೆ ಪತ್ರ ಬರೆಸಿಕೋ ಬೇಕಂತ ಖಟಪಟೀ ನಡೆಸಿದ್ದರು' (ಪುಟ ೧೨) ಎಂಬ ಮಾತಿನಲ್ಲಿ ಅಡಗಿದೆ. ಇದಕ್ಕಾಗಿ ಕೋರ್ಟು, ಕಚೇರಿ ಅಂತ ತಾಲೂಕು, ಜಿಲ್ಲಾ ಕೇಂದ್ರಗಳಿಗೆ ಅಲೆಯಬೇಕಾದ ಗೈರತ್ತು, ಅದಕ್ಕೆ ಆರ್ಥಿಕ ಬಲದ ಅವಶ್ಯಕತೆಯನ್ನು ಖಟಪಟ ಎಂಬ ಪದವು ಸೂಚಿಸುತ್ತದೆ. ಇಲ್ಲಿ ಎದ್ದು ಕಾಣುವ ಅಂಶವೆಂದರೆ, ಜಮೀನ್ದಾರಿಕೆ ಎನ್ನುವುದು ಅಕ್ಷರಶಃ (ಜಮೀನುದಾರ ಎಂಬ ಪದದಲ್ಲಿಯೇ ಧನವಂತಿಕೆಯ ಅಹಂನ ಗತ್ತು ಇದೆ ನಿಜ! ಆದರೆ ವಾಸ್ತವಾಂಶ ಭಿನ್ನವಾಗಿರುವುದು ಅನೇಕ ಕತೆಗಳಲ್ಲಿ ವ್ಯಕ್ತವಾಗಿದೆ) ಧನವಂತರ ದ್ಯೋತಕವಲ್ಲ, ಅದರಲ್ಲಿ ಬಡತನ ಅನುಭವಿಸುವವರೂ ಇದ್ದಾರೆ ಎಂಬುದಾಗಿದೆ. ಭೂಮಾಲೀಕರು ಗೇಣಿ ರೈತರನ್ನು ಶೋಷಣೆ ಮಾಡಿದ ಪ್ರಸಂಗಗಳೂ ಉಂಟು, ಪೋಷಿಸಿದ ಸಂದರ್ಭಗಳೂ ಉಂಟು. ಗೇಣಿ ರೈತರನ್ನು ಸ್ವಂತ ಮಕ್ಕಳಂತೆ ನೋಡಿಕೊಂಡ ಭೂ ಒಡೆಯರ ಪ್ರೀತಿ, ವಿಶ್ವಾಸ ಕುರಿತು ವಿಷ್ಣು ನಾಯ್ಕರು 'ದುಡಿಯುವ ಕೈಗಳ ಹೋರಾಟದ ಕತೆ' ಕೃತಿಯಲ್ಲಿ ದಾಖಲಿಸಿದ್ದಾರೆ. ಇದರ ಬೆನ್ನಲ್ಲೇ ಕಾನೂನಿನ ಅರಿವು ಪಡೆದು ಕೊಡಬೇಕಾದ್ದನ್ನು ಕೊಡದೇ ಇರುವ ರೈತರೂ ಇದ್ದರು/ ಇದ್ದಾರೆ ಎಂಬುದಾಗಿದೆ. ಹಾಗಾದರೆ ಶೋಷಣೆ ಯಾರಿಂದ ಯಾರಿಗೆ ಎಂಬ ಪ್ರಶ್ನೆ ಚರ್ಚಾರ್ಹವೆನ್ನಿಸುತ್ತದೆ. ಅದು ಪರಸ್ಪರ ಎರಡೂ ದಿಕ್ಕಿನಿಂದಲೂ ನಡೆದದ್ದು ಸಹ ಸತ್ಯವೆಂಬ ನಿಲುವು ಅಧ್ಯಯನದ್ದಾಗಿದೆ.

ಈ ಎಲ್ಲಾ ಕುಟುಂಬಗಳ ಮತ್ತು ಅವುಗಳ ಸದಸ್ಯರ ಮಾನಸಿಕ ತಲ್ಲಣ, ಅಧೀರತೆ, ಆರ್ಥಿಕ ಅಭದ್ರತೆ ಇವುಗಳನ್ನೆಲ್ಲ ಗಮನದಲ್ಲಿಟ್ಟುಕೊಂಡು (ಇಂತಹ ಕಾನೂನಿನ ಹಿನ್ನೆಲೆಯಲ್ಲಿ) ಚರ್ಚಿಸಿದಾಗ, ಪ್ರಸ್ತುತ ಕಥನ ಸಾಹಿತ್ಯದಲ್ಲಿ ಪ್ರಕಟವಾಗಿರುವ ಗ್ರಾಮ/ನಗರ ನಿರಾಕರಣೆಯ ಅಂಶಗಳನ್ನು ಹೀಗೆ ಸಂಗ್ರಹಿಸಬಹುದು. * ಜಾರಿಗೊಂಡ ಕಾನೂನಿನ ತತ್ಫಲವಾಗಿ ಸಾವಿರಾರು ಕುಟುಂಬಗಳು ಗ್ರಾಮ/ನಗರ ನಿರಾಕರಿಸಲು ಆಡಳಿತವೇ ನೇರ ಕಾರಣವಾಗಿದೆ. * ಸರಿಯಾದ ಪರಿಹಾರ ಸಿಕ್ಕದೆ ಆರ್ಥಿಕ ಭದ್ರತೆಗಾಗಿ ಹಾಗೂ ಸಾಮಾಜಿಕ ಘನತೆ/ಅಂತಸ್ತನ್ನು ಉಳಿಸಿಕೊಳ್ಳಲು ನಿರಾಕರಣೆಯೇ ಆಯ್ಕೆಯಾದ ಸಂದರ್ಭಗಳಿವೆ. * ಭೂ ಒಡೆತನ ಹೊಂದಿದ ಕುಟುಂಬಗಳೆಲ್ಲ ಆರ್ಥಿಕವಾಗಿ ಸದೃಢವಾದವುಗಳಲ್ಲ. ನಿತ್ಯ ಜೀವನಕ್ಕೆ ಆವಶ್ಯಕವಿರುವ ಆದಾಯವನ್ನು ಗೇಣಿ ರೈತರಿಂದಲೇ ಪಡೆದು ಬದುಕುತ್ತಿರುವ ಕುಟುಂಬಗಳ ಅತಂತ್ರತೆಯ ಹಿಂದೆ ಆಡಳಿತದ ವೈಫಲ್ಯವಿದೆ. * ತಲೆ ತಲಾಂತರದಿಂದ ಬಂದ ಬದುಕಿಗೆ ಆಧಾರವಾದ ಆಸ್ತಿ ಇನ್ನೊಬ್ಬರ ಪಾಲಾದಾಗ ಪಡುವ ನೋವು, ಯಾತನೆ, ತಲ್ಲಣ, ದ್ವಂದ್ವಗಳು ಕುಟುಂಬದ ಸದಸ್ಯರನ್ನು ಕಾಡುವುದು ಕಂಡುಬರುತ್ತದೆ. * ಭೂ ಒಡೆತನ ಕಳೆದುಕೊಂಡು ಹೊಸ ನೆಲೆ ಹುಡುಕುತ್ತ ಹೋದ ಲಕ್ಷಾಂತರ ಕುಟುಂಬಗಳು ಉಚ್ಚ ಜಾತಿಗೆ ಸೇರಿದವುಗಳಾಗಿವೆ. ಆಡಳಿತ ಈ ಕುಟುಂಬಗಳ ರಕ್ಷಣೆ ಕುರಿತು (ಪರಿಹಾರದ ಹೊರತಾಗಿ) ಯಾವ ಕಾನೂನನ್ನು (ಮಾಸಾಶನ / ಕುಟುಂಬಕ್ಕೊಂದು ಸರಕಾರಿ ನೌಕರಿ ಇತ್ಯಾದಿ) ರೂಪಿಸಲಿಲ್ಲವೆಂಬುದು ಇನ್ನೊಂದು ವಾಸ್ತವಿಕ ಸತ್ಯವಾಗಿದೆ. * ಗೇಣಿ ರೈತರ ಶ್ರಮಕ್ಕೆ ಪ್ರತಿಫಲವಾಗಿ ಗೇಣಿ ಭೂಮಿ ದೊರೆತರೆ, ಆ ಭೂಮಿಯಲ್ಲಿ ಕೃಷಿಕೂಲಿಗಳಾಗಿ ದುಡಿದ ಶ್ರಮಿಕ ವರ್ಗ (ಕಾರ್ಮಿಕರು) ಈ ಕಾನೂನಿನ ವ್ಯಾಪ್ತಿಯ ಹೊರಗೆ ಉಳಿದದ್ದು ಕಾನೂನಿನ ಇನ್ನೊಂದು ವಿಫಲತೆಯೆನ್ನಬಹುದು.

**ಬ. ಸಮುದಾಯ ಸಮಸ್ಯೆಗಳು ಮತ್ತು ನಿರಾಕರಣೆ : ಮುಳುಗಡೆ ಮತ್ತು ಭೂ ಸ್ವಾಧೀನ ಸಂದರ್ಭಗಳು**

ಜಾಗತೀಕರಣದ ಪರಿಣಾಮವಾಗಿ ಅಭಿವೃದ್ಧಿಯ ಅರ್ಥವೇ ಬದಲಾಗುತ್ತಿದೆ. ಭೌತಿಕವಾಗಿ ಆಧುನಿಕ ಸೌಕರ್ಯಗಳನ್ನು ಹೊಂದುವುದು, ಅದಕ್ಕಾಗಿ ಪ್ರಕೃತಿದತ್ತ ಸಂಪತ್ತನ್ನು ಕಳೆದುಕೊಳ್ಳುವುದು ಅಭಿವೃದ್ಧಿಯ ಹೆಜ್ಜೆ ಗುರುತುಗಳಾಗಿವೆ. ಇದಕ್ಕಾಗಿ ಅಭಿವೃದ್ಧಿಶೀಲ ರಾಷ್ಟ್ರಗಳು ಅಭಿವೃದ್ಧಿ ಹೊಂದಿದ ಪಾಶ್ಚಿಮಾತ್ಯ ದೇಶಗಳನ್ನು ಆದರ್ಶವಾಗಿಟ್ಟುಕೊಂಡು (Role Model) ರಸ್ತೆ, ಇಂಗ್ಲೀಶ್ ಶಿಕ್ಷಣ, ವಿದ್ಯುತ್, ಇಲೆಕ್ಟ್ರಾನಿಕ್ಸ್ ಉಪಕರಣಗಳ ಉತ್ಪಾದನೆ ಇತ್ಯಾದಿಗಳು ಮಾತ್ರ ಅಭಿವೃದ್ಧಿಯ ಲಕ್ಷಣಗಳೆಂದು ಭ್ರಮಿಸಿವೆ. ಆಡಳಿತದ ಇಂತಹ ಕಾರ್ಯ ಯೋಜನೆಗಳು ಸಮೂಹ ನಿರಾಕರಣೆಗೆ ಕಾರಣವಾಗುತ್ತವೆ. ಅಣೆಕಟ್ಟು ಕಟ್ಟಿ ಜಲಾಶಯ ನಿರ್ಮಿಸಿ ವಿದ್ಯುತ್ ತಯಾರಿಸುವ, ವಿಶೇಷ ಆರ್ಥಿಕ ವಲಯ (Special Economic Zones) ಸ್ಥಾಪನೆಯಂತಹ ಯೋಜನೆಗಳನ್ನು ಈ ಸಂದರ್ಭದಲ್ಲಿ ಪ್ರಮುಖವಾಗಿ ಪರಿಗಣಿಸಬಹುದು.

ನಾ. ಡಿಸೋಜ ಅವರ 'ದ್ವೀಪ' ಕಾದಂಬರಿಯಲ್ಲಿ, ನಿರ್ಮಾಣವಾಗುತ್ತಿರುವ ಲಿಂಗನಮಕ್ಕಿ ಅಣೆಕಟ್ಟಿನಲ್ಲಿ ಮುಳುಗಡೆಯಾಗುತ್ತಿರುವ ಹೊಸಹಳ್ಳಿ ಗ್ರಾಮದ ಐದು ಕುಟುಂಬದ ನಿರಾಕರಣೆಯನ್ನು ವಿಶ್ಲೇಷಿಸಬಹುದು. ಉಚ್ಚ ಜಾತಿ/ವರ್ಗಕ್ಕೆ ಸೇರಿದ ಹೇರಂಬ ಹೆಗಡೆ, ಪರಮೇಶ್ವರಯ್ಯ ಇವರ ಸಂಸಾರಗಳು, ಸರಕಾರದ ಅಧಿಕಾರಿಗಳಿಗೆ ಕೈಬೆಚ್ಚಗೆ ಮಾಡಿ ಪರಿಹಾರದ ಹಣ, ಹೊಸ ಸಾಗುವಳಿ ಭೂಮಿ ಪಡೆದು ಹೊಸಹಳ್ಳಿಯನ್ನು ನಿರಾಕರಿಸುತ್ತವೆ. ಸ್ವಲ್ಪ ಪಟ್ಟಣದ ವ್ಯಾಮೋಹವಿದ್ದ ಹೇರಂಬ, ಬಂದಷ್ಟು ಬರಲಿ ಎಂಬ ವಿಧಿವಿಧಾನದಲ್ಲಿ ನಂಬಿಕೆ ಇಟ್ಟ ಪರಮೇಶ್ವರಯ್ಯ ಇವರಿಬ್ಬರ ನಿರಾಕರಣೆಯಲ್ಲಿ ಅಧ್ಯಯನ ವ್ಯವಹಾರ ಕುಶಲತೆಯನ್ನು ಗುರುತಿಸುತ್ತದೆ. ಲಂಚ ಕೊಟ್ಟು ಕೈ ಬೆಚ್ಚಗೆ ಮಾಡಿದರೂ ಪರಿಹಾರ ಸಿಗದ ಗಣಪಯ್ಯನ ಸಂಸಾರ ಪರಿಹಾರ ಕೊಡುವ ಮುನ್ನ ಗ್ರಾಮ ನಿರಾಕರಿಸಿ ಹೋದರೆ ಮುಂದೆ ಪರಿಹಾರವೇ ಸಿಕ್ಕಲಾರದೇನೋ ಎಂಬ ಭಯ, ಆತಂಕದಲ್ಲಿ ಉಳಿಯುತ್ತದೆ. ಗಣಪಯ್ಯನಿಗೆ ಮುಖಾಮುಖಿಯಾಗುವ ಸಮಸ್ಯೆಗೆ ಎರಡು ನೆಲೆ(ವೈರಿ)ಗಳಿವೆ. ಪರಿಹಾರ ವಿತರಿಸದ ಆಡಳಿತ ಮೊದಲನೆಯದಾದರೆ, ಮುನಿದು ಮೇಲೆ ಬರುತ್ತಿರುವ ಪ್ರಕೃತಿ (ನೀರು) ಎರಡನೆಯದಾಗಿದೆ. ಇವೆರಡೂ ಹುಲಿಯಾಗಿ ಸಂಸಾರವನ್ನು ಕಾಡುತ್ತವೆ. ಪರಿಹಾರ ವಿತರಿಸುವಲ್ಲಿನ ಆಡಳಿತದ ವೈಫಲ್ಯ ಇಂತಹ ಸಮಸ್ಯೆಗಳ ಮೂಲವೆನ್ನಬಹುದು. ಆದರೆ ಹಿರಿಯ ತಲೆಮಾರಿನ ದುಗ್ಗಜ್ಜನಿಗೆ ಪರಿಹಾರದ ಹಣ ಈ ಸಮಸ್ಯೆಗೆ ಪರಿಹಾರವಾಗಿ ಕಾಣಿಸುತ್ತಿಲ್ಲ. ಅವನದೇನಿದ್ದರೂ ತುಂಡು ಭೂಮಿಯೊಂದಿಗಿನ ಕರುಳ ಸಂಬಂಧದ ಗ್ರಹಿಕೆಯಾಗಿದೆ. ಈ ಸಂಬಂಧ ಕತ್ತರಿಸುವ ಸರಕಾರ, ಅಣೆಕಟ್ಟುಗಳು ಒಡೆದು ಹಾಳಾಗಿ ಹೋಗಲಿ ಎಂದು ಶಾಪ ಹಾಕುತ್ತಾನೆ.

'ಮುದುಕ ಒಂದು ಕ್ಷಣ ನೀರವವಾಗಿ ಕುಳಿತ. ತೋಟದತ್ತಣಿಂದ ತಂಗಾಳಿ ಬೀಸುತ್ತಿತ್ತು. ಹಿಂಬದಿಯ ಗುಡ್ಡ ಮನೆ, ತೋಟದ ಮೇಲೆ ಕಪ್ಪು ಕಾರುತ್ತ ನಿಂತಿತ್ತು. ಮುದುಕ ಸುತ್ತಲೂ ನೋಡಿದ. ಹೇರಂಬನ ನಿರ್ಜನ ತೋಟ ಕಂಡಿತು. ಹಳ್ಳಿಗೆ ಎಂತಹ ಗತಿ ಬಂದಿತು ಎಂದು ಮುದುಕ ಮಿಡುಕಾಡಿದ. ನಾಲ್ಕೈದು ಕುಟುಂಬಗಳು, ಒಂದಿಷ್ಟು ಜನ, ಅವರೆಲ್ಲರ ನೋವು ನಲಿವುಗಳು, ಎಲ್ಲವೂ ಇತ್ತು. ಈಗ ಮಾತ್ರ ಎಲ್ಲವೂ ಬರಿದು.' [೬]

ತುಂಡು ಭೂಮಿಯ ಮೇಲೆ ಜೀವವನ್ನೇ ಇಟ್ಟುಕೊಂಡಿದ್ದ ಹಳೆಜೀವ ದುಗ್ಗಜ್ಜನಂತವರಿಗೆ ಆ ಭೂಮಿಯೇ ಸರ್ವಸ್ವವಾಗಿ, ದೂರದಿಂದಲೇ ಅವ್ಯಕ್ತ ಭಯ ಕಾಡುತ್ತದೆ. ಕಾದಂಬರಿಯಲ್ಲಿ ಮುಖ್ಯವಾಗಿ ಕಾಣುವ ಅಂಶಗಳೆಂದರೆ ಅಣೆಕಟ್ಟು ಕಟ್ಟುವ ಕಾರ್ಯನಿರ್ವಹಣೆಯಲ್ಲಿನ ಸರಕಾರದ ವೈಫಲ್ಯ ಮತ್ತು ಪರಿಹಾರ ವಿತರಿಸುವಲ್ಲಿನ ವರ್ಗ ತಾರತಮ್ಯವಾಗಿದೆ. ಭೂಮಿಯ ಒಡೆಯರಿಗೆ ಪರಿಹಾರ ವಿತರಿಸುವ ಆಡಳಿತ ಆ ಭೂಮಿಯಲ್ಲಿ ಹುಟ್ಟಿನಿಂದಲೂ (ಹುಟ್ಟಾಳು) ಆಳಾಗಿ ದುಡಿಯುತ್ತಿರುವ ಹಸಲರ ಹಾಲ ಮತ್ತು ಭೈರನ ಸಂಸಾರಗಳಿಗೆ ಪರಿಹಾರವನ್ನು ವಿತರಿಸುವುದಿಲ್ಲ. ಒಂದು ನೆಲೆಯೇ ಇಲ್ಲದ ಈ ಎರಡೂ ಸಂಸಾರಗಳು ತಮ್ಮ ಒಡೆಯರ ಜೊತೆ ತಮ್ಮ ಕುಟುಂಬ ಸಮೇತ ಗ್ರಾಮ ನಿರಾಕರಣೆ ಮಾಡುವುದು ಕಂಡುಬರುತ್ತದೆ. ಪರಿಹಾರ ಕುರಿತು ಹಾಲ, ಭೈರರ ಪ್ರತಿಕ್ರಿಯೆ ಕಾದಂಬರಿಯಲ್ಲಿ ಕಾಣುವುದಿಲ್ಲ. ಒಡೆಯನ ಕುಟುಂಬ ಗ್ರಾಮ ನಿರಾಕರಣೆ ಮಾಡಿದರೆ, ಅವನ ಸಂಸಾರದ ಜೊತೆ ಜೀತದಾಳುವಿನ ಸಂಸಾರವೂ ನಿರಾಕರಣೆ ಮಾಡುವುದು, ವಸ್ತುವೊಂದರ ಮೇಲಿನ ಹಿಡಿತ(ಹಕ್ಕು)ವೆಂಬಂತೆ ಜೀತವ್ಯವಸ್ಥೆ ಮೂಡಿ ಬಂದಿದೆ. ಒಂದು ಪ್ರದೇಶದ ಜನತೆ ಗ್ರಾಮ/ನಗರ ನಿರಾಕರಿಸುವ ಸಂದರ್ಭ ಬಂದಾಗ ಅವರಲ್ಲಿ ಮೂಡುವ ನಿರೀಕ್ಷೆಗಳು (ಇದಕ್ಕೆ ಮನದ ಗೋಜಲುಗಳು, ಸಂಕೀರ್ಣತೆಗಳು ಸ್ಪಷ್ಟವಾಗುವ ಸಮಯ ಎನ್ನಬಹುದು) ಅವರ ವೈವಿಧ್ಯಮಯವಾದ ಮನಸ್ಸು, ಸ್ವಭಾವಗಳನ್ನು ಬಿಂಬಿಸುತ್ತವೆ. ಈ ಸ್ವಭಾವ ವರ್ಗ, ವರ್ಣಕ್ಕೆ ಅನುಗುಣವಾಗಿ ಹೊರಹಾಕಲ್ಪಡುತ್ತದೆ ಎಂಬುದೂ ಪ್ರಮುಖವಾದ ಅಂಶವಾಗಿದೆ. ಪರಿಹಾರ (ಕೇವಲ ಆರ್ಥಿಕ) ಇಡೀ ಸಮಸ್ಯೆಗೆ ಪರಿಹಾರವಲ್ಲ ಎಂಬ ನಿಲುವು ಅಧ್ಯಯನದ್ದಾಗಿದೆ.

ಶ್ರೀಧರ ಬಳಗಾರ ಅವರ 'ಇಳೆ ಎಂಬ ಕನಸು' ಕತೆಯ ಜನಕಜ್ಜನ ಗ್ರಹಿಕೆಯು ಸಹ ದುಗ್ಗಜ್ಜನ ಗ್ರಹಿಕೆಯಂತೆಯೆ ಇದೆ. ದಿನದಿಂದ ದಿನಕ್ಕೆ ಏರುವ ನೀರು ಅವನಿಗೆ ಆಡಳಿತದ ದೌರ್ಜನ್ಯದಂತೆ ಕಾಣುತ್ತದೆ. ಜನಕಜ್ಜ, ಮಗ ಕಮಲಾಕರ, ಮನೆಯಾಳು ಕುಣುಬಿಯರ ನಾಗು ವಿಭಿನ್ನ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಾರೆ. ಅವರ ಗ್ರಹಿಕೆ ಮತ್ತು ಬಯಕೆಗಳು ವಿಭಿನ್ನ ಆಯಾಮವನ್ನು ಪಡೆದುಕೊಳ್ಳುತ್ತವೆ. ಹಿಂದೊಮ್ಮೆ ಬಂದ ಪ್ಲೇಗಿನಿಂದ ತನ್ನ ಇಡೀ ಕುಣುಬಿ ಕುಲವನ್ನು ಕಳೆದುಕೊಂಡು, ತಾನು ಅದರ ಅವಶೇಷವಾಗಿ ಉಳಿದಿದ್ದ ನಾಗುವಿಗೆ ಮುಳುಗಡೆ ಗಂಭೀರವಾದ ಸಮಸ್ಯೆ ಎನ್ನಿಸುವುದಿಲ್ಲ. ಅವನ ದೃಷ್ಟಿಯಲ್ಲಿ ಪ್ಲೇಗೆಂಬ ಪ್ರಳಯದ ಆಕ್ರಮಣಕ್ಕೆ ಮೊದಲನೇ ಸ್ಥಾನವಿದ್ದು ಎರಡನೆಯ ಸ್ಥಾನದಲ್ಲಿ ಪ್ರಳಯ (ಮುಳುಗಡೆ)ವಿದೆ. ಅವನ ದೃಷ್ಟಿಯಲ್ಲಿ ಮುಳುಗಡೆ ಪ್ಲೇಗಿನಷ್ಟು ಅಪಾಯಕಾರಿಯಲ್ಲ. ಈ ಗ್ರಾಮದ ಜನರ ನಡತೆಗಳೂ ಸಹ ಲಾಭದಾಯಕ ದಿಕ್ಕಿನತ್ತ ಚಲಿಸುತ್ತ, ಮಹಾಲಿಂಗ ಮಂಗಿ ಅವರ 'ಮುಳುಗಡೆ' ಕಥೆಯ ವೀರಾಪುರದ ಜನರ ಸ್ವಭಾವವನ್ನು ಬಿಂಬಿಸಿವೆ. ಊರಿನ ಜನರೆಲ್ಲ ಭರ್ಜರಿ ದೊರೆತ ಪರಿಹಾರದ ಹಣ ಎಣಿಸುತ್ತಿದ್ದರೆ ಜನಕಜ್ಜ ಮಣ್ಣಿಗಾಗಿ ರೋದಿಸುತ್ತಾನೆ. ಇಲ್ಲಿ ಅವನ ಗ್ರಹಿಕೆಗೆ ಎರಡು ಆಯಾಮಗಳಿವೆ. ಮೊದಲನೆಯದು ಭೂಮಿಯ ರಕ್ಷಣೆ, ಎರಡನೆಯದು ಊರ ದೈವಗಳ ರಕ್ಷಣೆ. ಅಂತೆಯೆ ಅವನಿಗೆ ಬಿದ್ದ ಕನಸು ಇಂದಿನ ಸಾಮಾಜಿಕ, ರಾಜಕೀಯ ವ್ಯವಸ್ಥೆಗಳ ವಿರುದ್ಧದ ಜನಸಾಮಾನ್ಯನ ಹೋರಾಟದ ಪ್ರತಿರೂಪವಾಗಿದೆ.

'ಊರವರ ಜಮೀನಿನ ಸರಹದ್ದುಗಳನ್ನು ಕಾಪಾಡುತ್ತ ಬೆಟ್ಟದ ಮೇಲೆ ವಿಗ್ರಹಗಳಾಗಿ ಕೂತಿರುವ ಜಟಕ, ನಾಸ, ನಾಗ, ಹುಲಿಯಪ್ಪ ಜೀವಧರಿಸಿ ದಾರಿಗಿಳಿದು ಬಂದವು. ಕುಣುಬಿಗಳು ಸುಗ್ಗಿಯ ಉತ್ಸವದಲ್ಲಿ ಬಣ್ಣದ ಥಳುಕು ವೇಷದಲ್ಲಿ ಅವರಿದ್ದರು. ಜನಕಜ್ಜನ ಮನೆಯ ಹತ್ತಿರ ಬಂದು ಕುಣಿಯುವುದನ್ನು ಬಿಟ್ಟು ಕ್ರಾಂತಿಕಾರಿ ಘೋಷಣೆಗಳನ್ನು ಕೂಗತೊಡಗಿದರು. 'ನಮ್ಮನ್ನೂ ಆದಿವಾಸಿಗಳನ್ನೂ ಜಲಸಮಾಧಿ ಮಾಡುವವರಿಗೆ ದಿಕ್ಕಾರ!' 'ನಮ್ಮಿಂದ ಸೇವೆ ಪಡೆದು ಈಗ ಉಪವಾಸ ಬೀಳಿಸಿ ಹೋಗುತ್ತಿರುವವರು ದ್ರೋಹಿಗಳು! ನಮ್ಮನ್ನು ಉಚ್ಚಾಟನೆ ಮಾಡಿದವರೇ ಪ್ರತಿಷ್ಠಾಪನೆ ಮಾಡಲಿ!' [೭]

ಊರ ದೇವತೆಗಳು ಬೀದಿಗಿಳಿದು ಆಡಳಿತ ಮತ್ತು ಊರ ಜನತೆಯ ವಿರುದ್ಧ ಧಿಕ್ಕಾರ ಹಾಕಿ ಬೇಡಿಕೆ ಮುಂದಿಡುವುದು ಕೂಡ ಮನುಷ್ಯರ ಅಸಹಾಯಕತೆಯ ಪರಮೋಚ್ಚ ಸ್ಥಿತಿಯಾಗಿದೆ. ಜನಕಜ್ಜ

ನಾಗುವಿಗೆ ಹೇಳುವ ಮಾತು 'ನಾಗು, ಕಾಡಿನ ದೇವತೆಗಳು ಅತಂತ್ರವಾದವು. ನಮ್ಮ ಸಂಗ್ತಿಗೆ ಕರ್ಕಂಡು ಹೋಗದೆ ಗತಿಯಿಲ್ಲ' ಎಂಬ ಮಾತು, ಅವನ ದೃಷ್ಟಿಯಲ್ಲಿ ಇಡೀ ಜಗತ್ತೇ ಅತಂತ್ರವಾಗುತ್ತಿರುವ ವಾದವನ್ನು ಮಂಡಿಸುತ್ತದೆ. ನಾಗುವಿನ ಗ್ರಹಿಕೆಯ ಇನ್ನೊಂದು ಮುಖ ಆ ಊರ ಜನರ ರಾಗದ್ವೇಷ ಕುರಿತದ್ದು. ಅದೇ ಗ್ರಾಮದ ಜನಕಜ್ಜನ ವಿರೋಧಿ ಶಿವಯ್ಯ ತನ್ನ ಕುಟುಂಬದ ಸಾಮಾನುಗಳನ್ನು ಲಾರಿಯಲ್ಲಿ ಹೇರಿಕೊಂಡು ಮುಂಬಯಿಯಲ್ಲಿದ್ದ ಮಗನ ಕಡೆ ಹೊರಡುತ್ತಾನೆ. ನಾಗು ಜನಕಜ್ಜನಿಗೆ 'ಊರಿನ ಸಂಗ್ತಿಗೆ ಊರಿನ ಜಗಳ, ದ್ವೇಷಗಳೂ ಮುಳುಗಿ ಹೋದ್ವು ನೋಡಿ' ಎಂದು ಹೇಳುವ ಮಾತು ಇದನ್ನು ಪುಷ್ಟೀಕರಿಸುತ್ತದೆ. ಆದರೆ ಜನಕಜ್ಜನ ಮಗ ಕಮಲಾಕರನ ದೃಷ್ಟಿಯಲ್ಲಿ ಮುಳುಗಡೆಯೆಂದರೆ ಹಣ ಮಾಡುವುದಾಗಿದೆ. ಸಾಗಿಸುವ ಸಾಮಾನುಗಳೊಂದಿಗೆ ಸಾಗವಾನಿ ಕಟ್ಟಿಗೆಗಳನ್ನು ಸಾಗಿಸುವ ಸಂಚು ಮಾಡುವ ಅವನ ಗ್ರಹಿಕೆಯಲ್ಲಿ ಒಂದನ್ನು ಬಿಟ್ಟುಕೊಟ್ಟು (ಕಳೆದುಕೊಂಡು) ಇನ್ನೊಂದನ್ನು ಪಡೆಯುವ ವ್ಯವಹಾರ ಕುಶಲತೆ ಎದ್ದು ಕಾಣುತ್ತದೆ. ಎರಡು ತಲೆಮಾರುಗಳ ಮಧ್ಯದ ಬದುಕಿನ ಮೌಲ್ಯ ತೆಲುವಾಗುತ್ತ ನಡೆದುದನ್ನು ಈ ಸಂದರ್ಭದಲ್ಲಿ ಅಧ್ಯಯನ ಕಂಡುಕೊಂಡಿದೆ.

ಮಹಾಲಿಂಗ ಮಂಗಿ ಅವರ 'ಮುಳುಗಡೆ' ಕತೆಯಲ್ಲಿ ಬರುವ ಕುಂದರಗಿ ಬಾಳ್ಯಾ ಸರಿಯಾದ ಪರಿಹಾರ ಸಿಗದೆ, ಸರಕಾರವನ್ನು ಎದುರಿಸಲಾರದೆ ನೇಣು ಹಾಕಿಕೊಳ್ಳುತ್ತಾನೆ. ಇದಕ್ಕೆ ಆಡಳಿತದ ಪ್ರತಿಕ್ರಿಯೆ ಶೂನ್ಯವಾಗಿದೆ. ಕೃಷ್ಣಾ ನದಿಗೆ ಹಾಕಿದ ಆಲಮಟ್ಟಿ ಅಣೆಕಟ್ಟಿನ ಹಿನ್ನೀರಿನಲ್ಲಿ ಮುಳುಗಡೆಯಾದ ವೀರಾಪುರ ಗ್ರಾಮದ ಜನತೆ ಹಂತ ಹಂತವಾಗಿ ಗ್ರಾಮ ತೊರೆದು ಹೋದ ರೀತಿ ಮಾತ್ರ ವಿಶಿಷ್ಟವಾಗಿದೆ. ಗ್ರಾಮ ಸಮುದಾಯದ ಗ್ರಾಮ ನಿರಾಕರಣೆಯ ರೀತಿಯನ್ನು ಅಧ್ಯಯನ ವಿಶೇಷವಾಗಿ ಗುರುತಿಸುತ್ತದೆ.

> 'ಆ ಶಿವಣ್ಣಗೋಳ ಸಿದ್ಯಾ, ಭೀಮಣ್ಣಾಯ್ಯ, ರಾಚಣ್ಣಾಯ್ಯ, ಜಡಿಸಿದ್ಯ, ಮುತ್ಯಾಗೋಳ ನಿನ್ನೆ ಸಂಜಿಯೊಳಗ ಚಕ್ಕಡಿ ಹೂಡಿಕೊಂಡು ಊರು ಬಿಟ್ಟರು. ಹೂಂ ಪೂಜಾರಿ ಪುಂಡಲೀಕ, ಅವರ ಹಿರೇಕುರುಬರ ಮಂದಿ ದನಾಕುರಿ ಹೊಡಕೊಂಡ ಟ್ರ್ಯಾಕ್ಟರದಾಗ ದೇವ್ರ, ಪಾಲಕಿ ಎಲ್ಲಾ ಸಾಗಿಸಿಕೊಂಡ ಹೊರಟು ಹೋದರು. ಗೌಡ್ರು, ಕುಲಕರ್ಣೇರು ..ಅವರೇನಪಾ ದೊಡ್ಡ ಮಂದಿ. ಹಾಗಾಕ ತಯಾರ. ಆದರ ಪರಿಹಾರ ಗಂಟು ಸಾಲದಂತ. ಸರಿ ಬೆಲೆ ಬಾರ್ದ ತಾವು ಕಾಲು ಕೀಳೋದಿಲ್ಲಂತ. ದಾವ್ ಹಾಕ್ಕೊಂಡ ಕುಂತಾರ. ಒಕ್ಕಲು ಆಯಗಾರ ಮಂದಿ. ಹೊಲೆ. ಮಾದರು. ಹಿಂದುಳಿದ ಬಡಮಂದಿ ಸಿಕ್ಕಷ್ಟು ತಕ್ಕೊಂಡು. ಊರ ಬಿಟ್ಟು ಎರಡು ದಿನಾ ಆತು! ಸಿದ್ರಾಮ. ಊರಿಗೆ ಹೋಗೋ ಹಂಗ ಎಷ್ಟು ಸುಲಭದಾಗ ಹೊರಟು ಹ್ವಾದರಂತಿ. ನಮ್ಮ ಒಕ್ಕಲಿಗೀರ ಮಂದೀದ ಜೋಡಿ ಜೀವ ಒಣಾ ತ್ರಾಸ ಮಾಡಿಕೊಳ್ಳತಾವು.."[೬೫]

ಈ ಮಾತು ಜಾತಿ, ಅಂತಸ್ತಿಗೆ ಅನುಗುಣವಾಗಿ ಊರನ್ನು ಬಿಟ್ಟು ಹೋದ ಗ್ರಾಮಸ್ಥರ ಕುರಿತು ಹೇಳಿದರೂ, ಇಲ್ಲಿ ಎರಡು ಅಂಶಗಳನ್ನು ನಾವು ಗಮನಿಸಬಹುದು. ಕುರುಬರು, ಆಯಗಾರರು, ಹೊಲೆಮಾದಿಗರು ಪರ ಊರಿಗೆ ಹೋಗೋ ಹಾಗೆ ಚಿಂತೆಯಿಲ್ಲದೆ ಹೋಗುತ್ತಾರೆ. ಅವರ ಅಂತಿಮ ನಿರ್ಧಾರ ದುಡಿದುಣ್ಣೋ ಕೈಗಳಿಗೆ ಯಾವೂರಾದರೇನು ಎಂಬ ನಂಬಿಕೆಯಾಗಿದೆ. ಇವರಲ್ಲಿ ಭೂಮಿ-ಮನುಷ್ಯ ಸಂಬಂಧ ಕುರಿತ ಭಾವನಾತ್ಮಕ ದ್ವಂದ್ವ ಕಾಣಿಸುವುದಿಲ್ಲ. ಆದರೆ ಗೌಡ, ಕುಲಕರ್ಣಿ ಅವರಂತಹ ದೊಡ್ಡ (ಮೇಲ್ವರ್ಗ) ಮಂದಿಗೆ ಪರಿಹಾರದ ಹಣ ಕಡಿಮೆ ಆಯ್ತು, ಹೋರಾಟ ಮಾಡಿ (ಕತೆಯಲ್ಲಿನ 'ಹಾಗಾಕ ತಯಾರು' ಎಂಬ ಪದ ಗಟ್ಟಿ ಅಂಶಗಳಿಂದ ಕೂಡಿದ್ದು ಗಮನಾರ್ಹ) ಇನ್ನಷ್ಟು ಪಡೆಯೋಣ ಎಂಬ ಆಸೆಯ ಹಿಂದೆ ಒಗ್ಗಟ್ಟು, ವಿದ್ಯೆ, ಅಧಿಕಾರಸ್ಥರ ಬೆಂಬಲ ಇರುವುದು ತಿಳಿದು ಬರುತ್ತದೆ. ಇದಾವುದೂ ಇಲ್ಲದ ಮೊದಲಿನ ಗುಂಪು, ಮಾನಸಿಕವಾಗಿ ನಿರಾಳತೆಯನ್ನು ಅನುಭವಿಸಿದೆ. ಅವರಿಗೆ ಆಸ್ತಿ ಸಂಬಂಧದ ಅಗಲಿಕೆಯ ನೋವಿಲ್ಲ. ಬದಲಾಗಿ ಕೌಟುಂಬಿಕ ಸಂಬಂಧಗಳ ಭಾವನಾತ್ಮಕ ಬಂಧ ಮಾತ್ರ ಇದೆ. ಇಡೀ ಯೋಜನೆ, ಜನರ ಸ್ಥಳಾಂತರ, ಗ್ರಾಮ ನಿರಾಕರಣೆಗಳು ದೇವ, ದೈವತ್ವದ ನಿರ್ಧಾರವಾಗಿ, ಅವರ ಅಸಹಾಯಕತೆ ಹಣೆ ಬರಹವಾಗಿ ಮಾರ್ಪಡುತ್ತದೆ. ಶಾಂತಾದೇವಿ ಕಣವಿ ಅವರ 'ಹೊಸ ಅಲೆ' ಕತೆಯಲ್ಲಿ ಬರುವ ಬ್ಯಾತನಾಳದ ಕೆಂಚವ್ವನ ಹಿರಿಮಗ ಶಂಕರಪ್ಪನ ಈ ಮಾತು ಗಮನಿಸೋಣ.

> 'ನನ್ನ ಹೊಲಾ, ತ್ವಾಟ, ಆಣೆಕಟ್ಟು ಕಟ್ಟು ಕೆಲಸದಾಗ ನೀರಾಗ ಮುಳುಗಿ ಹೋಗ್ತಾವಂತ ಕೇಳಿ ಒಕ್ಕುಲತನ ಮಾಡಿಕೊಂಡು ಜೀವನಾ ಸಾಗುಸೋ ನಾನು, ಎದಿನ ಒಡಕೊಂಡಿದ್ದೆ. ಎರಡ ದಿನ ಚರಿಗಿ ತಗೊಂಡ ಹತ್ತಿತ್ತು. ಅವ್ವ ಅಂತೂ ಈ ಸುದ್ದಿ ಕೇಳಿ ಎರಡ ದಿನ ನೀರು ಸುದ್ದಾ ಮುಟ್ಟಿರಲಿಲ್ಲ.'[೬೬]

ಶಂಕರಪ್ಪನ ದೃಷ್ಟಿಯಲ್ಲಿ ಅವನ ದೊಡ್ಡ ಸಂಸಾರವೇ ಅವನ ಮೊದಲ ಶತ್ರು, ಎರಡನೆಯ ಶತ್ರು ಪ್ರಭುತ್ವವಾಗಿದೆ. ಅವನ ಗ್ರಹಿಕೆಯಲ್ಲಿ ಮುಳುಗಡೆ ಅನಿವಾರ್ಯ, ಸರಿಯಾದ ಪರಿಹಾರ ಬಂದರೆ ಆಯ್ತು. ಶಂಕರಪ್ಪ ಶಹರದ ಅಧಿಕಾರಿಗಳನ್ನು ಕಂಡು, ಅವರಿಗೆ ಮಾಮೂಲು ಕೊಟ್ಟು ಬರುತ್ತಾನೆ. ಆದರೆ ಅವನ ತಾಯಿ ಕೆಂಚವ್ವಳ ಗ್ರಹಿಕೆಯಲ್ಲಿ ಹೊಲ ಮತ್ತು ಮನೆಗಳು ಅವಳ ಇಡೀ ಬದುಕೆ ಆಗಿವೆ. ಊಟ, ತಿಂಡಿ ತಿನ್ನದೆ ನೆಲ ಹಿಡಿದು ಮಲಗುತ್ತಾಳೆ. ಸತ್ತು ಹೋದ ಯಜಮಾನನ ನೆನಮ ಕಾಡುತ್ತದೆ. ಅವನು ಬದುಕಿದ್ದರೆ, ಈ ಕಷ್ಟ ಪರಿಹಾರವಾಗುತ್ತಿತ್ತೋ, ಅದಕ್ಕೆ ಕತೆಯಲ್ಲಿ ಉತ್ತರವಿಲ್ಲ. 'ದೇವರು ಲಗೂನ ನನ್ನ ಕಣ್ಣು ಮುಚ್ಚಲಿ, ಇಲ್ಲೇ ಸಾಯತೀನಿ, ಹೊಲದಾಗ ಹಿರ್‍ಯಾನ ಹಂತ್ಯಾಕ ಹುಗೀರಿ ನನ್ನೂ' ಅನ್ನೋ ಕೆಂಚವ್ವಳ ಮಾತು ಹಳೆ ತಲೆಮಾರಿನ ವ್ಯಕ್ತಿಗಳು ಗ್ರಾಮ, ಹೊಲ, ಮನೆಯನ್ನು ಅಗಲಲಾರದ ಭಾವನಾತ್ಮಕ ದ್ವಂದ್ವದಲ್ಲಿ ಸಿಲುಕಿ ಒದ್ದಾಡುವುದು ಸ್ಪಷ್ಟವಿದೆ. ಸುನಂದಾ ಪ್ರಕಾಶ ಕಡಮೆ ಅವರ 'ನೋ ಎಂಟ್ರಿ' ಕತೆಯಲ್ಲಿ ಗಿರಿಧರನ ತಾಯಿ, ಐ.ಎನ್.ಎಸ್. ಕದಂಬ ನೌಕಾನೆಲೆಗಾಗಿ ಸರಕಾರ ಗದ್ದೆಯನ್ನು ಸ್ವಾಧೀನಪಡಿಸಿಕೊಂಡು ಅದಕ್ಕೆ ಪರಿಹಾರ ಕೊಟ್ಟಾಗ, 'ವರ್ಷಗಟ್ಟಲೇ ಕೂಡಿಸಿ ಉಣ್ಣಿಸುವ ಗದ್ದೆ ಹೇಗೆ ಕ್ಷಣದಲ್ಲಿ ದುಡ್ಡಾಯ್ತು ನೋಡು'[೨೭] ಎಂದು ಕಂಬನಿ ಮಿಡಿಯುತ್ತಾಳೆ. ದುಡ್ಡಿನ ಕಂತೆ ಹಿಡಿದಾಗ ಗಿರಿಧರನ ಕೈಗಳು ಭಾವುಕತೆಯಿಂದ ನಡುಗುತ್ತವೆ. ಆದರೆ ಊರಿನ ಕೇಶವನಂತಹ ಯುವಜನರು ಪರಿಹಾರದ ಹಣದಿಂದ ಉತ್ಸುಕರಾಗಿರುವುದು ಕಂಡುಬರುತ್ತದೆ. ಕೃಷಿಕ ಕುಟುಂಬಗಳು ಭೂಮಿಯನ್ನು ಕೇವಲ ಮಣ್ಣಾಗಿ ನೋಡದೆ ಅನ್ನ ಕೊಡುವ, ಜೀವನ ಕೊಡುವ ತಾಯಿಯಾಗಿ ನೋಡುವುದು ಅಧ್ಯಯನ ಕಂಡುಕೊಂಡ ಸಂಗತಿಯಾಗಿದೆ.

ಗ್ರಾಮ, ಆಸ್ತಿ ಮುಳುಗಡೆಯಾಗುವ ಅಥವಾ ಆಡಳಿತ ಸ್ವಾಧೀನ ಪಡೆಯುವ ಸಂದರ್ಭದಲ್ಲಿ, ಗ್ರಾಮೀಣ ಸಮುದಾಯದ ಪ್ರತಿಕ್ರಿಯೆಗಳು ಆಯಾ ವ್ಯಕ್ತಿಗಳ ಜಾತಿ, ಧರ್ಮ, ಆರ್ಥಿಕತೆ ಮತ್ತು ವಯೋಮಾನಕ್ಕೆ ತಕ್ಕಂತೆ ವೈವಿಧ್ಯಮಯವಾಗಿ ಕಂಡುಬರುತ್ತವೆ. ಹಳೆಯ ತಲೆಮಾರಿನ (ವಯಸ್ಸಾದ ಅವಿದ್ಯಾವಂತರು, ವಿಧಿವಾದದಲ್ಲಿ ನಂಬಿಕೆ ಹೊಂದಿದವರು) ಜನರು ತಮ್ಮ ಭೂಮಿ, ಮನೆಗಳ ಜೊತೆಯಲ್ಲಿಯೇ ತಮ್ಮ ಪ್ರಾಣವೂ ಮುಳುಗಿ ಸಮಾಧಿಯಾಗಬೇಕು ಎನ್ನುವ ಭಾವನಾತ್ಮಕ ಗ್ರಹಿಕೆಯನ್ನು ಹೊಂದಿದ್ದಾರೆ. ತಮ್ಮ ಸಾಂಸ್ಕೃತಿಕ ಬದುಕಿನ ಬೇರನ್ನೇ ಕಳೆದುಕೊಂಡು, ಗ್ರಾಮಗಳನ್ನು ತೊರೆಯಬೇಕಾದ ಸಂದರ್ಭದಲ್ಲಿ, ನಗರದ ಕಲ್ಪನೆಯನ್ನೇ ಮಾಡಲಾರದೆ ಪರಿತಪಿಸಿದ ಒಂದು ಕಾಲಮಾನದ ಜನರು ಇವರಾಗಿದ್ದಾರೆ. 'ದ್ವೀಪ' ಕಾದಂಬರಿಯ ದುಗ್ಗಜ್ಜ, 'ಮುಳುಗಡೆ' ಕತೆಯ ದಾಳ್ಯಾ, 'ಹೊಸ ಅಲೆ' ಕತೆಯ ಕೆಂಚವ್ವ, 'ಇಳೆ ಎಂಬ ಕನಸು' ಕತೆಯ ಜನಕಜ್ಜರು ಆ ಕಾಲಮಾನದ ಪ್ರತಿನಿಧಿಗಳಾಗಿ ನಿಲ್ಲುತ್ತಾರೆ. ಇವರ ನಂತರದ ಎರಡನೆಯ ತಲೆಮಾರಿನವರು, ಹಿರಿಯರ ಹಾಗೆ ಅತೀ ಭಾವುಕರಾಗದಿದ್ದರೂ ವಾಸ್ತವವಾದಿಗಳಾಗಿ ವ್ಯವಹಾರ ಕುಶಲತೆಯನ್ನು ಪ್ರತಿನಿಧಿಸುತ್ತ, ತಮ್ಮ ಕಳೆದುಕೊಳ್ಳುವಿಕೆಯನ್ನು ಹಣದಿಂದ ತುಂಬಿಕೊಳ್ಳಲು ಪ್ರಯತ್ನಿಸುವುದು ಕಂಡುಬರುತ್ತದೆ. ಇನ್ನು ಮೂರನೆಯ ತಲೆಮಾರಿನವರು (ವಿದ್ಯಾವಂತರು, ಹೊಸಗಾಳಿ–ಪರಿಸರಕ್ಕೆ ಸ್ಪಂದಿಸಿದವರು) ನಗರದ ಆಕರ್ಷಣೆಯತ್ತ ಸರಿದು ಹೊಸ ಬದುಕನ್ನು ಅಪ್ಪಿಕೊಳ್ಳುವ ಆತುರದಲ್ಲಿರುವುದು ಕಂಡುಬರುತ್ತದೆ. ಭಾವನಾತ್ಮಕ ಅಗಲಿಕೆ, ಹಣದ ವ್ಯವಹಾರ ಇವರ ಮುಂದೆ ನಗಣ್ಯವಾಗಿ ಹೊಸಗಾಳಿ, ಪರಿಸರಕ್ಕೆ ಸ್ಪಂದಿಸುವ ಮನೋಭಾವ ಇವರಲ್ಲಿದೆಯೆನ್ನಬಹುದು.

**ಅತಿ(ನಾ)ವೃಷ್ಟಿ ಮತ್ತು ನಿರಾಕರಣೆ**

ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ಕೃಷಿ ಮತ್ತು ಪಶುಪಾಲನೆಗಳಿಗೆ ವಿಶೇಷ ಆದ್ಯತೆಯಿದೆ. ಪ್ರಕೃತಿದತ್ತ ಮಳೆ ನೀರನ್ನು ಹೆಚ್ಚು ಅವಲಂಬಿಸಿದ ಕೃಷಿಯು ಅತಿವೃಷ್ಟಿ/ಅನಾವೃಷ್ಟಿಗೆ ಒಳಗಾದಾಗ ಕೃಷಿಕ, ಕೃಷಿ ಕಾರ್ಮಿಕರು ಉದ್ಯೋಗ ಅರಸಿ ಗ್ರಾಮ/ನಗರವನ್ನು ನಿರಾಕರಿಸುತ್ತಾರೆ. ಇಂತಹ ವಲಸೆಯನ್ನು ಮುಂಬಯಿ ಕರ್ನಾಟಕದ ಗಡಿಭಾಗದಲ್ಲಿ ನಿರಂತರವಾಗಿ ಕಾಣುತ್ತೇವೆ. ಬರ, ಬರದ ಭೀಕರತೆ ಕುರಿತು ಮುಂಬಯಿ ಕರ್ನಾಟಕದ ಅನೇಕ ಕತೆ, ಕಾದಂಬರಿಗಳು ವಿವರ ನೀಡುತ್ತವೆ. ಬರ ಯಾವ ವರ್ಗದ ಜನರನ್ನು ಬಾಧಿಸುತ್ತದೆ, ಯಾವ ವರ್ಗಕ್ಕೆ ಸೇರಿದ ಜನರು ವಲಸೆ ಹೋಗುತ್ತಾರೆ, ಯಾವ ಜಾತಿ/ಜನಾಂಗದ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ, ಯಾರದು ಶಾಶ್ವತ ವಲಸೆ, ಯಾರದು ಅಲ್ಪಕಾಲಿಕ (ಇಲ್ಲಿ ಕೆಲವು ರೈತರು, ರೈತ ಕಾರ್ಮಿಕರು ಸುಗ್ಗಿಗೆ ಮತ್ತೆ ಮೂಲಸ್ಥಾನಕ್ಕೆ ಮರಳಿ ಬರುತ್ತಾರೆ ಎಂಬುದು ವಿಶೇಷ) ವಲಸೆಯಾಗಿದೆ, ವಯೋಮಾನಕ್ಕನುಗುಣವಾಗಿ ವಲಸೆ ಹೋಗುವ ಜನರ ಮಾನಸಿಕ ಸ್ಥಿತಿ ಹೇಗಿರುತ್ತದೆ ಎಂಬ ಕುರಿತು ವಿಶ್ಲೇಷಿಸಬಹುದು.

ವೀರಭದ್ರ ಕೌದಿ ಅವರ 'ಬರ' ಕತೆ ಬರದಿಂದ ಸೋತು ಹೋದ ಗ್ರಾಮದ ಕೆಳ, ದಲಿತ ವರ್ಗದ ಜನರ ಗ್ರಾಮ ನಿರಾಕರಣೆಯನ್ನು ಹೇಳುತ್ತದೆ. ಸಣಮನಿ ಸಂಗಪ್ಪ ಹೆಂಡತಿ ಮಕ್ಕಳನ್ನು ಕಟ್ಟಿಕೊಂಡು ಗೋವಾಕ್ಕೆ ದುಡಿಯಲು ಹೊರಡುತ್ತಾನೆ. ಊರಿನ ಗೌಡನಂತಹ ಒಬ್ಬಿಬ್ಬರನ್ನು ಹೊರತುಪಡಿಸಿ ಎಲ್ಲ ಸಣ್ಣ ರೈತರು ಗುಳೆ ಹೊರಡುತ್ತಾರೆ. ಗೌಡನ ಮನೆಯಲ್ಲಿ ಜೀತಕ್ಕಿದ್ದ ಭರಮಪ್ಪ ಎಂಬ ವೃದ್ಧ ಗೌಡರಿಗೆ, 'ನಾ ಎಲ್ಲಿ ಹೋಗಲಿ, ನನಗ ಕೂಲಿ ಬ್ಯಾಡ ಹೊಟ್ಟಿಗೆ ಕೂಳು ಹಾಕ್ರಿ ಸಾಕು' ಎಂದು ಕಣ್ಣೀರು ಹಾಕುತ್ತಾನೆ. ಆದರೆ ಗೌಡ 'ಕೂಳ ಹಾಕಾಕ ಕಾಳು ಬೇಕಲ್ಲಲೆ ಮಗನ'[೬೮] ಎಂದು ಅವನನ್ನು ಜೀತದಿಂದ ಬಿಡಿಸಿದಾಗ ಕೃಷಿ ಕಾರ್ಮಿಕ ಗ್ರಾಮ ನಿರಾಕರಣೆ ಮಾಡಬೇಕಾಗುತ್ತದೆ. ಭರಮಪ್ಪನಲ್ಲಿ ಹಳೆ ತಲೆಮಾರಿನ ಭಾವುಕ ವ್ಯಕ್ತಿತ್ವವನ್ನು ಗುರುತಿಸುತ್ತೇವೆ. ವಲಸೆ ಕುರಿತು ಗ್ರಾಮೀಣ ವ್ಯಕ್ತಿಗಳಲ್ಲಿ ದ್ವಂದ್ವ ಅಭಿಪ್ರಾಯಗಳನ್ನು ಅಂದರೆ, ನಿರಾಕರಣೆಯಿಂದ ಭಾವುಕರಾಗುವ ಹಿರಿಯ ತಲೆಮಾರಿನ ಜನರು ಹಾಗೂ ವಾಸ್ತವವನ್ನು ಶ್ರಮಾಧಾರಿತ ನೆಲೆಯಲ್ಲಿ ಒಪ್ಪಿಕೊಳ್ಳುವ ಯುವ ಪೀಳಿಗೆಯನ್ನು ನೋಡುತ್ತೇವೆ. ಹಿರಿಯ ತಲೆಮಾರಿನ ಭರಮಪ್ಪನ ಭಾವುಕತೆಯನ್ನು ಪ್ರಸ್ತುತ ಕಥನ ಸಾಹಿತ್ಯದ ಹಲವು ಪಾತ್ರಗಳು ವ್ಯಕ್ತಪಡಿಸಿವೆ. ಮಾಲತಿ ಪಟ್ಟಣಶೆಟ್ಟಿ ಅವರ 'ಋಣ' ಕತೆಯ ಬಾಳಾನ ತಾಯಿಯು ಮಗ ಗ್ರಾಮ ನಿರಾಕರಿಸುವುದನ್ನು ವಿರೋಧಿಸುತ್ತಾಳೆ. ನಾಲ್ಕಾರು ವರ್ಷ ಬರದಿಂದ ಬಸವಳಿದ ವಿಜಾಪುರ ಜಿಲ್ಲೆ ತಾಳೂರು ಗ್ರಾಮದ ಅನೇಕ ವಿದ್ಯಾವಂತ ಯುವಕರು ನೌಕರಿಗಾಗಿ ವಲಸೆ ಹೋಗುತ್ತಾರೆ. ಬಾಳಾನು ಸಹ ಬೆಂಗಳೂರಿನಲ್ಲಿ ನಾಲ್ಕು ನೂರು ರೂಪಾಯಿಗಳ ನೌಕರಿಯಾಸೆಗೆ ಗೆಳೆಯ ಮಲ್ಲಣ್ಣನೊಂದಿಗೆ ಗ್ರಾಮ ನಿರಾಕರಿಸುವ ಸಂದರ್ಭದಲ್ಲಿ,

> 'ಬಾಳಾ ಯಾಕಪ್ಪಾ ದೂರದ ಸಹರಾ ಸೇರಿಕೊಳ್ಳೋ ಕೆಟ್ಟ ಬುದ್ಧಿ? ನಮ್ಮೂರು ನಮಗ ಪಾಡು! ಈ ಊರಾಗಿನ ಹುಲ್ಲಾದ್ರೂ ತಿಂದು ಇರೂನು, ಕಲ್ಲಾದ್ರೂ ತಿಂದು ಇರೂನು. . .ಆದ್ರ ಊರು ಬಿಟ್ಟು ಪರದೇಶಿ ಆಗಬ್ಯಾಡಾ ನನ ಮಗನ. . .ನಮ್ಮವರು ಅಂತ ಅಲ್ಲೆ ನಿನ್ನ ಯಾರೂ ಎದಿಗೆ ಅವಚಿಕೊಳ್ಳೋದಿಲ್ಲ ನನ ಕೂಸ!'[೬೯]

ಎಂದು ಅವನನ್ನು ತಡೆಯುತ್ತಾಳೆ. ತುಳಸಿ ವೇಣುಗೋಪಾಲ ಅವರ 'ಹೊಂಚು' ಕತೆಯ ಪಾಂಡುವಿನ ತಾಯಿಯದೂ ಇದೇ ಅನುಭವದ ಮಾತಾಗಿದೆ. ಹಳ್ಳಿಯಲ್ಲಿ ಬೇಸಾಯವನ್ನು ಮಾಡಿಕೊಂಡಿದ್ದ ಪಾಂಡು, ಪ್ರಕೃತಿ ವಿಕೋಪಕ್ಕೆ ತುತ್ತಾಗಿ ಮುಂಬಯಿಗೆ ವಲಸೆ ಹೋಗಬೇಕೆಂಬ ಆಸೆಯಲ್ಲಿದ್ದಾಗ, ಪಾಂಡುವಿನ ತಾಯಿ, 'ಎ ಹುಂಬಾ, ನಿನ್ನ ಆ ಹೆಂಡತಿ ಹೇಳಿದ್ದಕ್ಕೆಲ್ಲಾ ಕುಣಿಯುತ್ತಾ ಇರು. ನಿನ್ನನ್ನು ಒಂದು ದಿನ ಸಂತೆಯಲ್ಲಿ (ನಗರ) ಹರಾಜು ಹಾಕಿ ಬರುತ್ತಾಳೆ. ನೋಡುತ್ತಿರು ಮತ್ತೆ'[೭೦] ಎಂದು ತಡೆಯುತ್ತಾಳೆ. ಇದು ಹಿರಿಯ ತಲೆಮಾರಿನ ವ್ಯಕ್ತಿಗಳ ವೈಯಕ್ತಿಕ ಅಭಿಪ್ರಾಯವಾದರೆ, ಇನ್ನು ಹಿರಿಯ ತಲೆಮಾರಿನ ವೃದ್ಧರ ಸಾಮೂಹಿಕ ಅಭಿಪ್ರಾಯವನ್ನು ಶಂಕರ ಕಟಗಿ ಅವರ 'ಹುಲಿಯಾ' ಕತೆಯಲ್ಲಿ ನೋಡಬಹುದು. ಬರಗಾಲಕ್ಕೆ ಬಲಿಯಾಗಿದ್ದ ಮಂಗೂರಿನ ಎಲ್ಲ ದಲಿತ, ಹಿಂದುಳಿದ ಕುಟುಂಬಗಳು ಊಟಕ್ಕೆ ಗತಿಯಿಲ್ಲದೆ ಊರು ಬಿಟ್ಟು ಹೊರಡುತ್ತವೆ. ವಿಷಯ ತಿಳಿದ ಊರಿನ ಹಿರಿಯರು ಹೊರಟು ನಿಂತ ಯುವಕ, ಹೆಂಗಸರನ್ನು ತಡೆಯುತ್ತಾರೆ.

> 'ಲೇ ಹುಡುಗುರ್ಯಾ ಸುಮಾಕ ನೀವು ಹಿಂಗ ಊರು ಬಿಟ್ಟು ಹೋಗಬ್ಯಾಡ್ರಿ, ನೀವ್ ಹೋಗುದ್ ಒತ್ತಟ್ಟಿಗಿರ್ಲಿ, ನಾಳೆ ನಮ್ಮಂತ ಮುದುಕರ ತದುಕರ ಮಣ್ಣ ಸೈತ ನಿಮ್ಗ ಎರೂ ಆದೀತು. ನೋಡಿ ಇಚಾರ ಮಾಡ್ರಿ' ಎಂದು ರಂಗಪ್ಪಜ್ಜ ಎಲ್ಲರ ಪರವಾಗಿ ತಡೆಯುತ್ತಿದ್ದ.[೭೧]

ಈ ಎಲ್ಲ ಸಂದರ್ಭಗಳಿಂದ ವೃದ್ಧಾಪ್ಯ ತಲುಪಿದ ಒಂದು ತಲೆಮಾರಿನ ಜನರಿಗೆ ನಗರ, ಹೊಸ ನೆಲೆ ಕುರಿತು ಅವ್ಯಕ್ತವಾದ ಭಯ, ತಿರಸ್ಕಾರ, ನಗರ ವಾತಾವರಣ ಯುವಕರನ್ನು ಕೆಡಿಸುತ್ತದೆಂಬ ಕಲ್ಪನೆಯ ಜೊತೆಗೆ ಗ್ರಾಮದಲ್ಲಿ ತಮ್ಮಂತ ಅಶಕ್ತ, ಮುದುಕರ ಮುಂದಿನ ಗತಿ ಏನು ಎಂಬ ಚಿಂತೆಯೂ ಇದ್ದಂತಿದೆ. ನಗರ ತಮ್ಮ ಮಕ್ಕಳನ್ನು ಕಸಿದುಕೊಳ್ಳುವ ತಲ್ಲಣ, ಗೊಂದಲವನ್ನು ಇವರ ಮಾತು, ನಡತೆಯಲ್ಲಿ ಗುರುತಿಸುತ್ತೇವೆ. ವ್ಯಾಸರಾವ್ ನಿಂಜೂರ್ ಅವರ 'ಉಸಿರು' ಕಾದಂಬರಿಯ ರುಕ್ಮಿಣಮ್ಮ ತನ್ನ ಮಗ ಡಾ. ಕೇಶವ ಮದ್ರಾಸಿನ ಛಾಯಾಳನ್ನು ಮದುವೆಯಾಗಿ ಬೆಂಗಳೂರಿನಲ್ಲಿ ನೆಲೆಸಲು ನಿರ್ಧರಿಸಿ, ತಾಯಿಯನ್ನೂ ತನ್ನೊಂದಿಗೆ ಆಹ್ವಾನಿಸಿದಾಗ, ರುಕ್ಮಿಣಮ್ಮ, 'ನಾನು ಈ ಮನೆಯಲ್ಲಿ ಉಸಿರು ಬಿಡುವಾಕೆ'[೭೨] ಎಂದು ತನ್ನ ಮಗನನ್ನು ಕಸಿದುಕೊಂಡ ನಗರ ಮತ್ತು ನಗರದ ಸೊಸೆಯನ್ನು ದುರುಗುಟ್ಟಿ ನೋಡುವುದು ಕಂಡುಬರುತ್ತದೆ. ಅದರೆ ಯುವಜನರು ತಮ್ಮ ಹಿರಿಯರ ಆಲಾಪನೆಗಳಿಗೆ(?) ಕಿವಿಗೊಡದವರಾಗಿದ್ದಾರೆ.

ಬರ ಕತೆಯಲ್ಲಿ, 'ಎಲ್ಲಿದ್ರೂ ದುಡಿದು ತಿನ್ನಬೇಕು. ದೇವ್ರು ಹಚ್ಚಿದಂತಾಗಲೇಳು' ಎಂದು ಧೈರ್ಯದಿಂದ ಯುವಕರು ಗ್ರಾಮ ನಿರಾಕರಿಸುತ್ತಾರೆ. ಋಣ ಕತೆಯ ಬಾಳಾ ತಾಯಿಯ ಮಾತಿಗೆ ಲಕ್ಷ್ಯ ಕೊಡದೆ ಮಲ್ಲಣ್ಣನೊಂದಿಗೆ ಬೆಂಗಳೂರು ದಾರಿ ಹಿಡಿಯುತ್ತಾನೆ. ಹೊಂಚು ಕತೆಯಲ್ಲಿ, ಮುದುಕಿಯ ಕಾಲಾನಂತರ ಬಂದ ಪುಂಡಲೀಕನನ್ನು ಅನುಸರಿಸಿ ಪಾಂಡು, ಸಕ್ಕೂ ದಂಪತಿಗಳು ಮುಂಬಯಿ ಸೇರುತ್ತಾರೆ. ಹುಲಿಯಾ ಕತೆಯ ತಳವಾರ ತಿಮ್ಮ, 'ನೀಯಲ್ಲ ಹೇಳ್ತಿಯಪಾ ಹಿರಿಯಾ, ನಮ್ಗ ಹೊಟ್ಟೆಗೇನ್ ಕ್ಯಾರ್ ಹಾಕ್ಕೋ ಅಂತಿ? ಹೆಂಡ್ರ ಮಕ್ಕಳ ಕೈಯಾಗೇನ್ ಹಗ್ಗ ಕೊಟ್ಟ ಕಳಿಸಂದಿ..?' (ಪುಟ ೧೪) ಎಂದು ಸಿಟ್ಟಿನಿಂದ ನುಡಿಯುತ್ತಾನೆ. ನಾವು ಗ್ರಾಮದಲ್ಲಿದ್ದರೆ ನಮಗೆ ಸಾವೇ ಗತಿ ಎಂಬ ಸಾಂಕೇತಿಕತೆ ಇಲ್ಲಿ ಕಾಣಿಸುತ್ತದೆ. ಗ್ರಾಮದ ದೊಡ್ಡ ರೈತರಾದ ಗೌಡ, ದೇಸಾಯಿ ಅಂತಹ ಕೆಲವರು ಭೀಕರ ಬರದಲ್ಲೂ ಗ್ರಾಮ ನಿರಾಕರಣೆ ಮಾಡುವುದಿಲ್ಲ. ಹುಲಿಯಾ ಕತೆಯಲ್ಲಿ 'ಈ ದೇಸಾಯಿಗೆ ಸುಟ್ಟರ ಸುಡಲಾರದಷ್ಟು ಐತಿ. ಅವ ನೋಡುದಾಗಿದ್ದರ ಹಿಂಗ್ಯಾಕ ಆಗತಿತ್ತ.' ಎಂಬ ಮಾತು ಗೌಡ, ದೇಸಾಯರ ಧಾನ್ಯ ಸಂಗ್ರಹ ಕುರಿತು ಹೇಳಿದ್ದಾಗಿದೆ. 'ನಿನ್ನೆ ಕೇರಿ ಕಸಿಬಿ ಹೆಂಗ್ಸು ಮುಂಬೈಕ ಹ್ವಾದ್ರು' ಎಂಬ ಮಾತು ಬರ (ಪ್ರಕೃತಿಯ ಮುನಿಸು) ಮಹಿಳೆಯರನ್ನು ನಗರದ ವೇಶ್ಯಾವಾಟಿಕೆಯತ್ತ ತಳ್ಳುವುದನ್ನು ಸೂಚಿಸುತ್ತದೆ. ಹೀಗೆ ದಲಿತ, ಕೆಳವರ್ಗದ ಜನರು ಬರವನ್ನು ಎದುರಿಸಲಾರದೆ ನಗರದತ್ತ ವಲಸೆ ಬರುವುದನ್ನು, ದೊಡ್ಡ, ಮೇಲ್ವರ್ಗದ ರೈತರು ಗ್ರಾಮದಲ್ಲಿಯೇ ಇರುವುದನ್ನು ಅಧ್ಯಯನ ಗುರುತಿಸುತ್ತದೆ.

**ನಗರೀಕರಣ ಮತ್ತು ನಿರಾಕರಣೆ**

ಮುಳುಗಡೆ, ಭೂಸ್ವಾಧೀನ ಮುಂತಾದ ಪ್ರಕ್ರಿಯೆಗಳಿಗೆ ಅಭಿವೃದ್ಧಿ ಆಯಾಮದ ನೋಟವಿದ್ದರೆ, ರಾಷ್ಟ್ರೀಯ ಹೆದ್ದಾರಿಗಳ ಅಕ್ಕಪಕ್ಕ ಹುಟ್ಟುವ ಹಾಗೂ ಕಾಣೆಯಾಗುವ ಗ್ರಾಮಗಳ ಶೋಚನೀಯ ಸ್ಥಿತಿಯ ಹಿಂದೆ ಅಭಿವೃದ್ಧಿ ಮತ್ತು ನಗರೀಕರಣಗಳು ಕೆಲಸ ಮಾಡುತ್ತಿವೆ. ಜಯಂತ ಕಾಯ್ಕಿಣಿ ಅವರ 'ಇದ್ದಾಗ ಇದ್ದಾಂಗ' ಕತೆಯಲ್ಲಿ, ಪ್ರಶಾಂತವಾಗಿ ಹರಿಯುವ ನದಿಯಂತಿದ್ದ ದೀವಗಿ ಗ್ರಾಮದಿಂದ ಮಣಕಿ, ಕುಮಟೆ ತಲುಪಲು ನದಿಯಲ್ಲಿ ಲಾಂಚ್, ಜಂಗಲ್‌ಗಳನ್ನು ಬಳಸಲಾಗುತ್ತದೆ. ಗ್ರಾಮದ ಜನರನ್ನು ನದಿ ದಾಟಿಸುವ ಈ ಸ್ಥಳದಲ್ಲಿ ಭರ್ಜರಿ ವ್ಯಾಪಾರವಿದ್ದು, ಅದು ಆ ಗ್ರಾಮದ ಆರ್ಥಿಕ ವ್ಯವಸ್ಥೆಯನ್ನು ನಿಯಂತ್ರಿಸುವ ಕೇಂದ್ರವಾಗಿರುತ್ತದೆ. ದೀವಗಿ ಪಕ್ಕದಲ್ಲಿಯೇ ಹಾಯ್ದು ಹೋದ ಹೆದ್ದಾರಿಗೆ ನದಿಯಲ್ಲಿ ಅಡ್ಡಲಾಗಿ ಬ್ರಿಡ್ಜ್ ಕಟ್ಟಲು ಆರಂಭಿಸಿದಾಗ ಈ ಪುಟ್ಟ ಗ್ರಾಮ ನಾಗರಿಕತೆಯೆಂಬ ಹೊಸ ವಾತಾವರಣಕ್ಕೆ ತನ್ನನ್ನು ತಾನು ತೆರೆದುಕೊಳ್ಳುತ್ತದೆ. ಬ್ರಿಡ್ಜ್ ಎಂಬುದು ನಾಗರಿಕತೆಯ ಸಂಕೇತವಾಗಿ, ಆ ಮೂಲಕ ನಗರೀಕರಣದತ್ತ ಮುಖ ಮಾಡಿದ ಗ್ರಾಮದ ಸಾಮಾಜಿಕ, ಆರ್ಥಿಕ ವ್ಯವಸ್ಥೆಯಲ್ಲಿ ಅನಿಶ್ಚಿತತೆ, ದುಗುಡ, ಆತಂಕ, ತಲ್ಲಣಗಳ ಅಲೆಗಳನ್ನು ಎಬ್ಬಿಸುತ್ತದೆ.

> 'ಬಸ್ಸು ನಿಲ್ಲುತ್ತಿದ್ದರಿಂದ ಚಾ ಅಂಗಡಿಗಳು ಚಲೋ ನಡೀತಿದ್ದವು. ದಾಮೋದರ ಪ್ರಭುಗಳ ವ್ಯಾಪಾರ ಭರ್ಜರಿ ಆಗಿತ್ತು. ಸಣ್ಣಮ್ಮ ನಾಯ್ಕನ ಸೀಯಾಳದಂಗಡಿ ಜೋರಾಗಿ ನಡೆಯುತ್ತಿತ್ತು. ಜಂಗಲ್ಲುಗಳು ಹೋಗುತ್ತಿದ್ದವು. ದಕ್ಕೆಯಲ್ಲಿ 'ಕುಹೂಯ್' ಕೂಗುಗಳು ಧ್ವನಿಸುತ್ತಲೇ ಇದ್ದವು.'[೮]

ಹೊಸ ಹೊಸ ಜನರ, ವಸ್ತುಗಳ, ವ್ಯವಹಾರ, ದುಡಿಮೆಗಳ ಸಂಪರ್ಕದಿಂದ ದೀವಗಿ ಗ್ರಾಮ ತನ್ನ ಮೊದಲಿನ ಸಂಪರ್ಕ, ಸಂಬಂಧಗಳನ್ನು ಕಳೆದುಕೊಳ್ಳುವುದು, ಬ್ರಿಡ್ಜ್ ಪೂರ್ಣವಾದ ನಂತರ ವಾಹನಗಳು ಇಲ್ಲಿ ನಿಲ್ಲದೆ ಓಡಾಡುವುದು ಗ್ರಾಮದ ಆರ್ಥಿಕ ವ್ಯವಸ್ಥೆಯನ್ನು ಅಸ್ತವ್ಯಸ್ತಗೊಳಿಸುತ್ತದೆ. ದುಡಿಮೆಯಿಲ್ಲದ ವ್ಯಾಪಾರಿಗಳು ವಲಸೆ ಹೋಗುತ್ತಾರೆ. ಯುವಕರು ಮಲೆಯಾಳಿ ಮೇಸ್ತ್ರಿಗಳ ಸಹಾಯದಿಂದ ಬಾಂಬೆಗೆ ಓಡಿಹೋಗುತ್ತಾರೆ. ದೀವಗಿಯ ಹುಡುಗಿಯರನ್ನು ಬಾಂಬೆಗೆ ಸಾಗಿಸಲಾಗುತ್ತದೆ. ದೀವಗಿ ಗ್ರಾಮ ತನ್ನ ಇರುವಿಕೆಯನ್ನು ಕಳೆದುಕೊಂಡು ಬ್ರಿಡ್ಜ್ ಮಾತ್ರ ಉಳಿಯುತ್ತದೆ. ಇದು ಕೇವಲ ಒಂದು ಗ್ರಾಮದ ಕತೆಯಲ್ಲ. ನಗರೀಕರಣವೆಂದರೆ ಗ್ರಾಮಗಳು ಆಧುನಿಕ ಸೌಲಭ್ಯಗಳನ್ನು ಪಡೆದು, ಗಾತ್ರ, ಜನಸಂಖ್ಯೆ ಉದ್ಯೋಗಾವಕಾಶಗಳನ್ನು ಹೆಚ್ಚಿಸಿಕೊಂಡು ನಗರಗಳಾಗಿ ಪರಿವರ್ತನೆಗೊಳ್ಳುವುದಾಗಿದೆ. ಇದಲ್ಲದೆ, ನಗರದ ಹೊರವಲಯದಲ್ಲಿರುವ ಗ್ರಾಮಗಳು ಭೌತಿಕವಾಗಿ, ಆಡಳಿತಾತ್ಮಕವಾಗಿ ನಗರದಲ್ಲಿ ವಿಲೀನವಾಗಿ ತನ್ನ ಸ್ವಂತಿಕೆಯನ್ನು ಕಳೆದುಕೊಳ್ಳುವುದೂ ನಗರೀಕರಣವೆನ್ನಿಸಿಕೊಳ್ಳುತ್ತದೆ. ಪ್ರಮುಖವಾಗಿ ಗ್ರಾಮದ ಸಾಂಪ್ರದಾಯಿಕ ಆರ್ಥಿಕ ವ್ಯವಸ್ಥೆ ಪಲ್ಲಟಗೊಂಡು ನಗರೀಕರಣದ ವ್ಯಾಪಾರೀಕೃತ ಆರ್ಥಿಕ ವ್ಯವಸ್ಥೆಯಾಗುವುದು

ವಿಶೇಷವಾದದ್ದಾಗಿದೆ. ಕೃಷಿಭೂಮಿಯಲ್ಲಿ ಕಾರ್ಖಾನೆಗಳು, ಬಡಾವಣೆಗಳು, ಶಿಕ್ಷಣ ಪ್ರಸಾರ ಕೇಂದ್ರಗಳು ಸ್ಥಾಪನೆಗೊಂಡು ಕೃಷಿಭೂಮಿ ಮಾಯವಾಗುತ್ತದೆ. ಗ್ರಾಮೀಣರ ವೃತ್ತಿ, ಸಂಸ್ಕೃತಿ, ಆಹಾರ, ಉಡುಪು, ನಡತೆಗಳು ಯಾಂತ್ರೀಕರಣಗೊಳ್ಳುವುದು ನಗರೀಕರಣವೆನ್ನಿಸಿಕೊಳ್ಳುತ್ತದೆ. ಇಂತಹ ನಗರೀಕರಣದ ಹಂತದಲ್ಲಿ ನೂರಾರು ಜನರು ಗ್ರಾಮ ನಿರಾಕರಿಸಿ ನಗರ ಸೇರುವುದು ಕಂಡುಬರುತ್ತದೆ.

ಆಡಳಿತಾತ್ಮಕ ನೆಲೆಯಲ್ಲಿ ಗ್ರಾಮ/ನಗರ ನಿರಾಕರಣೆಗಳ ಕಾರಣಗಳನ್ನು ಪ್ರಸ್ತುತ ಕಥನ ಸಾಹಿತ್ಯ ಗ್ರಹಿಸಿ ದಾಖಲಿಸಿರುವ ಅಂಶಗಳು ಹೀಗಿವೆ. • ಮಲೆನಾಡಿನ ಹಳ್ಳಿಯೊಂದು ಮುಳುಗಡೆಯಾದಾಗ ಕುಟುಂಬಗಳ ಗ್ರಾಮ ನಿರಾಕರಣೆಯ ರೀತಿ ಒಂದು ಬಗೆಯದಾದರೆ, ಬಯಲು ಸೀಮೆಯ ಹಳ್ಳಿಗಳು ಮುಳುಗಡೆಯಾದಾಗ ಗ್ರಾಮೀಣರು ಪ್ರತಿಕ್ರಿಯಿಸುವ ರೀತಿ ಇನ್ನೊಂದು ಬಗೆಯದು. ಮಲೆನಾಡಿನ ಗ್ರಾಮ ಸಮುದಾಯವು, ವರ್ಗ ವ್ಯವಸ್ಥೆ, ಆಸ್ತಿ, ಮನೆ, ದನಕರುಗಳೊಂದಿಗೆ ಪ್ರಕೃತಿಯ ನಿರಾಕರಣೆ, ಸಾಮಾಜಿಕ ಸಂಬಂಧಗಳ ನಿರಾಕರಣೆಯನ್ನು ಸಮೀಕರಿಸಿಕೊಂಡರೆ, ಬಯಲು ಸೀಮೆಯ ಜನ ಜಾತಿ, ವರ್ಗಗಳೊಂದಿಗೆ ಭಾವನಾತ್ಮಕ ಸಂಬಂಧವನ್ನು ಸಮೀಕರಿಸಿಕೊಂಡಿದ್ದಾರೆ. ಇಲ್ಲಿ ಅಪ್ರಸ್ತುತವೆನಿಸುವ ಪ್ರಕೃತಿ ಅವರ ಮಾನಸಿಕ ಪಾತಳಿಯನ್ನು ಮುಟ್ಟದೆ, ದೈವೇಚ್ಛೆಯ ರೂಪ ಪಡೆಯುತ್ತದೆ. • ಅದು ಬಯಲು ಸೀಮೆಯ ಗ್ರಾಮವಾಗಲಿ, ಮಲೆನಾಡಿನ ಬಿಡಾರವಾಗಲಿ ಆಡಳಿತ ವ್ಯವಸ್ಥೆಯ ಒಳಮುಖಗಳು ಏಕರೂಪವಾಗಿವೆ. ಮುಳುಗಡೆ, ನಿರಾಕರಣೆಯ ದ್ವಂದ್ವಗಳೊಂದಿಗೆ ಹೋರಾಡುವ ಜನಸಾಮಾನ್ಯನನ್ನು ಹೀರುವ ಅಧಿಕಾರಿಶಾಹಿಯ ಭ್ರಷ್ಟತೆ, ಪಕ್ಷಪಾತ ಮತ್ತು ನಿಷ್ಕ್ರಿಯತೆಗಳು ಪ್ರತಿ ಸಂದರ್ಭಗಳಲ್ಲಿ ಎದ್ದುಕಾಣುತ್ತವೆ. • ಹಳೆಯ ತಲೆಮಾರಿನ ದುರ್ಗಜ್ಜ, ಕೆಂಚವ್ವ, ಜನಕಜ್ಜ, ಬಾಳ್ಯಾ, ರುಕ್ಮಿಣಮ್ಮ ಮುಂತಾದವರು ಪ್ರಕೃತಿಯೊಂದಿಗೆ ಬೆರೆತ ರೀತಿ ಆಶ್ಚರ್ಯ ತರುತ್ತದೆ. ಅವರು ಮಣ್ಣನ್ನು ಮಣ್ಣಾಗಿ ಗುರುತಿಸದೆ ಅದು ತಮ್ಮ ಬದುಕೆಂದು ಗುರುತಿಸಿ, ಅಲ್ಲಿಯೇ ಬದುಕಿ ಕೊನೆಯುಸಿರೆಳೆಯಲು ತವಕಿಸುವುದು ಕಂಡುಬರುತ್ತದೆ. • ಹೊಸ ತಲೆಮಾರಿನ ಯುವ ಜನತೆ ಪರಿಸ್ಥಿತಿಯೊಂದಿಗೆ ಹೊಂದಿಕೊಂಡು ಹೋಗಲು ಆಸೆ ಪಡುವುದು ವಾಸ್ತವವಾಗಿದೆ. • ಪ್ರಸ್ತುತ ಕಥನ ಸಾಹಿತ್ಯದಲ್ಲಿ ಅನಾವೃಷ್ಟಿಯಿಂದ ಗ್ರಾಮಗಳು ತತ್ತರಿಸಿದಾಗ ಸಣ್ಣ ರೈತರು, ಕೆಳವರ್ಗದ ಕೂಲಿಕಾರರು ಗ್ರಾಮ ನಿರಾಕರಣೆ ಮಾಡುತ್ತಾರೆ.

### ೫. ಮಹಿಳಾ ಗ್ರಹಿಕೆ ಮತ್ತು ನಿರಾಕರಣೆ

ಸ್ವಾತಂತ್ರ್ಯಾನಂತರ ಅರವತ್ತು ವರ್ಷ ಕಳೆದರೂ ಭಾರತೀಯ ಮಹಿಳೆಯರ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಸ್ಥಾನಮಾನಗಳಲ್ಲಿ ಸುಧಾರಣೆಯಾಗಿಲ್ಲ. ಅವರ ಹಕ್ಕು ಬಾಧ್ಯತೆಗಳು ಪೂರ್ಣ ಪ್ರಮಾಣದಲ್ಲಿ ಈಡೇರದೆ ಇರುವುದು ಕಂಡುಬರುತ್ತದೆ. ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಮನುವಿನ ಕಾಲದಿಂದಲೂ ಬೆಳೆದುಬಂದಿರುವ ಮಹಿಳಾ ವಿರೋಧಿ ಕಾನೂನು, ನೀತಿಸಂಹಿತೆಗಳ ಮತ್ತು ಪುರುಷರ ಅನ್ಯಾಕ್ರಮಣಶೀಲತೆ(Male Chauvinism)ಗಳು ಇದಕ್ಕೆ ಕಾರಣವಾಗಿದೆ. ಪ್ರಸ್ತುತ ಸಾಹಿತ್ಯದ ಕಥನಗಳು ನಮ್ಮ ಸಾಮಾಜಿಕ ಸಂಬಂಧಗಳಲ್ಲಿರುವ (ಮಹಿಳೆಯರ ಕುರಿತಾದ) ಕ್ರೌರ್ಯವನ್ನು, ಮಹಿಳೆಯ ಮೂಕ ಪ್ರತಿಭಟನೆಯನ್ನು ದಾಖಲುಪಡಿಸುತ್ತ, ಗ್ರಾಮ/ನಗರಗಳ ನಿರಾಕರಣೆಯ ಸಂದರ್ಭಗಳಲ್ಲಿ ಅವಳ ದ್ವಂದ್ವಾತ್ಮಕತೆ, ಅಸಹಾಯಕತೆ, ಸಾಮಾಜಿಕ ಅಭದ್ರತೆಗಳ ಜೊತೆ ಅನೇಕ ಧಾರ್ಮಿಕ, ಸಾಮಾಜಿಕ, ಆರ್ಥಿಕ ನಂಬಿಕೆಗಳು/ಅಂಶಗಳು ಕಾರ್ಯ ನಿರ್ವಹಿಸುವುದನ್ನು ಅನಾವರಣ ಮಾಡಿವೆ.

#### ಅ. ವಿಧಿವಾದದಲ್ಲಿ ನಂಬಿಕೆ ಇಟ್ಟ ಹಳೆಯ ತಲೆಮಾರಿನ ಮಹಿಳೆ ಮತ್ತು ನಿರಾಕರಣೆ

ನಿರಾಕರಣೆಯಂತಹ ಸಂದಿಗ್ಧ ಸಂದರ್ಭಗಳಲ್ಲಿ ಮಹಿಳೆಯರ ಆತಂಕ, ಪ್ರತಿಭಟನೆ, ಜಾಗೃತ ಸ್ಥಿತಿಗಳನ್ನು ಮುಂಬಯಿ ಕರ್ನಾಟಕದ ಕಥನ ಸಾಹಿತ್ಯ ಸಂಕೀರ್ಣವಾಗಿ ಹಿಡಿದಿಟ್ಟಿದೆ. ಮೇಲ್ವರ್ಗ/ಮೇಲ್ಜಾತಿಯ ಮಹಿಳೆಯರ ಸ್ವರಕ್ಷಣೆ, ಸ್ವಕುಟುಂಬ ರಕ್ಷಣೆಯಂತಹ ತಂತ್ರಗಳು ಈ ನಿರ್ಧಾರಗಳಲ್ಲಿ ಎದ್ದುಕಾಣುತ್ತವೆ. ರಾಘವೇಂದ್ರ ಪಾಟೀಲ ಅವರ 'ಮಾಯಿಯ ಮುಖಗಳು' ಕತೆಯಲ್ಲಿ, ಕಳ್ಳಿಗುದ್ದಿ ಗ್ರಾಮ ನಿರಾಕರಣೆಯ ಸಂದರ್ಭದಲ್ಲಿ ಕಲ್ಲೋಪಂತ(ಮನೆಯ ಯಜಮಾನ)ರಿಗೂ ಅವರ ಹೆಂಡತಿ ಕೃಷ್ಣಾಬಾಯಿಗೂ ನಿರಾಕರಣೆ ಕುರಿತು ವಾದವಿವಾದವಾಗುತ್ತದೆ. ಕಳ್ಳಿಗುದ್ದಿಯಲ್ಲಿ ಸಂಗೀತ ಕಲಿಸುವ ಶಿಕ್ಷಕರು ಇರುವುದಿಲ್ಲವಾದ್ದರಿಂದ, ಮೂರೂ ಹೆಣ್ಣುಮಕ್ಕಳನ್ನು ಬೆಳಗಾವಿಯಲ್ಲಿಟ್ಟು ಶಿಕ್ಷಣ ಕೊಡಿಸಲು ಕೃಷ್ಣಾಬಾಯಿ ಹಠ ಹಿಡಿಯುತ್ತಾಳೆ. 'ನಿಮಗ ನಿಮ್ಮ ಮಕ್ಕಳ ಚಿಂತಿ ಎಲ್ಲೆದ. ಅವು ಏನ ಇದ್ದಲಿ ಅವನೋ

ಏನ ರತ್ನ ಅವನೋ ಅಂತ ತಿಳಕೋಬೇಕನ್ನರ ವ್ಯಸನರೆ ಎಲ್ಲಿ ಅದ?'[೭೪] ಇತ್ಯಾದಿ ವಾದ ಮಾಡಿ ಗಂಡನನ್ನು ಒಪ್ಪಿಸುತ್ತಾಳೆ. ಗೇಣಿ ಜಮೀನುಗಳಿಗೆ ಪಾಲಿನ ವ್ಯವಸ್ಥೆ ಮಾಡಿ ಕಲ್ಲೋಪಂತರು, ಬೆಳಗಾವಿಗೆ ಮನಿ ಮಾಡೋ ವಿಚಾರ ಮಾಡೀನಿ ಎಂದು ಒಪ್ಪಿಗೆ ಸೂಚಿಸುತ್ತಾರೆ. ಕೃಷ್ಣಾಬಾಯಿಗೆ ಮಕ್ಕಳ ಸಂಗೀತ ಶಿಕ್ಷಣಕ್ಕಾಗಿ ಗ್ರಾಮ ನಿರಾಕರಿಸುವುದು ಮುಖ್ಯವಾಗಿರುವುದಿಲ್ಲ. ಅವಳು ಗ್ರಾಮ ನಿರಾಕರಣೆಯನ್ನು ಯಾವ ಒಳ ಉದ್ದೇಶವನ್ನಿಟ್ಟುಕೊಂಡು ಗ್ರಹಿಸಿದ್ದಳು ಎಂಬುದನ್ನು ಗಂಡನ ಮುಂದೆ ನಂತರ ಬಿಚ್ಚಿಡುತ್ತಾಳೆ. 'ಹಾಂ, ಸಂಗೀತದ್ದಂತೂ ಆಗತದ, ಅದರಕಿಂತ ಮುಖ್ಯ ಅಂದರ ಇಲ್ಲಿ (ಗ್ರಾಮ) ನಮ್ಮ ಹುಡಿಗ್ಯಾರಿಗೆ ಹೆಣ್ಣುಸೂಲದ್ದು ಹೆಣ್ಣುಸೂಲದ್ದು ಅಂತಾ ಮಂದಿ ಹೆಸರಿಟ್ಟ ಬಿಟ್ಟಾರ. ಬೆಳಗಾವಿಗೆ ಹೋದರ ಆ ದೊಡ್ಡ ಊರಾಗ ನಮ್ಮ ಗುರುತೂ ಇತಿಹಾಸಾ ಯಾರಿಗೆ ಗೊತ್ತ ಇರತದ? ಅಲ್ಲಿ ಇವದರ ಮದವಿ ಅಷ್ಟ ತ್ರಾಸ ಆಗೂದಿಲ್ಲ. ಅದು ನನ್ನ ದಡಬಡಕಿ. ಈ ಮೂವರದೂ ಮದವಿ ಒಂದ ಮಾಡಿಬಿಡ್ರಿ,' ಇತ್ಯಾದಿ ಉಪದೇಶ ನೀಡುತ್ತಾಳೆ (ಪುಟ ೫). ಈ ಮಾತುಗಳಲ್ಲಿ ಕಾಣುವ ದಡಬಡಕಿ ಎಂಬ ಪದ ಕುಟುಂಬ ಎಂಬ ಸಂಸ್ಥೆ ಕುರಿತು ಮಹಿಳೆ ಹೊಂದಿದ ಕಾಳಜಿಯ ಗ್ರಹಿಕೆಯನ್ನು ವಿವರಿಸುತ್ತದೆ. 'ಒಳ್ಳೇರ ಮಾನ ಹಳ್ಳೀಲಿ ಹೋಯ್ತು' ಎಂಬ ಲೋಕರೂಢಿ ಮಾತಿನಂತೆ ಗ್ರಾಮಗಳು ಅಪಪ್ರಚಾರ, ಅವಹೇಳನಗಳ ಗೂಡುಗಳು ಎಂಬ ಅಭಿಪ್ರಾಯ ಕಥನದಲ್ಲಿ ಸ್ಪಷ್ಟವಿದೆ. ಜಯಂತ ಕಾಯ್ಕಿಣಿ ಅವರ 'ಇದ್ದಾಗ ಇದ್ದಾಂಗ' ಕಥೆಯ ಆನಂದನ ಮಾಂಸಿ (ವಯಸ್ಸಾದ ಅತ್ತೆ) ಸಾಂಪ್ರದಾಯಿಕ, ಪ್ರತಿಗಾಮಿ ವ್ಯಕ್ತಿತ್ವವನ್ನು ಹೊಂದಿದವಳು. ಊರಿನ ಯುವಕರು ಉದ್ಯೋಗಕ್ಕಾಗಿ ಗ್ರಾಮ ನಿರಾಕರಿಸಿ ನಗರ ಸೇರುವುದು ಅವಳ ದೃಷ್ಟಿಯಲ್ಲಿ, ಓಡಿಹೋಗುವುದು ಮಾತ್ರವಾಗಿದೆ. ಗ್ರಾಮದಲ್ಲಿ ದುಡಿದು ಬದುಕಲಾರದ ಪೋಲಿಗಳು ಮಾತ್ರ ಗ್ರಾಮ ನಿರಾಕರಿಸುತ್ತಾರೆ, ಅಂಥವರು ಕೆಟ್ಟುಹೋದವರು, ಅವರ ಸಹವಾಸವನ್ನು ಆನಂದ ಮಾಡಕೂಡದು ಎಂಬುದು ಅವಳ ಅಭಿಪ್ರಾಯ. ಪಬ್ಲೊ ಹಲವು ಯುವಕರೊಂದಿಗೆ ಗ್ರಾಮ ನಿರಾಕರಿಸಿದಾಗ, 'ನೋಡಿದೆಯಾ, ಮತ್ತೆ ನೀನು ಅವನ ಸಂತಿಗೆ ಕುಣೀತಿದ್ದೆಯಲ್ಲ! ಈ ಹಾಳು ಬ್ರಿಜ್‌ನ ನೆವದಿಂದ ಮತ್ತೇನೇನು ಆಗುವುದೋ'[೭೫] ಎಂದು ಆನಂದನಿಗೆ ಎಚ್ಚರಿಸಿ ಪಬ್ಲೊವಿನಿಂದ ದೂರವಿರಲು ಸೂಚಿಸುತ್ತಾಳೆ. ಗ್ರಾಮೀಣ ಯುವಕರು ಯಾಕೆ ಗ್ರಾಮ ನಿರಾಕರಿಸುತ್ತಾರೆ, ಅವರ ಸಮಸ್ಯೆಗಳಾವುವು, ಎಂಬ ಪ್ರಶ್ನೆಗಳು ಹಳೆಯ ತಲೆಮಾರಿನ ಮಾಂಸಿಗೆ ಗೌಣವಾಗಿದ್ದು, ಗ್ರಾಮ ನಿರಾಕರಿಸುವವರು ಹೇಡಿಗಳು, ಪೋಲಿಪುಂಡರು, ಇಂಥವರಿಂದ ತನ್ನ ಸಂಸಾರ ರಕ್ಷಿಸಬೇಕೆಂಬ ಪ್ರಜ್ಞೆಯನ್ನು ಇಂಥ ಮಹಿಳೆಯರಲ್ಲಿ ಗುರುತಿಸಬಹುದು. ರಾಘವೇಂದ್ರ ಖಾಸನೀಸ ಅವರ 'ಅಲ್ಲಾವುದ್ದೀನನ ಅದ್ಭುತ ದೀಪ' ಕತೆಯ ವೃಂದಾ ಅತ್ತಿಗೆಯ ನಿರಾಕರಣೆಯ ಗ್ರಹಿಕೆ ಇನ್ನೂ ಬೇರೆಯದಾದ ನೆಲೆಯನ್ನು ಹೊಂದಿದೆ. ಅಂಬಕ್ಕಳ ಕಾಮನೆಗಳಿಗೆ ಬಲಿಯಾದ ಮೈದುನ ಸತ್ಯಬೋಧ ರಾತ್ರೋರಾತ್ರಿ ಗ್ರಾಮ ನಿರಾಕರಿಸಿ ಪುಣೆ ನಗರದತ್ತ ಹೊರಟು ಹೋಗುತ್ತಾನೆ. ವೃಂದಾ ಅವನನ್ನು ಹುಡುಕಿ ತರಲು ಮಗ ವಾಸುವನ್ನು ಕಳಿಸುವ ಮುನ್ನ, 'ಆದರೆ ಹುಚ್ಚು ಹುಡುಗ! ಆ ದಿನ ರಾತ್ರಿಯೇ ಯಾಕೆ ಹೊರಟು ಹೋಗಬೇಕು? ಬೆಳಕಿನಲ್ಲಿ ಜಗತ್ತನ್ನು ಎದುರಿಸಿ "ನಾನು ತಪ್ಪಿತಸ್ಥನಲ್ಲ" ಎಂದು ಹೇಳುವ ಧೈರ್ಯ ಅವನಿಗೆ ಯಾಕೆ ಸಾಲದೆ ಹೋಯಿತು? ನಮ್ಮೆಲ್ಲರ ಬಾಳುವೆಯ ಒಗಟನ್ನು ಅವನೊಬ್ಬನು ಮಾತ್ರ ಬಿಡಿಸಬಲ್ಲ. ಅವನನ್ನು ಹುಡುಕಿ ತಾ'[೭೬] ಎನ್ನುತ್ತಾಳೆ. ಒಂದು ಕುಟುಂಬ(ಪ್ರಮುಖವಾಗಿ ತನ್ನ)ದ ವಿಘಟನೆ ತಡೆಯಲು, ಸತ್ಯವನ್ನು ಬಹಿರಂಗಪಡಿಸುವುದಕ್ಕಾಗಿ ಅವಳು ಮೈದುನನ ಗ್ರಾಮ ನಿರಾಕರಣೆಯನ್ನು ವಿರೋಧಿಸುತ್ತಾಳೆ. ಇಲ್ಲಿ ಒಂದೆಡೆ ಸ್ವಾರ್ಥವಿದ್ದರೂ ಸತ್ಯ, ನ್ಯಾಯಗಳ ಪ್ರತಿಪಾದನೆ/ಪ್ರಕಟಣೆ ಪ್ರಮುಖ ಅಂಶವಾಗಿ ಕಾಣುತ್ತದೆ.

ಆದರೆ ಹಳೆ ತಲೆಮಾರಿನ ಎಲ್ಲ ಮೇಲ್ವರ್ಗದ ಮಹಿಳೆಯರು ಪ್ರತಿಗಾಮಿಗಳು, ಸ್ವಹಿತ ಚಿಂತಕರು ಎಂದು ಹೇಳಲಾಗುವುದಿಲ್ಲ. ಶಾಂತಾದೇವಿ ಕಣವಿ ಅವರ 'ಹೊಸ ಅಲೆ' ಕತೆಯ ಕೆಂಚವ್ವ, ತಮ್ಮ ಮನೆಯ ಜೀತದಾಳು ಮಾದರ ದ್ಯಾಮನ ಮಗ ಮರಿಯ ಹೆಚ್ಚಿನ ಓದಿಗೆ ಆಸೆಪಟ್ಟು ಗ್ರಾಮ ನಿರಾಕರಿಸುವ ಸಂದರ್ಭದಲ್ಲಿ ಹಣದ ಸಹಾಯ ಮಾಡಿ ಧೈರ್ಯ ತುಂಬುತ್ತಾಳೆ. ಗಂಡ ಮಕ್ಕಳಿಗೆ ಗೊತ್ತಾಗದಂತೆ ಕದ್ದು ಕೂಡಿಟ್ಟ ಹಣವನ್ನು ದ್ಯಾಮಪ್ಪನಿಗೆ ಕೊಟ್ಟು, 'ಈ ವರ್ಷ ಜೀತಾ ಮುಗುದ ಮ್ಯಾಲೆ ನೀವೂ ಹೋಗಿ ಅವನ ಹಂತ್ಯಾಕ ಇದ್ದಬಿಡ್ರಿ, ಇಲ್ಲಿ ದುಡಿಯೂದ ಅಲ್ಲೇ ದುಡಕೊಂಡು ಇರ್ರಿ'[೭೭] ಎಂದು ಪ್ರೋತ್ಸಾಹಿಸುತ್ತಾಳೆ. ಕುಸುಮಾಕರ ದೇವರಗೆಣ್ಣೂರ ಅವರ 'ನಿರಿಂದ್ರಿಯ' ಕಾದಂಬರಿಯ ರೊಳ್ಳಿಯ ತಾಯಿ, ತನ್ನ ಗ್ರಾಮದ ಶಾಲೆ ಸಂಘರ್ಷದಲ್ಲಿ ಮುಚ್ಚಿದಾಗ ತನ್ನ ತಮ್ಮನಿಗೆ ಮಗನನ್ನು ಕರೆದುಕೊಂಡು ಹೋಗಿ ನಗರದಲ್ಲಿ ವಿದ್ಯಾಭ್ಯಾಸ ಕೊಡಿಸಲು ಕೇಳಿಕೊಳ್ಳುತ್ತಾಳೆ. ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸುವ

ವಿಷಯದಲ್ಲಿ ವಿರೋಧಿಯಾಗಿದ್ದ ಗಂಡನ ಭಯ ಅವಳು ತನ್ನ ಸಹೋದರನನ್ನು ಮೊರೆಹೋಗುವಂತೆ ಮಾಡಿದೆ. 'ಮೊದಲಿನ ಎರಡಂತೂ ಹಾಳಾದವು. ಇದೊಂದಾದರೂ ಒಳ್ಳೆಯದಾದರೆ ದೇವರು ಮುಂದಿನ ಎರಡಕ್ಕೂ ಒಳ್ಳೆಯ ಹಾದಿ ತೋರಿಸುತ್ತಾನೆ. ಕರೆದುಕೊಂಡು ಹೋಗುವ ಬಗೆಯನ್ನು ನೀನೇ ಯೋಚಿಸು. ನಾನೇನು ಹೆಂಗಸು-ನನಗೇನು ತಿಳಿದೀತು.[೨೮] ಎಂಬ ಅವಳ ಮಾತಲ್ಲಿ ದುಷ್ಟ ಪರಿಸರದಿಂದ ಮಗನನ್ನು ದೂರ ಕಳಿಸುವ ಕಾಳಜಿಯ ಜೊತೆ ಗಂಡನ ಭಯವೂ ಕಾಡಿದೆ. ಕೆಂಚವ್ವ, ರೊಳ್ಳಿಯ ತಾಯಿಯರು ಹಣೆ ಬರಹದಲ್ಲಿ ನಂಬಿಕೆ ಇಟ್ಟವರಾದರೂ ಪ್ರಯತ್ನಶೀಲರು, ಪುರುಷಪ್ರಧಾನ ವ್ಯವಸ್ಥೆಯನ್ನು ಒಪ್ಪಿಕೊಂಡಿದ್ದರೂ ಪ್ರಗತಿಶೀಲರಾಗಿದ್ದಾರೆ. ಇವರ ಗ್ರಹಿಕೆಯಲ್ಲಿ ಇಂದಿನ ಮಕ್ಕಳು ನಾಳಿನ ಪ್ರಜೆಗಳೆಂಬ ಕಾಳಜಿ ಎದ್ದು ಕಾಣುತ್ತದೆ. ಭಯದಿಂದಲೋ ಕನಿಕರದಿಂದಲೋ ನಿರಾಕರಣೆಯನ್ನು ಅವರು ಬೆಂಬಲಿಸುವುದರಲ್ಲಿ ಧನಾತ್ಮಕ ಗ್ರಹಿಕೆಯನ್ನು ಅಧ್ಯಯನ ಗುರುತಿಸುತ್ತದೆ. ಇದೇ ಗ್ರಹಿಕೆಯನ್ನು ಜಯಂತ ಕಾಯ್ಕಿಣಿ ಅವರ 'ಸುಮಿತ್ರಗೊಂದು ಸುದ್ದಿ' ಕತೆಯ ಸುಮಿತ್ರೆಯ ನಿರ್ಧಾರಗಳಲ್ಲಿಯೂ ಕಾಣುತ್ತೇವೆ. ಗಂಡ ರಮಾಕಾಂತನೊಂದಿಗೆ ಸಾಂಸಾರಿಕ ಸುಖ, ನೆಮ್ಮದಿಯನ್ನು ಕಾಣದ ಸುಮಿತ್ರೆ ಅವನಿಂದ ಬೇರ್ಪಟ್ಟು ಮಂಚಿಕೇರಿ, ಶಿರ್ಶಿ, ಸಿದ್ದಾಪುರ ಹೀಗೆ ಸುತ್ತಿ ಕೊನೆಗೆ ಮುಂಡಗೋಡದ ಜನತಾ ಕಾಲನಿಯನ್ನು ತಲುಪಿ ಅನೇಕ ಸಂಸಾರಗಳಲ್ಲಿ ಮನೆಗೆಲಸ, ಮಕ್ಕಳ ಪಾಲನೆ, ಹೆರಿಗೆ-ಬಾಣಂತನಗಳನ್ನು ಮಾಡಿಕೊಟ್ಟು ಜೀವನ ಸಾಗಿಸುತ್ತಾಳೆ. ಇಂತಹ ಕಷ್ಟದಲ್ಲಿದ್ದಾಗಲೂ ಹತ್ತಿರ ಸುಳಿಯದ ತಮ್ಮಂದಿರ ಕುರಿತು ಅವಳು ಯೋಚಿಸುವುದಿಲ್ಲ. ಮುಂಬಯಿಯಲ್ಲಿರುವ ತನ್ನ ಮಗನನ್ನು ನೋಡಿಕೊಳ್ಳಲು ಒಬ್ಬ ತಮ್ಮ ಇವಳಲ್ಲಿ ಅಲವತ್ತು ಬೇಡಿಕೊಂಡಾಗ, ಹಳೆಯದನ್ನೆಲ್ಲ ಮರೆತು ಮುಂಬಯಿಗೆ ಹೋಗಲು ನಿರ್ಧರಿಸಿಬಿಡುತ್ತಾಳೆ. ಈ ನಿರ್ಧಾರಗಳು ಅವಳ ಮಾನವೀಯ ಅಂತಃಕರಣ, ಜಾತ್ಯತೀತ ನಿಲುವನ್ನೂ ತೋರಿಸುವ ಪ್ರಗತಿಪರ ನಿರ್ಧಾರಗಳಾಗಿವೆ.

ಹಳೆಯ ತಲೆಮಾರಿನ (ಹಿರಿಯ) ಕೆಳವರ್ಗದ ಮಹಿಳೆಯರ ಚಿಂತನಾಕ್ರಮ ಇದಕ್ಕಿಂತ ಭಿನ್ನವಾಗಿರುವುದನ್ನು ಕಥನ ಸಾಹಿತ್ಯದಲ್ಲಿ ಕಾಣುತ್ತೇವೆ. ಶಿಕ್ಷಣ, ಸಹಾಯ, ಸತ್ಯ ಪ್ರಕಟನೆ, ಮಾನವೀಯ ಅಂತಃಕರಣಗಳು ಅವರ ನಿರಾಕರಣೆಯ ಮೇಲೆ ಪ್ರಭಾವ ಬೀರುವ ಅಂಶಗಳಾಗಿ ಉಳಿದಿಲ್ಲ. ಅವರ ಮೊದಲ ಆದ್ಯತೆ ಹಸಿವು! ಹಸಿವನ್ನು ಹಿಂಗಿಸುವ ಮಾರ್ಗಗಳನ್ನು ಹುಡುಕುವ, ಜಾತಿ ವೈಷಮ್ಯದಿಂದ ದೂರ ಹೋಗಿ ತನ್ನ ಮತ್ತು ತನ್ನ ಸಂಸಾರ ಸಲುಹುವ ಚಿಂತನಾಕ್ರಮ ಇಲ್ಲಿ ಎದ್ದು ಕಾಣುತ್ತದೆ. ಮಿತ್ರಾ ವೆಂಕಟರಾಜ್ ಅವರ 'ಕೊನೆಯ ದಿನ' ಕತೆಯ ಮೋರಿಬಾಯಿ ಬರದಿಂದ ಬಸವಳಿದ ಗುಜರಾತನ ಕಛ್ ಎಂಬ ಗ್ರಾಮದವಳು. ಬರದ ಭೀಕರತೆಯಿಂದ ಉಂಟಾದ ಹಸಿವಿನಿಂದ ಗಂಡ ಸತ್ತ ನಂತರ, ತುಂಬು ಗರ್ಭಿಣಿಯಾಗಿದ್ದ ಮೋರಿಬಾಯಿ ಮುಂಬಯಿ ಸೇರುತ್ತಾಳೆ. ಅದು ತನ್ನ ಹಣೆಬರಹವೆಂಬಂತೆ ಚಿಂತಿಸುವ ಈ ತಾಯಿಯ ನಿರಾಕರಣೆಯ ನಿರ್ಧಾರದ ಹಿಂದೆ ಹುಟ್ಟಲಿರುವ ಮಗ, ತನ್ನ ಸಂಸಾರ ಸಂರಕ್ಷಿಸುವ ಗ್ರಹಿಕೆ ಎದ್ದು ಕಾಣುತ್ತದೆ. ಕೋರಗಲ್ ವಿರೂಪಾಕ್ಷಪ್ಪ ಅವರ 'ಮಣ್ಣಿನ ಗುಣ' ಕತೆಯ ಗಂಗವ್ವನನ್ನು ಅತ್ತೆ, ನಾದಿನಿಯರು ಮನೆಯಿಂದ ಹೊರ ಹಾಕಿದರೂ, ಕೊಪ್ಪಳ (ನಗರ) ಸೇರಿದ ಅವಳು ಮರು ಮದುವೆಯಾಗದೆ ಗಂಡನೇ ದೇವರೆಂದು ತಿಳಿದು ದುಡಿಯಲು ಸನ್ನದ್ಧಳಾಗುತ್ತಾಳೆ. ಅವಳನ್ನು ಗಂಡನ ಮನೆ ಸೇರಿಸಲು ಬಂದ ನಿರೂಪಕನಿಗೆ, 'ನನ್ನ ಕಷ್ಟಕ್ಕ ನೀ ಯಾಕ ಮರುಗ್ತೀದಿ ಬಿಡು. ಯಾರ ಹೊಟ್ಟೆ ನೋಯುತ್ತೈತಿ ಅವರ ಅಜವಾನ ತಿನ್ನಬೇಕು. ಪಾಲಿಗೆ ಬಂದದ್ದು ಬಿಡುಗಡಿಯಿಲ್ಲ'[೨೯] ಎಂಬ ಅವಳ ಅನುಭವಿ ಮಾತು ವಿಧಿಯಾಟದಲ್ಲಿ ನಂಬಿಕೆ ಇಟ್ಟ ಮಹಿಳೆಯ ಮಾತಾಗಿದೆ. ಇಂತಹ ಸ್ಥಿತಿಗೆ ಅವಳನ್ನು ತಳ್ಳಿರುವುದು ಅತ್ತೆ, ನಾದಿನಿಯರು (ಮಹಿಳೆಯರು) ಎಂಬುದೂ ಗಮನಾರ್ಹ ಅಂಶವಾಗಿದೆ. ಎಸ್.ಎಫ್. ಯೋಗಪ್ಪನವರ ಅವರ 'ಆರಾಮ ಖುರ್ಚಿ' ಕತೆಯ ಹನುಮವ್ವ ಪ್ರಗತಿಪರ ವ್ಯಕ್ತಿತ್ವದ ಮುದುಕಿಯಾಗಿದ್ದರೂ, ತನ್ನ ಬದುಕಿನ ಅಂತಿಮ ಗೆಲುವು ಮತ್ತು ಸೋಲುಗಳನ್ನು ದೇವರ ಮೇಲೆ ಹಾಕುವುದು ಕಂಡುಬರುತ್ತದೆ. ಕೂಲಿ ಕುಂಬಳಿ ಮಾಡಿ ಮಕ್ಕಳನ್ನು ಓದಿಸಿ, ನೌಕರಿ ಕೊಡಿಸಿ, ಹುಬ್ಬಳ್ಳಿಯಲ್ಲಿ (ನಗರ) ಮನೆಮಾಡಿ ಇಟ್ಟ ಹನುಮವ್ವ ತನ್ನ ಯಶಸ್ಸಿಗೆ ಶ್ರಮ, ಕಾಯಕಗಳು ಕಾರಣವೆಂದು ತಿಳಿಯುವುದಿಲ್ಲ. 'ಮಕ್ಕಳು ಮೆಟ್ಟಿಗೆ ಹತ್ತಿದ್ದು, ಮದುವೆಯಾದ್ದು ಅವಳಿಗೆ ಸಂತೋಷ ತಂದಿತ್ತು. ದೇವರು ಕೊನೆಗೂ ಕೈಬಿಡಲಿಲ್ಲ'[೩೦] ಎಂಬ ವಾಕ್ಯ ಹನುಮವ್ವಳ ವಿಧಿವಾದದಲ್ಲಿರುವ ನಂಬಿಕೆಯನ್ನು ತೋರಿಸುತ್ತದೆ. ಮಕ್ಕಳ ಗ್ರಾಮ ನಿರಾಕರಣೆ ವಿಧಿಯ ಒಂದು ಅಂಶವೆಂಬ ನಿಲುವು ಈ ಹಳೆ ತಲೆಮಾರಿನ ಮಹಿಳೆಯರದ್ದಾಗಿದೆ.

ಮಾನವೀಯ ಸಂಬಂಧಗಳ ಅಂತಸ್ಸತ್ವ ಭೂಮಿ–ಆಕಾಶಗಳ ಸಂಬಂಧದಂತೆ ಗಾಢವಾದದ್ದೆಂದು ಕೇಶವ ಮಳಗಿ ಅವರ 'ಕುಂಕುಮ ಭೂಮಿ' ಕಾದಂಬರಿಯ ಗೋದಾವರಿಯ ಮಾತೃ ಹೃದಯದ ದ್ವಂದ್ವಾತ್ಮಕತೆ ದೃಢಪಡಿಸುತ್ತದೆ. ಎರಡನೇ ಮಗ ನಾರಾಯಣ ಶಿಕ್ಷಣ, ಉದ್ಯೋಗಕ್ಕಾಗಿ ಮಲ್ಲಿಗೆಹಳ್ಳಿ(ಗ್ರಾಮ) ನಿರಾಕರಿಸಿ ಅರಸೀಕೆರೆ, ಮೈಸೂರು(ನಗರ)ಗಳಿಗೆ ಹೊರಟು ಹೋಗುತ್ತಾನೆ. ಗ್ರಾಮ ನಿರಾಕರಿಸಿ ನಗರಕ್ಕೆ ಹೋದ ನಾರಾಯಣನನ್ನು ಅವನ ಬಾಲ್ಯ, ಆಟ, ವರ್ತನೆಗಳನ್ನು ತಾಯಿ ಕರಳು ಅದೇ ಆಗ ಹುಟ್ಟಿದ ಕೃಷ್ಣಸ್ವಾಮಿಯ (ನಾರಾಯಣನ ಅಣ್ಣ) ತೊಟ್ಟಿಲ ಮಗುವಿನಲ್ಲಿ ಗುರುತಿಸಿ ದುಗುಡ ಹೆಚ್ಚಿಸಿಕೊಳ್ಳುತ್ತದೆ. ನಗರಕ್ಕೆ ಹೋಗಿ ತಾಯಿ(ಗ್ರಾಮ)ಯ ಪಾಲಿಗೆ ದೂರವಾಗಿದ್ದ ನಾರಾಯಣ ಇದ್ದಕ್ಕಿದ್ದಂತೆಯೇ ಜನಿಸಿ ಬಂದು ಪ್ರತ್ಯಕ್ಷನಾಗಿದ್ದುದು ಮನುಷ್ಯ ಸಂಬಂಧಗಳ ಅಂತಸ್ಸತ್ವವಾಗಿದೆ. 'ಮುಖ ಲಕ್ಷಣವೆಲ್ಲ ನಾಣಿಯ ಹಾಗೆ ಅಲ್ವರಾ?'[೯೧] ಯಾರೋ ಅಂದ ಮಾತು ತಲೆಯಲ್ಲಿ ಕೂತು, ಗುಂಗಿ ಹುಳದ ಹಾಗೆ ಕೊರೆದು ಏಳುತ್ತ ಬೀಳುತ್ತ ಸೊಟ್ಟ ಕಾಲಿಡುತ್ತ ಬರುವ ಮಗುವಾಗಿ ಕೊನೆ ಇಲ್ಲದ ನಾಣಿಯ ನೋವು ವೃದ್ಧಜೀವವನ್ನು ಕಾಡುತ್ತದೆ. ತಾಯಿ ಕರುಳಿನ ಎಂದಾದರೊಂದು ದಿನ ಬಂದೇ ಬರುವನು ಎಂಬ ನಿರೀಕ್ಷೆ ಮಂಜುಗಣ್ಣಿಗೆ ತುಂಬುವ ಭರವಸೆಯಾಗಿದೆ. ಗಂಡ ತೀರಿಕೊಂಡಾಗಲೂ ತವಕ ಪಡದ ಗೋದಾವರಿ(ಗ್ರಾಮ)ಯ ಮನಸ್ಸನ್ನು ಪ್ರಭಾವಿಸುವುದು ಯಾವುದು? ಎಷ್ಟೆಲ್ಲ ಇದ್ದರೂ, ಹಲವೊಮ್ಮೆ ಬೇಕಿರುವುದು ಬೇರೆ ಅಂತ ಅನ್ನಿಸುವುದು ಯಾಕಾಗಿ? ಹಿರಿಮಗ, ಮಗಳು, ನಾಲ್ಕಾರು ಮೊಮ್ಮಕ್ಕಳು ಎದುರಿಗಿದ್ದರೂ, ಯಾವುದಕ್ಕೂ ಕಡಿಮೆಯಾಗದಂತೆ ನೋಡಿಕೊಂಡರೂ ನಗರ ಸೇರಿದ ಮಗನನ್ನು ಹಂಬಲಿಸುವ ಸ್ಥಿತಿಗೇನು ಹೇಳಬೇಕು? ನಾರಾಯಣನ ರೂಪದಲ್ಲಿ ನಗರ ನೂಕಿ ಕಳಿಸುವ ಉದ್ವಿಗ್ನದ ಅಲೆಗಳು ದ್ವಂದ್ವಾತ್ಮಕತೆಯಿಂದ ಗೋದಾವರಿಯ ಮನಸ್ಸನ್ನು ತುಂಬಿಕೊಳ್ಳುತ್ತವೆ. ಮಗ ಅಥವಾ ಗಂಡನನ್ನು ತನ್ನಿಂದ (ಗ್ರಾಮ) ಕಿತ್ತುಕೊಂಡ ಸವತಿ ಮಾತ್ಸರ್ಯದ ಭಾವ ನಗರವನ್ನು ಕುರಿತು ಅವಳಲ್ಲಿ ತುಂಬಿರುವುದನ್ನು ಅಧ್ಯಯನ ಗುರುತಿಸುತ್ತದೆ. ಬಾಳಾಸಾಹೇಬ ಲೋಕಾಪುರ ಅವರ 'ಅವ್ವ' ಕತೆಯ ಬಾಳುವಿನ ತಾಯಿ, ವ್ಯಾಸರಾವ್ ನಿಂಜೂರ ಅವರ 'ಉಸಿರು' ಕಾದಂಬರಿಯ ಶಾರದಳ ತಾಯಿ, ಎಸ್.ಎಫ್. ಯೋಗಪ್ಪನವರ ಅವರ 'ಅಂಟು' ಕತೆಯ ರಮೇಶನ ತಂದೆ ತಾಯಿಯರು, ಮಾಲತಿ ಪಟ್ಟಣಶೆಟ್ಟಿ ಅವರ 'ಋಣ' ಕತೆಯ ಬಾಳ್ಯಾನ ಅವ್ವ, ಶಂಕರ ಕಟಗಿ ಅವರ 'ಹುಲಿಯಾ' ಕತೆಯ ಕುರುಬರ ಕರಿಯವ್ವ ಇವರೆಲ್ಲರ ನಿರಾಕರಣೆಯ ನಿಲುವು/ದ್ವಂದ್ವಗಳು ಒಂದೇ ಆಗಿದ್ದು, ಅದು ಋಣದ ಪ್ರಶ್ನೆಯಾಗಿ ಅವರ ಮುಂದೆ ನಿಂತಿದೆ. ಈ ಋಣ ಅನ್ನ, ಭೂಮಿ, ನೀರು, ಆಶ್ರಯಗಳ ರೂಪದಲ್ಲಿ ಈ ಹಿರಿಯ ಜೀವಗಳನ್ನು ಹಿಡಿದಿಟ್ಟಿದೆ ಎನ್ನಬಹುದು. 'ಸ್ವಸ್ಥಾನೇ ನಿಧನಂ ಶ್ರೇಯಂ' ಎಂಬ ಮಾತಿನಲ್ಲಿ ನಂಬಿಕೆ ಇಟ್ಟ ಇವರು, ತಮ್ಮ ಮತ್ತು ತಮ್ಮ ಮಕ್ಕಳ ನಿರಾಕರಣೆಯನ್ನು ವಿರೋಧಿಸಿ ಪ್ರತಿಭಟಿಸುವ ಹಂತವನ್ನು ತಲುಪಿರುವುದು ಅಧ್ಯಯನದ ಗಮನವನ್ನು ಸೆಳೆಯುತ್ತದೆ.

**ಬ. ಹೊಸ ಸಂವೇದನೆಯ ಕಿರಿಯ ತಲೆಮಾರಿನ ಮಹಿಳೆ ಮತ್ತು ನಿರಾಕರಣೆ**

ಗ್ರಾಮ/ನಗರ ನಿರಾಕರಣೆ ಒಂದೆಡೆ ಮಹಿಳೆಯರಿಗೆ ಕೌಟುಂಬಿಕ, ಸಾಮಾಜಿಕ ಸಂಬಂಧಗಳನ್ನು ಮತ್ತು ಇನ್ನೊಂದೆಡೆ ದೈಹಿಕ, ಮಾನಸಿಕ (ಪ್ರೀತಿ, ಕರುಳಬಳ್ಳಿಯ) ಸಂಬಂಧಗಳನ್ನು ಕಳೆದುಕೊಳ್ಳುವ ಗ್ರಹಿಕೆಯಾಗಿ ಮೂಡಿಬಂದಿದೆ. ಇದನ್ನು ಉಳಿಸಿ, ಬೆಳೆಸಿಕೊಳ್ಳುವ ಪ್ರಯತ್ನಗಳು ಇಲ್ಲಿ ಎದ್ದು ಕಾಣುತ್ತವೆ. ಮಹಿಳೆ ಸುಶಿಕ್ಷಿತಳಾಗಿರಲಿ ಇಲ್ಲವೆ ಅಶಿಕ್ಷಿತಳಾಗಿರಲಿ ಅವಳ ನಿರ್ಧಾರದಲ್ಲಿ ಮಹಿಳಾಕಾಳಜಿ ಎಂಬ ಪ್ರಜ್ಞೆ ಸ್ವಂತ ಮತ್ತು ಸ್ವಕುಟುಂಬ ರಕ್ಷಣೆಯ ಹೊಣೆಯ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ಪಾಟೀಲ ಪುಟ್ಟಪ್ಪ ಅವರ 'ಹೊನ್ನಯ್ಯನ ಬದುಕು' ಕತೆಯ ಪುಟ್ಟತಾಯಿ ಅಶಿಕ್ಷಿತಳಾದರೂ ಒಬ್ಬ ಸೂಕ್ಷ್ಮಗ್ರಾಹಿ ಹೆಣ್ಣು. ಮಾವ ಹನುಮಯ್ಯ ಹೊಸಕೊಪ್ಪ ಗ್ರಾಮದಲ್ಲಿದ್ದ ಹೊಲ, ಮನೆ ಮುಂತಾದ ಆಸ್ತಿಯನ್ನು ಕುಡಿದು, ಜುಗಾರಿ ಆಡಿ ಕಳೆದಾಗ ಏನನ್ನೂ ಪ್ರಶ್ನಿಸುವುದಿಲ್ಲ. ಅತ್ತೆ ಓಬವ್ವ, ಗಂಡ ಹೊನ್ನಯ್ಯರ ತೀರ್ಮಾನದಂತೆ ಗ್ರಾಮ ನಿರಾಕರಣೆಗೆ ಬದ್ಧಳಾಗುತ್ತಾಳೆ. ನಗರದಲ್ಲಿ ಮುಂದಿನ ಬದುಕಿನ ಪ್ರಶ್ನೆ ಇಲ್ಲಿ ಅವಳನ್ನು ಕಾಡಿರಬಹುದು. ಅವಳಿಗೆ ಕಂಡಿದ್ದು ಒಂದೇ ಆಸರೆ, ತವರು ಮನೆ. 'ತವರು ಮನೆಗೆ ಹೋಗಿ ಹಟಮಾಡಿ ಎರಡು ಎಮ್ಮೆಗಳನ್ನು ತರಲು ತಿರ್ಮಾನಿಸುತ್ತಾಳೆ.'[೯೨] ಗ್ರಾಮ ನಿರಾಕರಣೆಯಂತಹ ದುಃಖದ ಸಂದರ್ಭದಲ್ಲೂ ಅವಳ ದುಡಿದು ಬದುಕುವ ಮಾರ್ಗ/ತನ್ನ ಕುಟುಂಬವನ್ನು ಬದುಕಿಸುವ ಕಾಳಜಿ ಅರ್ಥಪೂರ್ಣವಾಗಿದೆ. ಆದರೆ ಈ ಕಾಳಜಿ ಮಾವ ಆಸ್ತಿಯನ್ನು ಕಳೆದುಕೊಳ್ಳುವಾಗ ಏಕೆ ಕಾಣಿಸಿಕೊಳ್ಳಲಿಲ್ಲ ಎಂಬ ಪ್ರಶ್ನೆ ಕಾಡುತ್ತದೆ. ಪುರುಷಪ್ರಧಾನ ವ್ಯವಸ್ಥೆಯನ್ನು ಪ್ರಶ್ನಿಸಲಾರದ ಮಹಿಳಾ

ದೌರ್ಬಲ್ಯ/ಅಸಹಾಯಕತೆ ಇದಕ್ಕೆ ಕಾರಣವಾಗಿದೆ ಎನ್ನಬಹುದು. ನಿಂಗಣ್ಣ ಸಣ್ಣಕ್ಕಿ ಅವರ 'ಚಂಬಿ' ಕತೆಯ ಚಂಬಿ ಸವರ್ಣೀಯರ ದೌರ್ಜನ್ಯವನ್ನು, ಬಹಿಷ್ಕಾರವನ್ನು ಪ್ರತಿಭಟಿಸಿ, ಗ್ರಾಮ ನಿರಾಕರಿಸಿ ತಮ್ಮನೊಂದಿಗೆ ಹೊರಡುತ್ತಾಳೆ. ದಾರಿ ಮಧ್ಯದ ಹಳ್ಳದಲ್ಲಿ ಕುದುರೆಯೇರಿ ಬಂದ ಗೌಡ ಅಡ್ಡಗಟ್ಟುತ್ತಾನೆ. ಕೆಳಗೆ ಬೀಳಿಸಿ ಕಾಲಿನಿಂದ ಒದ್ದರೂ ಜಪ್ಪೆನ್ನದ ಚಂಬಿ, ಗೌಡ ತನ್ನ ಶೀಲಹರಣಕ್ಕೆ ಮುಂದಾದಾಗ ಮಾತ್ರ ಕೆರಳಿ ರೆಂಪಿಗೆಯಿಂದ ಅವನನ್ನು ಕೊಲೆ ಮಾಡುತ್ತಾಳೆ. 'ನಾನು ಚಂಬಿ ಅಲ್ಲ ಚಾಮುಂಡಿ. ಪಾಪಿ ರಕ್ತಕ್ಕೆ ಅಂಜುವ ಕುಲವಲ್ಲ, ರಕ್ತ ಹೀರುವ, ನಿನ್ನ ಕುಲದ ರಕ್ತ ಹೀರುವ ಚಾಮುಂಡಿ' ಎಂದು ಅಬ್ಬರಿಸುತ್ತಾಳೆ. ಈ ಮಾತುಗಳಲ್ಲಿ ಕಾಣಿಸುವ ಕುಲ ಎಂಬ ಪದ ಸವರ್ಣೀಯ ಹಾಗೂ ಪುರುಷ ಕುಲ(?) ಎಂಬ ಎರಡು ಅರ್ಥವನ್ನು ಪಡೆದುಕೊಳ್ಳುತ್ತದೆ. ಮೂಡಲಗಿ ಪಟ್ಟಣಕ್ಕೆ ಹೋಗುವ ನಿರ್ಧಾರ ತೊರೆದು ಮುಂಬಯಿ ರೇಲ್ವೆ ಹತ್ತುವುದು ಅವಳ ಸ್ವಕುಟುಂಬ ರಕ್ಷಣಾ ತಂತ್ರವಾಗಿದೆ. ತಮ್ಮನನ್ನು ರಕ್ಷಿಸುವ ಮತ್ತು ಅವನನ್ನು ಸಾಕಿ ಬೆಳೆಸುವ ಹೊಣೆಯ ಗ್ರಹಿಕೆ ಅವಳ ಗ್ರಾಮ ಮತ್ತು ಪುರುಷಪ್ರಧಾನ ವ್ಯವಸ್ಥೆಯ ನಿರಾಕರಣೆಯನ್ನು ಪ್ರಭಾವಿಸುತ್ತದೆ. ಒಬ್ಬ ದಲಿತ ಹೆಣ್ಣಿನ ನಿರಾಕರಣೆ ಮೂಲಭೂತವಾದಿ ಮತ್ತು ಊಳಿಗಮಾನ್ಯ ವ್ಯವಸ್ಥೆಯ ಬಿಗಿ ಹಿಡಿತದಿಂದ ಬಿಡುಗಡೆಗೊಂಡ ಸೂಚನೆಯೂ ಆಗಿದೆ. ತುಳಸಿ ವೇಣುಗೋಪಾಲರ 'ಹೊಂಚು' ಕತೆಯ ಸಕ್ಕೂಬಾಯಿ ಮಳೆಯಿಂದ ಬೆಳೆ ತೆಗೆಯುವ ಬಡ ರೈತನ ಹೆಂಡತಿ. ಸತತ ಬರಗಾಲದಿಂದ ಬಸವಳಿದು ಪ್ರತಿದಿನ ಆಕಾಶದ ಅಂಚನ್ನೇ ನಿರಾಶೆಯಿಂದ ನೋಡಿ ನೋಡಿ ಬೇಸತ್ತು, ನಗರದ ತನ್ನ ಅಣ್ಣ ಪುಂಡಲೀಕನ ಸುಭದ್ರ ಆರ್ಥಿಕ ಸ್ಥಿತಿ ನೋಡಿ ಅತ್ತ ಆಕರ್ಷಿತಳಾಗುತ್ತಾಳೆ. ಈ ಸಂದರ್ಭದಲ್ಲಿ ಅಣ್ಣನಿಗೆ ಸಕ್ಕೂ ಮಾಡುವ ಆದರ, ಊಟೋಪಚಾರಗಳು ಅವಳ ವಸೂಲಿಯನ್ನು ತೋರಿಸುತ್ತದೆ. ಹಳ್ಳಿಯಲ್ಲಿ ದೂರದಿಂದ ಕುಡಿಯುವ ನೀರು ಹೊತ್ತು ಬಾತುಕೊಂಡ ತನ್ನ ಕಾಲುಗಳನ್ನು ತೋರಿಸುವಲ್ಲಿ ಮಹಿಳೆಯ ಸ್ವರಕ್ಷಣಾ ತಂತ್ರವನ್ನು ಕಾಣಬಹುದು. ಅಣ್ಣ ಒಪ್ಪಿದಾಗ ಸಕ್ಕೂಗೆ ಸ್ವರ್ಗ ಮೂರೆಗೇಣು. 'ಗಂಡನನ್ನು ಒಪ್ಪಿಸಿ ಇದ್ದ ಹೊಲ ಮಾರಿ, ಮನೆಯ ಸಾಮಾನುಗಳನ್ನು ತೊಟ್ಟಿಲು ಸಮೇತ ಅಕ್ಕಪಕ್ಕದವರಿಗೆ ದಾನ ಕೊಡುತ್ತಾಳೆ.' ಗ್ರಾಮ ನಿರಾಕರಣೆಯನ್ನು ಸಕ್ಕೂ ಗಂಡನ ಮನೆಯ ನಿರಾಕರಣೆಯ ಆಯಾಮದಲ್ಲಿ ನೋಡುವುದು ಇಲ್ಲಿ ಎದ್ದು ಕಾಣುವ ಅಂಶವಾಗಿದೆ. ಮೇಲೆ ಚರ್ಚಿಸಿದ ಸಂದರ್ಭಗಳಲ್ಲಿ ಹೊಸ ಸಂವೇದನೆಗೆ ತೆರೆದುಕೊಂಡ ಅವಿದ್ಯಾವಂತ ಮಹಿಳಾ ಪಾತ್ರಗಳು ಪುರುಷಪ್ರಧಾನ ವ್ಯವಸ್ಥೆಯನ್ನು ಪ್ರಶ್ನಿಸುವುದಿಲ್ಲ, ನಿರಾಕರಿಸುವುದಿಲ್ಲ. ಆದರೂ ತಮ್ಮ ಮಹಿಳಾ ಜಾಗೃತಿಯನ್ನು ಮರೆಯುವುದಿಲ್ಲ ಎಂಬುದನ್ನು ಗ್ರಹಿಸಬಹುದಾಗಿದೆ. ದುರ್ಬಲ ಹೆಣ್ಣಿಗೆ ಅಸಹಾಯಕ ಕ್ಷಣಗಳಲ್ಲಿ ಬರುವ ಶಕ್ತಿ, ಧೈರ್ಯಗಳನ್ನು ಇಂತಹ ಮಹಿಳೆಯರಲ್ಲಿ ಕಾಣುತ್ತೇವೆ.

ಹೊಸ ಸಂವೇದನೆಗೆ ತೆರೆದುಕೊಂಡ ವಿದ್ಯಾವಂತ ಮಹಿಳೆಯರ ಗ್ರಾಮ/ನಗರ ನಿರಾಕರಣೆಯ ಗ್ರಹಿಕೆಯಲ್ಲಿ ಪ್ರತಿಭಟನೆಯ ಧ್ವನಿಯನ್ನು ಕಾಣುತ್ತೇವೆ. ರಾಮಕೃಷ್ಣ ಗುಂದಿ ಅವರ 'ಆರೂ ಮೇಡಂ ಮತ್ತು ಉದ್ಯೋಗಪರ್ವ' ಕತೆಯ ಆರತಿ ಶಿಕ್ಷಕರ ತರಬೇತಿ ಮುಗಿಸಿ, ಕೌಟುಂಬಿಕ ಜವಾಬ್ದಾರಿ ತೆಗೆದುಕೊಳ್ಳುವ ಸಂದರ್ಭವನ್ನು ನೋಡಬಹುದು. ಆರೂಳ ಉದ್ಯೋಗ ಅನ್ವೇಷಣೆ ಆರಂಭವಾಗಿತ್ತು, ಇಂಟರ್‌ವ್ಯೂಗಳನ್ನು ಎದುರಿಸುವ ಭಯ ಆರೂ ಮೇಡಂಗೆ ಕಾಡುತ್ತದೆ. ಈ ಭಯಕ್ಕೆ ಕಾರಣವಾದ ಅಂಶ ವೃತ್ತಪತ್ರಿಕೆಯಲ್ಲಿ ಬಂದ ಒಂದು ತುಣುಕು ಸುದ್ದಿಯಾಗಿದೆ. 'ನೌಕರಿ ಆಸೆಯಿಂದ ಒಬ್ಬ ಎಂ.ಎಲ್.ಎ. ಜೊತೆ ಓರ್ವ ತರುಣಿ ಸರಕಾರಿ ಅತಿಥಿ ಗೃಹದಲ್ಲಿ ರಾತ್ರಿ ಕಳೆದು ಪೋಲೀಸರ ಕೈಗೆ ಸಿಕ್ಕಿ ಬಿದ್ದಿದ್ದಾಳೆ' ಎಂಬ ಸುದ್ದಿ ಅವಳನ್ನು ಗಾಬರಿಗೊಳಿಸಿ ನಡುಗುವಂತೆ ಮಾಡುತ್ತದೆ. ಶಿಕ್ಷಕಿಯ ವೃತ್ತಿ ದೊರೆತು ನಗರ ನಿರಾಕರಿಸುವಾಗ ಇದೇ ವಿಷಯ ಅವಳನ್ನು ಜಾಗೃತಗೊಳಿಸುತ್ತದೆ. ಶೇಲೂರಿನ (ಗ್ರಾಮ) ಪಟೇಲರ ಮನೆಗೆ ಬಂದಾಗ ಎಚ್ಚರವಿರಲು ಪ್ರೇರೇಪಿಸುತ್ತದೆ. ಗ್ರಾಮಗಳಲ್ಲಿ ಗೌಡ/ಪಟೇಲರು ಮಹಿಳೆಯರ ಮೇಲೆ ಎಸಗುವ ದೌರ್ಜನ್ಯಗಳನ್ನು ಅನೇಕ ಕಾದಂಬರಿ, ಚಲನಚಿತ್ರಗಳಿಂದ ಅರಿತಿದ್ದ ಆರೂ ವಯಸ್ಸಾದ ಪಟೇಲರನ್ನು ಗ್ರಹಿಸಿದ್ದು ಪುರುಷನಾಗಿ ಎಂಬುದು ಇಲ್ಲಿ ಗಮನಾರ್ಹ. ಪುರುಷರಿಗೆ ಇರದ ಒಂದು ಮಾನಸಿಕ ಸಿದ್ಧತೆ ಮಹಿಳೆಯರಲ್ಲಿ ಇದ್ದು, ಅದು ನಿರಾಕರಣೆಯ ಸಂದರ್ಭದಲ್ಲಿ ಪ್ರಕಟವಾಗುವುದನ್ನು ಇಲ್ಲಿ ಗಮನಿಸುತ್ತೇವೆ. ಭಾಲಚಂದ್ರ ಫಾಣೇಕರ ಅವರ 'ನಾನೇ ಹೊಲೆಯ' ಕತೆಯ ರಮೆ, ತನ್ನ ಮೇಲೆ ಬಂದ ಅನೈತಿಕ ಹೆಣ್ಣೆಂಬ ಅಪವಾದ ಹೊತ್ತು ಮನೆ, ಗ್ರಾಮ ಬಿಟ್ಟು ಹೊರ ಹೋಗಬೇಕಾಗುತ್ತದೆ. ಅದಕ್ಕೆ ಅವಳು ಸಿದ್ಧಳೂ ಆಗುತ್ತಾಳೆ. ಇಲ್ಲಿ ಅವಳ ಆತ್ಮವಿಶ್ವಾಸ ಎಚ್ಚೆತ್ತುಕೊಳ್ಳುತ್ತದೆ. ಹೆತ್ತ ತಂದೆಗೆ ತಾನು ಅಪರಾಧಿಯಲ್ಲ ಎಂದು ಸಾಬೀತುಪಡಿಸಲು ಆಶಿಸುತ್ತಾಳೆ. ತಂದೆಗೆ ಕೈ ಮುಗಿದು 'ಅಪ್ಪಾ ಪ್ರತ್ಯಕ್ಷ

ಕಂಡರೂ ಪ್ರಮಾಣಿಸಿ ನೋಡುವುದು ನಿಮ್ಮ ಧರ್ಮವಲ್ಲವೆ?'[೮೮] ಎಂದು ಕೇಳುತ್ತಾಳೆ. ಇಲ್ಲಿ ಧರ್ಮಭೀರು ಅನ್ನಿಸಿಕೊಂಡ ತನ್ನ ತಂದೆಗೆ ಧರ್ಮದ ಕುರಿತು ಹೇಳುವ/ಕೇಳುವ ನೈತಿಕತೆಯನ್ನು ನಿರಾಕರಣೆಯ ಹಂತದಲ್ಲೂ ತೋರುವುದು ನಿಜವಾಗಿಯೂ ಧೈರ್ಯದ ಕೆಲಸವೇ ಆಗಿದೆ. ಇದು ಮಹಿಳೆಯರ ನೈತಿಕ ಗ್ರಹಿಕೆಯ ಆಳವನ್ನೂ ತೋರಿಸುತ್ತದೆ. ಅದರಂತೆ ಇನ್ನೊಂದು ಉದಾಹರಣೆಯಾಗಿ, ಉಲ್ಲಾಸ ಹೆಗಡೆ ಅವರ 'ನನ್ನ ನೋವಿನ ಮೂಲ' ಕತೆಯ ಮಾದೇವಿ(ಪುರುಷ ವರ್ಗ ಕುರಿತಂತೆ ಮತ್ತು ಅಂತಿಮ ತೀರ್ಮಾನದ ಹಿಂದಿರುವ)ಯ ಗ್ರಹಿಕೆಯನ್ನು ಗಮನಿಸೋಣ.

> 'ಅಂತೂ ಮುಗಿಬಿತು ಮಾರಾಯ ಒಂದು ಕೆಟ್ಟ ಅಧ್ಯಾಯ. ಉಲ್ಲಾಸ, ಈಗಷ್ಟೇ ಒಂದರಿಂದ ಚೇತರಿಸಿಕೊಂಡಿದ್ದೇನೆ. ಅಷ್ಟರಲ್ಲಿ ಇನ್ನೊಂದು.. ಬೇಡ ನನಗೆ ಮತ್ತೊಂದು ಮದುವೆಯಾಗಲು ಇಷ್ಟವಿಲ್ಲ.'[೮೯]

ಅಮೇರಿಕೆಯ ಅರ್ಬಾನಾ ಕ್ಯಾಂಪೇನಿನಿಂದ ಗಂಡನಿಗೆ ಡೈವೋರ್ಸ್ ಕೊಟ್ಟು ನಿರಾಕರಿಸಿ ಬಂದ ಮಾದೇವಿಭಟ್ಟ, ತನ್ನನ್ನು ಮದುವೆಯಾಗಲು ವಿನಂತಿಸಿದ ಗೆಳೆಯನಿಗೆ ಕೊಟ್ಟ ಉತ್ತರ ಇದಾಗಿದೆ. ಈಗಷ್ಟೇ ಒಂದು ದುರಂತ (ಮದುವೆ) ತಪ್ಪಿಸಿಕೊಂಡು ಚೇತರಿಸಿಕೊಳ್ಳುತ್ತಿದ್ದ ಮಾದೇವಿ ಇನ್ನೊಂದು ದುರಂತಕ್ಕೆ ಕೊರಳೊಡ್ಡಿಕೊಳ್ಳಲು ಒಪ್ಪದ ಇಂಗಿತ ಇಲ್ಲಿದೆ. ಮದುವೆ–ದಾಂಪತ್ಯಗಳನ್ನು ದುರಂತವೆಂದು ವ್ಯಾಖ್ಯಾನಿಸಿದ ಮಹಿಳೆಯಾಗಿ ಮಾದೇವಿ ಪುರುಷ ಪ್ರಾಧಾನ್ಯತೆಯನ್ನು ತಿರಸ್ಕರಿಸುತ್ತಾಳೆ. ಅವಳ ನಗರ (ಅರ್ಬಾನಾ) ನಿರಾಕರಣೆಯು ದಾಂಪತ್ಯ ಬದುಕಿನ ನಿರಾಕರಣೆಯೂ ಆಗಿರುವುದು ಸ್ಪಷ್ಟವಿದೆ. ಇವಳ ಹಾಗೆ, ಲೋಹಿತ ನಾಯ್ಕರ ಅವರ ನಿರ್ಧಾರ ಕತೆಯ ಮಾಲತಿ, ನಾ. ಡಿಸೋಜ ಅವರ 'ಪ್ರೀತಿಯೊಂದೇ ಸಾಲದೆ? ಕಾದಂಬರಿಯ ಜೂಲಿ, ವ್ಯಾಸರಾಯ ಬಲ್ಲಾಳರ 'ಹೆಜ್ಜೆ' ಕಾದಂಬರಿಯ ಶಾಂಭವಿ, ವ್ಯಾಸರಾವ್ ನಿಂಜೂರ ಅವರ 'ಉಸಿರು' ಕಾದಂಬರಿಯ ಶಾರದ, ವ್ಯಾಸರಾಯ ಬಲ್ಲಾಳ ಅವರ 'ಸಾಬೂನಿನ ಗುಳ್ಳೆ ಕತೆ'ಯ ಮೀನಾ, ಜಯಂತ ಕಾಯ್ಕಿಣಿ ಅವರ 'ಭಾಮಿನಿ ಸಪ್ತಪದಿ' ಕತೆಯ ಭಾಮಿನಿ ಹೀಗೆ ಅನೇಕ ಮಹಿಳೆಯರ ನಿರ್ಧಾರಗಳ ಹಿಂದೆ ಪುರುಷ ಪ್ರಧಾನ ವ್ಯವಸ್ಥೆಯ ನಿರಾಕರಣೆ, ಅಸಹಾಯಕ ಸ್ಥಿತಿಯಲ್ಲೂ ಅಸಾಧಾರಣ ಧೈರ್ಯ ಹಾಗೂ ತನ್ನ ಮತ್ತು ತನ್ನ ಕುಟುಂಬ ರಕ್ಷಣೆಯ ತಂತ್ರಗಳು ಕಂಡುಬರುತ್ತವೆ.

ಮಹಿಳೆಯರು ಮೂಲನೆಲೆ(ಗ್ರಾಮ/ನಗರ)ಯನ್ನು ಯಾಕೆ ನಿರಾಕರಿಸುತ್ತಾರೆ ಎಂಬುದಕ್ಕೆ ಪ್ರಸ್ತುತ ಕಥನ ಸಾಹಿತ್ಯ ಅನೇಕ ಕಾರಣಗಳನ್ನು ಸೂಚಿಸುತ್ತದೆ. ಲಿಂಗಾಧಾರಿತ, ಜಾತಿಯಾಧಾರಿತ ಶೋಷಣೆಗಳು, ಸಾಮಾಜಿಕ ಅಭದ್ರತೆ, ಆರ್ಥಿಕ ಅಸಹಾಯಕತೆ, ಕೌಟುಂಬಿಕ ದೌರ್ಜನ್ಯಗಳು ಲೈಂಗಿಕ ಹಲ್ಲೆಗಳು ಮುಂತಾದವು ಪ್ರಮುಖ ಕಾರಣಗಳಾಗಿವೆ. ಪ್ರಸ್ತುತ ಕಥನ ಸಾಹಿತ್ಯ ಗ್ರಹಿಸಿರುವ ಮಹಿಳೆಯರ ಗ್ರಾಮ/ನಗರ ನಿರಾಕರಣೆಗೆ ಕಾರಣವಾಗುವ ಅಂಶಗಳನ್ನು ಹೀಗೆ ಕ್ರೋಢೀಕರಿಸಬಹುದು. • ಪುರುಷ ಪ್ರಧಾನ ವ್ಯವಸ್ಥೆಯನ್ನು ಒಪ್ಪಿಕೊಂಡರೂ ತನ್ನ ಸಂಸಾರದ ಮುಂದಿನ ಸುಖ ಬಯಸುವ ಕೌಟುಂಬಿಕ ನೆಲೆಯಲ್ಲಿ ಮಹಿಳೆಯರು (ಕೃಷ್ಣಾಬಾಯಿ, ಮೋರಿಬಾಯಿ, ಪುಟ್ಟಬಾಯಿ ಇತರರು) ನಿರಾಕರಣೆಯನ್ನು ಒಪ್ಪಿಕೊಳ್ಳುವ ನಿಲುವು ಕಂಡುಬರುತ್ತದೆ. • ಪುರುಷರ ದೌರ್ಜನ್ಯವನ್ನು ವಿರೋಧಿಸಿ ನಿರಾಕರಣೆ ಮಾಡಿದ ಮಹಿಳೆಯರ (ಚಂಬಿ, ರಮೆ, ಮಾದೇವಿಭಟ್ಟ ಇತರರು) ನಿಲುವು ಅಸಹಾಯಕತೆ, ಅನಿವಾರ್ಯತೆಯಿಂದ ಕೂಡಿದ್ದುದು ಸ್ಪಷ್ಟವಿದೆ. • ಮಹಿಳೆಯರು (ಆರೂ ಮೆಡಂ, ಶಾರದೆ, ಜೂಲಿ ಬಡ್ತೋಲ ಇತರರು) ನಿರಾಕರಣೆಯ ಹಿನ್ನೆಲೆಯಲ್ಲಿ ಪುರುಷರ ಸಾಮಾಜಿಕ ದೌರ್ಜನ್ಯಗಳ ಕುರಿತು ಜಾಗೃತಿ, ಎಚ್ಚರದ ಗ್ರಹಿಕೆಗಳನ್ನು ಹೊಂದಿರುವುದು ಕಥನ ಸಾಹಿತ್ಯದಲ್ಲಿ ಕಂಡುಬರುತ್ತವೆ. • ಮಹಿಳಾ ನಿರಾಕರಣೆಗೆ (ಸಕ್ಕೂಬಾಯಿ) ತವರು ಮನೆಯ ಸೆಳೆತವೂ ಒಂದು ಪ್ರಮುಖ ಕಾರಣವೆನ್ನಬಹುದು.

## ೬. ಮಕ್ಕಳ ಗ್ರಹಿಕೆ ಮತ್ತು ನಿರಾಕರಣೆ

ಕುಟುಂಬದ ಕಿರು ಸದಸ್ಯರಾದ ಮಕ್ಕಳು ಆ ಕುಟುಂಬದ ಕಣ್ಮಣಿಗಳೂ ಆಗಿರುತ್ತಾರೆ. ಇವರ ಆಸೆ, ಅಭಿಲಾಷೆಗಳು ದೊಡ್ಡವರ ಆಸೆ, ಅಭಿಲಾಷೆಗಳಿಗಿಂತ ವಿಭಿನ್ನವಾಗಿರುತ್ತವೆ. ಮಕ್ಕಳು ತಮ್ಮ ಮತ್ತು ತಮ್ಮ ಕುಟುಂಬದ ಗ್ರಾಮ/ನಗರ ನಿರಾಕರಣೆಯನ್ನು ಅರ್ಥೈಸುವ ಮತ್ತು ಗ್ರಹಿಸುವ ರೀತಿಯು ವಿಶಿಷ್ಟವಾದದ್ದಾಗಿದೆ. ಇಂಥ ಗ್ರಹಿಕೆಗಳ ಹಿಂದೆ ಮಕ್ಕಳ ಆಸೆ, ಆಕಾಂಕ್ಷೆಗಳು, ಅಸಹಾಯಕತೆ, ಆಕರ್ಷಣೆಗಳು ಮಡುಗಟ್ಟಿವೆ ಎಂಬುದನ್ನು ಮುಂಬಯಿ ಕರ್ನಾಟಕದ ಕಥನ ಸಾಹಿತ್ಯ ದಾಖಲಿಸಿದೆ. ತಮ್ಮದೇ ಲೋಕದಲ್ಲಿ ವಿಹರಿಸುವ ಮಕ್ಕಳಿಗೆ ಬದುಕಿನ ಗಂಭೀರತೆಯ ಅರಿವು ಇರುವುದಿಲ್ಲವಾದರೂ, ಹಲವಾರು ಸಂದರ್ಭಗಳಲ್ಲಿ ಅವರು ಪ್ರತಿಕ್ರಿಯಿಸುವ ರೀತಿ ಅರ್ಥಗರ್ಭಿತವಾಗಿರುತ್ತದೆ.

## ಅ. ಮೇಲ್ವರ್ಗದ ಕುಟುಂಬಗಳ ಮಕ್ಕಳು ಮತ್ತು ನಿರಾಕರಣೆ

ಆರ್ಥಿಕಬಲ ಹೊಂದಿದ ಕುಟುಂಬದಲ್ಲಿ ಮಕ್ಕಳ ಪಾಲನೆ, ಪೋಷಣೆಯೊಂದಿಗೆ ಅವರ ಭವಿಷ್ಯ ಕುರಿತ ಚಿಂತನೆಗಳು ನಡೆಯುತ್ತವೆ. ತಮ್ಮ ಮಕ್ಕಳು ಮುಂದಿನ ಜೀವನದಲ್ಲಿ ಏನಾಗಬೇಕು, ಹೇಗಿರಬೇಕು ಎಂಬ ವಿಷಯ ಕುರಿತು ಕುಟುಂಬಗಳು ನಿರ್ಧಾರ ತೆಗೆದುಕೊಳ್ಳುತ್ತವೆ. ಇಂತಹ ಕುಟುಂಬದ ಮಕ್ಕಳ ಆಸೆ-ಆಕಾಂಕ್ಷೆಗಳು, ಇಷ್ಟಾನಿಷ್ಟಗಳು ಇಲ್ಲಿ ಗೌಣವಾಗುವುದಿಲ್ಲ (ಹಲವೊಮ್ಮೆ ಗೌಣವಾಗುವುದೂ ದಾಖಲಾಗಿದೆ). ಕುಟುಂಬದ ಹಿರಿಯರು ಮಕ್ಕಳ ಅಭಿಪ್ರಾಯಗಳನ್ನು ನಿರ್ಲಕ್ಷಿಸದೆ ಸಂದರ್ಭಾನುಸಾರ ಅವುಗಳನ್ನು ಪರಿಗಣಿಸುತ್ತಾರೆ. ರಾಘವೇಂದ್ರ ಪಾಟೀಲ ಅವರ 'ಮಾಯಿಯ ಮುಖಗಳು' ಕತೆಯಲ್ಲಿ ಕೃಷ್ಣೋಪಂತರ ಕುಟುಂಬ ಹೆಣ್ಣುಮಕ್ಕಳ ಸಂಗೀತ ಶಿಕ್ಷಣಕ್ಕಾಗಿಯೇ ಕಳ್ಳಿಗುದ್ದಿ ಗ್ರಾಮವನ್ನು ನಿರಾಕರಿಸುತ್ತದೆ. ನರ್ಮದ ನೃತ್ಯ ಕಲಿಯುವ ಆಸೆಯಿಂದ ಅಪ್ಪ ಅಮ್ಮರನ್ನು ಒತ್ತಾಯಿಸಿದಾಗ ಪುನಃ ಧಾರವಾಡ ಮತ್ತು ಹುಬ್ಬಳ್ಳಿಗೆ ಸಂಸಾರವನ್ನು ಬದಲಾಯಿಸಬೇಕಾಗುತ್ತದೆ. 'ನಮಗ ಇರೂವು ಈ ಮೂರು. ಇವನ್ನ ಬಿಟ್ಟು ನಮಗರೆ ಯಾರ ಇದ್ದಾರ? ಅವದರ ಮನಸರೆ ನಾವು ಯಾಕ ಮುರೀಬೇಕು? ಅವು ಬೇಡಲಿಕ್ಕದ್ದಿದ್ದರೆ ಏನು ಅಡ್ಡಾದಿಡ್ಡಿ ಬೇಡಿಕೆ ಅಲ್ಲ, ಸಂಗೀತ'[೨೦] ಎನ್ನುವ ಕೃಷ್ಣಾಬಾಯಿಯ ಅಭಿಪ್ರಾಯದಲ್ಲಿ ಮಕ್ಕಳೇ ಈ ಕುಟುಂಬದ ಸರ್ವಸ್ವ, ಅವುಗಳ ಬೇಡಿಕೆ ಈಡೇರಿಸುವುದು ತಂದೆತಾಯಿಯರ ಕರ್ತವ್ಯ ಎಂಬ ಅರಿವು ಇದೆ. ಇದೊಂದು ಮೇಲ್ವರ್ಗದ ಕುಟುಂಬವಾಗಿದ್ದು, ಗೇಣಿ ರೈತರಿಂದ ಬರುವ ಉತ್ಪನ್ನದಿಂದ ಸಂಸಾರ ನಿರ್ವಹಣೆಗೆ ತೊಂದರೆ ಇಲ್ಲದಿರುವುದು, ಕುಟುಂಬ ಮಕ್ಕಳ ವಿದ್ಯಾಭ್ಯಾಸದತ್ತ ಪೂರ್ಣ ಲಕ್ಷ್ಯವಹಿಸಲು ಕಾರಣವಾಗಿದೆ. ಇಂತಹ ಇನ್ನೊಂದು ಸಂದರ್ಭವನ್ನು ಕುಸುಮಾಕರ ದೇವರಗೆಣ್ಣೂರ ಅವರ 'ನಿರಿಂದ್ರಿಯ' ಕಾದಂಬರಿಯಲ್ಲೂ ಕಾಣುತ್ತೇವೆ. ತಾಯಿಯ ಆಸ್ಥೆ, ಪ್ರಯತ್ನಗಳಿಂದ ಕಲ್ಲಪ್ಪ ರೊಳ್ಳಿ ವಿದ್ಯಾಭ್ಯಾಸಕ್ಕಾಗಿ ಗ್ರಾಮ ನಿರಾಕರಿಸುತ್ತಾನೆ. ಸದಾ ವೈರತ್ವ, ದ್ವೇಷಾಸೂಯೆಯಿಂದ ತುಂಬಿದ ಗ್ರಾಮೀಣ ಪರಿಸರವನ್ನು ತ್ಯಜಿಸಿ, ಓದಿ ಮಗ ಮುಂದೆ ಬರಲಿ ಎಂಬುದು ಅವನ ತಾಯಿಯ ಆಸೆಯಾಗಿದೆ. ಕುಂದರನಾಡ ಪಾಟೀಲ ಅವರ 'ಉಲ್ಲಂಘನೆ' ಕಾದಂಬರಿಯಲ್ಲಿ ಉತ್ತಮ ಕೃಷಿ ಉತ್ಪನ್ನ ತೆಗೆಯುವ ದಾನಪ್ಪಗೌಡ, ನಿಂಗವ್ವಗೌಡತಿಯರ ಮಗ ಚನಬಸು ಸಹ ಶಿಕ್ಷಣಕ್ಕಾಗಿ ಗ್ರಾಮ ನಿರಾಕರಣೆ ಮಾಡುತ್ತಾನೆ. ಮಗ ಇಷ್ಟಪಡುವಷ್ಟು (ಗೌಡನ ದಾಯಾದಿಯ ಮಗ ಮತ್ತು ಪಂಚಾಯಿತಿ ಕಾರ್ಯದರ್ಶಿಯ ಮಗನಿಗಿಂತ ಹೆಚ್ಚು) ಓದಿಸಲು ನಿರ್ಧರಿಸಿದ ಗೌಡರು ಅವನನ್ನು ಹತ್ತಿರದ ಬೆಳಗಾವಿಗೆ ಕರೆದೊಯ್ಯುತ್ತಾರೆ. ಸುನಂದ ಬೆಳಗಾಂವಕರ ಅವರ 'ಕಾಯಕ ಕೈಲಾಸ' ಕಾದಂಬರಿಯ ಮಾನಪ್ಪಗೌಡರು ಮಗನ, ಮೊಮ್ಮಕ್ಕಳ (ಮಗಳ ಮಕ್ಕಳು) ವಿದ್ಯಾಭ್ಯಾಸಕ್ಕೆ ಧಾರವಾಡದಲ್ಲಿ ಮನೆ ಮಾಡಿ, ಕೂಲಿ ಆಳುಗಳನ್ನಿಟ್ಟು ಸಂಸಾರ ಹೂಡುವುದನ್ನು ಕಾಣುತ್ತೇವೆ. ಗೌಡರ ಮಗನೊಂದಿಗೆ ಬಡ ಗಂಗವ್ವನ ಮೊಮ್ಮಕ್ಕಳು ಗ್ರಾಮ ನಿರಾಕರಿಸಿ ಅವರು ಮಾಡಿದ ಬಾಡಿಗೆ ಮನೆಯಲ್ಲಿ ಓದಲು ಆಶ್ರಯ ಪಡೆಯುತ್ತಾರೆ. ಮೇಲ್ಜಾತಿ/ಮೇಲ್ವರ್ಗದ ಕುಟುಂಬಗಳ ಮಕ್ಕಳು ವಿದ್ಯಾಭ್ಯಾಸ ಮತ್ತು ಉದ್ಯೋಗಕ್ಕಾಗಿ ಗ್ರಾಮ/ನಗರ ನಿರಾಕರಿಸುವುದನ್ನು ಕಥನ ಸಾಹಿತ್ಯದಲ್ಲಿ ಗಮನಿಸುತ್ತೇವೆ. ಇವರಾರೂ ತಮ್ಮ ಕಾರ್ಯಸಾಧನೆಗೆ ಕೃಷಿಭೂಮಿಯಂತಹ ಚಿರಾಸ್ತಿಗಳನ್ನು ಮಾರುವುದು ಮತ್ತು ಒತ್ತೆ ಇಡುವುದು ಕಂಡುಬರುವುದಿಲ್ಲ. ಇಂಥ ಕುಟುಂಬಗಳ ನಿರಾಕರಣೆ ಶಾಶ್ವತ ನಿರಾಕರಣೆಯಾಗಿರದೆ ಅವರು ಮತ್ತೆ ಮೂಲನೆಲೆಗೆ ಮರಳಿ ಬರಬಹುದಾಗಿದೆ. ಕುಟುಂಬದ ಸದಸ್ಯರ ಮಹತ್ವಾಕಾಂಕ್ಷೆಗಳನ್ನು ಪೂರೈಸಲು (ಮಗ/ಮಗಳನ್ನು ವಕೀಲ, ಇಂಜನಿಯರ್, ವೈದ್ಯರನ್ನು ಮಾಡಲು), ದಾಯಾದಿಗಳ/ಎದುರಾಳಿಗಳ ಮುಂದೆ ಸುಶಿಕ್ಷಿತರನ್ನಾಗಿ ಮಾಡುವ ಉದ್ದೇಶದಿಂದ ಇಂತಹ ಕುಟುಂಬಗಳ ಮಕ್ಕಳು ಗ್ರಾಮ ನಿರಾಕರಣೆಯನ್ನು ಮಾಡುತ್ತಾರೆ.

## ಬ. ಕೆಳವರ್ಗದ ಕುಟುಂಬದ ಮಕ್ಕಳು ಮತ್ತು ನಿರಾಕರಣೆ

ತಾನು ಮತ್ತು ತನ್ನ ಕುಟುಂಬ ಗ್ರಾಮ/ನಗರ ನಿರಾಕರಿಸುವ ಸಂದರ್ಭಗಳು ಬಂದಾಗ ಕೆಳವರ್ಗದ ಮಕ್ಕಳ ಮಾನಸಿಕ ಸ್ಥಿತಿ ಹೇಗಿರುತ್ತದೆ, ಅವರು ನಿರಾಕರಣೆಗೆ ಹೇಗೆ ಪ್ರತಿಕ್ರಿಯಿಸುತ್ತಾರೆ ಎಂಬುದನ್ನು ಕಥನ ಸಾಹಿತ್ಯದಿಂದ ಅರಿಯಬಹುದು. ಕೋರಗಲ್ ವಿರೂಪಾಕ್ಷಪ್ಪ ಅವರ 'ಕತೆ ಅಂದ್ರೆ ಕತೆ ಅಲ್ಲ' ಕಥೆಯ ಪಾರ್ವತೆವ್ವಳ ಮಗ ರಂಗಪ್ಪ ಎನ್ನುವ ಬಾಲಕ ತಾಯಿಯೊಂದಿಗೆ ಗ್ರಾಮ/ನಗರ (ಕಥೆಯಲ್ಲಿ ಗ್ರಾಮ ಅಥವಾ ನಗರ ಕುರಿತು ಸ್ಪಷ್ಟತೆಯಿಲ್ಲ) ನಿರಾಕರಿಸಿ ಗ್ರಾಮಕ್ಕೆ ಬರುತ್ತಾನೆ. ರಂಗಪ್ಪನ ತಾಯಿಯ ಜೊತೆ ಬಂದ ಗಿರಿಯಪ್ಪ ಯಾರು ಎಂಬ ಪ್ರಶ್ನೆ ಆ ಗ್ರಾಮದ ಮಕ್ಕಳನ್ನು ಕಾಡುತ್ತದೆ. ಆ ಊರಿನ

ಮಕ್ಕಳ ದೃಷ್ಟಿಯಲ್ಲಿ ಗಿರಿಯಪ್ಪ, ಪಾರ್ತೆವ್ವನವರ ಸಂಬಂಧ ನಿಗೂಢವೂ, ಅಮೂರ್ತವೂ ಆಗಿದೆ. ಬೆಲ್ಲದ ಆಸೆಗೆ ಸಮವಯಸ್ಕ ಮಕ್ಕಳೊಂದಿಗೆ ಗೆಳೆತನ ಮಾಡಿಕೊಂಡ ರಂಗಪ್ಪ ತನ್ನ ಮಾತುಗಳಲ್ಲಿ ಹೇಳುತ್ತಾನೆ. 'ಈತ ನಮ್ಮಪ್ಪ ಅಲ್ಲ, ನಮ್ಮಪ್ಪನ ಹೆಸರು ಉಡಚಪ್ಪ ಅಂತ. ದಿವಸ ಕುಡ್ದು ಬಂದು ನಮ್ಮವ್ವನ ಬಡೀತಿದ್ದ. ಅದಕ್ಕ ನಮ್ಮವ್ವ ಈ ಗಿರಿಯಪ್ಪನ ಕೂಡ ಓಡಿಬಂದ್ಲು. ಈತ ನಮ್ಮವ್ವನ್ನ ಬಡಿಯಂಗಿಲ್ಲ'[೫೯] ಇದು ರಂಗಪ್ಪನ ಗ್ರಹಿಕೆಯಾಗಿದೆ ಮತ್ತು ತಾಯಿ ಮಗನ ಗ್ರಾಮ/ನಗರ ನಿರಾಕರಣೆಯ ಕತೆಯನ್ನು ಒಂದೇ ವಾಕ್ಯದಲ್ಲಿ ಹೇಳಿ ಮುಗಿಸುತ್ತದೆ. ಗಂಡನ ಕುಡಿತ, ಬಡಿತಗಳನ್ನು ತಾಳಲಾರದೇ ಅವನನ್ನು ಮತ್ತು ಊರನ್ನು (ಗ್ರಾಮ/ನಗರ) ನಿರಾಕರಿಸಿ ಗಿರಿಯಪ್ಪನೊಂದಿಗೆ ಕೂಡಿಕೆ ಮಾಡಿಕೊಂಡು ಬಂದ (ಈ ಸಂದರ್ಭದಲ್ಲಿ ಓಡಿಬಂದ್ಲು ಎಂಬ ಪದವನ್ನು ಪಲಾಯನವಾದಿ ನಿರಾಕರಣೆ ಎಂದು ಗ್ರಹಿಸದೆ, ಅದನ್ನು ತನ್ನ ಮತ್ತು ತನ್ನ ಅವಲಂಬಿತರಿಗಾಗಿ ಸುರಕ್ಷಿತ ನೆಲೆಯ ಅನ್ವೇಷಣೆ ಎಂದು ಅರ್ಥೈಸುವುದು ಹೆಚ್ಚು ಸೂಕ್ತವಾಗುತ್ತದೆ) ಪಾರ್ವತೆವ್ವ ಮಗನ ನಿರಾಕರಣೆಗೂ ಕಾರಣಳಾಗಿದ್ದಾಳೆ. ಮಗನ ಗ್ರಾಮ/ ನಗರ ನಿರಾಕರಣೆ ತಾಯಿಯ ನಿರ್ಧಾರವನ್ನು ಅವಲಂಬಿಸಿರುವುದು ಕಂಡುಬರುತ್ತದೆ. ನಿಂಗಣ್ಣ ಸಣ್ಣಕ್ಕಿ ಅವರ 'ಚಂಬಿ' ಕತೆಯ ಚಂಬಿಯ ತಮ್ಮನ ನಿರಾಕರಣೆಯೂ ಸಹ ನಿರ್ದಿಷ್ಟ ಗುರಿಯನ್ನು ಹೊಂದಿರುವುದಿಲ್ಲ. ಚಂಬಿ ಗ್ರಾಮದ ತಾರಾಳೆಂಬ ಮೇಲ್ಜಾತಿಯ ಮಹಿಳೆಯನ್ನು ರಕ್ಷಿಸಿದ್ದಕ್ಕೆ ಗೌಡನ ವಿರೋಧ ಕಟ್ಟಿಕೊಳ್ಳುತ್ತಾಳೆ. ಗೌಡ ಅವಳಿಗೆ ದಿಗ್ಬಂಧನ ಹಾಕಿ ದೈಹಿಕ, ಮಾನಸಿಕ ದೌರ್ಜನ್ಯ ಎಸಗಿದಾಗ, ಅನಿವಾರ್ಯವಾಗಿ ಆ ಗ್ರಾಮವನ್ನು ತೊರೆಯಲೇಬೇಕಾಗುತ್ತದೆ. 'ತಮ್ಮನನ್ನು ದೊಡ್ಡವನನ್ನಾಗಿ ಮಾಡಿ ದುಡಿಯಲು ಹಚ್ಚುವವರೆಗೆ ಸಂತೆ ನಡೆಯುವ ಊರಾದ (ಪಟ್ಟಣ) ಮೂಡಲಗಿಯಲ್ಲಿ ಬದುಕುವ ಆಸೆ ಮಾಡಿದಳು'[೬೦] ಎಂಬ ವಾಕ್ಯ ಅವಳ ನಿರಾಕರಣೆಯ ಹಿಂದಿರುವ ಉದ್ದೇಶವನ್ನು ಅರುಹುತ್ತದೆ. ಹಳ್ಳದಲ್ಲಿ ಅಡ್ಡಗಟ್ಟಿದ ಗೌಡ ಮಾನಭಂಗಕ್ಕೆ ಪ್ರಯತ್ನಿಸುತ್ತಾನೆ. ಇಲ್ಲಿ ಚಂಬಿಯ ತಮ್ಮನ ಅಸಹಾಯಕ ಪ್ರತಿಕ್ರಿಯೆಯನ್ನು ಗಮನಿಸಬಹುದು. ಅಕ್ಕನ ಸ್ಥಿತಿಯನ್ನು ನೋಡಿದ ತಮ್ಮ ಅಳುತ್ತ ಹಳ್ಳದೆಲ್ಲೆಲ್ಲಾ ಓಡಾಡತೊಡಗುತ್ತಾನೆ. ಗೌಡನ ಕೊಲೆ ಮಾಡಿ ನಿಂತಾಗ ಅವಳಿಗೆ ಕಾಣುವುದು ತಮ್ಮನ ಚಿಂತೆ. ತಮ್ಮನ ಬದುಕು ತನಗಾಗಿ, ತನ್ನ ಬದುಕು ತಮ್ಮನಿಗಾಗಿ ಎನ್ನುತ್ತ ಉಗಿಬಂಡಿ ಹತ್ತುವ ಜಾಗದತ್ತ ನಡೆಯುತ್ತಾಳೆ. ಚಂಬಿಯ ತಮ್ಮನಲ್ಲಿ ಆಯ್ಕೆಗಳಿಲ್ಲದಿರುವುದನ್ನು ಗಮನಿಸಬಹುದು. ಅಕ್ಕ ನಡೆದತ್ತ ಹೆಜ್ಜೆ ಹಾಕುವುದು ಅವನ ಕರ್ತವ್ಯವಾಗಿದೆ.

ಇದು ಕೆಳ, ದಲಿತ ವರ್ಗದ ಮಕ್ಕಳ ಕೌಟುಂಬಿಕ, ಸಾಮಾಜಿಕ ಸಂಘರ್ಷ ಮತ್ತು ನಿರಾಕರಣೆಯಾದರೆ, ಈ ವರ್ಗದ ಜನರ ವೈಯಕ್ತಿಕ ಸಂಘರ್ಷ ಇನ್ನೂ ಭೀಕರವಾಗಿದ್ದು ಅಂತಹವರ ಮಕ್ಕಳು ಗ್ರಾಮ/ ನಗರ ನಿರಾಕರಣೆಯನ್ನು ಏಕಾಂಗಿಯಾಗಿ ಮಾಡುವುದು ಕಂಡುಬರುತ್ತದೆ. ಎಂ.ಎಚ್. ನಾಯಕ ಬಾಡ ಅವರ 'ಗೋರಿ ತೋಡಿಕೊಂಡವರು' ಕತೆಯ ಅಪ್ಪು ಕುಮಟೆಯ ಕಮ್ತೀರು ಹೋಟಲಿನಲ್ಲಿ ಬಾಲ ಕಾರ್ಮಿಕ. ಮನೆಯಲ್ಲಿ ಕೂಲಿ ಮಾಡುವ ತಾಯಿ, ಇಬ್ಬರು ತಂಗಿಯರು, ಕಿತ್ತು ತಿನ್ನುವ ಬಡತನ ಕಂಡು ಅವನಿಗೆ ತಮ್ಮನ್ನೆಲ್ಲ ಈ ಸ್ಥಿತಿಗೆ ನೂಕಿದ ಅಪ್ಪ, ಅವನ ಸರಾಯಿ, ಅಪ್ಪನನ್ನು ಅವ್ವನಿಂದ ಕಿತ್ತುಕೊಂಡ ರಖಿವಾಲಿ ಗಂಗತ್ತೆ, ಕಮ್ತೀರು ಒಬ್ಬರಿಗಿಂತ ಒಬ್ಬರು ರಾಕ್ಷಸರಾಗಿ ಕಾಣುತ್ತಾರೆ. ಗಂಗತ್ತೆಯ ಗುಡಿಸಲು ಸುಡುವ, ಅಪ್ಪನ ತಲೆ ಮೇಲೆ ಬೀಸುವ ಕಲ್ಲು ಹಾಕಿ ಸಾಯಿಸುವ, ಕಮ್ತೀರು ಹೊಟ್ಟೆಗೆ ಚಾಕು ಹಾಕುವ ಸಮಾಜ ವಿಮುಖಿಭಾವನೆ ಅವನಲ್ಲಿ ಕಾಣಿಸಿಕೊಳ್ಳುತ್ತದೆ. ಇಷ್ಟಾದರೂ, ಹುಡುಗಿಯರನ್ನು ಮುಂಬಯಿಗೆ ಸಾಗಿಸುತ್ತಿದ್ದ ಕೇಶವ ಬಾಂಬೆಗೆ ಕರೆದರೂ ಅಪ್ಪು ಹೋಗಲಾರ. ಇದಕ್ಕೆಲ್ಲ ಕಾರಣ ಅವನ ನಂಬಿಕೆಯ ಅವ್ವನ ಒಳ್ಳೆಯತನವಾಗಿದೆ. ಅವ್ವನ ನಿಷ್ಕಳಂಕ (ಅಂತಹ ಬಡತನದಲ್ಲೂ) ಪ್ರೀತಿ ಗ್ರಾಮವನ್ನು ನಿರಾಕರಿಸದಂತೆ ಅಪ್ಪುವನ್ನು ಬಂಧಿಸಿಟ್ಟಿದ್ದರೆ, ಅಪ್ಪನ ವಿವಾಹೇತರ ಸಂಬಂಧ, ಕಮ್ತೀರು (ಶೋಷಕ) ಕೊಡುವ ದೈಹಿಕ, ಮಾನಸಿಕ ಹಿಂಸೆ, ಕೇಶವ ಒಡ್ಡುವ (ನಗರ ಆಮಿಷಗಳು) ಆಕರ್ಷಣೆ ಎಂಬ ಬಲಗಳು (Forces) ಅವನನ್ನು ನಗರದತ್ತ ಎಳೆಯುತ್ತವೆ. ಈ ಎರಡು ಬಲಗಳ ಸಮಶಕ್ತಿ ಹೋರಾಟದ ಗೊಂದಲದಲ್ಲಿ ಅಪ್ಪು ಒಂದು ನಿರ್ಧಾರ ತೆಗೆದುಕೊಳ್ಳಲು ಅಸಹಾಯಕನಾಗಿದ್ದಾನೆ. ಒಬ್ಬ ಅಸಹಾಯಕ ಮಗುವಿನ ಗ್ರಾಮ ಪ್ರೀತಿ ಮತ್ತು ನಗರ ಸೆಳೆತಗಳ ನಡುವಿನ ಹೋರಾಟ(ದ್ವಂದ್ವ)ದ ತಲ್ಲಣಗಳನ್ನು ಕಥನ ಅರ್ಥಪೂರ್ಣವಾಗಿ ಧ್ವನಿಸಿದೆ.

> 'ಅಪ್ಪ, ಗಂಗತ್ತೆ, ಕಮ್ತೀರು ಸಾಲಿನಲ್ಲಿ ಅವ್ವಿ, ಪಟಗಾರ ಮಾಸ್ತರು? ಅಪ್ಪುವಿನ ಮನಸ್ಸು ಪೂರ್ತಿ ದಿಕ್ಕು ತಪ್ಪಿದಾಗ ಅವನಿಗೆ ಪಕ್ಕನೆ ನೆನಪಾದದ್ದು ಕೇಶವ? ಅವನ ಮುಂಬಯಿಗೆ ಓಡಿ ಹೋಗುವ ಕರೆ.'[೬೧]

ಆದರೆ ಯಾವ ಕ್ಷಣ ಅವನ ನಂಬಿಕೆಯ ಒಳ್ಳೆಯ ಅವ್ವ, ಅಪ್ಪುವಿನ ಮೆಚ್ಚಿನ ಗುರುಗಳಾದ ಪಟಗಾರ ಮಾಸ್ತರರ ಜೊತೆ ಮಲಗಿದ್ದನ್ನು ಕಣ್ಣಾರೆ ಕಂಡನೋ, ಆ ಕ್ಷಣದಿಂದ ಅವನು ಪ್ರಪಂಚವನ್ನು ನೋಡುವ ದೃಷ್ಟಿ, ಗ್ರಹಿಕೆಗಳೂ ಬದಲಾಗುತ್ತವೆ. ಕೇಶವನೊಟ್ಟಿಗೆ ಮುಂಬಯಿಗೆ ಓಡಿ ಹೋಗಲು ನಿರ್ಧರಿಸುತ್ತಾನೆ. ತಾಯಿ ಹಾಗೂ ಗುರುಗಳನ್ನು ಆರಾಧನಾ ದೃಷ್ಟಿಯಿಂದ ಕಂಡಿದ್ದ ಬಾಲಕನಿಗೆ ಅವರ ದೈಹಿಕ ಸಂಬಂಧ ಅಸಹ್ಯ ಹುಟ್ಟಿಸಿದ್ದು ಅವನ ಸಾಮಾಜಿಕ ಗ್ರಹಿಕೆಯಾದರೆ, ಕಾಮ, ವ್ಯಭಿಚಾರ, ಹೆಣ್ಣಿನ ಮಾರಾಟ, ಕ್ರೌರ್ಯದಂಥ ಸಂಗತಿಗಳು ಗ್ರಾಮ, ನಗರ ಎರಡರಲ್ಲೂ ಉಂಟು, ತಾನು ಎಲ್ಲಿದ್ದರೇನು ಎಂಬ ಅನಿಸಿಕೆ ಅವನು ಕೇಶವನೊಂದಿಗೆ ಓಡಿ ಹೋಗಲು ಪ್ರೇರೇಪಿಸುತ್ತದೆ. ಅಪ್ಪುವಿನ ಗ್ರಹಿಕೆ, ದ್ವಂದ್ವವನ್ನು ಪಬ್ಲೂವಿನಲ್ಲೂ ಗುರುತಿಸುತ್ತೇವೆ. ಜಯಂತ ಕಾಯ್ಕಿಣಿ ಅವರ 'ಇದ್ದಾಗ ಇದ್ದಾಂಗ' ಕತೆಯ ಪಬ್ಲೂ (ಪ್ರಭಾಕರ ದಂಡೂ ಹರಿಕಾಂತ) ಬಡ ಕುಟುಂಬದ ಮಗನಾದರೂ, ಬದಲಾವಣೆಯಾಗುತ್ತಿರುವ ಜಗತ್ತನ್ನು ಬೆರಗುಗಣ್ಣುಗಳಿಂದ ನೋಡುವ ಹುಡುಗನಾಗಿದ್ದಾನೆ. ಹೊಸತನ್ನು ಗ್ರಹಿಸುವ ಅವನ ಆಸಕ್ತಿ, ಕುತೂಹಲಗಳು ದಿನನಿತ್ಯದ ಚಟುವಟಿಕೆಗಳಲ್ಲಿ ಎದ್ದು ಕಾಣುತ್ತವೆ. ಬಡ ಕುಟುಂಬದಲ್ಲಿ ಹುಟ್ಟಿದ್ದರೂ ಇವನ ಸೆಳೆತ ಇರುವುದು ನಗರೀಕರಣಗೊಂಡ ಬದುಕಿನತ್ತ ಎಂಬುದು ಸ್ಪಷ್ಟಗೊಂಡಿದೆ.

> 'ಅವನಿಗೆ ದಿನಾಲೂ ಬರಹೋಗುವ ಲಾಂಚುಗಳು, ಶಿರಸಿ ಕಾರವಾರ ಕಡೆಯಿಂದ ಬಂದು ಇಲ್ಲಿಯ ದಕ್ಕೆಯಲ್ಲಿ ಜನರನ್ನು ಇಳಿಸಿ ಹೋಗುವ ಬಸ್ಸುಗಳು, ಖಾಕೀ ಡ್ರೈವರುಗಳು, ಕಂಡಕ್ಟರುಗಳು (ಪಬ್ಲೂನ ಭಾಷೆಯಲ್ಲಿ ಕಿಲಿಂಡರ್‌ಗಳು), ಅವರು ಬೀಡಿ, ಸಿಗರೇಟು ಸೇದುವ ಸ್ಟೈಲು, ದಕ್ಕೆಯಲ್ಲಿಯ ಚಾ ಅಂಗಡಿಯಲ್ಲಿ ಪ್ರಯಾಣಿಕರು ಕೂತು ಚಾ ಕುಡಿಯುವ ಗತ್ತು ಹಗ್ಗವನ್ನು ಲಾಂಚಿಗೆ ಎಸೆಯುವ ಚಾಕಚಕ್ಯತೆ. ಇವೆಲ್ಲ ಅವನ ಆಸಕ್ತಿಯ ವಿಷಯವಾಗಿದ್ದವು.'[3]

ಈ ಹುಡುಗನ ಮನಸ್ಸು, ಆಸಕ್ತಿಗಳು ಆಗಲೇ ಹೊಸ ಗಾಳಿಯನ್ನು ಸ್ವೀಕರಿಸಲು ಸಿದ್ಧವಾಗಿದ್ದು, ಪ್ರೀತಿ, ಆರೈಕೆಗಳ ಕೊರತೆಯಿಂದ ನರಳುವ ಬಾಲ್ಯದ ವ್ಯಕ್ತಿತ್ವ, ಬಾಹ್ಯ ಪ್ರೇರಣೆ(Induce)ಯನ್ನು ತಕ್ಷಣ ಗ್ರಹಿಸಿ, ಸ್ವೀಕರಿಸಬಲ್ಲದು ಎಂಬುದಕ್ಕೆ ಪಬ್ಲು ಉದಾಹರಣೆಯಾಗಿದ್ದಾನೆ. ಬಡತನದ ಬೇಗೆಯಿಂದ ಪಬ್ಲು ಬ್ರಿಜ್ ಕಟ್ಟುವಲ್ಲಿ ಸಿಮೆಂಟ್ ಕೆಲಸಕ್ಕೆ ಹೋಗುತ್ತಾನೆ. ಒಂದು ದಿನ ಮಲೆಯಾಳಿ ಮೇಸ್ತ್ರಿಯ ಮಾತನ್ನು ನಂಬಿ ಮುಂಬಯಿಯಲ್ಲಿ ಕೆಲಸಕ್ಕೆ ಸೇರುವ ಆಸೆಯಿಂದ ಪಬ್ಲು ತನ್ನ ಓರಗೆಯ ಕೆಲವು ಹುಡುಗರೊಂದಿಗೆ ಕುಮುಟೆಯ ತೇರಿಗೆ ಹೋದವನು ಮಾಯವಾಗುತ್ತಾನೆ. ಹೊಸ ಬದುಕಿನ ಆಕರ್ಷಣೆ ಪಬ್ಲುವನ್ನು ಗ್ರಾಮ ನಿರಾಕರಿಸುವಂತೆ ಮಾಡುತ್ತದೆ.

ಪಬ್ಲು ನಗರ ಆಕರ್ಷಣೆಯಿಂದ ಗ್ರಾಮ ನಿರಾಕರಿಸಿದರೆ, ರೇಖಾ ಕಾಖಂಡಕಿ ಅವರ 'ತ್ರಸ್ತ' ಕಾದಂಬರಿಯ ಪುರುಷೋತ್ತಮ (ಪುರು) ತನ್ನ ಸಾಕುತಂದೆ ದತ್ತೂ ಮಾಸ್ತರರ ಮಾನ, ಗೌರವ ಕಾಪಾಡಲು ತಾಯ್ನೆಲ ನಿರಾಕರಣೆ ಮಾಡುತ್ತಾನೆ. ಗುಳೇದಗುಡ್ಡದ ಗಲ್ಲಿಯೊಂದರಲ್ಲಿ ಅದೇ ಆಗ ಹುಟ್ಟಿದ ಪುರುವನ್ನು ಬಾಗಲಕೋಟೆಗೆ ತಂದು, ತಂದೆ ತಾಯಿಯಾಗಿ ದತ್ತೂ ಮಾಸ್ತರರು ಸಾಕುತ್ತಾರೆ. ಅವನ ಮತ್ತು ತಮ್ಮ ಸಂಬಂಧವನ್ನು ಬ್ರಾಹ್ಮಣರ ಕೋಟೆ ಬೀದಿಯಲ್ಲಿ ಹೇಳಿದಾಗ, ಬ್ರಾಹ್ಮಣನಲ್ಲದ ಹುಡುಗನನ್ನು ಬ್ರಾಹ್ಮಣನೊಬ್ಬ ಸಾಕುವುದು ಸಾಮಾಜಿಕ, ಸಾಂಸ್ಕೃತಿಕ ದೃಷ್ಟಿಯಿಂದ ಅಪರಾಧವೆಂದು ಪರಿಗಣಿಸುವ ರಮಾಕಕ್ಕಿ, ವೆಂಕಣ್ಣಯ್ಯ, ಗೋದಾಕಕ್ಕಿ, ಗೋವಿಂದ ಮುಂತಾದ(ಪುರೋಗಾಮಿ ವ್ಯಕ್ತಿತ್ವಗಳು)ವರಿಗೆ ಪುರು ಮಗುವಾಗಿ ಗೋಚರಿಸದೆ ಶೂದ್ರ, ಪ್ರಾಣಿಯಂತೆ ಕಾಣುತ್ತಾನೆ. ಪ್ರೀತಿ ತೋರುವ ಸಹಪಾಟಿ ಸತ್ಯಭಾಮ (ಸತ್ಯ, ಇವಳು ರಮಾಕಕ್ಕಿಯ ಮಗಳು) ಮತ್ತು ಪುರುಷೋತ್ತಮರ ನಿಷ್ಕಲ್ಮಶ ಸ್ನೇಹವನ್ನು ಅಪರಾಧವಾಗಿ ಬಿಂಬಿಸಿ ಮಾಸ್ತರರ ಮಾನಹರಣ ಮಾಡುವ ಸಂಚು ಕೋಟೆಯಲ್ಲಿ ರೂಪುಗೊಳ್ಳುತ್ತದೆ. ಪುರುವನ್ನು ಹಲವಾರು ಪ್ರಶ್ನೆಗಳು ಕಾಡುತ್ತವೆ. ಒಂದು ನೆಲ ಬಿಟ್ಟು ಇನ್ನೊಂದು ನೆಲದಲ್ಲಿ ತಾನು ಹೆಜ್ಜೆ ಊರಲು ಏನು ಮಾಡಬೇಕಿತ್ತು? ದತ್ತೂ ಮಾಸ್ತರರ ನೆರಳಿನಲ್ಲಿ ನಿರಂತರವೂ ತನಗೆ ಅನಾಥ ಪ್ರಜ್ಞೆ ಕಾಡಿದ್ದೇಕೆ? ಅಥವಾ ಓಣಿಯವರೇ ಆ ಪ್ರಜ್ಞೆ ಹುಟ್ಟುವಂತೆ ಮಾಡಿದ್ದರೋ? ಇಲ್ಲಿ ಎರಡು ವ್ಯಕ್ತಿತ್ವಗಳು (ಪುರು ಮತ್ತು ದತ್ತೂ ಮಾಸ್ತರು) ಮುಖಾಮುಖಿಯಾಗುವುದನ್ನು ಗಮನಿಸುತ್ತೇವೆ. ಒಂದು ಅದರ್ಶವನ್ನು ಮೈಗೂಡಿಸಿಕೊಂಡು ಹೆಮ್ಮರವಾಗಿ ಬೆಳೆದ ವ್ಯಕ್ತಿತ್ವ, ಇನ್ನೊಂದು ಹೊಸ ಚಿಗುರನ್ನು ಚಿಗುರಿಸಿಕೊಂಡು ಸ್ವತಂತ್ರವಾಗಿ ಬೆಳೆಯಬೇಕೆನ್ನುವ ವ್ಯಕ್ತಿತ್ವ, ಇವೆರಡರ ಮುಖಾಮುಖಿಯಲ್ಲಿ ಒಂದು ವ್ಯಕ್ತಿತ್ವ ದೂರ ಹೋಗುವ ಅವಶ್ಯಕತೆ ಸಾಂದರ್ಭಿಕ ಅನಿವಾರ್ಯತೆಯಾಗಿದೆ. ದತ್ತೂ ಮಾಸ್ತರರ ಗೌರವ ಕಾಪಾಡುವ ಉದ್ದೇಶವನ್ನು ನೆಪವಾಗಿಟ್ಟುಕೊಂಡು ಪುರು ಮಾದಯ್ಯನ ಗುಡ್ಡ ನಿರಾಕರಿಸುತ್ತಾನೆ.

ಗ್ರಾಮ/ನಗರ ನಿರಾಕರಿಸುವ ಕೆಳ, ದಲಿತವರ್ಗದ ಮಕ್ಕಳಿಗೆ ಆಯ್ಕೆಗಳು ಇರುವುದಿಲ್ಲ. ಕುಟುಂಬದ ಹಿರಿಯ ಸದಸ್ಯರ ತೀರ್ಮಾನವೇ ಅಂತಿಮವಾಗಿದ್ದು, ಮಕ್ಕಳು ಹಿರಿಯರ ಹೆಜ್ಜೆಯಲ್ಲಿ ನಡೆದು ಹೋಗುವುದನ್ನು ಕಾಣುತ್ತೇವೆ. ಮಕ್ಕಳು ಹಲವೊಮ್ಮೆ ತಂದೆ–ತಾಯಿಯರಿಂದ, ಮಲತಾಯಿ–ತಂದೆಯರಿಂದ ಶೋಷಣೆಗೆ ಒಳಗಾಗಿ ಗ್ರಾಮ/ನಗರ ನಿರಾಕರಿಸುವುದೂ ಉಂಟು. ಮಕ್ಕಳದು ವಿಭಿನ್ನವಾದ ಜಗತ್ತು, ನಿರಾಕರಣೆಯಂತಹ ಸಂದರ್ಭಗಳಲ್ಲಿ ಮಕ್ಕಳು ಭಯ, ಸಂಕೋಚ, ಕೌತುಕದಂತಹ ದ್ವಂದ್ವ ಭಾವನೆಗಳನ್ನು ವ್ಯಕ್ತಪಡಿಸುತ್ತಾರೆ. ಪ್ರಸ್ತುತ ಕಥನ ಸಾಹಿತ್ಯ ಗ್ರಹಿಸಿರುವ ಮಕ್ಕಳ ಗ್ರಾಮ/ನಗರ ನಿರಾಕರಣೆಯ ಕಾರಣಗಳು ಇಂತಿವೆ. • ಸಾಮಾಜಿಕ ಸಂಘರ್ಷದಲ್ಲಿ ಶೋಷಣೆಗೊಳಗಾದ ಕುಟುಂಬದ ಮಕ್ಕಳು (ಚಂಬಿ ತಮ್ಮ) ಪಾಲಕ/ ಪೋಷಕರೊಂದಿಗೆ ಗ್ರಾಮ/ನಗರ ನಿರಾಕರಿಸುತ್ತಾರೆ. • ಹೊಸ ಬದುಕಿನ ಆಕರ್ಷಣೆ ಮತ್ತು ಉತ್ಸಾಹಕ್ಕೆ (ನಗರ) ತಮ್ಮನ್ನು ತೆರೆದುಕೊಳ್ಳುವ ಆಸೆಯಿಂದ ಮಕ್ಕಳು (ಅಪ್ಪು ಮತ್ತು ಪಬ್ಬು) ಗ್ರಾಮ/ ನಗರ ನಿರಾಕರಿಸುವುದು ಕಂಡುಬರುತ್ತದೆ. • ಬಡ ಕುಟುಂಬದ ಅನಾಥ ಮಕ್ಕಳು (ಫಕೀರ) ಧರ್ಮ ನಿರಾಕರಣೆಯೊಂದಿಗೆ ಗ್ರಾಮ/ನಗರ ನಿರಾಕರಿಸುವುದೂ ಉಂಟು. • ಕುಟುಂಬದ ಕಷ್ಟಕ್ಕೆ ಸ್ಪಂದಿಸಿ ಮನೆಯಿಂದ ಆಚೆ ಬಂದು ದುಡಿದು ಸಂಪಾದಿಸುವ ಮಕ್ಕಳ ನಿರಾಕರಣೆ ಬಾಲ ಕಾರ್ಮಿಕ ಪದ್ಧತಿಗೆ ಎಡೆ ಮಾಡಿಕೊಡುತ್ತದೆ. • ಶಿಕ್ಷಣ, ಉದ್ಯೋಗಕ್ಕಾಗಿ ಪ್ರತಿವರ್ಷ ಅನೇಕ ಮಕ್ಕಳು ಗ್ರಾಮ/ನಗರವನ್ನು ನಿರಾಕರಿಸುತ್ತಾರೆ. ಇದು ಅವರ ಆಸಕ್ತಿಯ ಮೇರೆಗೆ ಅಥವಾ ಪಾಲಕ/ಪೋಷಕರ ನಿರ್ಧಾರದ ಮೇರೆಗೆ ನಡೆಯುವ ನಿರಾಕರಣೆಯಾಗಿದೆ.

## ಕೊನೆಯ ಟಿಪ್ಪಣಿಗಳು

೧. ಕುಂದರನಾಡ ಪಾಟೀಲ, ಉಲ್ಲಂಘನೆ, ೧೯೯೪, ಸಿಂಚನ ಗ್ರಂಥಮಾಲೆ, ಪುಟ ೨

೨. ಕುಸುಮಾಕರ ದೇವರಗೆಣ್ಣೂರು, ನಿರಿಂದ್ರಿಯ, ೧೯೯೩, ದಿವಾಣಜಿ ಪ್ರಕಾಶನ, ಮುಂಬಯಿ, ಪುಟ ೧೦

೩. ವ್ಯಾಸರಾವ್ ನಿಂಜೂರ, ಉಸಿರು, ೧೯೬೭, ಮನೋಹರ ಗ್ರಂಥಮಾಲಾ, ಪುಟ ೨೨

೪. ಅದೇ. ಪುಟ ೨೩೪, ೨೩೫

೫. ಪಾಟೀಲ ಪುಟ್ಟಪ್ಪ (ಡಾ.), ಪಾಪು ಸಮಗ್ರ ಕಥೆಗಳು, ೨೦೦೦, ಸಪ್ನ ಬುಕ್ ಹೌಸ್, ಪುಟ ೨೧೪

೬. ಸುನಂದಾ ಪ್ರಕಾಶ ಕಡಮೆ, ಪುಟ್ಟ ಪಾದದ ಗುರುತು, ೨೦೦೫, ಛಂದ ಪುಸ್ತಕ, ಪುಟ ೫೧

೭. ರಾಮಕೃಷ್ಣ ಗುಂದಿ, ಆವಾರಿ ೧೯೮೪, ರಾಘವೇಂದ್ರ ಪ್ರಕಾಶನ, ಪುಟ ೩೦

೮. ರಮಾನಂದ ಅಮೀನ್, ಗದ್ದೆಯ ಸೆರಗು, ೧೯೮೩, ಚಂದ್ರಸಾಗರ ಪ್ರಕಾಶನ, ಪುಟ ೩

೯. ಕೇಶವ ಮಳಗಿ, ಕಡಲ ತೆರೆಗೆ ದಂಡೆ, ಗಜೇಂದ್ರ ಪ್ರಕಾಶನ, ಪುಟ ೧೯೦, ೧೯೧

೧೦. ಉಲ್ಲಾಸ ಹೆಗಡೆ, ಹಲವು ಕೆಲರವಗಳ ಊರಗಾಥೆ. ೨೦೦೫, ಚಿಂತನ, ಉತ್ತರ ಕನ್ನಡ, ಪುಟ ೩೫

೧೧. ಜೋಶಿ ಹ.ಪಿ., ಭಾವ-ಪ್ರಭಾತ, ಮಾವಿನ ತೋಪು, ರಾಜವಲ್ಲಭ, ೧೯೯೦, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಪುಟ ೧೪೬, ೧೪೭

೧೨. ರಾಘವೇಂದ್ರ ಖಾಸನೀಸ, ಖಾಸನೀಸರ ಕಥೆಗಳು, ೧೯೮೪, ಅಂಕಣ ಪ್ರಕಾಶನ, ಬೆಂಗಳೂರು. ಪುಟ ೯೬

೧೩. ಬಾಲಚಂದ್ರ ಘಾಣೇಕರ, ಸಮಗ್ರ ಸಣ್ಣ ಕತೆಗಳು, ೧೯೯೧, ಸಮಾಜ ಪುಸ್ತಕಾಲಯ, ಧಾರವಾಡ, ಪುಟ ೭

೧೪. ವ್ಯಾಸರಾವ್ ನಿಂಜೂರ, ಉಸಿರು, ೧೯೬೭, ಮನೋಹರ ಗ್ರಂಥಮಾಲಾ, ಪುಟ, ೨೩೪

೧೫. ಅಶೋಕ ಕುಲಕರ್ಣಿ, ನಿರ್ಗತಿಕರು, ೧೯೭೮, ಜೋತಿಷ್ಮತಿ ಪ್ರಕಾಶನ, ಪುಟ ೫೯

೧೬. ಕೋರಗಲ್ ವಿರೂಪಾಕ್ಷಪ್ಪ, ಮಣ್ಣಿನ ಗುಣ, ೧೯೯೨, ಪ್ರಗತಿಪರ ವೇದಿಕೆ ಪ್ರಕಾಶನ, ಪುಟ ೧೧

೧೭. ಡಿಸೋಜ ನಾ., ಪ್ರೀತಿಯೊಂದೇ ಸಾಲದೆ?, ೧೯೮೬, ಹೇಮಂತ ಸಾಹಿತ್ಯ, ಪುಟ ೪೦

೧೮. ಶ್ರೀರಂಗ, ವಿಶ್ವಾಮಿತ್ರನ ಸೃಷ್ಟಿ, ೧೯೭೪, ಅಕ್ಷರ ಪ್ರಕಾಶನ, ಪುಟ ೨೦೯, ೨೧೦

೧೯. ವ್ಯಾಸರಾವ್ ನಿಂಜೂರ್ (ಡಾ.), ಮಂಜಿ, ೨೦೦೫, ಸುವರ್ಣಗಿರಿ ಪ್ರಕಾಶನ, ಪುಟ ೧೦

೨೦. ವ್ಯಾಸರಾಯ ಬಲ್ಲಾಳ, ಹೆಜ್ಜೆ, ೨೦೦೦, ಗೀತಾ ಬುಕ್ ಹೌಸ್ ಮೈಸೂರು, ಪುಟ ೩೦೫

೨೧. ಉಲ್ಲಾಸ ಹೆಗಡೆ, ಹಲವಾರು ಕೆಲರವಗಳ ಊರಗಾಥೆ. ೨೦೦೫, ಚಿಂತನ ಪ್ರಕಾಶನ, ಪುಟ ೩೬

೨೨. ಡಿಸೋಜ ನಾ., ಪ್ರೀತಿಯೊಂದೇ ಸಾಲದೆ?, ೧೯೮೬, ಹೇಮಂತ ಸಾಹಿತ್ಯ, ಪುಟ ೭೪

೨೩. ಕೋರಗಲ್ ವಿರೂಪಾಕ್ಷಪ್ಪ, ಮಣ್ಣಿನ ಗುಣ, ೧೯೯೨, ಪ್ರಗತಿಪರ ವೇದಿಕೆ ಪ್ರಕಾಶನ, ಹಾವೇರಿ, ಪುಟ ೭೨

೨೪. ವ್ಯಾಸರಾವ್ ನಿಂಜೂರ್, ಮಂಜಿ, ೨೦೦೫, ಸುವರ್ಣಗಿರಿ ಪ್ರಕಾಶನ, ಪುಟ ೪೫

೨೫. ಸುನಂದಾ ಬೆಳಗಾಂವಕರ, ಕಾಯಕ ಕೈಲಾಸ (೧೬.೦೩.೨೦೦೩ ರಿಂದ ೦೬.೦೬.೨೦೦೪ ರವರೆಗೆ) ಕರ್ಮವೀರ ಧಾರಾವಾಹಿ ೩೩, ಪುಟ ೪೩

೨೬. ವ್ಯಾಸರಾಯ ಬಲ್ಲಾಳ, ಹೆಜ್ಜೆ, ೨೦೦೦, ಗೀತಾ ಬುಕ್ ಹೌಸ್, ಮೈಸೂರು, ಪುಟ ೧೨೫

೨೭. ರಾಘವೇಂದ್ರ ಪಾಟೀಲ, ಮಾಯಿಯ ಮುಖಗಳು, ೧೯೯೮, ಆನಂದಕಂದ ಗ್ರಂಥಮಾಲೆ, ಪುಟ ೪

೨೮. ಸುನಂದಾ ಬೆಳಗಾಂವಕರ, ಕಾಯಕ ಕೈಲಾಸ, ಕರ್ಮವೀರ ಧಾರಾವಾಹಿ ೨೫, ಪುಟ ೪೩

೨೯. ಶಾಂತಾದೇವಿ ಕಣವಿ, ಶಾಂತಾದೇವಿ ಕಣವಿಯವರ ಕಥಾಮಂಜರಿ, ಪ್ರಿಯದರ್ಶಿನಿ ಪ್ರಕಾಶನ, ೨೦೦೩, ಪುಟ ೧೬೪

೩೦. ತುಳಸಿ ವೇಣುಗೋಪಾಲ, ಕೆ.ಟಿ. ವೇಣುಗೋಪಾಲ, ಜುಗಲಬಂದಿ, ೨೦೦೫, ಸಮಗ್ರ ಸಾಹಿತ್ಯ ಪ್ರಕಾಶನ, ಪುಟ ೩೪

೩೧. ಪಾಟೀಲ ಪುಟ್ಟಪ್ಪ (ಡಾ.), ಪಾಪು ಸಮಗ್ರ ಕಥೆಗಳು, ೨೦೦೦, ಸಪ್ನ ಬುಕ್ ಹೌಸ್, ಪುಟ ೯೫

೩೨. ಶಾಂತಾದೇವಿ ಕಣವಿ, ಶಾಂತಾದೇವಿ ಕಣವಿಯವರ ಕಥಾಮಂಜರಿ, ೨೦೦೩, ಪ್ರಿಯದರ್ಶಿನಿ, ಪ್ರ ಪುಟ ೩೨೭

೩೩. ಲೋಹಿತ ನಾಯ್ಕರ, ದೃಷ್ಟಿಕೋನ, ೨೦೦೧, ಮನೋಹರ ಗ್ರಂಥಮಾಲಾ, ಧಾರವಾಡ, ಪುಟ ೭೨

೩೪. ಶ್ರೀರಂಗ, ವಿಶ್ವಾಮಿತ್ರನ ಸೃಷ್ಟಿ, ಅಕ್ಷರ ಪ್ರಕಾಶನ, ಸಾಗರ, ೧೯೩೮, (ದ್ವಿ ಮು. ೧೯೭೪), ಪುಟ ೨

೩೫. ಅಶೋಕ ಹೆಗಡೆ, ಒಳ್ಳೆಯವನು, ೨೦೦೪, ಅಕ್ಷರ ಪ್ರಕಾಶನ (ಹೆಗ್ಗೋಡು), ಸಾಗರ, ಪುಟ ೧೬

೩೬. ವ್ಯಾಸರಾವ್ ನಿಂಜೂರ್, ಮಂಚ, ೨೦೦೫, ಸುವರ್ಣಗಿರಿ ಪ್ರಕಾಶನ, ಪುಟ ೬೧

೩೭. ವ್ಯಾಸರಾಯ ಬಲ್ಲಾಳ, ಹೆಜ್ಜೆ, ೨೦೦೦, ಗೀತಾ ಬುಕ್ ಹೌಸ್, ಮೈಸೂರು, ಪುಟ ೩೩೪, ೩೩೫

೩೮. ಅದೆ. ಪುಟ ೨೦೧, ೨೦೨

೩೯. ವ್ಯಾಸರಾವ್ ನಿಂಜೂರ, ಉಸಿರು, ೧೯೬೭, ಮನೋಹರ ಗ್ರಂಥಮಾಲಾ, ಪುಟ, ೨೧

೪೦. ಭಂಡಾರಿ ಆರ್.ವಿ.(ಡಾ.), ತಲೆಮಾರು, ೨೦೦೪, ಪುಟ ೧೧೪

೪೧. ಕೇಶವ ಮಳಗಿ, ಕಡಲ ತೆರೆಗೆ ದಂಡೆ, ಗಜೇಂದ್ರ ಪ್ರಕಾಶನ, ಪುಟ ೨೧೧

೪೨. ಶಾಂತಿನಾಥ ದೇಸಾಯಿ, ಬೀಜ, ೨೦೦೨, ಸ್ವಪ್ನ ಬುಕ್ ಹೌಸ್ ಬೆಂಗಳೂರು; ಪುಟ ೨೯, ೧೮೯

೪೩. ಶಿವರುದ್ರ ಕಲ್ಲೋಳಿಕರ, ಹೊಲೆಗೇರಿಯ ರಾಜಕುಮಾರ, ೧೯೯೪, ಅನಾರ್ಯ ಪ್ರಕಾಶನ, ಪುಟ ೯

೪೪. ಡಿಸೋಜ ನಾ., ಪ್ರೀತಿಯೊಂದೇ ಸಾಲದೆ?, ೧೯೮೬, ಹೇಮಂತ ಸಾಹಿತ್ಯ ಪುಟ ೮೦, ೮೧

೪೫. ಡಿಸೋಜ ನಾ., ಮಂಜಿನ ಕಾವು, ೧೯೯೦, ಹೇಮಂತ ಸಾಹಿತ್ಯ ಪುಟ ೧೯೭

೪೬. ಶಾಂತಾದೇವಿ ಕಣವಿ, ಶಾಂತಾದೇವಿ ಕಣವಿಯವರ ಕಥಾಮಂಜರಿ, ೨೦೦೩, ಪ್ರಿಯದರ್ಶಿನಿ ಪ್ರಕಾಶನ, ಪುಟ ೧೬೩, ೧೬೪

೪೭. ನಿಂಗಣ್ಣ ಸಣ್ಣಕ್ಕಿ (ಡಾ.), ಉದ್ಯೋಗಿ – ಯೋಗಿ ಮತ್ತು ಕಥೆಗಳು, ೧೯೮೬, ಬಂಧು ಪ್ರಕಾಶನ, ಪುಟ ೫೯

೪೮. ಭಂಡಾರಿ. ಆರ್. ವಿ., ತಲೆಮಾರು, ೨೦೦೪, ಸಾಹಿತ್ಯ ನಂದನ, ಪುಟ ೧೧೮

೪೯. ಸರಸ್ವತಿಬಾಯಿ ರಾಜವಾಡೆ, ಕದಂಬ, ೧೯೪೭, ನವಭಾರತ ಪುಸ್ತಕ ಬಂಡಾರ, ಉಡುಪಿ, ಪುಟ ೫೦

೫೦. ಬಸವರಾಜ ಸಾದರ, ತಪ್ಪಂದ, ೨೦೦೨, ಲೋಹಿಯಾ ಪ್ರಕಾಶನ, ಬಳ್ಳಾರಿ, ಪುಟ ೩೧

೫೧. ಬಸವರಾಜ ಕಟ್ಟೀಮನಿ, ಬೀದಿಯಲ್ಲಿ ಬಿದ್ದವಳು, ೧೯೫೩, ಪ್ರತಿಭಾ ಗ್ರಂಥಮಾಲೆ, ಪುಟ ೧೦೧

೫೨. ವೆಂಕಟೇಶ ಹುಣಶೀಕಟ್ಟಿ, ಕೋಲ್ಮಿಂಚು, ೧೯೭೩, ಯುಗಪುರುಷ ಪ್ರಕಟನಾಲಯ, ಕಿನ್ನಿಗೋಳಿ, ಪುಟ ೨೩೬

೫೩. ವ್ಯಾಸರಾವ್ ನಿಂಜೂರ್, ಮಂಚ, ೨೦೦೫, ಸುವರ್ಣಗಿರಿ ಪ್ರಕಾಶನ, ಪುಟ ೪

೫೪. ವ್ಯಾಸರಾಯ ಬಲ್ಲಾಳ, ಹೆಜ್ಜೆ, ೨೦೦೦, ಗೀತಾ ಬುಕ್ ಹೌಸ್, ಮೈಸೂರು, ಪುಟ ೧೯೦

೫೫. ರಾಮಕೃಷ್ಣ ಗುಂದಿ, ಆವಾರಿ, ೧೯೮೪, ರಾಘವೇಂದ್ರ ಪ್ರಕಾಶನ, ಪುಟ ೩೦

೫೬. ಕೇಶವ ಮಳಗಿ, ಕಡಲ ತೆರೆಗೆ ದಂಡೆ, ಗಜೇಂದ್ರ ಪ್ರಕಾಶನ, ಪುಟ ೧೬೫

೫೭. ಶಿವರುದ್ರ ಕಲ್ಲೋಳಿಕರ, ಹೊಲೆಗೇರಿಯ ರಾಜಕುಮಾರ, ೧೯೯೪, ಅನಾರ್ಯ ಪ್ರಕಾಶನ, ಪುಟ ೧೪೦

೫೮. ವ್ಯಾಸರಾವ್ ನಿಂಜೂರ, ಉಸಿರು, ೧೯೬೭, ಮನೋಹರ ಗ್ರಂಥಮಾಲಾ, ಪುಟ ೪

೫೯. ಶ್ರೀರಂಗ, ವಿಶ್ವಾಮಿತ್ರನ ಸೃಷ್ಟಿ, ಅಕ್ಷರ ಪ್ರಕಾಶನ, ಸಾಗರ, ೧೯೭೪, ಪುಟ ೧೦೧, ೧೦೨

೬೦. ಮನೋಹರ ಗ್ರಂಥಮಾಲಾ (ಸಂ), ಇನ್ನಷ್ಟು ಹೊಸ ಕತೆಗಳು, ೧೯೭೨, ಮನೋಹರ ಗ್ರಂಥಮಾಲಾ, ಪುಟ ೫೮

೬೧. ವಿಠ್ಠಲ ಪೇರುಮನೆ, ಜನನಿ ಜನ್ಮ ಭೂಮಿಶ್ಚ, ೨೦೦೫, ಜನದೇವ ಪ್ರಕಾಶನ, ಹಿಚ್ಕಡ, ಪುಟ ೪೮

೬೨. ರಾಘವೇಂದ್ರ ಪಾಟೀಲ, ಮಾಯಿಯ ಮುಖಗಳು, ೧೯೯೮, ಆನಂದಕಂದ ಗ್ರಂಥಮಾಲೆ, ಪುಟ ೧೨. ೧೩

೬೩. ಡಿಸೋಜ ನಾ., ದ್ವೀಪ, ೨೦೦೪, ರವೀಂದ್ರ ಪ್ರಕಾಶನ, ಸಾಗರ, ಪುಟ ೩೦

೬೪. ಶ್ರೀಧರ ಬಳಗಾರ, ಇಳೆ ಎಂಬ ಕನಸು, ೨೦೦೩, ಅನಂದಕಂದ ಗ್ರಂಥಮಾಲೆ, ಪುಟ ೫೮, ೫೯

೬೫. ಮಹಾಲಿಂಗ ಮಂಗಿ, ಮುಳುಗಡೆ, ೨೦೦೨, ವ್ಯಾಸ ಪ್ರಕಾಶನ, ಪುಟ ೧೪, ೧೫

೬೬. ಶಾಂತಾದೇವಿ ಕಣವಿ, ಶಾಂತಾದೇವಿ ಕಣವಿಯವರ ಕಥಾಮಂಜರಿ, ಪ್ರಿಯದರ್ಶಿನಿ ಪ್ರಕಾಶನ, ೨೦೦೩, ಪುಟ ೧೫೭

೬೭. ಸುನಂದಾ ಪ್ರಕಾಶ ಕಡಮೆ, ಪುಟ್ಟ ಪಾದದ ಗುರುತು, ೨೦೦೫, ಛಂದ ಪುಸ್ತಕ, ಪುಟ ೪೯

೬೮. ವೀರಭದ್ರ ಕೌದಿ, ಬರ ಮತ್ತು ಇತರ ಕಥೆಗಳು, ೧೯೯೧, ಅಜೇಯ ಪ್ರಕಾಶನ, ತಾಳೀಕೋಟೆ, ಪುಟ ೪

೬೯. ಮಾಲತಿ ಪಟ್ಟಣಶೆಟ್ಟಿ, ಇಂದು ನಿನ್ನಿನ ಕತೆಗಳು, ೧೯೮೮, ಕೃತಿ ಪ್ರಕಾಶನ, ಪುಟ ೨೫

೭೦. ತುಳಸಿ ವೇಣುಗೋಪಾಲ, ಕೆ.ಟಿ. ವೇಣುಗೋಪಾಲ, ಜುಗಲಬಂದಿ, ೨೦೦೫, ಸಮಗ್ರ ಸಾಹಿತ್ಯ ಪ್ರಕಾಶನ, ಪುಟ ೩೩

೭೧. ಶಂಕರ ಕಟಗಿ, ಸಂಪಿಗಿ ತಾಯವ್ವ, ೨೦೦೩, ಬ್ಯಾಲದಕೆರೆ ಪ್ರಕಾಶನ, ಪುಟ ೧೪

೭೨. ವ್ಯಾಸರಾವ್ ನಿಂಜೂರ, ಉಸಿರು, ೧೯೬೭, ಮನೋಹರ ಗ್ರಂಥಮಾಲಾ, ಪುಟ ೨೬೯

೭೩. ಜಯಂತ ಕಾಯ್ಕಿಣಿ, ತೆರೆದಷ್ಟೇ ಬಾಗಿಲು, ೧೯೮೨, ಅನನ್ಯ ಪ್ರಕಾಶನ, ಪುಟ ೩೨

೭೪. ರಾಘವೇಂದ್ರ ಪಾಟೀಲ, ಮಾಯಿಯ ಮುಖಗಳು, ೧೯೯೮, ಆನಂದಕಂದ ಗ್ರಂಥಮಾಲೆ, ಪುಟ ೩

೭೫. ಜಯಂತ ಕಾಯ್ಕಿಣಿ, ತೆರೆದಷ್ಟೇ ಬಾಗಿಲು, ೧೯೮೨, ಅನನ್ಯ ಪ್ರಕಾಶನ, ಪುಟ ೩೧

೭೬. ರಾಘವೇಂದ್ರ ಖಾಸನೀಸ, ಖಾಸನೀಸರ ಕಥೆಗಳು, ೧೯೭೪, ಅಂಕಣ ಪ್ರಕಾಶನ, ಪುಟ ೧೦೩, ೧೦೪

೭೭. ಶಾಂತಾದೇವಿ ಕಣವಿ, ಶಾಂತಾದೇವಿ ಕಣವಿಯವರ ಕಥಾಮಂಜರಿ, ೨೦೦೩, ಪ್ರಿಯದರ್ಶಿನಿ ಪ್ರ., ಪುಟ ೧೬೪

೭೮. ಕುಸುಮಾಕರ ದೇವರಗೆಣ್ಣೂರು, ನಿರೀಂದ್ರಿಯ, ೧೯೯೩, ದಿವಾಣಜಿ ಪ್ರಕಾಶನ, ಪುಟ ೧೪

೭೯. ಕೋರಗಲ್ ವಿರೂಪಾಕ್ಷಪ್ಪ, ಮಣ್ಣಿನ ಗುಣ, ೧೯೯೨, ಪ್ರಗತಿಪರ ವೇದಿಕೆ, ಪುಟ ೬೭

೮೦. ಯೋಗಪ್ಪನವರ ಎಸ್. ಎಫ್., ಆರಾಮ ಖುರ್ಚಿ ಇತರ ಕತೆಗಳು, ೧೯೯೬, ಕವಿತಾ ಪ್ರಕಾಶನ, ಪುಟ ೨೫

೮೧. ಕೇಶವ ಮಳಗಿ, ಕುಂಕುಮ ಭೂಮಿ, ೧೯೯೦, ಕಲ್ಯಾಣಿ ಪ್ರಕಾಶನ, ಪುಟ ೬೫

೮೨. ಪಾಟೀಲ ಪುಟ್ಟಪ್ಪ, ಪಾಪು ಸಮಗ್ರ ಕಥೆಗಳು, ೨೦೦೦, ಸ್ವಪ್ನ ಪ್ರಕಾಶನ, ಪುಟ ೯೫

೮೩. ನಿಂಗಣ್ಣ ಸಣ್ಣಕ್ಕಿ, ಉದ್ಯೋಗಿ-ಯೋಗಿ ಮತ್ತು ಕಥೆಗಳು, ೨೦೦೦, ಬಂಧು ಪ್ರಕಾಶನ, ಪುಟ ೬೦

೮೪. ತುಳಸಿ ವೇಣುಗೋಪಾಲ, ಕೆ.ಟಿ.ವೇಣುಗೋಪಾಲ, ಜುಗಲಬಂದಿ, ೨೦೦೫, ಸಮಗ್ರ ಸಾಹಿತ್ಯ ಪ್ರಕಾಶನ, ಪುಟ ೩೪

೮೫. ರಾಮಕೃಷ್ಣ ಗುಂದಿ, ಆವಾರಿ, ೧೯೮೪, ರಾಘವೇಂದ್ರ ಪ್ರಕಾಶನ, ಪುಟ ೩೦

೮೬. ಭಾಲಚಂದ್ರ ಘಾಣೇಕರ, ಸಮಗ್ರ ಸಣ್ಣಕತೆಗಳು, ೧೯೯೧, ಸಮಾಜ ಪುಸ್ತಕಾಲಯ, ಧಾರವಾಡ, (೨:ಪುಟ ೯)

೮೭. ಉಲ್ಲಾಸ ಹೆಗಡೆ, ಹಲವಾರು ಕಲರವಗಳ ಊರಗಾಥೆ, ೨೦೦೫, ಚಿಂತನ, ಪುಟ ೩೬

೮೮. ರಾಘವೇಂದ್ರ ಪಾಟೀಲ, ಮಾಯಿಯ ಮುಖಗಳು, ೧೯೯೮, ಆನಂದಕಂದ ಗ್ರಂಥಮಾಲೆ, ಪುಟ ೧೪

೮೯. ಕೋರಗಲ್ ವಿರೂಪಾಕ್ಷಪ್ಪ, ಮಣ್ಣಿನ ಗುಣ, ೧೯೯೨, ಪ್ರಗತಿಪರ ವೇದಿಕೆ, ಪುಟ ೯

೯೦. ನಿಂಗಣ್ಣ ಸಣ್ಣಕ್ಕಿ (ಡಾ.), ಉದ್ಯೋಗಿ-ಯೋಗಿ ಮತ್ತು ಕಥೆಗಳು, ೧೯೮೬, ಬಂಧು ಪ್ರಕಾಶನ, ಪುಟ ೫೯

೯೧. ನಾಯಕ ಬಾಡ ಎಮ್. ಎಚ್., ಮಾಸ್ತಿ, ೧೯೮೨, ರಾಘವೇಂದ್ರ ಪ್ರಕಾಶನ, ಅಂಕೋಲ, ಪುಟ ೫೨

೯೨. ಜಯಂತ ಕಾಯ್ಕಿಣಿ, ತೆರೆದಷ್ಟೇ ಬಾಗಿಲು, ೧೯೮೨, ಅನನ್ಯ ಪ್ರಕಾಶನ, ಪುಟ ೨೭

* * *

ಅಧ್ಯಾಯ ಏಳು

## ಕಥನ ಸಾಹಿತ್ಯ : ಗ್ರಾಮ/ ನಗರ ಜೀವನದ ಆಯ್ಕೆಯ ನೆಲೆಗಳು

ಸಮಾಜಜೀವಿಗಳಾದ ಮನುಷ್ಯರು ಗ್ರಾಮ/ನಗರ ನಿರಾಕರಿಸಿ ಮೂಲ ನೆಲೆಯ ಸಂಬಂಧಗಳನ್ನು ಕಳಚಿಕೊಂಡಾಗ, ಹಲವು ಹತ್ತು ಒಂಟಿತನದ ಗೊಂದಲಗಳನ್ನು ಅನುಭವಿಸುತ್ತಾರೆ. ನಂತರ, ಮುಂದೇನು ಎಂಬ ಪ್ರಶ್ನೆಯ ಮೂಲದಲ್ಲಿ ಆಯ್ಕೆ ಪ್ರಕ್ರಿಯೆಯ ಅಂಕುರವಾಗುತ್ತದೆ. ವ್ಯಕ್ತಿಯೊಬ್ಬರ ಬದುಕಿನ ವೈಯಕ್ತಿಕ ಕೊರತೆಗಳು, ಕೌಟುಂಬಿಕ ಅಗತ್ಯಗಳು, ಸಾಮಾಜಿಕ ಸ್ಥಾನಮಾನಗಳು ಆಯ್ಕೆಯನ್ನು ಪ್ರೇರೇಪಿಸುವ ಅಂಶಗಳಾಗಿವೆ. ಹೊಸ ನೆಲೆ, ಹೊಸ ಸಂಬಂಧಗಳ ಆಯ್ಕೆಯಂತಹ ಕಾರ್ಯ ವ್ಯಕ್ತಿ ಮತ್ತು ಕುಟುಂಬಗಳ ಸಂಕೀರ್ಣ ನಿರ್ಧಾರವಾಗಿದ್ದು, ಅದು ಪೂರ್ವ ನಿಯೋಜಿತ ಇಲ್ಲವೆ ಆಕಸ್ಮಿಕವಾಗಿರಬಹುದು. ಹೊಸ ನೆಲೆಯ ಆಯ್ಕೆಯ ನಿರ್ಧಾರಗಳು ವ್ಯಕ್ತಿಗಳ ಹಾಗೂ ಕುಟುಂಬಗಳ ಖಾಸಗಿ ವಿಚಾರವಾಗಿದ್ದು, ಅದನ್ನು ಪ್ರೇರೇಪಿಸುವ ಅಂಶಗಳು ಆರ್ಥಿಕ, ಸಾಮಾಜಿಕ, ಸಾಂಪ್ರದಾಯಿಕ, ಆಶ್ರಯ, ಆಡಳಿತಾತ್ಮಕ ಇತ್ಯಾದಿ ಅಂಶಗಳೊಂದಿಗೆ ಬೆಸೆದುಕೊಂಡಿವೆ. ಮುಂಬಯಿ ಕರ್ನಾಟಕದ ಕಥನ ಸಾಹಿತ್ಯದಲ್ಲಿ ದಾಖಲಾದ ಈ ಅಂಶಗಳನ್ನು ಮತ್ತು ಇವು ವ್ಯಕ್ತಿಗಳಲ್ಲಿ ಹುಟ್ಟುಹಾಕುವ ದ್ವಂದ್ವಾತ್ಮಕತೆಯನ್ನು ಪ್ರಸ್ತುತ ಅಧ್ಯಾಯದಲ್ಲಿ ವಿಶ್ಲೇಷಿಸಿ, ಸಂಗ್ರಹಿಸಲಾಗಿದೆ.

### ೧. ವೈಯಕ್ತಿಕ ನೆಲೆಗಳು ಮತ್ತು ಆಯ್ಕೆ

#### ಅ. ಶಿಕ್ಷಣಾಕಾಂಕ್ಷೆ : ಮೇಲ್ವರ್ಗಗಳ ನೆಲೆಯಿಂದ

ಕಲಿಯುವುದು ಮತ್ತು ಕಲಿಸುವುದು ಮೇಲ್ವರ್ಗಗಳಿಗೆ ಮಾತ್ರ ಸೀಮಿತವೆಂದಿದ್ದ ಕಾಲಮಾನದಲ್ಲಿ ಕೆಳ, ದಲಿತವರ್ಗಗಳು ಶಿಕ್ಷಣದಿಂದ ವಂಚಿತವಾಗಿದ್ದುದು ಸ್ಪಷ್ಟವಿದೆ. ಸ್ವಾತಂತ್ರ್ಯಾನಂತರ ಸಾರ್ವತ್ರೀಕರಣಗೊಂಡ ಶಿಕ್ಷಣನೀತಿಯಿಂದ, ಎಲ್ಲ ವರ್ಗದ ಜನರಿಗೂ ಶಿಕ್ಷಣ ತಲುಪುವಂತಾದರೂ ಎಷ್ಟೋ ಬಡ, ದಲಿತ ಕುಟುಂಬಗಳಿಗೆ ಶಿಕ್ಷಣ ಇಂದಿಗೂ ಮರೀಚಿಕೆಯಾಗಿಯೆ ಇದೆ. ಶಿಕ್ಷಣಕ್ಕಾಗಿ ಗ್ರಾಮ/ನಗರ ನಿರಾಕರಿಸಿ ನಗರ/ಮಹಾನಗರ ಆಯ್ಕೆ ಮಾಡಿಕೊಳ್ಳುವ ಸಂದರ್ಭದಲ್ಲಿ ಮೇಲ್ವರ್ಗ ಮತ್ತು ಕೆಳವರ್ಗಕ್ಕೆ ಸೇರಿದ ವಿದ್ಯಾರ್ಥಿಗಳನ್ನು ಪ್ರೇರೇಪಿಸುವ/ಹಿಡಿದಿಡುವ ಅಂಶಗಳಾವುವು ಎಂಬುದರ ಕುರಿತು ಕಥನ ಸಾಹಿತ್ಯ ಬೆಳಕು ಚೆಲ್ಲುತ್ತದೆ.

ಕುಸುಮಾಕರ ದೇವರಗೆಣ್ಣೂರ ಅವರ 'ಸಿರಿಂದ್ರಿಯ' ಕಾದಂಬರಿಯ ರೊಳ್ಳಿ ಕುಟುಂಬವು, ನೂರಾರು ಎಕರೆ ಭೂಮಿ, ಮನೆ, ಆಸ್ತಿ ಹೊಂದಿದ ಕುಟುಂಬವಾಗಿದ್ದರೂ, ಶಿಕ್ಷಣ ಕುರಿತು ಅಸಡ್ಡೆಯನ್ನು ಬೆಳೆಸಿಕೊಂಡಿತ್ತು. ಊರಲ್ಲಿಯ ದೇಸಾಯರ ಮನೆತನದೊಂದಿಗಿನ ದ್ವೇಷದ ದಳ್ಳುರಿಯಲ್ಲಿ ಮನೆಯ ಐದೂ ಮಕ್ಕಳಿಗೆ ಶಿಕ್ಷಣ ಕೊಡಿಸುವುದಿಲ್ಲ. ಬರಿ ಜಗಳ, ದ್ವೇಷ, ಶಿಕ್ಷೆಯಂತಹ ಸಂಸ್ಕೃತಿಯಲ್ಲಿ ಬೆಳೆದ ಮಕ್ಕಳು ದುಶ್ಚಟಗಳನ್ನು ಕಲಿತು ಶಿಕ್ಷಣದತ್ತ ಆಸಕ್ತಿ ವಹಿಸುವುದಿಲ್ಲ. ಶಾಲೆಯಲ್ಲಿ ಮೊದಲ ಸ್ಥಾನದಲ್ಲಿ ಕುಳಿತುಕೊಳ್ಳುವ ಕಾರಣಕ್ಕೆ ರೊಳ್ಳಿಯ ಮಗ ಕಲ್ಲಪ್ಪನಿಗೂ, ದೇಸಾಯರ ಮಗ ದೊಡ್ಡಪ್ಪನಿಗೂ ಜಿದ್ದಾಜಿದ್ದಿ

ನಡೆದು ಶಾಲೆ ಮುಚ್ಚುತ್ತದೆ. ತಾಯಿ ನಗರದಿಂದ ಬಂದ ತಮ್ಮನಿಗೆ ವಿನಂತಿಸಿ ಗಂಡನನ್ನು ಒಪ್ಪಿಸಿ ಮಗನನ್ನು ತಮ್ಮನೊಂದಿಗೆ ಓದಲು ನಗರಕ್ಕೆ ಕಳಿಸುತ್ತಾಳೆ. ಇಲ್ಲಿ ನಗರದ ಆಯ್ಕೆ ತುಂಬ ಆಕಸ್ಮಿಕವೆಂದು ಹೇಳಬಹುದು.

> 'ಹಾಗೇನಿಲ್ಲ, ಏನೆಂದರೂ ಹಳ್ಳಿಯ ಶಾಲೆ. ಸಂಸ್ಕಾರ ಚೆನ್ನಾಗಿ ಆಗುವುದಿಲ್ಲ. ಹುಡುಗ ಚುರುಕು, ಬಿ.ಎ.ಎಲ್.ಎಲ್.ಬಿ. ಮಾಡಿಸಿದರೆ ನಿಮಗೂ, ಹುಡುಗನಿಗೂ ಒಳ್ಳೆಯದು. ಕಲಿತವರೆಲ್ಲ ನೌಕರಿಯನ್ನೆ ಮಾಡಬೇಕೆಂದೇನೂ ಇಲ್ಲವಲ್ಲ'[7]

ಎಂದು ಸೋದರಮಾವ ಕಲ್ಲಪ್ಪನ ತಂದೆಗೆ ಸೂಚನೆ ನೀಡಿ ಒಪ್ಪಿಸುತ್ತಾನೆ. ಈ ಆಯ್ಕೆ ಕಲ್ಲಪ್ಪನ ಬದುಕಿಗೊಂದು ತಿರುವು ಕೊಡುತ್ತದೆ. ದುಶ್ಚಟಗಳಿಗೆ ಬಲಿಯಾಗಿ ಹಳ್ಳಿಯಲ್ಲಿಯೇ ಬದುಕಬೇಕಾಗಿದ್ದ ಇಂತಹ ಮಕ್ಕಳು ಸಮಯೋಚಿತ ಮತ್ತು ಆಕಸ್ಮಿಕ ಆಯ್ಕೆಗಳಿಂದ ಶಿಕ್ಷಣದತ್ತ ಮುಖಮಾಡುವುದು ಸಾಹಿತ್ಯದಲ್ಲಿ, ಸಮಾಜದಲ್ಲಿ ಕಂಡುಬರುತ್ತದೆ. ಕುಂದರನಾಡ ಪಾಟೀಲರ 'ಉಲ್ಲಂಘನೆ' ಕಾದಂಬರಿಯಲ್ಲಿ ದಾನಪ್ಪಗೌಡ, ನಿಂಗವ್ವಗೌಡತಿಯರು ಮಗ ಚನಬಸುವನ್ನು ನಗರದ ಪ್ರೌಢಶಾಲೆಗೆ ಸೇರಿಸಲು ನಿರ್ಧರಿಸುತ್ತಾರೆ. ಮೆಟ್ರಿಕ್ ಪಾಸಾಗಿ ಸಹಿ ಮಾಡಲು ಬಂದರೆ ಸಾಕು, ಗೌಡಿಕೆಯನ್ನು ನಿರ್ವಹಿಸಿಕೊಂಡು ಹೋಗಬಹುದು ಎಂಬ ಶಿಕ್ಷಣ ಕುರಿತು ನಿರ್ಲಕ್ಷ ಭಾವನೆ ಹೊಂದಿದ್ದ ಈ ಕುಟುಂಬಕ್ಕೆ ಆಯ್ಕೆ ಒಂದು ಸಮಸ್ಯೆಯಾಗಿ ಕಾಡುತ್ತದೆ. ಸಾಕಷ್ಟು ಉತ್ಪನ್ನ ಬರುತ್ತಿದ್ದರೂ, ಖರ್ಚುವೆಚ್ಚಗಳ ನಿಖರ ಮಾಹಿತಿ ಇಲ್ಲದ ಕಾರಣ, ಖರ್ಚಿನ ಕುರಿತು ಅವ್ಯಕ್ತ ಭಯ ಇವರನ್ನು ಕಾಡಿದೆ. ಭಾರತೀಯ ರೈತರ ಆರ್ಥಿಕ ಅಶಿಸ್ತು ಕಾದಂಬರಿಯಲ್ಲಿ ಎದ್ದು ಕಾಣುತ್ತದೆ. 'ಗಂಡ ಹೆಂಡತಿ ಮಧ್ಯರಾತ್ರಿಯವರೆಗೂ ಚರ್ಚಿಸಿ, ಹತ್ತಿರದ ಬೆಳಗಾವಿಯಲ್ಲಿರುವ ಸಂಬಂಧಿ ಪಕೀರಪ್ಪನ ಮನೆಯಲ್ಲಿ ಮಗನನ್ನು ಇಡುವ ಆಯ್ಕೆಯನ್ನು ಮಾಡಿಕೊಳ್ಳುತ್ತಾರೆ.'[8] ಈ ಆಯ್ಕೆಯು ಆರ್ಥಿಕ ವ್ಯವಸ್ಥೆಯನ್ನು ಗಮನದಲ್ಲಿಟ್ಟು ಮಾಡಿಕೊಂಡ ಆಯ್ಕೆಯಾಗಿದ್ದು, ಹತ್ತಿರದ ನಗರವಾದರೆ ಸಂಬಂಧಿಗಳ ಮನೆಯಲ್ಲಿಟ್ಟು ಕಾಳುಕಡ್ಡಿ, ತುಸು ದುಡ್ಡು ಕೊಟ್ಟು ನಡೆಸಬಹುದು, ತಾವೂ ಆಗಾಗ್ಗೆ ಹೋಗಿಬಂದು ಮಾಡಬಹುದು ಎಂಬ ತರ್ಕದಿಂದ ಕೂಡಿದೆ. ಈ ಹಂತದಲ್ಲಿ ಶಾಲೆಯಲ್ಲಿ ಸಿಗುವ ಶಿಕ್ಷಣದ ಗುಣಮಟ್ಟ, ಪದವಿಗಳ ಕುರಿತು ಚಿಂತನೆ ನಡೆಯುವುದಿಲ್ಲ, ಬದಲಿಗೆ ಖರ್ಚುವೆಚ್ಚಗಳ ಮೇಲೆ ಎಚ್ಚರ (ನಿಗಾ) ಇರುವುದು ಗ್ರಾಮೀಣರ ಚಿಂತನೆಯ ಮಿತಿಯನ್ನು ತೋರಿಸುತ್ತದೆ. ರೊಳ್ಳಿಯ ತಾಯಿಯಲ್ಲಿ ನಗರಕ್ಕೆ ಹೊರಟು ನಿಂತ ಮಗನ ಭವಿಷ್ಯದ ನಿರೀಕ್ಷೆ ಹಾಗೂ ಕುಟುಂಬದಲ್ಲಿ ತನ್ನ ಅಸಹಾಯಕತೆಯ ದ್ವಂದ್ವವಿದ್ದರೆ, ರೊಳ್ಳಿಯ ಮನಸ್ಸಿನಲ್ಲಿ ಏನೋ ಒಂದು ಕಳವಳ ಮನೆ ಮಾಡಿದೆ. ಅಲ್ಲಿ ಅಪರಿಚಿತ ವಾತಾವರಣ (ನಗರ) ಮತ್ತು ಮಾಮಿಯ ಸ್ವಭಾವ (ನಗರ ವ್ಯಕ್ತಿತ್ವ) ಕುರಿತು ಅವ್ಯಕ್ತ ಭಯವಿದೆ. ಇದು ಗ್ರಾಮದ ಮಗುವಿನ ಬಾಲ್ಯವನ್ನು ಆತಂಕಗೊಳಿಸುವ ನಗರದ ಪ್ರಭಾವವೆನಿಸಿದೆ. ಆದರೆ ಚನಬಸುವಿನ ತಂದೆ ತಾಯಿಗಳಲ್ಲಿ ಆರ್ಥಿಕ ಅಸಹಾಯಕತೆಯ ಗೊಂದಲವನ್ನು ಕಾಣುತ್ತೇವೆ. ಒಂದೆಡೆ ಮನೆತನದ ಗೌರವ, ಇನ್ನೊಂದೆಡೆ ಖರ್ಚುವೆಚ್ಚ ನೀಗಿಸಲು ಅಧೈರ್ಯ. ಗಂಡ ಹೆಂಡತಿ ಮಧ್ಯರಾತ್ರಿಯವರೆಗೆ ಚರ್ಚಿಸುವುದು ಅವರ ಆರ್ಥಿಕ ಅಸಹಾಯಕತೆ/ಅಮಾಯಕತೆಗಳಿಂದ ಉಂಟಾದ ತುಮುಲವೆನ್ನಬಹುದು.

ಯಶವಂತ ಚಿತ್ತಾಲ ಅವರ 'ಶಿಕಾರಿ' ಕಾದಂಬರಿಯ ನಾಗಪ್ಪ, ಶ್ರೀನಿವಾಸರು ಶಿಕ್ಷಣಾಕಾಂಕ್ಷಿಗಳಾಗಿ ಮುಂಬಯಿ ನಗರವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಇವರಿಬ್ಬರೂ ಉಚ್ಚ ಜಾತಿ(ಜಿ.ಎಸ್.ಬಿ. ಸಮಾಜ)ಗೆ ಸೇರಿದ್ದರೂ ಅತ್ಯಂತ ಬಡತನದ ನಿಮಿತ್ತ ಇವರ ತಂದೆಯರು ಮಕ್ಕಳ ಶಿಕ್ಷಣದತ್ತ ಆಸಕ್ತಿ ವಹಿಸುವುದಿಲ್ಲ. ಉತ್ತರ ಕನ್ನಡ ಜಿಲ್ಲೆಯ ಹನೆಹಳ್ಳಿ, ನಾಡು ಮಾಸ್ಕೇರಿಯವರಾದ ನಾಗಪ್ಪ, ಶ್ರೀನಿವಾಸರಿಗೆ ಶಿಕ್ಷಣ ಮುಂದುವರೆಸಲು ಕೌಟುಂಬಿಕ ಆಸರೆ ಸಿಗದಿದ್ದರೂ, ತಮ್ಮ ಸಮಾಜದ ಸಂಘ, ಸಂಸ್ಥೆಗಳ ಆಸರೆ ಸಿಕ್ಕುವುದು ಕರಾವಳಿ ಕರ್ನಾಟಕದ ಉಚ್ಚ ಜಾತಿಗಳು ಶಿಕ್ಷಣ, ಉದ್ಯೋಗಕ್ಕೆ ಕೊಡುವ ಪ್ರಾಮುಖ್ಯತೆಯನ್ನು ತೋರಿಸುತ್ತದೆ. ನಾಗಪ್ಪನ ತಂದೆ ಬಾವಿಯಲ್ಲಿ ಹಾರಿ ಪ್ರಾಣ ಕಳೆದುಕೊಂಡಾಗ, ಶ್ರೀನಿವಾಸನ ತಂದೆಯ ಹೆಣ ಕೋಟಿ ತೀರ್ಥದಲ್ಲಿ ತೇಲಿಬಂದಾಗ, ಇವರಿಬ್ಬರೂ ತಮ್ಮ ಜಾತಿ ಬಂಧುಗಳ ಸಹಾಯದಿಂದ ಮುಂಬಯಿಯ ಖೇತವಾಡಿಯ ಖೇಮರಾಜಭವನದಲ್ಲಿದ್ದ ನಾಗಪ್ಪನ ಸೋದರತ್ತೆಯ ಕೋಣೆಯನ್ನು ಸೇರುತ್ತಾರೆ.

'ತನ್ನ ಸೋದರತ್ತೆಗೆ ಸೇರಿದ ಈ ಕೋಣೆಗಳು, ಗುಣವಾಗದ ರೋಗದ ಚಿಕಿತ್ಸೆಗೆಂದು ಮುಂಬಯಿಗೆ ಬಂದಾಗ ಇವೇ ಕೋಣೆಗಳಲ್ಲಿ ಒದಗಿದ ಅಮ್ಮನ ಸಾವು, ತಂಗಿ ಇಲ್ಲಿಯದೆ ಜನ ಜಂಗುಳಿಯಲ್ಲಿ ಕಾಣೆಯಾದದ್ದು, ಊರಿಗೆ ಹಿಂತಿರುಗಿದ ನಂತರ ಆದ ಬೆಂಕಿಯ ಅಪಘಾತ, ಅಪ್ಪನ ಆತ್ಮಹತ್ಯೆ; ಸೋದರತ್ತೆಯ ಮರಣ. ಎಲ್ಲ, ಎಲ್ಲವನ್ನೂ ಸರಿಯಾದ ಬೆಳಕಿನಲ್ಲಿ ನೆನೆಯುವ ಧೈರ್ಯ ಮೊಳೆಯುತ್ತಿದ್ದಂತೆಯೆ ನಿರಾತಂಕವಾದ ಗಾಢ ನಿದ್ರೆ ಸೇರಿದ್ದ.' [೩]

ಅವರ ಸಮಾಜದವರು ನೀಡುವ ವಿದ್ಯಾರ್ಥಿವೇತನ, ಪ್ರೋತ್ಸಾಹ ಧನ ರೂಪದ ಆರ್ಥಿಕ ಸಹಾಯವು ಬಡ ನಾಗಪ್ಪ ಮತ್ತು ಶ್ರೀನಿವಾಸರನ್ನು ಶಿಕ್ಷಣಪತ್ತ ಮುಖಮಾಡಲು ಕಾರಣವಾಗಿದೆ. ಹುಟ್ಟಿನಿಂದ, ಜಾತಿಯಿಂದ ದೊರಕಬಹುದಾದ ಪ್ರೋತ್ಸಾಹ, ಪ್ರೇರಣೆಗಳು ಅವುಗಳ ಸಾಂದರ್ಭಿಕ ಪ್ರಯೋಜನ ಇಲ್ಲಿನ ಆಯ್ಕೆಯನ್ನು ಪ್ರೇರೇಪಿಸಿದೆ ಎನ್ನಬಹುದು. ಮುಂಬಯಿ ಕರ್ನಾಟಕದ ಮೇಲ್ಜಾತಿಗಳು ಜಾತಿ ನೆಲೆಯಲ್ಲಿ ಒಂದಾಗಿ ಮಠ, ಶಿಕ್ಷಣ ಸಂಸ್ಥೆಗಳನ್ನು ಕಟ್ಟಿ ತಮ್ಮ ಜಾತಿಯ ಮಕ್ಕಳಿಗೆ ಶಿಕ್ಷಣ, ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸುವುದು ಮತ್ತು ಬಡ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಆರ್ಥಿಕ ಸಹಾಯ ನೀಡುವುದನ್ನು ಕಾಣುತ್ತೇವೆ. ಆದರೆ ಕೆಳ, ದಲಿತ ವರ್ಗದ ಜಾತಿ, ಜನಾಂಗಗಳು ಇಂತಹ ಶೈಕ್ಷಣಿಕ ಎಚ್ಚರವನ್ನು ಪಡೆಯದೇ ಇರುವುದು ಕಂಡುಬರುತ್ತದೆ. ವ್ಯಾಸರಾಯ ಬಲ್ಲಾಳ ಅವರ 'ಹೆಜ್ಜೆ' ಕಾದಂಬರಿಯ ವಿಧವೆ ಯುವತಿ ಶಾಂಭವಿಯ ಶಿಕ್ಷಣ, ಶಿಕ್ಷಣಕ್ಕಾಗಿ ಉಡುಪಿಯ ಆಯ್ಕೆಯು ಸಹ ಹುಟ್ಟಿನ ಮತ್ತು ಜಾತಿಯ ಹಿನ್ನೆಲೆಯ ಶಕ್ತಿಗಳಿಂದ ನಡೆದುದಾಗಿದೆ. ಸಂಪ್ರದಾಯವನ್ನು ವಿರೋಧಿಸಿದ ವಿದ್ಯಾಧರನ ಪತ್ನಿ ಸಾವಿತ್ರಿ ಕೇಶಮುಂಡನಕ್ಕೆ ಒಪ್ಪದೆ, ಆಗ (೧೯೩೦ರ ಸಮಯ) ಬಹು ಪ್ರಚಾರ ಭಾಷೆಯಾಗಿದ್ದ ಹಿಂದಿ ಕಲಿಯಲು ಪ್ರೇರಣೆ ನೀಡುತ್ತಾಳೆ. ಮಾವ ಶ್ರೀಕಂಠಶಾಸ್ತ್ರಿಗಳು ಮತ್ತು ಅವರ ತಮ್ಮನ ವಿರೋಧವಿದ್ದರೂ ಪ್ರತಿಭಟಿಸದೆ ಮೌನವಾಗುತ್ತಾರೆ. ಕೊರಚರ ಕೆಂಚೆ ಎಂಬ ದಲಿತರ ಹುಡುಗನನ್ನು ಗ್ರಾಮದ ಶಾಲೆಗೆ ಸೇರಿಸಿದ್ದಕ್ಕಾಗಿ, ತನ್ನ ಮಗನನ್ನು ಶಾಲೆ ಬಿಡಿಸಿ ಎಳೆದು ತಂದ ಜಾತಿವಾದಿ ಗಂಗಾಧರ (ಶ್ರೀಕಂಠಶಾಸ್ತ್ರಿಗಳ ಹಿರಿಯ ಮಗ) ತಂಗಿಗಾಗಿ ಸಂಪ್ರದಾಯ ಮುರಿದಿದ್ದಕ್ಕಾಗಿ ಪ್ರತಿಭಟಿಸುವುದಿಲ್ಲ. ಪ್ರಗತಿಶೀಲರಾದ ವಿದ್ಯಾ, ಸಾವಿತ್ರಿಯರ ಸಮಾಜ ಸುಧಾರಣೆಯ ಕಾರ್ಯಗಳನ್ನು ಟೀಕಿಸುತ್ತ, ವಿರೋಧಿಸುತ್ತಿದ್ದ ಇವನು ಚಿಕ್ಕಪ್ಪನ ಮಗಳು ಜಾತಿ, ಕೌಟುಂಬಿಕ ಕಟ್ಟಲೆಗಳನ್ನು ಮುರಿದು ವಿದ್ಯಾಭ್ಯಾಸವನ್ನು ಮುಂದುವರೆಸಿದ್ದಕ್ಕೆ ಮೌನ ವಹಿಸುತ್ತಾನೆ. ಸವರ್ಣೀಯ ಯುವಕರ ಇಂತಹ ನಡಾವಳಿಗಳು, ಚಿಂತನಾಕ್ರಮಗಳು, ಜೀವನದ ವಿಧಾನಗಳು ಕಾಲಕ್ಕೆ ತಕ್ಕಂತೆ ರೂಪಾಂತರಗೊಳ್ಳುವುದನ್ನು ಕಾಣುತ್ತೇವೆ. 'ಶಾಂಭವಿ ಹಿಂದಿ ಪರೀಕ್ಷೆಗಳನ್ನು ಬೇಗ ಮುಗಿಸಿದರೆ, ಸಾಧ್ಯವಾದರೆ ಯಾವುದಾದರೊಂದು ಶಾಲೆಯಲ್ಲಿ ಹಿಂದಿ ಪಂಡಿತಳೆಂದು ಸೇರಿಕೊಳ್ಳಲು ಸಾಧ್ಯವಾಗುತ್ತೆ'[೪] ಎಂಬ ಸಾವಿತ್ರಿಯ ಸಲಹೆಗೆ ಒಪ್ಪಿಗೆ ಕೊಟ್ಟ ಹಿರಿಯರು ಕೆಂಚನ ವಿದ್ಯಾಭ್ಯಾಸಕ್ಕೆ ವಿರೋಧ ಬಂದಾಗ ಜಾಣಮೌನಕ್ಕೆ ಶರಣಾಗುತ್ತಾರೆ. ಭಾರತದ ಜಾತಿವ್ಯವಸ್ಥೆಯ ಸಂಕೀರ್ಣ ಸಮಾಜದಲ್ಲಿ ಮೇಲ್ಜಾತಿಯರಿಗೊಂದು ಕೆಳಜಾತಿಯರಿಗೊಂದು ಸಾಮಾಜಿಕ ನೀತಿ, ನಿಯಮಗಳಿರುವುದನ್ನು ಮತ್ತು ಅವು ಅನುಕೂಲಕ್ಕೆ ತಕ್ಕಂತೆ ಅರ್ಥೈಸಲ್ಪಡುವ ದ್ವಂದ್ವವನ್ನು ಈ ಸಂದರ್ಭದಲ್ಲಿ ಕಾಣಬಹುದು. ಆರ್ಥಿಕ ಬಲ, ಜಾತಿ ಬಲ, ಹುಟ್ಟಿನ ಬಲ ಇರುವವರಿಗೆ ಶಿಕ್ಷಣ ಮುಂದುವರೆಸಲು ನಮ್ಮ ಸಮಾಜದಲ್ಲಿ ಆಯ್ಕೆಯ ಅನೇಕ ಅವಕಾಶಗಳಿರುವುದು ಇಂಥ ಸಂದರ್ಭಗಳಿಂದ ಸಾಬೀತಾಗುತ್ತದೆ.

### ಶಿಕ್ಷಣಾಕಾಂಕ್ಷೆ : ಕೆಳ, ದಲಿತ ವರ್ಗಗಳ ನೆಲೆಯಿಂದ

ವಸಾಹತುಪೂರ್ವ ಭಾರತೀಯ ಸಮಾಜದಲ್ಲಿನ ವರ್ಣವ್ಯವಸ್ಥೆ, ಉಚ್ಚವರ್ಣದವರಿಗೆ ಮಾತ್ರ ಅಕ್ಷರಾಭ್ಯಾಸದ ಅವಕಾಶಗಳನ್ನು ನೀಡಿತ್ತು. ಉಳಿದವರು ಅಂದರೆ, ಶೂದ್ರರು, ದಲಿತರು ವಿದ್ಯೆಗೆ ಅನರ್ಹರು ಎಂದು ಧರ್ಮಶಾಸ್ತ್ರೀಯವಾಗಿ ನಿಯಂತ್ರಿಸಿದ್ದು ಕಂಡುಬರುತ್ತದೆ. ಎಲ್ಲ ವರ್ಗದವರಿಗೆ ಸರಕಾರಿ ಶಾಲೆಗಳಲ್ಲಿ ಪ್ರವೇಶ ದೊರೆಯುವವರೆಗೆ (೧೯೫೮) ಕೆಳ, ದಲಿತವರ್ಗದವರು ಶಿಕ್ಷಣದ ಕುರಿತು ಯೋಚಿಸುವಂತೆಯೆ ಇರಲಿಲ್ಲ. ಗ್ರಾಮಗಳಲ್ಲಿ ಕಲಿಯುವ ಅವಕಾಶಗಳೆ ಕಡಿಮೆಯಾಗಿರುವಾಗ, ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ನಗರಗಳ ಆಯ್ಕೆಯ ಸಂದರ್ಭದಲ್ಲಿ ಮೊದಲು ಅವರ ಆರ್ಥಿಕಸ್ಥಿತಿ ಅಡ್ಡಿಯಾಗಿದ್ದುದು, ಎರಡನೆಯದಾಗಿ ಸಂಪ್ರದಾಯವಾದಿಗಳ ಮತ್ತು ಬಂಡವಾಳಶಾಹಿಗಳ ವಿರೋಧವಿದ್ದುದು ಪ್ರಸ್ತುತ ಕಥನ ಸಾಹಿತ್ಯದಿಂದ ತಿಳಿದುಬರುತ್ತದೆ.

ವ್ಯಾಸರಾಯ ಬಲ್ಲಾಳ ಅವರ 'ಕಾಡು ಮಲ್ಲಿಗೆ' ಕತೆಯ ಸೋಮಪ್ಪ ಪೂಜಾರಿ (ಸೋಂಪು) ಕರಾವಳಿ ಗ್ರಾಮದ ಬಡ ಕುಟುಂಬದ ಒಬ್ಬನೇ ಮಗ. ಓದುತ್ತ ದುಡಿದು, ದುಡಿಯುತ್ತ ಓದುವ ಹಂಬಲ ಅವನದಾಗಿದೆ. ಅದಕ್ಕಾಗಿ ಅವನು ಮುಂಬಯಿ ನಗರದ ಒಂದು ಹೋಟೆಲನ್ನು ಆಯ್ಕೆ ಮಾಡಿಕೊಳ್ಳುತ್ತಾನೆ. ಬಡತನ ಅವನ ಓದಿಗೆ ಅಡ್ಡಿಯಾಗುವ ಸಂದರ್ಭದಲ್ಲಿ ದಿನವೆಲ್ಲ ಹೋಟೆಲಿನಲ್ಲಿ ಕೆಲಸ ಮಾಡಿ, ರಾತ್ರಿ ಜೈಹಿಂದನಲ್ಲಿರುವ ಶ್ರೀನಿವಾಸರಾಯರ ಮನೆಯಲ್ಲಿ ವಿದ್ಯಾಭ್ಯಾಸ ಮಾಡುತ್ತಾನೆ. ಇವನು ವಿದ್ಯಾಭ್ಯಾಸಕ್ಕಾಗಿ ಮುಂಬಯಿ ಆಯ್ಕೆ ಮಾಡಿಕೊಳ್ಳಲು ಕೌಟುಂಬಿಕ ಕಾರಣವಿದ್ದು, ಅದು ಮುಂಬಯಿಯಲ್ಲಿರುವ ಒಬ್ಬಳೇ ಅಕ್ಕನ ಸಂಸಾರವನ್ನು ರಕ್ಷಿಸುವುದಾಗಿದೆ. ಜ್ವರದಿಂದ ಕೆಲಸಕ್ಕೆ ಗೈರು ಹಾಜರಾದಾಗ ಹೋಟೆಲ ಯಜಮಾನ,

> 'ಊರಿಂದ ಇಲ್ಲಿಯತನಕ ಕರೆದುಕೊಂಡು ಬಂದು ಊಟ, ತಿಂಡಿ, ಸಂಬಳ ಗಿಂಬಳ ಕೊಟ್ಟರೆ, ಮೀಸೆ ಬಾರದ ಈ ಹುಡುಗರಿಗೆ ಧಿಮಾಕು ತಲೆಗಡರಿ ಹೋಗುತ್ತದೆ. ಎರಡು ಅಕ್ಷರ ಓದಲಿಕ್ಕೆ ಬಂದ ಕೂಡಲೇ ಇವರೆಲ್ಲ 'ಸೋಸಾಲಿಸ್ಟ', 'ಕಮ್ಯುನಿಸ್ಟ' ಮಾತಾಡ್ತಾರೆ'"

ಎಂದು ಬಯ್ಯುತ್ತಾನೆ. ಹೊರಗೆ ಅತ್ಯಂತ ಪ್ರಗತಿಪರ, ಒಳಗೆ ಪ್ರತಿಗಾಮಿಯಾಗಿರುವ ನಗರದ ಬಂಡವಾಳಶಾಹಿಯೊಬ್ಬರ ಶಿಕ್ಷಣವಿರೋಧಿ ನೀತಿ ಮತ್ತು ಆರ್ಥಿಕ ದಬ್ಬಾಳಿಕೆಗಳು ಇಂತಹ ಮಾತುಗಳಲ್ಲಿ ಎದ್ದು ಕಾಣುತ್ತವೆ. ಸೋಮಪ್ಪನಂತಹ ಅನೇಕ ಮಕ್ಕಳು ಈ ಧೋರಣೆಗೆ ಬಲಿಯಾಗಿದ್ದುದು ಕಂಡುಬರುತ್ತದೆ. ಆದರೆ ಬಡತನವಿದ್ದರೂ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸದೆ ಮಕ್ಕಳನ್ನು ಓದಿಸುವ ಕೆಳವರ್ಗದ ಕುಟುಂಬಗಳನ್ನೂ ಕಾಣುತ್ತೇವೆ. ವಿವೇಕ ಶಾನುಭಾಗ ಅವರ 'ಗುರುತು' ಕತೆಯ ಆನಂದನ ತಂದೆ ಅಪಘಾತದಲ್ಲಿ ತೀರಿಹೋದಾಗ, ತಾಯಿ ಕಾವೇರಿ ಮುಕುಂದ ಮಾಸ್ತರರ ಸಹಾಯದಿಂದ ಮಗನಿಗೆ ಶಿಕ್ಷಣ ಕೊಡಿಸಲು ಮುಂದಾಗುತ್ತಾಳೆ. ಆನಂದ ಕಲಿಯಬೇಕು, ಅವನಿಗೊಂದು ನೌಕರಿ ಸಿಗಬೇಕು ಎಂಬ ಕನಸು ಅವಳದಾಗಿದ್ದು, ಅವರಿವರ ಮನೆಯಲ್ಲಿ ಅಡಿಗೆ ಕೆಲಸ, ಹಪ್ಪಳ ಸಂಡಿಗೆ ಮಾಡಿ ಮಾರುತ್ತ ಮಗನಿಗೆ ಆರ್ಥಿಕ ಸಹಾಯ ಮಾಡುತ್ತಾಳೆ. ಆನಂದ ಮೆಟ್ರಿಕ್ ಮುಗಿಸಿ ಬಿಎಸ್ಸಿ ಮಾಡಿ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಧಾರವಾಡವನ್ನು ಆಯ್ಕೆ ಮಾಡಿಕೊಳ್ಳುತ್ತಾನೆ. ಗಂಡ ಬಿಟ್ಟುಹೋದ ದುಡ್ಡು, ಇವಳ ಬಂಗಾರ ಮಾರಿ ಓದಿಸಿದರೂ ಊರವರು ಮಾಸ್ತರರ ಜೊತೆ ಇವಳ ಹೆಸರು ಸೇರಿಸಿ ಹೊಲಸು ಮಾತಾಡಿ ನಾಲಿಗೆ ತೀಟೆ ತೀರಿಸಿಕೊಂಡರೂ ಕಾವೇರಿ ಸಲುಗುವುದಿಲ್ಲ. 'ಆನಂದನನ್ನು ಬಿಟ್ಟುಕೊಡಬೇಡ, ಅವನನ್ನು ಓದಿಸುವ ಜವಾಬ್ದಾರಿ ನನಗಿರಲಿ'' ಎಂದು ಧೈರ್ಯ ತುಂಬಿದ್ದ ಮುಕುಂದ ಮಾಸ್ತರರಂತಹ ಗುರುಗಳಿಂದ ಕೆಳವರ್ಗದ ಅನೇಕ ವಿದ್ಯಾರ್ಥಿಗಳು ಮಾರ್ಗದರ್ಶನ ಪಡೆದು ವಿದ್ಯಾವಂತರಾಗಿದ್ದುದನ್ನು ನಾವು ಕಾಣುತ್ತೇವೆ. ಆದರೆ ಶಿಕ್ಷಣವನ್ನು ವಿರೋಧಿಸುವ ನೆಲೆಯಲ್ಲಿ ಕೆಲವು ಪಟ್ಟಭದ್ರ ಹಿತಾಸಕ್ತಿಗಳು ಕೆಳವರ್ಗದ ಕುಟುಂಬಗಳನ್ನು ಅಧೈರ್ಯಗೊಳಿಸುವುದು ಗ್ರಾಮೀಣ ಪರಿಸರದಲ್ಲಿ ಇಂದಿಗೂ ಕಾಣುವ ಸಂಗತಿಯಾಗಿದೆ. ಶಿಕ್ಷಣದಿಂದ ವಂಚಿತರಾಗಿದ್ದಷ್ಟು ಕಾಲ ಮತ್ತು ಸಂಘಟಿತರಾಗದಷ್ಟು ಕಾಲ ಮೇಲ್ವರ್ಗಗಳ ಇಂತಹ ಹೀಯಾಳಿಕೆಗೆ ಕೆಳವರ್ಗ ಅವಕಾಶವಂಚಿತರಾಗಿ, ಮೂಕಸಾಕ್ಷಿಗಳಾಗಿ ಇರಬೇಕೆಂಬ ಧ್ವನಿಶಕ್ತಿ ಕಥೆಯಲ್ಲಿದೆ.

ಪ್ರಸ್ತುತ ಕಥನ ಸಾಹಿತ್ಯದಲ್ಲಿ ಗಂಡುಮಕ್ಕಳ ಶಿಕ್ಷಣಕ್ಕಾಗಿ ಗ್ರಾಮ/ನಗರಗಳಲ್ಲಿಯ ಬಡ ಕುಟುಂಬಗಳು ಅನೇಕ ಕಷ್ಟಕಾರ್ಪಣ್ಯಗಳನ್ನು ಎದುರಿಸುತ್ತಾರೆ. ವಾಸ್ತವದಲ್ಲಿ 'ಸರ್ವರಿಗೂ ಶಿಕ್ಷಣ' ಎಂಬ ನೀತಿಯಂತೆ ಸರಕಾರ ಅನೇಕ ಶೈಕ್ಷಣಿಕ ಸೌಲಭ್ಯಗಳನ್ನು ನೀಡಿದರೂ ಸರಿಯಾದ ಮಾರ್ಗದರ್ಶನ ಮತ್ತು ಆಡಳಿತದ ಸಹಕಾರವಿಲ್ಲದೆ ಬಡ ಮಕ್ಕಳು ಶಿಕ್ಷಣದಿಂದ ದೂರ ಸರಿಯುವುದು ಕಂಡುಬರುತ್ತದೆ. ಇನ್ನು ಹೆಣ್ಣುಮಕ್ಕಳ ಶಿಕ್ಷಣದ ವಿಚಾರವಂತೂ ಶೋಚನೀಯವಾಗಿದೆ. ಶಿಕ್ಷಣಕ್ಕಾಗಿ ಹಂಬಲಿಸುವ ಮಹಿಳೆಯರು ಆರ್ಥಿಕ ಅಭದ್ರತೆಯ ಜೊತೆಗೆ ಪುರುಷರ, ಪುರುಷಪ್ರಧಾನ ಪರಂಪರಾಗದ ನಂಬಿಕೆಗಳನ್ನು ಎದುರಿಸಬೇಕಾದ ಅನೇಕ ಸಂದರ್ಭಗಳನ್ನು ಕಾಣುತ್ತೇವೆ. ಲೋಹಿತ ನಾಯ್ಕರ ಅವರ 'ನಿರ್ಧಾರ' ಕತೆಯಲ್ಲಿ ಶುಂಟೇನಹಳ್ಳಿಯ ದಲಿತ ಯುವತಿ ಮಾಲತಿ ವಿವಾಹೇತರ ಸಂಬಂಧ ಹೊಂದಿದ ಕಾರಣಕ್ಕೆ ಅತ್ತೆ ಮನೆ, ತಾಯಿಮನೆ(ಎರಡೂ ಗ್ರಾಮಗಳು)ಗಳಿಂದ ಹೊರಹಾಕಲ್ಪಡುತ್ತಾಳೆ. ಬಾಲ್ಯದಲ್ಲಿ ಪ್ರತಿಭಾವಂತ ವಿದ್ಯಾರ್ಥಿನಿಯಾಗಿದ್ದ ಇವಳು ಸ್ವತಂತ್ರಳಾಗುವ ದೃಷ್ಟಿಯಿಂದ ಶಿಕ್ಷಣವನ್ನು ಮುಂದುವರೆಸಲು ನಿರ್ಧರಿಸುತ್ತಾಳೆ. ಇಂತಹ ಅಸಹಾಯಕ, ದಲಿತ ಯುವತಿಗೆ ಯಾರೂ ಸಹಾಯ ಮಾಡದಿದ್ದಾಗ ದೂರದ ಸಂಬಂಧಿ ಚಿಕ್ಕಪ್ಪನೊಬ್ಬ ಬೆಂಗಳೂರಿನಲ್ಲಿರುವುದು ನೆನಪಾಗಿ ಬೆಂಗಳೂರನ್ನು ಮುಂದಿನ ಶಿಕ್ಷಣ, ಜೀವನಕ್ಕೆ ಆಯ್ಕೆ ಮಾಡಿಕೊಳ್ಳುತ್ತಾಳೆ. 'ನನ್ನ ಮನೆಯಲ್ಲಿ ಕಾಲಿಡಬೇಡ, ಥೂ ಸೂಳೆ ಹಾದರಗಿತ್ತಿ'[2] ಎಂದು ಬೈದ ತಂದೆ, ಯಾವ

ಪ್ರತಿಕ್ರಿಯೆಯನ್ನು ತೋರಿಸದ ತಾಯಿ, ತಿರಸ್ಕಾರದಿಂದ ನೋಡುವ ಸ್ವಸಮಾಜ ಮತ್ತು ಸವರ್ಣೀಯ ಸಮಾಜಗಳನ್ನು ನಿರಾಕರಿಸಿ ನಗರ ಸೇರಿದರೆ, ಅಲ್ಲಿ ಚಿಕ್ಕಪ್ಪನ ನಿರಾಕರಣೆಯ ಭಾವ ಅವಳನ್ನು ಅಧೈರ್ಯಗೊಳಿಸುತ್ತದೆ. ಆಧುನಿಕ ಶಿಕ್ಷಣ, ಆ ಮೂಲಕ ಸಾಮಾಜಿಕ ಎಚ್ಚರ, ಆರ್ಥಿಕ ದೃಢತೆ, ಸಾಮಾಜಿಕ ಭದ್ರತೆಗಳು ಮಾತ್ರ ತನ್ನನ್ನು ಇಂಥ ಆರೋಪಗಳಿಂದ ಮುಕ್ತಗೊಳಿಸಬಲ್ಲವು ಎಂಬ ತಿಳುವಳಿಕೆ ಒಬ್ಬ ದಲಿತ ಯುವತಿಗೆ ಬಂದಿರುವುದು ಶಿಕ್ಷಣದ ಸಫಲತೆಯಾಗಿದೆ. ಇವೆಲ್ಲ ಅಡೆತಡೆಗಳನ್ನು ಎದುರಿಸಿಯೂ ಬ್ಯಾಂಕ್ ಪರೀಕ್ಷೆಗೆ ಓದುತ್ತಾಳೆ. ಆದರೆ ಇಂತಹ ಪ್ರತಿರೋಧ, ನಿರಾಸೆಯ ಸಂದರ್ಭದಲ್ಲಿ ಅನೇಕ ದಲಿತ, ಬಡ ಮಹಿಳೆಯರು ಓದುವುದನ್ನೇ ನಿಲ್ಲಿಸುವುದು, ವೇಶ್ಯಾವೃತ್ತಿಯಂತಹ ಕಸುಬಿಗೆ ಜಾರುವುದು ಕಂಡುಬರುತ್ತದೆ. ಪ್ರಾಧ್ಯಾಪಕ ಗಂಡ ತನ್ನ ವಿದ್ಯಾರ್ಥಿನಿಯನ್ನು ಮದುವೆಯಾಗಲು ಡೈವೋರ್ಸ್‌ಗೆ ಒತ್ತಾಯಿಸಿದಾಗ, ಗಂಡನ ಮನೆಯನ್ನು ಬಿಟ್ಟುಬಂದ ಶಾರದಾ ಶೆಣೈ ಅವರ 'ಸಂಬಂಧಗಳು' ಕತೆಯ ಲಲಿತಾ, ತವರು ಮನೆಯವರ ವಿರೋಧದ (ತವರು ನಿರಾಕರಿಸಿ) ನಡುವೆಯೂ ಎಂ.ಎಸ್ಸಿ. ಮುಗಿಸಿ ಅಮೇರಿಕಾದ ಶಿಕ್ಯಾಗೋ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಮಾಡಲು ಹೊರಟು ಹೋಗುತ್ತಾಳೆ. ಇಲ್ಲಿ ಮಾಲತಿಯ ಸಂದರ್ಭಕ್ಕೂ ಲಲಿತಾಳ ಪರಿಸ್ಥಿತಿಗೂ ವ್ಯತ್ಯಾಸವಿದೆ. "ಹಾಗೆ ನೋಡಿದರೆ ಮುಂಬಯಿಯಲ್ಲಿ ಹೆಣ್ಮಕ್ಕಳಿಗೆ ಬೇಕಾದಷ್ಟು ಸವಲತ್ತು ಇದೆ ಅನ್ನೋಣ. ಇವಳಂತೆ ಒಳ್ಳೆ ರೂಪವೂ ಇದ್ದರೆ ಒಂದು ರಾತ್ರಿಗೆ ಸಾವಿರದ ಮೇಲೂ ಕಮಾಯಿಸಬಹುದು" ಎಂದು ಲಲಿತೆಯನ್ನು ಅವಳಣ್ಣ ಕುಟುಕಿದಾಗ ತಾಯಿಯಿಂದ ತೀವ್ರವಿರೋಧ ಬರುತ್ತದೆ. ನಗರದ ಸುಶಿಕ್ಷಿತ ಕುಟುಂಬದ ಲಲಿತಳಿಗೆ ಆರ್ಥಿಕ ಭದ್ರತೆಯ ಜೊತೆಗೆ, ವಿದ್ಯೆಯ ಸಹಾಯವಿದೆ. ಬಂಧುಗಳದ್ದು ಏನಿದ್ದರೂ ಅದು ಅಭಿಪ್ರಾಯಭೇದವಾಗಿದೆ. ಆದರೆ ಮಾಲತಿಗೆ ತಂದೆಯೇ ಸೂಳೆಯಪಟ್ಟ ಕಟ್ಟಿ ಓಡಿಸುತ್ತಾನೆ. ಜೊತೆಗೆ ಆರ್ಥಿಕ, ಸಾಮಾಜಿಕ ಅಭದ್ರತೆಯ ಜೊತೆ ಅವಳು ನಗರ ಆಯ್ಕೆ ಮಾಡಿಕೊಳ್ಳುತ್ತಾಳೆ. ಪುರುಷರಿಂದ, ಸಮಾಜದಿಂದ ಮಾಲತಿ ಲಲಿತಳಿಗಿಂತ ಹೆಚ್ಚು ಶೋಷಣೆಗೊಳಗಾಗುವ ಸಾಧ್ಯತೆಯಿದೆ. ಆದರೆ ಗ್ರಾಮ/ನಗರ ನಿರಾಕರಿಸಿದ ಕೆಳವರ್ಗ, ದಲಿತ ವ್ಯಕ್ತಿಗಳಲ್ಲಿ ಸ್ವಾಭಾವಿಕವಾಗಿ ಕಾಣುವ ಧೈರ್ಯ, ಆತ್ಮವಿಶ್ವಾಸ, ಪರಿಸ್ಥಿತಿಯನ್ನು ಎದುರಿಸಿ ನಿಲ್ಲುವ ಛಲಗಳು ಮಾಲತಿಯಲ್ಲಿಯೂ ಇರುವುದನ್ನು ಅಧ್ಯಯನ ಗುರುತಿಸುತ್ತದೆ.

ವ್ಯಾಸರಾವ್ ನಿಂಜೂರ ಅವರ 'ಉಸಿರು' ಕಾದಂಬರಿಯ ಶಾರದ ಸಹ ಇಂತಹ ಗುಣಗಳನ್ನು ಮೈಗೂಡಿಸಿಕೊಂಡ ದಲಿತ ಯುವತಿಯಾಗಿದ್ದಾಳೆ. ಮೆಟ್ರಿಕ್ ವಿದ್ಯಾಭ್ಯಾಸದ ನಂತರ 'ನಾನು ನರ್ಸ್ ಓದುತ್ತೇನೆ' ಎಂದಾಗ, ಶಾರದಳ ತಾಯಿಯನ್ನು ಇಟ್ಟುಕೊಂಡಿದ್ದ ಊರ ಪಟೇಲ ಅದು ತನಗೆ ಅವಮಾನ, ಕೆಲಸ ಕೊಡಿಸುತ್ತೇನೆ ಎನ್ನುತ್ತಾನೆ. ಶಾರದ ಒಪ್ಪಿಕೊಳ್ಳದ್ದಕ್ಕೆ 'ಅಡ್ಡ ದೇವಾರ್ಸಿಯಾಗು' ಎಂದು ಬೈಯುತ್ತಾನೆ. ತಾಯಿ, "ದೊಡ್ಡ ಉರಿಸೂಟೆಯಾಗಿ ಹೋದೆ ನೀನು. ಬೆಳೆಸಿದ್ದಕ್ಕೆ ಸಾರ್ಥಕವಾಯಿತು. ನೀನು ಎಂಥದು ಬೇಕಾದರೂ ಮಾಡು. ನಿನ್ನ ಖುಷಿವಾಶಿ ಮಾಡು. ಆಯ್ತು?" ಎನ್ನುತ್ತಾಳೆ. ಈ ಸಂದರ್ಭವನ್ನು ಎರಡು ದೃಷ್ಟಿಕೋನಗಳಿಂದ ಗ್ರಹಿಸಬಹುದು. ಮೊದಲನೆಯದು ಊರ ಪಟೇಲನ ಗೌರವದ ಪ್ರಶ್ನೆ. ಶಾರದೆಯ ತಾಯಿಯನ್ನು ಇಟ್ಟುಕೊಂಡಾಗ ಆಗದ ಅವಮಾನ, ಹೋಗದ ಗೌರವ, ದಲಿತ ಯುವತಿ(ಶಾರದೆ)ಯೊಬ್ಬಳು ನರ್ಸ್ ಓದಿದರೆ ಹೋಗುತ್ತದೆ ಎನ್ನುವುದು ಊಳಿಗಮಾನ್ಯ ಮನಸ್ಸುಗಳ ರೋಗಗ್ರಸ್ತ ಸ್ಥಿತಿಯನ್ನು ತೋರಿಸುತ್ತದೆ. ಇಂಥ ಮನಸ್ಸುಗಳು ದಲಿತ, ಕೆಳವರ್ಗದ ಹೆಣ್ಣುಗಳು ತಮ್ಮ ಆಸ್ತಿ, ಅನುಭವಿಸಲು ಸಮೀಪದಲ್ಲಿಯೇ ಇರಲಿ ಎಂಬ ಹಿಡಿತ ಸಾಧಿಸುವ ಸ್ವಾರ್ಥಮೂಲದಿಂದ ಪ್ರತಿರೋಧವನ್ನು ವ್ಯಕ್ತಪಡಿಸುತ್ತವೆ. ಎರಡನೆಯದು ತಾಯಿಯ ಅಸಹಾಯಕ ಮನಃಸ್ಥಿತಿಯಾಗಿದೆ. ಒಂದೆಡೆ ಅನ್ನ ಕೊಡುವ ಪಟೇಲ, ಇನ್ನೊಂದೆಡೆ ಸಿಡಿದು ನಿಂತ ಮಗಳು. ಹೀಗೆ ಇಬ್ಬರ ಮಧ್ಯೆ ಅಸಹಾಯಕ ದಲಿತ ಮಹಿಳೆ ಸಾಂಪ್ರದಾಯಿಕತೆಯನ್ನು ಬೆಂಬಲಿಸುವಂತೆ ಸಂದರ್ಭ ಒತ್ತಡ ಹೇರಿದಾಗ, 'ಉರಿಸೂಟೆಯಾದೆ' (ಕ್ರಾಂತಿಕಾರಿ, ತೀವ್ರಗಾಮಿಯಾದೆ) ಎಂದು ಆಪಾದಿಸುವುದು ಕಂಡುಬರುತ್ತದೆ. ಜೊತೆಗೆ ಅಸಹಾಯಕ ಮನಸ್ಸು ಒಪ್ಪಿಗೆಯನ್ನೂ ಕೊಡುತ್ತದೆ. ಪಟೇಲನ ವಿರೋಧ ಊಳಿಗಮಾನ್ಯ ವ್ಯವಸ್ಥೆಯ ಮನಸ್ಸುಗಳಿಂದ ಹುಟ್ಟಿ ಬಂದಿದ್ದು, ಅದು ಶತಮಾನಗಳಿಂದ ದಲಿತ, ಕೆಳವರ್ಗದವರ ಶಿಕ್ಷಣ, ಪುರೋಭಿವೃದ್ಧಿಯನ್ನು ವಿರೋಧಿಸುತ್ತ, ಅವರನ್ನು ಸಾಮಾಜಿಕವಾಗಿ, ಆರ್ಥಿಕವಾಗಿ ಹಿಡಿತದಲ್ಲಿಟ್ಟುಕೊಳ್ಳಲು ಯತ್ನಿಸುವುದು ಸ್ಪಷ್ಟವಿದೆ. ದೈನ್ಯ, ಅಸಹಾಯಕ ಕೆಳವರ್ಗದ ಹಿರಿಯ ತಲೆಮಾರಿನ ಮೇಲೆ ಗೌಡ, ಪಟೇಲ ಮುಂತಾದ ಮುಖಂಡರು ಮಾನಸಿಕ, ಆರ್ಥಿಕ, ಹಾಗೂ ಭೌತಿಕ ದಾಸ್ಯತ್ವವನ್ನು ಊರ್ಜಿತಗೊಳಿಸುವಲ್ಲಿ ಯಶಸ್ವಿಯಾಗುತ್ತಾರೆ ಎಂಬುದಕ್ಕೆ ಶಾರದೆಯ ತಾಯಿ ಉದಾಹರಣೆಯಾಗಿದ್ದಾಳೆ. ಆದರೆ ಶಾರದೆಯ

ಮನಸ್ಥಿತಿ ಇವರಿಬ್ಬರ ಮನಸ್ಥಿತಿಗಿಂತ ವಿಭಿನ್ನವಾಗಿದ್ದು, ಅಲ್ಲಿ ಒಂದೆಡೆ ತಾಯಿ(ಗ್ರಾಮ) ಇನ್ನೊಂದೆಡೆ ಶಿಕ್ಷಣ(ನಗರ)ಗಳ ಆಯ್ಕೆಯ ಜಿಜ್ಞಾಸೆ ಸೃಷ್ಟಿಯಾಗಿದೆ. ಅಸಹಾಯಕ ತಾಯಿಗೆ ಆಸರೆಯಾಗುವ ಆಸೆ ಒಂದೆಡೆ ಎಳೆದರೆ, ಶಿಕ್ಷಣಾಕಾಂಕ್ಷೆ ಇನ್ನೊಂದೆಡೆ ಸೆಳೆಯುತ್ತ, ನಗರದ ಪ್ರಭಾವ ಬಲವಾಗುತ್ತ ಹೋಗಿ ಗೆಲುವು ಪಡೆಯುವುದನ್ನು ಗುರುತಿಸುತ್ತೇವೆ. ತಾಯಿಯ ಮನಸ್ಸಿನ ದ್ವಂದ್ವಾತ್ಮಕತೆಯಲ್ಲಿ ಸ್ಥಾನ ಪಡೆದ ಪಟೇಲ ಶಾರದೆಯ ಮನಸ್ಸಿನಲ್ಲಿ ಸ್ಥಾನ ಪಡೆಯದಿರುವುದು, ಅವಳು ಅವನ ಅಸ್ತಿತ್ವವನ್ನು ನಿರಾಕರಿಸುವ ಸಂಕೇತವಾಗಿದೆ.

### ಬ. ಉದ್ಯೋಗಾನ್ವೇಷಣೆ ಮತ್ತು ಆಯ್ಕೆ : ಕೂಲಿ, ವ್ಯಾಪಾರ, ನೌಕರಿ ಇತ್ಯಾದಿ

ವ್ಯಾಸರಾವ್ ನಿಂಜೂರ ಅವರ 'ಉಸಿರು' ಕಾದಂಬರಿಯ ಪಡಮುನ್ನೂರಿನ ಗೇಣಿ ಒಡೆಯ ಅನಂತಯ್ಯನವರಿಗೆ ತಮ್ಮ ಹಿರಿಯ ಮಗ ಸಾಂಪ್ರದಾಯಿಕ ವೃತ್ತಿ(ಪೂಜೆ, ಗೇಣಿ ಜಮೀನುಗಳ ಉಸ್ತುವಾರಿ)ಯನ್ನು ಕೈಗೊಂಡು ತಮ್ಮ ಬಳಿಯಲ್ಲಿಯೇ ಇರಲು ಆಶಿಸುತ್ತಾರೆ. ನಾರಾಯಣ ಕುಗ್ರಾಮದಲ್ಲಿ ಬದುಕಲಿಚ್ಛಿಸದೆ ಉದ್ಯೋಗ ಅರಸಿ ನಗರಕ್ಕೆ ಹೋಗಿ ಹೋಟೆಲ್ ಸೇರಿ ಆರ್ಥಿಕ ಸ್ವಾತಂತ್ರ್ಯ ಪಡೆಯುವ ಆಸೆ ಹೊಂದಿದ್ದ ಯುವಕನಾಗಿದ್ದಾನೆ. ಒಂದು ದಿನ ಬ್ರಹ್ಮಚಾರಿ ಊಟಕ್ಕೆ ಹೋದವನು ಮೈಸೂರಿ(ನಗರ ಆಯ್ಕೆ)ಗೆ ಓಡಿ ಹೋಗಿ ಅಯ್ಯರಿ ಕ್ಯಾಂಟೀನಿನಲ್ಲಿ ಮಾಣಿಯಾಗಿ ಸೇರಿಕೊಳ್ಳುತ್ತಾನೆ. ವ್ಯಾಸರಾಯ ಬಲ್ಲಾಳ ಅವರ 'ಹೆಜ್ಜೆ' ಕಾದಂಬರಿಯ ತರ್ಕತೀರ್ಥ ಶ್ರೀಕಂಠಶಾಸ್ತ್ರಿಗಳ ಆಸೆಯೂ ಇದೆ ಆಗಿರುತ್ತದೆ. ಹಿರಿಯ ಮಗ ಗಂಗಾಧರ ತನ್ನಂತೆ ಶಾಸ್ತ್ರವಿದ್ಯಾಪಾರಂಗತನಾಗಲೆಂದು ಬಯಸುತ್ತಾರೆ. ಮುಂಗೋಪಿ ಮಗ ಮಾವನ ಸೂಚನೆಯಂತೆ ಹೋಟೆಲ್ ಹಾಕಲು ಅಪ್ಪನಿಗೆ ಚೀಟಿ ಬರೆದಿಟ್ಟು ಹೆಂಡತಿ ಮಗುವಿನೊಂದಿಗೆ ಸಕಲೇಶಪುರ(ನಗರ ಆಯ್ಕೆ)ಕ್ಕೆ ಹೊರಟು ಹೋಗುತ್ತಾನೆ. ಇಬ್ಬರು ಹಿರಿಯ ತಲೆಮಾರಿನ ವ್ಯಕ್ತಿಗಳು ಹೋಟೇಲ್ ಉದ್ಯಮ ಕುರಿತು ವಿಭಿನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಅನಂತಯ್ಯನವರು, "ಹೋಟೇಲು ಇಟ್ಟು ಎಂಜಲು ತೊಳೆಯುವ ಕೆಲಸ ಬ್ರಾಹ್ಮಣನಾಗಿ ಹುಟ್ಟಿ ಮಾಡುವುದು ವಂಶಕ್ಕೆ ಅಪಕೀರ್ತಿ"[೧೦] ಎಂಬ ಅರ್ಥದಲ್ಲಿ ಮಾತಾಡಿ, ಅದಕ್ಕೆ ಎಂಜಲು ತೊಳೆಯುವ ಕೆಲಸ ಎಂದು ಹೀನದೃಷ್ಟಿಯಿಂದ ನೋಡುತ್ತಾರೆ. ಶ್ರೀಕಂಠಶಾಸ್ತ್ರಿಗಳು, "ಊಟದ ಹೊತ್ತಿಗೆ ಬಂದವರಿಗೆ ಅವರು ಬ್ರಾಹ್ಮಣರಾದರೂ ಸರಿಯೆ, ಬೇರೆಯಾದರೂ ಸರಿಯೆ ಅನ್ನ ಇಕ್ಕುವುದು ಧರ್ಮ. ಈಗ ನನ್ನ ಮಗ ಅನ್ನವಿಕ್ರಯವನ್ನು ಜೀವನೋಪಾಯಕ್ಕಾಗಿ ಬಳಸಲು ಹೊರಟಿದ್ದಾನೆ. ಅನ್ನವಿಕ್ರಯ ಮಹಾಪಾಪ!"[೧೧] ಎಂಬ ಅಭಿಪ್ರಾಯ ವ್ಯಕ್ತಪಡಿಸಿ ಅನ್ನಕ್ಕೆ ದೈವತ್ವದ ಸ್ಥಾನ ಕಲ್ಪಿಸುತ್ತಾರೆ. ತಮ್ಮ ಮಗನ ಆಯ್ಕೆಯ ನಿರ್ಧಾರಕ್ಕೆ ನಗರ ಪ್ರಭಾವ ಕಾರಣ ಎಂಬ ಆಕ್ಷೇಪ ಅನಂತಯ್ಯನವರದು. ಆದರೆ ಶ್ರೀಕಂಠಶಾಸ್ತ್ರಿಗಳಿಗೆ ನಗರದ ಮೇಲೆ ಆಕ್ಷೇಪವಿಲ್ಲ. ಗ್ರಾಮೀಣ ಸಾವಯವ ಸಂಸ್ಕೃತಿಯನ್ನು ಮಗ ಸ್ವೀಕರಿಸಲಿಲ್ಲ ಎಂಬ ಅಸಮಾಧಾನವಿದೆ. ಅನ್ನವಿಕ್ರಯ ವೃತ್ತಿ ಕುರಿತು ಒಂದೇ ಜಾತಿಯ ಇಬ್ಬರು ಹಿರಿಯರ ದ್ವಂದ್ವ ಇದಾಗಿದೆ. ಆದರೆ ಗ್ರಾಮ ನಿರಾಕರಿಸಿ ಹೋಟೆಲ್ ಉದ್ಯಮ ಆಯ್ಕೆ ಮಾಡಿಕೊಂಡ ಮಕ್ಕಳ ದೃಷ್ಟಿಕೋನ ಒಂದೇ ಆಗಿದ್ದು, ಅದು ಹೊಸ ಸಂವೇದನೆಗೆ ತಮ್ಮನ್ನು ತಾವು ತೆರೆದುಕೊಂಡಿರುವುದು ಸ್ಪಷ್ಟವಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಮಕ್ಕಳ ವೃತ್ತಿಯ ಆಯ್ಕೆ ನಗರದ ಆಯ್ಕೆಯೂ ಆಗಿದ್ದು ಹಲವು ಒತ್ತಾಸೆಗಳನ್ನು ಒಳಗೊಂಡಿದೆ. ಸಂಪ್ರದಾಯವಾದಿ ಅಪ್ಪಂದಿರ ಕಪಿಮುಷ್ಟಿಯಿಂದ ಬಿಡುಗಡೆಗೊಳ್ಳಲು, ವ್ಯಾವಹಾರಿಕ ಜ್ಞಾನದ ಜೊತೆ, ಲೋಕಾಪವಾದದಿಂದ ಪಾರಾಗಲು ನಗರಗಳ ಆಯ್ಕೆ ನಡೆದಿದೆ ಎನ್ನಬಹುದು. ಹೊಸ ತಲೆಮಾರಿನ ಯುವಕರಿಗೆ ನಗರ ಬದುಕಿನ ಮೋಜು, ಸೌಲಭ್ಯಗಳನ್ನು ಅನುಭವಿಸುವ ಆತುರವೂ ಒಂದು ಕಾರಣವಾಗಿದೆ. ಶೂದ್ರ ಹುಡುಗರಿಗೆ ಜನಿವಾರ ಹಾಕಿ ಹೋಟೇಲ್ ಮಾಣಿಗಳನ್ನು ಮಾಡಲು ಗ್ರಾಮದ ವಾತಾವರಣದಲ್ಲಿ ವಿರೋಧವನ್ನು (ನಗರದಲ್ಲಿ ಈ ಗೊಂದಲವಿಲ್ಲ) ಎದುರಿಸಬೇಕಾಗುತ್ತದೆ. ಇಂತಹ ಆಯ್ಕೆಗಳಲ್ಲಿ ಹಣ ಮಾಡುವ ವ್ಯಾಪಾರಿಬುದ್ಧಿ, ಸಾಮಾಜಿಕ ವಂಚನೆ, ಸಂಪ್ರದಾಯವಾದಿಗಳ ಅರಿವಿಗೆ ಬಾರದಂತೆ ವರ್ಣವ್ಯವಸ್ಥೆಯ ನಿರಾಕರಣೆಯನ್ನು ಗಮನಿಸುತ್ತೇವೆ.

ಆರ್. ವಿ ಭಂಡಾರಿ ಅವರ 'ತಲೆಮಾರು' ಕಾದಂಬರಿಯ ಗಣಪನಿಗೆ ಆಸ್ತಿ ಇಲ್ಲ. ಆದ್ದರಿಂದ ಇವನ ಮಗ ವೀರೇಶ ದುಡಿದು ಓದಬೇಕು. 'ಅದಕ್ಕೆ ಸುಬ್ರಾಯ ಹೆಗಡೆಯವರ ಗದ್ದೆಯಲ್ಲಿ ಮತ್ತು ಮುಕುಂದ ಜೋಯ್ಸರ ತೋಟದಲ್ಲಿ ಕೂಲಿ ಮಾಡುತ್ತಾನೆ.'[೧೨] ಕೆಲವು ಯಕ್ಷಗಾನದ ಪ್ರಸಂಗಗಳಿಗೆ ಅರ್ಥ ಬರೆದು, ಯಕ್ಷಗಾನ ಕಲೆಯನ್ನು ಕೆಳಜಾತಿ ಮತ್ತು ಕೆಳವರ್ಗಗಳ ನೆಲೆಗೆ ಕೊಂಡೊಯ್ಯುತ್ತಾನೆ.

ಈ ಸಾಮಾಜಿಕ ಜಾಗೃತಿ ಮೇಲ್ವರ್ಗದಲ್ಲಿ ಕಿಚ್ಚು ಹಚ್ಚುತ್ತದೆ. ಶೂದ್ರ ಸಮುದಾಯದ ಹಿರಿಯರು ಇವನ ಕಾರ್ಯಗಳನ್ನು ಸಹಿಸದೆ ಇವನು ಯುವಕರನ್ನು ಹಾಳು ಮಾಡುತ್ತಿದ್ದಾನೆಂದು ಆರೋಪಿಸುತ್ತಾರೆ. ಇಂತಹ ಕೌಟುಂಬಿಕ, ಸಾಮಾಜಿಕ ಅಸ್ಥಿರತೆ ಅಥವಾ ಸಮಸ್ಯೆಗಳು ವೀರೇಶನನ್ನು ಆರ್ಥಿಕ ಮುಗ್ಗಟ್ಟಿಗೆ ತಳ್ಳಿದಾಗ ಅವನು ಅನಿವಾರ್ಯವಾಗಿ ಪತ್ರಿಕೆಯ ಕೆಲಸಕ್ಕೆ ಮಂಗಳೂರು ನಗರವನ್ನು ಆಯ್ಕೆ ಮಾಡಿಕೊಳ್ಳುತ್ತಾನೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಇದು ವೀರೇಶನ ವೈಯಕ್ತಿಕ ಆಯ್ಕೆಯಾಗಿ ನಿಲ್ಲುವುದಿಲ್ಲ, ಬದಲಾಗಿ ಅವನ ಪರಿಸರದ ಮೇಲ್ಜಾತಿ ಮತ್ತು ಅವನ ಜಾತಿಯ ಹಿರಿಯ ತಲೆಮಾರಿನ ಆಯ್ಕೆ(ಆತ ಕುಲವೃತ್ತಿ ಮಾಡಲಿ ಇಲ್ಲವೇ ಊರು ಬಿಡಲಿ)ಯಾಗಿ ನಿಲ್ಲುತ್ತದೆ. ವೀರೇಶನು ಕೂಲಿ ಮಾಡುತ್ತಲೇ ಇರಲಿ ಎಂಬುದು ಮೇಲ್ಜಾತಿಯವರ ಅಪೇಕ್ಷೆ, ತನ್ನ ಜಾತಿ ಕಸುಬಿನಲ್ಲೇ ಮುಂದುವರಿಯಲಿ ಎಂಬುದು ಅಪ್ಪ ಗಣಪನ (ಗಂಪ) ಒತ್ತಾಯ. ಇವು ವೀರೇಶನನ್ನು ದ್ವಂದ್ವಾತ್ಮಕತೆಗೆ ನೂಕಿದ ಕೌಟುಂಬಿಕ ಮತ್ತು ಸಾಮಾಜಿಕ ಒತ್ತಡಗಳಾಗಿವೆ. ಇವೆರಡೂ ಕೂಡ ವೀರೇಶನನ್ನು ಹಳೆಯ ಊಳಿಗಮಾನ್ಯಶಾಹಿ ವ್ಯವಸ್ಥೆಗೆ ಹೊಂದಿಕೊಂಡು ಹೋಗುವಂತೆ ಒತ್ತಾಯಿಸುತ್ತವೆ. ಹೀಗೆ ಒತ್ತಾಯಿಸಲು ಕಾರಣ ಅವನು ತನ್ನ ಜಾತಿಯದಲ್ಲದ ಯಕ್ಷಗಾನವನ್ನು ತನ್ನ ಜಾತಿ ನೆಲೆಗೆ ತಂದುದು, ಕೂಲಿ ಮಾಡುವಾಗ ತಾನು ಕುಡಿದ ಲೋಟವನ್ನು ತೊಳೆಯಲು ನಿರಾಕರಿಸಿದ್ದು, ಮೇಲ್ಜಾತಿ ಮತ್ತು ಕೆಳಜಾತಿಯ ವಿದ್ಯಾರ್ಥಿಗಳನ್ನು ಒಟ್ಟಾಗಿ ಊಟ ಮಾಡಲು ಒತ್ತಾಯಿಸಿದ್ದು. ಹಾಗಾಗಿ ಮೇಲ್ಜಾತಿಯವರು ವೀರೇಶನ ತಂದೆಯನ್ನೂ ಮತ್ತು ವೀರೇಶನ ಜಾತಿಯ ಹಿರಿಯರನ್ನೂ ತಮ್ಮ ಹಿತಾಸಕ್ತಿಗೆ ಪೂರಕವಾಗಿ ಮಾರ್ಪಡಿಸಿಕೊಂಡಿದ್ದಾರೆ. ಹೀಗೆ ಇವರ ಒಟ್ಟಾರೆ ಆರೋಪ ಮತ್ತು ಒತ್ತಡಗಳು ವೀರೇಶನಲ್ಲಿ ಗ್ರಾಮದ ನಿರಾಕರಣೆಯನ್ನೂ, ನಗರದ ಆಯ್ಕೆಯನ್ನೂ ಮುಂದಿಟ್ಟಿದೆ. ಪ್ರಸ್ತುತ ಕಾದಂಬರಿಯ ಇನ್ನೊಂದು ಪಾತ್ರ ಲೋಕೇಶ ಸಹ ಅಪ್ಪನಂತೆ ಮಾಸ್ತರ ಆಗದೆ ಓದಿ ನೌಕರಿಗೆ ಹುಬ್ಬಳ್ಳಿಯನ್ನು ಆಯ್ಕೆ ಮಾಡಿಕೊಳ್ಳುತ್ತಾನೆ. ಇಂಥ ಇನ್ನೊಂದು ಕೌಟುಂಬಿಕ ಮತ್ತು ಸಾಮಾಜಿಕ ಸಂಘರ್ಷ(ದ್ವಂದ್ವ)ವನ್ನು (ಬಂಡವಾಳಶಾಹಿ ನೆಲೆಯಲ್ಲಿ) ವ್ಯಾಸರಾಯ ಬಲ್ಲಾಳರ 'ಬಂಧಮುಕ್ತಿ' ಕತೆಯಲ್ಲಿ ಕಾಣುತ್ತೇವೆ. ಸಣ್ಣ ಗೇಣಿ ರೈತನ ಮಗ ಸಂಕಪ್ಪ ಪ್ರತಿಭಾವಂತ, ವಾಗ್ಮಿ, ಮತ್ತು ಉತ್ತಮ ಸಂಘಟನಾ ಚತುರನಾದ ತರುಣ. ತನ್ನ ಪ್ರತಿಭೆಗೆ ತಕ್ಕಂತೆ ಕೆಲಸ ಹುಡುಕುತ್ತ ಮುಂಬಯಿ ನಗರದ ಕಾರ್ಖಾನೆಯಲ್ಲಿ ಕೆಲಸಕ್ಕೆ ಸೇರಿ ಕಾರ್ಮಿಕ ಮುಖಂಡನಾಗುತ್ತಾನೆ. ಗ್ರಾಮದಲ್ಲಿ ಅಪ್ಪ ಜಮೀನ್ದಾರಿ ವ್ಯವಸ್ಥೆಯ ಕ್ರೌರ್ಯದ ಹಿಡಿತಕ್ಕೆ ಸಿಕ್ಕಿದ್ದಾನೆ. ಮಗ ನಗರದಲ್ಲಿ ಬಂಡವಾಳಶಾಹಿಗಳ ದೌರ್ಜನ್ಯಕ್ಕೆ ಹೋರಾಟ ನಿರತನಾಗಿದ್ದಾನೆ. ಊಳಿಗಮಾನ್ಯ ವ್ಯವಸ್ಥೆಯಿಂದ ದೂರ ಹೋಗುವ ಸಂಕಪ್ಪ, ಅದೇ ವ್ಯವಸ್ಥೆಯಲ್ಲಿ ಸಿಕ್ಕಿಕೊಂಡಿರುವ ಅಪ್ಪನನ್ನು ಬಿಡಿಸಲು (ಹಣ ಗಳಿಸಿ) ಬಂಡವಾಳಶಾಹಿ ವ್ಯವಸ್ಥೆಯ ಹಿಡಿತಕ್ಕೆ ಸಿಕ್ಕುವುದು, ಅಲ್ಲಿಯ ಶೋಷಣೆಯ ವಿರುದ್ಧ ಕಾರ್ಮಿಕ ಸಂಘಟನೆಯೊಡನೆ ಸೇರಿ ಹೋರಾಟ ಮಾಡುವುದು, ಎರಡು ಶೋಷಕ ವ್ಯವಸ್ಥೆಗಳ ಕ್ರೂರ ಅಂತರಾಳವನ್ನು ಹೊರಹಾಕುತ್ತದೆ.

### ಕೆಟ್ಟು ಪಟ್ಟಣ ಸೇರು

ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಮನುಷ್ಯರ ನಡವಳಿಕೆ, ಬದುಕುವ ರೀತಿಗಳು ಒಂದು ವ್ಯವಸ್ಥೆಯ ಮೌಲ್ಯವನ್ನು ಪ್ರತಿನಿಧಿಸುತ್ತವೆ. ಇಂತಹ ಮೌಲ್ಯಗಳಲ್ಲಿ ಕೊಂಚ ವ್ಯತ್ಯಾಸವಾದಾಗ ಆರ್ಥಿಕ, ಸಾಮಾಜಿಕ ದ್ವಂದ್ವಗಳು ಹುಟ್ಟಿಕೊಳ್ಳುತ್ತವೆ. ಈ ನೆಲೆಯಲ್ಲಿ 'ಕೆಟ್ಟು ಪಟ್ಟಣ ಸೇರು, ಸೋತು ಹಳ್ಳಿಗೆ ಮರಳು' ಎಂಬುದು ಹಳ್ಳಿಯಲ್ಲಿ ಇಂದಿಗೂ ಪ್ರಚಲಿತದಲ್ಲಿರುವ ನುಡಿಯಾಗಿದ್ದು, ಗ್ರಾಮ/ನಗರಗಳ ಆಯ್ಕೆಯನ್ನು ಕುರಿತು ಹೇಳಿದ್ದಾಗಿದೆ. ಒಬ್ಬ ವ್ಯಕ್ತಿ (ಅವರು ಪುರುಷ ಅಥವಾ ಮಹಿಳೆಯಾಗಿರಲಿ) ಕೆಟ್ಟು ಹೋಗಿದ್ದಾನೆ/ಳೆ ಎಂಬುದನ್ನು ಎರಡು ರೀತಿಯಿಂದ ಅರ್ಥೈಸಲಾಗುತ್ತದೆ. ವ್ಯಕ್ತಿಗಳು ದುಶ್ಚಟಗಳಿಗೆ ಬಲಿಯಾಗಿ ವ್ಯಕ್ತಿತ್ವ, ಆರೋಗ್ಯ ನಷ್ಟ ಮಾಡಿಕೊಳ್ಳುವುದು ಮೊದಲನೆಯ ಸಂದರ್ಭವಾದರೆ, ಹಲವಾರು ಸಮಸ್ಯೆಗಳಲ್ಲಿ ಸಿಲುಕಿ ಆರ್ಥಿಕ ನಷ್ಟಕ್ಕೆ ಒಳಗಾಗುವುದು ಇನ್ನೊಂದು ಸಂದರ್ಭದ ಅರ್ಥವಾಗಿದೆ. ಇಂದಿನ ಜಾಗತೀಕರಣದ ಸಂದರ್ಭದಲ್ಲಿಯೂ ವ್ಯಕ್ತಿ/ಕುಟುಂಬಗಳು ವ್ಯಕ್ತಿತ್ವ, ಆರೋಗ್ಯ, ಆರ್ಥಿಕ ಭದ್ರತೆ ಕಳೆದುಕೊಂಡು ಕೆಟ್ಟು ಪಟ್ಟಣ (ನಗರ ಆಯ್ಕೆ) ಸೇರುವುದು ಕಥನ ಸಾಹಿತ್ಯದಲ್ಲಿ ನಿರಂತರವಾಗಿ ಕಂಡುಬರುವ ಸಂಗತಿಯಾಗಿದೆ.

ವ್ಯಾಸರಾವ್ ನಿಂಜೂರ್ ಅವರ 'ಮಂಚ' ಕಥೆಯ ದಾಸಣ್ಣ ಹೆಗ್ಡೆ ನಡತೆ, ವ್ಯವಹಾರ, ವೈಭೋಗದಲ್ಲಿ ಮಾವ ಮೇಣ್ಕ ಹೆಗಡೆಯ ಮಾರ್ಗದಲ್ಲಿಯೇ ನಡೆದವನು. ಆದಷ್ಟು ಗುತ್ತಿನ ಮನೆಯ ಅಳಿದುಳಿದ

ನಗ, ನಾಣ್ಯ, ಪಾತ್ರೆ ಪರಡಿಗಳನ್ನೋ, ಕಾಯಿ, ಅಡಿಕೆ, ಭತ್ತ, ಧಾನ್ಯಗಳನ್ನೋ ಮಾರಿ ತನ್ನ ವಿಲಾಸ ವೈಭೋಗಕ್ಕೆ ಕುಂದುಬರದಂತೆ ನೋಡಿಕೊಳ್ಳುತ್ತಾನೆ. ನೂರಾರು ಜನ ಗೇಣಿ ರೈತರ ಶ್ರಮ, ನಿಷ್ಠೆಯಿಂದ ಕಟ್ಟಿದ ಗುತ್ತಿಮನೆ ಎಂಬ ಭೂ ಒಡೆಯರ ಸಂಪತ್ತು ದುಶ್ಚಟಗಳಿಗೆ ಬಲಿಯಾದ ಒಡೆಯರಿಂದ ವಿನಾಶದ ಅಂಚಿನತ್ತ ನಡೆದ ರೀತಿಯನ್ನು ಅಧ್ಯಯನ ಗುರುತಿಸುತ್ತದೆ. ಕೋಲ ನಡೆಯುವಾಗ ಪೂಜಾರಿ ಚೀಂಕ್ರನ ಹೆಂಡತಿ ಯಶೋದೆಯನ್ನು ಹಾಡಿಯಲ್ಲಿ ಮಾನಭಂಗಕ್ಕೆ ಪ್ರಯತ್ನಿಸಿದ ದಾಸಣ್ಣ ಅವಳ ಗಂಡನಿಂದ ಏಟು ತಿಂದು, 'ನಿನ್ನ ಹೆಂಗಸನ್ನು ಕಂಡಕಂಡವರಿಗೆ ಕಣ್ಣು ಮಿಟುಕಿಸುವ ಲೌಡಿಯಾಗಿ ಮಾಡದಿದ್ದರೆ ನಾನು ಅಪ್ಪನಿಗೆ ಹುಟ್ಟಿದವನೇ ಅಲ್ಲ'[೧೩] ಎಂದು ಶಪಥ ಮಾಡಿ ಮುಂಬಯಿಗೆ ಓಡಿಹೋಗುತ್ತಾನೆ. ಕುಸುಮಾಕರ ದೇವರಗೆಣ್ಣೂರು ಅವರ 'ಸಿರಿಂಧ್ರಿಯ' ಕಾದಂಬರಿಯ ರೊಳ್ಳಿಯ ಮನೆತನವೂ ಸಹ ಅನೇಕ ದುಶ್ಚಟಗಳಿಗೆ ಬಲಿಯಾದ ಕುಟುಂಬವಾಗಿದೆ. ರೊಳ್ಳಿ ಕುಟುಂಬದ ನಾಲ್ವರು ಮಕ್ಕಳು ದೊಂಬಿ, ಗಲಾಟೆ, ಜಗಳ ಕಳ್ಳತನಗಳಿಂದ ತಮ್ಮ ಹೊಲಗಳನ್ನು ಒಂದೊಂದಾಗಿ ಕಳೆದುಕೊಳ್ಳುತ್ತಾರೆ. ಗ್ರಾಮದಲ್ಲಿನ ಪ್ರತಿಷ್ಠಿತ ಎರಡು ಮನೆತನಗಳ ನಡುವಿನ ದ್ವೇಷ, ಅಸೂಯೆಗಳಿಂದ ಶಾಲೆ ಮುಚ್ಚಿ, ಕೋರ್ಟು, ಕಛೇರಿಗೆ ಹಣ ಸುರಿದು ನಾಶದ ಅಂಚಿಗೆ ನಡೆದಾಗ ಯಜಮಾನನಿಗೆ ತನ್ನ ತಪ್ಪಿನ ಅರಿವಾಗಿ, 'ಕೆಟ್ಟ ಮೇಲೆ ಬುದ್ಧಿ ಬಂತು'[೧೪] ಎಂದು ಮಕ್ಕಳಿಗೆ ಹೇಳಿ ಅವರವರ ದಾರಿ ನೋಡಿಕೊಳ್ಳಲು ತಿಳಿಸುತ್ತಾನೆ. ಏಳುವರ್ಷ ಮಾವನ ಮನೆಯಲ್ಲಿ ಓದಿದ್ದ ಕಲ್ಲಪ್ಪ ರೊಳ್ಳಿ ಈ ಸ್ಥಿತಿಯಲ್ಲಿ ಮುಂದೆ ಓದಲಾರದೆ ಚಿಕ್ಕ ನೌಕರಿ ಹಿಡಿದು ಮುಂಬಯಿಗೆ ಹೊರಡುತ್ತಾನೆ. ಒಂದು ಇಡೀ ಕುಟುಂಬ ಕೆಟ್ಟಾಗ, ಸ್ವವಿಮರ್ಶೆ ಮಾಡಿಕೊಳ್ಳುವ ಜಾಣ ವ್ಯಕ್ತಿಯಾಗಿ ಕಲ್ಲಪ್ಪ ಉದ್ಯೋಗಕೇಂದ್ರಿತ ಸ್ಥಳ ಮುಂಬಯಿಯನ್ನು ಆಯ್ಕೆ ಮಾಡಿಕೊಳ್ಳುವುದು ಕಂಡುಬರುತ್ತದೆ.

ಶಾಂತಿನಾಥ ದೇಸಾಯಿ ಅವರ 'ಬೀಜ' ಕಾದಂಬರಿಯ ಅಪ್ಪಾಸಾಹೇಬ ಪಾಟೀಲರ ಮಗ ಶ್ರೇಯಾಂಸ ಅಪ್ಪನ ವಿರುದ್ಧ ಬಂಡೆದ್ದ ಯುವಕ. ಹೈಸ್ಕೂಲ ಓದುವಾಗಲೇ ಸಿಗರೇಟು, ಬೀರ್ ಕುಡಿದು ಅಭ್ಯಾಸವಿದ್ದ ಶ್ರೇಯಾಂಶ ಬದುಕನ್ನು ಗಂಭೀರವಾಗಿ ಪರಿಗಣಿಸಿದವನಲ್ಲ. ಸಾಮ್ಯವಾದವನ್ನು ಮೆಚ್ಚಿಕೊಂಡು ಯಾಜಮಾನ್ಯ ಸಂಸ್ಕೃತಿಯನ್ನು ಗ್ರಾಮೀಣ ನೆಲೆಯಲ್ಲಿ ವಿರೋಧಿಸುತ್ತ ಬಂದ ಶ್ರೇಯಾಂಸನ ಮೊದಲ ವಿರೋಧಿ ಅವರಪ್ಪನಾಗಿದ್ದಾನೆ. ಅಪ್ಪನ ವಿರುದ್ಧ, ಸಮಾಜ ವ್ಯವಸ್ಥೆಯ ವಿರುದ್ಧ, ಮಾರ್ಕ್ಸ್, ಎಂಗೆಲ್ಸ್, ಲೆನಿನ್ ಮುಂತಾದವರ ವಿಚಾರಗಳನ್ನು ಪ್ರತಿಪಾದಿಸುತ್ತ ಕ್ರಾಂತಿ, ವಿದ್ರೋಹ, ಹೋರಾಟ, ಸಮಾನತೆಗಳ ಬಗ್ಗೆ ಭಾಷಣ ಬಿಗಿಯುತ್ತಿದ್ದವನು ರೇವತಿ ಎಂಬ ಬೇರೆ ಜಾತಿಯ ಹುಡುಗಿಯನ್ನು ಪ್ರೀತಿಸಿ, ಅವಳನ್ನು ಕೃಷ್ಣಾಪುರದಲ್ಲಿಯೇ ಬಿಟ್ಟು ಉಟ್ಟ ಬಟ್ಟೆಯಲ್ಲಿಯೇ ಮುಂಬಯಿಗೆ ಓಡಿ ಹೋಗುತ್ತಾನೆ. ಶ್ರೇಯಾಂಸ ಅಪ್ಪನಿಗೆ ಬರೆದ 'ನಾನು ನಿಮ್ಮ ವ್ಯಕ್ತಿತ್ವದ ವಿರುದ್ಧ ಹೋರಾಟ ಮಾಡಲು ಮಾರ್ಕ್ಸವಾದಿಯಾದೆ, ಸೋಸಿಯಲಿಸ್ಟಾದೆ, ನಾಸ್ತಿಕನಾದೆ, ನಿಮ್ಮ ಮನಸ್ಸಿಗೆ ಶಾಕ್ ಕೊಡಲಿಕ್ಕೆ ಬೇರೆ ಜಾತಿಯ ಹುಡುಗಿಯನ್ನು ಪ್ರೀತಿಸಿದೆ. ಈಗ ಬೇರೆ ಧರ್ಮದ ಹುಡುಗಿಯನ್ನು ಮದುವೆಯಾಗಿದ್ದೇನೆ. ನಿಮ್ಮ ಇಡೀ ಸರಂಜಾಮಿ ವ್ಯವಸ್ಥೆಯನ್ನು ನಿರಾಕರಿಸಲು'[೧೫] ಎಂಬ ಪತ್ರ ಅವನ ವೈಚಾರಿಕ ನೆಲೆಗೆ ಭದ್ರ ತಳಪಾಯವಿಲ್ಲದಿರುವುದನ್ನು ಸಮರ್ಥಿಸುತ್ತದೆ. ಯಾವ ಸರಂಜಾಮಿ ವ್ಯವಸ್ಥೆಯನ್ನು ನಿರಾಕರಿಸಿ ಬಂದಿದ್ದನೋ, ಆ ವ್ಯವಸ್ಥೆಯ ಪ್ರತಿನಿಧಿಯಾಗಿ ಕೃಷ್ಣಾಪುರ(ಗ್ರಾಮ)ವು ಸಾತತ್ಯದಿಂದ ಅವನ ಮೇಲೆ ಪ್ರಭಾವ ಬಿರಿ ದಾಳಿ ಮಾಡುತ್ತಲೇ ಇರುವುದನ್ನು ಶ್ರೇಯಾಂಸ ಒಪ್ಪಿಕೊಳ್ಳುತ್ತಾನೆ (ಪುಟ ೧೫೫). ಇದು ಗ್ರಾಮವೊಂದು ನಗರವನ್ನು ಪ್ರಭಾವಿಸುವ ಅದ್ಭುತ ರೀತಿಯೆನ್ನಬಹುದು. ಸಾಮಾಜಿಕ ಭದ್ರತೆ, ಆರ್ಥಿಕ ಭದ್ರತೆ ಹೊಂದಿದ ಗ್ರಾಮ/ನಗರಗಳ ಮೇಲ್ಜಾತಿಯ ಅನೇಕ ಕುಟುಂಬಗಳು, ಕುಟುಂಬ ಸದಸ್ಯರ ವಿಷಯಲೋಲುಪತೆಯಿಂದ, ದುಶ್ಚಟಗಳಿಗೆ ಬಲಿಯಾಗಿ ನಾಶದತ್ತ ಸರಿದು, ಸದಸ್ಯರು ಸಾಮಾಜಿಕ ಅಪಮಾನ ಸಹಿಸದೆ ನಗರವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಓಡಿ ಹೋಗು, ಪುಡ್ಚೋ ಮಾಡು, ಬೆನ್ನಿಗೆ ಕಾಲ್ಕೊಡು ಎಂಬ ಕಥನದಲ್ಲಿ ಬರುವ ವಾಕ್ಯಗಳು ಕೆಟ್ಟು ಪಟ್ಟಣ ಸೇರು ಎಂಬ ಕ್ರಿಯೆಯನ್ನು ಸಮರ್ಥಿಸುವ ಪದಗಳಾಗಿವೆ. ದಾಸಣ್ಣ, ಕಲ್ಲಪ್ಪ ರೊಳ್ಳಿ (ದುಷ್ಟರಿಂದ ದೂರವಿರಲು) ಮತ್ತು ಶ್ರೇಯಾಂಶನಂತವರು (ಅಪ್ಪನನ್ನು ವಿರೋಧಿಸಲು) ಬೆನ್ನಿಗೆ ಕಾಲ್ಕೊಟ್ಟು ಮುಂಬಯಿ ಆಯ್ಕೆ ಮಾಡಿಕೊಳ್ಳುವುದು ಒಂದು ಸಾಮಾಜಿಕ ವ್ಯವಸ್ಥೆಯ ಸೋಲು ಎಂದೇ ಅರ್ಥೈಸಬಹುದಾಗಿದೆ.

### ಲೈಂಗಿಕ ಶೋಷಣೆ ಮತ್ತು ಆಯ್ಕೆ

ಎಲ್ಲ ಕಾಲದಲ್ಲೂ, ಎಲ್ಲ ಸಮಾಜದಲ್ಲೂ ದ್ವಿತೀಯ ದರ್ಜೆಯ ಪ್ರಜೆಯಾಗಿರುವ ಮಹಿಳೆ ಲಿಂಗಾಧಾರಿತ, ಅರ್ಥಾಧಾರಿತ ಅಸಮಾನತೆಗೆ ಒಳಗಾಗಿದ್ದಾಳೆ. ಹೀಗಾಗಿ ಯಾವುದೇ ಸಮಾಜದ ಮಹಿಳೆಯ ಶೋಷಣೆಯ ಸ್ತರ ಹೆಚ್ಚು ಸಂಕೀರ್ಣವಾದುದಾಗಿದೆ. ಶೋಷಣೆಯ ಸಂದರ್ಭದಲ್ಲಿ ಶೋಷಿತರಾದ ಕೆಳವರ್ಗದ ಪುರುಷರ ಸ್ಥಿತಿಗಿಂತ, ಕೆಳವರ್ಗದ ಮಹಿಳೆಯರ ಸ್ಥಿತಿ ಇನ್ನೂ ಚಿಂತಾಜನಕವಾಗಿದ್ದು, ಶೋಷಕರು ಸವರ್ಣೀಯ ಪುರುಷರೊಂದಿಗೆ, ಕೆಳವರ್ಗದ ಪುರುಷರೂ ಆಗಿರುವುದು ಲೈಂಗಿಕ ಶೋಷಣೆಯ ತೀವ್ರತೆಯನ್ನು ತೋರಿಸುತ್ತದೆ. ಪುರುಷರ ಶೋಷಣೆ ಆರ್ಥಿಕ, ಸಾಮಾಜಿಕ ಸ್ತರದಲ್ಲಿ ನಡೆದರೆ ಮಹಿಳೆಯ ಶೋಷಣೆ ಇವುಗಳೊಂದಿಗೆ ಲೈಂಗಿಕ ಶೋಷಣೆಯನ್ನು ಒಳಗೊಂಡಿರುತ್ತದೆ. ಸಾಮಾಜಿಕ, ಆರ್ಥಿಕ, ಲೈಂಗಿಕ ಶೋಷಣೆಗೆ ಒಳಗಾದ ಮಹಿಳೆಯ ನಿರಾಕರಣೆಯ ನಂತರದ ಮುಂದಿನ ಆಯ್ಕೆಗಳ ಕುರಿತು ಪ್ರಸ್ತುತ ಕಥನ ಸಾಹಿತ್ಯ ವಿವರಿಸುತ್ತದೆ.

ಬಸವರಾಜ ಕಟ್ಟೀಮನಿ ಅವರ 'ಬೀದಿಯಲ್ಲಿ ಬಿದ್ದವಳು' ಕತೆಯ ಯಮುನೆ ಊಳಿಗಮಾನ್ಯ ವ್ಯವಸ್ಥೆಯ ಭೂಮಾಲೀಕ ವರ್ಗದಿಂದ ಮಾತ್ರ ಲೈಂಗಿಕ ಶೋಷಣೆಗೆ ಒಳಗಾಗುವುದಿಲ್ಲ. ಬಾಲ್ಯದಲ್ಲಿ ಪ್ರೀತಿಸಿದ ಗೌಡರ ಮನೆಯಾಳು ರಾಮ, ಗಂಡ ಭೀಮ, ಚಿಕ್ಕಯ್ಯಿಯ ಮಲ್ಲ, ಸಾವುಕಾರ ಸಿದ್ದಲಿಂಗಪ್ಪ ಹೀಗೆ ಜಾತಿ, ಮತ, ವರ್ಗ ಬೇಧವಿಲ್ಲದ ಇಡೀ ಪುರುಷ ವರ್ಗದಿಂದ ಮಾನಸಿಕ, ದೈಹಿಕ ಶೋಷಣೆಗೆ ಒಳಗಾಗುತ್ತಾಳೆ. ಸ್ವಂತ ತಂದೆ ತಾಯಿಯರು ಅವಳನ್ನು ಗೌಡನ ಕಣ್ಣುಗಳಿಂದ ದೂರ ಕಳಿಸಲು ಗಂಡನ ಮನೆಗೆ ತಳ್ಳಿ ಸಾಮಾಜಿಕ ಅಭದ್ರತೆಯತ್ತ ನೂಕುತ್ತಾರೆ. ಯಮುನೆ ಹೆಂಡ ಕುಡಿಯುವುದನ್ನು ಕಲಿಯುವುದು ಮಾನಸಿಕ ನೆಮ್ಮದಿ ಪಡೆಯಲು ಎಂಬ ಕಾದಂಬರಿಯ ವಿಡಂಬನೆ ನಿರೂಪಕರ ಸಮಜಾಯಿಸುವಿಕೆಯಾಗುತ್ತದೆ. ಇಲ್ಲಿ ಇಡೀ ಗ್ರಾಮೀಣ ಸಮಾಜವೇ ಒಬ್ಬ ಅಸಹಾಯಕ ಹೆಣ್ಣನ್ನು ಕ್ರೂರವಾಗಿ ನಡೆಸಿಕೊಳ್ಳುತ್ತದೆ. ಆಶ್ಚರ್ಯವೆಂಬಂತೆ ಕೆಟ್ಟುಹೋದ ಮಹಿಳೆಯಾಗಿ, ಯಮುನೆಯ ಆಯ್ಕೆ ನಗರವಾಗಿರದೆ ಸಾವಿನ ಆಹ್ವಾನವಾಗಿದೆ. ಸಾವನ್ನು ಬಯಸಿ ಹೊರಟ ಅವಳು ತಲೆಹಿಡುಕ ಬಾಟ್ಲಿ ಬಾಬುವಿಗೆ ಸಿಕ್ಕು ನಗರದ ವೇಶ್ಯಾವಾಟಿಕೆ ಸೇರುವುದು ಸಹ ವ್ಯವಸ್ಥೆಯ ವ್ಯಂಗ್ಯವೇ ಸರಿ. ಶಾಂತಾದೇವಿ ಕಣವಿ ಅವರ 'ಗುಳದಾಳಿ' ಕತೆಯ ಚೆನ್ನಿ ತನ್ನ ಕುಟುಂಬದ ಸದಸ್ಯರಿಂದ ದೈಹಿಕ, ಮಾನಸಿಕ ಶೋಷಣೆ ಮತ್ತು ಬಂಡವಾಳಶಾಹಿ ವ್ಯವಸ್ಥೆಯಿಂದ ಲೈಂಗಿಕ ಶೋಷಣೆಗೊಳಗಾಗಿ ನಗರವನ್ನು ಆಯ್ಕೆ ಮಾಡಿಕೊಂಡ ಅಸಹಾಯಕ ಮಹಿಳೆಯಾಗಿದ್ದಾಳೆ. ಯಮುನೆಯ ಲೈಂಗಿಕ ಶೋಷಣೆಯ ಹಂತದಲ್ಲಿ ಕಾಣಿಸುವ ಎಲ್ಲ ಸಂಕೀರ್ಣತೆಗಳು ಇಲ್ಲಿಯೂ ಕಾಣಿಸಿಕೊಳ್ಳುತ್ತವೆ. ಕಳೆದುಹೋದ ಗುಳದಾಳಿಗೆ ಮುಗ್ಧ ಹುಡುಗಿಯ ಮೇಲೆ ತಾಯಿ ಮಾಡುವ ದೈಹಿಕ ದಾಳಿ, ಅವಳ ಆರ್ಥಿಕ ಅಸಹಾಯಕತೆಯನ್ನು ಶೋಷಣೆಯ ಅವಕಾಶವಾಗಿ ಉಪಯೋಗಿಸಿಕೊಂಡು ಹಣ ಎಣಿಸಿದ ಮೇಸ್ತ್ರಿ, ರಂಗಪ್ಪ ಮುಂತಾದವರು, ರಾತ್ರಿ ಬಂದು ಹೋಗುವ ಪುರುಷವರ್ಗದವರು ಮಹಿಳಾ ಶೋಷಣೆಯ ಅಂಗಗಳಾಗುತ್ತಾರೆ. ಸೌಂದರ್ಯವೆ ಶಾಪವಾಗಿ ಕಾಡುವ ಇಂಥ ಕೆಳವರ್ಗದ ಮಹಿಳೆಯರು ಶೀಲ ಕಳೆದುಕೊಂಡು ಕೆಟ್ಟು ಹೋದಾಗ ಬಹುತೇಕ ಆಯ್ಕೆ ಮಾಡಿಕೊಳ್ಳುವುದು ಪಟ್ಟಣವನ್ನು ಎಂಬುದು ಸ್ಪಷ್ಟವಾಗಿದೆ. ಶ್ಯಾಮಲಾ ಬೆಳಗಾಂವಕರ ಅವರ 'ಕರುಳ ಕತ್ತರಿ' ಕತೆಯ ಚಂದ್ರಳೂ ಸಹ ಗ್ರಾಮದ ಪುಂಡುಪೋಕರಿಗಳ, ಅಷ್ಟೇಕೆ ಹೆತ್ತ ತಂದೆತಾಯಿಗಳ ದೌರ್ಜನ್ಯ ಸಹಿಸಲಾರದೆ ಸಮೀಪದ ಪಟ್ಟಣವನ್ನು (ವೆಂಕಣ್ಣನಾಯ್ಕರ ಉಪಪತ್ನಿಯಾಗಿ) ಆಯ್ಕೆ ಮಾಡಿಕೊಳ್ಳುವುದು ಇದೇ ನೆಲೆಯಲ್ಲಿಯೆ ಎನ್ನಬಹುದು. ಚೆನ್ನಿ, ಯಮುನೆ, ಚಂದ್ರ, ಉಸಿರು ಕಾದಂಬರಿಯ ಶಾರದೆಯ ತಾಯಿ, ಮಂಚ ಕತೆಯ ಯಶೋದೆ, ಚಂಬಿ ಕತೆಯ ಚಂಬಿ ಇವರೆಲ್ಲರ ಹೆಸರು, ಶೋಷಣೆಯ ಸ್ತರ ಬೇರೆ ಬೇರೆಯಾಗಿದ್ದರೂ ನೋವು ಒಂದೇ ಆಗಿದೆ. 'ಸಾಯಬೇಕೆಂದು ಹೋದಿನಿ. ಸತ್ತರ ಚಲೋ ಆಗ್ತಿತ್ತು. ಅದೂ ದೈವದ ಮನಸ್ಸಿಗೆ ಬರಲಿಲ್ಲೇನೊ. ಮತ್ತೇ ಉಳೀತು ಈ ಪಾಪಿ ಜೀವ. ಇಲ್ಲಿಗೆ ಬಂದನಿ'[೧೬] ತನ್ನ ಆಯ್ಕೆಯನ್ನು ವಿಧಿವಾದಕ್ಕೆ ಒಪ್ಪಿಸುವ ಯಮುನೆ, 'ಬವಳಿ ಬಂದು ರಸ್ತೇದಾಗ ಬಿದ್ದಾಕಿನ್ನ ಎಬ್ಬಿಸಿ ತಂದು ಒಂದು ಸೂರು ಮಾಡಿಕೊಟ್ಟಾವನ ರಂಗಪ್ಪ'[೧೭] ಎಂದು ಲೈಂಗಿಕವಾಗಿ ಶೋಷಿಸಿದ್ದ ರಂಗಪ್ಪನನ್ನೇ ಆಶ್ರಯಿಸುವ ಚೆನ್ನಿ, 'ಹೆಣತಿ ಮ್ಯಾಲ ಜೀವ ಮಾಡಿದ್ಯಾಂಗ ನನ್ನ ಮ್ಯಾಲೆ ಸಹ ಜೀವಾ ಕಳ್ಕೋತಾರ'[೧೮] ಎಂದು ಇಟ್ಟುಕೊಂಡವನನ್ನೇ ಹೊಗಳಿ ಸಮರ್ಥಿಸುವ ಚಂದ್ರ, ವಿಧಿವಾದದಲ್ಲಿ ನಂಬಿಕೆ ಇಟ್ಟು ವ್ಯವಸ್ಥೆಯ ವಿರುದ್ಧ ಸಿಡಿದೇಳಲಾರದ ಅಸಹಾಯಕರೆಂದು

ತೀರ್ವಾನಿಸಬಹುದು. ಆದರೆ 'ಅದೃಷ್ಟ'(Fate)ದ ಕಲ್ಪನೆಯೂ ವರ್ಗ ಚಿಂತನೆಯ ಸೂತ್ರಗಳಿಗಾನುಸಾರವಾಗಿ ಹೆಣೆಯಲ್ಪಟ್ಟಿರುವ ವರ್ಗ ಶೋಷಣೆಯ ಒಂದು ಸಾಧನ' ಎಂಬುದನ್ನು ಅರಿಯದ ಮುಗ್ಧರು ಇವರಾಗಿದ್ದಾರೆ. ಕೆಳವರ್ಗದ ಹೆಣ್ಣನ್ನು ಭೋಗದ ವಸ್ತುವಾಗಿ ಪರಿಗಣಿಸುವಲ್ಲಿ ಶೂದ್ರವರ್ಗ, ವೈದಿಕಶಾಹಿಗಿಂತ ಯಾವ ರೀತಿಯಿಂದಲೂ ಭಿನ್ನವಾಗಿಲ್ಲ ಎಂಬುದನ್ನು ಈ ಸಂದರ್ಭಗಳಲ್ಲಿ ಅರಿಯಬಹುದು. ಹೆಣ್ಣಿನ ಮನಸ್ಸಿನ ಸೂಕ್ಷ್ಮ ವ್ಯಾಪಾರಗಳನ್ನು ಭಾಷೆಯಲ್ಲಿ ಹಿಡಿದಿಡುವ, ಲೈಂಗಿಕತೆಯ ಪ್ರಧಾನ ಭೂಮಿಕೆಯ ಮೇಲೆ ಸೃಷ್ಟಿಯಾದ ಇಂತಹ ಕಥನಗಳು ಪ್ರಸ್ತುತ ಸಾಹಿತ್ಯದಲ್ಲಿ ದಾಖಲಾಗಿವೆ. ಮಹಿಳಾ ಲೈಂಗಿಕ ಶೋಷಣೆ ಎನ್ನುವುದು ಜಾತಿ, ವರ್ಗ ಬೇಧವಿಲ್ಲದೆ ಸಾರ್ವತ್ರಿಕವಾಗಿದ್ದು, ಅಲ್ಲೆಲ್ಲ ನ್ಯಾಯ ಪುರುಷರ ಪರವಾಗಿದ್ದು ಮಹಿಳೆ ಶೋಷಿತಳಾಗುತ್ತಾಳೆ ಎಂಬ ನಿಲುವಿಗೆ ಅಧ್ಯಯನ ಬರುತ್ತದೆ.

ಪ್ರಸ್ತುತ ಕಥನ ಸಾಹಿತ್ಯದಲ್ಲಿ ವ್ಯಕ್ತಿಗಳು ಶಿಕ್ಷಣ, ಉದ್ಯೋಗ ಕೇಂದ್ರಿತ ಸ್ಥಳಗಳನ್ನು ಆಯ್ಕೆ ಮಾಡಿಕೊಳ್ಳಲು ಕಾರಣವಾಗುವ ಅಂಶಗಳನ್ನು ಅಧ್ಯಯನ ಹೀಗೆ ಗ್ರಹಿಸುತ್ತದೆ. • ಮಧ್ಯಮ ವರ್ಗದ, ಶ್ರೀಮಂತ ಕುಟುಂಬಗಳ ನಗರ ಆಯ್ಕೆಗೆ ಕಾರಣವಾಗುವ ಅಂಶಗಳು ಮನುಷ್ಯನ ಮೂಲಭೂತ ಅವಶ್ಯಕತೆ(ಅನ್ನ, ಬಟ್ಟೆ, ಆಶ್ರಯ)ಗಳ ನಂತರ ಬೇಕಾಗುವ ಅಗತ್ಯತೆಗಳಾದ ಶಿಕ್ಷಣ, ವ್ಯಾಪಾರ, ಉದ್ದಿಮೆಗಳ ಸ್ಥಾಪನೆ ಮುಂತಾದ ಕಾರ್ಯಕ್ಷೇತ್ರಕ್ಕೆ ನಗರವನ್ನು ಆಯ್ಕೆ ಮಾಡಿಕೊಳ್ಳುವುದು ಕಂಡುಬರುತ್ತದೆ. • ಶಿಕ್ಷಣ ಕೇಂದ್ರಿತ ವ್ಯವಸ್ಥೆಯ ಆಯ್ಕೆಯ ಸಂದರ್ಭಗಳಲ್ಲಿ ಗ್ರಾಮದ ಕುಟುಂಬಗಳು ತಮ್ಮ ಆರ್ಥಿಕಸ್ಥಿತಿ, ಗ್ರಾಮ-ನಗರಗಳ ಸಂಪರ್ಕ ಸೌಲಭ್ಯಗಳತ್ತ ಗಮನ ಹರಿಸುವುದನ್ನು ಗಮನಿಸುತ್ತೇವೆ. ಗ್ರಾಮೀಣ ವಿದ್ಯಾರ್ಥಿಗಳು ಕುಟುಂಬದ ಉತ್ಪನ್ನ, ಶಾಲಾ/ಕಾಲೇಜು ಶುಲ್ಕ, ವಿದ್ಯಾರ್ಥಿನಿಲಯಗಳ ಖರ್ಚುಗಳಿಗೆ ತಕ್ಕಂತಹ ಆಯ್ಕೆಯನ್ನು ಮಾಡಿಕೊಳ್ಳುತ್ತಾರೆ. • ನಗರದ ವ್ಯಕ್ತಿ ಅಥವಾ ಕುಟುಂಬಗಳು ಜ್ಞಾನಕ್ಷೇತ್ರದ ವ್ಯಾಪ್ತಿಯಲ್ಲಿ ತಂತ್ರಜ್ಞಾನ, ಪ್ರಗತಿಪಥದ ವಿವರಗಳು ಪ್ರಕಟಗೊಳ್ಳುವ ಸೌಲಭ್ಯಗಳನ್ನು ಗ್ರಹಿಸುವುದು ಕಂಡುಬರುತ್ತದೆ. ತಾನು ಮತ್ತು ತನ್ನ ಜ್ಞಾನಕ್ಷೇತ್ರಗಳು ಸ್ವಪ್ರಕಟಗೊಳ್ಳುವ (Self exposing) ವಿಧಾನಗಳು ಮತ್ತು ಆಧುನಿಕ ಜಗತ್ತಿಗೆ ತಲುಪುವ ವೇಗದತ್ತ ನಗರದ ವಿದ್ಯಾರ್ಥಿಗಳು ದೃಷ್ಟಿನೆಟ್ಟಿರುವುದು ಗಮನಾರ್ಹವಾಗಿದೆ. • ದುಶ್ಚಟಗಳಿಗೆ ಬಲಿಯಾಗಿ ಆರ್ಥಿಕವಾಗಿ ತೊಂದರೆಗೀಡಾದ ವ್ಯಕ್ತಿ ಕೆಟ್ಟು ಪಟ್ಟಣ ಸೇರುವುದು ಕಥನ ಸಾಹಿತ್ಯದಲ್ಲಿ ದಾಖಲಾಗಿದೆ. • ಪುರುಷನಿಷ್ಠ ಸಮಾಜದಲ್ಲಿ ಲೈಂಗಿಕ ಶೋಷಣೆಗೆ ಬಲಿಯಾದ ದಲಿತ, ಕೆಳವರ್ಗದ ಮಹಿಳೆಯರು ನಗರ ಆಶ್ರಯಿಸುವುದು (ಆಯ್ಕೆ) ಕಂಡುಬರುತ್ತದೆ.

**ಕ. ಆಂತರಿಕ ತುಡಿತಗಳು/ಮಹತ್ವಾಕಾಂಕ್ಷೆ ಮತ್ತು ಆಯ್ಕೆ**

'ಬೆಳೆಯುವ ಸಿರಿ ಮೊಳಕೆಯಲ್ಲಿ ನೋಡು' ಎಂಬ ಮಾತಿನಂತೆ ಪ್ರತಿಯೊಬ್ಬ ವ್ಯಕ್ತಿಯ ಜೀವನದ ಗುರಿ ಅವರ ಬಾಲ್ಯ ಸಹಜ ಬಯಕೆ, ಆಸಕ್ತಿ, ಆಕಾಂಕ್ಷೆಗಳಲ್ಲಿ ವ್ಯಕ್ತವಾಗುತ್ತದೆ. ಚಿಕ್ಕ ಪುಟ್ಟ ಬಯಕೆಗಳು ಆಸೆಗಳಾಗಿ ವ್ಯಕ್ತವಾದರೆ, ಸಾಧಿಸಬೇಕಾದ ದೊಡ್ಡ ಬಯಕೆಗಳು ಮಹತ್ವಾಕಾಂಕ್ಷೆಗಳೆನಿಸಿಕೊಳ್ಳುತ್ತವೆ. ತಮ್ಮ ಆಸೆ, ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳುವ ಆಂತರಿಕ ತುಡಿತ ಅವರಲ್ಲಿ ಸದಾ ಪ್ರವಹಿಸುತ್ತಿದ್ದು, ಅದು ಅವರ ಗ್ರಾಮ/ನಗರ ನಿರಾಕರಣೆ ಮತ್ತು ಆಯ್ಕೆಯ ಘಟ್ಟದಲ್ಲಿ ಪ್ರಕಟವಾಗುತ್ತದೆ. ವಿವಿಧ ವರ್ಗಕ್ಕೆ ಸೇರಿದ ಜನರ ಆಂತರಿಕ ತುಡಿತ ಯಾವ ಮೌಲ್ಯದ್ದು, ಅದಕ್ಕೆ ಅವರ ಪಾಲಕರ, ಪೋಷಕರ ಸಮಾಜದ ಪ್ರತಿಕ್ರಿಯೆ, ಪ್ರೋತ್ಸಾಹ ಎಂತಹುದು, ಇವರ ಆಯ್ಕೆಯ ಪರಿಣಾಮ ವ್ಯಕ್ತಿ, ಸಮುದಾಯ, ಸಮಾಜದ ಮೇಲೆ ಹೇಗೆ ಪರಿಣಾಮ ಬೀರುತ್ತವೆ ಮುಂತಾದ ವಿಷಯಗಳನ್ನು ಕಥನ ಸಾಹಿತ್ಯದಲ್ಲಿ ಅರಸಬಹುದು.

ಅಶೋಕ ಹೆಗಡೆ ಅವರ 'ಅಪ್ಪ' ಕತೆಯ ಮನೋಹರನ ತಂದೆ ಎಲ್ಲರಂತೆ ಕೇವಲ ಅಪ್ಪನಾಗಿರದೆ, ಮಗನಿಗೆ ಒಬ್ಬ ಬೌದ್ಧಿಕ ಸಂಗಾತಿಯಾಗಿರುತ್ತಾನೆ. ಜಾತಿವಿನಾಶ, ಶೋಷಣೆ, ಕ್ರಾಂತಿ, ಹೋರಾಟ ಮುಂತಾದ ಆದರ್ಶದ ಭ್ರಮೆಗಳನ್ನು ಬೆಳೆಸಿಕೊಳ್ಳುತ್ತ ಓದಿ, ಅಧ್ಯಾಪಕನಾಗಿ ಬೆಂಗಳೂರಿಗೆ ಹೊರಟು ನಿಂತ ಮನೋಹರನ ಗುರಿ ಸಾಮಾಜಿಕ ಬದಲಾವಣೆ ತರುವುದಾಗಿದೆ. ಸಾಮಾಜಿಕ ಬದಲಾವಣೆ, ಹೊಸ ಮನ್ವಂತರಗಳು ಬಾಯಿಯಿಂದ ಸಾಧಿಸುವ ಕೆಲಸಗಳಲ್ಲ, ಕೃತಿಯ ಮೂಲಕ ಸಾಧಿಸುವ ಛಲವಿರಬೇಕು ಎನ್ನುವ ಅಪ್ಪ ಸಂಪ್ರದಾಯವಾದಿ, ಆದರೆ ಶೋಷಕನಲ್ಲ (ಹೊಲೆಯರ ಸುಬ್ಬುವಿಗೆ ಹೆಗಡೆ ಹೊಡೆಯುತ್ತಿದ್ದಾಗ ಹೆಗಡೆಗೆ ಎರಡು ತಪರಾಕಿ ಬಿಟ್ಟು ಬಿಡಿಸಿದವ). ತಂದೆ ಮಕ್ಕಳ ಈ ಸ್ವಭಾವ

ಭಿನ್ನತೆ ಮಗನಲ್ಲಿ ಆಕಾಂಕ್ಷೆಯಾಗಿ ಬೆಳೆದು ಅವನ ಸುತ್ತಲೂ ಒಂದು ಸುಂದರ ಗೋಡೆಯನ್ನು ಕಟ್ಟಿದಾಗ, ಸುಂದರ ಕನಸಿಗೆ ಬೆರಗಾಗಿ ಮಗ ನಗರವನ್ನು ಆಯ್ಕೆ ಮಾಡಿಕೊಳ್ಳುತ್ತಾನೆ. ವಿಜಾಪುರದ ಅಣ್ಣನ ಮನೆಯಲ್ಲಿ ಓದುತ್ತಿದ್ದ, ವೀಣಾ ಶಾಂತೇಶ್ವರ ಅವರ 'ಶೋಷಣೆ ಬಂಡಾಯ ಇತ್ಯಾದಿ' ಕಾದಂಬರಿಯ ಕಮಲ ಹುನಗುಂದವೆಂಬ ಗ್ರಾಮದ ಹುಡುಗಿ.

'ಆಕೆಯ ಪಾಠದಲ್ಲಿನ ಜಾಣ್ಮೆ, ಅಭಿನಯದಲ್ಲಿನ ಆಸಕ್ತಿ, ಉಕ್ಕುವ ಉತ್ಸಾಹ, ಸಂಪ್ರದಾಯದ ವಿರುದ್ಧ ಬಂಡೇಳುವ ಪ್ರವೃತ್ತಿ, ಸ್ವಾತಂತ್ರ್ಯಪ್ರಿಯತೆ, ಜೀವನೋತ್ಸಾಹ ತುಂಬಿ ಚೆಲ್ಲುವ ಚೆಲುವೆಯಾಗಿದ್ದ ಕಮಲಾ.'[೧೯]

ಎಂಬ ವಾಕ್ಯಗಳು ಗ್ರಾಮೀಣ ಬಾಲೆಯೊಬ್ಬಳ ಪ್ರತಿಭೆಗೆ ಸಾಕ್ಷಿಯಾಗಿವೆ. ಬಾಲ್ಯದಲ್ಲಿ 'ನನ್ನ ಜೀವನದ ಗುರಿ' ವಿಷಯ ಕುರಿತು ನಿಬಂಧ ಬರೆದು, ಕಮಲ ಅಭಿನಯದ ಬಗ್ಗೆ ತನಗಿರುವ ಪ್ರೀತಿ, ಸೆಳೆತ ವರ್ಣಿಸಿ ತಾನೊಬ್ಬ ದೊಡ್ಡ ಅಭಿನೇತ್ರಿಯಾಗುವ ಮಹತ್ವಾಕಾಂಕ್ಷೆಯನ್ನು ಪ್ರಕಟಪಡಿಸುತ್ತಾಳೆ. ಆಕಸ್ಮಿಕ ಹೃದಯಾಘಾತದಿಂದ ಕಮಲಾಳ ಅಣ್ಣ ತೀರಿಕೊಳ್ಳುತ್ತಾನೆ. ಅವನ ಇಬ್ಬರು ಅಲ್ಪಾವಯಿ ಮಕ್ಕಳ(ರಾಜ, ನೀಲಾ)ನ್ನು ನೋಡಿಕೊಳ್ಳುವುದು ತನ್ನ ನೈತಿಕ ಹೊಣೆಯೆಂದು ಕಮಲಾ ತಿಳಿಯುತ್ತಾಳೆ. ಇದಕ್ಕಾಗಿ ನೌಕರಿಯ ಹುಡುಕಾಟದಲ್ಲಿದ್ದ ಅವಳಿಗೆ ಶಿವಮೂರ್ತಿ(ಮುಂಬಯಿಯ ಡೈರೆಕ್ಟರ್)ಯಿಂದ 'ರಸಿಕಕೂಟ'ದ ನಾಟಕಗಳಲ್ಲಿ ಖಾಯಂ ಆಗಿ ಅಭಿನಯಿಸುವ ಆಹ್ವಾನ ಬರುತ್ತದೆ. ಕಮಲಳಿಗೆ ಬಯಸಿದ ಭಾಗ್ಯ ಬಾಗಿಲಿಗೆ ಬಂದಂತಾಗುತ್ತದೆ. ತಾನು ಮಹಾನ್ ನಟಿಯಾಗುವ ಮಹತ್ವಾಕಾಂಕ್ಷೆಯನ್ನು ಈಡೇರಿಸಿಕೊಳ್ಳಲು, ಕಮಲ ಮುಂಬಯಿಗೆ ಹೋಗುವ (ಆಯ್ಕೆ) ನಿರ್ಧಾರ ತೆಗೆದುಕೊಳ್ಳುತ್ತಾಳೆ.

ಮನೋಹರ ಮತ್ತು ಕಮಲ ಇಬ್ಬರೂ ಮಧ್ಯಮ ವರ್ಗದ ಕುಟುಂಬಗಳಿಂದ ಬಂದವರು. ಮನೋಹರನಿಗೆ ಅನುಭವಿ ಅಪ್ಪ ಇದ್ದಂತೆ, ಕಮಲಳಿಗೆ ಬುದ್ಧಿಜೀವಿಯಾದ ಶಶಿ ಎಂಬ ಸ್ನೇಹಿತೆಯಿದ್ದಾಳೆ. ಇವರಿಬ್ಬರ ಸಲಹೆಗಳು ಒಂದೇ ಆಗಿವೆ. ಅಪ್ಪ ಮನೋಹರನಿಗೆ,

> 'ಕ್ರಾಂತಿಗೆ ಕೇವಲ ದಾಯಿಯಾಗಿ, ನಗರದಲ್ಲಿ ನಿನ್ನನ್ನು ನೀನು ಹುಡುಕುತ್ತ ಕಳೆದುಹೋಗುವುದಕ್ಕಿಂತ, ಹೊಲೆಯರ ಗುತ್ತ್ಯಾ ರಾಮರ ಜೊತೆ ಆತ್ಮೀಯವಾಗಿ ಸ್ಪಂದಿಸುತ್ತ ಸೃಷ್ಟಿಕ್ರಿಯೆ (ಕೃಷಿ)ಯಲ್ಲಿ ತೊಡಗುವುದು ಪ್ರಕೃತಿಯೊಂದಿಗಿನ (ವಾಸ್ತವದ) ದೊಡ್ಡ ಕ್ರಾಂತಿ'[೨೦]

ಎಂದು ಆಯ್ಕೆಯನ್ನು ಸೂಚಿಸುತ್ತಾನೆ. ಶಶಿ ಕಮಲಳಿಗೆ 'ಇದೇನು ಹುಚ್ಚು ತಲೆಗೇರಿಸಿಕೊಂಡಿ ನೀನು. ಲಗ್ನಾದ ಮ್ಯಾಲ ಬೇಕಾದರ ಟೈಮು ಸಿಕ್ಕರ ಕಲಾಸೇವಾ-ಸುಡುಗಾಡು ಏನಾದ್ರೂ ಮಾಡು' (ಪುಟ ೨೩) ಎಂಬ ಸಲಹೆಯನ್ನು ಕೊಡುತ್ತಾಳೆ. ಕೌಟುಂಬಿಕ, ಸಾಮಾಜಿಕ ಜವಾಬ್ದಾರಿ ಹೊರುವಂತಹ ಈ ಸಲಹೆಗಳು ತಿರಸ್ಕೃತವಾಗುವುದು ಇವರಿಬ್ಬರ ಆಂತರಿಕ ತುಡಿತ(ದ್ವಂದ್ವ)ದ ತೀವ್ರತೆಯಾಗಿದೆ. ಒಂದೆಡೆ ಗ್ರಾಮ, ತಂದೆ(ಸೃಜನಶೀಲತೆ)ಯ ರೂಪದಲ್ಲಿ, ಇನ್ನೊಂದೆಡೆ ನಗರ ಆದರ್ಶವೆಂಬ ಆಕರ್ಷಣೆಯ ರೂಪದಲ್ಲಿ ಸೆಳೆದಿವೆ. ವಯೋಮಾನಕ್ಕನುಗುಣವಾದ ಆಕರ್ಷಣೆಯ ಬಲ(Force) ಇಲ್ಲಿ ಗೆಲುವು ಸಾಧಿಸಿದೆ. ಇದಕ್ಕೆ ಕಾರಣ ಇವರ ವಯೋಮಾನಕ್ಕೆ ಬದ್ಧವಾದ ಆಸೆ, ಆಕಾಂಕ್ಷೆಗಳು ಎನ್ನಬಹುದು. ರೋಸನಾಳ ನೀಳಕಾಯ, ಪ್ರಮಿಳಾ ಬಂಡ್ಸೆಯ ಸಿಡಿಯುವ ಮಾತುಗಳು, ಮೇರಿ ಡಿಸಿಲ್ವಾಳ ಮಾದಕತೆಗಳು ಮನೋಹರನನ್ನು ಆಕರ್ಷಿಸಿದರೆ, ಶಿವಮೂರ್ತಿಯ ವ್ಯಕ್ತಿತ್ವ ಕಮಲಳನ್ನು ನಗರದತ್ತ ಸೆಳೆಯುತ್ತವೆ. ಈ ಮಾತನ್ನು ಒಪ್ಪುವುದಾದರೆ, ಯುವ ಜನಾಂಗದ ಆದರ್ಶ, ಮಹತ್ವಾಕಾಂಕ್ಷೆಗಳು ಕೇವಲ ಬಾಹ್ಯಾಕರ್ಷಣೆ, ಅತಾರ್ಕಿಕ ಸಿದ್ಧಾಂತಗಳಿಗೆ ಸೀಮಿತವೆಂದು ತಿಳಿಯಬಹುದಾಗಿದೆ. ಕಮಲ ತನ್ನ ಅಣ್ಣನ ಸಂಸಾರದ ಜವಾಬ್ದಾರಿಯನ್ನು ಹೊರುವುದು ಮಹಿಳೆ ಮಹತ್ವಾಕಾಂಕ್ಷೆಯ ಜೊತೆಗೆ ಕೌಟುಂಬಿಕ ಜವಾಬ್ದಾರಿಯ ನಿರ್ವಹಣೆಗೆ ಬದ್ಧಳಾಗಿರುವುದನ್ನು ತೋರಿಸುತ್ತದೆ. ಭವಿಷ್ಯದ ಕುರಿತು ಭವ್ಯ ಕನಸನ್ನು ಕಂಡು, ಕೌಟುಂಬಿಕ, ಸಾಮಾಜಿಕ ಜವಾಬ್ದಾರಿ ಮರೆತ ಹಾಗೂ ಪ್ರಕೃತಿ ಕುರಿತ ನಿರ್ಲಕ್ಷ ತಾಳುವ ಯುವ ಜನಾಂಗದಿಂದ ಯಾವ ಸಾಮಾಜಿಕ ಬದಲಾವಣೆ ಸಾಧ್ಯ ಎಂಬ ಪ್ರಶ್ನೆ ಎದುರಾಗುತ್ತದೆ.

ಇದು ಮಧ್ಯಮ ವರ್ಗಕ್ಕೆ ಸೇರಿದ ಕುಟುಂಬದ ಯುವಕ/ಯುವತಿಯರ ಮಹತ್ವಾಕಾಂಕ್ಷೆಯ ಧೋರಣೆಯಾದರೆ, ಮೇಲ್ವರ್ಗದ ಮಕ್ಕಳಿಗೆ ತಮ್ಮ ಆಸೆ, ಆಕಾಂಕ್ಷೆಗಳನ್ನು ಅಭಿವ್ಯಕ್ತಿಸುವ ಸ್ವಾತಂತ್ರ್ಯವೂ ಇಲ್ಲವಾಗಿದೆ. ವ್ಯಾಸರಾವ್ ನಿಂಜೂರ ಅವರ 'ಉಸಿರು' ಕಾದಂಬರಿಯ ರವಿ ಕೃಷಿ, ಬಯಲಾಟ,

ಯಕ್ಷಗಾನಗಳಲ್ಲಿ ಅಪಾರ ಆಸಕ್ತಿ ಹೊಂದಿದ ಯುವಕ. ಕೋಟಿಗಟ್ಟಲೆ ಹಣ, ಅಡಿಕೆ ತೋಟಗಳ ಒಡೆಯರಾದ ಆಡ್ಯನಡ್ಕದ ಸುಭ್ರಾಯಭಟ್ಟರಿಗೆ ಮಗನನ್ನು ಓದಿಸಿ ಇಂಜನಿಯರ್ ಮಾಡುವ ಮಹತ್ವಾಕಾಂಕ್ಷೆ ಇರುತ್ತದೆ. ಹಳೆ ತಲೆಮಾರಿನ ಅಪ್ಪಂದಿರ ಅಹಂ ಮತ್ತು ಹೊಸ ತಲೆಮಾರಿನ ಮಕ್ಕಳ ಚಿಂತನಾಕ್ರಮಗಳ ಮುಖಾಮುಖಿ ದ್ವಂದ್ವ ಕಾದಂಬರಿಯಲ್ಲಿ ಪ್ರಕಟವಾಗಿದೆ. ಆದರೆ ತಂದೆಯ ಎದುರಿಗೆ ರವಿ ತನ್ನಿಷ್ಟ ಹೇಳಲೂ ಅಂಜುವ ಕೌಟುಂಬಿಕ ಬಿಗಿ ಹಿಡಿತ ಇಲ್ಲಿ ಕಂಡುಬರುತ್ತದೆ. 'ನನಗೆ ಈಗಲೂ ಯಥಾರ್ಥವಾಗಿ ಅನ್ನಿಸುವುದು ಏನಂದರೆ, ಈ ಓದು ಈ ಪಟ್ಟಣದ ನಾಗರಿಕತೆ, ಈ ಶುಷ್ಕತೆ ಇವೆಲ್ಲಕ್ಕೂ ನಮೋನಮಃ ಹೇಳಿ ಹಳ್ಳಿಗೆ ಹೋಗೋಣ, ಮಣ್ಣಿಗೆ ಮೈಕೊಟ್ಟು ದುಡಿಯೋಣ ಅಂತ'[೨೧] ಎಂದು ಗೆಳೆಯ ಕೇಶವನ ಹತ್ತಿರ ಹೇಳಿಕೊಳ್ಳುವ ರವಿಯಂತೆ, ಅನೇಕ ಯುವಕರು ಅಪ್ಪಂದಿರ ಆಕಾಂಕ್ಷೆಯ ಬಂಧಿಗಳಾಗಿದ್ದಾರೆ. ಅಪ್ಪ ಮಗ, ಗಂಡ ಹೆಂಡತಿ ಇತ್ಯಾದಿ ಕೌಟುಂಬಿಕ ಸಂಬಂಧಗಳ ಬಿಗಿಪಟ್ಟು ಯುವ ಜನಾಂಗದ ಮೇಲೆ ಬೀರುವ ನೇತ್ಯಾತ್ಮಕ ಪರಿಣಾಮಗಳನ್ನು ಇಲ್ಲಿ ಗುರುತಿಸಬಹುದಾಗಿದೆ. ಪರಂಪರಾಗತ ಮನಸ್ಸು ಹಾಗೂ ವೈಯಕ್ತಿಕ ಅಪೇಕ್ಷೆಗಳ ಸಂಘರ್ಷ(ದ್ವಂದ್ವ)ದಲ್ಲಿ ಯುವ ಮನಸ್ಸುಗಳ ಗೋಜಲು, ಸಂಕೀರ್ಣ ಅವಸ್ಥೆಯನ್ನು ರವಿಯಲ್ಲಿ ಕಾಣುತ್ತೇವೆ. ಇಂತಹ ಸಂಘರ್ಷದಲ್ಲಿ ಅಪ್ಪನ ಹಠಕ್ಕೆ ರವಿ ಸೋತು ನಗರ ಆಯ್ಕೆ ಮಾಡಿಕೊಳ್ಳುತ್ತಾನೆ.

ಇನ್ನು, ಕೆಳವರ್ಗದ ಕುಟುಂಬದ ಸದಸ್ಯರ ಚಿಕ್ಕಪುಟ್ಟ ಆಸೆ, ಕನಸುಗಳಿಗೆ ಮನುಷ್ಯ ಸಹಜ ಮಹತ್ವಾಕಾಂಕ್ಷೆ ಎಂದು ಕರೆಯಲು ಹಿಂದೇಟು ಹಾಕುವ ಮನೋಭಾವವನ್ನು ಕಥನ ಸಾಹಿತ್ಯದಲ್ಲಿ ಕಾಣುತ್ತೇವೆ. ಚಂದ್ರಕಾಂತ ಕುಸನೂರ ಅವರ 'ಚರ್ಚಗೇಟ್' ಕಾದಂಬರಿಯ ರಾಮ ಪ್ರತಾಪನ ಸಿನೆಮಾ ಸೇರಿ ನಟನಾಗುವ ಬಯಕೆ ಕಾದಂಬರಿ ನಿರೂಪಕರ ದೃಷ್ಟಿಯಲ್ಲಿ ಬೆಲೆಯಿಲ್ಲದ ಬಯಕೆಯಾಗಿದೆ. 'ಗುಜರಾತನ ಯಾವುದೋ ಒಂದು ಸಣ್ಣ ಹಳ್ಳಿಯಲ್ಲಿ ಹುಟ್ಟಿದ ರಾಮ ಪ್ರತಾಪನನ್ನು ಅವನ ಸಿನೆಮಾ ಹುಚ್ಚು ಮುಂಬಯಿಗೆ ಕರೆತರುತ್ತದೆ'[೨೨] ಎಂಬ ನಿರೂಪಕರ ಮಾತು ಕೆಳವರ್ಗದ ಪಾತ್ರಗಳ ಆಸೆ, ಆಕಾಂಕ್ಷೆಗಳನ್ನು 'ಹುಚ್ಚು' ಎಂದು ಜರಿಯುವುದು ಸ್ಥಾಪಿತ ಹಿತಾಸಕ್ತಿಯ ಮನೋಭಾವವೆನ್ನಬಹುದು. ಶಾಲೆಗೆ ಚಕ್ಕರ್ ಹೊಡೆದು ಕುಟುಂಬವನ್ನು ತ್ಯಜಿಸಿ ಬಂದ ರಾಮಪ್ರತಾಪ ತನ್ನ ಗುರಿ ಸಾಧಿಸದೇ ಇರಬಹುದು, ಆದರೆ ಉನ್ನತ ಸಾಧನೆಯನ್ನು ಮಾಡುವ ಉದ್ದೇಶದಿಂದ ನಗರ ಆಯ್ಕೆ ಮಾಡುವುದು ಕಂಡುಬರುತ್ತದೆ. ವ್ಯಾಸರಾಯ ಬಲ್ಲಾಳ ಅವರ 'ಹೆಜ್ಜೆ' ಕಾದಂಬರಿಯಲ್ಲಿ, ಶ್ರೀಕಂಠಶಾಸ್ತ್ರಿಗಳ ಮನೆಯ ಹೊರಗಿನಾಳು (ಇಲ್ಲಿ ಸಾಂಪ್ರದಾಯಿಕ ಕುಟುಂಬಗಳು ಕೆಳವರ್ಗದ ಮಹಿಳೆಯರನ್ನು ಮನೆಯೊಳಗಿನ ಕೆಲಸಕ್ಕೆ ಬಿಟ್ಟುಕೊಳ್ಳದಿರುವುದು ಗಮನಾರ್ಹ) ರುಕ್ಕು (ಇನ್ನೊಬ್ಬ ಹೊರ ಆಳು ಅಣ್ಣುವಿನ ಹೆಂಡತಿ) ರಾಧು ಎಂಬ (ಸಿನೆಮಾ ನಟಿ?) ಹೆಂಗಸಿನೊಂದಿಗೆ ಹೆಚ್ಚಿನ ಕೂಲಿ ಗಳಿಸಲು ಮುಂಬಯಿಗೆ ಹೊರಟು ಹೋಗುತ್ತಾಳೆ. ಅವಳ ಆಯ್ಕೆಯನ್ನು ಚರ್ಚಿಸುತ್ತ, ತರ್ಕತೀರ್ಥ ಶ್ರೀಕಂಠಶಾಸ್ತ್ರಿಗಳು 'ಬೊಂಬಾಯಿಯಲ್ಲಿ ಈ ನಿರಕ್ಷರಕುಕ್ಷಿ ಮನೆಕೆಲಸದಾಳಿಗೆ ಸಿಗುವ ಕೆಲಸವಾದರೂ ಏನು!' (೨೪೯) ಎಂಬ ಆತಂಕ ವ್ಯಕ್ತಪಡಿಸಿದರೆ, ವೆಂಕಟೇಶ ಶಾಸ್ತ್ರಿಗಳು ಅವಳು ವೇಶ್ಯಾವೃತ್ತಿಗೆ ಇಳಿಯುವುದು ಖಂಡಿತ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. 'ಮೈ ಮಾರಿ ಸಂಪಾದಿಸಿದ ಹಣವೂ ದೇವರ ಮುಡಿಪಿಗೆ ಬರಬೇಕೆ? .. .. ಶಿವಶಿವಾ ! ಇನ್ನು ರುಕ್ಕು ಕೂಡ ಹಾಗಾಗುತ್ತಾಳೆಂದು ನಿಮಗನ್ನಿಸುವುದೆ'[೨೩] ಈ ರೀತಿ ಇಬ್ಬರು ಮೇಲ್ಜಾತಿಯ ಹಿರಿಯರ ಅಭಿಪ್ರಾಯಗಳು ದಲಿತ ಮಹಿಳೆಯೊಬ್ಬಳ ಆಸೆ, ಆಕಾಂಕ್ಷೆ ಮತ್ತು ಆಯ್ಕೆಯನ್ನು ನೋಡುವ ದೃಷ್ಟಿಕೋನ ವಿಭಿನ್ನವಾಗಿದೆ. ಜೊತೆಗೆ ನಗರವೆಂಬ ಆಧುನಿಕತೆ ಗ್ರಾಮೀಣ ಸಾಂಪ್ರದಾಯಿಕ ಮನಸ್ಸುಗಳನ್ನು ಒಂದೆಡೆ ಖುಷಿಪಡಿಸುತ್ತ ಇನ್ನೊಂದೆಡೆ ಆತಂಕ ಸೃಷ್ಟಿಸುತ್ತ, ಗ್ರಾಮ ನಗರಗಳ ಸಾತತ್ಯವನ್ನು ಹಿಡಿದಿಡುವ ರೀತಿ ಅದ್ಭುತವಾಗಿದ್ದು, ಕಥನ ಸಾಹಿತ್ಯ ಈ ಅದ್ಭುತವನ್ನು ದಾಖಲಿಸಿದೆ. ಶೋಷಿತ ಮಹಿಳೆಯೊಬ್ಬಳ ಊಳಿಗಮಾನ್ಯ ವ್ಯವಸ್ಥೆಯ ನಿರಾಕರಣೆ, ಸ್ವತಂತ್ರವಾಗಿ ಬದುಕುವಾಸೆಯ ನಗರ ಆಯ್ಕೆಗಳು ವೇಶ್ಯಾವೃತ್ತಿಯಂತಹ ಕಸುಬುಗಾರಿಕೆಯ ಅನುಮಾನದೊಂದಿಗೆ ಸುತ್ತುವುದು (ಅವಳು ಅಸಹಾಯಕತೆಯಿಂದ ಮುಂದೆ ಅದೇ ವೃತ್ತಿಯನ್ನು ಅವಲಂಬಿಸಬಹುದು, ಅದು ಬೇರೆ ವಿಚಾರ) ಪರಂಪರಾಗತ ಮನಸ್ಸುಗಳ ರೋಗಗ್ರಸ್ತ ಸ್ಥಿತಿಗೆ ಹಿಡಿದ ಕನ್ನಡಿಯಾಗಿದೆ. ಕೆಳವರ್ಗದ ವ್ಯಕ್ತಿಗಳು ಮೇಲ್ವರ್ಗದ, ಸುಶಿಕ್ಷಿತ ವ್ಯಕ್ತಿಗಳಂತೆ ಯಾವುದೇ ಮಾನಸಿಕ, ಆರ್ಥಿಕ ಸಿದ್ಧತೆ ಮಾಡಿಕೊಳ್ಳದೆ ಅಚಾನಕವಾಗಿ ಗ್ರಾಮ/ನಗರ ಆಯ್ಕೆ ಮಾಡಿಕೊಳ್ಳುತ್ತಾರೆ. ಕುಟುಂಬದ ಇತರ ಸದಸ್ಯರಿಗೂ ತಿಳಿಸುವ, ಅನುಮತಿ ಪಡೆಯುವ ಸಂಪ್ರದಾಯವನ್ನೂ ಇವರು ಮೀರುತ್ತಾರೆ ಎನ್ನಬಹುದು.

ಪ್ರಸ್ತುತ ಕಥನ ಸಾಹಿತ್ಯ ಆಸೆ, ಮಹತ್ವಾಕಾಂಕ್ಷೆಗಳ ನೆಲೆಯಲ್ಲಿ ವ್ಯಕ್ತಿಗಳ ಗ್ರಾಮ/ನಗರ ಆಯ್ಕೆಯ ಕಾರಣಗಳನ್ನು ಹೀಗೆ ಗ್ರಹಿಸಿದೆ. * ಬಡವ ಮತ್ತು ಶ್ರೀಮಂತ ಇಬ್ಬರಲ್ಲೂ ಆಸೆ, ಮಹತ್ವಾಕಾಂಕ್ಷೆಗಳು ಜೀವನಾಸಕ್ತಿಯನ್ನು ಚಿಗುರಿಸುವ ಅಂಶಗಳಾಗಿವೆ. ಇವುಗಳನ್ನು ಪೂರೈಸಲು/ಸಾಧಿಸಲು ಗ್ರಾಮ/ನಗರ ಹೊಸನೆಲೆಯ ಆಯ್ಕೆ ಮಾಡಿಕೊಳ್ಳುತ್ತಾರೆ. ಅಂತವರಲ್ಲಿ ಆಯ್ಕೆಯ ದ್ವಂದ್ವ ಕಂಡುಬರುತ್ತದೆ. * ಮಧ್ಯಮ ವರ್ಗದ ಪುರುಷ/ಮಹಿಳೆಯರು (ಕಮಲ, ರಾಮಪ್ರತಾಪ) ಕಲಾವಿದರಾಗಿ ಹೆಸರು ಗಳಿಸುವ ಆಸೆ ಹೊತ್ತು ನಗರ ಸೇರುತ್ತಾರೆ. * ಅಪ್ಪ ಅಮ್ಮಂದಿರ ಆಸೆ, ಆಕಾಂಕ್ಷೆಗಳನ್ನು ಈಡೇರಿಸಲು ಮಕ್ಕಳು (ಉಸಿರು ಕಾದಂಬರಿಯ ರವಿ) ಗ್ರಾಮ/ನಗರವನ್ನು ಆಯ್ಕೆ ಮಾಡಿಕೊಳ್ಳುವುದು ಸಾಹಿತ್ಯದಲ್ಲಿ ದಾಖಲಾಗಿದೆ. ಇಂತಹ ಮಕ್ಕಳ ಮಾನಸಿಕ ದ್ವಂದ್ವ ತಂದೆ ತಾಯಿಯರ ಮೇಲೆ ಯಾವ ಪರಿಣಾಮವನ್ನು ಬೀರುವುದಿಲ್ಲ. * ಗ್ರಾಮೀಣ ಮುಗ್ಧ ಬಾಲಕ/ಬಾಲಕಿಯರು ಬೆಳ್ಳಿ ತೆರೆಯಲ್ಲಿ ನಟರಾಗುವ ಆಸೆ ಹೊತ್ತು ನಗರ ಆಯ್ಕೆ ಮಾಡಿಕೊಳ್ಳುವುದು ಕಂಡುಬರುತ್ತದೆ.

**ಡ. ಗ್ರಾಮ/ನಗರ ಕುತೂಹಲ, ಆಕರ್ಷಣೆ ಮತ್ತು ಆಯ್ಕೆ**

'ಲೋಕೋ ಭಿನ್ನಃ ರುಚಿ' ಎಂಬ ಮಾತಿನಂತೆ ಅಭಿರುಚಿ, ಆಸಕ್ತಿ, ಕುತೂಹಲ, ಆಕರ್ಷಣೆಗಳು ವ್ಯಕ್ತಿಯಿಂದ ವ್ಯಕ್ತಿಗೆ ವಿಭಿನ್ನವಾಗಿರುವುದು ಕಂಡುಬರುತ್ತದೆ. ವ್ಯಕ್ತಿಗಳಲ್ಲಿ ಗ್ರಾಮ/ನಗರ ನಿರಾಕರಣೆಗೆ ಕಾರಣವಾದ ಅಂಶಗಳು ಏನೇ ಇದ್ದರೂ, ಅವರ ವ್ಯಕ್ತಿತ್ವದ ಮೇಲೆ ಗ್ರಾಮ/ನಗರಗಳು ಮಾಡಿದ ಆಕರ್ಷಣೆ ಕೆಲವು ಸಂದರ್ಭಗಳಲ್ಲಿ ಗ್ರಾಮ/ನಗರ ಆಯ್ಕೆಯ ಮೇಲೆ ಪ್ರಭಾವ ಬೀರುತ್ತದೆ. ವ್ಯಕ್ತಿ, ವಸ್ತು, ಸ್ಥಳ, ಸಂಸ್ಕೃತಿ, ಸೌಲಭ್ಯ ಮುಂತಾದವುಗಳ ಕುರಿತಾದ ಆಕರ್ಷಣೆ ಮತ್ತು ಕುತೂಹಲಗಳು ಗ್ರಾಮ/ನಗರಗಳ ಆಯ್ಕೆಗೆ ಕಾರಣವಾಗುತ್ತವೆ.

ಶ್ರೀರಂಗ ಅವರ 'ವಿಶ್ವಾಮಿತ್ರನ ಸೃಷ್ಟಿ' ಕಾದಂಬರಿಯ ನಾರಾಯಣ ಪಟ್ಟಣ(ಸಣ್ಣೂರು)ದಲ್ಲಿ ಬೆಳೆದ ಯುವಕ. ಉಚ್ಚಜಾತಿ ಮತ್ತು ಮೇಲ್ವರ್ಗದ ಕೌಟುಂಬಿಕ ಪರಿಸರದಲ್ಲಿ ಬೆಳೆದವನಾದ್ದರಿಂದ ಪ್ರಪಂಚ ಜ್ಞಾನವನ್ನು ಪಡೆಯದ ಅನನುಭವಿ ಯುವಕನಾಗಿದ್ದಾನೆ. ತನ್ನ ಮನೆಯ ಜಾತಿ ಸಂಪ್ರದಾಯ, ಅಪ್ಪನ ದರ್ಪ, ಅಹಂಗಳಿಂದ ಬೇಸತ್ತು, ಮದುವೆ ಮಂಟಪದಿಂದ ಹೊರಬಂದು, ಮೂರನೇ ದರ್ಜೆಯ ರೇಲ್ವೆ ಬೋಗಿಯಲ್ಲಿ ಗುರಿಯಿಲ್ಲದ ಪ್ರಯಾಣ ಹೊರಡುತ್ತಾನೆ. ಮನೆಯಿಂದ ಮೊದಲಬಾರಿಗೆ ಹೊರಬಿದ್ದ ವ್ಯಕ್ತಿಗೆ ಮೂರನೇ ದರ್ಜೆಯ ರೇಲ್ವೆ ಬೋಗಿ ಇಡೀ ಪ್ರಪಂಚವನ್ನು ತೆರೆದು ತೋರಿಸುತ್ತದೆ. ನಾರಾಯಣನ ಅನನುಭವಿ, ಅಪ್ರಬುದ್ಧ ಮನಸ್ಸು ಹಳ್ಳಿಗರ ನಡತೆ, ಗುಣ, ಬಡತನ, ಕಷ್ಟ, ಗೊಂದಲ, ವರ್ತನೆ, ಸಂಭಾಷಣೆ ಕುರಿತು ಚಿಂತಿಸುತ್ತದೆ ಮತ್ತು ಕುತೂಹಲ, ಆಕರ್ಷಣೆಗೂ ಒಳಗಾಗುತ್ತದೆ.

> 'ಹಿಂದೂಸ್ತಾನವು ಹಳ್ಳಿಗಳ ದೇಶ ಎಂದು ಹೇಳುವರು, ದೇಶದ ತುಂಬ ಇಂತಹ ಜನರೇ ಹೆಚ್ಚಾಗಿರಬಹುದಲ್ಲವೆ? ಇಲ್ಲ, ಗ್ರಾಮೋದ್ಧಾರದ ಕೆಲಸವನ್ನು ಕೈಗೊಳ್ಳಲೇಬೇಕು. ತನಗೆ ನೋಕರಿ ಸಿಗುವುದು ಅಷ್ಟರಲ್ಲಿಯೇ ಇದೆ. ಹೋದ ಹೋದಲ್ಲೆಲ್ಲ ಪಶ್ಚಾತ್ತಾಪರಾಧಿಗೆ ತನ್ನ ಹಿಂದಿನ ಅಪರಾಧಗಳನ್ನೆಲ್ಲ ತೋರಿಸಿ ಕೊಡುವಂತೆ, ನೀನು ಬ್ರಾಹ್ಮಣ ಎಂದು ಹೇಳಿ ಬಿಡುವರು.'[೨೨]

ಗ್ರಾಮೋದ್ಧಾರ ಮಾಡುವ ಉದ್ದೇಶದಿಂದ ಗ್ರಾಮ ಪರಿಸರ/ಸಂಸ್ಕೃತಿಯತ್ತ ಆಕರ್ಷಿತನಾಗುವ ನಾರಾಯಣ ಒಬ್ಬ ವ್ಯಕ್ತಿಯಾಗಿ ನಿಲ್ಲದೆ, ಒಂದು ಉಚ್ಚ ಜಾತಿ/ಸಮಾಜವನ್ನು ಪ್ರತಿನಿಧಿಸುತ್ತಾನೆ. ಶ್ರಮ, ಹಸಿವು, ಬಡತನ, ನೋವು, ಜಾತಿಜನ್ಯ ಶೋಷಣೆ, ವ್ಯಕ್ತಿ ಮತ್ತು ಸಾಮಾಜಿಕ ಘರ್ಷಣೆಗಳ ಕಿಂಚಿತ್ತು ಅರಿವಿಲ್ಲದ, ಉಂಡುಟ್ಟು ಸುಖವಾಗಿ ಬದುಕಿದ ಸಮಾಜವೊಂದರ ಪ್ರತಿನಿಧಿಯೆಂಬಂತೆ ನಾರಾಯಣನನ್ನು ವಿಡಂಬಿಸುವ ಕಾದಂಬರಿ, ವ್ಯವಸ್ಥೆ ಮತ್ತು ಅದರ ಒಳಹೊರ ಪದರುಗಳ ಮೇಲೆ (ಕಾದಂಬರಿಯ ರಚನೆಯ ಕಾಲ ೧೯೩೪) ಬೆಳಕು ಚೆಲ್ಲುತ್ತದೆ.

ಶಿವರುದ್ರ ಕಲ್ಲೋಳಿಕರ ಅವರ 'ಹೊಲಗೇರಿಯ ರಾಜಕುಮಾರ' ಕಾದಂಬರಿಯ ಮಾದೇವ ಕುರುಂದವಾಡದ ರಾಜಕುಮಾರನಾಗಿ ಹುಟ್ಟಿ, ಅರಮನೆಯಲ್ಲಿ ನಡೆದ ಕ್ಷಿಪ್ರಕ್ರಾಂತಿಯ ಪರಿಣಾಮವಾಗಿ ವಡಗಾಂವ್‌ನ ಹೊಲಗೇರಿಯಲ್ಲಿ ಬೆಳೆದು ದೊಡ್ಡವನಾಗುತ್ತಾನೆ. ಹೊಲಗೇರಿ ಪರಿಸರ, ಅಲ್ಲಿನ ವ್ಯಕ್ತಿಗಳ ಸ್ನೇಹ, ಜಾನುಬಾ ಕುಟುಂಬದ ಪ್ರೀತಿ ಪಡೆದು ಬೆಳೆದರೂ, ತಾನು ಹುಟ್ಟಿನಿಂದ ಕ್ಷತ್ರಿಯ ರಾಜಕುಮಾರ

ಎಂದು ತಿಳಿದಾಗ, ಮಾದೇವ ಕೆಳವರ್ಗದ ಸಂಸ್ಕೃತಿಯನ್ನು ನಿರಾಕರಿಸಿ ಮೇಲ್ವರ್ಗದ ಸಂಸ್ಕೃತಿಯತ್ತ ಆಕರ್ಷಿತನಾಗುತ್ತಾನೆ. ಈ ಆಕರ್ಷಣೆಯು ಕೇವಲ ಅತಾರ್ಕಿಕ, ಬಾಹ್ಯ ಆಕರ್ಷಣೆಯಾಗಿದ್ದು ಇದರಲ್ಲಿ ಒಂದು ಸೈದ್ಧಾಂತಿಕ ನೆಲೆಗಟ್ಟು ಕಂಡುಬರುವುದಿಲ್ಲ. ಅಸ್ಪೃಶ್ಯನೊಬ್ಬನ ಕೌಟುಂಬಿಕ, ಸಾಮಾಜಿಕ ಸಂಘರ್ಷ, ಶೋಷಿತನ ಸೋಲು, ಅತೃಪ್ತಿ ಇದಕ್ಕೆ ಕಾರಣವೆಂದು ಹೇಳಬಹುದು. ಹೊಲೆಯನೆಂಬ ಕಾರಣಕ್ಕೆ ಹಂದಿ, ನಾಯಿಗಳಿಂದ ತುಂಬಿದ ಕೇರಿಯಲ್ಲಿ ವಾಸ, ಸತ್ತ ದನಗಳನ್ನು ಹೊತ್ತುಹಾಕುವವರ ಸಹವಾಸ, ಹೊಲತಿ ಹೆಂಡತಿಯ ಸಾಂಗತ್ಯಗಳು ಮಾದೇವನಿಗೆ ವರ್ಜ್ಯವೆನ್ನಿಸುವುದು ತಾನು ಕ್ಷತ್ರಿಯ ಕುಲಸಂಜಾತ ಎಂದು ತಿಳಿದಾಗ ಮಾತ್ರ! ಹಾಗಾದರೆ ಇವು ಮೊದಲು ಸಹ್ಯವಾಗಿದ್ದು ಏಕೆ ಎಂಬ ಪ್ರಶ್ನೆಗೆ ಅವನಲ್ಲಿ ಉತ್ತರವಿಲ್ಲ. ಜಾತಿಜನ್ಯವಾದ ಶೋಷಣೆಯ ನಿರಂತರತೆ ಮಾದೇವನಂತಹ ಅಸಹಾಯಕರನ್ನು ಹೊಸ ಐಷಾರಾಮಿ (ಈ ಸಂದರ್ಭದಲ್ಲಿ ಮಾತ್ರ ಐಷಾರಾಮಿ ಎಂಬ ಪದವನ್ನು ಅಧ್ಯಯನ ಪ್ರಯೋಗಿಸಿದೆ) ಸಂಸ್ಕೃತಿಯತ್ತ ಸೆಳೆಯುತ್ತದೆನ್ನುವುದು ಸ್ಪಷ್ಟವಾಗುತ್ತದೆ. ಮತಾಂತರದಂಥ ಸಾಮಾಜಿಕ ಪ್ರಕ್ರಿಯೆಗೂ ಇಂತಹ ಶೋಷಣೆಗಳೇ ನೇರಕಾರಣವೆಂಬುದು ಅಧ್ಯಯನದ ನಿಲುವಾಗಿದೆ. ಸುಶಿಕ್ಷಿತ, ಸುಸಂಸ್ಕೃತ ನಾಗರಿಕರೆನ್ನಿಸಿದ ಸವರ್ಣೀಯ ಸಹದ್ಯೋಗಿಗಳ ವರ್ತನೆ, ಶಾಲಾ ಶಿಕ್ಷಕರ, ವಿದ್ಯಾರ್ಥಿ ಸಹಪಾಠಿಗಳ ನಡೆನುಡಿ, ಶೋಷಣೆ ಇತ್ಯಾದಿಗಳಿಂದ ಜರ್ಜರಿತನಾದ ಮಾದೇವ ಕೆಳಸಂಸ್ಕೃತಿಯ ನಿರಾಕರಣೆಗೆ ನಿರ್ಧರಿಸಿದರೆ, ಕ್ಷತ್ರಿಯ ರಾಜ ಸಂಸ್ಕೃತಿ (ಕುರುಂದವಾಡ ಗ್ರಾಮ) ಸುಂದರ ಕನಸಾಗಿ ಮಾನಸಿಕ ವಿಸ್ತಾರ ಪಡೆದು ಆಕರ್ಷಿಸುತ್ತದೆ. 'ನಾನು ಅನುಭವಿಸಿದ ನೋವು, ನೆನಪು, ಹತಾಶೆ, ದುಃಖ-ದುಮ್ಮಾನಗಳೆಲ್ಲ ಈ ಹೊಲಗೇರಿಯ ಜೊತೆಗೆ ಸುಟ್ಟು ಹೋಗಲಿ. ಮಾಣಿಕ್ಯವೆ ಅರಮನೆಯಲ್ಲಿರಬೇಕಾದ ನೀನು ಈ ತಿಪ್ಪೆಯಲ್ಲೇಕೆ ಬಿದ್ದಿರುವೆ?'[೨೯] ಜಾನುಬಾ ಹೀರಾಬಾಯಿಯರ ಪ್ರೀತಿ, ವಾತ್ಸಲ್ಯ ಮತ್ತು ಹೊಲಗೇರಿ ಗೆಳೆಯರ ವಿಶ್ವಾಸ ತ್ಯಜಿಸಲಾರದೇ, ಕುರುಂದವಾಡ ಅರಮನೆಯ ಆಕರ್ಷಣೆಯ ಸೆಳೆತವನ್ನೂ ಬಿಡಲಾರದೇ ಮಾನಸಿಕ ಹೊಯ್ದಾಟ(ದ್ವಂದ್ವ)ದಲ್ಲಿ ಮಾದೇವ ಕನಸು ಕಂಡು ಬೆಚ್ಚಿ ಬೀಳುತ್ತಾನೆ. ಹೊಲಗೇರಿಯ ಸಂಬಂಧಗಳನ್ನು ಒಂದೊಂದಾಗಿ ಕಳಚಿಕೊಳ್ಳುವಾಗ ಹೊಸ ಸಂಸ್ಕೃತಿಯ ಸಂಬಂಧಗಳು ಚಿಗುರುತ್ತ, ಮೂರ್ತರೂಪ ಪಡೆಯುವುದನ್ನು ಗಮನಿಸುತ್ತೇವೆ. ಅಂಬೇಡ್ಕರರ ಜಾಗದಲ್ಲಿ ಶಿವಾಜಿ, ಶಾಹು ಮಹಾರಾಜರು ಸ್ಥಾನ ಪಡೆಯುತ್ತಾರೆ ಎಂಬುದು ಅವನ ವೈಚಾರಿಕ ಗೊಂದಲಕ್ಕೆ ಸಾಕ್ಷಿಯಾಗಿದೆ. ಕೌಟುಂಬಿಕ ಮತ್ತು ಸಾಮಾಜಿಕ ಕೀಳರಿಮೆ, ಸಂಘರ್ಷಗಳಿಂದ ಕಳಚಿಕೊಳ್ಳುವ ಬಯಕೆ ಸಾಂಸ್ಕೃತಿಕ ಆಕರ್ಷಣೆಯಾಗಿ ಈ ಆಯ್ಕೆಯ ಹಿಂದೆ ಕಾರ್ಯ ನಿರ್ವಹಿಸಿದೆ ಎಂಬ ನಿಲುವು ಅಧ್ಯಯನದ್ದಾಗಿದೆ.

ಎಸ್. ಎಫ್. ಯೋಗಪ್ಪನವರ ಅವರ 'ಹಳೆಯ ಮನೆ' ಕತೆಯ ನಾಗೇಂದ್ರ ನಗರ ವಿಮುಖಿಯಾದ ಯುವಕನಾಗಿದ್ದಾನೆ. ವೃತ್ತಿಯಿಂದ ಇಂಜನಿಯರ್‌ನಾಗಿದ್ದು, ಕೈತುಂಬ ಸಂಪಾದಿಸಿ ಆರ್ಥಿಕ, ಸಾಮಾಜಿಕ ಭದ್ರತೆ ಪಡೆದ ನಂತರ, ಅವನ ಗ್ರಾಮ ಆಯ್ಕೆಯ ಆಕರ್ಷಣೆಗೆ ಪೂರ್ವಜರ ಮೂಲನೆಲೆಯ ಸೆಳೆತ ಮತ್ತು ಭಾವನಾತ್ಮಕ ಸಂಬಂಧ ಕಾರಣವಾಗಿದೆ. ನಗರದ ಏಕತಾನತೆಯ ಯಾಂತ್ರಿಕ ಜೀವನ, ವೇಗದ ಬದುಕು, ಪರಿಸರ, ನಗರೀಕರಣದ ಹತ್ತು ಹಲವು ಸಂಘರ್ಷಗಳು ನಿರಾಕರಣೆಗೆ ಕಾರಣಗಳಾಗಿದ್ದರೆ, ಅವನ ಗ್ರಾಮ ಆಯ್ಕೆಗೆ ಗ್ರಾಮೀಣ ಸಾವಯವ ಸಂಸ್ಕೃತಿಯ ಆಕರ್ಷಣೆ ಕಾರಣವೆನ್ನಬಹುದು. ನಾಗೇಂದ್ರನ ನಗರ ಸಂಬಂಧಗಳು ಕಳಚುತ್ತ ಹೋದಂತೆ ಗ್ರಾಮದ ಸಂಬಂಧಗಳು ಚಿಗುರುತ್ತ ಹೋಗುತ್ತವೆ. ನಗರದ ಯಾಂತ್ರಿಕ ಬದುಕು ಮತ್ತು ಗ್ರಾಮದ ವೇಗರಹಿತ ಬದುಕಿನ ಕ್ಷಣಗಳು ಮುಖಾಮುಖಿಯಾಗುವುದನ್ನು ಕಥನ ದಾಖಲಿಸಿದೆ. ಗ್ರಾಮದ ಹಿರಿಯರು ವಾಸಿಸಿದ್ದ ಹಳೆಮನೆಯನ್ನು ಐದು ಲಕ್ಷ ರೂಪಾಯಿಗೆ ಖರೀದಿಸಿ ಅದನ್ನು ವಶಕ್ಕೆ ಪಡೆಯುವ ಮೊದಲು, 'ನನ್ನವೆ ಆದ ನನ್ನ ಮನಸ್ಸಿನ ಕಾರಣಗಳಿಗೆ ಈ ಮನೆ ಬೇಕಾಗಿದೆ. ಈ ಹಳೆ ಮನೆಯಲ್ಲಿ ಕನಸುಗಳ ರಾಶಿಯೆ ಬಿದ್ದಿದೆ. ಕಣ್ಣು ಹಾಯಿಸಿದಲ್ಲಿ ನೆನಪುಗಳು ರೂಪ ಪಡೆದು ಏಳುತ್ತವೆ'[೩೦] ಎಂಬ ಅವನ ಅನಿಸಿಕೆಗಳಲ್ಲಿ, ಒಂದು ತಲೆಮಾರಿನ ಜನಾಂಗದ ನೆನಪುಗಳು ಅಲ್ಲಿ ವಾಸಿಸುತ್ತವೆ ಎನ್ನಬಹುದು. ಹಳೆಮನೆ ಕೇವಲ ಮನೆಯಾಗಿ ಉಳಿದಿಲ್ಲ. ಅಲ್ಲಿ ದೊಡ್ಡಪ್ಪ, ದೊಡ್ಡಮ್ಮ, ಅಪ್ಪ, ಅವ್ವ, ಅಜ್ಜ ಇವರೆಲ್ಲರ ನಡೆನುಡಿ, ಹಾವಭಾವ, ಸುಖದುಃಖ, ಸಾಂಗತ್ಯ, ಸಂಘರ್ಷ ಎಲ್ಲವೂ ಜೀವಂತವಾಗಿ ನೆಲೆಸಿವೆ. ಈ ನೆಲೆಯೆ ನಾಗೇಂದ್ರನ ಗ್ರಾಮ ಆಕರ್ಷಣೆ ಮತ್ತು ಆಯ್ಕೆಗೆ ಕಾರಣವಾಗಿದೆ.

'ವಿಶ್ವಾಮಿತ್ರನ ಸೃಷ್ಟಿ' ಕಾದಂಬರಿಯ ನಾರಾಯಣ (ಗ್ರಾಮವನ್ನು ಅರಿಯದ ನಗರದ ಮೇಲ್ವರ್ಗ) ಸಾಮಾಜಿಕ ವ್ಯವಸ್ಥೆಯ ಒಂದು ತುದಿಯಾದರೆ, (ಸುಮಾರು ಅದೇ ಸ್ವಾತಂತ್ರಪೂರ್ವ ಕಾಲಘಟ್ಟದಲ್ಲಿ

ರಚಿತವಾದ) ಸರಸ್ವತಿಬಾಯಿ ರಾಜವಾಡೆ ಅವರ 'ಪ್ರಪಂಚ' ಕತೆಯ ತೋಮ (ನಗರವನ್ನು ಕಾಣದ ಕೆಳವರ್ಗದ ವ್ಯಕ್ತಿ), ಅದೇ ಸಾಮಾಜಿಕ ವ್ಯವಸ್ಥೆಯ ಇನ್ನೊಂದು ತುದಿಯಾಗಿದ್ದಾನೆ. ಸಣ್ಣ ಗೇಣಿ ರೈತನಾಗಿದ್ದ ತೋಮ ದೀಪಾವಳಿ ಹಬ್ಬಕ್ಕೆ ಮಗಳು ಅಳಿಯರಿಗಾಗಿ ಬೆಳೆದ ತರಕಾರಿಯನ್ನು ಧನಿಗಳು ಬಲಾತ್ಕಾರವಾಗಿ ಕೋಯಿಸಿ ಹೊತ್ತೊಯ್ದಾಗ, ಹಬ್ಬದ ದಿನದ ಬಿಟ್ಟಿಚಾಕರಿಗೆ ಹೋಗದೆ ಪ್ರತಿಭಟಿಸುತ್ತಾನೆ. ಸಂಘಟನೆಯಿಲ್ಲದ ಈ ಪ್ರತಿಭಟನೆ ಸೋತು, ಭೂಮಿಯನ್ನು ಕಳೆದುಕೊಂಡು (ಒಂದು ಕೋಣ, ದನಗಳನ್ನು ಮಾರಿ, ಇವು ಬೇಸಾಯದಲ್ಲಿ ರೈತನಿಗೆ ಆಸರೆಯಾಗಿದ್ದ ಪ್ರಾಣಿಗಳು) ದಂಡ ಕಟ್ಟಿ, ದೀಪಾವಳಿ ಆಚರಿಸುತ್ತಾನೆ. ಮುಂದಿನ ಜೀವನ ನಿರ್ವಹಣೆ ಹೇಗೆ ಎಂಬ ಪ್ರಶ್ನೆ ಬಂದಾಗ ತೋಮನಿಗೆ ಪಟ್ಟಣಕ್ಕೆ ಹೋಗಿಬಂದ ಬೂದ ಮತ್ತು ಅವನ ಮಾತುಗಳು ನೆನಪಾಗುತ್ತವೆ. 'ಅಲ್ಲಂತೆ ಸೋಮಿ, ಹಣ ಚೆಲ್ಲಾಡ್ತಿಯಂತೆ. ಬೂದನ ಠೀಪಿಯೇನು? ಬಟ್ಟೆಯೇನು? ದೇಹ ಕೊಬ್ಬಿದ್ದೇನು? ನಾವು ವರ್ಷವಿಡೀ ದುಡಿದ್ರೂ ಅದ್ರ ಫಲ ತಿನ್ನೋರು ಯಾರೋ?'[೩೭] ಈ ಸಂದರ್ಭದಲ್ಲಿ ತೋಮನ ಲೌಕಿಕ ಅನನುಭವ ವ್ಯಕ್ತವಾಗಿದೆ. ನಗರಗಳು ಸಂಪತ್ತಿನಿಂದ ತುಂಬಿವೆ, ನಗರ ಆಶ್ರಯದಿಂದ ತಾನು ದುಡಿದು ಸಂಪಾದಿಸಿ ಒಳ್ಳೆ ಬಟ್ಟೆ, ಊಟ ದೊರಕಿಸಿಕೊಳ್ಳಬಹುದು ಎಂಬ ಭ್ರಮೆ ಅವನದಾಗಿದೆ. ಊಳಿಗಮಾನ್ಯ ವ್ಯವಸ್ಥೆ ನಿರಾಕರಿಸಿ, ಸ್ವತಂತ್ರ ಬದುಕಿಗಾಗಿ ಹಂಬಲಿಸಿ ತೋಮ ನಗರ ಆಯ್ಕೆ ಮಾಡಿಕೊಂಡಂತೆ, ಅಶೋಕ ಹೆಗಡೆ ಅವರ 'ಅಂತರದಂಗೆ' ಕತೆಯ ಮನು ಜಾಗತೀಕರಣದ ತೀಕ್ಷ್ಣ ಆಕರ್ಷಣೆಗೆ ಒಳಗಾಗುತ್ತಾನೆ. ಜಾಗತೀಕರಣದ ಮಾರು-ಕೊಳ್ಳುವ ಪ್ರವಾಹದಲ್ಲಿ ಈಜುತ್ತ ಹಣ, ಆಧುನಿಕ ಉಪಕರಣಗಳು, ದೇಶ-ವಿದೇಶದ ವಿವಿಧ ಸೌಲಭ್ಯಗಳನ್ನು ಪಡೆಯುವ ಹೊಸ ಸ್ಪಂದನೆಗೆ ಒಳಗಾಗುತ್ತಾನೆ. ಸರಕಾರಿ ಯಂತ್ರಗಳಿಂದ ಈಚೆ ಬಂದು ಜಾಗತೀಕರಣದ ವಿದೇಶಿ ಕಂಪನಿಗಳ ಖಾಸಗಿ ಹಿಡಿತಕ್ಕೆ ಸಿಕ್ಕುವ ಯುವ ಜನಾಂಗದ ಪ್ರತಿನಿಧಿಯಾಗಿ ಮನೋಹರ ಗ್ರಾಮ ನಿರಾಕರಿಸಿ ನಗರ ಆಯ್ಕೆ ಮಾಡಿಕೊಳ್ಳುತ್ತಾನೆ. 'ಭಟ್ಟರ ಅಂಗಡಿಯ ಜಾಗದಲ್ಲೀಗ ಗೋಬಿ ಮಂಚುರಿಯ ಅಂಗಡಿಯಾಗಿದೆ'[೩೮] ಎಂಬ ಕಥೆಯ ನಿರೂಪಕರ ಮಾತು ನಡೆ, ನುಡಿ, ಆಹಾರ, ಬಟ್ಟೆ, ದೇಶೀಯ ಪದ್ಧತಿ, ಸಂಸ್ಕೃತಿಗಳನ್ನು ವಿದೇಶಿ ಕಂಪನಿಗಳು ಆಕ್ರಮಿಸಿ ವ್ಯಾಪಾರದೊಂದಿಗೆ ಸಾಂಸ್ಕೃತಿಕ ಸಂಕರವಾಗುತ್ತಿರುವುದರ ಸಂಕೇತವಾಗಿದೆ. ಇದು ಒಬ್ಬ ಮನು (ಗ್ರಾಮ)ವಿನ ಜಾಗತೀಕರಣದ ಆಕರ್ಷಣೆ ಮಾತ್ರವಲ್ಲ, ಬದಲಿಗೆ ಇಂದಿನ ಬಹುತೇಕ ಯುವಜನಾಂಗದ ನಗರ ಆಯ್ಕೆಯ ಮೂಲವಾಗಿದೆ. ಐ.ಟಿ., ಬಿಟಿ, ಸಾಫ್ಟ್‌ವೇರ್ ಕಂಪನಿಗಳು, ಕಾಲ್ ಸೆಂಟರ್‌ಗಳು ಸೃಷ್ಟಿಸಿದ ಉದ್ಯೋಗ ಕೇಂದ್ರಗಳು ಯುವಕರನ್ನು ನಗರದತ್ತ ಸೆಳೆಯುವ ಸೂಜಿಗಲ್ಲುಗಳಾಗಿವೆ, ನಗರಗಳು ಆಕರ್ಷಣೆಯ ಕೇಂದ್ರ ಬಿಂದುಗಳಾಗಿವೆ. ಆದರೆ ಈ ಆಯ್ಕೆ ಯಾವ ವರ್ಗದಲ್ಲಿ ಹೆಚ್ಚಿದೆ, ಕೆಳವರ್ಗ, ದಲಿತರು ಜಾಗತಿಕ ಬದಲಾವಣೆಯನ್ನು ಹೇಗೆ ಸ್ವಾಗತಿಸುತ್ತಾರೆ ಎಂಬ ಪ್ರಶ್ನೆ ಕಾಡುತ್ತದೆ. ಮುಂಬಯಿ ಕರ್ನಾಟಕದ ಮಟ್ಟಿಗೆ ಚರ್ಚಿಸುವುದಾದರೆ ಮೇಲ್ಜಾತಿಯ ಒಂದು ವರ್ಗ ಇಂತಹ ಎಲ್ಲ ಅವಕಾಶಗಳನ್ನು ಬಾಚಿಕೊಂಡಿರುವುದು ಅಧ್ಯಯನ ಗುರುತಿಸಿದ ಅಂಶವಾಗಿದೆ. ದಲಿತ, ಹಿಂದುಳಿದ ಸಮುದಾಯಗಳು ಜಾಗತೀಕರಣದ ಪರಿಣಾಮಗಳನ್ನು ಆತಂಕ, ತಲ್ಲಣ, ಭಯಗಳಿಂದ ಬಿರುಗಣ್ಣು ಬಿಟ್ಟು ನಿರೀಕ್ಷಿಸುವುದು ಮತ್ತು ಅವರ ಆಯ್ಕೆ ಏನಿದ್ದರೂ ಪಟ್ಟಣಗಳಿಗೆ, ಕೆಳವರ್ಗದ ನೌಕರಿಗಳಿಗಾಗಿ (ಹೊರ ದೇಶಗಳಿಗಲ್ಲ) ಸೀಮಿತವಾಗಿರುವುದು ಕಂಡುಬರುತ್ತದೆ. ಮೇಲ್ವರ್ಗದ ಸಂಸ್ಕೃತಿಗೆ ಆಕರ್ಷಿತನಾದ ಮಾದೇವ ದಲಿತರಾದ ಹೆಂಡತಿ ಮಕ್ಕಳನ್ನು ನಿರಾಕರಿಸುವುದು, ಜಾಗತೀಕರಣದ ಆಕರ್ಷಣೆಗೆ ಗ್ರಾಮ ನಿರಾಕರಿಸಿದ ಮನುವಿನ ಕುಟುಂಬದಲ್ಲಿ ಭಿನ್ನಾಭಿಪ್ರಾಯ ಹುಟ್ಟುವುದನ್ನು ಗಮನಿಸಿದರೆ, ಇಂತಹ ಆಕರ್ಷಣೆಯ ಆಯ್ಕೆಗಳು ಕುಟುಂಬದ ವಿಘಟನೆಯಲ್ಲಿ ಕೊನೆಗೊಳ್ಳುತ್ತವೆ ಎಂದು ತೀರ್ಮಾನಿಸಬಹುದು.

ಕುತೂಹಲ, ಆಕರ್ಷಣೆಗಳನ್ನು ಒಳಗೊಂಡ ಗ್ರಾಮ/ನಗರ ಆಯ್ಕೆಯನ್ನು ಕಥನ ಸಾಹಿತ್ಯ ಗ್ರಹಿಸಿದ ರೀತಿಯನ್ನು ಹೀಗೆ ಸಂಗ್ರಹಿಸಬಹುದು * ನಗರದ ಅನನುಭವಿ ಯುವಕರು ಕೌಟುಂಬಿಕ ಕರ್ಷಣೆಯಿಂದ ಜಾತಿ ವ್ಯವಸ್ಥೆ ನಿರಾಕರಿಸಿ, ಜಾತಿ, ಮತ, ಪಂಥರಹಿತ, ವಿದ್ಯಾವಂತ ಗ್ರಾಮೀಣ ಸಮಾಜ ನಿರ್ಮಾಣಕ್ಕಾಗಿ ಗ್ರಾಮವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. * ಕೆಳವರ್ಗದ ವ್ಯಕ್ತಿಗಳು ಜಾತಿಯಾಧಾರಿತ ಶೋಷಣೆಯಿಂದ ಬೇಸತ್ತು, ಮೇಲ್ವರ್ಗದ ಸಂಸ್ಕೃತಿಯನ್ನು ಮೆಚ್ಚಿ ಆಕರ್ಷಿತರಾಗಿ (ಇದು ಹಲವೊಮ್ಮೆ ಮತಾಂತರದ ರೂಪ ಪಡೆಯಬಹುದು) ಗ್ರಾಮ/ನಗರ ಆಯ್ಕೆ ಮಾಡಿಕೊಳ್ಳುವಾಗ ದ್ವಂದ್ವಾತ್ಮಕತೆಯಲ್ಲಿ ತೊಳಲಾಡುತ್ತಾರೆ. * ನಗರದಲ್ಲಿ ನೆಲೆಸಿ ಕೈತುಂಬ ಗಳಿಸಿದ ಯುವಕರು ನಗರದ ಏಕತಾನತೆ, ಯಾಂತ್ರಿಕ ಜೀವನದಿಂದ ಬೇಸತ್ತು ಗ್ರಾಮದ ನೆಮ್ಮದಿಯ ಜೀವನ ನೆನೆದು ಗ್ರಾಮ ಆಯ್ಕೆ ಮಾಡಿಕೊಳ್ಳುತ್ತಾರೆ. ಇಲ್ಲಿ ಹೊಸ

ಸಂಬಂಧಗಳ ನಿರಾಕರಣೆಯು ಮರಳಿ ಸಾವಯವ ಸಂಸ್ಕೃತಿಯತ್ತ ಆಕರ್ಷಣೆಗೊಂಡ ಆಯ್ಕೆಯಾಗಿದೆ. * ಕೃಷಿಕರು, ಕೃಷಿಕೂಲಿಕಾರರು ಗ್ರಾಮದ ಊಳಿಗಮಾನ್ಯ ವ್ಯವಸ್ಥೆಯ ಭೂಮಾಲೀಕರ ದೌರ್ಜನ್ಯ, ಶ್ರಮ ಸಂಸ್ಕೃತಿಯ ಶೋಷಣೆಯನ್ನು ವಿರೋಧಿಸಿ, ನಗರದಲ್ಲಿ ಹೆಚ್ಚಿನ ಕೂಲಿ, ಆರ್ಥಿಕ ಸಮಾನತೆ, ಯಾರ ಹಂಗೂ ಇರದ ಬದುಕನ್ನು ಆಯ್ಕೆ ಮಾಡಿಕೊಳ್ಳುವುದು ಕಂಡುಬರುತ್ತದೆ. * ಪದವಿ ಪಡೆದ ತಕ್ಷಣ ಜಾಗತೀಕರಣದ ಸೆಳೆತಕ್ಕೆ ಸಿಕ್ಕ ಗ್ರಾಮೀಣ ಯುವಕರು ವಿದೇಶಿ ಕಂಪನಿಗಳನ್ನು ಸೇರಿ ಅಧಿಕ ಸಂಬಳ ಪಡೆಯಲು ನಗರ/ಮಹಾನಗರ/ವಿದೇಶಗಳನ್ನು ಆಯ್ಕೆ ಮಾಡಿಕೊಳ್ಳುತ್ತಾರೆ.

## ೨. ಕೌಟುಂಬಿಕ ನೆಲೆ ಮತ್ತು ಆಯ್ಕೆ

### ಅ. ಶಿಕ್ಷಣಾಕಾಂಕ್ಷೆ : ಸವರ್ಣೀಯ ಕುಟುಂಬಗಳ ನೆಲೆಯಿಂದ

ಪ್ರಾಚೀನ ಕಾಲದಿಂದಲೂ ಭಾರತದ ಪ್ರಭುತ್ವ ಮತ್ತು ಆಡಳಿತಗಳು ಶಿಕ್ಷಣ, ಉದ್ಯೋಗಕೇಂದ್ರಿತ ನೆಲೆಗಳ ನಿರ್ಮಾಣ, ಬೆಳವಣಿಗೆಗೆ ಪ್ರಾಶಸ್ತ್ಯ ಕೊಡುತ್ತ ಬಂದಿವೆ. ನಾಡಿನ ವಿವಿಧ ಭಾಗಗಳಿಂದ ಈ ಕೇಂದ್ರಕ್ಕೆ ಜನರ ವಲಸೆ ನಿರಂತರವಾಗಿ ಕಂಡುಬರುತ್ತದೆ. ಸ್ವಾತಂತ್ರ್ಯಾನಂತರ ಜಿಲ್ಲಾ ಕೇಂದ್ರಗಳು, ರಾಜ್ಯಗಳ ರಾಜಧಾನಿಗಳು ಶಿಕ್ಷಣ, ಉದ್ಯೋಗಕೇಂದ್ರಿತ ಸ್ಥಳಗಳಾಗಿ ಬೆಳೆಯುತ್ತಿವೆ. ಶಿಕ್ಷಣ, ಉದ್ಯೋಗ(ಕೂಲಿ, ನೌಕರಿ, ವ್ಯಾಪಾರ ವಹಿವಾಟು ಇತ್ಯಾದಿ)ಕ್ಕಾಗಿ ವ್ಯಕ್ತಿಗತ ನೆಲೆಯಲ್ಲಿ ಆಯ್ಕೆ ಕಂಡು ಬಂದಂತೆ, ಕೌಟುಂಬಿಕ ನೆಲೆಯಲ್ಲಿ ಇಡೀ ಕುಟುಂಬ ಮಕ್ಕಳಿಗಾಗಿ ನಗರ/ಮಹಾನಗರಗಳನ್ನು ಆಯ್ಕೆ ಮಾಡಿಕೊಳ್ಳುತ್ತದೆ. ಇಂತಹ ಸ್ಥಳಗಳ ಆಯ್ಕೆಯ ಹಿಂದಿರುವ ಕಾರಣಗಳೇನು, ಅವುಗಳಿಗೆ ಯಾವ ಸಾಮಾಜಿಕ, ಆರ್ಥಿಕ ಸ್ವರೂಪವಿದೆ, ಈ ಕುಟುಂಬಗಳ ದ್ವಂದ್ವಗಳಾವುವು ಮತ್ತು ಇಂತಹ ಆಯ್ಕೆಗಳನ್ನು ಕಥನ ಸಾಹಿತ್ಯ ಹೇಗೆ ಗ್ರಹಿಸಿದೆ ಎಂಬುದನ್ನು ಗಮನಿಸಬಹುದು.

ಸುನಂದಾ ಬೆಳಗಾಂವಕರ ಅವರ 'ಕಾಯಕ ಕೈಲಾಸ' ಕಾದಂಬರಿಯ ಮಾನಪ್ಪಗೌಡರ ಕುಟುಂಬ ಮಗನ ಶಿಕ್ಷಣಕ್ಕಾಗಿ ಗ್ರಾಮ ನಿರಾಕರಣೆ ಮಾಡುತ್ತದೆ (ಇಲ್ಲಿ ಗೌಡರ ಭಾಗಶಃ ಕುಟುಂಬ ಗ್ರಾಮ ನಿರಾಕರಿಸಿದರೆ ಜಮೀನು ನೋಡಿಕೊಳ್ಳಲು ಹಲವು ಸದಸ್ಯರು ಗ್ರಾಮದಲ್ಲಿ ಇರುತ್ತಾರೆ). ನಗರ ಆಯ್ಕೆಯ ಸಂದರ್ಭದಲ್ಲಿ ಅವರ ಮುಂದೆ ಅನೇಕ ಆಯ್ಕೆಗಳಿವೆ. ಗೌಡರಿಗೆ ಆಯ್ಕೆಯ ಸ್ವಾತಂತ್ರ್ಯವೂ ಇದೆ. ಅನೇಕ ದಿನ ಆಲೋಚಿಸಿ ಧಾರವಾಡದಲ್ಲಿ ಮನೆಯನ್ನು ಮಾಡಲು ನಿರ್ಧರಿಸುತ್ತಾರೆ. ಗೌಡರ ಅಳಿಯ ಸೋಮೇಶನಿಗೆ ಕಾಲೇಜು ಓದಲು ಆಸೆ ಆದರೆ ಬಡತನದಿಂದ ಅವನ ಮುಂದೆ ಆಯ್ಕೆಗಳಿಲ್ಲ, ಗೌಡರ (ಮಾವ) ಸಹಾಯವೂ ಅವನಿಗಿಷ್ಟವಿಲ್ಲ. ಒಂದೆಡೆ ಶಿಕ್ಷಣದ ಮಹತ್ವಾಕಾಂಕ್ಷೆ, ಇನ್ನೊಂದೆಡೆ ಆರ್ಥಿಕ ಅಸಹಾಯಕತೆ ಸೋಮೇಶನನ್ನು ದ್ವಂದ್ವಾತ್ಮಕತೆಗೆ ನೂಕಿವೆ. ತಾಯಿ ಗಂಗವ್ವ,

> 'ಸಾಕ ಮಗಾ ಮತ್ತ ನಾಕ ವರಸ ಓದಬೇಕಂತಿ, ಅದೇನ ಆಟ. ಇಷ್ಟು ದುಡ್ಡು ಗೌಡರಿಂದ ತಗೋಬೇಕ. ನಿನ್ನ ಸಂಸಾರನ ಅವರ ಮನ್ಯಾಗ ಇರಬೇಕ. ಇದೇನ ಚಂದ ಅಲ್ಲ ತಗೋ' ಎಂದು ಆಕ್ಷೇಪಿಸುತ್ತಾಳೆ.[೫]

ಇಲ್ಲಿ ಮೇಲ್ವರ್ಗದ ಒಂದೇ ಜಾತಿಯ ಎರಡು ಕುಟುಂಬಗಳು ಶಿಕ್ಷಣಕ್ಕೆ ಕೊಡುವ ಪ್ರಾಮುಖ್ಯತೆ ಮತ್ತು ಅಸಹಾಯಕತೆಗಳು ವ್ಯಕ್ತವಾಗಿವೆ. ಸೋಮೇಶ ನಗರದಲ್ಲಿ ಗೌಡರು ಮಾಡಿದ ಬಾಡಿಗೆ ಮನೆಯಲ್ಲಿ ಇದ್ದು ಸ್ಕಾಲರ್‌ಶಿಪ್ ಹಣದಿಂದ ಓದಲು ನಿರ್ಧರಿಸುತ್ತಾನೆ. ಮಾನಪ್ಪಗೌಡರು ಹೊಲ, ತೋಟ ನೋಡಿಕೊಳ್ಳಲು ರುದ್ರಣ್ಣರಿಗೆ ವಹಿಸಿಕೊಟ್ಟು ತಾವು ಧಾರವಾಡ ಸೇರುತ್ತಾರೆ. ಇಷ್ಟೆಲ್ಲ ವ್ಯವಸ್ಥೆಗೆ ಮಾರ್ಗದರ್ಶನ ನೀಡಿದ ರಾಮಪ್ಪ ಮಾಸ್ತರು ಸಹ ವಿಜಾಪುರ ಜಿಲ್ಲೆಯ ತಮ್ಮ ಹಳ್ಳಿಯಲ್ಲಿ ಶಿಕ್ಷಣಕ್ಕೆ ಸೌಲಭ್ಯಗಳಿಲ್ಲವೆಂದು, ಇಲ್ಲಿನ ಕೆಲಸ ಬಿಟ್ಟು ವಿಜಾಪುರದಲ್ಲಿ ಮನೆ ಮಾಡುತ್ತಾರೆ. ವಿದ್ಯಾವಂತರು, ಶ್ರೀಮಂತರು ತಮ್ಮ ಮಕ್ಕಳ ಶಿಕ್ಷಣಕ್ಕೆ ನಗರಗಳನ್ನು ಆಯ್ಕೆ ಮಾಡಿಕೊಳ್ಳುವುದು ಕಂಡುಬರುತ್ತದೆ. ಬೆಣ್ಣೆ ವ್ಯಾಪಾರ ಮಾಡುತ್ತಿದ್ದ ಸಂಗಪ್ಪ ಮಗನನ್ನು ಬೈಲಹೊಂಗಲದಲ್ಲಿಟ್ಟು ಓದಿಸುತ್ತಾನೆ, ಆದರೆ ಮಗಳು ಕಸ್ತೂರಿ ಮುಲ್ಕಿಪರೀಕ್ಷೆ ಪಾಸಾದರೆ ಸಾಕು, ಹಾಡು, ಹಸೆ ಕಲಿತುಕೊಂಡಿರಲಿ ಎಂದು ನಿರ್ಧರಿಸುತ್ತಾನೆ. ಗ್ರಾಮೀಣರ ದೃಷ್ಟಿಯಲ್ಲಿ (ಬಡವರು) ಮಹಿಳೆಯರ ಶಿಕ್ಷಣಕ್ಕೆ ಪ್ರಾಮುಖ್ಯತೆ ಕಂಡುಬರುವುದಿಲ್ಲ. ಭಾರತದ ಸಾಂಪ್ರದಾಯಿಕ ವ್ಯವಸ್ಥೆ ಮಹಿಳೆಯನ್ನು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಸಂಬಂಧಗಳಿಂದ ದೂರ ಇಟ್ಟಿರುವ ಪ್ರಕ್ರಿಯೆ ಗ್ರಾಮದಿಂದಲೇ ಆರಂಭವಾದುದಾಗಿದೆ. ಇದಕ್ಕೆಲ್ಲ, ಸ್ತ್ರೀಯು ತ್ಯಾಗ, ಬಲಿದಾನಗಳ

ಮೂರ್ತಿ, ಅವಳಲ್ಲಿ ಪ್ರತಿಭಟನೆಯ ಧ್ವನಿ ಇಲ್ಲ, ಪ್ರತಿಭಟಿಸುವ ಶಕ್ತಿ ಇಲ್ಲ ಎಂಬ ಸಂಕುಚಿತ ಪ್ರತಿಪಾದನೆ ಇಲ್ಲಿ ಮೂರ್ತತೆ ಪಡೆದಿರುವುದು ಕಂಡುಬರುತ್ತದೆ. ರಾಘವೇಂದ್ರ ಪಾಟೀಲ ಅವರ 'ಮಾಯಿಯ ಮುಖಗಳು' ನೀಳ್ಗತೆಯ ಕಲ್ಲೋಪಂತರ ಕುಟುಂಬ ತಮ್ಮ ಮೂವರು ಹೆಣ್ಣುಮಕ್ಕಳ ಸಂಗೀತ ಶಿಕ್ಷಣಕ್ಕೆ ಬೆಳಗಾವಿಯಲ್ಲಿ ಮನೆ ಮಾಡಬೇಕೆಂದು (ಹೆಂಡತಿ, ಮಕ್ಕಳ ಒತ್ತಡ ಉಂಟು) ನಿರ್ಧರಿಸುತ್ತಾರೆ. ಬೆಳಗಾವಿಯನ್ನು ಆಯ್ಕೆ ಮಾಡಿಕೊಳ್ಳಲು ನಿರ್ಧರಿಸುವ ಮುನ್ನ ಕೌಟುಂಬಿಕ ಆಗುಹೋಗುಗಳ ಸಾಧಕ ಬಾಧಕಗಳನ್ನು ಯೋಚಿಸುವ ಕಲ್ಲೋಪಂತರ ವಿಚಾರಗಳಲ್ಲಿ ಗ್ರಾಮೀಣ ಮಧ್ಯಮ ವರ್ಗದ ಕುಟುಂಬದ ಸಮಸ್ಯೆಗಳು ಅನಾವರಣಗೊಂಡಿವೆ. ಕಲ್ಲೋಪಂತರದು ಉಚ್ಚಜಾತಿಗೆ ಸೇರಿದ ಮಧ್ಯಮ ವರ್ಗದ ಕುಟುಂಬವಾಗಿದ್ದು, ಮನೆ ನಡೆಸಲು ಆರ್ಥಿಕ ತೊಂದರೆ ಕಾಡುವುದಿಲ್ಲ. ಆದರೆ ಗೇಣಿ ರೈತರು ದುಡಿದು ತಂದು ಕೊಡುವ ವಾರ್ಷಿಕ ಉತ್ಪನ್ನದ ಮೇಲೆ ನಿಗಾ ಇಡಬೇಕಾದ ಅಗತ್ಯವಿದೆ. ಅಲ್ಲದೆ, ರೈತಪರ ಕಾನೂನುಗಳು ಬರುವ ಎಲ್ಲ ಲಕ್ಷಣಗಳಿದ್ದು ಅವುಗಳನ್ನೂ (ಕಾನೂನಿನ ಮುಖಾಂತರ) ಎದುರಿಸಬೇಕಾದ ಅಗತ್ಯವೂ ಇದೆ. ಇನ್ನು ಎರಡನೆಯದಾಗಿ ಹಳ್ಳಿಗರ ಏಕತಾನತೆಯ ಬದುಕು ಕಲ್ಲೋಪಂತ(ಹಳ್ಳಿಗರಿಗೆ ಒಳಗೊಳಗೆ ನಗರದತ್ತ ಮುಖಮಾಡುವ ಆಕರ್ಷಣೆ)ರನ್ನು ಕಾಡಿದ್ದಿದೆ. ಬೆಳಿಗ್ಗೆ ಸಾಯಂಕಾಲ, ಗದ್ದೆ, ಜಮೀನು, ಬೇಸಾಯ, ಗೊಬ್ಬರ, ಬೀಜ ಇತ್ಯಾದಿ ಸಮಸ್ಯೆಗಳಿಂದ ಬಿಡಿಸಿಕೊಂಡು ಶಹರದ ಬಣ್ಣದ ಬದುಕಿನ ಆಕರ್ಷಣೆಗೆ ಒಳಗಾಗುತ್ತಾರೆ. ಈ ಸಾಲುಗಳನ್ನು ಗಮನಿಸೋಣ.

> 'ಶಾರದಾಗ ಇರುವ ಪಾವಗ್ಯಾರನ ನೋಡಿ. . ಅವರ ಬೆಳ್ಳನ್ನ ಅರಿವಿ ಮತ್ತ ಅವರ ಮೆತ್ತಗಿನ ಮಾತೂ ನೋಡೀ . .ನಮ್ಮದೇನು ಗ್ವಾದನಿಗೆ ಕಟ್ಟಿದ ದನದ ಬಾಳೆ ಇದ್ಹಂಗ. .ಅಂತನ್ನುವ ಭಾವ ಅವರ ಮನಸ್ಸಿನಾಗ ಹೊಕ್ಕಿತು. ಹಿಂತಾ ಭಾವದೊಳಗ ಅವರಿಗೆ–ತಾವೂ ಬೆಳಗಾಂವ್ಯಾಗ ಮನಿ ಮಾಡಬೇಕು ಅಂತನಸಲಿಕತ್ತಿತು.'[೨೦]

ಗ್ವಾದನಿಗೆ ಕಟ್ಟಿದ ದನದಂತಹ ಗ್ರಾಮೀಣ ಬದುಕನ್ನು ನಗರ ಪ್ರಭಾವಿಸಿ, ಹಿರಿಯ ತಲೆಮಾರಿನ ವ್ಯಕ್ತಿಗಳನ್ನು ತನ್ನತ್ತ ಸೆಳೆಯುತ್ತದೆ. ಅಷ್ಟರಮಟ್ಟಿಗೆ ನಗರ ತನ್ನ ಪ್ರಭಾವವನ್ನು ಸಾಂಪ್ರದಾಯಿಕ ಮನಸ್ಸುಗಳ ಮೇಲೆ ಹೇರಿದೆ ಎನ್ನಬಹುದು. ಇಲ್ಲಿ ಅಧ್ಯಯನ ಗಮನಿಸಿದ ಅಂಶವೆಂದರೆ ಈ ಏಕತಾನತೆ ದಲಿತ, ಹಿಂದುಳಿದ, ಕೆಳವರ್ಗದ ಕುಟುಂಬಗಳ ಯಜಮಾನರಿಗೆ ಬಂದರೆ ಅವರ ವಿಚಾರ/ಗ್ರಹಿಕೆಯ ಲಹರಿ ಹೇಗಿರುತ್ತದೆ, ಅವರು ಬೇಸಾಯ ನೋಡಿಕೊಳ್ಳಲು ಕೆಂಚನಂತಹ ಆಳನ್ನು ನೇಮಿಸಿ ನಿರಾಳವಾಗಿ ನಗರವನ್ನು ಆಯ್ಕೆ ಮಾಡಿಕೊಳ್ಳಲು ಸಾಧ್ಯವೆ ಎಂಬ ಪ್ರಶ್ನೆಗಳು ಕಾಡುತ್ತವೆ. ದಿನದ ದುಡಿತವನ್ನು ಅವಲಂಬಿಸಿ ಜೀವಿಸುವ ಕುಟುಂಬಗಳು ಸಂಗೀತ ವಿದ್ಯಾಭ್ಯಾಸದಿಂದ ದೂರ ಉಳಿಯಲು ಕಾರಣವಾಗುವ ಅಂಶಗಳು ಇಲ್ಲಿ ಅಡಗಿವೆ. ಸಂಗೀತದ ಆಕರ್ಷಣೆ ಆ ಕುಟುಂಬವನ್ನು ಕಳ್ಳೀಗುದ್ದಿ ಗ್ರಾಮದಿಂದ ಬೆಳಗಾವಿ, ಅಲ್ಲಿಂದ ಧಾರವಾಡಕ್ಕೆ ಎಳೆದು ತಂದರೆ, ನರ್ಮದೆಯ ನೃತ್ಯ ಕಲಿಯುವ ಆಸೆ ಅವರನ್ನು ಹುಬ್ಬಳ್ಳಿಯಂತಹ ವ್ಯಾಪಾರಿ ನಗರಕ್ಕೆ ಕರೆತರುವುದರ ಹಿಂದೆ ಉಚ್ಚ ಕುಲದವರ ಜ್ಞಾನಾರ್ಜನೆಯ ಒತ್ತಡಗಳು ಆಯ್ಕೆಯ ಮೇಲೆ ಪ್ರಭಾವ ಬೀರಿವೆ.

**ಶಿಕ್ಷಣಾಕಾಂಕ್ಷೆ : ಕೆಳವರ್ಗ, ದಲಿತರ ಕುಟುಂಬಗಳ ನೆಲೆಯಿಂದ**

ಸಾವಿರಾರು ವರ್ಷಗಳಿಂದ ಕೆಳ, ದಲಿತ ವರ್ಗದವರಿಗೆ ಮರೀಚಿಕೆಯಾಗಿದ್ದ ಶಿಕ್ಷಣ ಸ್ವಾತಂತ್ರ್ಯಾನಂತರ ಸಾರ್ವತ್ರಿಕತೆಯನ್ನು ಪಡೆದುಕೊಂಡಿದೆ. ಸಂಪ್ರದಾಯವಾದಿಗಳ ದೃಷ್ಟಿಯಲ್ಲಿ ಒಮ್ಮೆ ಅಸಾಮಾನ್ಯರ ಶಿಕ್ಷಣವೆಂದು ಪರಿಗಣಿಸಲ್ಪಟ್ಟಿದ್ದ ವೇದಾಧ್ಯಯನದಂತಹ ಶಿಕ್ಷಣವನ್ನು ಶೂದ್ರ, ದಲಿತರು ಪಡೆದದ್ದು, ಪಡೆಯಲು ಯತ್ನಿಸಿದ್ದು ಮುಂಬಯಿ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಕಂಡುಬರುವುದಿಲ್ಲ. ಆಧುನಿಕ ವಿದ್ಯಾಭ್ಯಾಸ(ಇಂಗ್ಲೀಶ್ ಶಿಕ್ಷಣ)ವನ್ನು ಜ್ಞಾನದ ಅಥವಾ ಅರಿವಿನ ಆರಂಭ ಎಂದು ತಿಳಿದಿರುವ ಸರಕಾರ, ಅನೇಕ ಶಿಕ್ಷಣ ಸೌಲಭ್ಯವನ್ನು ಒದಗಿಸಿದರೂ, ಶಿಕ್ಷಣದ ಬಾಗಿಲು ಕೆಳ, ದಲಿತ ವರ್ಗಕ್ಕೆ ಸಂಪೂರ್ಣವಾಗಿ ತೆರೆದುಕೊಂಡಿಲ್ಲ. ಶಿಕ್ಷಣ, ಸಂಘಟನೆ, ಹೋರಾಟಗಳ ತ್ರಿಸೂತ್ರದಡಿ ಒಂದಾದ ದಲಿತಪರ ವಾದಗಳು, ಸಂಘಟನೆಗಳು ಸಮಗ್ರ ದಲಿತ ಸಮೂಹವನ್ನು ಶಿಕ್ಷಣದ ಛತ್ರದಡಿ ತರಲು ಹೆಣಗಿ ಸೋತಿವೆ ಎನ್ನಬಹುದು. ಇದಕ್ಕೆ ಕಾರಣವಾದ ದಲಿತ ಕುಟುಂಬಗಳ ಆರ್ಥಿಕ ಬಿಕ್ಕಟ್ಟು, ಶಿಕ್ಷಣ ಕುರಿತ ನಿರ್ಲಿಪ್ತತೆ, ಸವರ್ಣೀಯ ಅಧಿಕಾರಿ ಮತ್ತು ಆಡಳಿತ ಯಂತ್ರಗಳ ಅಸಹಕಾರಗಳು ಕಾರಣವೆಂದು ಒಪ್ಪಿಕೊಂಡರೂ, ಅಲ್ಲಲ್ಲಿ ಶಿಕ್ಷಣಕ್ಕೆ ಕಾತರಿಸುವ ದಲಿತ ಮಕ್ಕಳ ಶಿಕ್ಷಣ ಪ್ರಯತ್ನ ಕಥನ ಸಾಹಿತ್ಯದಲ್ಲಿ ಕಂಡುಬರುತ್ತದೆ. ಮಕ್ಕಳ ಶಿಕ್ಷಣಕ್ಕಾಗಿ ಇಡೀ ಕುಟುಂಬ ಗ್ರಾಮ/ನಗರ ನಿರಾಕರಿಸಿ ನಗರ/ಮಹಾನಗರ ಆಯ್ಕೆ ಮಾಡಿಕೊಂಡಿದ್ದೂ ದಾಖಲಾಗಿದೆ.

ಶಾಂತಾದೇವಿ ಕಣವಿ ಅವರ 'ಹೊಸ ಅಲೆ' ಕತೆಯ ಸವರ್ಣೀಯ (ಶಂಕರಪ್ಪನ ಕುಟುಂಬ) ಕುಟುಂಬದಲ್ಲಿ ಜೀತಕ್ಕಿದ್ದ ಮಾದರ ದ್ಯಾಮಪ್ಪನ ಮಗ ಮರಿಯ ಮುಲ್ಕಿ ಪರೀಕ್ಷೆ ಮುಗಿಸಿ ಮುಂದೆ ಓದುತ್ತೇನೆಂದು ಹಠ ಹಿಡಿದಾಗ ಶಂಕರಪ್ಪನ ತಂದೆಯ ಪ್ರತಿಕ್ರಿಯೆ ಹೀಗಿದೆ.

> "ಇಂಥಾ ದರಿದ್ರ ಮುಂಡೇವು ಎಲ್ಲಾ ಸಾಲಿ ಕಲಿತರ ಸರಸೋತಿಗೆ ಮೈಲಿಗಿ ಆಗತದ. ಸುಮ್ಮನ ನಿನ್ನ ಮಗನ್ನ ಜೀತಕ್ಕೆ ಇಡಲೇ ದ್ಯಾಮ್ಯಾ ಇಲ್ಲದ್ದ ಸಲಿಗಿ ಕೊಡಬ್ಯಾಡಾ. ಸಲಿಗಿ ನಾಯಿ ತಲಿಗಿ ಏರಿತಂತ. ಹಾಂಗ ಆದೀತು. ಇಲ್ಲೇ ಇದ್ದರ ಸತ್ತಾಗ ನಿನಗ ಬಾಯಾಗ ಹನಿ ನೀರು ಬಿಟ್ಟಾನು. ಅವನ್ನ ಎಲ್ಲೂ ಕಳಿಸಬ್ಯಾಡ."[೨೧]

ಸ್ಥಾಪಿತ ಹಿತಾಸಕ್ತಿಯ ರೋಗಗ್ರಸ್ತ ಮನಸ್ಸುಗಳ ಇಂತಹ ಪ್ರತಿಗಾಮಿ ಸಲಹೆಗಳಿಂದ ಎಷ್ಟೋ ಬಡ, ದಲಿತ ಮಕ್ಕಳು ಶಾಲಾ ಶಿಕ್ಷಣ ತೊರೆದು ದುಡಿಮೆಗೆ ಇಳಿದದ್ದು ಗ್ರಾಮೀಣ ಪ್ರದೇಶದಲ್ಲಿ ಕಂಡುಬರುತ್ತದೆ. ಸವರ್ಣೀಯ/ಮೇಲ್ವರ್ಗದ ವ್ಯಕ್ತಿಗಳ ಇಂತಹ ಸಲಹೆಗಳು ಕೆಳವರ್ಗ, ದಲಿತರನ್ನು ಇಟ್ಟಲ್ಲೆ ಇಡುವ ಹುನ್ನಾರವಾಗಿದೆ. ಒಂದು ವರ್ಗದ ಜನರನ್ನು ದುಡಿತದಲ್ಲಿಯೇ ಇಡುವ, ಅವರು ಪ್ರಾಣಿಗೆ ಸಮಾನ ಎಂಬ ಆಶಯ, ಅವರೊಂದಿಗೆ ಮಕ್ಕಳು ಜೊತೆಗಿದ್ದರೆ ಮುಂದೆ ಅವರೂ ಜೀತಕ್ಕೆ ಉಪಯೋಗ ಎಂಬ ಆಮಿಷವೂ ಇದರಲ್ಲಿ ಅಡಗಿದೆ. ಭೂಮಿ ಇದ್ದವರ ಮಕ್ಕಳು ರೈತರಾದರೆ, ಜೀತದಾಳುಗಳ ಮಕ್ಕಳು ಜೀತದಾಳುಗಳಾಗಿ ಮುಂದುವರೆಯಬೇಕೆನ್ನುವ ಸಾಂಪ್ರದಾಯಿಕ ಧೋರಣೆಗಳು ಊಳಿಗಮಾನ್ಯ ಪದ್ಧತಿಯನ್ನು ಜೀವಂತವಾಗಿಡುವ ಮನೋಭಾವವನ್ನು ಹುಟ್ಟುಹಾಕಿ ಗಟ್ಟಿಗೊಳಿಸುವುದಾಗಿದೆ ಎಂಬ ನಿಲುವಿಗೆ ಅಧ್ಯಯನ ಬರುತ್ತದೆ. ಹಾಗಾದರೆ ಸವರ್ಣೀಯರೆಲ್ಲ ಇದೇ ಧೋರಣೆಯನ್ನು ಹೊಂದಿದವರೆ ಎಂಬ ಪ್ರಶ್ನೆ ಇಲ್ಲಿ ಇದಿರಾಗುತ್ತದೆ. ಇದನ್ನು ಒಪ್ಪಲಾಗುವುದಿಲ್ಲ. ಇದೇ ಶಂಕರಪ್ಪನ ತಾಯಿ ಕೆಂಚವ್ವಳು, ಮರಿಯ ಮತ್ತು ಅವನ ತಂದೆ ತಾಯಿಗಳು ಜೀತ ಬಿಟ್ಟು ಹೋಗಿ, ನಗರ ಸೇರಿ ಅಲ್ಲಿಯೇ ದುಡಿಯುತ್ತ ಮಗನನ್ನು ಓದಿಸಲು ಧನ ಸಹಾಯವನ್ನು ಕದ್ದು ಮಾಡುತ್ತಾಳೆ. ಜಾತಿಜನ್ಯ ಶೋಷಣೆ, ಆರ್ಥಿಕ ಸ್ಥಿತಿ, ಪರಾವಲಂಬಿ ಬದುಕು ಹೊಂದಿದ ಸೌಲಭ್ಯ ವಂಚಿತ ಜನರು ಶಿಕ್ಷಣ, ವ್ಯಾಪಾರ, ಉದ್ದಿಮೆಯಂಥ ಪ್ರಗತಿಯ ಹೆಜ್ಜೆ ಇಡಲು ಮೇಲ್ಜಾತಿ ಜನರ ಸಹಾಯ, ಮಾರ್ಗದರ್ಶನ, ಸಹೃದಯತೆ(ಕೆಂಚವ್ವ, ಧೂದಿಹಾಳ ಮಾಸ್ತರು)ಯನ್ನು ಅವಲಂಬಿಸಬೇಕಾದುದು ಅನಿವಾರ್ಯವೇನೋ ಎಂಬ ತೀರ್ಮಾನಕ್ಕೆ ಬರಬೇಕಾಗುತ್ತದೆ. ರಾಮಕೃಷ್ಣ ಗುಂದಿ ಅವರ 'ಅತಿಕ್ರಾಂತ' ಕತೆಯ ಗೋಪಾಳ, ಮಾದೇವ, ನಾರಾಯಣ, ತಿಮ್ಮಪ್ಪ, ರಾಮ, ಹೀಗೆ ಈ ಐದು ಜನ ದಲಿತ ಹುಡುಗರು ಶಿಕ್ಷಣಕ್ಕಾಗಿ ಗ್ರಾಮ ನಿರಾಕರಿಸುವ ಸಂದರ್ಭವನ್ನು ಪರಿಗಣಿಸಬಹುದು. ಈ ಹುಡುಗರು ಎಂಟು ಮೈಲು ದೂರದ ತಾಲೂಕಿನ ಹೈಸ್ಕೂಲು ಸೇರಲು ಹೊರಟಾಗ,

> 'ಅ' ಅಂಬೋ ಅಕ್ಷರ ಕಲಿತಿರದ ಕತ್ತಲ ಗವಿಯಿಂದ ಅಕ್ಷರದ ಬೆಳಕನ್ನು ಹೆಕ್ಕಿ ತರಲು ಎಂಟು ಮೈಲು ದೂರ ಹೊರಟ ಈ ಮಕ್ಕಳು ನಕ್ಷತ್ರ ಲೋಕಕ್ಕೆ ಪಯಣ ಹೊರಟ ಮಾಂತ್ರಿಕರೆಂಬಂತೆ ಹಿರಿಯರೆಲ್ಲರೂ ನಮ್ಮನ್ನು ಬೆರಗಿನಿಂದ ನೋಡುತ್ತಿದ್ದರು[೨೨]

ನಿರೂಪಕ ಕೊಡುವ ರೂಪಕ, ಇಡೀ ದಲಿತ ಜನಾಂಗ ಅಕ್ಷರಲೋಕ ಎಂಬ ಬೆಳಕಿನ ಲೋಕದಿಂದ ಕಳಚಿಕೊಂಡು, ಅಜ್ಞಾನವೆಂಬ ಕತ್ತಲದ ಗವಿಯಲ್ಲಿ ಬಹು ದೂರದಲ್ಲಿತ್ತು, ಹತ್ತಿರ ಹೊರಟವರನ್ನು ಬೆರಗಿನಿಂದ ನೋಡುತ್ತಿತ್ತು ಎಂಬ ನೆಲೆಯಲ್ಲಿದೆ. ಹೊಸ ಪರಿಸರಕ್ಕೆ ಎಂಟ್ರಿ (ಆಯ್ಕೆ) ಪಡೆಯುವಾಗ ಕುಗ್ಗುತ್ತಿದ್ದ ದಲಿತ ಮಕ್ಕಳ ನೈತಿಕ ಸ್ಥೈರ್ಯವನ್ನು ಹಿಗ್ಗುವಂತೆ ಮಾಡುವಾಗಿನ ಮುಗ್ಧ ದಲಿತ ಜಗತ್ತು ಸಂಭ್ರಮಿಸುತ್ತಿದ್ದ ರೀತಿ ಈ ನೆಲದ ಮನಸ್ಸುಗಳ ಆಶಯವನ್ನು ಬಿಂಬಿಸಿದೆ. 'ಸಾಲಿ ಕಲಿದೇ ಹ್ವಾದ್ರ ನಾವ್ ಉದ್ಧಾರಾಗವಾಂಗೇ ಇಲ್ಲಾ' (ಪುಟ ೬) ಎಂಬ ಗೋಪಾಳನ ಮಾತು ವಾಸ್ತವಿಕ ನೆಲೆಯಲ್ಲಿ ಚಿಂತಿಸುವ ಯುವಕರ ಜೀವನ್ಮುಖಿ ನಿರ್ಧಾರವಾಗಿದೆ. ವೈಯಕ್ತಿಕ ಅಪಮಾನ, ಸೋಲು, ಬದುಕಿನಲ್ಲಾದ ನೋವು ಗೋಪಾಳನಿಗೆ ತನ್ನ ಜನಾಂಗದ ಸ್ಥಿತಿಯ ಬಗ್ಗೆ ಎಚ್ಚರ ಮೂಡಿಸಿದೆ. ಹೀಗೆ ನಗರ ಆಯ್ಕೆ ಮಾಡಿಕೊಂಡ ದಲಿತರ ಮಕ್ಕಳು ವಿದ್ಯಾರ್ಥಿನಿಲಯದಲ್ಲಿ ಪ್ರವೇಶ ಪಡೆಯಲು 'ಮೇಲ್ಜಾತಿಯವರ ಕೈಕಾಲು ಹಿಡಿದು ವಶೀಲಿ ಮಾಡಿಸಿಕೊಳ್ಳುವ' (ಪುಟ ೪) ದೀನ ಸ್ಥಿತಿ ಈ ಅವಕಾಶವಂಚಿತ ಮಕ್ಕಳದ್ದಾಗಿದೆ. ಜೀವಮಾನಕಾಲ ತಮ್ಮ ಜಾತಿ, ಆರ್ಥಿಕತೆಯ ಕಾರಣಕ್ಕೆ ಅವಗಣನೆಗೆ ಒಳಗಾದ ಒಂದು ಸಮೂಹ, ಮೊತ್ತ ಮೊದಲು ಅಕ್ಷರ ಪ್ರಪಂಚಕ್ಕೆ ತೆರೆದುಕೊಳ್ಳುವಾಗ ಅನುಭವಿಸುವ ಸಂವೇದನೆಗಳು, ತುಂಬಿಕೊಳ್ಳುವ ದ್ವಂದ್ವಗಳು, ತಾಳುವ ನಿಲುವುಗಳು, ನಡಾವಳಿಗಳು ಮತ್ತು ಚಿಂತನಾಕ್ರಮಗಳು ಇಲ್ಲಿ ವ್ಯಕ್ತವಾಗಿವೆ.

## ಬ. ಉದ್ಯೋಗಾನ್ವೇಷಣೆ ಮತ್ತು ಆಯ್ಕೆ

ಭಾರತೀಯ ಔದ್ಯೋಗಿಕ ಸಂದರ್ಭದಲ್ಲಿ ವರ್ಣ, ಜಾತಿಗಳಿಗೆ ಮೊದಲಿನಿಂದಲೂ ಪ್ರಾಮುಖ್ಯತೆಯಿದೆ. ಚಾತುರ್ವರ್ಣಗಳಿಗೆ ನಿರ್ದಿಷ್ಟವಾದ ವೃತ್ತಿಗಳನ್ನು ನಿಯೋಜಿಸಲಾಗಿದ್ದು, ಜನರು ಮಾಡುವ ಕಾರ್ಯಗಳಿಂದಾಗಿ ಜಾತಿಗಳು ಹುಟ್ಟಿಕೊಂಡವೋ ಅಥವಾ ಹೆಸರಿಸಿದ ವಿವಿಧ ಜಾತಿಗಳಿಗೆ ಅನುಗುಣವಾಗಿ ವೃತ್ತಿಗಳನ್ನು ಹಂಚಲಾಯಿತೋ ಎಂಬುದು ಇನ್ನೂ ದ್ವಂದ್ವಾತ್ಮಕ ವಿಷಯವಾಗಿದೆ. ಭಾರತದಲ್ಲಿ ವಿದೇಶಿಯರ ಆಡಳಿತದ ಪರಿಣಾಮವಾಗಿ ಶಿಕ್ಷಣ, ಉದ್ಯೋಗಗಳು ಸಾರ್ವತ್ರೀಕರಣದ ಆರಂಭವನ್ನು ಕಂಡವೆಂದು ಹೇಳಬಹುದು. ಜನರು ಮಾಡುವ ವೃತ್ತಿಗಳಿಗೂ ಸಾಮಾಜಿಕವಾಗಿ ಅವರಿಗೆ ಸಿಗುವ ಸ್ಥಾನಮಾನಗಳಿಗೂ ಗಾಢವಾದ ಸಂಬಂಧವಿದೆ. ಕೈಗೊಂಡ ವೃತ್ತಿಯಲ್ಲಿ ನಷ್ಟ, ಬರ, ಆರ್ಥಿಕ ಮುಗ್ಗಟ್ಟು, ದುಶ್ಚಟಗಳಿಂದ ನಷ್ಟ, ಸಾಲದಲ್ಲಿ ಆಸ್ತಿ ಮುಳುಗಡೆ ಇತ್ಯಾದಿ ಕಾರಣಗಳು ನಿರಾಕರಣೆಯ ಅಂಶಗಳಾದರೆ, ಯಾರು ಯಾವ ಉದ್ಯೋಗವನ್ನಾದರೂ ಮಾಡಬಹುದೆಂಬ ತಿಳುವಳಿಕೆಯಿಂದ, ಅವರ ಆರ್ಥಿಕ, ಸಾಮಾಜಿಕ ಸ್ಥಿತಿಯನ್ನು ಅವಲಂಬಿಸಿ ವ್ಯಕ್ತಿ, ಕುಟುಂಬ ಇಂದು ನಗರ/ಮಹಾನಗರಗಳನ್ನು ಆಯ್ಕೆ ಮಾಡಿಕೊಳ್ಳುವುದು ಕಂಡುಬರುತ್ತದೆ.

ನಾ. ಡಿಸೋಜ ಅವರ 'ಮಂಜಿನ ಕಾನು' ಕಾದಂಬರಿಯ ಹಸಲರ ಕೊಲ್ಲನು ಕೃಷ್ಣಯ್ಯ ಹೆಗಡೆಯ ಹುಟ್ಟಾಳಾಗಿದ್ದವನು. ಅವಶ್ಯಕತೆಯ ಸಂದರ್ಭದಲ್ಲಿ ಸಾಲಕೊಟ್ಟು, ಅದನ್ನು ತೀರಿಸಲಾರದಂತೆ ಕನಿಷ್ಠ ಕೂಲಿ ನೀಡಿ ತಮ್ಮ ಹಿತಾಸಕ್ತಿ ಕಾಪಾಡಿಕೊಳ್ಳುವ ಭೂ ಮಾಲೀಕ ವರ್ಗದ ಸ್ವಭಾವದಂತೆ, ಕೃಷ್ಣಯ್ಯ ಕೊಲ್ಲನ ಹೆಂಡತಿಯ ಅನಾರೋಗ್ಯಕ್ಕೆ ಮೊದಲು ಧನ ಸಹಾಯ ಮಾಡಿ ನಂತರ ನಿಲ್ಲಿಸಿ ಬಿಡುತ್ತಾನೆ. ಹುಟ್ಟಾಳು ಮತ್ತು ಒಡೆಯರ ನಡುವಿನ ಸೌಹಾರ್ದಯುತ ಕೊಡುಕೊಳ್ಳುವಿಕೆ(ಶ್ರಮಕ್ಕೆ ತಕ್ಕ ಕೂಲಿ, ಬಟ್ಟೆ, ಮದ್ದಿನ ಖರ್ಚು, ಸೂರು ಇತ್ಯಾದಿ)ಗೆ ಒಡೆಯ ಅಡತಡೆ ಮಾಡಿದಾಗ ಹಸಲರ ಕೊಲ್ಲ ವಿಧಿಯಿಲ್ಲದೆ ಸ್ವತಂತ್ರನಾಗುವ ಕನಸು ಕಾಣುತ್ತಾನೆ. ಒಡೆಯನ ಹತ್ತಿರ ಬಂದು ತಾನು ಇನ್ನು ಮುಂದೆ ತಮ್ಮ ಹುಟ್ಟಾಳಲ್ಲವೆಂದು ಘೋಷಿಸಿ ಸ್ವತಂತ್ರನಾಗುತ್ತಾನೆ. ಅವನು ಸಾಗುವಳಿ ಮಾಡಿದ ಜಮೀನಿನ ಪೈರನ್ನು ನಾಶಮಾಡಿದ ಮೇಲ್ಜಾತಿಯ ಊಳಿಗಮಾನ್ಯ ವ್ಯವಸ್ಥೆ ಸುತ್ತಲಿನ ಗ್ರಾಮಗಳಲ್ಲಿ ಕೂಲಿ ಸಿಗದಂತೆ ನೋಡಿಕೊಳ್ಳುತ್ತದೆ. ದಲಿತರಲ್ಲಿ ಪ್ರಗತಿಪರರೆಂಬ ಆಶಯ ಹುಟ್ಟಿಸಿದ್ದ ರಾಮಚಂದ್ರಯ್ಯನವರೂ ತಮ್ಮ ಗದ್ದೆಯಲ್ಲಿ ಕೂಲಿ ಕೊಡುವುದಿಲ್ಲ. ಪ್ರಗತಿಪರರೆಂಬ ಸ್ವಘೋಷಿತ ವ್ಯಕ್ತಿತ್ವಗಳ ಸೋಗು ಇಲ್ಲಿ ಬಹಿರಂಗವಾಗಿದೆ. 'ಹಳ್ಳೀಲಿ ಎಂತ ಕೂಲಿ ಸಿಕ್ತಾತು ಕೊಲ್ಲ. ನೀ ಒಂದು ಕೆಲ್ಸ ಮಾಡು. ತಾಳಗುಪ್ಪೆಲಿ ಮಸ್ತ ಕೆಲ್ಸ ಐತೆ. ಕೆಲ್ಸ ಬೇಕೇ ಬೇಕು ಅಂತಿದ್ರೆ ಅಲ್ಲಿಗೆ ಹೋಗು. ದಿನಕ್ಕೆ ಹನ್ನೆರಡಾಣೆ ಸಿಗುತ್ತೆ'[೩೩] ಎಂಬ ಹಿರೇಮನೆ ಶಾನುಭೋಗರ ಮಾತುಗಳು ದೈಹಿಕ ಶ್ರಮಕ್ಕೆ ತಕ್ಕ ಪ್ರತಿಫಲ ಪಟ್ಟಣದಲ್ಲಿ ದೊರಕುವುದರ ಸೂಚನೆ ಕೊಡುತ್ತವೆ. ಗ್ರಾಮದ ಜಾತಿನೆಲೆ ಆಧಾರಿತ ಶೋಷಣೆಯು ಕೊಲ್ಲನು ತನ್ನ ಮಗ ಹಾಲಪ್ಪನೊಂದಿಗೆ ಪಟ್ಟಣವನ್ನು (ಹಕ್ಕಿನ ಹೋರಾಟದ ನೆಲೆಯಲ್ಲಿ) ಆಯ್ಕೆ ಮಾಡಿಕೊಳ್ಳಲು ಕಾರಣವಾಗುತ್ತದೆ.

ಪಾಟೀಲ ಪುಟ್ಟಪ್ಪ ಅವರ 'ಹೊನ್ನಯ್ಯನ ಬದುಕು' ಕತೆಯಲ್ಲಿ ಹೊಸಕೊಪ್ಪ ಗ್ರಾಮದ ಹನುಮಯ್ಯನದು ಹೆಂಡತಿ ಓಬವ್ವ, ಮಗ ಹೊನ್ನಯ್ಯರೊಂದಿಗಿನ ದುಡಿದುಣ್ಣುವ ನೆಮ್ಮದಿಯ ಕುಟುಂಬವಾಗಿತ್ತು. ಜುಗಾರಿ ಆಟದ ಹುಚ್ಚಿಗೆ ಬಿದ್ದ ಹನುಮಯ್ಯ ಪಿತ್ರಾರ್ಜಿತವಾಗಿ ಬಂದಿದ್ದ ಹೊಲ, ಮನೆಗಳನ್ನು ಕಳೆದುಕೊಂಡು ಬರಿಗೈಯಲ್ಲಿ ಬೀದಿಯಲ್ಲಿ ನಿಲ್ಲುತ್ತಾನೆ. ಮಗ, ಸೊಸೆ (ಪುಟ್ತಾಯಿ) ಬೆಂಗಳೂರು ನಗರ ಸೇರಲು ನಿರ್ಧರಿಸುತ್ತಾರೆ. ಆಯ್ಕೆಯ ಮುಂದೆ ದುಡಿದುಣ್ಣಲು ಬಂಡವಾಳದ ಪ್ರಶ್ನೆ ಕಾಡುತ್ತದೆ.

> 'ಪುಟ್ಟತಾಯಿ ಹೋಗಿ ಮನೆಯಲ್ಲಿ ಪಟ್ಟು ಹಿಡಿದು ಕುಳಿತು ತವರು ಮನೆಯಿಂದ ಎರಡು ಎಮ್ಮೆಗಳನ್ನು ತಾರದೇ ಹೋಗಿದ್ದರೆ, ಹೊನ್ನಯ್ಯನ ಸಂಸಾರವು ಇಂದು ಜೀವನೋಪಾಯವಿಲ್ಲದೆ ಬೀದಿಯಲ್ಲಿ ನಿಲ್ಲಬೇಕಾಗಿತ್ತು. ಕೆಟ್ಟು ಪಟ್ಟಣ ಸೇರು ಎನ್ನುವ ಮಾತು ಹನುಮಯ್ಯನ ಕುಟುಂಬಕ್ಕೆ ಸಂಪೂರ್ಣ ಅನ್ವಯಿಸಿತ್ತು.'[೩೪]

ಮಧ್ಯಮ ವರ್ಗದ ರೈತಾಪಿ ಕುಟುಂಬದ ಹನುಮಯ್ಯ ದುಶ್ಚಟಗಳಿಗೆ ಬಿದ್ದು, ಬರಿಗೈಯಾದಾಗ ಅವನ ಕುಟುಂಬದ ಸದಸ್ಯರ ಪ್ರತಿಕ್ರಿಯೆಯನ್ನು ಗಮನಿಸಬಹುದು. ಮಗ ಏನೂ ಮಾತಾಡದೆ ತಂದೆಯನ್ನು ಜೊತೆಗೆ ಕರೆದೊಯ್ಯುತ್ತಾನೆ. ಸೊಸೆ ತವರು ಮನೆಯಿಂದ ಎರಡು ಎಮ್ಮೆಗಳನ್ನು ತರುವುದು, ವೃತ್ತಿ ಬದಲಾವಣೆಯ ಸೂಚನೆಯಾಗಿದೆ. ಕೃಷಿಗಂತೂ ಭೂಮಿಯಿಲ್ಲ, ಹೈನುಗಾರಿಕೆಯಿಂದ ಬದುಕಬಹುದೆಂಬ

ನಿರ್ಧಾರ ಇಲ್ಲಿದೆ. ರೈತಾಪಿ ಕಾರ್ಯಗಳನ್ನು ನಿರ್ವಹಿಸಿದವರಿಗೆ ಹೈನುಗಾರಿಕೆ (ಪಶುಪಾಲನೆ) ಸುಲಭವಾಗಿ ಒಲಿದು ಬರುವ ಕೆಲಸವೂ ಆಗಿದೆ, ಹಾಗೂ ಅವಿದ್ಯಾವಂತ ಕೃಷಿ, ಕೃಷಿ ಕೂಲಿಕಾರರು (ಅದರಲ್ಲೂ ಮಹಿಳೆಯರು) ಈ ವೃತ್ತಿಯನ್ನು ಅವಲಂಬಿಸಿ ನಗರದ ಆಯ್ಕೆ ಮಾಡಿಕೊಳ್ಳುವುದು ಕಥನ ಸಾಹಿತ್ಯದಲ್ಲಿ ಕಂಡುಬರುತ್ತದೆ. ಮಿತ್ರಾ ವೆಂಕಟರಾಜ ಅವರ 'ಕೊನೆಯ ದಿನ' ಕತೆಯ ಮೋರಿಬಾಯಿ ಅನಾವೃಷ್ಟಿಯಿಂದ ನಗರ ಸೇರಿದಾಗ, ಕೋರಗಲ್ ವಿರೂಪಾಕ್ಷಪ್ಪ ಅವರ 'ಮಣ್ಣಿನ ಗುಣ' ಕತೆಯ ಗಂಗವ್ವ ಕೊಪ್ಪಳಕ್ಕೆ ಬಂದಾಗ ಯಾವ ಎಗ್ಗಿಲ್ಲದೆ ಈ ವೃತ್ತಿಯನ್ನು ಆಯ್ಕೆ ಮಾಡಿಕೊಳ್ಳುತ್ತಾರೆ.

ವೆಂಕಟೇಶ ಹುಣಶೀಕಟ್ಟೆ ಅವರ 'ಕೋಲ್ಮಿಂಚು' ಕಾದಂಬರಿಯ ರಾಮದುರ್ಗ ತಾಲೂಕಿನ ನರಸಾಪುರದ ಫಕ್ಕೀರಪ್ಪ ಉಂಡುಟ್ಟು ಸುಖವಾಗಿದ್ದ ಶ್ರಮಜೀವಿ ರೈತನಾಗಿದ್ದವನು. ಹೊಲವೊಂದರ ಕುರಿತು ವ್ಯಾಜ್ಯ ನ್ಯಾಯಾಲಯದ ಮೆಟ್ಟಿಲೇರಿ, ಹತ್ತಾರು ವರ್ಷ ಕೋರ್ಟಿಗೆ ಅಲೆದಾಡಿ ಸಾಲ ಮಾಡಿಕೊಳ್ಳುತ್ತಾನೆ. ಆದರೆ ಕೋರ್ಟಿನ ತೀರ್ಪು ವಿರೋಧಿಯ ಪರವಾಗಿ, ಕೈಯಲ್ಲಿದ್ದ ಜಮೀನನ್ನೂ ಕಳೆದುಕೊಂಡು ಕುಟುಂಬ ಸಮೇತ ಹುಬ್ಬಳ್ಳಿ(ಆಯ್ಕೆ)ಗೆ ಬರುತ್ತಾನೆ. 'ದೈವ ನೆಟ್ಟಗಿದ್ರ ಕಲ್ಲೂ ಬಂಗಾರ, ಕೆಟ್ಟದಿದ್ರ ಬಂಗಾರನೂ ಕಲ್ಲಾಗ್ತದ'[೩೫] ಅನ್ನುವ ಕಾದಂಬರಿಯ ವರಸೆ, ವಿಧಿವಾದದಲ್ಲಿ ನಂಬಿಕೆ ಇಟ್ಟು ನಿರ್ಣಯಗಳನ್ನು ಬಲವಂತವಾಗಿ ಹೇರುವ ನಿರೂಪಕರ ಮನಃಸ್ಥಿತಿಯನ್ನು ತೋರಿಸುತ್ತದೆ. ದಲಿತ, ಹಿಂದುಳಿದ ವರ್ಗಕ್ಕೆ ಮತ್ತು ಮಹಿಳೆಯರಿಗೆ ಅನ್ಯಾಯವಾದಾಗ ಆಡಳಿತದ ವೈಫಲ್ಯಗಳನ್ನು ವಿಧಿವಾದದಡಿ ಮುಚ್ಚಿಡಲು ಯತ್ನಿಸುವ ಕಾದಂಬರಿಕಾರರ (ಹಲವೊಮ್ಮೆ ಆಡಳಿತದ) ಜನಪರ ಕಾಳಜಿಯ ಬಗೆಗೇ ಸಂದೇಹ ಮೂಡುತ್ತದೆ. ನ್ಯಾಯವನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ವ್ಯಾಖ್ಯಾನಿಸಿ ಅರ್ಥೈಯಿಸುವ ಪರಿಭಾಷೆ ಇದಾಗಿರಬಹುದೆ ಎಂಬ ಜಿಜ್ಞಾಸೆ ಮೂಡುತ್ತದೆ. ಬಸವರಾಜ ಸಾದರ ಅವರ 'ಬಿಕ್ರ' ಕತೆಯ ಬಿಕ್ರ ಎಂಬ ರೈತನೂ ಸಹ ಊರ ಸಾವುಕಾರನ ಹತ್ತಿರ ಮಾಡಿದ ಸಾಲಕ್ಕಾಗಿ ಹೊಲವನ್ನೂ, ಸಾವುಕಾರನ ಮಗನ ಸ್ತ್ರೀಚಪಲಕ್ಕೆ ಹೆಂಡತಿಯನ್ನೂ ಕಳೆದುಕೊಂಡು ದಿಕ್ಕೇಡಿಯಾಗಿ ಹೊರಟು ನಗರವನ್ನು ಆಯ್ಕೆ ಮಾಡಿಕೊಳ್ಳುತ್ತಾನೆ.

> '..ಊರಿಂದ ಹೊರಬಿದ್ದು ಅಲೆಮಾರಿಯಾಗಿ ಹೊರಟಾಗ ಹಳ್ಳಿಯೂ ಅಲ್ಲದ, ದೊಡ್ಡ ಶಹರವೂ ಅಲ್ಲದ, ಮುನಸಿಪಾಲಟಿಯ ಆಡಳಿತವಿದ್ದ ಆ ನಗರದ ಹತ್ತಿರದಲ್ಲಿ ನಿರ್ಮಾಣವಾಗುತ್ತಿದ್ದ ಬೇರೊಂದು ಬಗೆಯದೇ ಆದ ಆ ಕಟ್ಟಡ ಅವನನ್ನು ತನ್ನತ್ತ ಆಕರ್ಷಿಸಿದ್ದರಿಂದ ಬಿಕ್ರ ಅದರ ಹತ್ತಿರ ಬಂದಿದ್ದ, ಕುತೂಹಲದಿಂದ."[೩೬]

ಇಲ್ಲಿ ನರಸಪ್ಪ ವಿದ್ಯಾವಂತ, ಪ್ರಾಮಾಣಿಕ ರೈತನಾಗಿದ್ದೂ, ಬಡವನಾಗಿದ್ದರಿಂದ ನ್ಯಾಯ ಅವನನ್ನು ವಂಚಿಸುತ್ತದೆ. ಗುಮಾಸ್ತನಾಗಿ ಅವನು ಮಂಡಿ(ನಗರ) ಅಂಗಡಿ ಸೇರುತ್ತಾನೆ. ಬಿಕ್ರನ ಪರಿಸ್ಥಿತಿಯನ್ನು ಎರಡು ದೃಷ್ಟಿಯಿಂದ ಗಮನಿಸಿದಾಗ ಅವನು ಅನುಭವಿಸಿದ ಅಸಹಾಯಕತೆಯ ಅರಿವಾಗುತ್ತದೆ. ಒಂದೆಡೆ ಹೊಲ, ಹೆಂಡತಿಯನ್ನು ಕಳೆದುಕೊಂಡು ಗ್ರಾಮದ ಮೇಲ್ವರ್ಗದ ಭೂಮಾಲೀಕ ಸಮುದಾಯದ ವಿರೋಧ ಕಟ್ಟಿಕೊಂಡು ಊರನ್ನು ನಿರಾಕರಿಸಿ ದಿಕ್ಕೇಡಿಯಾದದ್ದು, ಊರನ್ನು ಅವನೇ ನಿರಾಕರಿಸಿದನೋ ಅಥವಾ ಊರೇ ಅವನನ್ನು ನಿರಾಕರಿಸಿ ಆಚೆ ತಳ್ಳಿತೋ ಎಂಬುದನ್ನು ಕತೆ ಸ್ಪಷ್ಟಪಡಿಸುವುದಿಲ್ಲ. ಆದರೆ ಎರಡರಿಂದಲೂ ಉಂಟಾಗುವ ಪರಿಣಾಮ ಒಂದೇ ಆಗಿದೆ. ಇನ್ನೊಂದೆಡೆ ಹೊಟ್ಟೆ ಪಾಡಿಗೆ ಅಲೆಯುವಾಗ, ಊರಿನ ನೆನಪುಗಳ ದ್ವಂದ್ವ, ಹಸಿವುಗಳನ್ನು ತಾಳಲಾರದೇ ಸಿಕ್ಕ ಉದ್ಯೋಗಕ್ಕಾಗಿ ಆಸೆಯಿಂದ ಕೈಚಾಚಿ ನಿಂತಿದ್ದು. ಊಳಿಗಮಾನ್ಯ (ಜಮೀನ್ದಾರಿ ಪದ್ಧತಿ) ವ್ಯವಸ್ಥೆಯನ್ನು ವಿರೋಧಿಸಿ ಅವಮಾನದಿಂದ ಹೊರಬಂದ ಬಿಕ್ರ, ಹಸಿವಿಗಾಗಿ ಈ ವ್ಯವಸ್ಥೆಯ ಇನ್ನೊಂದು ರೂಪವಾದ ಬಂಡವಾಳಶಾಹಿ ವ್ಯವಸ್ಥೆಯ ಬಿಗಿ ಹಿಡಿತಕ್ಕೆ ಸಿಕ್ಕುವುದು, ಅವಕಾಶವಂಚಿತ ವರ್ಗಗಳ ಆರ್ಥಿಕ ಅಸಹಾಯಕತೆ, ಪರಾವಲಂಬನೆಯನ್ನು ತೋರಿಸುತ್ತದೆ. ಆರ್ಥಿಕ ಅಸಹಾಯಕರು ಎಲ್ಲೇ ಹೋದರೂ ಈ ವ್ಯವಸ್ಥೆಗಳ ಬಂಧನದಲ್ಲಿಯೇ ಬದುಕಬೇಕಾದ ಅನಿವಾರ್ಯತೆಯನ್ನು ಜಾಗತೀಕರಣದ ದಿನಗಳು ಸೃಷ್ಟಿಸಿಬಿಟ್ಟಿವೆ ಎಂಬುದು ಅಧ್ಯಯನದ ನಿಲುವಾಗಿದೆ.

## ೩. ಸಾಮಾಜಿಕ ನೆಲೆ ಮತ್ತು ಆಯ್ಕೆ

### ಅ. ಆಶ್ರಯ ಮತ್ತು ಆಯ್ಕೆ : ಮೇಲ್ವರ್ಗಗಳ ನೆಲೆಯಿಂದ

ವರ್ಣ, ವರ್ಗ ವ್ಯವಸ್ಥೆಗಳಿಂದ ನಿರ್ಮಿತವಾದ ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಒಬ್ಬ ವ್ಯಕ್ತಿಯ ಸಾಮಾಜಿಕ ನೆಲೆ ಅವನ ಧರ್ಮ, ಜಾತಿ ಮತ್ತು ಆರ್ಥಿಕ ಭದ್ರತೆಯಂತಹ ಪೂರಕ ಅಂಶಗಳನ್ನು

ಅವಲಂಬಿಸಿದೆ. ಈ ಅಂಶಗಳನ್ನು ವ್ಯಕ್ತಿಯ ಸಾಮಾಜಿಕ ಬದುಕಿನ ಬೇರುಗಳು ಎಂದು ಕರೆಯಬಹುದು. ವ್ಯಕ್ತಿಯೊಬ್ಬರ ಮೂಲ ನೆಲೆಯ ನಿರಾಕರಣೆಯಲ್ಲಿ ಇವು ಹೇಗೆ ಪ್ರಮುಖ ಪಾತ್ರ ವಹಿಸುತ್ತವೆಯೋ ಹಾಗೆ ಅವರ ಹೊಸ ನೆಲೆಯ ಆಯ್ಕೆಯಲ್ಲಿ ಸಹ ಇವುಗಳ ಸಕ್ರಿಯ ಪಾತ್ರವಿದೆ. ಗ್ರಾಮ/ನಗರ ನಿರಾಕರಣೆಯ ಸಂದರ್ಭ ಬಂದಾಗ ವ್ಯಕ್ತಿಗಳು ಮುಂದಿನ ಆಯ್ಕೆ ಯಾವುದು, ಎಂಬ ವಿಷಯದತ್ತ ಗಮನ ಹರಿಸುತ್ತಾರೆ. ಗ್ರಾಮ/ನಗರದಲ್ಲಿ ಈಗಾಗಲೇ ನೆಲೆಸಿರುವ ಬಂಧುಗಳು, ಸ್ನೇಹಿತರು, ಪರಿಚಯಸ್ಥರ ಕಡೆ ಅವರ ಮೊದಲ ದೃಷ್ಟಿ ಬೀಳುತ್ತದೆ. ಅನುಕೂಲವೋ, ಅನಾನುಕೂಲವೋ ಅವರ ಸಹಾಯವನ್ನು ಯಾಚಿಸಿ ಆಯ್ಕೆಯನ್ನು ನಿರ್ಧರಿಸುವುದು ಕಂಡುಬರುತ್ತದೆ. ಇಂತಹ ಆಯ್ಕೆಗಳಿಗೆ ಕಾರಣಗಳೇನು, ಆಯ್ಕೆಯ ಹಿಂದಿರುವ ಉದ್ದೇಶ, ಸ್ವಾರ್ಥ ಅಥವಾ ಆದರ್ಶಗಳೇನು, ಈ ಆಯ್ಕೆಯನ್ನು ಯಾವ ವರ್ಗದ ಜನರು ಹೆಚ್ಚಾಗಿ ಮಾಡುತ್ತಾರೆ ಎಂಬುದನ್ನು ಕಥನ ಸಾಹಿತ್ಯದ ಮೂಲಕ ಚರ್ಚಿಸಬಹುದು.

ತಮ್ಮ ಪ್ರಗತಿಪರ ನಿಲುವು, ಧೋರಣೆ ಮತ್ತು ಸುಧಾರಣಾ ಕಾರ್ಯಗಳಿಂದ ವ್ಯಾಸರಾಯ ಬಲ್ಲಾಳ ಅವರ 'ಹೆಜ್ಜೆ' ಕಾದಂಬರಿಯ ಸಾವಿತ್ರಿ, ವಿದ್ಯಾಧರರು ಕೆಡದೂರಿ(ಗ್ರಾಮ)ನಿಂದ ನಿರಾಕರಿಸಲ್ಪಡುತ್ತಾರೆ. ಮುಂದೆ ಎಲ್ಲಿಗೆ ಎಂಬ ಪ್ರಶ್ನೆ ಅವರನ್ನು ಕಾಡುತ್ತವೆ. "ಅದೂ ನಿಶ್ಚಯವಿಲ್ಲ. ಆದರೆ ಕೊನೆಗೆ ಗುರಿ ಮುಂಬಯಿಯೆಂದೇ ತೋರುತ್ತದೆ" (ಪುಟ ೩೩೪) ಎಂಬ ವಿದ್ಯಾಧರನ ಮಾತು ಅವರ ಆಯ್ಕೆಯ ಅನಿಶ್ಚಿತತೆಯನ್ನು ಸೂಚಿಸುತ್ತದೆ. ವಿದ್ಯಾಧರನ ಕಮ್ಯೂನಿಷ್ಟ್ ಚಟುವಟಿಕೆಗಳಿಂದ ಅವನ ಬಂಧನವಾಗುವ ಸಾಧ್ಯತೆಯೂ ಇದ್ದು, ಅದರಿಂದ ಪಾರಾಗಲು ಅವನಿಗೆ ಆಶ್ರಯದ ಅವಶ್ಯಕತೆಯಿದೆ. ತಮ್ಮ ಪ್ರಗತಿಶೀಲ ಕಾರ್ಯಗಳಿಂದ ಅತೃಪ್ತಿಗೊಂಡ ಕೆಡದೂರು-ಕೊಡದೂರಿನ ಸಂಪ್ರದಾಯವಾದಿಗಳನ್ನು ತೃಪ್ತಿಪಡಿಸಲು ಮುಂಬಯಿಯಲ್ಲಿ ನೆಲೆಸಿರುವ ಸಾವಿತ್ರಿಯ ತಂದೆಯ ಆಶ್ರಯದ ಆಶಯ ಇವರ ಆಯ್ಕೆಯ ಹಿಂದಿದೆ. ಬಾಲ್ಯದಲ್ಲಿ ಸಾವಿತ್ರಿ ತಾಯಿಯೊಂದಿಗೆ ಮುಂಬಯಿಗೆ ಹೋಗಿದ್ದಾಗ, ಅಲ್ಲಿನ ಸ್ವಚ್ಛಂದ ವಾತಾವರಣ, ಜಾತಿ, ವರ್ಣರಹಿತ ಸಮಾಜದಲ್ಲಿನ ಮುಕ್ತತೆ ಸಾವಿತ್ರಿಯನ್ನು ಸೆಳೆಯುತ್ತವೆ. ಮುಂಬಯಿಯ ಮೋನಪ್ಪಶೆಟ್ಟಿಯ ಹೋಟೆಲಿನಲ್ಲಿ ಊಟ ಮಾಡುತ್ತಿದ್ದಾಗ ಪ್ರತಿಭಟಿಸಿದ ತಾಯಿಗೆ ಸಾವಿತ್ರಿಯ ತಂದೆ,

> 'ಇಲ್ಲಿ ಜಾತಿ, ಗೀತಿ ಯಾರೂ ನೋಡಲ್ಲ ರುಕ್ಮಿಣಿ. ಹಾಗೆ ನೋಡಿಕೊಂಡಿದ್ದರೆ ಬದುಕಲಿಕ್ಕೂ ಸಾಧ್ಯವಿಲ್ಲ. ಹಸಿದ ಹೊಟ್ಟೆಗೆ ಊಟ ಬೇಕಾದರೆ ಹತ್ತಿರದ ಹೋಟಲ್ಲೆ ಬೇಕು. ಯಾರಾದರೇನು... ಇದು ರೈಸ್ ಪ್ಲೇಟ್ ಮೀನು, ಮಾಂಸವೇನಲ್ಲ' ಎಂದಿದ್ದರು.[೨೯]

ಇಂಥ ಆಧುನಿಕ ವಾತಾವರಣವಿರುವ ನಗರದಲ್ಲಿ ಜೀವನಕ್ಕೆ ಒಂದು ವೃತ್ತಿಗಾಗಿ ತಂದೆಯ ಸಹಾಯ ಕೋರಿದ್ದ ಸಾವಿತ್ರಿ ಮುಂಬಯಿ ನಗರ ತಮಗೆ ಸುರಕ್ಷಿತ ನೆಲೆ ಎಂದು ತಿಳಿದು ಆಯ್ಕೆ ಮಾಡಿಕೊಳ್ಳುತ್ತಾಳೆ. ಕೇಶವ ಮಳಗಿ ಅವರ 'ಕಡಲ ತೆರೆಗೆ ದಂಡೆ' ಕತೆಯ ಸತ್ಯಪ್ರಮೋದ ತನ್ನ ದುಶ್ಚಟಗಳಿಂದ ದಾರಿತಪ್ಪಿ, ತಂದೆಯೊಡನೆ ಜಗಳ ಮಾಡಿ ನಿಂತಾಗ, ಅವನೆದುರಿಗೆ ಕಂಡಿದ್ದು ಅವನ ಬಾಲ್ಯ ಗೆಳೆಯ ಅಚ್ಯುತ. ಈ ಗೆಳೆಯ ಶಹರ ಸೇರಿ ಕಾರ್ಖಾನೆಯಲ್ಲಿ ನೌಕರಿ ಹಿಡಿದು, ದುಡಿದು ತನ್ನ ಅಬಚಿಗೆ ಹಣ ಕಳಿಸುತ್ತಿರುವ ಸಂಗತಿ ತಿಳಿದಾಗ, ಒಂದು ಆದರ್ಶ ಅವನ ಮುಂದೆ ನಿಲ್ಲುತ್ತದೆ, ಬದುಕುವ ದಾರಿ ತೆರೆದುಕೊಳ್ಳುತ್ತದೆ. ಶಹರದ ಆಕರ್ಷಣೆಯನ್ನು ಬೆಳೆಸಿಕೊಂಡ ಸತ್ಯಪ್ರಮೋದನ ಆಯ್ಕೆಯ ಹಿಂದೆ ಅಚ್ಯುತನ ನಗರದ ಭದ್ರ ಆರ್ಥಿಕನೆಲೆಯ ಆಸರೆ ಕಾರಣವಾಗಿದೆ. ಪರಿಸರದ ಕೂಸು ಎನಿಸಿದ ಯಾವುದೇ ವ್ಯಕ್ತಿ ಹುಟ್ಟುತ್ತ ಒಳ್ಳೆಯವರಾಗಿ ಅಥವಾ ಕೆಟ್ಟವರಾಗಿ ಹುಟ್ಟುವುದಿಲ್ಲ. ಅವರು ಬೆಳೆದು ಬಂದ ಕುಟುಂಬ ಮತ್ತು ಪರಿಸರಗಳು ಅವರನ್ನು ಒಳ್ಳೆಯ/ಕೆಟ್ಟವರಾಗುವ ಸ್ಥಿತಿಗೆ ತಳ್ಳುತ್ತವೆ. 'ನನಗೂ ಗೊತ್ತದ, ಯಾವುದೆ ಮನುಷ್ಯಾ ಯಾವಗ್ಲೂ ಒಳ್ಳೆಯವನು, ಯಾವಾಗ್ಲೂ ಕೆಟ್ಟವನೂ ಆಗಿರಂಗಿಲ್ಲಂತ; ಪರಿಸ್ಥಿತಿಗೆ ತಕ್ಕಂಗ ಅವ ಬದಲಾಗತಿರತಾನಂತ"[೩೦] ಎಂದು ಹೇಳುತ್ತಿದ್ದ ಅನ್ಸರನ ಮಾತು ಸತ್ಯಪ್ರಮೋದನ ವಿಷಯದಲ್ಲಿ ಅಕ್ಷರಶಃ ನಿಜವೆನಿಸುತ್ತದೆ. ಗ್ರಾಮದ ಮೇಲ್ಜಾತಿಯ ಕುಟುಂಬವೊಂದರ ಉಡಾಳ ಮಗನಾದ ಸತ್ಯಪ್ರಮೋದ, ಗೆಳೆಯ ಅಚ್ಯುತ ನಗರದಲ್ಲಿರದಿದ್ದರೆ ಯಾವ ನೆಲೆಯನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದ ಎಂಬ ಪ್ರಶ್ನೆ ಕಾಡುತ್ತದೆ. ಗ್ರಾಮದಿಂದ ತಿರಸ್ಕರಿಸಲ್ಪಟ್ಟ ಅವನು ಆಸರೆಗಾಗಿ (ಆರ್ಥಿಕ ಭದ್ರತೆ ಎನ್ನೋಣವೆ?) ನಗರದತ್ತ ನೋಡಲು, ಅಚ್ಯುತ ಒಂದು ಕಾರಣವಾಗುತ್ತಾನೆ. ಗೊಂದಲ(ದ್ವಂದ್ವ)ದ ಗೂಡಾಗಿರುವ ಗ್ರಾಮೀಣ ವ್ಯಕ್ತಿತ್ವಗಳನ್ನು ನಗರ ಪ್ರಭಾವಿಸುವ, ಆಕರ್ಷಿಸುವ ರೀತಿಯನ್ನು ಪರೋಕ್ಷವಾಗಿ ಕಥನಗಳು ಕಟ್ಟಿಕೊಟ್ಟಿವೆ. ವ್ಯಾಸರಾವ್ ನಿಂಜೂರ ಅವರ 'ನಿರಾಕರಣೆ' ಕತೆಯ ಕೇಶವ ಅಬ್ರಾಹ್ಮಣನಾಗುವ (ಇವನ ಆಯ್ಕೆಯಲ್ಲಿಯೇ ನಗರದ ವ್ಯಾಖ್ಯಾನ

ಅಡಗಿದೆಯೆನ್ನಬಹುದು) ಉದ್ದೇಶದಿಂದ ಗ್ರಾಮ ನಿರಾಕರಿಸಲು ನಿರ್ಧರಿಸಿದಾಗ, ಅವನ ಮುಂದೆ ಈಗಾಗಲೇ ಗ್ರಾಮ ತೊರೆದು ನಗರ ಸೇರಿ ನೆಲೆ ನಿಂತ ಇಬ್ಬರು ದಲಿತರಾದ ಇನಾಸ ಮತ್ತು ಅಂಗಾರರ ಬದುಕಿನ ದರ್ಶನವಿದೆ. ಇವರಿಬ್ಬರೂ ಕೇಶವನಲ್ಲಿ ಈ ಗ್ರಾಮ ಬಿಟ್ಟರೆ ಇನ್ನೊಂದು ವಿಶಾಲ ಜಗತ್ತುಂಟು ಎನ್ನುವ ವೈಚಾರಿಕ ಬೀಜ ಬಿತ್ತಿರುತ್ತಾರೆ.

> 'ಆತ ಒಂದೆರಡು ಬಾರಿ ಊರಿಗೆ ಮರಳಿದಾಗ ಕೈಗೆ ವಾಚು, ಕಣ್ಣಿಗೆ ಕಪ್ಪು ಕನ್ನಡಕ, ಎದೆಯ ನೆಟ್ ಬನೀನು ಕಾಣುವಂತೆ ಹಾಕಿಕೊಂಡ ಅರೆ ತೆರೆದ ಟೆರಿಲಿನ್ ಶರಟು, ವುಲ್ಲನ್ ಪ್ಯಾಂಟು ಎಲ್ಲ ಕಂಡು ಈತನೇನು ಧರೆಗಿಳಿದ ದೇವತೆಯೋ? ಎಂಬಂತೆ ಅವನನ್ನು ಅಚ್ಚರಿ ಮಿಶ್ರಿತ ಅಸೂಯೆಯಿಂದ ದಿಟ್ಟಿಸಿದ್ದುಂಟು.'[೨೯]

ಈ ಅಸೂಯೆ ಕೇಶವನ ನಗರ ಆಕರ್ಷಣೆಯ ಮೂಲವಾಗಿ ಅವನ ಸುಪ್ತ ಮನಸ್ಸಿನಲ್ಲಿಯೇ ಬೇರೂರಿ ಉಳಿದು ಬಿಡುತ್ತದೆ. ನಂತರ ಇನಾಸನಿಗೆ ಪತ್ರ ಬರೆದು ಮುಂಬಯಿ(ಆಯ್ಕೆ)ಯ ಬಸ್ಸನ್ನು ಹಿಡಿಯುತ್ತಾನೆ.

ಮೇಲಿನ ಸಂದರ್ಭಗಳಲ್ಲಿ ವಿದ್ಯಾಧರ, ಸಾವಿತ್ರಿ, ಸತ್ಯಪ್ರಮೋದ, ಕೇಶವರು ಮೇಲ್ಜಾತಿಯ ಕುಟುಂಬದ ವ್ಯಕ್ತಿಗಳಾಗಿದ್ದಾರೆ ಮತ್ತು ಸತ್ಯಪ್ರಮೋದನನ್ನು ಹೊರತುಪಡಿಸಿ ತಕ್ಕ ಮಟ್ಟಿಗೆ ಆರ್ಥಿಕ ಭದ್ರತೆಯನ್ನು ಹೊಂದಿದ್ದಾರೆ. ಇವರಾರೂ ಶ್ರಮಿಕವರ್ಗಕ್ಕೆ ಸೇರಿದವರಲ್ಲ. ಇವರ ನಗರ ಆಯ್ಕೆಯು ಶ್ರಮಾಧಾರಿತ ಬದುಕನ್ನು ಅನ್ವೇಷಿಸಲು ಎಂದು ಹೇಳಲಾಗುವುದಿಲ್ಲ. ಇವರು ಕೌಟುಂಬಿಕ ಮತ್ತು ಸಾಮಾಜಿಕ ವಿರೋಧಿ ನೆಲೆಯಲ್ಲಿ ಗ್ರಾಮ ನಿರಾಕರಣೆ ಮಾಡಿದವರಾಗಿದ್ದಾರೆ. ಕೇಶವನನ್ನು ಹೊರತುಪಡಿಸಿ ಉಳಿದಿಬ್ಬರ ಆಯ್ಕೆಯಲ್ಲಿ ಆತಂಕ, ತಲ್ಲಣಗಳು ಕಾಣುವುದಿಲ್ಲ. ವಿದ್ಯಾಧರ, ಸಾವಿತ್ರಿಯರಿಗೆ ಸಾವಿತ್ರಿಯ ತಂದೆ, ಸತ್ಯಪ್ರಮೋದನಿಗೆ ಅಚ್ಯುತ ಹೀಗೆ ಆಶ್ರಯ ನೀಡುವುದು ನಿಶ್ಚಯವಾಗಿದ್ದು, ಆ ಭರವಸೆಯಲ್ಲಿಯೇ ಅವರ ನಗರ ಪ್ರವೇಶವಾಗುತ್ತದೆ. ಈ ಆಶ್ರಯ ಕೌಟುಂಬಿಕ ಹಾಗೂ ಜಾತಿನೆಲೆಯಲ್ಲಿ ನಡೆದ ಆಯ್ಕೆ ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಈ ಮೂವರು ವ್ಯಕ್ತಿ/ಕುಟುಂಬಗಳಿಗೆ ಸಾಮಾಜಿಕ ಭದ್ರತೆಯ ಆವಶ್ಯಕತೆಗಿಂತ ಆರ್ಥಿಕ ಆಸರೆಯ ಅವಶ್ಯಕತೆಯುದೆಯೆಂದು ಅಧ್ಯಯನ ಗುರುತಿಸುತ್ತದೆ. ಜಾತಿಯನ್ನು ನಿರಾಕರಿಸಿ ಬಂದ ಕೇಶವ ತನ್ನ ಗುರಿಯಂತೆ ಶೂದ್ರ ಸ್ನೇಹಿತನ ಆಸರೆಗೆ ಬರುತ್ತಾನೆ.

## ಆಸರೆ ಮತ್ತು ಆಯ್ಕೆ : ಕೆಳವರ್ಗಗಳ ನೆಲೆಯಿಂದ

ರಮಾನಂದ ಅಮೀನ ಅವರ 'ಗದ್ದೆಯ ಸೆರಗು' ಕಾದಂಬರಿಯ ವೇಣುಗೋಪಾಲನ ನಗರ ಆಯ್ಕೆಯು ಕೌಟುಂಬಿಕ ಸಂಬಂಧಗಳ ನೆಲೆಯಲ್ಲಿ ನಿರ್ಧರಿಸಿದ್ದಾಗಿದೆ. ವೇಣುಗೋಪಾಲ ತನ್ನ ಹಳ್ಳಿಯಲ್ಲಿಯೇ ಒಂದು ಉದ್ಯೋಗ, ಒಂದು ನೆಲೆಗೆ ಗಂಭೀರ ಪ್ರಯತ್ನ ಮಾಡುತ್ತಾನೆ. ಮುಂಬಯಿಯಲ್ಲಿದ್ದ ಅಣ್ಣ ಚಿದಂಬರನಿಗೆ ಪತ್ರ ಬರೆದು ಮನೆಯ ಪರಿಸ್ಥಿತಿಯನ್ನು ವಿವರಿಸಿ, ತನಗೆ ಒಂದು ಉದ್ಯೋಗ ತೆಗೆಸಿಕೊಡಲು ವಿನಂತಿಸುತ್ತಾನೆ. ನಗರದ ಆಧುನಿಕ ವ್ಯವಹಾರ ಸಂಸ್ಕೃತಿಗೆ ತನ್ನನ್ನು ಅರ್ಪಿಸಿಕೊಂಡಿದ್ದ ಅಣ್ಣ ಇದಕ್ಕೆ ಸರಿಯಾಗಿ ಸ್ಪಂದಿಸುವುದಿಲ್ಲ. ಆದರೂ ವೇಣುಗೋಪಾಲನ ಮುಂಬಯಿ ಆಯ್ಕೆಗೆ, ಹಿಂದೆ ತಂಗಿಯರ ಮದುವೆಗೆ ಬಂದಿದ್ದ ಚಿದಂಬರನ ಬಟ್ಟೆ-ಬರೆ, ಉಡುಗೊರೆಗಳು, ಶಿಸ್ತುಬದ್ಧ ಜೀವನಗಳು ಪ್ರಭಾವ ಬೀರಿವೆ. 'ಇಸ್ತ್ರಿ ಹಾಕದೆ ಇದ್ದ ಬಟ್ಟೆಗಳನ್ನು ಚಿದಂಬರ ತೊಟ್ಟುಕೊಳ್ಳುತ್ತಿರಲಿಲ್ಲ. ತಂಗಿಯರಿಂದ ಒಗೆಸಿ, ತಮ್ಮನಿಂದ ಇಸ್ತ್ರಿ ಮಾಡಿಸಿಕೊಂಡು ಧರಿಸುತ್ತಿದ್ದ.'[೩೦] ವೇಣುಗೋಪಾಲನನ್ನು ಮುಂಬಯಿ ನಗರವೇ ಆಕರ್ಷಿಸಲು ಇನ್ನೊಂದು ಪ್ರಮುಖ ಕಾರಣ ಅವನ ವ್ಯಾಸಂಗದ ಮಹತ್ವಾಕಾಂಕ್ಷೆಯಾಗಿದೆ. ಮೆಟ್ರಿಕ್ ಪಾಸಾದ ಅಣ್ಣ ಮುಂಬೈ ಸೇರಿ ಕೆಲಸ ಮಾಡುತ್ತಾ ಓದಿ ಪದವಿ, ಬ್ಯಾಂಕ್ ಪರೀಕ್ಷೆಗಳನ್ನು ಪಾಸುಮಾಡಿ ಉತ್ತಮ ನೌಕರಿ ದೊರಕಿಸಿಕೊಂಡಿದ್ದಾನೆ ಎಂಬ ಅಂಶ ಅವನನ್ನು ಸೆಳೆಯುತ್ತದೆ. ಇವೆಲ್ಲವೂ ಗ್ರಾಮೀಣ ಪ್ರದೇಶದ ನಿರುದ್ಯೋಗಿ ಯುವಕರನ್ನು ತನ್ನತ್ತ ಸೆಳೆದುಕೊಳ್ಳುವ ನಗರದ ಸೌಲಭ್ಯಗಳೆಂಬ ಆಮಿಷಗಳಾಗಿವೆ. ತುಳಸಿ ವೇಣುಗೋಪಾಲ್ ಅವರ 'ಹೊಂಚು' ಕಥೆಯ ಪಾಂಡು ಮಳೆಯಿಂದ ಬೆಳೆ ಬೆಳೆಯುವ ಸಾಮಾನ್ಯ ಕೃಷಿಕ. ಬರದ ಬೇಗೆಯಲ್ಲಿ ಇವರ (ಪಾಂಡೂ-ಸಕ್ಕೂ) ಕುಟುಂಬ ತುತ್ತು ಅನ್ನಕ್ಕೂ ಕಷ್ಟಪಡುವುದು ಮಳೆಯಾಧಾರಿತ ಕೃಷಿಯ ಶೋಚನೀಯ ಸ್ಥಿತಿಯಾಗಿದೆ. ಮುಂಬಯಿಯಲ್ಲಿರುವ ತನ್ನ ಅಣ್ಣನತ್ತ ಕುಟುಂಬವನ್ನು ಕರೆದೊಯ್ಯುವ ಸಕ್ಕೂಬಾಯಿಯ ಆಸೆ ಅವಳ ಅತ್ತೆ ಬದುಕಿರುವವರೆಗೂ ಈಡೇರುವುದಿಲ್ಲ. ಅತ್ತೆಯ ಕಾಲಾನಂತರ ಬಂದ ಸಕ್ಕೂಳ ಅಣ್ಣ ಭಾವು, ಪಾಂಡು-ಸಕ್ಕೂರ ಕುಟುಂಬವನ್ನು

ಮುಂಬಯಿಗೆ ಕರೆದೊಯ್ಯುವುದಾಗಿ ಭರವಸೆ ಕೊಡುತ್ತಾನೆ. ಇಲ್ಲಿ ಅನಾವೃಷ್ಟಿಯಿಂದ ಬಸವಳಿದಿದ್ದ ಪಾಂಡುವಿನ ಪ್ರತಿಕ್ರಿಯೆಯನ್ನು ಗಮನಿಸಬಹುದು. ಭಾವುವಿನ ಪ್ಯಾಂಟು ಶರ್ಟು ಹಾಕಿಕೊಂಡು ಅವನ ಬಣ್ಣದ ಕನ್ನಡಕದಲ್ಲಿ ಮಳೆಯಿಲ್ಲದೆ ಒಣಗಿದ ಪೈರು, ಭೂಮಿಯನ್ನು ನೋಡುತ್ತಾನೆ.

> 'ಒಣಗಿ ನಿಂತ ಪೈರು, ಗಿಡಮರಗಳೆಲ್ಲಾ ಕಪ್ಪು ಕನ್ನಡಕದಲ್ಲಿ ಹಸಿರಾಗಿ, ತಂಪಾಗಿ ಕಾಣುತ್ತಿದ್ದ ಹೊತ್ತಿಗೆ ಪಾಂಡು ಶಹರಕ್ಕೆ ಹೋಗುವ ನಿರ್ಧಾರ ಮಾಡಿಯೇ ಬಿಟ್ಟ.'[೮]

ಎಂಬ ವಾಕ್ಯ ಮರೀಚಿಕೆಯನ್ನು ಬೆನ್ನತ್ತಿ ನಡೆಯುವವನ ಭ್ರಮಾಧೀನ ಸ್ಥಿತಿಯನ್ನು ಹೇಳುತ್ತದೆ. ಗ್ರಾಮದ ಗದ್ದೆ, ಮನೆ ಮಾರಿ ನಗರ(ಆಯ್ಕೆ)ಕ್ಕೆ ಹೋಗಲು ಕುಟುಂಬ ನಿರ್ಧರಿಸುತ್ತದೆ.

ಪಾಂಡು, ವೇಣುಗೋಪಾಲರು ಶ್ರಮಿಕ, ಮಧ್ಯಮವರ್ಗದ ಕುಟುಂಬಕ್ಕೆ ಸೇರಿದವರು. ವೇಣುಗೋಪಾಲನಿಗೆ ಮುಂಬಯಿಯಲ್ಲಿ ಅಣ್ಣನ ಮನೆಯಿದ್ದರೂ ಅವನಿಂದ ಆಸರೆಯ ಭರವಸೆಯಿಲ್ಲ, ಸರಿಯಾದ ವಿಳಾಸವೂ ಇಲ್ಲ. ಪಾಂಡುವಿನ ಸ್ಥಿತಿಯೂ ಸಹ ಭಾವುವನ್ನೇ ಅವಲಂಬಿಸಿದ್ದು, ಹೊಸ ನೆಲೆಯಲ್ಲಿ ವೃತ್ತಿ, ಆರ್ಥಿಕ ಮತ್ತು ಸಾಮಾಜಿಕ ಭದ್ರತೆಯ ಆತಂಕ ಇವರ ಆಯ್ಕೆಯನ್ನು ಅಧೀರಗೊಳಿಸಿದೆ. ಗ್ರಾಮೀಣ ಶ್ರಮಿಕವರ್ಗ ತಮ್ಮ ಬದುಕಿನಲ್ಲಿ ಊಟಕ್ಕೂ ತೊಂದರೆಯಾದಾಗ, ಅವರು ಮೊದಲು ನೋಡುವುದು ನಗರದತ್ತ ಎಂಬುದು ವಾಸ್ತವಿಕ ಸತ್ಯವಾಗಿದೆ. ಇದಕ್ಕೆ ಅನೇಕ ಕಾರಣಗಳಿವೆ. ಗ್ರಾಮಗಳು ಜಾತಿ, ವರ್ಣ, ವರ್ಗ ವ್ಯವಸ್ಥೆಯ ಕೂಪಗಳಾದಂತೆ ಕೆಳವರ್ಗದ ಜನತೆಯ ನಿರಂತರ ಶೋಷಣೆಗೈಯುವ ತಾಣಗಳಾಗಿವೆ. ಇದರ ಜೊತೆಗೆ ಸಂಪ್ರದಾಯಗಳ ಹೆಸರಿನಲ್ಲಿ ಆರ್ಥಿಕ, ಧಾರ್ಮಿಕ ನೆಲೆಯಲ್ಲಿ ದೌರ್ಜನ್ಯಗಳು ನಡೆಯುತ್ತವೆ. ಇನ್ನೊಂದು ತುದಿಯಲ್ಲಿ ನಿಂತು ನಗರಗಳನ್ನು ವೀಕ್ಷಿಸಿದಾಗ ಅನಾಮಿಕತ್ವದ ಜೊತೆ ಅಪರಿಚಿತರನ್ನು ಇಂತಹ ಯಾವ ಸಮಸ್ಯೆಗಳೂ ಕಾಡುವುದಿಲ್ಲ. ಇದು ಇಂದಿನ ಗಡಿ ಮತ್ತು ಕರಾವಳಿ ತೀರದ ಗ್ರಾಮಗಳಲ್ಲಿ ಕಂಡುಬರುವ ವಲಸೆಯ ಕಾರಣವಾಗಿದೆ. ಗ್ರಾಮೀಣರು ಆಕರ್ಷಿತರಾಗುವಷ್ಟು (ಕರುಬುವಷ್ಟು) ಸೌಲಭ್ಯಗಳನ್ನು ನಗರವಾಸಿಗಳು ಹೊಂದಿರುವುದೂ ಕೂಡ ಗ್ರಾಮೀಣರ ನಗರ ಆಯ್ಕೆಗೆ ಮತ್ತೊಂದು ಕಾರಣವೆಂಬುದು ಅಧ್ಯಯನದ ನಿಲುವಾಗಿದೆ.

### ಬ. ಸಾಮಾಜಿಕ ರಕ್ಷಣೆ ಮತ್ತು ಆಯ್ಕೆ

ಸಾಮಾಜಿಕ ಅಭದ್ರತೆಯು ಅವಕಾಶವಂಚಿತ ಜಾತಿ, ವರ್ಗ(ಕೆಳ, ದಲಿತ)ಗಳ ಜನರನ್ನು ಮತ್ತು ಮಹಿಳೆಯರನ್ನು ಕಾಡುವ ಸಂಗತಿಯಾಗಿದೆ. ಇದಕ್ಕೆ ಅವರ ಆರ್ಥಿಕ ಅಭದ್ರತೆ, ಪುರುಷಪ್ರಧಾನ ವ್ಯವಸ್ಥೆಗಳು ಕಾರಣವಾಗಿದ್ದು ಅಶಕ್ತರನ್ನು ಭೌತಿಕ, ಮಾನಸಿಕ ದೌರ್ಜನ್ಯಕ್ಕೆ ಒಳಪಡಿಸುತ್ತವೆ. ಭಾರತದಾದ್ಯಂತ ಇಂದಿಗೂ ನಡೆಯುವ ದಲಿತರ, ಮಹಿಳೆಯರ ಮೇಲಿನ ನಿರಂತರ ದೌರ್ಜನ್ಯ, ಹಲ್ಲೆಗಳು, ಬಲಾತ್ಕಾರದಂಥ ಅಮಾನವೀಯ ಘಟನೆಗಳು ಒಂದು ಸಮುದಾಯದ ಅಪಮಾನವನ್ನು, ದೌರ್ಜನ್ಯಗಳನ್ನು, ಕ್ರೌರ್ಯದ ಭೀಕರತೆಯನ್ನು ತೆರೆದಿಡುತ್ತವೆ. ಆರ್ಥಿಕತೆ ಮತ್ತು ರಾಜಕೀಯ ಪ್ರೇರಿತ ಇಂತಹ ಸಾಮಾಜಿಕ ದೌರ್ಜನ್ಯಗಳಿಗೆ ಕಾರಣಗಳೇನು ಎಂಬುದು ಸ್ಪುಟವಾದ ಸಂಗತಿಯಾಗಿದೆ ಹಾಗೂ ಮುಂಬಯಿ ಕರ್ನಾಟಕದ ಕಥನ ಸಾಹಿತ್ಯದಲ್ಲಿ ದಾಖಲಿಸಲ್ಪಟ್ಟಿದೆ. ಕೆಳ, ದಲಿತ ವರ್ಗ, ಮಹಿಳಾ ವ್ಯಕ್ತಿಗಳ ಗ್ರಾಮ/ನಗರ ಆಯ್ಕೆಯಂಥ ಸಂದರ್ಭದಲ್ಲಿ ಅವರು ತಮ್ಮ ಕುಟುಂಬದ ರಕ್ಷಣೆಗೆ ತೆಗೆದುಕೊಂಡ ಕ್ರಮಗಳನ್ನು ವಿವರಿಸಿದೆ.

ಸುನಂದಾ ಬೆಳಗಾಂವಕರ ಅವರ 'ಅಂದು-ಇಂದು' ಕಥೆಯ ಸಣ್ಣವ್ವ(ಜಾನಕಿಬಾಯಿ)ಳನ್ನು ಅವಳ ಗಂಡ ರಾಮರಾಯರು ತೀರಿಕೊಂಡೊಡನೆ (ಇದೊಂದು ವಿಷಪ್ರಾಶನದಿಂದ ಆದ ಕೊಲೆ ಎಂದು ಕಥೆ ಹೇಳುತ್ತದೆ) ಅವಳ ಮಲಅತ್ತೆ ಕಪಿಲಾಬಾಯಿ ಮನೆಯಿಂದ ಹೊರಹಾಕುತ್ತಾಳೆ. ಗದಗದಿಂದ ಟಿಕೆಟ್ ಇಲ್ಲದೆ ಗಾಡಿ ಹತ್ತಿ ಧಾರವಾಡಕ್ಕೆ ಆಗಮಿಸಿದ ಸಣ್ಣವ್ವ ಹನುಮಂತ ದೇವರ ಗುಡಿಯ ಪೌಳಿಯಲ್ಲಿ ಆಶ್ರಯ ಪಡೆಯುತ್ತಾಳೆ.

> 'ಪಾಪ ಚಿಕ್ಕ ಜೀವ ಪತಿಯ ಮರಣದಿಂದ ಹೊರಳಿ ಹೊರಳಿ ಅತ್ತಿತ್ತು. ಬದುಕಿನಲ್ಲಿ ಬೇಸರವಾಗಿ ಸಾವನ್ನು ಅಪೇಕ್ಷಿಸಿದ್ದಳು. ಆದರೇನು? ಮಾಡಿದ ಕರ್ಮ ಸವೆಯಬೇಕಲ್ಲ. ಮಡಿವಂತರ ಮನೆತನ, ತಲೆ ಬೋಳಾಗಿತ್ತು. ಯೌವನ ತುಳುಕಾಡುವ ಹಾಲು ಮೈ ಕೆಂಪು ಸೀರೆಯಿಂದ ಮುಚ್ಚಿದರೂ, ಕುಪ್ಪಸವಿಲ್ಲದ ಎದೆ ಒಳಹೊರಗಿನ ಚಳಿಯಿಂದ ಸದಾ ನಡುಗುತ್ತಿತ್ತು.'[೨]

ಎಂಬ ಮಾತು, ಜಡಗಟ್ಟಿದ ಹಿಂದೂ ಸಮಾಜದ ಕುಟುಂಬವೊಂದು ಸಂಪ್ರದಾಯದ ಹೆಸರಿನಲ್ಲಿ ಮಹಿಳೆಯ ಮೇಲೆ ನಡೆಸಿದ ಕ್ರೌರ್ಯವನ್ನು ಅನಾವರಣಗೊಳಿಸಿದೆ. ಕುಪ್ಪಸವಿಲ್ಲದ ಎದೆ ಹೊರಬಳಗಿನ ಚಳಿಯಿಂದ ನಡುಗುತ್ತಿತ್ತು ಎಂಬ ವಾಕ್ಯದಲ್ಲಿ ಸಾಮಾಜಿಕ ರಕ್ಷಣೆಯ ಘೋರ ಚಳಿಯನ್ನು ಅನುಭವಿಸುವ ಮಹಿಳಾ ಸಂವೇದನೆಯಿದೆ. ಮೂಕ ಸಂಸ್ಕೃತಿಯ ಪ್ರತೀಕವಾಗಿರುವ ಹೆಣ್ಣಿನ ದಾರುಣ ಅನುಭವವನ್ನು ಉತ್ಕಟವಾಗಿ ಈ ಸಂದರ್ಭ ಚಿತ್ರಿಸಿದೆ ಮತ್ತು ಲಿಂಗಾಧಾರಿತ ಶೋಷಣೆ ಎನ್ನುವುದು ಹೇಗೆ ಜಾತಿ-ವಿಜಾತಿ ಎನ್ನದೆ ಸಾರ್ವತ್ರಿಕವಾಗಿದೆ ಹಾಗೂ ಅಲ್ಲೆಲ್ಲ ನ್ಯಾಯ ಪುರುಷರ ಪರವಾಗಿದ್ದು ಮಹಿಳೆ ಶೋಷಿತಳಾಗುತ್ತಾಳೆ ಎಂಬುದನ್ನೂ ಬಹಿರಂಗಗೊಳಿಸಿದೆ. ಆತ್ಮಹತ್ಯೆ ಮಾಡಿಕೊಳ್ಳಲು ಹೋದ ಸಣ್ಣಾವ್ವನನ್ನು ಇನ್ನೊಬ್ಬ ವಿಧವೆ ಮಂದಾಕಿನಿ ಉಳಿಸಿ ಆಶ್ರಯ ಕೊಡುತ್ತಾಳೆ. 'ಆಗ ಮಾತ್ರ ಸಣ್ಣಾವ್ವನ ಹೃದಯಕ್ಕೆ ಹಾಯೆನಿಸಿತು. ತನ್ನ ಬೆನ್ನಿಗೆ ಯಾರೋ ಇದ್ದಾರೆ. ತನಗೂ ಆಶ್ರಯವಿದೆ ಅನಿಸಿತು' (ಪುಟ ೧೦೬). ಪರಸ್ಪರ ಆಶ್ರಯ ಪಡೆದ ಇಬ್ಬರು ಮಹಿಳೆಯರು ಪುರುಷರ ಆಸರೆ ಇಲ್ಲದೆ, ಒಬ್ಬರಿಗೊಬ್ಬರ ಆಧಾರದಿಂದ ಸಾಮಾಜಿಕ ರಕ್ಷಣೆ ಪಡೆದದ್ದು ವಿಶಿಷ್ಟವಾಗಿದೆ. ಗುಂಡ್ಯಾ ಮತ್ತು ಕಪಿಲಾಬಾಯಿ ಇವರು ನಡೆಸಿದ ಮಹಿಳಾ ಶೋಷಣೆಯ ಮೂಲ, ಮೂಲಭೂತವಾದಿ ಹಾಗೂ ಊಳಿಗಮಾನ್ಯ ಮನಸ್ಸುಗಳಿಂದ ಹುಟ್ಟಿದುದಾಗಿದೆ.

ಮಿತ್ರಾ ವೆಂಕಟರಾಜ್ ಅವರ 'ಕೊನೆಯ ದಿನ' ಕತೆಯ ರಾಜಿ ಎಂಬ ಯುವತಿ ಗುಜರಾತಿನ ಕಛ್ ಎಂಬ ಕುಗ್ರಾಮದವಳು. ಅಲ್ಲಿ ತಲೆದೋರಿದ ಅನಾವೃಷ್ಟಿಯಿಂದ ಗಂಡ ಸತ್ತು ಸಂತಾನವಿಲ್ಲದ ಇವಳು ಅನಾಥಳಾಗಿ ಬೀದಿಗೆ ಬೀಳುತ್ತಾಳೆ. ರಾಜಿಗೆ ಮುಂಬಯಿಯಲ್ಲಿರುವ ಸಂಬಂಧಿ ಮೋರಿಬಾಯಿಯ ನೆನಪಾಗಿ ಅವಳ ಆಶ್ರಯ (ನಗರ) ಕೋರಲು ನಿರ್ಧರಿಸುತ್ತಾಳೆ. ಈ ವಾಕ್ಯವನ್ನು ಗಮನಿಸಬಹುದು.

> 'ಊರು ಬಿಟ್ಟು ಹೊರಟಾಗಿನ ಭಯ, ಆತಂಕ, ಸಂದೇಹ ಎಲ್ಲವೂ ಕ್ಷಣದಲ್ಲಿ ಮಾಯವಾಗಿತ್ತು. ಮಕ್ಕಳಿಲ್ಲದ ತನಗೆ ಗಂಡ ಸತ್ತ ಮೇಲೆ ಊರಲ್ಲಿ ದಿನ ದೂಡುವುದೇ ದುಸ್ತರವಾಗಿತ್ತು. ಆಶ್ರಯ ಬೇಡಿ ಇಲ್ಲಿಗೆ ಬಂದರೆ ತನ್ನ ಸಂಕಟದಲ್ಲೂ ಮುದುಕಿ ಎಂತಹ ಸ್ವಾಗತ ನೀಡಿದ್ದಳು ತನಗೆ! ಗುಡಿಸಲಿನ ಬಾಗಿಲಲ್ಲಿ ಕಾಲ ಗಂಟೆಗೆ ಕೈಯೂರಿ ಕುಳಿತ ಮುದುಕಿ ಮೋರಿಬಾಯಿ ಕಣ್ಣಿಗೆ ಬೀಳುತ್ತಲೂ ನನಗೆಷ್ಟು ಆನಂದವಾಗಿತ್ತು.'"

ನನಗೆಷ್ಟು ಆನಂದವಾಗಿತ್ತು ಎಂಬ ಮಾತು, ಹೊಸ ಪರಿಸರದಲ್ಲಿ ಏಕಾಂಗಿ ಮಹಿಳೆಯರ ಬದುಕಿನ ಅಭದ್ರತೆಯ ತಲ್ಲಣವನ್ನು ಸೂಚಿಸುತ್ತದೆ. ಒಬ್ಬ ಅನಾಥ ಹೆಣ್ಣು ತನಗೆ ಸಿಕ್ಕ ಬದುಕಿನ ಭದ್ರತೆ ಕುರಿತು ಯೋಚಿಸುವ ರೀತಿಯನ್ನು ಇಲ್ಲಿ ಗ್ರಹಿಸಬಹುದಾಗಿದೆ. ಅತ್ತ ಮೋರಿಬಾಯಿಯ ಜೊತೆಗಿನ ರಾಜಿಯ ಬದುಕು ಹಾಸುಹೊಕ್ಕಾದುದನ್ನು ಈ ಸಂದರ್ಭ ಸೂಚಿಸಿದೆ. ಒಬ್ಬ ಮಹಿಳೆಯ ಆಸರೆಯಾಗಿ ಇನ್ನೊಬ್ಬ ವೃದ್ಧ ಮಹಿಳೆ ಮಾನವೀಯತೆಯಿಂದ ಸ್ಪಂದಿಸಿದ್ದನ್ನು ಇಲ್ಲಿ ಗುರುತಿಸಬಹುದು. ರಾಜಿಯ ಸಂದರ್ಭದಲ್ಲಿ, ಶಹರವನ್ನು ನಂಬಿ ಬದುಕು ಕಟ್ಟಿಕೊಳ್ಳುವ ಆಶಯಕ್ಕಿಂತ, ಮೋರಿಬಾಯಿಯನ್ನು ನಂಬಿ ಬದುಕಲು ಹೊರಟ ಆಶಯ ಅವಳಲ್ಲಿ ಎದ್ದು ಕಾಣುತ್ತದೆ. ಇದು ಒಬ್ಬ ರಾಜಿಯ ಕತೆಯಲ್ಲ, ರಾಜಿಯೊಬ್ಬಳ ಅಸಹಾಯಕ ಸ್ಥಿತಿ ಪುರುಷ ಆಸರೆಯಿಲ್ಲದ ದಲಿತ, ಕೆಳವರ್ಗದ ಮಹಿಳೆಯೆಲ್ಲರ ಸ್ಥಿತಿಯೂ ಹೌದು. ವ್ಯಾಸರಾಯ ಬಲ್ಲಾಳ ಅವರ 'ಕಾಡುಮಲ್ಲಿಗೆ' ಕತೆಯ ಸೋಮಪ್ಪ ಪೂಜಾರಿ (ಸೋಂಪ) ಎಂಬ ಬಾಲಕ ಗ್ರಾಮದ ವೃದ್ಧ ತಂದೆ, ತಾಯಿಗೆ ಆಸರೆಯಾಗಿ ದುಡಿಯಲು ತೀರ್ಮಾನಿಸುತ್ತಾನೆ. ಈಗಾಗಲೇ ಮದುವೆಯಾಗಿ ಮುಂಬಯಿ ಸೇರಿದ ಅಕ್ಕನ ಸಂದರ್ಭ ಅವನ ಮುಂದಿದೆ.

> 'ಒಬ್ಬಳೇ ಒಬ್ಬಳು ಅಕ್ಕ ಆ ಹುಡುಗನಿಗೆ, ಅವಳೂ ಇಲ್ಲಿಯೇ ಇದ್ದಾಳೆ. ಅವಳ ಗಂಡ ಯಾವುದೋ ಒಂದು ವರ್ಕ್‌ಶಾಪಿನಲ್ಲಿ ದುಡಿಯುತ್ತಾನೆ. ಅವನಿಗಿಲ್ಲದ ಕೆಟ್ಟ ಅಭ್ಯಾಸಗಳಿಲ್ಲ. ತನ್ನನ್ನು ಕೆಡಿಸಿಕೊಂಡಿದ್ದಲ್ಲದೇ ಹೆಂಡತಿಯ ಆರೋಗ್ಯವನ್ನು ಹಾಳುಮಾಡಿ ಅವಳಿಗೆ ಕ್ಷಯರೋಗ ಹಿಡಿಸಿದ್ದಾನೆ. ಆ ಹುಡುಗಿಯ ನರಳಾಟ, ಅವನು ಕೊಡುವ ಉಪದ್ರ ನೋಡಿದರೆ ಇಡೀ ಮುಂಬಯಿಯೇ ಒಂದು ನರಕ ಎಂದು ಕಾಣುತ್ತದೆ.'"

ಶ್ರೀನಿವಾಸರಾಯರ ಈ ಮಾತುಗಳು ಸೋಂಪುವಿನ ಮುಂಬಯಿ ನಗರ ಆಯ್ಕೆಯ ಹಿಂದಿರುವ ಕರುಣಾಜನಕ ಸಂದರ್ಭವನ್ನು ವಿವರಿಸಿವೆ. ಅಸ್ವಸ್ಥಳಾದ ಅಕ್ಕನ ಆರೈಕೆ, ಅವಳ ಸಂಸಾರಕ್ಕೆ ಆಸರೆಯಾಗುವ ಉದ್ದೇಶವೂ ಅವನ ಮುಂಬಯಿ ಆಯ್ಕೆಯ ಹಿಂದಿದೆ. ಅಕ್ಕನಿಗೆ ಸಾಮಾಜಿಕ, ಆರ್ಥಿಕ ಭದ್ರತೆ ಒದಗಿಸುವ ಉದ್ದೇಶದಿಂದ ಸೋಂಪ ನಗರವನ್ನು ಆಯ್ಕೆ ಮಾಡಿಕೊಳ್ಳುತ್ತಾನೆ. ಇವನಿಗೆ ಆಸರೆಯಾಗಿ ಅಕ್ಕನ ಕರುಣೆ (ಇದು ದ್ವಿಮುಖ ಆಸರೆ, ಅವಲಂಬನೆಯಾಗಿದೆ) ಅವನು ನಗರ ಆಯ್ಕೆ ಮಾಡಿಕೊಳ್ಳುವಂತೆ ಮಾಡುತ್ತದೆ.

ಮಹಿಳೆ ಊಟ, ಬಟ್ಟೆ, ನಿದ್ರೆ, ಜಾತಿ, ಧರ್ಮಗಳಿಗಿಂತ ತನ್ನನ್ನು ಸಮಾಜದ ದುಷ್ಟಶಕ್ತಿಗಳಿಂದ ರಕ್ಷಿಸಬೇಕಾದ ವ್ಯಕ್ತಿ, ಪರಿಸರವನ್ನು ಗಮನಿಸು(ಹುಡುಕು)ತ್ತಾಳೆ, ಅದರಲ್ಲೂ ಅವಳ ರಕ್ಷಣೆಗೆ ಇನ್ನೊಬ್ಬ ಮಹಿಳೆ ಸಿಕ್ಕರಂತೂ ಅವಳಿಗೆ ಅತೀವ ಸಮಾಧಾನವಾಗುತ್ತದೆ. ಪ್ರಸ್ತುತ ಕಥನ ಸಾಹಿತ್ಯದಲ್ಲಿ ರಾಜಿ–ಮೋರಿಬಾಯಿ, ಸಣ್ಣವ್ವ–ಮಂದಾಕಿನಿ, ನಿಂಗಣ್ಣ ಸಣ್ಣಕ್ಕಿ ಅವರ 'ಚಂಬಿ' ಕಥೆಯಲ್ಲಿ ಚಂಬಿ–ತಾರಾಮತಿ, ಬಾಲಚಂದ್ರ ಘಾಣೇಕರ್ ಅವರ 'ನಾನೇ ಹೊಲೆಯ' ಕಥೆಯಲ್ಲಿ ಹರಿಜನರ ಮುದುಕಿ–ರಮೆ ಮೊದಲಾದ ಪರಸ್ಪರ ಆಶ್ರಯಿತ ಮಹಿಳಾ ಜೋಡಿಗಳನ್ನು ಗುರುತಿಸಬಹುದು. ಮೊದಲು ಚಂಬಿ ಮೂಡಲಗಿ ಪಟ್ಟಣವನ್ನು ಆಯ್ಕೆ ಮಾಡಿಕೊಂಡಿದ್ದವಳು ತನ್ನ ಶೀಲ, ತಮ್ಮನ ರಕ್ಷಣೆಯ ಪ್ರಶ್ನೆ ಎದುರಾದಾಗ ಮುಂಬಯಿ ನಗರವನ್ನು ಆಯ್ಕೆ ಮಾಡಿಕೊಳ್ಳುತ್ತಾಳೆ. ರಮೆ ತನ್ನ ಗ್ರಾಮದ ಪಕ್ಕದ ಪಟ್ಟಣವನ್ನು ಆಯ್ಕೆ ಮಾಡಿಕೊಂಡು, ಸ್ವರಕ್ಷಣೆಗಾಗಿ ಹರಿಜನರ ಕೇರಿಯನ್ನು ಸೇರಿಕೊಳ್ಳುತ್ತಾಳೆ. ನಂತರ ಕ್ರೈಸ್ತ ಧರ್ಮವನ್ನು ಸ್ವೀಕರಿಸಿ ಸಾಮಾಜಿಕ ಭದ್ರತೆಯನ್ನು ಹೊಂದಿದ ಸಮಾಧಾನವನ್ನು ಪಡೆದುಕೊಳ್ಳುತ್ತಾಳೆ. ಮಹಿಳೆಯು ತನ್ನ ಸಾಮಾಜಿಕ ಭದ್ರತೆಗೆ ನಗರವನ್ನೇ ಏಕೆ ಆಯ್ಕೆ ಮಾಡಿಕೊಳ್ಳುತ್ತಾಳೆ. ಒಂದು ಸಮೂಹ(ಮಹಿಳೆಯೂ ಸೇರಿದಂತೆ)ದ ಮತಾಂತರಕ್ಕೆ ಸಾಮಾಜಿಕ ಅಭದ್ರತೆಗಳು ಕಾರಣವೆ. ಎಂಬ ಪ್ರಶ್ನೆಗಳು ಉದ್ಭವಿಸುತ್ತವೆ. ಗ್ರಾಮದಲ್ಲಿರುವ ಸಾಮಾಜಿಕ ನಿರ್ಬಂಧಗಳು, ವರ್ಣ–ವರ್ಗ ವ್ಯವಸ್ಥೆಯ ತೀವ್ರತೆ, ಸಾಮಾಜಿಕ, ಆರ್ಥಿಕ, ಧಾರ್ಮಿಕ ನೆಲೆಗಳಲ್ಲಿ ಸ್ಥಾಪಿತ, ಪಟ್ಟಭದ್ರ ಹಿತಾಸಕ್ತಿಗಳ ಬಿಗಿ ಹಿಡಿತ, ಲೈಂಗಿಕ ದೌರ್ಜನ್ಯಗಳು ಕೆಳವರ್ಗದ ಜನ ಮತ್ತು ಮಹಿಳೆಯರಲ್ಲಿ ಅಭದ್ರತೆಯ ಭಯವನ್ನು ಹುಟ್ಟಿಸಿರುವುದು ವಾಸ್ತವ ಸಂಗತಿಯಾಗಿದೆ. ಇವೆಲ್ಲ ದೌರ್ಜನ್ಯಗಳ ಪ್ರಮಾಣ ಗ್ರಾಮ ಪರಿಸರಕ್ಕೆ ಹೋಲಿಸಿದರೆ ನಗರದಲ್ಲಿ ಕಡಿಮೆ ಎನ್ನಬಹುದು. ಆದ್ದರಿಂದ ಸಾಮಾಜಿಕ ಭದ್ರತೆಗೆ ಗ್ರಾಮಗಳಿಗಿಂತ ನಗರಗಳೇ ಸೂಕ್ತವೆಂದು ಮಹಿಳಾ ಪಾತ್ರಗಳು ನಿರ್ಧರಿಸುವುದು ತಾತ್ವಿಕವಾಗಿ ಒಪ್ಪಿಕೊಳ್ಳುವ ವಿಚಾರ ಎಂಬ ನಿಲುವಿಗೆ ಅಧ್ಯಯನ ಬರುತ್ತದೆ.

ನಾ. ಡಿಸೋಜ ಅವರ 'ಪ್ರೀತಿಯೊಂದೇ ಸಾಲದೆ..?' ಕಾದಂಬರಿಯ ಧಾರಾಪುರ ಗ್ರಾಮದ ಫಕೀರ ಅಸ್ಪೃಶ್ಯರ ಹುಡುಗ. ಸಾಂಪ್ರದಾಯಿಕ ಸಮಾಜದಲ್ಲಿ ನಾಪಿಡುವ ಹೆಸರು(ಕರಿಯ, ಕೆಂಚ, ಫಕೀರ, ಕೊಲ್ಲ ಇತ್ಯಾದಿ)ಗಳು ಜಾತಿಯ ಹಣೆಪಟ್ಟಿಯಿಂದ ಹೊರಗುಳಿದಿಲ್ಲ. ಅಸ್ಪೃಶ್ಯತೆಯನ್ನು ಸಂಕೇತಿಸುವ ಜಾತಿ, ಬಣ್ಣ, ಆಕಾರ, ಹೆಸರು ಇವೆಲ್ಲವು ಒಂದು ಇನ್ನೊಂದಕ್ಕೆ ಪೂರಕವಾಗಿವೆ. ಮಲಹೊರುವ ಕುಲದವನಾದ ಫಕೀರನ ಕುಟುಂಬ ಕುಡಿಯುವ ನೀರು, ಔಷಧಿಗೂ ಸವರ್ಣೀಯರಿಂದ ಶೋಷಣೆಗೊಳಗಾಗುತ್ತದೆ. ಅಪ್ಪ ಸಾಯುತ್ತಾನೆ. ತಾಯಿ ಮಗನನ್ನು ಬಿಟ್ಟು ಓಡಿಹೋಗುತ್ತಾಳೆ. ಹಸಿವು ತಾಳಲಾರದೆ ಫಕೀರ ಪೇಟೆಯಲ್ಲಿ ಕದ್ದು ಪೋಲೀಸರಿಂದ ಒದೆ ತಿನ್ನುತ್ತಾನೆ. ಇವನ ಸಮಾಜ ಇವನ ಸಹಾಯಕ್ಕೆ ಬರುವುದಿಲ್ಲ. ಪಾದ್ರಿ ಡಿಕಾಸ್ಟರು ಇವನನ್ನು ಪೋಲೀಸರಿಂದ ಬಿಡಿಸಿ, ಬೆಳಗಾವಿಯ ತಮ್ಮ ಧರ್ಮದ ಅನಾಥಾಶ್ರಮ ಸೇರಿಸುತ್ತಾರೆ. 'ಕೊಂದು ಹಾಕಬೇಕು ಸೂಳೆ ಮಕ್ಳಗೆ, ಇವಕ್ಕೊಂದು ರೀತಿ ನೀತಿನ ಫಾದರ್, ಜಾತಿ ಬುದ್ಧಿ ಬಿಡಬೇಕಲ್ಲ"[೫] ಎಂದು ಎಸ್.ಐ. ಹರಡೇಕರರ ಮಾತು ಜಾತ್ಯತೀತ, ಪ್ರಜಾಸತ್ತಾತ್ಮಕ ದೇಶದ ಆಡಳಿತ ಯಂತ್ರವೂ ಸಹ ಪೂರ್ವಗ್ರಹಪೀಡಿತ ವರ್ತನೆಯಿಂದ ಜಾತಿ ನಿಂದನೆಯಲ್ಲಿ ತೊಡಗಿರುವುದು ಕಂಡುಬರುತ್ತದೆ. ಇಲ್ಲಿ ಬರುವ ಪೊಲೀಸರೂ ವ್ಯವಸ್ಥೆಯ ಪರವಾಗಿದ್ದಾರೆಯೇ ಹೊರತು ನಿರಪರಾಧಿ ದಲಿತ ಬಾಲಕನ ಪರವಾಗಿರುವುದಿಲ್ಲ. ಜಾತಿ ನೆಲೆಯಲ್ಲಿ, ಒಂದು ಜಾತಿಯ ಸ್ವಭಾವ, ಗುಣ, ವರ್ತನೆ ಇಂತಹುದು ಎಂದು ಹಣೆಪಟ್ಟಿ ಹಚ್ಚಿ ವರ್ತನೆ, ನಡತೆಗಳನ್ನು ಮೌಲ್ಯಕ್ಕೆ ಒಳಪಡಿಸುವ ಸಣ್ಣತನ ಪೊಲೀಸರ ಮಾತುಗಳಲ್ಲಿದೆ. ಗ್ರಾಮೀಣ ಪ್ರದೇಶದಲ್ಲಿ ಅಸಹಾಯಕ ಬಾಲಕನಿಗೆ ಆಡಳಿತದಿಂದ ಯಾವ ರಕ್ಷಣೆಯೂ ದೊರೆಯಲಿಲ್ಲ ಎಂಬುದನ್ನು ಕಾದಂಬರಿ ಧ್ವನಿಸುತ್ತದೆ. ಫಕೀರ ತನ್ನ ಜಾತಿ, ಧರ್ಮದಲ್ಲಿ ಸಾಮಾಜಿಕ ರಕ್ಷಣೆ ದೊರಕದೆ ಫೀಟರ್ ಆಗಿ ಮತಾಂತರಗೊಳ್ಳುವುದು ಜೂಲಿ ಬಡ್ತೋಲಳ ನಿರ್ಧಾರದ ಪ್ರತಿರೂಪದಂತಿದೆ. ಗಂಡನನ್ನು ಕಳೆದುಕೊಂಡ ಯುವತಿ ಜೂಲಿ ತನ್ನ ಕ್ರಿಶ್ಚಿಯನ್ ಜನಾಂಗದ ಜನರಿಂದಲೆ ಶೋಷಣೆಗೆ ಒಳಗಾಗುತ್ತಾಳೆ. ಅಬಲೆ ಮಹಿಳೆಗೆ ಸಹಾಯ ಮಾಡದೆ ಅವಳು ವೇಶ್ಯಾವೃತ್ತಿ ಮಾಡುತ್ತಾಳೆಂದು ಚರ್ಚು, ಚರ್ಚಿನ ಗುರ್ಕಾರ ಆರೋಪಿಸುವುದು ಸಹ ಸಂಪ್ರದಾಯ ಮನಸ್ಸುಗಳ ರೋಗಗ್ರಸ್ತ ಚಿಂತನೆಯೇ ಆಗಿದೆ. ಒಟ್ಟಾರೆ ಅಸ್ಪೃಶ್ಯತೆ ಹುಟ್ಟು ಹಾಕುವುದು ಹರಡೇಕರ, ಗುರ್ಕಾರರಂತಹ ವಿಕಲ್ಪ, ವಿಕಾರ ಮನುಷ್ಯರನ್ನು ಎಂಬ ವಿಚಾರ ಚಿಂತನೀಯವಾಗಿದೆ. ಚರ್ಚಿನ ಪಂಚಾಯಿತಿಯ ಕರೆಯನ್ನು ಧಿಕ್ಕರಿಸಿ ಮಂಡಿ ಮಂಜುನಾಥನನ್ನು ಮದುವೆಯಾಗಲು ಜೂಲಿ ಧರ್ಮಸ್ಥಳಕ್ಕೆ ಹೊರಟುಬಿಡುತ್ತಾಳೆ. ಫೀಟರ್, ಜೂಲಿಯರ ಆಯ್ಕೆಗಳು, ನಂತರದ ಮತಾಂತರಗಳು ಸಾಮಾಜಿಕ ರಕ್ಷಣೆ ಪಡೆಯಲು ನಡೆದವುಗಳಾಗಿವೆ.

ಆಶ್ರಯ, ಸಾಮಾಜಿಕ ರಕ್ಷಣೆಗಾಗಿ ಗ್ರಾಮ/ನಗರಗಳನ್ನು ಆಯ್ಕೆ ಮಾಡಿಕೊಳ್ಳುವ ವ್ಯಕ್ತಿ, ಕುಟುಂಬಗಳ ಕುರಿತಂತೆ ಪ್ರಸ್ತುತ ಕಥನ ಸಾಹಿತ್ಯ ಗ್ರಹಿಸಿದ ಅಂಶಗಳನ್ನು ಹೀಗೆ ಕ್ರೋಡೀಕರಿಸಬಹುದು. * ಮೇಲ್ಜಾತಿಯ ವ್ಯಕ್ತಿ, ಕುಟುಂಬಗಳ ಗ್ರಾಮ/ನಗರ ಆಯ್ಕೆಗಳು ಪೂರ್ವ ನಿರ್ಧಾರಿತವಾಗಿ (ಹಲವೊಮ್ಮೆ ತಕ್ಷಣದ ನಿರ್ಧಾರವೂ ಆಗಬಹುದು) ಅವರ ಜಾತಿ, ಕುಟುಂಬ, ಸ್ನೇಹದ ನೆಲೆಯಲ್ಲಿ ನಡೆಯುತ್ತವೆ. * ಕೆಳ, ದಲಿತವರ್ಗದ ವ್ಯಕ್ತಿ, ಕುಟುಂಬಗಳ ಗ್ರಾಮ/ನಗರ ಆಯ್ಕೆಯು ಸಹ ಇದೇ ನೆಲೆಯಲ್ಲಿ ನಡೆದರೂ ಅದಕ್ಕೆ ಪೂರ್ವ ನಿರ್ಧಾರಿತ ಭದ್ರತೆ ಕಂಡುಬರುವುದಿಲ್ಲ. ಸಂಬಂಧಿಕರು, ಸ್ನೇಹಿತರು ಇಲ್ಲದವರು ಮತಾಂತರ ಹೊಂದಿ ಗ್ರಾಮ/ನಗರ ಆಯ್ಕೆ ಮಾಡಿಕೊಳ್ಳುವುದು ಅಥವಾ ಗ್ರಾಮ/ನಗರ ಆಯ್ಕೆಯ ನಂತರ ಮತಾಂತರ ಹೊಂದುವುದು ಕಂಡುಬರುತ್ತದೆ. • ಅತಿವೃಷ್ಟಿ, ಅನಾವೃಷ್ಟಿಗಳು ಕೃಷಿಕ, ಕೃಷಿಕೂಲಿಗಳನ್ನು ಕಂಗೆಡಿಸಿದಾಗ, ಇವರು ಸ್ನೇಹಿತರ, ಬಂಧುಗಳ ಆಸರೆಗೆ ನಗರವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಮುಂಬಯಿ ಕರ್ನಾಟಕದಲ್ಲಿ ರೈತ, ರೈತಕಾರ್ಮಿಕರ ಸಾಮೂಹಿಕ ಗುಳೆ ಹೋಗುವ ಪ್ರಕ್ರಿಯೆಯಲ್ಲಿ ಈ ಆಯ್ಕೆಯನ್ನು ಗಮನಿಸುತ್ತೇವೆ. • ಆಯ್ಕೆಯ ಸಂದರ್ಭದಲ್ಲಿ, ನಗರವನ್ನು ನಂಬಿ ಬದುಕು ಕಟ್ಟಿಕೊಳ್ಳುವ ಆಶಯಕ್ಕಿಂತ, ಅಲ್ಲಿರುವ ಸ್ನೇಹಿತ, ಬಂಧುಗಳನ್ನು ನಂಬಿ ಬದುಕು ಕಟ್ಟಿಕೊಳ್ಳುವ ಆಶಯ ಎದ್ದು ಕಾಣುತ್ತದೆ. • ಗ್ರಾಮ/ನಗರದಲ್ಲಿರುವ ಬಂಧುಗಳಿಗೆ ಆಶ್ರಯ ಕೊಡಲು (ಸೋಮಪ್ಪ ಪೂಜಾರಿ) ಗ್ರಾಮ/ನಗರವನ್ನು ಆಯ್ಕೆ ಮಾಡಿಕೊಳ್ಳುವುದೂ ಕಂಡುಬರುತ್ತದೆ.

## ೪. ಆಡಳಿತಾತ್ಮಕ ನೆಲೆ ಮತ್ತು ಆಯ್ಕೆ

### ಅ. ಭೂ ಸುಧಾರಣೆ ಕಾನೂನು

ಭೂ ಸುಧಾರಣೆ ಕಾನೂನು ಜಾರಿಯಾದ ನಂತರ ಭೂಮಿ ಕಳೆದುಕೊಂಡ ಭೂಮಾಲೀಕರ ಗ್ರಾಮ/ನಗರ ಆಯ್ಕೆಗಳು ಕುತೂಹಲಕರವಾದ ಅಂಶಗಳನ್ನು ಒಳಗೊಂಡಿವೆ. ಆಡಳಿತವು ಭೂಮಿಗೆ ಬದಲಾಗಿ ಹಣದ ರೂಪದ ಪರಿಹಾರ ನೀಡಿದ್ದು ಬಿಟ್ಟರೆ, ಭೂಮಾಲೀಕರ ಮುಂದಿನ ಜೀವನದ ಆಯ್ಕೆಯ ಕುರಿತು ಯಾವುದೇ ಹಸ್ತಕ್ಷೇಪ ಮಾಡಲಿಲ್ಲ ಎಂಬುದು ನಿಜ. ಭೂಮಿ ಕಳೆದುಕೊಂಡ ನಂತರ ಗ್ರಾಮ/ನಗರಗಳ ಸ್ವಂತ/ಬಾಡಿಗೆ ಮನೆಗಳಲ್ಲಿ ಉಳಿದ ಭೂಮಾಲೀಕರ ಮುಂದಿನ ಹೆಜ್ಜೆ ಕುರಿತು ಕಥನ ಸಾಹಿತ್ಯ ವಿವರಗಳನ್ನು ದಾಖಲಿಸಿದೆ. ಆದರೆ ಅಂಥ ವಿವರಗಳು ಪರಿಪೂರ್ಣವಾಗಿವೆಯೆಂದು ಹೇಳಲಾಗುವುದಿಲ್ಲ. ಈ ಮಾಜಿ ಭೂಮಾಲೀಕರೆಲ್ಲ ವಿದ್ಯಾವಂತ, ಮೇಲ್ಜಾತಿ, ಮೇಲ್ವರ್ಗಗಳಿಗೆ ಸೇರಿದವರು ಮತ್ತು ಕಾನೂನು ಜಾರಿಯಾಗುವ ಪೂರ್ವದಲ್ಲಿ ತಮ್ಮ ಮುಂದಿನ ನಡೆಯ ಕುರಿತು ಚಿಂತಿಸಿ ಆಯ್ಕೆಗಳನ್ನು ನಿರ್ಧರಿಸಿದ್ದುದು ಹಲವಾರು ಕಥನಗಳಲ್ಲಿ ಕಂಡುಬರುತ್ತದೆ.

ವ್ಯಾಸರಾವ್ ನಿಂಜೂರ ಅವರ 'ಉಸಿರು' (೧೯೬೭) ಕಾದಂಬರಿಯ ಸೂರಾಲು ಗ್ರಾಮದ ಗೇಣಿ ಒಡೆಯ ಅನಂತಯ್ಯನವರ ಇಬ್ಬರು ಮಕ್ಕಳು ಸ್ವತಂತ್ರ ವೃತ್ತಿಯತ್ತ ಆಸಕ್ತಿ ವಹಿಸುವುದು ಕಂಡುಬರುತ್ತದೆ. ಹಿರಿಯ ಮಗ ನಾರಾಯಣ ಗೇಣಿ ಭೂಮಿಯ ಉಸ್ತುವಾರಿ, ಪೂಜೆ, ಗೇಣಿ, ಹಸಿರುವಾಣಿಗಳ ಪರಂಪರಾಗತ ವೃತ್ತಿಯನ್ನು ನಿರಾಕರಿಸಿ, ಮೈಸೂರಿಗೆ ಹೋಗಿ ಹೋಟೆಲ್ ಪ್ರಾರಂಭಿಸುತ್ತಾನೆ. ನಾರಾಯಣ, ಅನಂತಯ್ಯ ಇವರಿಗೆ ಇಂತಹದೊಂದು ಕಾನೂನು ಜಾರಿಯಾಗುವ ಮುನ್ಸೂಚನೆಯ ಅರಿವಿತ್ತು ಎಂದು ಒಪ್ಪಬೇಕಾಗುತ್ತದೆ. ಅನಂತಯ್ಯನವರ ಕಾಲಾನಂತರ ಗೇಣಿ ರೈತರನ್ನು ಹಿಡಿತದಲ್ಲಿಟ್ಟುಕೊಳ್ಳಲು ಅವರ ಕುಟುಂಬ ಪ್ರಯಾಸಪಡುವಂತಹ ಸಂದರ್ಭವೂ ಕಾದಂಬರಿಯಲ್ಲಿ ದೊರೆಯುತ್ತದೆ.

> 'ಇವೆಲ್ಲ ನಿನಗೆ ಅರ್ಥವಾಗುವುದಿಲ್ಲ ಸಾವಿತ್ರಿ, ಅಪ್ಪಯ್ಯನ ಕಾಲ ಬೇರೆ. ಅವರು ಇರುವವರೆಗೆ ಅವರ ಸೌಜನ್ಯಕ್ಕೆ ಒಕ್ಕಲುಗಳು ತಲೆ ಬಾಗುತ್ತಿದ್ದರು. ಈಗ ಈ ಗೌರ್ಮೆಂಟು ಸಾವಿರಾರು ಕಾನೂನು ಮಾಡಿದೆ. ಇಷ್ಟರಲ್ಲೇ ನಮಗಾಗದವರು ಏನಾದರೂ ಹೇಳಿಕೊಟ್ಟರೆ ಮತ್ತೆ ನಮ್ಮ ಪಾಡು ಬೇಡ'[೬೮]

ನಾರಾಯಣ ಹೆಂಡತಿಗೆ ಹೇಳುವ ಮಾತಿನಲ್ಲಿ ಆಡಳಿತ ಮತ್ತು ಅದು ತರಬಹುದಾದ ಕಾನೂನಿನ ಕುರಿತು ಭೀತಿ ವ್ಯಕ್ತವಾಗಿದೆ. ಅನಂತಯ್ಯನವರು ಬದುಕಿರುವಾಗ, ಎರಡನೆ ಮಗ ಕೇಶವನನ್ನು ಗೇಣಿ ಭೂಮಿ ಮಾರಿ ವೈದ್ಯಕೀಯ ಶಿಕ್ಷಣಕ್ಕೆ ಕಳಿಸುತ್ತಾರೆ. ಪರಂಪರಾಗತ ಉಳಿಗಮಾನ್ಯ ವ್ಯವಸ್ಥೆಯ ಬುದ್ಧಿವಂತ ಯಜಮಾನರು (ಅನಂತಯ್ಯ, ಪುಟ್ಟಣ್ಣಯ್ಯ ಇತ್ಯಾದಿ) ಕಾನೂನು ಜಾರಿಯಾಗುವ ಮೊದಲೇ ಅವರ

ಆಸಕ್ತಿಗನುಗುಣವಾಗಿ ಮಕ್ಕಳ ಆಯ್ಕೆಯನ್ನು ಗುರುತಿಸಿರುವುದು ಮಹತ್ವದ್ದಾಗಿದೆ. ಗೇಣಿಭೂಮಿಗಳ ಒಡೆಯರು (ಅನಂತಯ್ಯ, ಪುಟ್ಟಣ್ಣಯ್ಯ 'ಉಸಿರು' ಕಾದಂಬರಿ ಕಾಲ ೧೯೬೭ ಮತ್ತು ಶ್ರೀಕಂಠಶಾಸ್ತ್ರಿಗಳು, 'ಹೆಜ್ಜೆ' ಕಾದಂಬರಿ ಕಾಲ ೧೯೩೦) ಪರಂಪರಾಗತ ವೃತ್ತಿ ನಿರಾಕರಿಸಿದ ಮಕ್ಕಳನ್ನು ವಿರೋಧಿಸುವುದಿಲ್ಲ, ಬದಲಾಗಿ ಮೌನ ವಹಿಸುವುದು ಕಥನ ಸಾಹಿತ್ಯದಲ್ಲಿ ವ್ಯಕ್ತವಾಗಿದೆ. ಆಧುನಿಕ (ಲೌಕಿಕ) ಶಿಕ್ಷಣ ಪ್ರಪಂಚಕ್ಕೆ ತಮ್ಮನ್ನು ತೆರೆದುಕೊಂಡ ಸೂಚನೆಯನ್ನು ವ್ಯಾಸರಾರ ಬಲ್ಲಾಳ ಅವರ 'ಹೆಜ್ಜೆ' (೧೯೩೦) ಕಾದಂಬರಿಯ ಶ್ರೀಕಂಠಶಾಸ್ತ್ರಿ, ಶ್ರೀರಂಗ ಅವರ 'ವಿಶ್ವಾಮಿತ್ರನ ಸೃಷ್ಟಿ' (೧೯೩೪) ಕಾದಂಬರಿಯ ಶ್ರೀನಿವಾಸ ನಾಯಕ (ಮಗ ನಾರಾಯಣನಿಗೆ ಇಂಗ್ಲೀಶ್ ಶಿಕ್ಷಣ ಕೊಡಿಸಿದ್ದ ವ್ಯಕ್ತಿ) ಇವರ ಮುಖಾಂತರ ಕಥನ ಸಾಹಿತ್ಯ ಅನಾವರಣಗೊಳಿಸಿದೆ. ಶಿವರುದ್ರ ಕಲ್ಲೋಳಿಕರ ಅವರ 'ಹೊಲೆಗೇರಿಯ ರಾಜಕುಮಾರ' ಕಾದಂಬರಿಯಲ್ಲಿ ಕುರುಂದವಾಡ ರಾಜಮನೆತನದ ಜಮೀನು, ಅರಮನೆ, ಸಕಲ ಆಸ್ತಿಗಳು ಭೂ ಸುಧಾರಣೆ ಕಾನೂನಿನ ಅನ್ವಯ ಟೆನೆನ್ಸಿ ರೈತರ, ಸರಕಾರದ ಪಾಲಾಗುತ್ತವೆ. ರಾಜವಂಶದ ಸಂಭಾಜಿರಾವ್‌ನ ಮಕ್ಕಳು ಅಳಿದುಳಿದ ಚಿನ್ನ, ವಸ್ತ್ರ, ಪಾತ್ರೆ–ಪಗಡೆಗಳನ್ನು ಪುಣೆಗೆ ಸಾಗಿಸಿ ನಗರವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ರಾಜಸತ್ತೆಯನ್ನು ಅನುಭವಿಸಿದ್ದ ಕ್ಷತ್ರಿಯ ಸಮೂಹ ಕೌಟುಂಬಿಕ ವಿಘಟನೆಯ ನಂತರ, ವಿದ್ಯೆಗಿಂತ ವ್ಯವಹಾರದತ್ತ ಒಲಿದ ಪರಿಯನ್ನು ಕಾದಂಬರಿ ಅಭಿವ್ಯಕ್ತಗೊಳಿಸಿದೆ. ಅಹಲ್ಯಾಬಾಯಿಯೆಂಬ ಮಹಿಳೆ ಮಾಸಾಸನ ತೆಗೆದುಕೊಂಡು ಅಲ್ಲಿಯೇ ಜೀವನ ಮಾಡುತ್ತಿರುವ ವಿಷಯ, ಮತ್ತು ಅಲ್ಲಿನ ಕೌಟುಂಬಿಕ ಸ್ಥಿತಿಗಳು ಕಾನೂನು ಜಾರಿಯಾದ ನಂತರದ ಸಾಮಾಜಿಕ, ಆರ್ಥಿಕ ಪರಿಣಾಮಗಳನ್ನು ಬಿಂಬಿಸುತ್ತವೆ.

ಗೇಣಿ ಭೂಮಿಯನ್ನು ಅವಲಂಬಿಸಿದ್ದ ಮಧ್ಯಮ ವರ್ಗದವರ ಆಯ್ಕೆಯ ಕುರಿತು ಚಿಂತಿಸಿದಾಗ ಕಥನ ಸಾಹಿತ್ಯದಲ್ಲಿ, ಶಿಕ್ಷಣ, ಸ್ವಯಂ ಉದ್ಯೋಗಕ್ಕೆ ಪ್ರಾಮುಖ್ಯತೆ ಕೊಟ್ಟ ಕುಟುಂಬಗಳನ್ನು ಕಾಣುತ್ತೇವೆ. ರಾಮಕೃಷ್ಣ ಗುಂದಿ ಅವರ 'ಆರು ಮೇಡಂ ಮತ್ತು ಉದ್ಯೋಗ ಪರ್ವ' ಕತೆಯಲ್ಲಿ, ಗೇಣಿಯನ್ನು ಅವಲಂಬಿಸಿದ ಕುಟುಂಬವು ಮಗಳನ್ನು ಓದಿಸಿ ಶಿಕ್ಷಕರ ತರಬೇತಿ ಕೊಡಿಸಿರುತ್ತದೆ. ಗುಮಾಸ್ತನಾಗಿ ನಿವೃತ್ತನಾಗಿದ್ದ ತಂದೆಯೂ ವಿದ್ಯಾವಂತ ನಗರವಾಸಿ ಎಂಬುದು ಗಮನಾರ್ಹ. 'ಮನೆಯಲ್ಲಿ ದಟ್ಟದಾರಿದ್ರ್ಯವನ್ನು ಅನುಭವಿಸಿ ಅಮ್ಮನ ಕಣ್ಣೀರಿಗೆ ಕಣ್ಣೀರು ಕೂಡಿಸಿದ್ದು, ಕೊನೆಗೊಮ್ಮೆ ಸುಬ್ಬು ಮಾವನ ಸಹಾಯದಿಂದ ಉದ್ಯೋಗ ದೊರಕಿದ್ದು'[೧೯] ಎಂದು ನೆನಪಿಸಿಕೊಳ್ಳುವ ಆರು ಮೇಡಂ ಭೂ ಸುಧಾರಣೆ ಕಾನೂನು ಜಾರಿಯಾದ ನಂತರ ಕುಟುಂಬವನ್ನು ಮುನ್ನಡೆಸಲು ಸಿದ್ಧಳಾದ ಯುವತಿಯಾಗಿದ್ದಾಳೆ. ಕೇಶವ ಮಳಗಿ ಅವರ 'ಕಡಲ ತೆರೆಗೆ ದಂಡೆ' ಕತೆಯ ಅಗ್ರಹಾರದ ಜಯಾಚಾರ್ಯರ ಮಗ ಸತ್ಯಪ್ರಮೋದ ತನ್ನ ಉಡಾಳ ಬುದ್ಧಿ ತೋರಿದು, ನೌಕರಿ ಹುಡುಕುತ್ತ ಶಹರ ಸೇರುತ್ತಾನೆ. ವ್ಯಾಸರಾವ್ ನಿಂಜೂರ ಅವರ 'ಮಂಚ' ಕಥೆಯ ದಾಸಣ್ಣ ಹೆಗಡೆ ತನ್ನ ದುಶ್ಚಟಗಳಿಂದ ಗುತ್ತಿಯ ಮನೆಯನ್ನು ನಾಶದಂಚಿಗೆ ತಂದು, ಭೂ ಸುಧಾರಣೆ ಕಾನೂನು ಜಾರಿಯಾದಾಗ ಊಟ, ತಿಂಡಿ, ಅತ್ತೆಗೆ ಔಷಧಿಗೆ ತೊಂದರೆಪಟ್ಟು ಲೈಂಗಿಕ ಹಗರಣವೊಂದರಲ್ಲಿ ಸಿಲುಕಿಕೊಂಡು ನಗರ ಸೇರುತ್ತಾನೆ. ಕೆಟ್ಟು ಪಟ್ಟಣ ಸೇರು, ಎಂಬಂತೆ ಇವರಿಬ್ಬರ ಆಯ್ಕೆ ನಗರವಾಗಿದೆ. ಗೇಣಿ ಜಮೀನುಗಳ ಉತ್ಪನ್ನವನ್ನು ನಂಬಿ ಜೀವನ ಮಾಡುತ್ತಿದ್ದ ಬಹುತೇಕ ಕುಟುಂಬದ ಸದಸ್ಯರು, ಈ ಕಾನೂನು ಜಾರಿಯಾದ ನಂತರ ನಗರವನ್ನು ಆಯ್ಕೆ ಮಾಡಿಕೊಂಡಿದ್ದು ಕಂಡುಬರುತ್ತದೆ. ಇದಕ್ಕೆ ಕಾರಣ ಒಂದು ಕಾಲಕ್ಕೆ ಒಕ್ಕಲು ರೈತರ ಶ್ರಮದಿಂದ ರಾಜಸುಖ ಅನುಭವಿಸಿದ್ದ ಇವರು, ಅದೇ ರೈತ ಕುಟುಂಬಗಳ ಮುಂದೆ ಆರ್ಥಿಕ ದೈನ್ಯತೆಯಿಂದ, ಸಾಮಾಜಿಕ ಗೌರವವಿಲ್ಲದೆ ಬದುಕುವುದು ಅವಮಾನ ಎಂದು ತಿಳಿದಿರಬಹುದು. ತಮ್ಮೆಲ್ಲ ದುಶ್ಚಟಗಳನ್ನು ಮುಚ್ಚಿಟ್ಟುಕೊಳ್ಳಲಿಕ್ಕೆ ನಗರ ಪರಿಸರ ಸೂಕ್ತ ಎಂಬ ತಿಳುವಳಿಕೆ ಇವರದ್ದಾಗಿರಬಹುದು. ಕೃಷಿ ಉತ್ಪನ್ನದ ಆಸರೆ ತಪ್ಪಿದಾಗ, ನೌಕರಿ, ಉದ್ಯೋಗ, ವ್ಯಾಪಾರದಂತ ವೃತ್ತಿಗಳಿಗೆ ನಗರದ ಮಾರುಕಟ್ಟೆ ವ್ಯವಸ್ಥೆಯ ವಿಶಾಲತೆ ಸೂಕ್ತ ಎಂಬ ಅಭಿಪ್ರಾಯ ಬಹಳಷ್ಟು ಮಾಜಿ ಭೂ ಒಡೆಯರದ್ದಾಗಿದೆ. ಅಂದು, ಸರಕಾರ ಮತ್ತು ಸರಕಾರ ಜಾರಿ ಮಾಡಿದ ಕಾನೂನಿನ ವಿರುದ್ಧ, ಕಾನೂನು ಸಮರಕ್ಕೆ ನಗರವಾಸ ಸೂಕ್ತ ಎಂಬ ತೀರ್ಮಾನವೂ ಇವರ ಆಯ್ಕೆಯ ಹಿಂದಿನ ಒತ್ತಡವಾಗಿದೆಯೆನ್ನಬಹುದು.

### ಬ. ಮುಳುಗಡೆ ಮತ್ತು ಆಯ್ಕೆ

ಅಭಿವೃದ್ಧಿ ಹೆಸರಿನಲ್ಲಿ ಯೋಜನಾ ಪ್ರದೇಶಗಳಿಂದ ಕೃಷಿಭೂಮಿ ಹಾಗೂ ಮನೆಗಳನ್ನು ವಶಪಡಿಸಿಕೊಂಡ ಆಡಳಿತ, ವ್ಯಕ್ತಿ ಮತ್ತು ಕುಟುಂಬಗಳ ಹೊಸ ನೆಲೆಯ ಆಯ್ಕೆಯನ್ನು ತನ್ನ ಅನುಕೂಲಕ್ಕೆ

ತಕ್ಕಂತೆ ನಿರ್ಧರಿಸಿದೆ. ಭೂಮಿ, ಮನೆ ಕಳೆದುಕೊಂಡ ನಿರಾಶ್ರಿತರಿಗೆ 'ಭೂಮಿಗೆ ಭೂಮಿ (ಅಥವಾ ಪರಿಹಾರ ಹಣ), ಮನೆಗೆ ಪುನರ್ವಸತಿ ಗೃಹ (ಅಥವಾ ಪರಿಹಾರ ಹಣ)' ಎಂಬ ನಿಯಮದಂತೆ ಪುನರ್ವಸತಿ ಕೇಂದ್ರಗಳ ನಿರ್ಮಾಣ, ಹೊಸ ಭೂಮಿ ಹಂಚಿಕೆ ಮಾಡಿರುವುದು ಕಂಡುಬರುತ್ತದೆ. ನಿರಾಶ್ರಿತರು ಸರಕಾರ ನೀಡಿದಲ್ಲಿ ಭೂಮಿ, ಮನೆ ಪಡೆಯಬಹುದು ಇಲ್ಲವೆ ಪರಿಹಾರ ಹಣ ಪಡೆಯಬಹುದು. ಇಲ್ಲಿ ವ್ಯಕ್ತಿಗಳ ಆಯ್ಕೆಯ ಸ್ವಾತಂತ್ರ್ಯವನ್ನು ನಿರ್ಬಂಧಿಸಿದ್ದು ಗಮನಾರ್ಹವಾಗಿದೆ. ವ್ಯಕ್ತಿ, ಕುಟುಂಬಗಳ ನಿರಾಕರಣೆಯನ್ನು ನಿರ್ಧರಿಸಿ, ಆಯ್ಕೆಯನ್ನು ನಿರ್ಬಂಧಿಸಿರುವುದು ಬಹುತೇಕ ಕಥನಗಳಲ್ಲಿ ಕಂಡುಬರುವ ಆಡಳಿತದ ದ್ವಂದ್ವ ನಿರ್ಧಾರವಾಗಿದೆ. ನಾ. ಡಿಸೋಜ ಅವರ 'ದ್ವೀಪ' ಕಾದಂಬರಿಯ ಹೊಸಹಳ್ಳಿಯ ಪರಮೇಶ್ವರಪ್ಪನ ಕುಟುಂಬ ಸರಕಾರ ಕೊಟ್ಟ ನೊಟೀಸಿಗೆ ಹೆದರಿ, ಪರಿಹಾರ ಸ್ವೀಕರಿಸಿ ಹೊಸ ಜಮೀನು ಪಡೆದು ಹೊರಟು ಹೋಗುತ್ತದೆ.

> 'ಎಕರೆ ಬಾಗಾಯಿತಿಗೆ ಇಷ್ಟು, ಮನೆ, ಕೊಟ್ಟಿಗೆ, ಬಾವಿಗೆ ಇಷ್ಟಿಷ್ಟು ಎಂದೆಲ್ಲ ಹಣ ಸಂದಾಯವಾಗಿತ್ತು. ಬೇರೆಡೆಯಲ್ಲಿ ಜಮೀನು ಕೊಟ್ಟಿತ್ತು. ಅಲ್ಲಿಗೆ ಮರಮಟ್ಟುಗಳನ್ನು ಸಾಗಿಸಲು ವಾಹನ ಸೌಕರ್ಯ ಒದಗಿಸಿತ್ತು. ಇಂತಿಷ್ಟು ದಿನಗಳಲ್ಲಿ ಈ ಹಳ್ಳಿ ಬಿಟ್ಟು ಹೊರಡಬೇಕೆಂದು ನೊಟೀಸು ಜಾರಿ ಮಾಡಿತ್ತು.'[೬೮]

ಇಲ್ಲಿ ರೈತನ ಆಯ್ಕೆಯ ನಿರ್ಧಾರವನ್ನು ಕಾನೂನಿನ ಚೌಕಟ್ಟಿನಲ್ಲಿ ನಿರ್ದಿಷ್ಟಗೊಳಿಸಿದ್ದು, ಭೂಮಿಗೆ ಭೂಮಿ ಎಂಬ ನಿಯಮ ಜಾರಿಯಾಗಿದೆ. ಪರಮೇಶ್ವರಪ್ಪನ ಹಿಂದೆ ಆವನ ಹುಟ್ಟಾಳು ಹಸಲರ ಹಾಲನ ಕುಟುಂಬ ಹೊರಡುತ್ತದೆಯಾದರೂ, ಕೃಷಿಕೂಲಿಯ ಸಂಸಾರಕ್ಕೆ ಪರಿಹಾರ ನೀಡದೆ ಆಡಳಿತ ಅವನ ಶ್ರಮವನ್ನು ಅಪಮೌಲ್ಯಗೊಳಿಸಿದ್ದು ಆಡಳಿತದ ನ್ಯೂನತೆಯೆನ್ನಬಹುದು. ಹೇರಂಬ ಹೆಗಡೆಯ ಕುಟುಂಬಕ್ಕೆ ಸರಕಾರ ಅವನು ಕೇಳಿದಲ್ಲಿ (ಅನಂತಪುರ) ಜಮೀನು ಕೊಟ್ಟು ಜೊತೆಗೆ ಐವತ್ತು ಸಾವಿರ ರೂಪಾಯಿಗಳ ಪರಿಹಾರ ಧನವನ್ನು ಕೊಟ್ಟಿದೆ. ಚತುರ ವ್ಯವಹಾರಸ್ಥನಾದ ಹೆಗಡೆ ಸರಕಾರಿ ಅಧಿಕಾರಿಗಳನ್ನು ಹಣಕೊಟ್ಟು ಒಲಿಸಿಕೊಂಡಿದ್ದನ್ನು ಕಾದಂಬರಿ ಅನಾವರಣಗೊಳಿಸಿದೆ. ಎರಡು ಕುಟುಂಬಗಳ ಆಯ್ಕೆಯ ವ್ಯತ್ಯಾಸವನ್ನು ಪರಿಗಣಿಸಿದರೆ, ಆಡಳಿತದ ನೀತಿ ನಿಯಮಗಳು ಹೇಗೆ ಅಸಹಾಯಕರಿಗೆ ಮಾತ್ರ ಅನ್ವಯಿಸುತ್ತವೆ ಹಾಗೂ ಅವುಗಳನ್ನು ಜಾರಿಗೊಳಿಸುವಲ್ಲಿ ಸರಕಾರಿ ಯಂತ್ರದ ನ್ಯೂನತೆ, ನಿರ್ಲಕ್ಷ, ಭ್ರಷ್ಟತೆಗಳ ಅರಿವಾಗುತ್ತದೆ. ಈ ಆಯ್ಕೆಗಳ ಮೇಲೆ ಆಡಳಿತ ಹಿಡಿತ ಸಾಧಿಸಿರುವುದು ಕಂಡುಬರುತ್ತದೆ. ಪರಿಹಾರ ವಿತರಣೆಯಲ್ಲಿನ ಅಸಮರ್ಪಕತೆ, ಭ್ರಷ್ಟಾಚಾರಗಳು ಆಡಳಿತ ಯಂತ್ರದ ಸಡಿಲತೆಗೆ ಸಾಕ್ಷಿಯಾಗಿವೆ. ಈ ರೀತಿಯ ಆಡಳಿತಾತ್ಮಕ ವಿಫಲತೆ ಕುರಿತು ಮಹಾಲಿಂಗ ಮಂಗಿ ಅವರ 'ಮುಳುಗಡೆ' ಕತೆಯಲ್ಲಿಯೂ ಪ್ರಸ್ತಾಪವಿದೆ. ಮೊದಲ ಹಂತದಲ್ಲಿ ದಲಿತ, ಕೆಳವರ್ಗದ ಕುಟುಂಬಗಳು ಸರಕಾರ ಕೊಟ್ಟ ಪರಿಹಾರ ಧನ (ಪರಿಹಾರ ಧನ ಮನಸು ತುಂಬೋದಿರಲಿ ಕಿಸೆಯನ್ನೂ ತುಂಬಲಿಲ್ಲ ಎಂಬ ಮಾತು ಬರುತ್ತದೆ) ಪಡೆದು ನಿರಾಳವಾಗಿ ಗ್ರಾಮದಿಂದ ಹೊರಟು ಹೋದರೆ, ಮೇಲ್ವರ್ಗದ ಜನರಾದ ಗೌಡ, ಕುಲಕರ್ಣಿ, ಒಕ್ಕಲು ಕುಳಗಳು ಪರಿಹಾರ ಸಾಲದೆಂದು ಹೋರಾಟ ಮಾಡಲು ಉಳಿದುಕೊಳ್ಳುತ್ತಾರೆ. 'ಈ ಮುಳುಗಡೆ ಸಾವಿರ ಮಂದಿನ್ನ ಸಾವಿರ ಕಡೆ ಮಾಡಿ ನಮ್ಮನ್ನೆಲ್ಲ ದೂರ ಮಾಡಿ ಅಗಲಿಸಿ ಮರೆಸಿ ಬಿಡತ್ತೈತಿ'[೬೯] ಎಂಬ ಮಾತು ಬಯಲು ಸೀಮೆಯ ನಿರಾಶ್ರಿತರ ಸಾವಿರ ಕುಟುಂಬಗಳು ಸಾವಿರ ವಿಭಿನ್ನ ಆಯ್ಕೆ ಮಾಡಿಕೊಂಡು ಹೋದ ರೀತಿಯನ್ನು ಹೇಳುತ್ತವೆ. ಭೂಮಿ ಕೊಟ್ಟು ತನ್ನ ಊರಲ್ಲಿ (ಮಾವನ ಗ್ರಾಮ) ಉಳಿಸಿಕೊಳ್ಳುವ ಆಯ್ಕೆಯ ಕುರಿತು ಮಾವ ಕೊಟ್ಟ ಸಲಹೆಯನ್ನು ಸಿದ್ದಲಿಂಗ ನಿರಾಕರಿಸಲು, ಅವನ ನಗರದತ್ತಣ ಒಲವು ಕಾರಣ ಎಂದು ಊಹಿಸಬಹುದು.

ಶ್ರೀಧರ ಬಳಗಾರ ಅವರ 'ಇಳೆ ಎಂಬ ಕನಸು' ಕತೆಯ ಜನಕಜ್ಜನ ಮನೆತನದ ಸಾಂಪ್ರದಾಯಿಕ ವಿರೋಧಿ ಶಿವಯ್ಯ ಮುಂಬಯಿಯಲ್ಲಿ ಮಗನ ಜೊತೆ ವಾಸಿಸಲು ಮಹಾನಗರವನ್ನು ಆಯ್ಕೆ ಮಾಡಿಕೊಳ್ಳುತ್ತಾನೆ. 'ಊರಿನ ಸಂಗ್ತಿಗೆ ಊರಿನ ಜಗಳ, ದ್ವೇಷಗಳೂ ಮುಳುಗಿ ಹೋದ್ವು ನೋಡಿ'[೭೦] ಎಂಬ ನಾಗುವಿನ ನುಡಿಯಂತೆ ಈ ಮಣ್ಣಿನಲ್ಲಿ ಹುಟ್ಟಿದ ರಾಗದ್ವೇಷಗಳು, ಪ್ರೀತಿ, ನೆಂಟಸ್ತಿಕೆ, ಸಂಬಂಧಗಳು ಮಣ್ಣಿನೊಂದಿಗೆ ನೀರಲ್ಲಿ ಮುಳುಗಡೆಯಾಗುತ್ತವೆ. ಗ್ರಾಮದ ಉಳಿದ ಕುಟುಂಬಗಳು ಭರಪೂರ ಪರಿಹಾರ ಧನ ಎಣಿಸಿಕೊಂಡು ಅರಬೈಲು ಘಟ್ಟದ ಪುನರ್ವಸತಿ ಕೇಂದ್ರದಲ್ಲಿ ನೆಲೆ ನಿಲ್ಲುತ್ತವೆ. ಇಲ್ಲಿ ನಿರಾಕರಣೆ, ಆಯ್ಕೆ ಎರಡನ್ನೂ ಸರಕಾರ ನಿರ್ಧರಿಸಿ ನಿರ್ವಹಿಸಿದೆ. ಭೂ ಒಡೆಯರಲ್ಲಿದ್ದ ಕೃಷಿಕೂಲಿಗಳು, ಹುಟ್ಟಾಳುಗಳು, ಗ್ರಾಮದ ಅಯ್ಯನೋರು(ಪುರೋಹಿತ) ಶರಣ ಮಹಾಲಿಂಗಯ್ಯ, ಊರಿನ ಆಯುಗಾರರು

(ಜಮೀನಿಲ್ಲದವರು) ಪರಿಹಾರ ಪಡೆಯದ ನಿರಾಶ್ರಿತರಾಗಿದ್ದಾರೆ. ಭೂಮಾಲೀಕರನ್ನು ಅವಲಂಬಿಸಿದ ಈ ಶ್ರಮಿಕ ವರ್ಗಕ್ಕೆ ಪರಿಹಾರ ನೀಡದೆ ಸರಕಾರ ತಾರತಮ್ಯವೆಸಗುತ್ತದೆ. ಪರಿಹಾರ ಧನ ಪಡೆಯಲು ಸ್ಥಿರಾಸ್ತಿ ಇರಲೇಬೇಕೆ ಎಂಬ ಪ್ರಶ್ನೆ ಇಲ್ಲಿನದಾಗಿದೆ. ಈ ನೆಲದಲ್ಲಿ ಸ್ಥಿರಾಸ್ತಿ ಇಲ್ಲದವರು ಈ ದೇಶದ ಪ್ರಜೆಗಳಲ್ಲವೆ, ಅವರ ಗ್ರಾಮ/ನಗರ ನಿರಾಕರಣೆ ಮತ್ತು ಆಯ್ಕೆಗಳು ಅವರಲ್ಲಿ ಮುಂದಿನ ಜೀವನ ಕುರಿತು ಅತಂಕ, ತಲ್ಲಣ, ಅಭದ್ರತೆಯ ದ್ವಂದ್ವಗಳನ್ನು ಹುಟ್ಟು ಹಾಕುವುದಿಲ್ಲವೆ, ಆಡಳಿತ ಇಂಥವರ ಪುನರ್ವಸತಿ ಸಮಸ್ಯೆಯತ್ತ ಗಮನ ಹರಿಸುವ ಅವಶ್ಯಕತೆ ಇದೆ.

## ೫. ಮಹಿಳಾ ಗ್ರಹಿಕೆ ಮತ್ತು ಆಯ್ಕೆ

### ಅ. ಹಿರಿಯ ತಲೆಮಾರಿನ ಮಹಿಳೆ ಮತ್ತು ಆಯ್ಕೆಯ ನೆಲೆಗಳು

ಹೊಸನೆಲೆಯ ಆಯ್ಕೆ ಮತ್ತು ಗ್ರಹಿಕೆಗಳು ಪುರುಷರಿಗಿಂತ ಮಹಿಳೆಯರಲ್ಲಿ ವಿಭಿನ್ನವಾಗಿ ನಿಲ್ಲುತ್ತವೆ. ಗ್ರಾಮ/ನಗರ ಆಯ್ಕೆಯ ಹಂತದಲ್ಲಿ ಹಿರಿಯ ಮತ್ತು ಕಿರಿಯ ತಲೆಮಾರಿನ (ಮೇಲ್ವರ್ಗ/ಕೆಳ, ದಲಿತವರ್ಗ) ಮಹಿಳೆಯರ ಆಯ್ಕೆ ಮತ್ತು ಗ್ರಹಿಕೆಗಳನ್ನು ಗಮನಿಸಿದಾಗ ಹಲವಾರು ವೈಶಿಷ್ಟ್ಯಪೂರ್ಣ ಅಂಶಗಳು ಗಮನಕ್ಕೆ ಬರುತ್ತವೆ. ಮಹಿಳೆಯು ತನ್ನ ಮತ್ತು ತನ್ನ ಕುಟುಂಬದ ಸುರಕ್ಷತೆ, ರಕ್ಷಣೆಯ ಹೊಣೆ, ಆಶ್ರಯ, ಸಂಘಟಿತ ಜೀವನ ಮುಂತಾದ ಧನಾತ್ಮಕ ಅಂಶಗಳಿಗೆ ಆದ್ಯತೆ ಕೊಟ್ಟಿರುವುದು, ಹಲವೊಮ್ಮೆ ಪುರುಷಮಾನ್ಯ ಸಾಮಾಜಿಕ ವ್ಯವಸ್ಥೆಯ ನಿರಾಕರಣೆಯಂತಹ ಆಯ್ಕೆಗಳೂ ಕಂಡುಬರುತ್ತವೆ. ಇದನ್ನು 'ನಿರಾಕರಣೆಯ ನಿರಾಕರಣೆ ಆಯ್ಕೆ'ಯ ನೆಲೆ ಎಂದು ಕರೆಯಬಹುದು. ಕಥನ ಸಾಹಿತ್ಯದಲ್ಲಿ ಗ್ರಾಮ/ನಗರ ನಿರಾಕರಿಸುವ ಮಹಿಳೆಯ ಗ್ರಹಿಕೆಯ ಜೊತೆ, ಅವಳ ಕುಟುಂಬದ ಇತರ ಮಹಿಳಾ ಸದಸ್ಯರು, ಸ್ನೇಹಿತೆಯರು, ಹಿತೈಷಿಗಳು ತಮ್ಮ ಹಾಗೂ ಇತರರ ಆಯ್ಕೆಗಳನ್ನು ಹೇಗೆ ಗ್ರಹಿಸುತ್ತಾರೆ, ಎಂಬುದನ್ನು ಪ್ರಸ್ತುತ ಚರ್ಚೆಯಲ್ಲಿ ಪರಿಗಣಿಸಲಾಗಿದೆ.

ವ್ಯಾಸರಾವ್ ನಿಂಜೂರ ಅವರ 'ಉಸಿರು' ಕಾದಂಬರಿಯ ಡಾ. ಕೇಶವ ತನ್ನ ಮದುವೆಯಾದ ನಂತರ ಪಡಮುನ್ನೂರ(ಗ್ರಾಮ)ನ್ನು ನಿರಾಕರಿಸಿ, ವೈದ್ಯ ವೃತ್ತಿಗೆ ಬೆಂಗಳೂರು ನಗರವನ್ನು ಆಯ್ಕೆ ಮಾಡಿಕೊಳ್ಳುತ್ತಾನೆ. ಅವನ ತಂದೆ ಅನಂತಯ್ಯನವರ ಆಸೆ, ಆಕಾಂಕ್ಷೆಗಳನ್ನು ಅರ್ಥ ಮಾಡಿಕೊಂಡಿದ್ದ ತಾಯಿ ರುಕ್ಮಿಣಮ್ಮ, 'ಅಲ್ಲವೋ, ನಿನ್ನ ಅಪ್ಪಯ್ಯನಿಗೂ ನೀನು ಊರಿನಲ್ಲೆ ಡಾಕ್ಟರರಾಗಬೇಕು ಎನ್ನುವ ಆಸೆ ಇತ್ತು'[೫೧] ಎಂದು ಹೊಸ ಜನಾಂಗದ ನಗರ ಆಯ್ಕೆಯನ್ನು ವಿರೋಧಿಸುವ ನೆಲೆಯಲ್ಲಿ, ಗಂಡನ/ಹಿರಿಯರ ಆಶೋತ್ತರಗಳನ್ನು ಈಡೇರಿಸಬೇಕಾದ್ದು ಮಕ್ಕಳ/ಯುವಕರ ಕರ್ತವ್ಯ ಎಂಬ ಅಭಿಪ್ರಾಯವನ್ನು ಮಂಡಿಸುತ್ತಾಳೆ. ಹೆಂಡತಿ (ಛಾಯಾ) ಕೇಶವನನ್ನು ನಗರದತ್ತ ಸೆಳೆದರೆ, ತಾಯಿ ಹಳ್ಳಿಯಲ್ಲಿಯೆ ಉಳಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಈ ಪ್ರಯತ್ನ ಸಾಧ್ಯವಿಲ್ಲ, ಯುವಕರ ನಗರ ಆಯ್ಕೆ ಅಸಹಜವಲ್ಲ ಎಂಬುದನ್ನು ಅರ್ಥೈಸಿಕೊಂಡ ಕೇಶವನ ಅತ್ತಿಗೆ (ಸಾವಿತ್ರಿ), 'ಹೆಂಡತಿಗಾಗಿ ಕೇಶವನ ನಗರ ಆಯ್ಕೆ ತಪ್ಪಲ್ಲ, ಎಲ್ಲ ಋಣಾನುಬಂಧ, ದೈವೇಚ್ಛೆ' ಎಂದು ವಿಧಿವಾದವನ್ನು ಪುರಸ್ಕರಿಸುತ್ತಾಳೆ. ತಾಯಿಗೆ ಗ್ರಾಮದ ಹಿತ, ಅತ್ತಿಗೆಗೆ ಮೈದುನನ ಇಚ್ಛೆ ಈಡೇರುವಾಸೆ. ಹೀಗೆ ಇಬ್ಬರು ಹಿರಿಯ ಮಹಿಳೆಯರಲ್ಲಿರುವ ನಗರ ಆಯ್ಕೆಯ ಕುರಿತು ಇರುವ ವಿಭಿನ್ನ ದೃಷ್ಟಿಕೋನ(ದ್ವಂದ್ವ)ವನ್ನು ಗುರುತಿಸಬಹುದು.

ಅಶೋಕ ಹೆಗಡೆ ಅವರ 'ಅಂತರದಂಗೆ' ಕತೆಯಲ್ಲಿ ಕುಗ್ರಾಮವೊಂದರ ಬ್ಯಾಂಕಿನ ಉದ್ಯೋಗಿ, ಮಧ್ಯವಯಸ್ಸಿನ ರೋಹಿಣಿ, ಜಾಗತೀಕರಣದ ಸೆಳೆತಕ್ಕೆ ಸಿಕ್ಕು ನಗರ ಸೇರಲು ಆಶಿಸಿದ ಸಹದ್ಯೋಗಿ ಗಂಡನನ್ನು ಕುರಿತು, 'ಮನು ನೀನು ಬೇಕಾದರೆ ನಗರದ ಬ್ಯಾಂಕನ್ನು ಸೇರಿಕೋ'[೫೨] ಎಂದು ಅವನ ನಗರ ಆಯ್ಕೆಯನ್ನು ಪುರಸ್ಕರಿಸದೆ, ತನ್ನ ಗ್ರಾಮದ ಆಯ್ಕೆಯನ್ನು ಸೂಚಿಸುತ್ತಾಳೆ. ಒಂದು ಕಡೆ ಗಂಡ (ನಗರ/ಜಾಗತಿಕರಣ) ಇನ್ನೊಂದು ಕಡೆ ಸಂಸಾರ ಮತ್ತು ಅದರ ರಕ್ಷಣೆ (ಗ್ರಾಮ), ರೋಹಿಣಿ ಇವೆರಡೂ ಶಕ್ತಿಗಳ ಎಳೆತದಲ್ಲಿ ಬಳಲುವುದು ಕಥೆಯಲ್ಲಿ ದಾಖಲಾಗಿ ಒಂದು ಹಂತದಲ್ಲಿ ಕೀಳರಿಮೆಯನ್ನು ಅನುಭವಿಸುತ್ತಾಳೆ. ವಿದ್ಯಾವಂತೆ, ಬುದ್ಧಿವಂತೆ (ಬಿ.ಕಾಂ.ನಲ್ಲಿ ಮೊದಲ ದರ್ಜೆಯಲ್ಲಿ ಪಾಸಾದ ಅಭ್ಯರ್ಥಿ), ಬ್ಯಾಂಕ್ ಉದ್ಯೋಗಿ (ಆರ್ಥಿಕ ಭದ್ರತೆ ಇರುವ) ರೋಹಿಣಿಗೆ ಉದಾರೀಕರಣ, ಜಾಗತೀಕರಣ, ಮುಕ್ತ ಸ್ವಾತಂತ್ರ್ಯ ಎಂಬ ಅಬ್ಬರಗಳಿಗಿಂತ ತನ್ನ ಮಕ್ಕಳ, ಕುಟುಂಬದ ಕ್ಷೇಮವು ಮುಖ್ಯವಾಗಿದೆ. ಮಕ್ಕಳನ್ನು ಬಿಟ್ಟು ತಾನು ಬೆಂಗಳೂರಿನಂತಹ ನಗರದಲ್ಲಿ ಕೆಲಸ ಮಾಡುವುದು ಸಾಧ್ಯವಿಲ್ಲ ಎಂಬ ಅವಳ ಗ್ರಹಿಕೆ

ಗೃಹಿಣಿಯ ಕರ್ತವ್ಯಗಳಿಗೆ ಮೊದಲ ಆದ್ಯತೆ ಕೊಟ್ಟು, ನಂತರ ಜಗತ್ತಿನ ಚಲನೆಯ ಕಡೆ ಹೆಜ್ಜೆ ಹಾಕುವಂತೆ ಪ್ರೇರೇಪಿಸಿದೆ. ಇದು ಮಧ್ಯಮ ವರ್ಗದ ಮಹಿಳೆಯ ಜಾಗತೀಕರಣ (ನಗರ) ಆಯ್ಕೆಯ ದೃಷ್ಟಿಕೋನವಾಗಿದೆ. ರೋಹಿಣಿಯ ಆಯ್ಕೆ ಗಂಡನ ಗ್ರಾಮ ನಿರಾಕರಣೆಯನ್ನು ನಿರಾಕರಿಸುವ ಹಂತದಲ್ಲಿ (ನಿರಾಕರಣೆಯ ನಿರಾಕರಣೆ ಆಯ್ಕೆ) ಪ್ರಕಟಗೊಂಡಿದೆ.

ರಾಘವೇಂದ್ರ ಪಾಟೀಲ ಅವರ 'ಮಾಯಿಯ ಮುಖಗಳು' ಕಥೆಯ ಕೃಷ್ಣೋಪಂತರು ತಮ್ಮ ಮೂವರು ಹೆಣ್ಣು ಮಕ್ಕಳಿಗೆ ಸಂಗೀತ ವಿದ್ಯಾಭ್ಯಾಸ ಕೊಡಿಸಲು ಕುಟುಂಬವನ್ನು ಬೆಳಗಾವಿ ನಗರಕ್ಕೆ ಸ್ಥಳಾಂತರಿಸಲು ನಿರ್ಧರಿಸುತ್ತಾರೆ. ಹಳ್ಳಿಯಲ್ಲಿ ಹೆಣ್ಣುಸೂಲದ್ದು ಎಂಬ ಹಣೆಪಟ್ಟ ಕಟ್ಟಿಕೊಂಡಿದ್ದ ಮಕ್ಕಳನ್ನು ಮದುವೆ ಮಾಡಿಕೊಡಲು ನಗರವೆ ಸೂಕ್ತವೆಂದು. ಈ ಆಯ್ಕೆಗೆ ಒತ್ತಾಯಿಸುತ್ತಿದ್ದ ಕೃಷ್ಣಾಬಾಯಿ ಈ ಆಯ್ಕೆಯನ್ನು ಪುರಸ್ಕರಿಸುತ್ತಾಳೆ. ಅವಳು ಗ್ರಾಮ ನಿರಾಕರಣೆಗಿಂತ ನಗರ ಆಯ್ಕೆಯಲ್ಲಿ ತನ್ನ ಕುಟುಂಬದ ಸುರಕ್ಷತೆಯನ್ನು ಕಂಡುಕೊಳ್ಳುತ್ತಾಳೆ. 'ಬೆಳಗಾವ್ಯಾಗ ಈ ಮೂರರದೂ ಮದಿವಿ ಒಂದ ಮಾಡಿಬಿಡ್ರಿ, ಆಮ್ಯಾಲ ಬೇಕಾದರ ನೀವು ನನ್ನ ತಂದು ಇಲ್ಲಿ ಈ ಊರಾಗಿನ ಮನ್ಯಾಗರ ಇಡ್ರಿ, ಇಲ್ಲಾಂತಂದ್ರ ತ್ವಾಟದಾಗ ಒಂದು ಗುಡಿಸಲಾ ಹಾಕಿ ಅಲ್ಲಿ ಇಡ್ರಿ' ಮಹಿಳೆಯ ದೃಷ್ಟಿಯಲ್ಲಿ ತನ್ನ ಮಕ್ಕಳ ಮದುವೆ. ಅವರ ಸಂಸಾರಕ್ಕೆ ಮೊದಲ ಆದ್ಯತೆಯಿದ್ದು, ಶಿಕ್ಷಣ ನಂತರದ ಸಾಧ್ಯತೆಯಾಗುವುದು ಈ ಆಯ್ಕೆಯಿಂದ ಸ್ಪಷ್ಟವಾಗಿದೆ. ಮಗನನ್ನು ಅಣ್ಣನ ಮನೆಯಲ್ಲಿ ಏಳು ವರ್ಷ ಓದಿಸಿ. ಮುಂದೆ (ಓದಿಸಲಾರದೆ) ಕೆಲಸ ದೊರೆತು. ಮಗನ ಮುಂಬಯಿ ಆಯ್ಕೆಯ ಸಂದರ್ಭದಲ್ಲಿ. ಕುಸುಮಾಕರ ದೇವರಗೆಣ್ಣೂರು ಅವರ 'ನಿರಿಂದ್ರಿಯ' ಕಾದಂಬರಿಯ ಕಲ್ಲಪ್ಪ ರೊಳ್ಳಿಯ ತಾಯಿ ಈ ಆಯ್ಕೆಯನ್ನು ವಿರೋಧಿಸುತ್ತಾಳೆ. ಮುಂಬಯಿ ದೂರದ, ದಟ್ಟ ಜನಸಂದಣಿಯ ನಗರ. ಮಗ ಚಿಕ್ಕವನು ಎಂಬ ನೆಲೆಯಲ್ಲಿ ಆತಂಕ. ದ್ವಂದ್ವ ಅವಳನ್ನು ಕಾಡಿದೆ. ಜೊತೆಗೆ ಮಗ ಕಟ್ಟು ಹೋಗಿರುವ ಈ ಕುಟುಂಬದಲ್ಲಿದ್ದರೆ ಹಾಳಾಗಿ ಹೋಗುತ್ತಾನಲ್ಲ ಎಂಬ ಬೇಸರವೂ ಇದೆ. 'ಆಗುವುದೆಲ್ಲ ಒಳ್ಳೆಯದಕ್ಕೆ ಆಗುತ್ತದೆ- ಹೀಗೆ ಹಿರಿಯರು ಹೇಳಿಲ್ಲವೆ? ತನ್ನ ಕೈಯಲ್ಲಿ ಏನಿದೆ, ಆ ದಿನಕ್ಕಾಗಿ ಕಾಯುವುದನ್ನು ಬಿಟ್ಟು' ಎನ್ನುತ್ತ ಮುಂಬಯಿ ನಗರದ ಆಯ್ಕೆಯನ್ನು ನಿರ್ಧರಿಸುತ್ತಾಳೆ. ಪರಿಣಾಮವನ್ನು ವಿಧಿಗೆ ಒಪ್ಪಿಸುವ ಅಸಹಾಯಕ ಮಹಿಳೆಯಾಗಿ ಈ ತಾಯಿ ತನ್ನ ಮಗನ ಹಿತದೃಷ್ಟಿಯನ್ನು ಚಿಂತಿಸಿ ಒಳ್ಳೆಯದನ್ನು ನಿರೀಕ್ಷಿಸುತ್ತಾಳೆ. ಇದು ಭಾರತೀಯ ಸಾಂಪ್ರದಾಯಿಕ ಮಹಿಳೆಯ ಒಂದು ವಿಶಿಷ್ಟ ಗುಣವಾಗಿದೆ.

ಕೆಳ. ದಲಿತ ವರ್ಗದ ಮಹಿಳೆಯರ ಗ್ರಾಮ/ನಗರ ಆಯ್ಕೆಯ ವಿಭಿನ್ನ ಗ್ರಹಿಕೆಗಳನ್ನು ನಾವು ಪ್ರಸ್ತುತ ಕಥನ ಸಾಹಿತ್ಯದಲ್ಲಿ ಅರಸಬಹುದು. ಕೋರಗಲ್ ವಿರುಪಾಕ್ಷಪ್ಪ ಅವರ 'ಕಥೆ ಅಂದ್ರೆ ಕಥೆ ಅಲ್ಲ' ಕಥೆಯ ಪಾರ್ವತೆವ್ವಳ ಆಯ್ಕೆ ಎಂದರೆ ಪ್ರೀತಿ ಮತ್ತು ಆಸರೆಗಳಾಗಿವೆ. ಇದನ್ನು ಅವಳು ತನ್ನ ಜೀವನದಲ್ಲಿ ಎರಡು ಸಲ ಆಯ್ಕೆ ಮಾಡಿಕೊಂಡು ತೋರಿಸಿಕೊಟ್ಟಿದ್ದಾಳೆ. ಕುಡಿದು ಬಂದು ಹೊಡೆಯುವ ಮೊದಲ ಗಂಡ ಉಡಚಪ್ಪನನ್ನು ಬಿಟ್ಟು, ತನ್ನನ್ನು ಇಷ್ಟಪಡುವ ಗಿರಿಯಪ್ಪನ ಜೊತೆ ಗ್ರಾಮವನ್ನು ಆಯ್ಕೆ (ಪುಟ್ಟ ಮಗ ರಂಗಪ್ಪನೊಂದಿಗೆ) ಮಾಡಿಕೊಂಡು. ತಾನು ಅವಿದ್ಯಾವಂತೆಯಾದರೂ ತನ್ನ ಮತ್ತು ಮಗನ ಬದುಕು. ಭಾವನೆ. ಕನಸುಗಳ ರಕ್ಷಣೆಗೆ ಮುಂದಾಗಿದ್ದಾಳೆ. ಈ ಆಯ್ಕೆಯ ಮೂಲಕ ಪುರುಷಮಾನ್ಯ ಸಮಾಜವನ್ನು ವಿರೋಧಿಸಿ. ಕೌಟುಂಬಿಕ ರಕ್ಷಣೆಗೆ ಬದ್ಧಳಾಗಿ. ಮಗನನ್ನು ಗಿರಿಯಪ್ಪನ ಸಹಾಯದಿಂದ ಓದಿಸಿ ಇಂಜನಿಯರ್ ಮಾಡುವುದು. ಮಹಿಳೆ ಏನನ್ನಾದರೂ ಸಾಧಿಸಬಹುದೆಂಬ ಸಾರ್ವತ್ರಿಕ ಎಚ್ಚರಿಕೆಯಾಗಿದೆ. ಇಂಜನಿಯರ್ ಆದ ರಂಗಪ್ಪ ಆಸ್ತಿ, ಹಣಕ್ಕೆ ಬೆಲೆಕೊಟ್ಟು ತಾಯಿಯನ್ನು ಮರೆಯುತ್ತಾನೆ. ಅವನ ಹತ್ತಿರ ಹೋದರೆ ಸುಖವಾಗಿ ಇರುತ್ತಿ ಎಂಬ ನಿರೂಪಕನ ಮಾತಿಗೆ ಪಾರ್ವತೆವ್ವ, 'ಅವನ ರೊಕ್ಕ ರೂಪಾಯಿ ನನಗ ಒಂದೂ ಬ್ಯಾಡ ಬುಡು. ಯಾರಾರ ನಿಮ್ಮಂಥವ್ರ ಅಂಗಳ ಕಸ ಹೊಡ್ದರ ಒಂದು ರೊಟ್ಟಿ ಚಟ್ನಿ ಕೊಡ್ತಾರ' ಎನ್ನುತ್ತಾಳೆ. ಇವಳ ಎರಡನೇ ಆಯ್ಕೆಯು ಸ್ವತಂತ್ರ ಹಂಗಿಲ್ಲದ ಗ್ರಾಮೀಣ ಬದುಕಾಗಿದೆ. ಇದೇ ಲೇಖಕರ 'ಮಣ್ಣಿನ ಗುಣ' ಕಥೆಯ ಗಂಗವ್ವನ ನಗರ ಆಯ್ಕೆಯ ಉದ್ದೇಶದಲ್ಲಿ, ಅತ್ತೆ, ಗಂಡ, ಮಕ್ಕಳಿಂದ ದೂರವಾದರೂ ಕೌಟುಂಬಿಕ ವ್ಯವಸ್ಥೆಯ ನೆಲೆಯಲ್ಲಿ ಒಂಟಿ ಸಂಸಾರ ಕಟ್ಟಿ ನೆಲೆಸುವ ಛಲವಿದೆ. ಮಣ್ಣಿನ (ಗ್ರಾಮ) ಋಣದ ಪ್ರಶ್ನೆ, ಮಕ್ಕಳ ಚಿಂತೆ, ಗಂಡನ ಸಾಂಗತ್ಯ ಇವೆಲ್ಲ ಕಾರಣ ಮುಂದಿಟ್ಟುಕೊಂಡ ಎಸ್. ಎಫ್. ಯೋಗಪ್ಪನವರ ಅವರ 'ಅಂಟು' ಕಥೆಯ ರಮೇಶನ ತಾಯಿ (ಅವ್ವ), ನಗರ ಆಯ್ಕೆಯನ್ನು ವಿರೋಧಿಸುತ್ತಾಳೆ.

'ಈ ಹಳ್ಳಿಯಲ್ಲಿಯ ನಮ್ಮ ಬದುಕು ನೀರಿಗೆ ಕೂಡಿಸಿದ ಬಣ್ಣದಂತೆ ಬೆರೆತು ಹೋಗಿದೆ. ಎರಡನ್ನೂ ಬೇರೆಬೇರೆ ಮಾಡಲು ಬರುವುದಿಲ್ಲ. ನಾವಿಲ್ಲಿದ್ದು ಬದುಕುವುದು ನಿಮಗಾಗಿ. ನಮ್ಮ ಋಣ ಇಲ್ಲೇ ಇದೆ.'[೩೬]

ಹಳ್ಳಿಯ ಮಣ್ಣಲ್ಲಿ ಬಲಿತು ಬೇರುಬಿಟ್ಟ ಹಳೆಮರ ಕಿತ್ತು ನಗರದ ಮಣ್ಣಲ್ಲಿ ನೆಟ್ಟರೆ, ಹೊಸಬೇರು ಚಿಗುರಿಸಲಾರದು ಎಂಬ ಆಯ್ಕೆಯ ಗ್ರಹಿಕೆ ನಿರಕ್ಷರಕುಕ್ಷಿ ಮಹಿಳೆಯದು. ಗ್ರಾಮೀಣ ಸಾವಯವ ಸ್ವಭಾವವನ್ನು ಮೈಗೂಡಿಸಿಕೊಂಡ ಮಹಿಳೆ ಎಲ್ಲೇ ಇದ್ದರೂ ತನ್ನ ಮಗ, ಮೊಮ್ಮಗ ಎಂಬ ಕಕ್ಕುಲಾತಿ ಮರೆಯುವುದಿಲ್ಲ. ಈ ಸ್ವಭಾವ ಭೂಮಿ, ನೀರಿನ ಋಣದೊಂದಿಗೆ ತಳುಕು ಹಾಕಿಕೊಂಡಿದೆ. ವ್ಯಾಸರಾವ್ ನಿಂಜೂರ ಅವರ 'ನಿರಾಕರಣೆ' ಕತೆಯಲ್ಲಿ, ಮುಂಬಯಿಯಲ್ಲಿ ರದ್ದಿ ಸಂಗ್ರಹಿಸುವ ತಮಿಳು ಮುದುಕಿ ಗ್ರಾಮದಿಂದ ನಗರಕ್ಕೆ ಓಡಿಬಂದ ಕೇಶವನನ್ನು ಉದ್ದೇಶಿಸಿ, 'ಎಲ್ಲ ದರಿದ್ರದವು. ಎಲ್ಲೆಂದರಲ್ಲಿಂದ ನಮ್ಮ ಸಿಟಿಗೆ ಬರುತ್ತಾರೆ. ನಮಗಿಲ್ಲಿ ಒರಗಲಿಕ್ಕೂ ಜಾಗವಿಲ್ಲ. ಅದಕ್ಕೂ ಪೋಟಿ ಕೊಡುತಾರೆ. ಏನು ಮಾಡೋಣ, ಎಲ್ಲರೂ ಬದುಕಬೇಕಲ್ಲ. ನಾವೂ ಬದುಕುತ್ತೇವೆ. ಆ ಮುರುಗ ನೋಡಿಕೊಳ್ಳುತ್ತಾನೆ'[೩೭] ಎಂದು ಕೇಶವನಂಥ ಯುವಕರ ನಗರ ಆಯ್ಕೆಯನ್ನು ಬದುಕಿನ ಹೋರಾಟದ ನೆಲೆಯಲ್ಲಿ ವಿರೋಧಿಸುತ್ತಾಳೆ. ದೇಶದ ನಾನಾ ಮೂಲೆಗಳಿಂದ ಬರುವ ಜನರ ವಲಸೆಯಿಂದ ದಟ್ಟ, ಸಂಕೀರ್ಣವಾಗುವ ನಗರ ಬದುಕಿನ ಭವಿಷ್ಯದ ಅಪಾಯ ಕುರಿತ ಚಿಂತನೆ ಇಲ್ಲಿದೆ. ತಕ್ಷಣ ಮುದುಕಿ ಸೌಮ್ಯವಾಗಿ, ಬದುಕನ್ನು ಹಂಚಿ ಉಣ್ಣುವ ಶ್ರಮಜೀವಿಯಂತೆ ಕಾಣಿಸಿಕೊಳ್ಳುವುದು ಸೋಜಿಗ ತರುತ್ತದೆ.

ಜಾತಿ, ಧರ್ಮ, ಪಂಥ, ವರ್ಗ ಬೇಧವಿಲ್ಲದೆ ಹಿರಿಯ ತಲೆಮಾರಿನ ಮಹಿಳೆಯರ ಆಯ್ಕೆಗಳು ಸಂಸಾರದ ಸುರಕ್ಷತೆ, ಮಗ, ಮೊಮ್ಮಕ್ಕಳ ಕ್ಷೇಮ, ಹಿರಿಯರ ಆಸೆ, ಆಕಾಂಕ್ಷೆಯನ್ನು ಮಕ್ಕಳು ಉಳಿಸಬೇಕೆನ್ನುವ ಆಶಯ, ವಿಧಿವಾದದಲ್ಲಿ ನಂಬಿಕೆ, ಪ್ರೀತಿ, ಕ್ಷೇಮಭಾವಗಳ ಆಸರೆಗಳನ್ನು ಒಳಗೊಂಡಿರುವುದು ಕಥನ ಸಾಹಿತ್ಯದಲ್ಲಿ ದಾಖಲಾಗಿವೆ. ಪರಂಪರೆ ಮತ್ತು ಆಧುನಿಕತೆಯ ಸಂಸರ್ಗದಲ್ಲಿ ಆಧುನಿಕತೆಯನ್ನು ಹೊಸ ಪೀಳಿಗೆಯ ಮೂಲಕ ಸ್ವೀಕರಿಸಿಯೂ, ಪರಂಪರೆಯ ಯಥಾಸ್ಥಿತಿಯನ್ನು ಒಪ್ಪಿ ಅಪ್ಪಿಕೊಳ್ಳುವ ಹಿರಿಯ ತಲೆಮಾರಿನ ಮಹಿಳೆಯರು ಇವರಾಗಿದ್ದಾರೆ.

### ಬ. ಕಿರಿಯ ತಲೆಮಾರಿನ ಮಹಿಳೆ ಮತ್ತು ಆಯ್ಕೆಯ ನೆಲೆಗಳು

ಗ್ರಾಮ/ನಗರ ಆಯ್ಕೆಯ ಸಂದರ್ಭಗಳು ಬಂದಾಗ ಕಿರಿಯ ತಲೆಮಾರಿನ ಮಹಿಳೆಯರ ಚಿಂತನೆಯ ಕ್ರಮ ಹಿರಿಯ ಮಹಿಳೆಯರಿಗಿಂತ ವಿಭಿನ್ನವಾಗಿರುವುದನ್ನು ಕಾಣುತ್ತೇವೆ. ತನಗಿಷ್ಟವಿಲ್ಲದ ಪರಿಸರವನ್ನು ವಿರೋಧಿಸಿ, ನಿರಾಕರಿಸಿ, ಹೊಸ ನೆಲೆ/ಪರಿಸರವನ್ನು ಆಯ್ಕೆ ಮಾಡಿಕೊಳ್ಳುವ ನಿರ್ಧಾರಗಳು, ಮತ್ತು ಅವು ಯಶಸ್ವಿಯಾದ ಸಂಗತಿಯನ್ನು ಕಥನ ಸಾಹಿತ್ಯ ದಾಖಲಿಸಿದೆ. ಲೋಹಿತ ನಾಯ್ಕರ ಅವರ 'ನಿರ್ಧಾರ' ಕಥೆಯ ದಲಿತ ಯುವತಿ ಮಾಲತಿ ಜೀವನದಲ್ಲಿ ತೆಗೆದುಕೊಳ್ಳುವ ಎರಡು ಆಯ್ಕೆಗಳು ಬದಲಾದ ಮಹಿಳೆಯೊಬ್ಬಳ ಧ್ಯೇಯ, ಅನುಭವಗಳನ್ನು ತಿಳಿಸುತ್ತವೆ. ಅತ್ತೆ ಮನೆಯವರನ್ನು ಸಾಕಲು ಚಲಿಸುವ ರೈಲಿನಲ್ಲಿ ಇಡ್ಲಿ, ಕಾಫಿ ಮಾರುವ ವೃತ್ತಿಯಲ್ಲಿದ್ದಾಗ, ರಮೇಶನೊಂದಿಗಿನ ವಿವಾಹೇತರ ಸಂಬಂಧ, ಗಂಡನ ಸಾವಿನ ನಂತರ ಇವಳನ್ನು ಕುಟುಂಬದಿಂದ ಹೊರಹಾಕಲು ಕಾರಣವಾಗುತ್ತದೆ. ಮಹಿಳೆಯು ತ್ಯಾಗ, ಬಲಿದಾನಗಳ ಮೂರ್ತಿ, ಅವಳಲ್ಲಿ ಪ್ರತಿಭಟನೆಯ ಧ್ವನಿ ಇಲ್ಲ, ಪ್ರತಿಭಟಿಸುವ ಶಕ್ತಿ ಇಲ್ಲ ಎಂಬ ಪುರುಷರ ಸಂಕುಚಿತ ಪ್ರತಿಪಾದನೆ ಇಲ್ಲಿ ಮೂರ್ತತೆ ಪಡೆದು ಕಾರ್ಯರೂಪಕ್ಕಿಳಿದಿದೆ. ಗಂಡನ ಮನೆಯಿಂದ ಹೊರಗೆ ಬಂದ ಮಾಲತಿ ಹೊಸ ನೆಲೆಯ ಸಂಗಾತಿಯಾಗಿ ರಮೇಶ(ನಗರ)ನನ್ನು ಆಯ್ಕೆ ಮಾಡಿಕೊಳ್ಳುತ್ತಾಳೆ. ಲೋಕಾಪವಾದ, ಕೌಟುಂಬಿಕ ವಿರೋಧವನ್ನು ಎದುರಿಸಿ, ಮುರಿದು ಬಿದ್ದ ಸಂಸಾರವನ್ನು ಹೊಸದಾಗಿ ಕಟ್ಟುವ ಹಂಬಲ ಈ ಆಯ್ಕೆಯಲ್ಲಿದೆ. ಪ್ರತಿಭಾವಂತ ದಲಿತ ಮಹಿಳೆ ಒಬ್ಬ ದಲಿತ ಯುವಕನಿಂದಲೇ ಮೋಸಕ್ಕೊಳಗಾದಾಗ ಪುರುಷನ ಇನ್ನೊಂದು ಮುಖ ನಯವಂಚನೆ ಇಲ್ಲಿ ಅನಾವರಣಗೊಳ್ಳುತ್ತದೆ. ಮಾಲತಿಯ ಬದುಕಿನ ಮೊದಲ ಹಂತದ ಸೋಲನ್ನು ಗಮನಿಸಿದಾಗ, ಮಹಿಳೆ ಸೂಕ್ಷ್ಮಪ್ರಜ್ಞೆ, ಇಂಗಿತಜ್ಞೆ, ಕಷ್ಟಸಹಿಷ್ಣು, ತ್ಯಾಗಮೂರ್ತಿ ಮುಂತಾಗಿ ಉತ್ಪ್ರೇಕ್ಷಿಸುವ ಪರಿಭಾವನೆ ಆಕೆಯನ್ನು ಬೌದ್ಧಿಕ ನಿಷ್ಕ್ರಿಯಳನ್ನಾಗಿಸುವುದಲ್ಲದೆ ಪುರುಷನ ಲೈಂಗಿಕ ದಮನ–ದಬ್ಬಾಳಿಕೆಯನ್ನು ತನ್ನ ಬದುಕಿನ ಸ್ವಾಭಾವಿಕವಾದ ಅವಿಭಾಜ್ಯ ಅಂಗವೆಂಬಂತೆ ಅಂಗೀಕರಿಸುವಂತೆ ಮಾಡುತ್ತದೆ ಎಂಬುದನ್ನು ಒಪ್ಪುತ್ತೇವೆ. ರಮೇಶ ಬೇರೊಂದು ಮದುವೆಯಾದ ಸುದ್ದಿ ತಿಳಿದು ಮಾಲತಿ ತಾನೂ ಸ್ವತಂತ್ರಳಾಗಲು ವಿದ್ಯೆಯೊಂದೇ ಪರಿಹಾರವೆಂದು ಬೆಂಗಳೂರಿನ ಚಿಕ್ಕಪ್ಪನ ಮನೆಯನ್ನು ಆಯ್ಕೆ ಮಾಡಿಕೊಳ್ಳುತ್ತಾಳೆ.

'ನಡೆದಿದ್ದನ್ನೆಲ್ಲ ಹೇಳಿದಾಗ ಚಿಕ್ಕಪ್ಪನಲ್ಲಿ ನಿರಾಕರಣೆಯ ಭಾವವಿತ್ತು. ಆದರೂ ಏನೋ ಲೆಕ್ಕಾಚಾರದ ಮೇಲೆ ನನ್ನನ್ನು ಉಳಿಸಿಕೊಂಡು ತಾನು ಕೆಲಸ ಮಾಡುತ್ತಿದ್ದ ಫ್ಯಾಕ್ಟರಿಯಲ್ಲಿ ಕೆಲಸ ಕೊಡಿಸಿದ. ಸಂಬಳ ನನ್ನ ಕೈ ಸೇರುತ್ತಿರಲಿಲ್ಲ.'[೫೮]

ಸ್ವಂತ ಚಿಕ್ಕಪ್ಪನಿಂದಲೂ ಮಾಲತಿ ಶೋಷಣೆಗೆ ಒಳಗಾಗುತ್ತಾಳೆ. ರಮೇಶ, ಮಾವ, ಚಿಕ್ಕಪ್ಪರಾದಿಯಾಗಿ ಎಲ್ಲ ಪುರುಷರ ಮುಖಗಳು ಕರಾಳವೆ ಎಂಬ ಅವಳ ಮಹಿಳಾ ಗ್ರಹಿಕೆ, ಅವಳ ನಿರ್ಧಾರವನ್ನು ಮಹತ್ವಾಕಾಂಕ್ಷೆಯಾಗಿ ಬದಲಾಯಿಸುತ್ತದೆ. ಬ್ಯಾಂಕ್ ಪರೀಕ್ಷೆ, ಬ್ಯಾಂಕ್ ಉದ್ಯೋಗ, ನಂತರ ಎಂ.ಎ.ಎಂ.ಫಿಲ್ ಪರೀಕ್ಷೆಗಳು. ನಿಧಾನವಾಗಿ ಯಶಸ್ಸಿನ ಮೆಟ್ಟಿಲುಗಳನ್ನೇರಿ ಉನ್ನತ ಹುದ್ದೆ ಗಳಿಸುತ್ತಾಳೆ. ಪುರುಷಮಾನ್ಯ ವ್ಯವಸ್ಥೆಗೆ ಎದುರಾಗಿ ಶಿಕ್ಷಣ, ಉದ್ಯೋಗಗಳು ಮಹಿಳಾಶೋಷಣೆ ನಿವಾರಣೆಗೆ ಪರ್ಯಾಯ ಮಾರ್ಗಗಳು ಎಂಬ ನಿಲುವನ್ನು ಕಥೆ ಎತ್ತಿ ಹಿಡಿದಿದೆ. ವ್ಯಾಸರಾವ್ ನಿಂಜೂರ ಅವರ 'ಉಸಿರು' ಕಾದಂಬರಿಯ ಶಾರದಳ ಆಯ್ಕೆ ಎರಡು ಬಾರಿಯೂ ಉತ್ತಮ ನಿರ್ಧಾರದ ಆಯ್ಕೆಯಾಗಿವೆ. ಅವ್ವನ ಕಸುಬು (ಪರಂಪರೆ) ಮತ್ತು ಗೌಡನ ದಬ್ಬಾಳಿಕೆಯ ಬಿಗಿಹಿಡಿತ(ಊಳಿಗಮಾನ್ಯ ವ್ಯವಸ್ಥೆ)ದ ನಿರಾಕರಣೆಯೊಂದಿಗೆ ಶಿಕ್ಷಣ (ನಗರ) ಆಯ್ಕೆ ಮಾಡಿಕೊಳ್ಳುತ್ತಾಳೆ. ಮಣಿಪಾಲದಲ್ಲಿ ಪ್ರೀತಿಸಿದ ಚೇರಿಯನ್ ಕೈಕೊಟ್ಟಾಗ ವಾಸ್ತವಿಕ ನೆಲೆಯಲ್ಲಿ ಚಿಂತಿಸಿ ಬೆಂಗಳೂರನ್ನು ಆಯ್ಕೆ ಮಾಡಿಕೊಳ್ಳುತ್ತಾಳೆ. ಈ ಎರಡು ಸಂದರ್ಭಗಳಲ್ಲಿಯೂ ಪುರುಷಮಾನ್ಯ ವ್ಯವಸ್ಥೆಯ ನಿರಾಕರಣೆಗೆ ಅವಳು ಕಂಡುಕೊಂಡ ಮಾರ್ಗ ಶಿಕ್ಷಣ, ಉದ್ಯೋಗ ಮತ್ತು ಆತ್ಮಸ್ಥೈರ್ಯಗಳಾಗಿವೆ.

ಮಹಾಲಿಂಗ ಮಂಗಿ ಅವರ 'ಮುಳುಗಡೆ' ಕಥೆಯ ಪಾರಕ್ಕ ಶ್ರಮಸಂಸ್ಕೃತಿಯನ್ನು ಪ್ರತಿನಿಧಿಸುವ ಮಹಿಳೆಯಾಗಿದ್ದಾಳೆ. ಮುಳುಗಡೆಯಲ್ಲಿ ಮನೆ, ಹೊಲ, ಸಮಸ್ತ ಆಸ್ತಿ ಮುಳುಗಿಹೋದಾಗ ಸಹಾಯಕ್ಕೆ ಬಂದ ಹೆತ್ತ ತಂದೆಗೆ, 'ನಮ್ಮ ಎಡ್ಡಾಗ ಬಂದದ್ದನ್ನ ನಾವ ಉಣ್ಣಾತೇವು. ಆದು ನಮ್ಮ ಹಣೆ ಬರಹ ನಮ್ಮ ಭಾರ ಚಿಂತಿ ನಿಮ್ಮ ತಲಿಗೆ ಕಟ್ಕೋಂದ ಶಿವ ಒಪ್ಪಕಿಲ್ಲ'[೫೯] ಎಂದು ಸ್ವಂತ ತಂದೆಯ ಸಹಾಯ ನಿರಾಕರಿಸಿದ ಸ್ವಾಭಿಮಾನಿ ಮಹಿಳೆಯಾಗಿದ್ದಾಳೆ. ಗ್ರಾಮದ ಎಲ್ಲರಂತೆ ನಗರದತ್ತ ಗುಳೆ ಹೊರಟು, ಗಂಡನೊಂದಿಗೆ ಸಂಸಾರ ರಕ್ಷಣೆಯತ್ತ ಮುಂದಾಗುತ್ತಾಳೆ. ತವರಿನ ಹಂಗು, ಋಣಗಳು ಬೇಡ ಎನ್ನುವ ಸ್ವಾಭಿಮಾನದ ಆಯ್ಕೆ ಮಹಿಳಾ ವಿವೇಚನೆಗೆ ಬಂದಿರುವುದು ಮಹಿಳಾ ಜಾಗೃತಿಯ ಆಶಾದಾಯಕ ಲಕ್ಷಣವಾಗಿದೆ. ಇದನ್ನು ಹೊಸ ತಲೆಮಾರಿನ ವಿದ್ಯಾವಂತ, ಅವಿದ್ಯಾವಂತ, ಎಲ್ಲ ವರ್ಗದ ಮಹಿಳೆಯರ ಚಿಂತನೆ (ಆಯ್ಕೆ)ಯಲ್ಲಿ ಗ್ರಹಿಸಬಹುದು. ತಮ್ಮನ ಧಿಮಾಕ್ಕಾಗಿ ಇಡೀ ಗ್ರಾಮ, ಊಳಿಗಮಾನ್ಯ ವ್ಯವಸ್ಥೆಯನ್ನು ಧಿಕ್ಕರಿಸಿ, ಪ್ರಾಣದ ಹಂಗು ತೊರೆದು ಹೋರಾಡಿ ಮುಂಬಯಿ ನಗರ ಆಯ್ಕೆ ಮಾಡಿಕೊಳ್ಳುವ, ನಿಂಗಣ್ಣ ಸಣ್ಣಕ್ಕಿ ಅವರ 'ಚಂಬಿ' ಕಥೆಯ ಚಂಬಿ, ಸಾಕುಮಗು ಡಿಂಕಿ(ಭಾಮಿನಿಯ ನಗರ ನಿರಾಕರಣೆಗೆ ಅನೇಕ ಕೌಟುಂಬಿಕ ಕಾರಣಗಳುಂಟು)ಗಾಗಿ ಸ್ವಂತ ಗಂಡ, ಹೆಣ್ಣು ಮಗು, ಕುಟುಂಬದ ಆರ್ಥಿಕಬಲಗಳನ್ನು ನಿರಾಕರಿಸಿ ಗೋಕರ್ಣ(ಗ್ರಾಮ) ಆಯ್ಕೆ ಮಾಡಿಕೊಂಡ ಜಯಂತ ಕಾಯ್ಕಿಣಿ ಅವರ 'ಭಾಮಿನಿ ಸಪ್ತಪದಿ' ಕಥೆಯ ಭಾಮಿನಿ, ಗಂಡನ ವಿವಾಹೇತರ ಸಂಬಂಧ, ಕುಟುಂಬಸದಸ್ಯರ ಶೋಷಣೆ ತಿರಸ್ಕರಿಸಿ, ಶಿಕ್ಷಣ, ಸ್ವಾವಲಂಬಿ ಬದುಕಿಗೆ ಮುಖಮಾಡಿ ನಗರ ಆಯ್ಕೆ ಮಾಡಿಕೊಂಡ ಶಾರದಾ ಶೆಣೈ ಅವರ 'ಸಂಬಂಧಗಳು' ಕಥೆಯ ಲಲಿತ, ಇವರೆಲ್ಲರೂ ಜಾಗತೀಕರಣದ ಸಂದರ್ಭದಲ್ಲಿ ಹಳೆ ಮೌಲ್ಯಗಳನ್ನು ನಿರಾಕರಿಸಿ, ವಿಧಿವಾದವನ್ನು ಧಿಕ್ಕರಿಸಿ, ಹೊಸ ಗಾಳಿಗೆ ಸ್ಪಂದಿಸಿ ಸ್ವತಂತ್ರ ಬದುಕನ್ನು ಕಟ್ಟಿಕೊಂಡ ಪ್ರಗತಿಪರ ಮಹಿಳೆಯರಾಗಿದ್ದಾರೆ. ಮಹಿಳೆಯರ ಉದ್ದೇಶ, ಗುರಿಗಳು ಬಹುಮಟ್ಟಿಗೆ ಕಾರ್ಯಗತವಾಗುವುದು ಅವರಿಗೆ ಶಿಕ್ಷಣ, ಆರ್ಥಿಕ ಸ್ವಾತಂತ್ರ್ಯ ಮತ್ತು ಲೈಂಗಿಕ ಸ್ವಾತಂತ್ರ್ಯವಿದ್ದಾಗ, ಮತ್ತು ಅವುಗಳನ್ನು ಉಪಯೋಗಿಸುವ ಸಾಂದರ್ಭಿಕ ಜಾಣ್ಮೆ ಅವರಲ್ಲಿರಬೇಕು ಎಂಬ ನಿಲುವಿಗೆ ಅಧ್ಯಯನ ಬರುತ್ತದೆ.

ಮಹಿಳೆಯರು ಹೊಸನೆಲೆಯನ್ನು ಆಯ್ಕೆ ಮಾಡಿಕೊಳ್ಳುವಾಗ ಗ್ರಹಿಸುವ ಅಂಶಗಳನ್ನು ಪ್ರಸ್ತುತ ಕಥನ ಸಾಹಿತ್ಯ ಹೀಗೆ ತೆರೆದಿಟ್ಟಿದೆ. ಕೂಲಿ, ವೃತ್ತಿ, ಸಾಮಾಜಿಕ ರಕ್ಷಣೆ, ಆರ್ಥಿಕ ಭದ್ರತೆ, ಪುರುಷ(ಸ್ತ್ರೀ ದೇಹ ಪುರುಷ ಮನಸ್ಸಿನ ಮಹಿಳೆಯೂ)ರಿಂದಾಗುವ ದೈಹಿಕ, ಲೈಂಗಿಕ ದೌರ್ಜನ್ಯಗಳಿಂದ ರಕ್ಷಣೆ, ಆರ್ಥಿಕ ಭದ್ರತೆ, ಸಾಮಾಜಿಕ ಆಶ್ರಯ, ಕೌಟುಂಬಿಕ ಸಂರಕ್ಷಣೆಯ ಪರಿಸರ ಮುಂತಾದವುಗಳು ಅವರ ಆಯ್ಕೆಯ ಮೇಲೆ ಪ್ರಭಾವ ಬೀರುವ ಅಂಶಗಳಾಗಿವೆ.

## ೬. ಮಕ್ಕಳ ಗ್ರಹಿಕೆ ಮತ್ತು ಆಯ್ಕೆ

### ಅ. ಮೇಲ್ವರ್ಗದ ನೆಲೆಯಿಂದ

ಕುಟುಂಬದ ಕಿರಿಯ ಸದಸ್ಯರಾದ ಮಕ್ಕಳು ತಮ್ಮ ಹಿರಿಯರು ತೆಗೆದುಕೊಳ್ಳುವ ಆಯ್ಕೆಯ ನಿರ್ಧಾರಕ್ಕೆ ಬದ್ಧರಾಗಿರುತ್ತಾರೆ ಮತ್ತು ಹಿರಿಯರ ಆದೇಶ, ನಿರ್ದೇಶನಗಳನ್ನು ಅನುಸರಿಸುತ್ತಾರೆ. ಮೇಲ್ವರ್ಗದ ಕುಟುಂಬಗಳಲ್ಲಿ ಮಕ್ಕಳ ಗ್ರಾಮ/ನಗರ ಆಯ್ಕೆ ಮತ್ತು ನಿರಾಕರಣೆಗಳು ಮಕ್ಕಳ ನಿರ್ಧಾರಗಳಾಗಿ ಹೊರಹೊಮ್ಮುವುದು ಮತ್ತು ಕುಟುಂಬವನ್ನು ಪ್ರಭಾವಿಸುವುದು ಕಡಿಮೆ. ಇಂತಹ ಸಂದರ್ಭಗಳಲ್ಲಿ ಹಿರಿಯರ ಆಯ್ಕೆ ಮಕ್ಕಳ ಆಯ್ಕೆಯಾಗಿ ಅವರ ಭವಿಷ್ಯವನ್ನು ರೂಪಿಸುವ ಮಾರ್ಗವಾಗುತ್ತದೆ. ಕೆಲವು ಮಕ್ಕಳು ಆಯ್ಕೆಯಂತಹ ನಿರ್ಧಾರವನ್ನು ವೈಯಕ್ತಿಕ ನೆಲೆಯಲ್ಲಿ ತೆಗೆದುಕೊಂಡು, ಗ್ರಾಮ/ನಗರ ಆಯ್ಕೆಯನ್ನು ಮಾಡಿಕೊಳ್ಳುವುದು ಕಂಡುಬರುತ್ತದೆ. ಬಹಳಷ್ಟು ಸಂದರ್ಭಗಳಲ್ಲಿ ಆಯ್ಕೆಯ ನಿರ್ಧಾರವನ್ನು ತೆಗೆದುಕೊಳ್ಳುವಷ್ಟು ಮಕ್ಕಳು ಪ್ರಬುದ್ಧರಾಗಿರುವುದಿಲ್ಲ. ಆದ್ದರಿಂದ ಹಿರಿಯರ ಆಯ್ಕೆಯನ್ನು ಮಕ್ಕಳು ಹೇಗೆ ಗ್ರಹಿಸುತ್ತಾರೆ ಮತ್ತು ವೈಯಕ್ತಿಕವಾಗಿ, ಕೌಟುಂಬಿಕ ನೆಲೆಗಳ ಹಿನ್ನೆಲೆಯಲ್ಲಿ ಹೇಗೆ ಪ್ರತಿಕ್ರಿಯಿಸುತ್ತಾರೆ ಎಂಬುದನ್ನು ಕಥನ ಸಾಹಿತ್ಯದಲ್ಲಿ ಅರಸಬಹುದು.

ಕುಂದರನಾಡ ಪಾಟೀಲ ಅವರ 'ಉಲ್ಲಂಘನೆ' ಕಾದಂಬರಿಯಲ್ಲಿ ಚನಬಸುವನ್ನು ಶಿಕ್ಷಣಕ್ಕಾಗಿ ಬೆಳಗಾವಿ ನಗರಕ್ಕೆ ಕಳಿಸಲು ದಾನಪ್ಪಗೌಡ (ತಂದೆ), ನಿಂಗವ್ವಗೌಡತಿ (ತಾಯಿ) ನಿರ್ಧರಿಸುತ್ತಾರೆ. ಚನಬಸುವನ್ನು ಶಾಲೆಗೆ ಕಳಿಸಿ, ಕಿರಿಯ ಮಕ್ಕಳನ್ನು ಗೌಡಿಕೆಯ ಕೆಲಸಕ್ಕೆ ಹಾಕುವುದೆಂದು ತೀರ್ಮಾನಿಸುವ ಪಾಲಕರ ಆಯ್ಕೆಯು ಚನಬಸುವಿನ ಆಯ್ಕೆಯಾಗಿದೆ. ಮುಗ್ಧ ಬಾಲಕ ಚನಬಸು ಯಾವ ಪ್ರತಿಕ್ರಿಯೆ ತೋರಿಸದೆ, ಅಪ್ಪನ ಹಿಂದೆ ಹಿಂದೆ ಬೆಳಗಾವಿಯ ಬಸ್ಸು ಹತ್ತುತ್ತಾನೆ. ಬೆಳಗಾವಿಯಲ್ಲಿ ಸಂಬಂಧಿ ಫಕೀರಪ್ಪನ ಬೇಟಿ, ತವನಪ್ಪನಲ್ಲಿ ಬಾಡಿಗೆ ಕೋಣೆ ಮಾಡುವುದು, ಹೋಟೇಲಿಗೆ ಹೋಗಿ ತಿಂಡಿ ತಿನ್ನುವುದು ಇತ್ಯಾದಿ ಕಾರ್ಯಗಳಲ್ಲಿ ಯಾವ ಪ್ರತಿಕ್ರಿಯೆಗಳನ್ನೂ ತೋರಿಸುವುದಿಲ್ಲ. ಪರಂಜಪೆ ಹೋಟೆಲಿನಲ್ಲಿ ಸಿರಾ ತಿನ್ನಲು ಕೂತಾಗ, 'ಬೆಳಗಾವಿಗೆ ಬಂದ್ರ ಒಮ್ಮೆ ಬೇಟಿ ಕೊಡದ ಹೋಗುದಕ್ಕ ಮನಸ್ಸ ಆಗುದಿಲ್ಲ'[೧೦] ಎಂದ ದಾನಪ್ಪಗೌಡರ ಮಾತಿಗೆ ಚನಬಸು ನಗುತ್ತಾನೆ. ತನ್ನ ಶಿಕ್ಷಣ, ನಗರ ಆಯ್ಕೆ ಕುರಿತು ಒಂದೂ ಮಾತಾಡದ ಚನಬಸು ತಿಂಡಿಯ ಪ್ರಶ್ನೆ ಬಂದಾಗ ಪ್ರತಿಕ್ರಿಯೆ ನೀಡುತ್ತಾನೆ. ಮಕ್ಕಳು ತಮ್ಮ ಆಸಕ್ತಿವಲಯದ ಸಂಗತಿಗಳಿಗೆ ಮಾತ್ರ ಮಹತ್ವ ಕೊಡುತ್ತಾರೆ ಮತ್ತು ತಮ್ಮ ಭವಿಷ್ಯದ ಹೊಣೆಯನ್ನು ಅಪ್ಪ, ಅಮ್ಮರಿಗೆ ಬಿಟ್ಟು ಬಿಡುವುದು ಕಂಡುಬರುತ್ತದೆ. ಕುತೂಹಲವೇ ಮೂರ್ತಿವೆತ್ತಂತೆ ಇದ್ದ ಮುಗ್ಧ ಚನಬಸುನ ನಗರ ಆಯ್ಕೆ ಅವನ ಪಾಲಕರ ನಿರ್ಧಾರದ ನೆಲೆಯಲ್ಲಿ ನಡೆಯುತ್ತದೆ.

ತಾಯಿ ಮತ್ತು ಸೋದರಮಾವರ ಆಯ್ಕೆಯಂತೆ ಗ್ರಾಮ ನಿರಾಕರಿಸಿ, ನಗರ ಆಯ್ಕೆ ಮಾಡಿಕೊಂಡು ಓದಲು ಮಾವನ ಮನೆಗೆ ಬಂದ ಕುಸುಮಾಕರ ದೇವರಗೆಣ್ಣೂರ ಅವರ 'ನಿರಿಂದ್ರಿಯ' ಕಾದಂಬರಿಯ ಕಲ್ಲಪ್ಪ ರೊಳ್ಳಿ ಮುಗ್ಧ, ಅಂತರ್ಮುಖಿ ಬಾಲಕ. ಇವನಿಗೆ ತನ್ನ ಪಾಲಕರ ನಿರ್ಧಾರ ಕೇಳಿ ಅರ್ಧ ಸಂತೋಷ, ಅರ್ಧ ದುಃಖವಾಗುತ್ತದೆ. ತಂದೆಯ ನಿರಂಕುಶ ಆಡಳಿತದಿಂದ ತಪ್ಪಿಸಿಕೊಂಡಿದ್ದು ಸಂತೋಷ ತಂದರೆ, ತಾಯಿಯಿಂದ ದೂರವಾದದ್ದು ಅಳು ತರುತ್ತದೆ. ಈ ಅಳುವಿನಲ್ಲೂ ತಾಯಿ, 'ಯಾರಿಗೂ ತೋರಿಸಬೇಡ ಇದನ್ನು ಬಚ್ಚಿಟ್ಟುಕೋ, ಜೋಪಾನವಾಗಿಟ್ಟುಕೋ'[೧೧] ಎಂದು ಕೊಟ್ಟ ಎರಡು ರೂಪಾಯಿ ನೋಟು ಅವನಿಗೆ ಆರ್ಥಿಕ ಸ್ವಾತಂತ್ರ್ಯವೊದಗಿದ ಸಂತೋಷ ಕೊಡುತ್ತದೆ. ಅಮ್ಮನ ಆಯ್ಕೆಯ ಸಾರ್ಥಕತೆ ಎರಡು ರೂಪಾಯಿಯಲ್ಲಿದೆ ಎಂಬ ಅಂತರ್ಮುಖಿ ಭಾವ, ನಿರ್ಭಾವುಕತೆ, ನಿಸ್ಸಹಾಯಕತೆ ಬಾಲಕನಲ್ಲಿದೆ. ಇಂತಹ ಭಾವುಕತೆ, ನಿಸ್ಸಹಾಯಕತೆಗಳಾವುವೂ ಮೆಟ್ರಿಕ್ ಮುಗಿಸಿ ಕಾಲೇಜಿಗೆ ಹೊರಟುನಿಂತ (ಹದಿಹರೆಯದ) ಮಕ್ಕಳಲ್ಲಿ ಕಾಣಿಸುವುದಿಲ್ಲ ಎಂಬುದು ಕಥನ ಸಾಹಿತ್ಯದಲ್ಲಿ ಗಮನಾರ್ಹ ಅಂಶವಾಗಿದೆ. ವ್ಯಾಸರಾವ್ ನಿಂಜೂರ್ ಅವರ 'ಉಸಿರು' ಕಾದಂಬರಿಯಲ್ಲಿ ಕೇಶವ, ರವಿಯರಲ್ಲಿ ಮೆಟ್ರಿಕ್ಯುಲೇಶನ್ ಮುಗಿಸುವ ಹೊತ್ತಿಗೆ ಪ್ರಶ್ನಿಸುವ ಸ್ವಭಾವ ಮೈಗೂಡಿಕೊಂಡಿರುವುದು ಕಂಡುಬರುತ್ತದೆ. ಅನಂತಯ್ಯನವರು ಬುದ್ಧಿವಂತ ಮಗ ಕೇಶವನನ್ನು ಗೇಣಿ ಜಮೀನು ಮಾರಿ, ವೈದ್ಯಕೀಯ ಕೋರ್ಸಿಗೆ (ಬೆಂಗಳೂರಿಗೆ) ಕಳಿಸಲು ನಿರ್ಧರಿಸಿದಾಗ ಕೇಶವ, 'ನನಗಾಗಿ ಪ್ರಾಕೃತದಿಂದ ಬಂದ ಭೂಮಿ ವಿಕ್ರಯ ಆಗುವುದು ಬೇಡ ಅಪ್ಪಯ್ಯ'[೧೨] ಎಂದು ಸಣ್ಣಗೆ ವಿರೋಧಿಸಿ (ನಿರಾಕರಿಸಿ), ಬಿ.ಎಸ್ಸಿ. ಪದವಿ ಮಾಡಿಯೂ ಮುಂದೆ

ಬರಬಹುದು ಎಂದು ವಾದಿಸುತ್ತಾನೆ. ರವಿ, ತನಗೆ ಮಾರ್ಕ್ಸ್ ಇಲ್ಲ ಇಂಜನಿಯರಿಂಗ್ ಕೋರ್ಸ್‌ಗೆ ಸೀಟು ಸಿಕ್ಕುವುದಿಲ್ಲ ಎಂದು ವಾದ ಮಂಡಿಸುತ್ತಾನೆ. ತನಗಿಷ್ಟವಿಲ್ಲದ ಇಂಜನಿಯರಿಂಗ್ ಓದು, ತನ್ನ ಆಸಕ್ತಿ ವಿಷಯ, ಅಪ್ಪನ ಮಹತ್ವಾಕಾಂಕ್ಷೆ ಕುರಿತು ಕೇಶವನ ಎದುರಿಗೆ ಚರ್ಚಿಸುವ ರವಿ ಅಪ್ಪನಿದಿರಿಗೆ ಪ್ರತಿಭಟಿಸದೇ ಅಪ್ಪನ ಆಯ್ಕೆಗೆ ತನ್ನ ಆಸಕ್ತಿಯನ್ನು ಬಲಿ ಕೊಡುತ್ತಾನೆ. ಪ್ರತಿಭಟನೆಯಿಲ್ಲದ ಇವರ ವಾದಗಳು ತಂದೆಯರ ಮುಂದೆ ತಣ್ಣಗಾಗಿ, ಪಾಲಕರ ಆಯ್ಕೆಯನ್ನು ಸ್ವೀಕರಿಸುತ್ತಾರೆ. ಸಾಮಾನ್ಯವಾಗಿ ಆರ್ಥಿಕಬಲ, ಜಾತಿಬಲ ಹೊಂದಿದ ಮೇಲ್ವರ್ಗದ ಕುಟುಂಬಗಳಲ್ಲಿ ಕಾಣಿಸುವ ಮಕ್ಕಳ ಮೇಲಿನ ಪಾಲಕರ ನಿಯಂತ್ರಣ, ಆರ್ಥಿಕಬಲದ ಹಠ ಆಯ್ಕೆಯನ್ನು ನಿರ್ಧರಿಸಿವೆ.

ಮಕ್ಕಳು ಚಿಕ್ಕವರಿದ್ದಾಗ ಪಾಲಕರು/ಪೋಷಕರು ಅವರಿಗಾಗಿ ತೆಗೆದುಕೊಂಡ ಆಯ್ಕೆಯ ನಿರ್ಧಾರ ಅವರ ಭವಿಷ್ಯಕ್ಕೆ ಒಂದು ತಿರುವು (Turning Point) ತಂದುಕೊಡುತ್ತದೆ. ಶಿವರುದ್ರ ಕಲ್ಲೋಳಿಕರ ಅವರ 'ಹೊಲಗೇರಿಯ ರಾಜಕುಮಾರ' ಕಾದಂಬರಿಯಲ್ಲಿ, ಕುರುಂದವಾಡ ಸಂಸ್ಥಾನದ ಸಲಹೆಗಾರ ನಾನಾಸಾಹೇಬರ ಒಂದು ಆಯ್ಕೆಯ ನಿರ್ಧಾರ, ರಾಜಕುಮಾರ(ಪುಟ್ಟ ಮಗು ಮಾದೇವ)ನ ಭವಿಷ್ಯದ ಚಿತ್ರಣವನ್ನೇ ಬದಲಾಯಿಸುತ್ತದೆ. ಚಳಿಯಲ್ಲಿ ನಡುಗುತ್ತ ಕಂಬಳಿಯಲ್ಲಿ ಸುತ್ತಿ ಎದೆಗೆ ಅವುಚಿಕೊಂಡಿದ್ದ ಕೂಸಿನ ಜಾತಿ, ಭಾಷೆ, ಸಂಸ್ಕೃತಿ, ಸಾಮಾಜಿಕ ಸಂಬಂಧಗಳನ್ನು ಬದಲಾಯಿಸಿಬಿಟ್ಟ ಆಯ್ಕೆಯ ಕುರಿತು ಮಗುವಿನ ಚಿಂತನೆ, ಗ್ರಹಿಕೆಗಳು ಕಂಡುಬರುವುದು ಹೇಗೆ ಸಾಧ್ಯ? ಜಯಂತ ಕಾಯ್ಕಿಣಿ ಅವರ 'ಭಾಮಿನಿ ಸಪ್ತಪದಿ' ಕಥೆಯಲ್ಲಿ ಭಾಮಿನಿಯ ವೈವಾಹಿಕ ಬದುಕಿನಲ್ಲಿ ಬಿರುಕುಂಟಾಗಿ, ಅವಳು ಡಿಂಕಿ(ಸಾಕು ಹೆಣ್ಣುಮಗು)ಯೊಂದಿಗೆ ಅಹಮದಾಬಾದ ನಿರಾಕರಿಸಿ ಗೋಕರ್ಣ(ಗ್ರಾಮ)ಕ್ಕೆ ಬಂದಾಗ, ದೊಡ್ಡ ದೊಡ್ಡ ಕಿವಿಯ, ಪಿಳಿಪಿಳಿ ಕಣ್ಣು ಬಿಟ್ಟುಕೊಂಡು ನೋಡುವ ಡಿಂಕಿಯ ಮುಂದಿನ ಭವಿಷ್ಯ ಬೇರೊಂದು ಮಾರ್ಗವನ್ನು ಕಂಡುಕೊಳ್ಳುತ್ತದೆ. ಇಪ್ಪತ್ತೈದು ವರ್ಷಗಳ ಹಿಂದೆ ಭಾಮಿನಿ ಅಪ್ಪನೊಂದಿಗೆ ಅಹಮದಾಬಾದಿಗೆ ಹೋದಾಗ ಅವಳದು ಇದೇ ರೀತಿಯ ಸ್ಥಿತಿಯಾಗಿತ್ತು. ಅಪ್ಪನ ಆಯ್ಕೆ ಭಾಮಿನಿಯ ಜೀವನದ ದಿಕ್ಕನ್ನು ಬದಲಿಸಿತ್ತು. 'ಡಿಂಕಿಯ ಸುಟ್ಟಗಾಯದ, ಕರುಳು ಹಿಂಡುವ ನೋವಿಗಷ್ಟೆ ಬಹುಶಃ ಭಾಮಿನಿಯನ್ನು ಮರಳಿ ಊರಿನ ನಾಗರಿಕರೆಡೆಗೆ ತಳ್ಳುವ ಶಕ್ತಿ ಇತ್ತು'' ಕಥೆಯ ನಿರೂಪಕನ ಮಾತು, ಡಿಂಕಿಗೆ ನೋವು ಅನುಭವಿಸುವ ಸ್ಥಿತಿ ಮಾತ್ರ ಇತ್ತು ಆದರೆ ಆಯ್ಕೆಯ ಸ್ಥಿತಿ ಇರಲಿಲ್ಲ ಎಂಬ ನಿಲುವು ಆಗಿದ್ದು ಅಧ್ಯಯನದ ನಿಲುವೂ ಆಗಿದೆ. ಕೋರಗಲ್ ವಿರುಪಾಕ್ಷಪ್ಪ ಅವರ 'ಕಥೆ ಅಂದ್ರೆ ಕಥೆ ಅಲ್ಲ' ಕಥೆಯ ಪಾರ್ವತೆವ್ವ ಕುಡಿದು ಬಂದು ಹೊಡೆಯುವ ಗಂಡನನ್ನು ನಿರಾಕರಿಸಿ ಗಿರಿಯಪ್ಪನೊಂದಿಗೆ ಕೂಡಿಕೆ ಮಾಡಿಕೊಂಡು ಗ್ರಾಮವನ್ನು ಆಯ್ಕೆ ಮಾಡಿಕೊಳ್ಳದಿದ್ದರೆ, ಅವಳ ಮಗ ರಂಗಪ್ಪ ಓದಿ ಇಂಜನಿಯರ್ ಆಗುವುದು ಸಾಧ್ಯವಿತ್ತೆ ಎಂಬ ಪ್ರಶ್ನೆ ಕಾಡುತ್ತದೆ. ಪಾಲಕರ ಆಯ್ಕೆಗಳು ಸೂಕ್ತವಾಗಿದ್ದರೆ ಅವು ಉತ್ತಮ ಫಲಿತಾಂಶವನ್ನು ತರುತ್ತವೆಂದು ಪ್ರಸ್ತುತ ಕಥನ ಸಾಹಿತ್ಯದ ಅನೇಕ ಸಂದರ್ಭಗಳು ನಿರೂಪಿಸುತ್ತವೆ. ಪಾಲಕರ ಒಳ್ಳೆಯ ಗುರಿ ಹೊಂದಿದ ಆಯ್ಕೆಯ ಫಲಿತಾಂಶಗಳು ಋಣಾತ್ಮಕ ಪರಿಣಾಮ ಬೀರುವುದನ್ನು ರಾಘವೇಂದ್ರ ಪಾಟೀಲ ಅವರ 'ಮಾಯಿಯ ಮುಖಗಳು' ಕಥೆಯಲ್ಲಿ ಕಾಣುತ್ತೇವೆ.

**ಬ. ಗ್ರಾಮ/ನಗರ ಆಯ್ಕೆ : ಕೆಳ, ದಲಿತ ವರ್ಗದ ಮಕ್ಕಳ ನೆಲೆಯಿಂದ**

ಗ್ರಾಮ/ನಗರ ಆಯ್ಕೆಯ ಸಂದರ್ಭದಲ್ಲಿ ಕೆಳವರ್ಗದ ಮಕ್ಕಳ ಗ್ರಹಿಕೆಗಳು, ಮೇಲ್ವರ್ಗದ ಮಕ್ಕಳ ಗ್ರಹಿಕೆಗಳಿಗಿಂತ ವಿಭಿನ್ನವಾಗಿರುವುದು ಕಂಡುಬರುತ್ತದೆ. ಈ ಮಕ್ಕಳ ಆಯ್ಕೆಯಲ್ಲಿ ಹಠ, ಮುಂಗೋಪ ಗುಣಗಳು ಮತ್ತು ಕೌಟುಂಬಿಕ ನೆಲೆಯಲ್ಲಿ ದ್ವೇಷ, ತಿರಸ್ಕಾರ ಭಾವನೆಗಳನ್ನು ಹೊಂದಿರುವುದು ಪ್ರಸ್ತುತ ಕಥನ ಸಾಹಿತ್ಯದಲ್ಲಿ ದಾಖಲಾಗಿದೆ. ಇಂತಹ ಗುಣಗಳು ಆಯ್ಕೆಯ ಮೇಲೆ ವ್ಯತಿರಿಕ್ತ ಪರಿಣಾಮ ಬೀರಿರುವುದೂ ಉಂಟು. ಮಕ್ಕಳ ಸ್ವಭಾವಜನ್ಯ ಕುತೂಹಲ, ಮುಗ್ಧತೆಗಳ ಜೊತೆ ಅನನುಭವ, ಬಡತನ ಹಾಗೂ ಅನಾವೃಷ್ಟಿಯಂತಹ ಪ್ರಾಕೃತಿಕ ಅಂಶಗಳು ಸೇರಿ ಅವರ ಗಾಮ್ರ/ನಗರ ಆಯ್ಕೆಯನ್ನು ಪ್ರಭಾವಿಸುತ್ತವೆ. ಕಥನ ಸಾಹಿತ್ಯ ಇವುಗಳ ವಿವರಗಳನ್ನು ಅತ್ಯಂತ ಸಂಕೀರ್ಣವಾಗಿ ಹಿಡಿದಿಟ್ಟಿದೆ.

ತಂದೆಯಿಂದ ನಿಷ್ಪ್ರಯೋಜಕ, ತಲೆಮರೆಸಿಕೊಂಡು ಹೋಗು, ಎಂದು ಬೈಸಿಕೊಳ್ಳುತ್ತ, ಕುಟುಂಬದ ಸದಸ್ಯರ ಅನಾದರ, ಕೋಪಕ್ಕೆ ಒಳಗಾಗಿದ್ದರೂ ರೋಹಿದಾಸ ನಾಯಕ ಅವರ 'ದೂರ' ಕತೆಯ ವಸಂತ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆಯಾಗುತ್ತಾನೆ. ಬೀಡಿ ಕಟ್ಟುವ ವೃತ್ತಿಯ ಬಡ ಕುಟುಂಬ, ತಂದೆಯ ಹೀಯಾಳಿಕೆ, ಮೂದಲಿಕೆಗಳು ತಾನೊಬ್ಬ ಅಸಮರ್ಥ ಎಂಬ ನಿಲುವಿಗೆ ವಸಂತ ಬರಲು

ಕಾರಣವಾಗುತ್ತವೆ. ಬಾಲ್ಯ ಸಹಜ ಬಯಕೆಗಳು ಮತ್ತು ಕನಸುಗಳು ಬಡತನ, ಅಪ್ಪ ಅಮ್ಮಂದಿರ ನಿರ್ಲಕ್ಷದಂತಹ ಸನ್ನಿವೇಶಗಳ ಒತ್ತಡದಿಂದಾಗಿ ಹತ್ತಿಕ್ಕಲ್ಪಡುವುದರಿಂದ ಹುಟ್ಟಿಕೊಳ್ಳುವ ಕರ್ಷಣ(Tension)ದ ತೀವ್ರತೆ ಅವನಲ್ಲಿ ಬೆಳೆಯುತ್ತದೆ. ತಂದೆ ತಾಯಿ ನನ್ನನ್ನು ಪ್ರೀತಿಸುತ್ತಿಲ್ಲ ಎಂಬ ಕೀಳರಿಮೆಯನ್ನು ಬೆಳೆಸಿಕೊಂಡ ವಸಂತ ಈ ಊರಲ್ಲಿ ಇರುವುದು ಬೇಡವೆಂದು ಮನೆಯಿಂದ ಓಡಿಹೋಗುತ್ತಾನೆ. ಬಸ್ಸಿನಲ್ಲಿ ಪ್ರಯಾಣಿಸುವಾಗ ಎಲ್ಲಿಗೆ ಹೋಗಬೇಕು ಎಂಬುದರ ಕುರಿತು ಅವನಲ್ಲಿ ಸ್ಪಷ್ಟತೆ ಇರುವುದಿಲ್ಲ.

> 'ಹುಬ್ಬಳ್ಳಿ, ಬೆಂಗಳೂರಾದರೆ ಗುರುತಿನವರಿದ್ದಾರೆ, ಬೇಡ. ಮುಂಬಯಿಗೆ ಹೋದರೆ ಬಹಳ ರಷ್ ಅಂತೆ. ಹೈದರಾಬಾದಿಗೆ ಹೋದರೆ ಹೇಗೆ? ಅಲ್ಲಿ ವಿಪರೀತ ಬಿಸಿಲು, ಸೆಕೆ ಅಂತೆ. ಮದ್ರಾಸ ಆದ್ರೆ ಆಗಬಹುದು, ಸೆಕೆ ಇದ್ರೂ ಪರಿಚಯದವರು ಇಲ್ಲ. ನಾನು ಸಿನೆಮಾ ನಟನೂ ಆಗಬಹುದು. ನಂತರ 'ನಿಷ್ಪ್ರಯೋಜಕ' ಎಂದು ಕರೆಯುವ ಅಪ್ಪನಿಗೆ ತನ್ನ ತಪ್ಪು ತಿಳಿಯುತ್ತದೆ.[೨೪]

ಇಂತಹ ಅನಿಸಿಕೆಗಳು ಅವರ ಮುಗ್ಧತೆ, ಅನನುಭವ, ನಗರ ಆಕರ್ಷಣೆಯನ್ನು ಬಿಚ್ಚಿಡುತ್ತವೆ. ಜೊತೆಗೆ ಪರಿಚಿತ ವಾತಾವರಣದಿಂದ ದೂರ ಹೋಗುವ ಹಂಬಲವೂ ಕಾರಣವಾಗಿದೆ. ಇಂತಹ ಸಂದರ್ಭಗಳಲ್ಲಿ ಬಾಲಕ/ಬಾಲಕಿಯರು ನಗರವನ್ನೇ ಯಾಕೆ ಆಯ್ಕೆ ಮಾಡಿಕೊಳ್ಳುತ್ತಾರೆ, ಪಕ್ಕದ ಹಳ್ಳಿಯನ್ನು ಏಕೆ ಆಯ್ಕೆ ಮಾಡಿಕೊಳ್ಳುವುದಿಲ್ಲ ಎಂಬುದಕ್ಕೆ ಅವರ ದ್ವಂದ್ವಾತ್ಮಕ ಮನೋಸ್ಥಿತಿ ಕಾರಣವಾಗಿದೆ. ಗ್ರಾಮದಲ್ಲಿರುವ ಅವನ ಕುಟುಂಬ, ಕುಟುಂಬ ಸದಸ್ಯರನ್ನು ನಿರಾಕರಿಸಿ ಹೊರಟ ಅವರ ಗ್ರಹಿಕೆಯಲ್ಲಿ ಇನ್ನೊಂದು ಗ್ರಾಮವೂ ನಿರಾಕರಣೆಗೆ ಯೋಗ್ಯ ಎಂಬ ಅನಿಸಿಕೆ, ಗ್ರಾಮಗಳ ಕುರಿತು ಅಸಡ್ಡೆಯ ಭಾವನೆಗಳನ್ನು ಹುಟ್ಟುಹಾಕುತ್ತವೆ. ಜೊತೆಗೆ ನಗರ ಕುರಿತ ಅನನುಭವ, ಆಕರ್ಷಣೆಗಳೂ ಕಾರಣವಾಗಿವೆ. ನಾ. ಡಿಸೋಜ ಅವರ 'ಪ್ರೀತಿಯೊಂದೇ ಸಾಲದೆ?' ಕಾದಂಬರಿಯ ಮನುವೇಲು ಸಹ ವಸಂತನಂತೆ ಗುರಿಯಿಲ್ಲದ ಆಯ್ಕೆ ಮಾಡಿಕೊಂಡ ಇನ್ನೊಬ್ಬ ಬಾಲಕನಾಗಿದ್ದಾನೆ. ಚಿಕ್ಕಮ್ಮನ ವಿವಾಹೇತರ ಸಂಬಂಧಕ್ಕೆ ಗ್ರಾಮ ಸಮಾಜದಲ್ಲಿ, ಚರ್ಚಿನಲ್ಲಿ ಅವಮಾನಿತನಾಗಿ ಮೇಲ್‌ಪಾಡಿ (ಗ್ರಾಮ) ನಿರಾಕರಿಸಿ ಬಸ್ಸು ಹತ್ತಿ ಮಂಗಳೂರು, ನಂತರ ಶಿವಮೊಗ್ಗಕ್ಕೆ ಬಂದಾಗ ಅವನಿಗೆ ಬರಬಾರದಿತ್ತು ಅನ್ನಿಸುತ್ತದೆ. ವಿವಾಹೇತರ ಸಂಬಂಧಗಳು ಮಕ್ಕಳ ಮನಸ್ಸಿನ ಮೇಲೆ ಬೀರುವ ದುಷ್ಪರಿಣಾಮಗಳನ್ನು ಗಮನಿಸಿದಾಗ ಅವರು ಕುಟುಂಬ ವಿರೋಧಿ ನೆಲೆಯಲ್ಲಿ ಚಿಂತಿಸುವುದು ಕಂಡುಬರುತ್ತದೆ. ದುಮಿಂಗ, ಚಿಕ್ಕಮ್ಮ, ತನ್ನ ಜಾತಿ ಮತ್ತು ಪದ್ರಾಬ ಎಲ್ಲರ ಮೇಲೆ ಹುಟ್ಟಿದ ತಿರಸ್ಕಾರ ಈ ಆಯ್ಕೆಯನ್ನು ನಿರ್ಧರಿಸಿದರೂ ಅದಕ್ಕೆ ಸ್ಪಷ್ಟ ಗುರಿಯಿಲ್ಲದಿರುವುದು ಗೋಚರಿಸುತ್ತದೆ. ಎಮ್.ಎಚ್. ನಾಯಕ ಬಾಡ ಅವರ 'ಗೋರಿ ತೋಡಿಕೊಂಡವರು' ಕಥೆಯ ಕುಮಟೆಯ ಕಮ್ತೀರ ಹೋಟೆಲಿನಲ್ಲಿ ಕೆಲಸಕ್ಕಿದ್ದ ಅಪ್ಪು ತನ್ನ ಅಪ್ಪ, ಅಪ್ಪಂದಿರ ವಿವಾಹೇತರ ಸಂಬಂಧವನ್ನು ಕಂಡು ಬೇಸತ್ತು ಗ್ರಾಮ ನಿರಾಕರಿಸಬೇಕೆಂದು ನಿರ್ಧರಿಸುತ್ತಾನೆ. ಮುಂಬಯಿಗೆ ಹೆಣ್ಣುಮಕ್ಕಳನ್ನು ಸಾಗಿಸುತ್ತಿದ್ದ ಕೇಶವ ಹಿಂದೊಮ್ಮೆ ತನ್ನನ್ನು ಮುಂಬಯಿಗೆ ಕರೆದಿದ್ದು, ಕೈತುಂಬ ಸಂಪಾದಿಸುವ ಆಮಿಷ ಒಡ್ಡಿದ್ದು, ಇವನು ನಿರಾಕರಿಸಿದ್ದು ನೆನಪಾಗಿ, ಈಗ ಅವನೊಟ್ಟಿಗೆ ಮುಂಬಯಿಗೆ ಓಡಿಹೋಗುವ ನಿರ್ಧಾರಕ್ಕೆ ಬರುತ್ತಾನೆ. ತಾನು ನಂಬಿಕೊಂಡಿದ್ದ ಮೌಲ್ಯ ಭ್ರಮೆಯೆಂದು ಅನುಭವಸಿದ್ಧವಾದಾಗ, ತನ್ನ ಶೋಷಿತ ಸ್ಥಿತಿಯಿಂದ ಪಾರಾಗುವ ಅವಕಾಶಕ್ಕಾಗಿ ಕಾದಿದ್ದ ಅಪ್ಪು ನಗರ ಆಯ್ಕೆ ಮಾಡಿಕೊಳ್ಳುತ್ತಾನೆ.

ಒಂದು ಹೋಳಿಗೆ ಹಾಗೂ ಒಂದು ಚಮಚ ತುಪ್ಪ ತಿನ್ನುವ ಅಸೆ ಮತ್ತು ಅದರಿಂದ ಉಂಟಾದ ಅವಮಾನಗಳು ಮೂಲನೆಲೆಯ ನಿರಾಕರಣೆಗೆ ಮತ್ತು ನಿರಾಕರಣೆಯಿಂದ ಹುಟ್ಟುವ ದ್ವಂದ್ವಗಳ ಅಂಕುರಕ್ಕೆ ಕಾರಣವಾಗುವುದನ್ನು ರೇಖಾ ಕಾಖಂಡಕಿ ಅವರ 'ತ್ರಸ್ತ' ಕಾದಂಬರಿಯ ಪುರುಷೋತ್ತಮನ ನಿರಾಕರಣೆಯಿಂದ ಅರಿಯುತ್ತೇವೆ. ರಮಾಕಕ್ಕಿಯ ಮಗ ಗೋವಿಂದನು ದತ್ತೂ ಮಾಸ್ತರರ ಸಾಕುಮಗ ಪುರು(ಇವನು ಶೂದ್ರರ ಹುಡುಗ ಮತ್ತು ಪ್ರತಿಭಾವಂತ)ವಿಗೆ ತಿಂಡಿ, ಊಟದ ಆಮಿಷ ಒಡ್ಡಿ ತನ್ನ ಹೋಂವರ್ಕ್ ಮತ್ತು ಮನೆಗೆಲಸಗಳನ್ನು ಮಾಡಿಸಿಕೊಳ್ಳುತ್ತಾನೆ. ದೊಡ್ಡ ಹಬ್ಬದ ದಿನ ಹೋಂವರ್ಕ್ ಮಾಡಿಸಿಕೊಂಡು ತಾಯಿಯನ್ನು ಪುರುವಿಗೆ ಊಟಹಾಕಲು ಕೇಳಿಕೊಂಡರೆ ರಮಾಕಕ್ಕಿ ಜಾತಿ ಮೂಲದ ಬೇರನ್ನು ಹಿಡಿದೆಳೆದು ಬೈದು ಅಟ್ಟುತ್ತಾಳೆ.

> 'ಒಂದೆಳೆ ಜನಿವಾರ ಮನುಷ್ಯನ ಜಾತಿ ನಿರ್ಮಿಸುತ್ತದೆ ಎಂದ ಮೇಲೆ ಒಂದು ಜನಾಂಗದ ಗುರುತು ನಿಂತಿದ್ದು ಅವರ ಹುಟ್ಟಿನ ಮೂಲದಲ್ಲೋ? ಇಲ್ಲ, ಸಂಸ್ಕಾರದ ಪದ್ಧತಿಯಲ್ಲೊ? ಅದರೆ ತನ್ನ ಹುಟ್ಟಿನ ಮೂಲವಾದರೂ ಎಂತದ್ದು? ಅದು ಗೊತ್ತಿಲ್ಲವಲ್ಲ ತನಗೆ'[೨೫]

ತನ್ನ ಹುಟ್ಟಿನ ಮೂಲದ ದ್ವಂದ್ವದಲ್ಲಿ ಮೂರು ತಿಂಗಳು ಕಳೆದ ಪುರುಷೋತ್ತಮನು ಗೋವಿಂದನ ಸ್ವಾರ್ಥಮೂಲ, ರಮಾಕಕ್ಕಿಯ ಜಾತಿ ಮೂಲದ ಭಾವನೆಗಳಿಂದ ಹತಾಸೆಗೊಂಡು ಮೂಲನೆಲೆ ನಿರಾಕರಣೆ ಮಾಡುತ್ತಾನೆ. ಗ್ರಾಮೀಣ ಪರಿಸರದಲ್ಲಿರುವ ವರ್ಗ, ಜಾತಿ ವ್ಯವಸ್ಥೆ, ವಿವಾಹೇತರ ಸಂಬಂಧಗಳು, ಪರಿಸರದ ಕ್ರೌರ್ಯ ಮತ್ತು ಅಮಾನವೀಯತೆಗಳು ಮುಗ್ಧ ಮಕ್ಕಳನ್ನು ಅಮಾನುಷವಾಗಿ ಕರ್ಷಣೆಗೆ ಒಳಪಡಿಸುತ್ತವೆ ಮತ್ತು ಅವರಲ್ಲಿ ಸಮಾಜವಿಮುಖಿ ಭಾವನೆ ಬಿತ್ತುತ್ತವೆ. ಇದಕ್ಕೆ ಅಪ್ಪು, ಮನುವೇಲ, ಪುರು ಇವರು ಉದಾಹರಣೆಯಾಗಿದ್ದಾರೆ.

ಬಾಳಾಸಾಹೇಬ ಲೋಕಾಪುರ ಅವರ 'ಒಂದು ಸೇರು ಜ್ವಾಳ ಎರಡು ಹೊರೆ ಹುಲ್ಲು' ಕಥೆಯಲ್ಲಿ ಮಲೆವ್ವ ಬಸ್ಯಾರ ಮಕ್ಕಳು, ತಮ್ಮ ಕಾಕಾ(ಬಸ್ಯಾನ ತಮ್ಮ)ನ ಹೆಣ್ಣು ಮಕ್ಕಳು ಮುಂಬೈ ಸೇರಿ ಹಣ ಮಾಡಿ, ಹಳ್ಳಿಗೆ ಬಂದು ಕೊಡುವ ಚಾಕಲೇಟು, ತಿಂಡಿಯ ಆಸೆಗೆ ಮತ್ತು ಆಕರ್ಷಣೆಗೆ ಒಳಗಾಗುತ್ತಾರೆ. ತಮ್ಮ ಅಕ್ಕನೂ ಸಹ ಮುಂಬೈಗೆ ಹೋಗಿ ಬಂದರೆ, ತಮಗೆ ಇನ್ನೂ ಒಳ್ಳೆ ಬಟ್ಟೆ, ತಿಂಡಿ, ಚಾಕಲೇಟು ಸಿಕ್ಕಬಹುದೆಂದು ಆಸೆಪಟ್ಟು ಮಲೆವ್ವನನ್ನು, 'ಅವ್ವ ನಮ್ಮ ಅಕ್ಕ ಚಂದ್ರಿ ಯಾವಾಗ ಮುಂಬಯಿಗೆ ಹೋಕ್ಯಾಳು?' ಎಂದು ಕೇಳಿ ಏಟು ತಿನ್ನುತ್ತಾರೆ. ಅಕ್ಕಂದಿರು ಮುಂಬೈನಲ್ಲಿ ಏನು ವೃತ್ತಿ ಮಾಡುತ್ತಾರೆ ಎಂಬ ಅರಿವಿಲ್ಲದ ಪುಟ್ಟ ಮಕ್ಕಳ ಗ್ರಹಿಕೆಯಲ್ಲಿ ನಗರ ಆಯ್ಕೆ ಎಂದರೆ ತಿಂಡಿ, ಚಾಕಲೇಟು, ಬಣ್ಣ ಬಣ್ಣದ ಬಟ್ಟೆ, ಅತ್ತರು ಮಾತ್ರ ಆಗಿದೆ. ಏಟು ತಿಂದ ಮೇಲೂ ನಗರದ ಆಕರ್ಷಣೆ ಅವರ ಮನದಲ್ಲಿ ಕಡಿಮೆಯಾಗುವುದಿಲ್ಲ. ಮಕ್ಕಳಿಗೆ ಮುಂಬಯಿಗೆ ಹೋಗುವುದೆಂದರೆ, ಆ ಮಾಯಾ ನಗರಿಯಲ್ಲಿ ತಿಂಡಿ, ಚಾಕಲೇಟು, ಬಣ್ಣ ಬಣ್ಣದ ಬಟ್ಟೆ, ಅತ್ತರು, ಸುಗಂಧಗಳನ್ನು ತರಲು ಎಂಬ ಗ್ರಹಿಕೆ ಮಾತ್ರ ಪೂರ್ವಗ್ರಹಪೀಡಿತವಾದದ್ದಾಗಿದೆ. ಕತೆ ಕಾದಂಬರಿಗಳಲ್ಲಿ ಕಾಣಿಸುವ ದಲಿತರ ವೃತ್ತಿ ಮತ್ತು ಆರ್ಥಿಕತೆಯ ಸ್ವರೂಪಗಳು ಹೆಚ್ಚು ವಿಭಿನ್ನ, ವಿಶಿಷ್ಟವಾಗಿವೆ. ಇವರಿಗೆ ಕುಲವೃತ್ತಿ, ಜೀತ ಅಥವಾ ಕೂಲಿ ಬಿಟ್ಟರೆ ಬೇರೆ ವೃತ್ತಿ ಇರಲಿಲ್ಲ ಎಂಬ ವಿಷಯವನ್ನು ಮತ್ತು ಗ್ರಾಮ ನಿರಾಕರಿಸುವ ದಲಿತ ಮಹಿಳೆಯರು ನಗರದಲ್ಲಿ ವೇಶ್ಯಾವೃತ್ತಿಯನ್ನು ಆಯ್ಕೆ ಮಾಡಿಕೊಳ್ಳುವುದನ್ನು ಪ್ರಸ್ತುತ ಕಥನ ಸಾಹಿತ್ಯ ಧೃಡಪಡಿಸುತ್ತದೆ. ಕತೆಯಲ್ಲಿ ದಲಿತ ಹೆಣ್ಣು ಅಂದರೆ ಸುಲಭವಾಗಿ ವೇಶ್ಯೆಯನ್ನಾಗಿ ಮಾಡಬಹುದು ಎಂಬ ಪುರುಷರ ಊಹೆಯನ್ನು ಹುಸಿಮಾಡುವ ದಲಿತ ಮಹಿಳೆ ಮಲೆವ್ವ ಮಧ್ಯವರ್ತಿಯ ಹಣದ ಆಮಿಷ ತಿರಸ್ಕರಿಸಿ ಸ್ವಾಭಿಮಾನ ಮತ್ತು ನೈತಿಕಪ್ರಜ್ಞೆ ಮೆರೆಯುತ್ತಾಳೆ. ಲೋಹಿತ ನಾಯ್ಕರ ಅವರ 'ಸಿರ್ದಾರ' ಕತೆಯಲ್ಲಿ ದಲಿತ ವರ್ಗದಿಂದ ಬಂದ ಕುಸುಮ ಎಂಬ ಬಾಲಕಿ ತಾಯಿಯಿಂದಲೇ ಜೀತಕ್ಕೆ ಕಳಿಸಲ್ಪಡುತ್ತಾಳೆ. 'ಕುಸುಮ ಹೊರಡುವಾಗ ಅವ್ವ ಮತ್ತು ನಾನು ಬಹಳ ಅತ್ತಿದ್ದೆವು. ಅವ್ವ ದಾವಣಗೇರಿ ತನಕ ಹೋಗಿ ಕುಸುಮಳನ್ನು ಬಿಟ್ಟು ಬಂದಿದ್ದಳು. ಆಗ ನಾನು ಏಕಾಂಗಿಯಾದೆ.' ಹಲವು ಸಂದರ್ಭಗಳಲ್ಲಿ ಆರ್ಥಿಕ ನೆಲೆಯಲ್ಲಿ ಜೀತದ ಆಯ್ಕೆ ಭೂಮಾಲೀಕರಿಂದ ಅಥವಾ ಪುಟ್ಟ ಮಕ್ಕಳಿಂದ ಆಗದೆ, ಮಗುವಿನ ತಂದೆ ತಾಯಿಗಳಿಂದ ನಡೆಯುವುದನ್ನು ಕಥನ ಸಾಹಿತ್ಯ ಗ್ರಹಿಸುತ್ತದೆ. ಕೆಳವರ್ಗದ ಕುಟುಂಬ ಬಡತನದ ಕಾರಣಕ್ಕೆ ಚಿಕ್ಕ ಮಕ್ಕಳನ್ನು ಉಳ್ಳವರ ಮನೆಯಲ್ಲಿ ಕೆಲಸಕ್ಕೆ ಇಡುವ (ಇದು ಸಹ ಜೀತಪದ್ಧತಿ) ಪದ್ಧತಿ ಕರ್ನಾಟಕ, ಗೋವಾದ ಗಡಿಭಾಗದಲ್ಲಿ ಕಂಡುಬರುತ್ತದೆ. ಈ ಬಾಲ ಕಾರ್ಮಿಕ ಪದ್ಧತಿಗೆ ಹೆತ್ತ ಮಕ್ಕಳನ್ನು ಸಾಕಲಾರದ ಬಡತನ ಮತ್ತು ಮಕ್ಕಳ ದುಡಿಮೆಯಿಂದ ಸಿಕ್ಕುವ ಆರ್ಥಿಕ ಸಹಾಯ ಮುಖ್ಯ ಕಾರಣಗಳಾಗಿವೆ. ಇಂತಹ ಬಾಲಜೀತ ಪದ್ಧತಿಯಿಂದ ಅನೇಕ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ. ಮಾಲೀಕರಿಂದ ಮಕ್ಕಳಿಗೆ ದೈಹಿಕ, ಮಾನಸಿಕ ಹಿಂಸೆ ಕೊಡಲ್ಪಟ್ಟು, ಬೆಳೆದ ಗಂಡು ಮಕ್ಕಳು ಮುಂದೆ ಸಮಾಜ ವಿಮುಖಿಗಳಾಗುವುದು, ವಯಸ್ಕರಾದ ಹೆಣ್ಣು ಮಕ್ಕಳು ಓಡಿ ಹೋಗುವುದು ಕಂಡುಬರುತ್ತದೆ. ದಾವಣಗೇರಿಯಲ್ಲಿ ಮನೆಗೆಲಸಕ್ಕಿದ್ದ ಕುಸುಮ ಆ ಕುಟುಂಬದ ಪರಿಚಯವಿರುವ ಯುವಕನೊಂದಿಗೆ ಓಡಿಹೋಗುತ್ತಾಳೆ. ಮುಗ್ಧ ಹಳ್ಳಿ ಮಕ್ಕಳು ನಗರ ಆಕರ್ಷಣೆಗೆ ಬಲಿಯಾಗಿ, ಕನಸು ಕಟ್ಟಿ ಓಡಿಬಂದು ನಗರ ಸೇರಿ, ಪರಿಸರದ ಕ್ರೌರ್ಯ ಮತ್ತು ಅಮಾನವೀಯತೆಗಳಿಂದ ರೌಡಿ, ಕಳ್ಳರು, ಕಾಳಸಂತೆಯವರು, ಭಿಕ್ಷುಕರು ಆಗುತ್ತಾರೆ. ಪರಿಣಾಮವಾಗಿ, ಮಕ್ಕಳು ನಗರದ ಕ್ರೂರ ವ್ಯವಸ್ಥೆಯ ಒಂದು ಭಾಗವಾಗಿ ಅದನ್ನೇ ಮೈಗೂಡಿಸಿಕೊಳ್ಳುತ್ತಾರೆ. ಇದಕ್ಕೆ ಗ್ರಾಮೀಣ ಪ್ರದೇಶದಲ್ಲಿ ತಾಂಡವವಾಡುವ ಬಡತನ, ನಿರಕ್ಷರತೆ, ಪಾಲಕರ/ಪೋಷಕರ ನಿರ್ಲಕ್ಷ, ಬಾಲ್ಯ ಸಹಜ ಕುತೂಹಲ, ನಗರಗಳ ಕೃತ್ರಿಮ ಪರಿಸರದ ಆಕರ್ಷಣೆ, ಮಕ್ಕಳ ಸ್ವಾತಂತ್ರ್ಯದ ಹಪಹಪಿ, ಅನನುಭವ, ಮುಗ್ಧತೆಗಳು ಕಾರಣವೆನ್ನಬಹುದು.

ಮಕ್ಕಳ ಗ್ರಾಮ/ನಗರ ಆಯ್ಕೆಯ ಕಾರಣಗಳನ್ನು ಪ್ರಸ್ತುತ ಕಥನ ಸಾಹಿತ್ಯ ಹೀಗೆ ಗ್ರಹಿಸಿದೆ. * ಮೇಲ್ವರ್ಗದ ಮಕ್ಕಳ ಗ್ರಾಮ/ನಗರ ಆಯ್ಕೆಯ ಸಂದರ್ಭದಲ್ಲಿ ತಂದೆ, ತಾಯಿ, ಪೋಷಕರ ಆಯ್ಕೆಯು ಅಂತಿಮವಾಗಿದ್ದು, ಇಂತಹ ಆಯ್ಕೆಗಳಲ್ಲಿ ಮಕ್ಕಳ ಭವಿಷ್ಯ ಮತ್ತು ಕುಟುಂಬದ ಹಿತ ಮುಖ್ಯವಾಗಿರುತ್ತದೆ. * ವಿದ್ಯೆ ಕಲಿಯುವ, ಕಲಿಸುವ ಆಸಕ್ತಿ ಹೊಂದಿದ ಮೇಲ್ಜಾತಿಯ ಕುಟುಂಬಗಳು (ಮಾಯಿಯ ಮುಖಗಳು ಕತೆಯ ಗಂಗ, ತುಂಗ, ನರ್ಮದ) ಶಿಕ್ಷಣ ಕೇಂದ್ರಗಳನ್ನು ಹೊಂದಿದ ನಗರ/ಮಹಾ ನಗರಗಳನ್ನು ಆಯ್ಕೆ ಮಾಡಿಕೊಳ್ಳುತ್ತವೆ. * ತುಂಬ ಚಿಕ್ಕ ವಯಸ್ಸಿನ ಮಕ್ಕಳಿಗೆ (ಮಗು) ಆಯ್ಕೆಯ ಕುರಿತು ಅರಿವಾಗಲಿ, ಗ್ರಹಿಕೆಯಾಗಲಿ ಇರುವುದಿಲ್ಲ. ಪಾಲಕರ/ಪೋಷಕರ ಆಯ್ಕೆ ಅವರ ಭವಿಷ್ಯದ ದಿಕ್ಕನ್ನು ಬದಲಾಯಿಸುತ್ತದೆ. * ಕೆಳ, ದಲಿತವರ್ಗದ ಮಕ್ಕಳು ಕೋಪ, ಹಠ ಮತ್ತು ಕೌಟುಂಬಿಕ ವಿರೋಧಿ ನೆಲೆಯಲ್ಲಿ ಗ್ರಾಮ/ನಗರ ಆಯ್ಕೆ ಮಾಡಿಕೊಳ್ಳುತ್ತಾರೆ. * ಆರ್ಥಿಕ ದುರವಸ್ಥೆ, ಬರ, ಹೆಚ್ಚು ಮಕ್ಕಳು ಇತ್ಯಾದಿ ಅಂಶಗಳು ಕೆಳವರ್ಗದ ಕುಟುಂಬಗಳು ಮಕ್ಕಳನ್ನು ಜೀತಕ್ಕೆ ಕಳಿಸಲು ಕಾರಣವಾಗುತ್ತವೆ.

## ಕೊನೆಯ ಟಿಪ್ಪಣಿಗಳು

೧. ಕುಸುಮಾಕರ ದೇವರಗೆಣ್ಣೂರು, ನಿರಿಂದ್ರಿಯ, ೧೯೯೩, ದಿವಾಣಜಿ ಪ್ರಕಾಶನ, ಪುಟ ೧೪
೨. ಕುಂದರನಾಡ ಪಾಟೀಲ, ಉಲ್ಲಂಘನೆ, ೧೯೯೪, ಸಿಂಚನ ಗ್ರಂಥಮಾಲೆ, ಪುಟ ೨
೩. ಯಶವಂತ ಚಿತ್ತಾಲ, ಶಿಕಾರಿ, ೧೯೯೫ (ಆರನೇ ಮುದ್ರಣ), ಗೀತಾ ಬುಕ್ ಹೌಸ್, ಪುಟ ೩೨೧, ೩೨೨
೪. ವ್ಯಾಸರಾಯ ಬಲ್ಲಾಳ, ಹೆಜ್ಜೆ, ೨೦೦೦, ಗೀತಾ ಬುಕ್ ಹೌಸ್, ಪುಟ ೮೪
೫. ವ್ಯಾಸರಾಯ ಬಲ್ಲಾಳ, ವ್ಯಾಸರಾಯ ಬಲ್ಲಾಳರ ಸಮಗ್ರ ಕಥೆಗಳು, ೨೦೦೨, ಅಂಕಿತ ಪುಸ್ತಕ, ಪುಟ ೯೫
೬. ವಿವೇಕ ಶಾನಭಾಗ, ಲಂಗರು, ೧೯೯೨, ಅಕ್ಷರ ಪ್ರಕಾಶನ, ಪುಟ ೭೪
೭. ಲೋಹಿತ ನಾಯ್ಕರ, ದೃಷ್ಟಿಕೋನ, ೨೦೦೧, ಮನೋಹರ ಗ್ರಂಥಮಾಲಾ, ಪುಟ ೭೩
೮. ಶಾರದಾ ಶೆಣೈ, ಪ್ರಶ್ನೆಗಳು, ೧೯೯೬, ಗೀತಾ ಬುಕ್ ಹೌಸ್, ಪುಟ ೩೨
೯. ವ್ಯಾಸರಾಯ ನಿಂಜೂರ, ಉಸಿರು, ೧೯೬೭, ಮನೋಹರ ಗ್ರಂಥಮಾಲಾ, ಪುಟ ೨೩೫
೧೦. ಅದೆ, ಪುಟ ೨೧
೧೧. ವ್ಯಾಸರಾಯ ಬಲ್ಲಾಳ, ಹೆಜ್ಜೆ, ೨೦೦೦, ಗೀತಾ ಬುಕ್ ಹೌಸ್, ಮೈಸೂರು, ಪುಟ ೧೯೮
೧೨. ಭಂಡಾರಿ ಆರ್. ವಿ., ತಲೆಮಾರು, ೨೦೦೪, ಸಾಹಿತ್ಯ ನಂದನ ಪ್ರಕಾಶನ, ಪುಟ ೨೫, ೨೬
೧೩. ವ್ಯಾಸರಾವ್ ನಿಂಜೂರ್, ಮಂಚಿ, ೨೦೦೫, ಸುವರ್ಣಗಿರಿ ಪ್ರಕಾಶನ, ಪುಟ ೧೦
೧೪. ಕುಸುಮಾಕರ ದೇವರಗೆಣ್ಣೂರು, ನಿರಿಂದ್ರಿಯ, ೧೯೯೩, ದಿವಾಣಜಿ ಪ್ರಕಾಶನ, ಪುಟ ೩೨
೧೫. ಶಾಂತಿನಾಥ ದೇಸಾಯಿ, ಬೀಜ, ೨೦೦೨, ಸ್ವಪ್ನ ಬುಕ್ ಹೌಸ್, ಪುಟ ೪೭, ೪೮
೧೬. ಬಸವರಾಜ ಕಟ್ಟೀಮನಿ, ಬೀದಿಯಲ್ಲಿ ಬಿದ್ದವಳು, ೧೯೫೩, ಪ್ರತಿಭಾ ಗ್ರಂಥಮಾಲೆ, ಪುಟ ೧೦೯
೧೭. ಶಾಂತಾದೇವಿ ಕಣವಿ, ಶಾಂತಾದೇವಿ ಕಣವಿಯವರ ಕಥಾಮಂಜರಿ, ೨೦೦೩, ಪ್ರಿಯದರ್ಶಿನಿ ಪ್ರಕಾಶನ, ಪುಟ ೩೨೨
೧೮. ವಿಜಯಾ ದಬ್ಬೆ (ಸಂ), ಶ್ಯಾಮಲಾ ಸಂಚಯ, ೧೯೮೯, ಕರ್ನಾಟಕ ಲೇಖಕಿಯರ ಸಂಘ, ಪುಟ ೪೬
೧೯. ವೀಣಾ ಶಾಂತೇಶ್ವರ, ಶೋಷಣೆ ಬಂಡಾಯ ಇತ್ಯಾದಿ, ೧೯೮೪, ಸುಂದರ ಪುಸ್ತಕ ಪ್ರಕಾಶನ, ಪುಟ ೧೬
೨೦. ಅಶೋಕ ಹೆಗಡೆ, ಒಂದು ತಗಡಿನ ಚೂರು, ಅಕ್ಷರ ಪ್ರಕಾಶನ, ಪುಟ ೨೬
೨೧. ವ್ಯಾಸರಾವ್ ನಿಂಜೂರ, ಉಸಿರು, ೧೯೬೭, ಮನೋಹರ ಗ್ರಂಥಮಾಲಾ, ಪುಟ ೮೭
೨೨. ಚಂದ್ರಕಾಂತ ಕುಸನೂರ, ಚರ್ಚಗೇಟ್, ಸತ್ಯ ಸ್ನೇಹ ಪ್ರಕಾಶನ, ರಾಯಚೂರು, ಪುಟ ೩೦
೨೩. ವ್ಯಾಸರಾಯ ಬಲ್ಲಾಳ, ಹೆಜ್ಜೆ, ೨೦೦೦, ಗೀತಾ ಬುಕ್ ಹೌಸ್, ಪುಟ ೨೫೯, ೨೬೦
೨೪. ಶ್ರೀರಂಗ, ವಿಶ್ವಾಮಿತ್ರ ಸೃಷ್ಟಿ, ಅಕ್ಷರ ಪ್ರಕಾಶನ ಸಾಗರ, ೧೯೩೪, (ದ್ವಿ. ಮು. ೧೯೭೪), ಪುಟ ೧೯
೨೫. ಶಿವರುದ್ರ ಕಲ್ಲೋಳಿಕರ, ಹೊಲೆಗೇರಿಯ ರಾಜಕುಮಾರ, ೧೯೯೪, ಅನಾರ್ಯ ಪ್ರಕಾಶನ, ಪುಟ ೮೭
೨೬. ಯೋಗಪ್ಪನವರ ಎಸ್.ಎಫ್., ಆರಾಮ ಖುರ್ಚಿ ಇತರ ಕತೆಗಳು, ೧೯೯೬, ಕವಿತಾ ಪ್ರಕಾಶನ, ಪುಟ ೬೬, ೬೮
೨೭. ಸರಸ್ವತಿಬಾಯಿ ರಾಜವಾಡೆ, ಕದಂಬ, ೧೯೪೭, ನವ ಭಾರತ ಪುಸ್ತಕ ಭಂಡಾರ, ಉಡುಪಿ, ಪುಟ ೫೧, ೫೨
೨೮. ಅಶೋಕ ಹೆಗಡೆ, ಒಳ್ಳೆಯವನು, ೨೦೦೪, ಅಕ್ಷರ ಪ್ರಕಾಶನ, (ಹೆಗ್ಗೋಡು) ಸಾಗರ, ಪುಟ ೯೮
೨೯. ಸುನಂದಾ ಬೆಳಗಾಂವಕರ, ಕಾಯಕ ಕೈಲಾಸ, ಕರ್ಮವೀರ, ಧಾರಾವಾಹಿ ೨೫, ಪುಟ ೪೨
೩೦. ರಾಘವೇಂದ್ರ ಪಾಟೀಲ, ಮಾಯಿಯ ಮುಖಗಳು, ೧೯೯೮, ಅನಂದಕಂದ ಗ್ರಂಥಮಾಲೆ, ಪುಟ ೪
೩೧. ಶಾಂತಾದೇವಿ ಕಣವಿ, ಶಾಂತಾದೇವಿ ಕಣವಿಯವರ ಕಥಾಮಂಜರಿ, ೨೦೦೩, ಪ್ರಿಯದರ್ಶಿನಿ ಪ್ರಕಾಶನ, ಪುಟ ೧೬೪
೩೨. ರಾಮಕೃಷ್ಣ ಗುಂದಿ, ಅತಿಕ್ರಾಂತ, ೨೦೦೭, ಶ್ರೀಮತಿ ನಿರ್ಮಲಾ ಗುಂದಿ (ಪ್ರಕಾಶಕರು) ಅಂಕೋಲ, ಪುಟ ೪
೩೩. ಡಿಸೋಜ ನಾ., ಮಂಜಿನ ಕಾನು, ೧೯೯೦, ಹೇಮಂತ ಸಾಹಿತ್ಯ, ಪುಟ ೧೯೭
೩೪. ಪಾಟೀಲ ಪುಟ್ಟಪ್ಪ (ಡಾ.), ಪಾಪು ಸಮಗ್ರ ಕಥೆಗಳು, ೨೦೦೦, ಸಪ್ನ ಬುಕ್ ಹೌಸ್, ಪುಟ ೯೫
೩೫. ವೆಂಕಟೇಶ ಹುಣಶೀಕಟ್ಟಿ, ೧೯೭೩, ಯುಗಪುರುಷ ಪ್ರಕಟನಾಲಯ, ಪುಟ ೨೭೨

೩೬. ಬಸವರಾಜ ಸಾದರ, ತಪ್ಪಂಡ, ೨೦೦೨, ಲೋಹಿಯಾ ಪ್ರಕಾಶನ, ಪುಟ ೩೦

೩೭. ವ್ಯಾಸರಾಯ ಬಲ್ಲಾಳ, ಹೆಜ್ಜೆ, ೨೦೦೦, ಗೀತಾ ಬುಕ್ ಹೌಸ್ ಮೈಸೂರು, ಪುಟ ೨೯, ೩೦

೩೮. ಕೇಶವ ಮಳಗಿ, ಕಡಲ ತೆರೆಗೆ ದಂಡೆ, ಗಜೇಂದ್ರ ಪ್ರಕಾಶನ, ಪುಟ ೧೯೫

೩೯. ವ್ಯಾಸರಾವ್ ನಿಂಜೂರ್ (ಡಾ.), ಮಂಚ, ೨೦೦೫, ಸುವರ್ಣಗಿರಿ ಪ್ರಕಾಶನ, ಪುಟ ೭೧

೪೦. ರಮಾನಂದ ಅಮೀನ್, ಗದ್ದೆಯ ಸೆರಗು, ೧೯೮೩, ಚಂದ್ರಸಾಗರ ಪ್ರಕಾಶನ, ಪುಟ ೩

೪೧. ತುಳಸಿ ವೇಣುಗೋಪಾಲ, ಕೆ.ಟಿ ವೇಣುಗೋಪಾಲ, ಜುಗಲಬಂದಿ, ೨೦೦೫, ಸಮಗ್ರ ಸಾಹಿತ್ಯ ಪ್ರಕಾಶನ, ಪುಟ ೩೪

೪೨. ಸುನಂದಾ ಬೆಳಗಾಂವಕರ, ಮೃದ್ಗಂಧ, ೧೯೯೭, ಸೂರ್ಯ ಪ್ರಕಾಶನ, ಪುಟ ೯೮

೪೩. ಮಿತ್ರಾ ವೆಂಕಟರಾಜ್, ರುಕುಮಾಯಿ, ೧೯೯೦, ನಂದನ ಪ್ರಕಾಶನ, ಬೆಂಗಳೂರು, ಪುಟ ೬೪

೪೪. ವ್ಯಾಸರಾಯ ಬಲ್ಲಾಳ, ಸಮಗ್ರ ಕಥೆಗಳು, ೨೦೦೨, ಅಂಕಿತ ಪುಸ್ತಕ, ಪುಟ ೯೮

೪೫. ಡಿಸೋಜಾ. ನಾ., ಪ್ರೀತಿಯೊಂದೇ ಸಾಲದೆ? ೧೯೮೬, ಹೇಮಂತ ಸಾಹಿತ್ಯ, ಪುಟ ೮೫

೪೬. ವ್ಯಾಸರಾವ್ ನಿಂಜೂರ, ಉಸಿರು, ೧೯೬೭, ಮನೋಹರ ಗ್ರಂಥಮಾಲಾ, ಪುಟ ೧೮೩

೪೭. ರಾಮಕೃಷ್ಣ ಗುಂದಿ, ಆವಾರಿ, ೧೯೮೪, ರಾಘವೇಂದ್ರ ಪ್ರಕಾಶನ, ಪುಟ ೩೦

೪೮. ಡಿಸೋಜ ನಾ., ದ್ವೀಪ ೨೦೦೪, ರವೀಂದ್ರ ಪ್ರಕಾಶನ, ಸಾಗರ, ಪುಟ ೧೩

೪೯. ಮಹಾಲಿಂಗ ಮಂಗಿ, ಮುಳುಗಡೆ, ೨೦೦೨, ವ್ಯಾಸ ಪ್ರಕಾಶನ, ಪುಟ ೧೪

೫೦. ಶ್ರೀಧರ ಬಳಗಾರ, ಇಳೆ ಎಂಬ ಕನಸು, ೨೦೦೩, ಅನಂದಕಂದ ಗ್ರಂಥಮಾಲೆ, ಪುಟ ೬೩

೫೧. ವ್ಯಾಸರಾವ್ ನಿಂಜೂರ, ಉಸಿರು, ೧೯೬೭, ಮನೋಹರ ಗ್ರಂಥಮಾಲಾ, ಪುಟ ೨೬೮

೫೨. ಅಶೋಕ ಹೆಗಡೆ, ಒಳ್ಳೆಯವನು, ೨೦೦೪, ಅಕ್ಷರ ಪ್ರಕಾಶನ, ಪುಟ ೯೯

೫೩. ರಾಘವೇಂದ್ರ ಪಾಟೀಲ, ಮಾಯಿಯ ಮುಖಗಳು, ೧೯೯೮, ಅನಂದಕಂದ ಗ್ರಂಥಮಾಲೆ, ಪುಟ ೫

೫೪. ಕುಸುಮಾಕರ ದೇವರಗೆಣ್ಣೂರು, ನಿರಿಂದ್ರಿಯ, ೧೯೯೩, ದಿವಾಣಜಿ ಪ್ರಕಾಶನ, ಪುಟ ೩೭

೫೫. ಕೋರಗಲ್ ವಿರೂಪಾಕ್ಷಪ್ಪ, ಮಣ್ಣಿನ ಗುಣ, ೧೯೯೨, ಪ್ರಗತಿಪರ ವೇದಿಕೆ, ಪುಟ ೧೩

೫೬. ಯೋಗಪ್ಪನವರ ಎಸ್. ಎಫ್., ಆರಾಮ ಖುರ್ಚಿ ಮತ್ತು ಇತರ ಕತೆಗಳು, ೧೯೯೭, ಕವಿತಾ ಪ್ರಕಾಶನ, ಪುಟ ೮೪

೫೭. ವ್ಯಾಸರಾವ್ ನಿಂಜೂರ್, ಮಂಚ, ೨೦೦೫, ಸುವರ್ಣಗಿರಿ ಪ್ರಕಾಶನ, ಪುಟ ೬೭

೫೮. ಲೋಹಿತ ನಾಯ್ಕರ, ದೃಷ್ಟಿಕೋನ, ೨೦೦೧, ಮನೋಹರ ಗ್ರಂಥಮಾಲಾ, ಧಾರವಾಡ, ಪುಟ ೭೪

೫೯. ಮಹಾಲಿಂಗ ಮಂಗಿ, ಮುಳುಗಡೆ, ೨೦೦೨, ವ್ಯಾಸ ಪ್ರಕಾಶನ, ಪುಟ ೧೯

೬೦. ಕುಂದರನಾಡ ಪಾಟೀಲ, ಉಲ್ಲಂಘನೆ, ೧೯೯೪, ಸಿಂಚನ ಗ್ರಂಥಮಾಲೆ, ಪುಟ ೬

೬೧. ಕುಸುಮಾಕರ ದೇವರಗೆಣ್ಣೂರು, ನಿರಿಂದ್ರಿಯ, ೧೯೯೩, ದಿವಾಣಜಿ ಪ್ರಕಾಶನ, ಮುಂಬಯಿ, ಪುಟ ೧೯

೬೨. ವ್ಯಾಸರಾವ್ ನಿಂಜೂರ, ಉಸಿರು, ೧೯೬೭, ಮನೋಹರ ಗ್ರಂಥಮಾಲಾ, ಪುಟ ೬೮

೬೩. ಜಯಂತ ಕಾಯ್ಕಿಣಿ, ತೂಫಾನ್ ಮೇಲ್, ೨೦೦೫, ಅಂಕಿತ ಪುಸ್ತಕ, ಪುಟ ೪೭

೬೪. ರೋಹಿದಾಸ ನಾಯಕ, ಮಾಸ್ತಣ್ಣ ಮತ್ತು ಇತರ ಕತೆಗಳು, ೧೯೮೫, ಪ್ರಸನ್ನ ಪ್ರತಿಭಾ ಪ್ರಕಾಶನ, ಪುಟ ೭೩

೬೫. ರೇಖಾ ಕಾಖಂಡಕಿ, ತ್ರಸ್ತ, ೨೦೦೭, ಮನೋಹರ ಗ್ರಂಥಮಾಲಾ, ಧಾರವಾಡ, ಪುಟ ೫೬

೬೬. ಬಾಳಾಸಾಹೇಬ ಲೋಕಾಪುರ, ಕಂಗಳು ತುಂಬಿದ ಬಳಿಕ, ೨೦೦೩, ಸಿ. ವಿ. ಜಿ. ಪಬ್ಲಿಕೇಷನ್, ಪುಟ ೧೨೪

೬೭. ಲೋಹಿತ ನಾಯ್ಕರ, ದೃಷ್ಟಿಕೋನ, ೨೦೦೧, ಮನೋಹರ ಗ್ರಂಥಮಾಲಾ, ಪುಟ ೬೬

* * *

## ಅಧ್ಯಾಯ ಎಂಟು

# ಕಥನ ಸಾಹಿತ್ಯ : ಗ್ರಾಮ/ ನಗರ ಜೀವನದ ಸಂಘರ್ಷಗಳು, ಸಂಕಟಗಳು

ಮನುಷ್ಯರ ಸ್ವಭಾವ ಅವರ ಸಾಮಾಜಿಕ, ಕೌಟುಂಬಿಕ, ಮಾನವೀಯ ಸಂಬಂಧಗಳಿಗೆ ಸದಾ ಮಿಡಿಯುತ್ತಲೇ ಸ್ಪಂದಿಸುತ್ತದೆ. ಮಾನವ/ಮಾನವೀಯ ಸಂಬಂಧಗಳು ಒಂದು ಭಾಗದಲ್ಲಿ ಬೇರ್ಪಡುತ್ತ ಹೋದಂತೆ ಇನ್ನೊಂದು ಭಾಗದಲ್ಲಿ ಸೇರ್ಪಡೆಗೊಳ್ಳುತ್ತ ಹೋಗುತ್ತವೆ. ಒಂದು ನೆಲೆಯಲ್ಲಿ ಬೇರ್ಪಟ್ಟ ಸಂಬಂಧಗಳು ಇನ್ನೊಂದು ನೆಲೆಯಲ್ಲಿ ಚಿಗುರಿ ಕುಡಿಯೊಡೆಯುವ ಹಂತದಲ್ಲಿ, ಮನುಷ್ಯರ ಬದುಕು ಹಲವಾರು ನೋವು, ನಲಿವು, ಸಂಕಟ, ಸಂಘರ್ಷಗಳಿಂದ ತುಂಬಿದೆ. ಈ ಪ್ರಕ್ರಿಯೆಯ ಅವಧಿ ಮನುಷ್ಯರ ಬದುಕಿನಲ್ಲಿ ಸಂಕ್ರಮಣ ಕಾಲವಾಗಿದ್ದು, ಒಂದು ಮೊಟ್ಟೆಯೊಡೆದು ಮರಿಯಾಗುವ, ಸೇವಕ ಮಾಲೀಕನಾಗುವ, ಗರ್ಭದೊಳಗಿನ ಭ್ರೂಣ ಹೊರಬಂದು ಹೊಸ ಬದುಕು ಪಡೆಯುವ ಸ್ಥಿತಿಯಂತಹುದು. ನಗರ/ಗ್ರಾಮೀಣ ಪರಿಸರದ ಸಂಬಂಧಗಳು ಕಳಚುವಾಗಿನ ದೈಹಿಕ, ಮಾನಸಿಕ ಸ್ಥಿತಿ ಹಾಗೂ ದ್ವಂದ್ವಗಳನ್ನು ಮುಂಬಯಿ ಕರ್ನಾಟಕದ ಕಥನ ಸಾಹಿತ್ಯ ಸಂಕೀರ್ಣವಾಗಿ ಹಿಡಿದಿಟ್ಟಿದೆ. ಇಂತಹ ದ್ವಂದ್ವಗಳನ್ನು ಅನುಭವಿಸುವ ಮನುಷ್ಯರ ಬದುಕಿನ ಹಂತಗಳನ್ನು, ಅವುಗಳನ್ನು ನಿರ್ದೇಶಿಸುವ ಸಂದರ್ಭಗಳನ್ನು ಸಂಗ್ರಹಿಸಿ ಕೊಡುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

## ೧. ವೈಯಕ್ತಿಕ ನೆಲೆ ಮತ್ತು ಸಂಘರ್ಷ

### ಅ. ಭೌತಿಕ (ಶ್ರಮ) / ಆರ್ಥಿಕ ಸಂಘರ್ಷಗಳು

ಸಾಮಾಜಿಕ ವ್ಯವಸ್ಥೆಯ ಭಾಗವಾದ ಮನುಷ್ಯರು ಒಂದು ನೆಲೆಯಿಂದ ಇನ್ನೊಂದು ನೆಲೆಗೆ ಸ್ಥಳಾಂತರಗೊಂಡಾಗ ಅನೇಕ ಸಾಮಾಜಿಕ, ಆರ್ಥಿಕ, ಧಾರ್ಮಿಕಜನ್ಯ ಸಮಸ್ಯೆಗಳು ಎದುರಾಗುತ್ತವೆ. ವೃತ್ತಿ, ವಸತಿ, ಶಿಕ್ಷಣ ಮುಂತಾದ ಮೂಲಭೂತ ಅವಶ್ಯಕತೆಗಳಿಗೆ ಆ ವ್ಯವಸ್ಥೆಯಲ್ಲಿರುವ ಪಟ್ಟಭದ್ರ ಹಿತಾಸಕ್ತಿಗಳ ವಿರೋಧ, ಸಮಾಜಘಾತಕ ಶಕ್ತಿಗಳ ಕಿರುಕುಳ, ಆರ್ಥಿಕ ಅಭದ್ರತೆ ಮುಂತಾದ ತೊಂದರೆಗಳ ಜೊತೆ ಮೂಲ ನೆಲೆಯನ್ನು ನಿರಾಕರಿಸಿ ಬಂದ ನೆನಮ, ತುಡಿತಗಳೂ ಅವರನ್ನು ಕಾಡುವುದು ಕಥನ ಸಾಹಿತ್ಯದಲ್ಲಿ ದಾಖಲಾಗಿದೆ.

ಅಶೋಕ ಕುಲಕರ್ಣಿ ಅವರ 'ನಿರ್ಗತಿಕರು' ಕಾದಂಬರಿಯ ಎಡನ್‌ಸಾಹೇಬರ ಕೃತಪುರ(ಪಟ್ಟಣ)ದ ಪ್ರವೇಶ ಏಕಾಂಗಿ ಯುವಕನೊಬ್ಬನ ಹೋರಾಟದ ನಾಂದಿಯಾಗಿದೆ. ಗಟಾರದಲ್ಲಿ ಹುಟ್ಟಿ ಗಟಾರದಲ್ಲಿ ಬೆಳೆದ ಈ ವ್ಯಕ್ತಿಗೆ ಒಂದು ಹರಿದ ಚಡ್ಡಿ, ಒಂದು ಅಂಗಿ ಮಾತ್ರ ಆಸ್ತಿ ಮತ್ತು ಪ್ಲಾಟ್‌ಫಾರಂನ ಮೂಲೆ ಅವನ ಮನೆಯಾಗಿತ್ತು. 'ಆ ಹೊಸ ಹುಡುಗ ಬಂದಾನಲ್ಲ ಭಾಳ ಚೂಟಿ ಅದಾನ, ಮತ್ತ ಮ್ಯಾಗ, ಮೈಮುರಿದು ದುಡೀತಾನ, ಅಂವಾ ನಮಗೆಲ್ಲ ಹೊಟ್ಟೆಮ್ಯಾಲ ಕಾಲ ಕೊಡತಾನ"[೧] ಎಂಬ ಹಿರಿಯ ಹಮಾಲರು ಮೊದಮೊದಲು ಇವನ ವೃತ್ತಿ ವೈರಿಗಳಾಗುತ್ತಾರೆ. ಎಡನ್ ಈ ಸಂಘರ್ಷದಲ್ಲಿ ತನ್ನ ಮುಂದಿನ ಹಲ್ಲುಗಳನ್ನು ಕಳೆದುಕೊಳ್ಳುತ್ತಾನೆ. ಶ್ರಮಜೀವಿಯಾದ ಎಡನ್‌ನಿಗೆ ಎರಡು ರೀತಿಯ ಸಂದಿಗ್ಧತೆ

ಎದುರಾಗುತ್ತದೆ. ಮೊದಲನೆಯದು ವ್ಯಕ್ತಿ ಬಾಂಧವರದ್ದಾದರೆ, ಇನ್ನೊಂದು ಆಲ್ಫನಸೊ ಎಂಬ ವ್ಯಕ್ತಿ ಮೂಲಕ ಕ್ರಿಶ್ಚಿಯನ್ನರ ಮತಾಂತರದ ಒತ್ತಾಯ. ಮೊದನೆಯದರಿಂದ ಹಾಗೂ ಬಡತನದಿಂದ ಪಾರಾಗಲು ಎಡನ್ ಮತಾಂತರಗೊಂಡು ಕೋಳಿ ಮತ್ತು ಎಮ್ಮೆಗಳ ಫಾರಂ ತೆರೆದು ಹಾಲು, ಮೊಟ್ಟೆಗಳ ವ್ಯಾಪಾರ ಆರಂಭಿಸುತ್ತಾನೆ. ಹಿಂದೂ ಧರ್ಮದಲ್ಲಿರುವ ಅಸ್ಪೃಶ್ಯತೆಯ ಆಚರಣೆ ಎಷ್ಟು ಅವೈಚಾರಿಕವಾದದ್ದು, ಕ್ರೂರವಾದದ್ದು ಹಾಗೂ ಅಮಾನವೀಯವಾದುದು ಎಂದು ಎತ್ತಿ ಹೇಳುತ್ತ ಎಡೆನ್‌ನ ಮಾವ (ಆಲ್ಫನಸೊ) ತಮ್ಮ ಧರ್ಮದಲ್ಲಿರುವ ಸಮಾನತೆ, ಕರುಣೆ, ಮಾನವ ಪ್ರೀತಿಯನ್ನು ವೈಭವೀಕರಿಸುವುದು ಕಂಡುಬರುತ್ತದೆ. ಇಲ್ಲಿ ಮತಾಂತರವನ್ನು ಪ್ರಮುಖ ಪ್ರಶ್ನೆಯನ್ನಾಗಿ ಪರಿಗಣಿಸುವ ಕಾದಂಬರಿ, ಮತಾಂತರದ ಆಮಿಷಗಳನ್ನು ಅನಾವರಣ ಮಾಡಿ, ಮತಾಂತರಗೊಂಡ ವ್ಯಕ್ತಿ, ಕುಟುಂಬಗಳ ಆಸೆ, ಆಕಾಂಕ್ಷೆ, ಬದುಕು, ಶೋಷಣೆ. ಶ್ರಮ, ತ್ಯಾಗವನ್ನು ಮುಚ್ಚಿಟ್ಟು ನೇತ್ಯಾತ್ಮಕ ಧೋರಣೆಯತ್ತ ಸರಿಯುತ್ತದೆ. ಇಂದಿನ ಭಾರತೀಯ ಸಾಮಾಜಿಕ ಸಂದರ್ಭದಲ್ಲಿ, ಅಸ್ಪೃಶ್ಯತೆಯ ನಿವಾರಣೆ ಎಂದರೆ ದಲಿತ, ಹಿಂದುಳಿದವರ ವೈದಿಕೀಕರಣ ಅಥವಾ ಬೇರೆ ಧರ್ಮಕ್ಕೆ ಮತಾಂತರವಲ್ಲದೆ ಬೇರೇನೂ ಆಗಿ ಉಳಿದಿಲ್ಲ. ಸಾಮಾಜಿಕವಾಗಿ. ಧಾರ್ಮಿಕವಾಗಿ ತುಳಿತಕ್ಕೊಳಗಾದ ಜಾತಿ, ಸಮೂಹಗಳನ್ನು ಅದರದೇ ನೆಲೆಯಲ್ಲಿ ಉದ್ಧರಿಸುವ (ಶೋಷಣೆಯಿಂದ ಮುಕ್ತಗೊಳಿಸುವ), ಆರ್ಥಿಕ ಸ್ವಾತಂತ್ರ್ಯವನ್ನು ಮನಸ್ಚೇತನಗೊಳಿಸುವ ಕಾರ್ಯದತ್ತ ಗಮನ ಕೊಡಬೇಕಾಗಿದೆ ಮತ್ತು ಮತಾಂತರಕ್ಕೆ ಅನ್ಯ ಧರ್ಮೀಯರ ಆಮಿಷಗಳಷ್ಟೇ ಹಿಂದೂ ಧರ್ಮದ ವರ್ಣಬೇಧ ನೀತಿಯೂ ಕಾರಣವಾಗಿದೆ ಎಂಬ ನಿಲುವು ಅಧ್ಯಯನದ್ದಾಗಿದೆ.

ವ್ಯಾಸರಾವ್ ನಿಂಜೂರ ಅವರ 'ನಿರಾಕರಣೆ' ಕತೆಯಲ್ಲಿ ಅಬ್ರಾಹ್ಮಣ್ಯವನ್ನು ಹೊಂದುವ ಅಪೇಕ್ಷೆಯಿಂದ ಜಾತಿ ವ್ಯವಸ್ಥೆಯನ್ನು ಧಿಕ್ಕರಿಸಿ ಮುಂಬಯಿ ನಗರ ಪ್ರವೇಶಿಸಿದ ಕೇಶವ, ತನ್ನ ಕನಸಿನ ಮುಂಬಯಿಗೂ, ವಾಸ್ತವ ಮುಂಬಯಿಗೂ ಇರುವ ಘೋರ ವಾಸ್ತವವನ್ನು ಸ್ವತಃ ಅನುಭವಿಸುತ್ತಾನೆ.

> 'ಯಾವ ಊರಾಯ್ತು ಮಗಾ, ಇಲ್ಲಿ ಬಿದ್ದುಕೊಂಡಿದ್ದಿ. ಏನು ಕೆಲಸ? ಮನೆಯಲ್ಲಿ ಜಗಳ ಆಯ್ತಾ? ಅಥವಾ ಓಡಿ ಬಂದವನಾ? ಮದುವೆ ಆಗಿದೆಯಾ? ಹೆಂಡತಿ ಮಕ್ಕಳು ಎಲ್ಲಿ? ಎಲ್ಲ ದರಿದ್ರದವು. ಎಲ್ಲೆಂದರಲ್ಲಿಂದ ನಮ್ಮ ಸಿಟಿಗೆ ಬರುತ್ತಾರೆ. ನಮಗಿಲ್ಲಿ ಒರಗಲಿಕ್ಕೂ ಜಾಗವಿಲ್ಲ. ಅದಕ್ಕೂ ಪೋಟಿ ಕೊಡುತ್ತಾರೆ. ಏನು ಮಾಡೋಣ? ಎಲ್ಲರೂ ಬದುಕಬೇಕಲ್ಲ. ನಾವೂ ಬದುಕುತ್ತೇವೆ. ಈ ನನ್ನ ಪ್ರೀತಿಯ ನಾಯಿಗಳೂ ಬದುಕುತ್ತವೆ'[3]

ಪೇಪರ್ ಆರಿಸುವ ಮುದುಕಿಯ ಮಾತು(ನಗರ ಹಿತಾಸಕ್ತಿಗಳು)ಗಳು ನಗರಕ್ಕೆ ಬರುವ ಗಾಮೀಣ ಪಾತ್ರಗಳ ಪ್ರವೇಶವನ್ನು ವಿರೋಧಿಸುವ ನೆಲೆಯನ್ನು ಹೊಂದಿವೆ. ದಿನವೆಲ್ಲ ಫುಟ್‌ಪಾತ್‌ಗಳಲ್ಲಿ ವಾಸ, ರಾತ್ರಿ ಇತರ ಫುಟ್‌ಪಾತ್ ವಾಸಿಗಳಿಂದ, ಪೊಲೀಸರಿಂದ ಕಿರುಕುಳ. ನರಕದರ್ಶನ. ರಾತ್ರಿ ಕುಷ್ಠರೋಗಿಯೊಬ್ಬ ನೀಡಿದ ಲೈಂಗಿಕ ಹಿಂಸೆಯ ಅನುಭವ. ನಾಯಿ, ಹಂದಿಗಳ ಜೊತೆ ವಾಸ ಅವನಿಗೆ ತನ್ನ ಬಾಲ್ಯದ ಗೆಳೆಯರಾದ ತೋಮ, ಶುಕ್ರ, ಕರಿಯ, ಇನಾಸ, ಅಂಗಾರ(ಇವರೆಲ್ಲ ಗ್ರಾಮೀಣ ದಲಿತರು)ರನ್ನು ನೆನಪಿಸುತ್ತದೆ. ಮುದುಕಿಯ ನೆರವಿನಿಂದ ಒಂದು ಟ್ರೋಲಿ ದೊರೆತು ಕೈಗಾಡಿ ತಳ್ಳುವ ದಂದೆ ಆರಂಭಿಸುತ್ತಾನೆ. ಕೆಲವು ದಿನ ಟ್ರಾಫಿಕ್ ಸಿಗ್ನಲ್‌ಗಳಲ್ಲಿ ನಿಂತು ಬಲೂನು, ಕಡ್ಲೆ ಕಾಯಿ, ಶೇಂಗಾಬೀಜ, ಬಟಾಣಿ ಮಾರಾಟ ಮಾಡುತ್ತಾನೆ. ಪೊಲೀಸರ, ದಾಂಡಿಗರ ಕಾಟ, ಹಫ್ತಾ ಸಲ್ಲಿಕೆ ಇವುಗಳ ಕರಾಳ ಅನುಭವವಾಗುತ್ತದೆ. ಗ್ರಾಮೀಣ ಸಾಂಪ್ರದಾಯಿಕ ಬದುಕು (ಕುಟುಂಬ), ಗಡಿಬಿಡಿ ಇಲ್ಲದ ಜೀವನದಿಂದ ಬಂದ ಕೇಶವ ನಗರದ ಕ್ರೌರ್ಯ, ಅನ್ನಕ್ಕೂ ಪರದಾಡಬೇಕಾದ ಅಮಾನವೀಯ ಕ್ಷಣಗಳನ್ನು ಕಳೆಯುವಾಗ, ಒಬ್ಬ ಮೇಲ್ವರ್ಗದ ಯುವಕ ಮತ್ತು ಇನ್ನೊಬ್ಬ ಕೆಳವರ್ಗದ ಯುವಕರ ದ್ವಂದ್ವಗಳನ್ನು ತೌಲನಿಕವಾಗಿ ಗುರುತಿಸುತ್ತೇವೆ. ಇನಾಸ, ಅಂಗಾರರಂಥ ಕೆಳವರ್ಗದ ಯುವಕರು ಬಹುಬೇಗ ನಗರ ಸೇರಿ ಬದುಕುವ ಕಲೆ ಕಲಿತುಕೊಳ್ಳುತ್ತಾರೆ ಎಂಬುದು ಅವರ ಮಾನಸಿಕ ಸಿದ್ಧತೆಯ ಗುರುತಾಗಿದೆ. ಕೇಶವ ಮೇಲ್ಜಾತಿಯ ಕುಟುಂಬದಿಂದ ಬಂದವನು. ಬಡತನ, ಹಸಿವು, ಶೋಷಣೆಯ ಬಿಸಿಯನ್ನು ಅನುಭವಿಸದೆ ಅಪ್ಪ, ಅಮ್ಮಂದಿರೊಂದಿಗಿನ ಸುರಕ್ಷಿತ ಬದುಕನ್ನು ಅನುಭವಿಸಿದವನಿಗೆ ಮಹಾನಗರದ ಕಷ್ಟಕಾರ್ಪಣ್ಯಗಳು ಕಠೋರ ಭೌತಿಕ ಕ್ರೌರ್ಯದ ಅನುಭವಗಳಾತ್ತವೆ. ಆದರೂ ಈ ಬದುಕು ಅವನಿಗೆ ಮಾನಸಿಕ ನೆಮ್ಮದಿ ಕೊಟ್ಟಿರುವುದನ್ನು ಕತೆ ಸೂಚಿಸಿದ್ದು, ಶೋಷಣೆ, ಜಾತಿ ವೈಷಮ್ಯ, ಬಡತನಗಳಿಂದ ಕೂಡಿದ ಗ್ರಾಮೀಣ ಬದುಕಿಗಿಂತ ಮೇಲು ಎಂಬ ಅಭಿಪ್ರಾಯ ನಿರೂಪಕರದಾಗಿದೆ. 'ಬೊಂಬಾಯಿ

ಬದುಕಲು ಬಿಡುತ್ತದೆ, ಉಸಿರುಗಟ್ಟಿ ಸಾಯಲು ಬಿಡುವುದಿಲ್ಲ' ಎಂಬ ಮುದುಕಿಯ ಮಾತಿನಂತೆ, ಅಂತಹ ಕನಿಷ್ಠ ಸುರಕ್ಷತೆಯ ಬದುಕಲ್ಲಿ ಗರಿಷ್ಠ ಉದ್ಯೋಗಾವಕಾಶಗಳನ್ನು ಹೊಂದಿರುವುದನ್ನು ಒಪ್ಪಬಹುದು. ನಗರದ ಪಟ್ಟಭದ್ರ ಹಿತಾಸಕ್ತಿಗಳು (ಶ್ರೀಮಂತರು, ವ್ಯಾಪಾರಿಗಳು, ರೌಡಿಗಳು, ಪೋಲೀಸರು ಇತ್ಯಾದಿ) ನಗರ ವ್ಯವಸ್ಥೆಯನ್ನು ಹಿಡಿತದಲ್ಲಿಟ್ಟುಕೊಳ್ಳುವ, ಗ್ರಾಮೀಣ ವ್ಯಕ್ತಿಗಳು ಬದುಕಿಗಾಗಿ ಈ ಶಕ್ತಿಗಳನ್ನು ಎದುರಿಸಿ ನಿಲ್ಲುವ ಸಾಮಾಜಿಕ, ಆರ್ಥಿಕ ಸಂಘರ್ಷ ಇದಾಗಿದೆ.

ಶ್ರೀರಂಗ ಅವರ 'ವಿಶ್ವಾಮಿತ್ರನ ಸೃಷ್ಟಿ' ಕಾದಂಬರಿಯ ನಾರಾಯಣ (ಯುವಕ) ಪಟ್ಟಣ ನಿರಾಕರಿಸಿ, ಗ್ರಾಮೋದ್ಧಾರದ ಕನಸು ಹೊತ್ತು ಕಮತೂರು ಎಂಬ ಕುಗ್ರಾಮಕ್ಕೆ ಬರುತ್ತಾನೆ. ಹಳ್ಳಿಗಳಲ್ಲಿ ತಾಂಡವವಾಡುತ್ತಿರುವ ಬಡತನ, ಮೂಢನಂಬಿಕೆ, ಹಸಿವು, ಅವಿದ್ಯಾವಂತ ಜನರ ಕಷ್ಟಗಳನ್ನು ಪರಿಹರಿಸಲು ಮಕ್ಕಳಿಗೆ, ಯುವಕ, ಯುವತಿಯರಿಗೆ ವಿದ್ಯಾಲಯ ಪ್ರಾರಂಭಿಸಿ ಶಿಕ್ಷಣ ಕೊಡಲು ಆರಂಭಿಸುತ್ತಾನೆ. ಅನನುಭವಿ ಮೇಲ್ಜಾತಿಯ ಯುವಕ ಗ್ರಾಮಕ್ಕೆ ಬಂದು, ಹಸಿವು ಮತ್ತು ಆರ್ಥಿಕ ಸಂಕಷ್ಟಕ್ಕೆ ಒಳಗಾದಾಗ ಅವನ ಪ್ರತಿಕ್ರಿಯೆಯನ್ನು ಗಮನಿಸಬಹುದು. ಹೋಟೆಲೊಂದಕ್ಕೆ ಹೋಗಿ ಗಬಗಬ ಉಪ್ಪಿಟ್ಟು ತಿಂದು, ಕೊಡಲು ಹಣವಿಲ್ಲದಾಗ ಅಲ್ಲಿಯೆ ಕೆಲಸಕ್ಕೆ ಸೇರಿ ಎಂಜಲು ತೊಳೆಯುವುದು ಕಾದಂಬರಿಯ ವಿಡಂಬನೆಯಾಗಿದೆ. ಮಲಗಲು ಸೂರಿಲ್ಲದೆ ಬಯಲಲ್ಲಿ ಮಲಗಿ, ಎಲ್ಲ ಜಾತಿಯ ಮಕ್ಕಳನ್ನು ಸೇರಿಸಿ ಶಿಕ್ಷಣ ಕೊಡಲು ಮುಂದಾಗುತ್ತಾನೆ. ಇವನ ಈ ಸುಧಾರಣಾವಾದಿ ಕಾರ್ಯಕ್ರಮಗಳು ಆ ಊರಿನ ಸಂಪ್ರದಾಯವಾದಿ, ಊಳಿಗಮಾನ್ಯ ವ್ಯವಸ್ಥೆಯ ಅಸ್ವಸ್ಥ ಮನಸ್ಸುಗಳನ್ನು (ಕುಲಕರ್ಣಿ, ಮಲ್ಲಣ್ಣ, ನಾರಾಯಣನ ತಂದೆ ಶ್ರೀನಿವಾಸ ನಾಯಕ, ಕೃಷ್ಣಮಾಚಾರಿ ಮುಂತಾದವರು) ಕೆರಳಿಸಿ, ನಾರಾಯಣನನ್ನು ವಿರೋಧಿಸುವಂತೆ ಮಾಡುತ್ತವೆ. ಇವನ ಕಾರ್ಯಕ್ರಮಗಳು ಯಶಸ್ವಿಯಾಗದ ಹಾಗೆ ನೋಡಿಕೊಳ್ಳುತ್ತವೆ. ಇಲ್ಲಿ ಪ್ರಗತಿಶೀಲ ಮತ್ತು ಪ್ರತಿಗಾಮಿ ವ್ಯಕ್ತಿತ್ವಗಳ ನಿರಂತರ ಸಂಘರ್ಷವನ್ನು ಕಾಣುತ್ತೇವೆ. ದುಡಿಯಲಿಕ್ಕಾಗಿಯೇ ಹುಟ್ಟಿದ ಕೆಳವರ್ಗ, ತಾವು ಅನುಭವಿಸಲೆಂದೇ ಇರುವ ಕೆಳಜಾತಿಯ ಸ್ತ್ರೀಯರು ಎಂಬ ಧೋರಣೆ ಕುಲಕರ್ಣಿಯಂತಹ ಜಮೀನ್ದಾರಿ ರೋಗಗ್ರಸ್ತ ಮನಸ್ಸುಗಳದ್ದು ಎಂಬುದನ್ನು ತುಳಜಿ, ಗೇಣಿರೈತರ ಸಂದರ್ಭಗಳು ಅನಾವರಣಗೊಳಿಸಿವೆ. ಮಗನನ್ನು ಕರೆದುಕೊಂಡು ಹೋಗಲು ಬಂದ ಶ್ರೀನಿವಾಸನಾಯಕನಿಗೆ, "ಸಮಾಜ ಸೇವಾ ಮನುಷ್ಯಧರ್ಮ ಅಲ್ಲ?"[5] ಎಂದು ಮರು ಪ್ರಶ್ನಿಸಿ, ತನ್ನ ಮತ್ತು ತನ್ನ ತಂದೆಯ ಬದುಕಿನ ಗುರಿ, ಉದ್ದೇಶಗಳು ವಿಭಿನ್ನ ಎಂದು ಒಪ್ಪಿಕೊಳ್ಳುತ್ತಾನೆ. ಪ್ರಗತಿಪರ, ಸುಧಾರಣಾವಾದಿ ಸಿದ್ಧಾಂತಗಳು ನಾರಾಯಣ ಪಡೆದ ಇಂಗ್ಲೀಶ್ ಶಿಕ್ಷಣದ ಪರಿಣಾಮಗಳು ಎಂಬ ಅಂಶಕ್ಕೆ ಕಾದಂಬರಿ ಒತ್ತುಕೊಟ್ಟಿದೆ. ಊಳಿಗಮಾನ್ಯ ವ್ಯವಸ್ಥೆಗೆ ಎದುರಾಗಿ, ಆಧುನೀಕರಣ, ಉದ್ಯೋಗ, ಶಿಕ್ಷಣ ಮುಂತಾದವು ಗ್ರಾಮೀಣ ಮೌಢ್ಯ, ಸ್ತ್ರೀ-ಶೋಷಣೆಯಂತಹ ಸಮಸ್ಯೆಗಳಿಗೆ ಪರಿಹಾರಗಳು ಎಂಬ ಕಾದಂಬರಿಯ ನಿಲುವನ್ನು ಅಧ್ಯಯನ ಒಪ್ಪಿಕೊಳ್ಳುತ್ತದೆ.

## ಬ. ಬೌದ್ಧಿಕ ಮತ್ತು ಭಾವನಾತ್ಮಕ ಸಂಘರ್ಷ

ಗ್ರಾಮ/ನಗರ ನೆಲೆಗಳನ್ನು ನಿರಾಕರಿಸಿದ ವ್ಯಕ್ತಿಗಳು ಹೊಸ (ನಗರ/ಗ್ರಾಮ) ನೆಲೆಗಳಲ್ಲಿ ಬೇರುಬಿಡಲು ಯತ್ನಿಸುವಾಗ ಭೌತಿಕ (ದೈಹಿಕ) ಸಂಘರ್ಷಗಳೊಂದಿಗೆ ಬೌದ್ಧಿಕ, ಭಾವನಾತ್ಮಕ ಸಂಘರ್ಷವನ್ನೂ ಎದುರಿಸುತ್ತಾರೆ. ಆಕ್ರಮಣಶೀಲತೆ ಮತ್ತು ಹಿಂಸಾ ಪ್ರವೃತ್ತಿಗಳು ಮನುಷ್ಯರಲ್ಲಿ ಆನುವಂಶಿಕವಾಗಿ, ಪ್ರವೃತ್ತಿಜನ್ಯವಾಗಿ ಬಂದ ಗುಣಗಳೆಂದು ಲಾರೆಂಝ್ ಅವರು ಹೇಳುತ್ತಾರೆ. ಅವರ ಪ್ರಕಾರ ಒಂದು ಪ್ರಾಣಿಜಾತಿಯ ಉಳಿಯುವಿಕೆಗೆ ಮತ್ತು ಬೆಳೆಯುವಿಕೆಗೆ ಅದರ ಆಕ್ರಮಣಶೀಲತೆಯು ಆಧಾರವಾಗಿದೆ. ಪ್ರೀತಿ ಮತ್ತು ದ್ವೇಷಗಳೆರಡೂ ಒಂದೇ ನಾಣ್ಯದ ಎರಡು ಮುಖಗಳು. ಒಂದು ಇಲ್ಲದೆ ಇನ್ನೊಂದು ಇರಲು ಸಾಧ್ಯವಿಲ್ಲ. ಕಾಡಿನಲ್ಲಿ ಬೇಟೆಯಾಡುವಾಗ ಪ್ರಾಣಿಗಳು ತೋರಿಸಿದ, ತೋರಿಸುತ್ತಿರುವ ಕ್ರೌರ್ಯವನ್ನೇ ಬುದ್ಧಿವಂತ ಮನುಷ್ಯ ಇತರರೊಂದಿಗಿನ ವ್ಯವಹಾರದಲ್ಲಿಯೂ ತೋರಿಸುತ್ತಾನೆ. ಇದು ಸಹಜ, ಅನಿವಾರ್ಯ ಮತ್ತು ಅಪೇಕ್ಷಣೀಯವೂ ಆಗಿದೆ.

ಯಶವಂತ ಚಿತ್ತಾಲ ಅವರ 'ಶಿಕಾರಿ' ಕಾದಂಬರಿಯಲ್ಲಿನ ಶ್ರೀನಿವಾಸ ಮತ್ತು ನಾಗಪ್ಪರ ಸಂಘರ್ಷ ಮನುಷ್ಯನ ಬುದ್ಧಿವಂತಿಕೆ, ವಿಚಾರಶಕ್ತಿಯನ್ನು ಆಯುಧಗಳಾಗಿ ಉಪಯೋಗಿಸಿ ಹೋರಾಡಿದ ಸಂದರ್ಭವಾಗಿದೆ. ಶಿಕಾರಿ ಕಾದಂಬರಿಯ ಹೆಸರಿನಲ್ಲೇ ನಿಷ್ಕಾರಣವಾಗಿ ಅಥವಾ ಸ್ವಾರ್ಥದಿಂದ ಪ್ರೇರಿತವಾಗಿ

ಆಡುವ ಬೇಟೆಯ ಚಿತ್ರಣ, ಕ್ರೌರ್ಯ ಅಡಗಿದೆ. ಇಲ್ಲಿ ಮುಖಾಮುಖಿಯಾಗುವ ಪಾತ್ರಗಳು ಎರಡು, ನಾಗಪ್ಪ ಮತ್ತು ಶ್ರೀನಿವಾಸ. ಆದರೆ ಇವೆರಡೂ ಪಾತ್ರಗಳ ಮೂಲ ನೆಲೆ ಉತ್ತರ ಕನ್ನಡ ಜಿಲ್ಲೆಯ ಎರಡು ಗ್ರಾಮಗಳಾಗಿದ್ದು (ಹನೇಹಳ್ಳಿ ಮತ್ತು ನಾಡುಮಾಸ್ಕೇರಿ), ಇಂದಿನ ನಗರ ಬದುಕಿನ ಪ್ರತಿಷ್ಠಿತ ಅಂತಸ್ತು, ಅಧಿಕಾರದೊಂದಿಗೆ ಈ ಗ್ರಾಮೀಣತೆ ಬೆಸೆದುಕೊಂಡಿದೆ. ಶ್ರೀನಿವಾಸ ತನ್ನ ವ್ಯವಹಾರ ಚತುರತೆಯಿಂದ ಹಾಗೂ ಹೆಂಡತಿಯ ತೌರಿನಿಂದ ದೊರೆತ ಆರ್ಥಿಕ ಬಲದಿಂದ ಪ್ರವರ್ಧಮಾನಕ್ಕೆ ಬಂದು ಸಾರಸ್ವತ ಸಮಾಜದಲ್ಲಿ ಒಂದು ವರ್ಚಸ್ಸು, ಪ್ರತಿಷ್ಠೆಗಳನ್ನು ಬೆಳೆಸಿಕೊಂಡವನು. ಅವನ ವರ್ಚಸ್ಸು, ಪ್ರಭಾವಗಳು ನಗರಪಾಲಿಕೆ ಚುನಾವಣೆಯಲ್ಲಿ ಸ್ಪರ್ಧಿಸುವವರೆಗೂ, ಮಠಗಳ ಮಾನ್ಯತೆ ಪಡೆಯುವವರೆಗೂ ಹಬ್ಬಿದೆ. ಶ್ರೀನಿವಾಸನ ವ್ಯಕ್ತಿತ್ವದ ಮೂರ್ತಿ/ಛಾಯೆ (Image) ಎಂತಾದ್ದು ಎಂಬುದನ್ನು ಈ ಮಾತುಗಳು ತೋರಿಸುತ್ತವೆ.

> '...ಈಗ ಕೆಂಪು ಸೀರೆ ಸುತ್ತಿಕೊಂಡ ನಿರ್ಜೀವ ಮುದ್ದೆಯಾಗಿಯೂ ಒಂದು ಕಾಲಕ್ಕೆ ಜದ್ದಿನ ಪ್ರತಿರೂಪವಾದ ಪದ್ಮಕ್ಕನ ಮಗನಾಗಿ ಶೋಭಿಸುವ ಛಲದ ಶ್ರೀನಿವಾಸ. ತಾನೆಂದೂ ಬಡತನವನ್ನು ನೋಡಿಯೇ ಇರಲಿಲ್ಲ ಎಂಬಂತೆ ಈಗ ಬದುಕುತ್ತಾ ಆಗಿನದೆಲ್ಲವನ್ನೂ ಮರೆಯಲು ಹೋರಾಟ ನಡೆಸಿದ ಶ್ರೀನಿವಾಸ, ಅಪ್ಪನ ಶ್ರಾದ್ಧಕ್ಕೆ ಕುಳಿತಾಗ ಅಪ್ಪನಿಗೆ ರಾತ್ರಿ ನಿದ್ದೆ ಬೀಳದೆ ಬೇಸರಕ್ಕೆ ಹುಟ್ಟಿದ ಮಕ್ಕಳಲ್ಲವೆ ನಾವು? ಎಂದು ಪುರೋಹಿತರ ಜೊತೆ ಮಾತನಾಡಿದ ಹಲ್ಕಟ್ ಬಾಯಿ ಶ್ರೀನಿವಾಸ! ತನ್ನದರ ಪ್ರಭಾವ ಪರೀಕ್ಷಿಸಲು ನೇತ್ರಾವತಿಯನ್ನು ಬಲಿಕೊಟ್ಟ ಶ್ರೀನಿವಾಸ, ಶ್ರೀಮಂತಿಕೆಯ ನಿಚ್ಚಣಿಕೆಯನ್ನೇರಲೆಂದೇ ಕೌಮಾರ್ಯ ಕಳೆದುಕೊಂಡವಳನ್ನು ಮದುವೆಯಾಗಿಯೂ ಹೀರೋ ಆಗಿ ಮೆರೆಯುವ ಶ್ರೀನಿವಾಸ, ಫಿರೋಜನೊಡನೆ ಕೂಡಿ ಪಿತೂರಿಯಾದ ಶ್ರೀನಿವಾಸ, ನನ್ನನ್ನು ಶಿಕಾರಿ ಮಾಡುತ್ತಿದ್ದ ಶ್ರೀನಿವಾಸ, ಸಾರಸ್ವತ ಸಮಾಜದ ಒಬ್ಬ ಗಣ್ಯವ್ಯಕ್ತಿಯಾಗಲು ಹೊರಟ ಶ್ರೀನಿವಾಸ, ರಾತ್ರೋರಾತ್ರಿ ತನ್ನ ಹಿಂದಿನದೆಲ್ಲವನ್ನೂ ಮರೆಯಲು ಹೊರಟ ಶ್ರೀನಿವಾಸ, ಮರೆಸಲು ಹೊರಟ ಶ್ರೀನಿವಾಸ,; ತನ್ನ ಬಗ್ಗೆ ಕಾದಂಬರಿ ಬರೀಬೇಡ ಎಂದ ಶ್ರೀನಿವಾಸ, ಕಾಲು ಹಿಡಿದ ಶ್ರೀನಿವಾಸ, ಬೇಕಾದ್ದನ್ನು ಕೇಳು ಎಂದ ಶ್ರೀನಿವಾಸ... ..ಬೇಕಾದರೆ ಹಣ, ..ಬೇಕಾದರೆ ಹೆಂಡತಿ ಕಾರದ.'

ಕಾದಂಬರಿಯಲ್ಲಿ ದೊರೆಯುವ ಶ್ರೀನಿವಾಸನ ಚಿತ್ರ ಋಣಾತ್ಮಕ, ಜೀವವಿರೋಧಿ ಗುಣಗಳನ್ನು ಹೊಂದಿದೆ. ಆದರೆ ನಾಗಪ್ಪನ ವ್ಯಕ್ತಿತ್ವ (Image) ಇದಕ್ಕೆ ತದ್ವಿರುದ್ಧವಾದದ್ದು. ಬುದ್ಧಿವಂತಿಕೆಯ ಬಲದಿಂದಲೇ ಬೆಳೆದು ಶೋಭಿಸುತ್ತಿರುವ Image ಅವನದು. ಸಾಮಾನ್ಯವಾದ ಜೀವನವಿವೇಕದ ಜೊತೆಗೆ ತನ್ನ ವೃತ್ತಿಗೆ ಸಂಬಂಧಿಸಿದ ವಿದ್ವತ್ತು, ಪ್ರಾವಿಣ್ಯತೆಗಳೂ ಅವನಲ್ಲಿವೆ. ಜೊತೆಗೆ ನಾಗಪ್ಪನೊಳಗೆ ಒಬ್ಬ Creative Artist ಇದ್ದಾನೆ. ಅವನು ಪ್ರಸಿದ್ಧ ಕಥೆಗಾರನೂ ಹೌದು. ಕೆಲವು ಮೌಲ್ಯಗಳಲ್ಲಿ ನಂಬಿಕೆಯುಳ್ಳ ನಾಗಪ್ಪ ಉತ್ಕ್ರಾಂತಿ ಕ್ರಮದಲ್ಲಿ ಮಾನವನ ವಿಕಾಸ ಗುರುತಿಸುವ, ಮಾನವನ ಮೂಲ ರೂಪಗಳನ್ನು ಶೋಧಿಸುವ ವೈಚಾರಿಕ ವ್ಯಕ್ತಿ. ಅಷ್ಟೇ ಅಲ್ಲ Over Sensitive, Sentimental ಕೂಡ. ಇವೆಲ್ಲವುಗಳೊಂದಿಗೆ ಅವನ ವ್ಯಕ್ತಿತ್ವದಲ್ಲಿ ಹನೇಹಳ್ಳಿಯ ಕೋಳಿಗಿರಿಯಣ್ಣ(ಗ್ರಾಮ)ನ ಕೇರಿಯ ಬಾಲಕ ನಾಗಪ್ಪನ ಮುಗ್ಧತೆಯ ಒಂದು ಅಂಶವೂ ಇದೆ. ಇದನ್ನು ಮುಂದಿನ ಉಲ್ಲೇಖದಲ್ಲಿ ಗಮನಿಸಬಹುದು.

> ಎಲ್ಲವನ್ನೂ ಅಲ್ಲಿಂದಲೆ ಆರಂಭಿಸಬೇಕು. ಬೇರುಗಳಿಂದ, ಬೇರೂರಿದ ಮಣ್ಣಿನಿಂದ. ಚಿಕ್ಕಂದಿನ ಗೆಳೆಯರಿಂದ, ಗೆಳತಿಯರಿಂದ. ನನ್ನ ಆರೋಗ್ಯದ ಆಕರಗಳಾದ ಗಿರಿಯಣ್ಣ, ಹೊನ್ನಪ್ಪ, ಶೇಖ ಫರೀದ, ಉತ್ತಮಿ, ಪಾರು, ದಾಮು, ಎಂಕು, ಮುರ್ಕುಂಡಿ, ದಿನ್ನಿ, ಬಸ್ತ್ಯಾಂವ್, ಕಾಣೀಗೌಡರಿಂದ. ಫಿರೋಜ್, ಶ್ರೀನಿವಾಸರಿಂದ ದೂರವಾದ ಹಳ್ಳಿಯ ಕೊಂಪೆಯಿಂದ. (ಪುಟ ೨೬) ಕೆಳಗಡೆ ಒಂದೆಡೆಯಲ್ಲಿ ನಾಯಿ, ಬಹುಶಃ ಭೈಯಾನದಿರಬೇಕು. ಅದೂ ಮೈಮುದುಡಿ ನಿದ್ದೆ ಹೋಗಿತ್ತು. ಆ ದೃಶ್ಯ ನೋಡಿ ನಾಗಪ್ಪನಿಗೆ ಅಸೂಯೆಯಾಯಿತು, ಹಾಗೆ ನಿದ್ದೆ ಮಾಡಲು ಬೇಕಾದ ಮನಸ್ಸು ತನಗೂ ಇದ್ದಿದ್ದರೆ! ಶಾಲೆ, ಕಾಲೇಜುಗಳಿಗೆ ಹೋಗಿರದೇ ಹನೇಹಳ್ಳಿಯಲ್ಲಿ ಗದ್ದೆ ಉಳುತ್ತ ಇದ್ದು ಬಿಟ್ಟಿದ್ದರೆ, . .ಗಿರಿಯಣ್ಣನ ಮಗಳಂತಹವಳನ್ನು ಇಲ್ಲ, ಮೈಯಲ್ಲಿ ಸೊಕ್ಕೇರಿದಾಗ ಬಿಡೆ ಬಿಟ್ಟು ಗಂಡು ಮೈಯನ್ನು ನೇರವಾಗಿ ಹತ್ತಿರಕ್ಕೆ ಕರೆಯುವ ಎದೆಗಾರಿಕೆಯ ಜಾನಕಿಯಂತವಳನ್ನು ಮದುವೆಯಾಗಿ ಅಪ್ಪನ ಚಕೊಂಪೆಯನ್ನೇ ಮುಂದುವರಿಸಿಕೊಂಡು ಹೋಗಿದ್ದರೆ, (ಪುಟ ೧೯೦) ನಾಗಪ್ಪ ತನ್ನ ಮಾತುಗಳನ್ನು ತಾನೇ ನಂಬದಾದ. . .ನಾಗಪ್ಪಾ. . .ನಾಗಪ್ಪಾss . ಸುಳ್ಳಾಡಿದೆಯೋ . . ನಾಗಪ್ಪಾss . .ಕೋಳಿಗಿರಿಯಣ್ಣನ ಕೇರಿಯ . .ನಾಗಪ್ಪಾss . . .ಕೋಳಿಯ ಪುಚ್ಚದಷ್ಟು ಮೆತ್ತಗಿನ ನಾಗಪ್ಪಾss ಜಾಣ ಆದಿಯೋ . .ನಾಗಪ್ಪಾss . (ಪುಟ ೨೫೮)

ತನಗೆ ನೋವಾದಾಗ, ಸಂತೋಷವಾದಾಗ, ಮನಸ್ಸು ಖಿನ್ನತೆಗೆ ಸಿಲುಕಿದಾಗ, ಯುದ್ಧದಲ್ಲಿ ತನಗೆ ಗೆಲುವಾದಾಗ ನಾಗಪ್ಪ ಸ್ಪಷ್ಟಪಡಿಸುವ ಅನಿಸಿಕೆಗಳಲ್ಲಿ ತನ್ನ ಗ್ರಾಮೀಣತೆ, ಅಲ್ಲಿಯ ತನ್ನ ಬಾಲ್ಯದ ಅನುಭವಗಳು, ನೆನಪುಗಳು ಹಾಸುಹೊಕ್ಕಾಗಿರುವುದನ್ನು ಕಾಣುತ್ತೇವೆ.

ನಾಗಪ್ಪ, ಶ್ರೀನಿವಾಸರ ಗ್ರಾಮೀಣ ಹಿನ್ನೆಲೆ, ಜಾತಿಯ ಹಿನ್ನಲೆ, ಬಡತನದಲ್ಲಿ ಇಬ್ಬರೂ ಪಟ್ಟ ಬವಣೆ, ಅದನ್ನ ಗೆಲ್ಲಲು, ಮರೆಯಲು ಮಾಡಿದ ಹೋರಾಟ ಇವುಗಳಲ್ಲಿ ಸಾಮ್ಯತೆಯಿದೆ. ಒಂದೇ ಹಿನ್ನೆಲೆಯಿಂದ ಬಂದ ಇಬ್ಬರು ವ್ಯಕ್ತಿಗಳು ಆಪ್ತವಾಗಿದ್ದರೆ ಅವರ ವ್ಯಕ್ತಿತ್ವದ ಬೆಳವಣಿಗೆಯ ಹಾದಿ ಯಾವಾಗಲೂ ವಿಚಿತ್ರ ರೀತಿಯ ಟೆನ್‌ಶನ್‌ನಿಂದ ಕೂಡಿರುತ್ತದೆ. ಒಬ್ಬರ ಜೀವನದ ಆಯ್ಕೆ ಇನ್ನೊಬ್ಬರ ಜೀವನದಿಂದ ಪ್ರಭಾವಿತವಾಗಿರುತ್ತದೆ. ಪ್ರತಿಯೊಂದು ಆಪ್ತ ಸಂಬಂಧಗಳಲ್ಲೂ ಇರುವ ಪರಸ್ಪರ ಅನುಮಾನ, ಶೋಷಣೆ, ಮೆಚ್ಚುಗೆ, ಅಸೂಯೆ, ಪರಸ್ಪರ ಮಾನ್ಯವಾಗಬೇಕೆಂಬ ಬಯಕೆ ಈ ಸಂಬಂಧಗಳನ್ನು ಮತ್ತಷ್ಟು ಜಟಿಲಗೊಳಿಸುತ್ತವೆ. ಶಿಕಾರಿಯ ನಾಗಪ್ಪ, ಶ್ರೀನಿವಾಸರು ಹೋರಾಡುತ್ತಿದ್ದುದು ತಮ್ಮ ಜಾತಿಯರ ನಡುವೆ ಸಾಮಾಜಿಕ ಪ್ರತಿಷ್ಠೆಗಾಗಿ, ಒಬ್ಬರ ಭೂತ(ಗತಕಾಲ)ವನ್ನು ಇನ್ನೊಬ್ಬರು ಅಗೆದು ಸಮಾಜಕ್ಕೆ ತೋರಿಸಲು. ಇದಕ್ಕಾಗಿ ನಾಗಪ್ಪ ಸೃಜನಶೀಲ ಸಾಹಿತ್ಯವನ್ನು ಬಳಸಿಕೊಂಡರೆ, ಶ್ರೀನಿವಾಸ ತನ್ನ ಜಾತಿಯ ವ್ಯಕ್ತಿಗಳನ್ನು ಮತ್ತು ನಾಗಪ್ಪನ ಕಂಪನಿಯ ಮೇಲಾಧಿಕಾರಿಗಳನ್ನು ಬಳಸಿಕೊಳ್ಳುತ್ತಾನೆ. ನಾಗಪ್ಪ, ಶ್ರೀನಿವಾಸರಿಬ್ಬರ ಮೇಲೂ ಬಾಲ್ಯ ಜೀವನದ, ಭೂತಕಾಲದ ಪ್ರಭಾವ ಎಷ್ಟಿದೆಯೆಂದರೆ ಪರಸ್ಪರ ಸದೆಬಡಿಯಲು ಪರಸ್ಪರ ಬಾಲ್ಯ ಜೀವನವನ್ನು, ಆ ಕಾಲದಲ್ಲಿ ಘಟಿಸಿದ್ದ ಘಟನೆಗಳನ್ನು, ಯೌವನಕ್ಕೆ ಕಾಲಿಡುವಾಗ ಹುಟ್ಟಿದ ಲೈಂಗಿಕ ಆತಂಕಗಳನ್ನು ಇಬ್ಬರೂ ಉಪಯೋಗಿಸಿಕೊಳ್ಳುತ್ತಾರೆ. ಶ್ರೀನಿವಾಸ ತನ್ನ ನೆರವಿಗೆ ತಾನಿದ್ದ ಸ್ಥಾನ ಮಾನವನ್ನು ಚಾಣಾಕ್ಷತೆಯಿಂದ ಉಪಯೋಗಿಸಿದರೆ, ನಾಗಪ್ಪ ತನ್ನ ಪ್ರತಿಭೆ, ಮಾನವ ಸ್ವಭಾವದ ಬಗೆಗೆ ತನಗಿದ್ದ ಜ್ಞಾನದ ನೆರವನ್ನು ಪಡೆದುಕೊಳ್ಳುತ್ತಾನೆ. ಗ್ರಾಮೀಣ ಪರಿಸರದಿಂದ ನಗರಕ್ಕೆ ಬಂದು, ಸ್ವಭಾವತಃ ಮುಖಾಮುಖಿಯಾಗಿ ಹೋರಾಟ ನಡೆಸುವ ಈ ಎರಡು ಪಾತ್ರಗಳ ಸೋಲು, ಗೆಲುವುಗಳ ಹಿಂದೆ ಅವುಗಳ ಮಾನಸಿಕ ಸಿದ್ಧತೆ, ವೇದಿಕೆ ರಚನೆ, ಶಾಬ್ದಿಕ ಯುದ್ಧತಯಾರಿ, ಅದು ಬಳಕೆಯಾದ ರೀತಿ, ಭೂತಗಳ ಅನಾವರಣ ಇವೆಲ್ಲವೂ ಮರಳಿ ಗ್ರಾಮೀಣತೆಯ ಹತ್ತಿರವೇ ತಂದು ನಿಲ್ಲಿಸುವುದನ್ನು ಗಮನಿಸಿದರೆ, ವ್ಯಕ್ತಿಗಳು ಗ್ರಾಮದಲ್ಲಿದ್ದರೂ, ನಗರದಲ್ಲಿದ್ದರೂ ಅವರ ಮೂಲಭೂತ ಗುಣಗಳು ಒಂದೇ ರೀತಿಯವು ಎಂಬುದನ್ನು ಅಧ್ಯಯನ ಕಂಡುಕೊಳ್ಳುತ್ತದೆ. ಉದಾಹರಣೆಗೆ ಶ್ರೀನಿವಾಸನ ಮನೆಯ ಕಾಂಪೌಂಡಿನಲ್ಲಿ ನಿಂತ ನಾಗಪ್ಪ ಅಲ್ಲಿ ಬೆಳೆಸಿದ ಗಿಡ, ಮರಗಳನ್ನು ನೋಡಿ ಬಯ್ಯುವ ರೀತಿ ಇದು,

> 'ಹೋದಲ್ಲೆಲ್ಲ ಹಳ್ಳಿಯನ್ನೇ ಎಬ್ಬಿಸಿ ನಿಲ್ಲಿಸುತ್ತಾನೆ ಸೂಳೆಮಗ! ದಿನವೂ ಪ್ರೆಸ್ಸಿಗೆ ಹೋಗುವ ಮೊದಲು ಗಂಜೀ ಊಟ ಮಾಡಿಯೇ ಹೋಗುತ್ತೇನೆಂದು ಅಭಿಮಾನದಿಂದಲೇ ಹೇಳುತ್ತಾನೆ ಮತ್ತೆ!' ನಾಗಪ್ಪ ತನ್ನ ದಡ್ಡತನವನ್ನು ಶಪಿಸಿಕೊಂಡ. 'ಅಡ್ಡಿಯಿಲ್ಲ, ನಾಡು ಮಾಸ್ತೇರಿಯ ಶ್ರೀನಿವಾಸ ಇಪ್ಪತ್ತ ವರ್ಷಗಳ ಹಿಂದಿನ ಆ ಘಟನೆಯನ್ನು ನೀನು ಇನ್ನೂ ಮರೆತಿಲ್ಲ ಎಂಬುದನ್ನು ಬಲ್ಲೆ. ಅದರಿಂದಾಗಿ ನೀನು ನನ್ನ ಬಗ್ಗೆ ತಳೆಯುತ್ತಾ ಬಂದ ದ್ವೇಷವನ್ನು ಮರೆತಿಲ್ಲವೋ, ಈ ಕೋಳಿ ಗಿರಿಯಣ್ಣನ ಕೇರಿಯ ಭುಪ್ ನಾಗಪ್ಪನೂ ಮರೆತಿಲ್ಲ. ಕ್ಷಮಿಸಿಯೂ ಇಲ್ಲ'
> (ಪುಟ ೬೦, ೬೧)

ನಾಗಪ್ಪನ ಈ ಮಾತುಗಳು ಮನುಷ್ಯರು ಗ್ರಾಮದಲ್ಲಿರಲಿ, ನಗರದಲ್ಲಿರಲಿ ಗೆಲುವು/ಸೋಲಿನಲ್ಲಿಯೂ ಜೀವನ ಪ್ರೀತಿಯನ್ನು ಬಯಸುತ್ತಾರೆ ಎಂಬುದಕ್ಕೆ ಪುರಾವೆಯಾಗಿವೆ.

ಭಾಷೆಯನ್ನು ನಿರ್ವಂಚನೆಯಿಂದ ಪ್ರೀತಿಸುವ ಗ್ರಾಮೀಣ ವ್ಯಕ್ತಿತ್ವ(ವಿದ್ಯಾವಂತರು)ಗಳು ಅದನ್ನು ವ್ಯಾಪಾರಕ್ಕೆ, ರಾಜಕೀಯ ಲಾಭಕ್ಕೆ ಮತ್ತು ಉದರ ಪೋಷಣೆಗೆ ಉಪಯೋಗಿಸಿಕೊಳ್ಳುವ ಸಮುದಾಯದ ಮಧ್ಯೆ ಭಾವನಾತ್ಮಕವಾಗಿ ತೊಳಲಾಡುವ ಪರಿಯನ್ನು ಕುಂದರನಾಡ ಪಾಟೀಲ ಅವರ 'ಉಲ್ಲಂಘನೆ' ಕಾದಂಬರಿಯಲ್ಲಿ ಕಾಣಬಹುದು. ಗ್ರಾಮದಿಂದ ಹೈಸ್ಕೂಲು ಓದಲು ಬೆಳಗಾವಿಗೆ ಬಂದ ಮುಗ್ಧ ಹುಡುಗ ಚನಬಸುವ ಕನ್ನಡ, ಮರಾಠಿ ಭಾಷಾ ಹೋರಾಟವನ್ನು ಹತ್ತಿರದಿಂದ, ಜನತೆಯ ಅಂತರಾಳದ ಒಳಹೊಕ್ಕು ನೋಡುತ್ತ ದಿಗ್ಮೂಢನಾಗುವ ಪಾತ್ರವಾಗಿದ್ದಾನೆ. ಅವನ ಕಣ್ಣುಗಳು ಇಡೀ ಸಮುದಾಯದ ಅಳಲನ್ನು ಗ್ರಹಿಸಿ ಅವುಗಳ ಬೇಕು ಬೇಡಗಳನ್ನು ಅರಿಯುವುದನ್ನು ಅಧ್ಯಯನ ಗುರುತಿಸುತ್ತದೆ. ಭಾಷಾಂಧರ ಕೈಯಲ್ಲಿ ಹೊತ್ತಿ ಉರಿಯುತ್ತಿರುವ ಬೆಳಗಾವಿಯ ಒಡಲಲ್ಲಿ ಬದುಕಿದ ಬಡ ಜನತೆಗೆ ತಮ್ಮ ಬದುಕಿನ (ಹೊಟ್ಟೆಪಾಡು) ಚಿಂತೆ ಕಾಡುವುದನ್ನು ಅವನ ಕಣ್ಣುಗಳು ಮೊದಲು ಗುರುತಿಸುತ್ತವೆ.

'ಯಲ್ಲೂತಾಯಿ ಮಾಡುವ ಕೆಲಸವನ್ನೆಲ್ಲ ಬಿಟ್ಟು ಸೀರೆಗೆ ಕೈ ಒರೆಸಿಕೊಳ್ಳುತ್ತ ಆತನ ಎದುರಿಗೆ ನಿಂತಳು. ಭಿಕಾಜಿ, 'ಸಾಹೇಬ ಖರೇ ಏನ್ರಿ? ಮರಾಠಿ ಮಾತಾಡೋರನ್ನ ಹೊರಗ ಹಾಕತಾರಂತ, ಹೋಗದಿದ್ದರ ಗುಂಡು ಹಾಕತಾರಂತ, ಮರಾಠಿ ಶಾಳೆ ಬಂದ ಮಾಡತಾರಂತ ಇದೆಲ್ಲಾ ಖರೆ ಏನ್ರಿ ಸಾಹೇಬ' ಕೇಳುತ್ತಾನೆ. 'ಅದೆಲ್ಲಾ ಸುಳ್ಳು, ಬೆಳಗಾವಿ ಇದ್ದಲ್ಲೆ ಇರತೈತಿ ಎಲ್ಲಿಗೂ ಹೋಗುದುಲ್ಲಾ' ಅಂತ ಚನಬಸು ಆತನ ಭಯ ನಿವಾರಿಸಲು ಪ್ರಯತ್ನಿಸಿದ. 'ದುಡುದು ತಿನ್ನೋದಕ್ಕೂ ಠಿಕಾಣಿ ಇಲ್ಲದಂಗ ಮಾಡಿದ ವಿಠೋಬಾ' ಅಂತ ಭಿಕಾಜಿ ನಿಟ್ಟುಸಿರು ಬಿಟ್ಟ.'"

ಇಲ್ಲಿ ಭಿಕಾಜಿ ಹೇಳುವ (ಕನವರಿಸುವ) 'ದುಡುದು ತಿನ್ನೋದಕ್ಕೂ ಠಿಕಾಣಿ ಇಲ್ಲದಂಗ ಮಾಡಿದ ವಿಠೋಬಾ' ಎಂಬ ಮಾತು ಜನಸಾಮಾನ್ಯರ ದೈನಂದಿನ ನಿರೀಕ್ಷೆ ಭಾಷೆಯಾಗಿರದೇ ದುಡಿದುಣ್ಣುವ ಕಾಯಕವೆಂಬುದರಲ್ಲಿ ಎರಡು ಮಾತಿಲ್ಲ. ಭಾಷೆ ಜನಸಾಮಾನ್ಯರಿಗೆ ಭಾವನಾತ್ಮಕ ನೆಲೆಯಾಗಿ ನಿಲ್ಲುತ್ತದೆಯಾ ಎಂಬ ಪ್ರಶ್ನೆ ಅಧ್ಯಯನದ ಮುಂದಿದೆ. ಮುಂಬಯಿ ಕರ್ನಾಟಕದ ಗಡಿಭಾಗವನ್ನು ವೀಕ್ಷಿಸಿದಾಗ ದುಡಿದುಣ್ಣುವ ಸಮುದಾಯಕ್ಕೆ ಭಾಷೆ (ಕನ್ನಡ, ಮರಾಠಿ, ಕೊಂಕಣಿ) ಒಂದು ಸಮಸ್ಯೆಯೆ ಅಲ್ಲ ಎಂಬುದು ಕಂಡುಬರುತ್ತದೆ. ಹಾಗಾದರೆ ಭಾಷಾ ಸಮಸ್ಯೆ ಯಾವ ವರ್ಗದವರ ಸೃಷ್ಟಿ ಎಂಬ ಪ್ರಶ್ನೆಯೂ ಅಷ್ಟೇ ಮುಖ್ಯವಾಗಿದೆ. ಇದು ಉಳ್ಳವರ ಸೃಷ್ಟಿ(?)ಯಾಗಿದೆ ಎಂಬ ತಿರ್ಮಾನಕ್ಕೆ ಬರಲು ಅಧ್ಯಯನ ಅನೇಕ ನಿದರ್ಶನಗಳನ್ನು ಕಾದಂಬರಿಯಲ್ಲಿ ಗುರುತಿಸುತ್ತದೆ. ಕಥನದಲ್ಲಿ, ಈ ಭಾಷಾ ದ್ವೇಷದ ದಳ್ಳುರಿ ರಾಜಕಾರಣಿಗಳ ಸಂಚಿನಂತೆ, ಗ್ರಾಮೀಣ ಪ್ರದೇಶದ ಜನಸಾಮಾನ್ಯರಿಗೂ ತಾಗಿ ಉರಿಯಬಯಸುತ್ತದೆಯಾದರೂ ಅದರ ಝಳ ಅಲ್ಲಿ ಪ್ರಖರವಾಗುವುದಿಲ್ಲ.

'ಬೆಳಗಾವಿ ಮಹಾರಾಷ್ಟಕ್ಕೆ ಹೋಗ್ಲಿ, ಕರ್ನಾಟಕಕ್ಕೆ ಹೋಗಲಿ ಹಿಂದುಸ್ತಾನದೊಳಗ ಇರ್ತದಲ್ಲ. ಮರಾಠಿಗರು, ಕನ್ನಡಿಗರು ತಂಟೆ ಮಾಡಿ ಹಿಂದುಸ್ತಾನನ ಪಾಕಿಸ್ತಾನ ಮಾಡದಿರಲಿ ಅಂತ ದೇವರನ್ನು ಬೇಡಿಕೊತೀನಿ' ಎಂದು ಹಿಂಗೂರಾನಿ (ವ್ಯಾಪಾರಿ) ಆಶಿಸುತ್ತಾನೆ. 'ಅದೆಲ್ಲ ಉಸಾಬರಿ ನಮಗ್ಯಾಕ ಬೇಕರಿ. ಕೊಳ್ಳಾಗ ಬೋಡ ಹಾಕಿಕೊಂಡ ಜನಾ ಮಾಡಲೆಲ್ಲಾ' ಅಂತ ಉಪೇಕ್ಷೆಯಿಂದ ಹಾರ್ವನಹಳ್ಳಿ ಇನಾಮದಾರ ಹೇಳುತ್ತಾನೆ. ಇದು ಹಳ್ಳಿಯ ಜನತೆಯ, ನಗರದ ಶ್ರಮಜೀವಿಗಳ ಒಟ್ಟಾಭಿಪ್ರಾಯವಾಗಿದ್ದು ಈ ವಿಷಯದಲ್ಲಿ ಇವರಿಬ್ಬರಿಗೂ ಯಾವುದೇ ವೈಚಾರಿಕ ಭಿನ್ನತೆಯಿದ್ದಂತೆ ತೋರುವುದಿಲ್ಲ. ಆದರೆ ರಾಜಕಾರಣಿಗಳ ಆದೇಶದಂತೆ ದಾನಪ್ಪಗೌಡ ತನ್ನ ಹಳ್ಳಿಯಿಂದ ಹಿಂಡು ಹಿಂಡು ಜನರನ್ನು ಬೆಳಗಾವಿಗೆ ಕರೆತಂದು ಫಜಲಾಲಿ ಆಯೋಗದ ಮುಂದೆ ನಿಲ್ಲಿಸುತ್ತಾನೆ. ಕರ್ನಾಟಕ ರಾಜಕಾರಣಿಗಳು ಕೆಲಸವಾದ ನಂತರ ತಿರುಗಿಯೂ ನೋಡುವುದಿಲ್ಲ, ಗೌಡ ಅವರ ಊಟ, ವಸತಿ ಖರ್ಚಿಗೆ ಭದ್ರಶೆಟ್ಟರ ಹತ್ತಿರ ಸಾಲ ಮಾಡುತ್ತಾನೆ. ರಾಜಕೀಯ ನಾಯಕರಾದ ಚಂದೂ ಮಾಸ್ತರಂತಹವರ ಮಾತು ಕೇಳಿ ಬೆಳಗಾವಿ ರಸ್ತೆ ತುಳಿದ ಹಳ್ಳಿಗರಿಗೆ, ಇತರರು ಉಗುಳಿದ ಅಡಿಕೆ, ಎಲೆ ಉಗುಳು ಕಾಲಿಗೆ ಅಂಟುವುದು, ಭಾಷಾ ಕಲಹದ ಕಲ್ಮಶ ಹಳ್ಳಿಗರಿಗೆ, ಶ್ರಮಜೀವಿಗೆ ಸೋಂಕುವುದು ಖಂಡಿತ ಎಂಬುದು ಈ ಸಂದರ್ಭದ ವ್ಯಂಗ್ಯವೆನಿಸಿದೆ. ರಾಜಕಾರಣಿಗಳು ಇದರ ಫಲಾನುಭವಿಗಳಾಗುವುದು ಎದ್ದು ಕಾಣುತ್ತದೆ. ಇಂತಹ ಬದಲಾದ ರಾಜಕೀಯ ಸಂದರ್ಭದಲ್ಲೂ ವ್ಯಾಪಾರಿಗಳು, ಅನೈತಿಕ ಕಾರ್ಯಗಳಿಂದ ದುಡ್ಡು ದುಡಿಯಲು ಮಾಡಿಕೊಂಡ ವ್ಯಾವಹಾರಿಕ ಒಪ್ಪಂದಗಳು, ಇಂತಹ ಭಾಷಾ ಆಂದೋಲನದಿಂದ ಪ್ರಭಾವಿತವಾಗುವುದಿಲ್ಲ ಎಂಬುದನ್ನು ಅಧ್ಯಯನ ಗುರುತಿಸುತ್ತದೆ.

ತನ್ನ ವೈಯಕ್ತಿಕವಾದ ಆಂತರಿಕ ಸಮಸ್ಯೆಗಳು ಬೆಳಗಾವಿಯ ಭಾಷಾ ಸಮಸ್ಯೆಗಳೊಂದಿಗೆ ಬೆರೆತು ಘಾಸಿಸುವ ದ್ವಂದ್ವ ಚನಬಸುವನನ್ನು ಕಾಡುತ್ತದೆ. ಜೊತೆಗೆ ಗ್ರಾಮೀಣ ಪ್ರತಿಭೆಯನ್ನು ನಗರ ತಂದು ನಿಲ್ಲಿಸಿದ್ದಾದರೂ ಎಲ್ಲಿಗೆ ಎಂಬ ಪ್ರಶ್ನೆ ಅಧ್ಯಯನದ ಮುಂದಿದೆ. ಬೆಂಗಳೂರಿನ ಬಾರ್‌ನಲ್ಲಿ ಸತ್ಯಕುಮಾರನ ಜೊತೆ ವಿಸ್ಕಿ ಕುಡಿಯುವಾಗ ತಾನು ಇತರರಿಗಿಂತ ಏಕೆ ಭಿನ್ನವಾದೆ ಎಂಬ ದ್ವಂದ್ವ ಚನಬಸುವನ್ನು ಕಾಡುವುದು ಪ್ರಮುಖವಾದ ಅಂಶ.

ಗುಟುಕು ಚೀಪಿ ಮತ್ತೆ ಆಲೋಚಿಸತೊಡಗಿದ. ತಾನೇಕೆ ಹಾಗೆ ಮಾಡಿದೆ? ಊರಲ್ಲಿ (ಗ್ರಾಮ) ಚಹಾದಂಗಡಿಗೆ ಹೋಗಲು ಸಂಕೋಚಪಡುತ್ತಿದ್ದ ತಾನು ಗೋವೆಯಲ್ಲಿ ದೇವಾನಂದನಂತೆ ಸ್ಟೈಲಾಗಿ ಕೌಂಟರಿನ ಹತ್ತಿರ ಗ್ಲಾಸ್ ಹಿಡಿದುಕೊಂಡು ಫೋನ್ ಮಾಡಿದ್ದು ನೆನಪಾದೊಡನೆ ನಗೆ ಬಂದಿತು. ಹೆಚ್ಚಿಗೆ ತುಟ್ಟಿಭತ್ಯೆ ಬೇಕೆಂದು ಸರ್ಕಾರಿ ನೌಕರರ ಸಂಪಿನಲ್ಲಿ ಭಾಗಿಯಾದ ಇನ್ನೊಂದು ಪ್ರಸಂಗದಲ್ಲಿ ಬಸ್ಸಿಗೆ ಬೆಂಕಿ ಹಚ್ಚಲು ಮುಂದಾಗಿದ್ದೆ (ಪುಟ

೧೮೧). ಬೇರರ್ ಬಂದು ಒಂದೊಂದಾಗಿ ಡಿಶ್ ಪ್ಲೇಟುಗಳನ್ನಿಡುತ್ತಿದ್ದಂತೆ ಕಂದಿದ ಹಂದಿ ಮಾಂಸದ ತುಣುಕೊಂದನ್ನು ಬಾಯಲ್ಲಿ ಹಾಕಿಕೊಂಡ. ಸತ್ಯಕುಮಾರ ಹೇಳಿದ್ದರಲ್ಲೇನೂ ಸುಳ್ಳಿಲ್ಲ. ಬಾಯಲ್ಲಿಟ್ಟೊಡನೆ ಪಾರ್ಲೆ ಬಿಸ್ಕೀಟಿನಂತೆ ಕರಗಿತು. ಅವ್ವನ (ಗ್ರಾಮ) ಎಣ್ಣೆಗಾಯಿ ಬದನೆಕಾಯಿಯಂತೆಯೆ ರುಚಿಕಟ್ಟಾಗಿತ್ತು. ಬಾಯಿ ಚಪ್ಪರಿಸುತ್ತ ಮತ್ತೊಂದು ತುಂಡು ತಿಂದು ವಿಸ್ಕಿ ಹೀರಿದ. (ಪುಟ ೧೮೨)

ನಗರದ ಸರ್ವ ಸೌಲಭ್ಯಗಳ ಸುಖವನ್ನು ಗ್ರಾಮದ ನೆನಪುಗಳೊಂದಿಗೆ ಅನುಭವಿಸುವ ವ್ಯಕ್ತಿತ್ವವನ್ನು ಚನಬಸುವಿನಲ್ಲಿ ಕಾಣುತ್ತೇವೆ. ಚನಬಸುನ ತಾಯಿ ಮಾಡಿದ ಎಣ್ಣೆಗಾಯಿ (ಬದನೆಕಾಯಿ) ಒಂದು ಸಾವಯವ ಸಂಸ್ಕೃತಿಯ ಕಾಲಮಾನವನ್ನು ಪ್ರತಿನಿಧಿಸುತ್ತ, ಬಾರ್‌ನಲ್ಲಿ ಕರಿದು ಮಾಡಿದ ಹಂದಿ ಮಾಂಸದ ತುಣುಕು ಆಧುನಿಕತೆಯನ್ನು ಪ್ರತಿನಿಧಿಸುತ್ತದೆ. ಇವೆರಡನ್ನೂ ಸವಿದಿದ್ದ ಚನಬಸು ಎರಡೂ ತಲೆಮಾರುಗಳೊಂದಿಗೆ ಹೊಂದಿಕೊಂಡು ಬದುಕಬೇಕಾದ ಸಂಕ್ರಮಣ ಕಾಲದ ತಲ್ಲಣ(ದ್ವಂದ್ವ)ವನ್ನು ಅನುಭವಿಸುವುದು. ಮಾಂಸ ತಿಂದ ನಂತರ ನಾನೇಕೆ ಹೀಗಾದೆ ಎಂಬ ಪ್ರಶ್ನೆಯಲ್ಲಿಯೇ ಅವನ ಆತ್ಮಶೋಧದ ಆರಂಭವನ್ನು ಗುರುತಿಸುತ್ತೇವೆ. ಚನಬಸುವಿನ ದೃಷ್ಟಿಯಲ್ಲಿ ತಾನು ಮಾಡಿದ್ದು ತಪ್ಪೆನಿಸುವುದಿಲ್ಲ, ಆದರೆ ತಾನು ಹುಟ್ಟಿ ಬಂದ ಜಾತಿ, ಆಹಾರ ಪದ್ಧತಿ, ಜೀವನ ಮತ್ತು ವರ್ತನಾಂಶಗಳ ಸಾಂಪ್ರದಾಯಿಕ ದೃಷ್ಟಿಯಲ್ಲಿ ತಪ್ಪಾಗಿ ಕಂಡಿದ್ದು, ಅದು ಅವನಲ್ಲಿ ದ್ವಂದ್ವ ಹುಟ್ಟಿಸಿದೆ. ಇಲ್ಲಿ ಅವನಿಗೆ ಕಾಡುವುದು ಭದ್ರಶೆಟ್ಟರ ಮೊಮ್ಮಗನ ಮದುವೆಯ ಗುಗ್ಗುಳದ ಪ್ರಸಂಗ. ಆರ್ಥಿಕ ಬಲ ಇಲ್ಲದಿದ್ದರೂ ಗುಗ್ಗುಳದಲ್ಲಿ ಎಣ್ಣೆ ಕೊಡಬೇಕೆನ್ನುವ ಸಂಪ್ರದಾಯವನ್ನು ಉಳಿಸಿಕೊಳ್ಳಬೇಕು ಎನ್ನುವ ಹಠ, ಅಹಂಗಳು ಜಾತಿನೆಲೆಯಲ್ಲಿ ಸಂಪ್ರದಾಯ ಮನಸ್ಸುಗಳಲ್ಲಿ ಬೇರೂರಿವೆ. ಮನೆತನ ಅವಸಾನದತ್ತ ಮುಖಮಾಡಿದರೂ ಜಾತಿ ಶ್ರೇಷ್ಠತೆಯ ಬೀಜದ ಬೇರುಗಳು ಇನ್ನೂ ಭದ್ರವಾಗಿರುವುದು ಈ ಸಂದರ್ಭದಲ್ಲಿ ಸ್ಪಷ್ಟವಿದೆ. ಶ್ರಾವಣ ಮಾಸದಲ್ಲಿ ಸ್ವಾಮೀಜಿಯ ಕಾಲು ತೊಳೆದು ನೀರು ಕುಡಿದು ಪಾವನರಾಗುವ ಚನಬಸುನ ಅವ್ವ, ಅಪ್ಪಂದಿರು ಒಂದೆಡೆಯಾದರೆ, ಬದಲಾದ ಸಂದರ್ಭದಲ್ಲಿ ಮಾಂಸ ತಿನ್ನುವ ಇವನು ಇನ್ನೊಂದೆಡೆಯಾಗಿ, ಗ್ರಾಮ ನಗರಗಳ ಎರಡು ಸಾಂಸ್ಕೃತಿಕ ಬಿಂದುಗಳನ್ನು ಬಿಂಬಿಸುತ್ತಾರೆ. ಮೊದಮೊದಲಿನ ಅವನ ನಗರ ಕುತೂಹಲ, ಗ್ರಾಮ ನಗರಗಳ ತುಲನಾತ್ಮಕ ಅಧ್ಯಯನದೊಂದಿಗೆ ಮುಂದುವರೆದು ಭಾಷೆ, ಜಾತಿ, ಗಡಿಗಳು ಜನಸಾಮಾನ್ಯರ ನಿತ್ಯ ಬದುಕಿನ ಸಮಸ್ಯೆಗಳೇ ಅಲ್ಲ ಎಂಬ ನಿರ್ಧಾರದಲ್ಲಿ ಗಟ್ಟಿಯಾಗುತ್ತದೆ.

ಗ್ರಾಮ ನಗರಗಳ ದ್ವಂದ್ವ ಪ್ರತಿಗಾಮಿ-ಪ್ರಗತಿಗಾಮಿಗಳ ಮುಖಾಮುಖಿಯಲ್ಲಿ ಹುಟ್ಟುವ ಭಾವನಾತ್ಮಕ ದ್ವಂದ್ವವೂ ಹೌದು ಮತ್ತು ಗ್ರಾಮವನ್ನು ನಗರ, ನಗರವನ್ನು ಗ್ರಾಮಗಳು ಪರಸ್ಪರ ಪಾತ್ರಗಳ ಮೂಲಕ ಸಾತತ್ಯ ಕಲ್ಪಿಸುವ ಪ್ರಭಾವವೂ ಹೌದು. ಚಂದ್ರಕಾಂತ ಕುಸನೂರ ಅವರ 'ಯಾತನಾ ಶಿಬಿರ' ಕಾದಂಬರಿಯ ರಂಗಪ್ಪ ತನ್ನ ಹರಿಜನ ಕೇರಿಯ 'ಮಂಗಲ ಕಾರ್ಯಾಲಯ' ಉದ್ಘಾಟನೆಗೆ ಊರ (ಚಂದನಕೇರಿ) ಗೌಡನನ್ನು ಕರೆಯಲು ಗೌಡನ ಮನೆಗೆ ಬರುತ್ತಾನೆ. 'ಆಳು ಮಕ್ಕಳ ಜೊತೆ ಮಾತಾಡುತ್ತ ಕುಳಿತಿದ್ದ ಗೌಡರು ಬಾ ರಂಗಪ್ಪ ಎಂದು ಕರೆದರು. ರಂಗಪ್ಪ ನೇರವಾಗಿ ಬಂದು ಗೌಡರಿಗಾಗಿ ಹಾಸಿದ ಕಂಬಳಿಯ ಮೇಲೆ ಕುಳಿತುಕೊಂಡ."[೬] ಕಥನ ಪಾತ್ರಗಳಲ್ಲಿ ಎರಡು ತರದ ಪ್ರತಿಕ್ರಿಯೆಗಳನ್ನು ಗಮನಿಸುತ್ತೇವೆ. ಮೊದಲನೆಯದಾಗಿ, ಒಂದು ಸಾಮಾಜಿಕ ವ್ಯವಸ್ಥೆಯಲ್ಲಿ ಬೆಳೆದುಬಂದ ಗೌಡ, ಗೌಡನ ಆಳುಗಳು ಆಶ್ಚರ್ಯಪಡುತ್ತಾರೆ. ಕಾದಂಬರಿ ನಿರೂಪಿಸುವ 'ಗೌಡರಿಗೂ ಸ್ವಲ್ಪ ತೊಂದರೆಯಾಗಿತು' ಎಂಬ ಮಾತು ಗೌಡ(ಪ್ರತಿಗಾಮಿ)ರ ಮನಸ್ಸಿನ ದ್ವಂದ್ವವನ್ನು ಸೂಚಿಸುತ್ತದೆ. ಗೌಡರು ಸಮಾರಂಭದ ಅಧ್ಯಕ್ಷರಾಗಲು ಆಹ್ವಾನ ತಂದ ರಂಗಪ್ಪನನ್ನು ಎದುರು ಹಾಕಿಕೊಳ್ಳಲಾರರು. ಹಾಗೆಂದು ಕೆಳಜಾತಿಯ ಅವನನ್ನು ಸತ್ಕರಿಸಲು ಮನಸ್ಸೊಪ್ಪದೆ ತೊಂದರೆಯಲ್ಲಿ ಬೀಳುತ್ತಾರೆ. ಸನ್ನಿವೇಶವನ್ನು ಅರಗಿಸಿಕೊಳ್ಳಲಾರದೆ 'ಸ್ವಲ್ಪ ಮನಸ್ಸಿಗೆ ತ್ರಾಸಾಯ್ತಪ' ಎಂದು ಉಸುರಿಕೊಳ್ಳುತ್ತಾರೆ. ಎರಡನೆಯದಾಗಿ, ಗೌಡರಂತೆ ರಂಗಪ್ಪನೂ ಇಂತಹ ಸಾಂಸ್ಕೃತಿಕ (ನಡೆ,ನುಡಿ) ದ್ವಂದ್ವದಲ್ಲಿ ಸಿಲುಕುವುದನ್ನು ಅಧ್ಯಯನ ಗುರುತಿಸುತ್ತದೆ. ಮುಂಬಯಿಯಂತಹ ನಗರದ ಹೊಸ ಗಾಳಿಯನ್ನುಂಡು ಬಂದ ರಂಗಪ್ಪ ಹಾಸಿದ ಮೇಲ್ಜಾತಿಯವರ ಕಂಬಳಿಯ ಮೇಲೆನೋ (ಇದು ನಗರದ ನಡೆ) ಕುಳಿತುಕೊಳ್ಳುತ್ತಾನೆ. ಗೌಡರನ್ನು ಗೌರವಿಸಲು ಕೈಮುಗಿದು ಆಹ್ವಾನ ನೀಡುತ್ತಾನೆ. ಹಾಸಿದ ಕಂಬಳಿಯ ಮೇಲೆ ಕುಳಿತುಕೊಳ್ಳುವುದು ಅವನ ಮೇಲೆ ನಗರ ಬೀರಿದ ಪ್ರಭಾವವಾದರೆ, ಕೈಜೋಡಿಸಿ ಬೇಡುವುದು ಅವನ ಗ್ರಾಮೀಣ ದೈನ್ಯತೆಯಾಗಿದೆ. ಇದು ಪ್ರತಿಗಾಮಿ-ಪ್ರಗತಿಗಾಮಿಗಳ ದ್ವಂದ್ವವಾಗಿದ್ದು ಇವರಿಬ್ಬರ ಮೇಲೆ ನಗರದ ಪ್ರಭಾವ ಎದ್ದು ಕಾಣುತ್ತದೆ. ಇದನ್ನು ಗ್ರಾಮೀಣ ವ್ಯಕ್ತಿತ್ವಗಳನ್ನು ನಗರ ಪ್ರಭಾವಿಸಿದ ಸಾಂಸ್ಕೃತಿಕ ದ್ವಂದ್ವ ಎಂದು ಗುರುತಿಸಬಹುದು.

ಅಶೋಕ ಹೆಗಡೆ ಅವರ 'ಅಶ್ವಮೇಧ' ಕಾದಂಬರಿಯ ನಿರ್ಮಲ ಮತ್ತು ಕೃಷ್ಣ ಇವರ ಸಂಬಂಧವನ್ನು ಇಲ್ಲಿ ಚರ್ಚಿಸಬಹುದು. ಗಣೇಶ ಹೆಗಡೆಯವರ ಏಕೈಕ ಪುತ್ರಿ ನಿರ್ಮಲ ಮನೆಯಾಳು ದೇವಿ(ಶೂದ್ರ)ಯ ಮಗ ಕೃಷ್ಣನೊಂದಿಗೆ ಆಡಿ ಬೆಳೆದವಳು. ತನ್ನ ಮದುವೆಯ ದಿನ ಗ್ರಾಮ, ತಂದೆ ಮತ್ತು ಮದುವೆ ಎಲ್ಲವನ್ನು ನಿರಾಕರಿಸಿ ಹೊರಟು, ಕೃಷ್ಣನೊಂದಿಗೆ ಬೆಂಗಳೂರಿಗೆ ಬಂದು ಗೆಳತಿಯ ಸಹಾಯದಿಂದ ಮನೆಯನ್ನು ಮಾಡಿಕೊಳ್ಳುತ್ತಾಳೆ. ದೈಹಿಕವಾಗಿ, ಮಾನಸಿಕವಾಗಿ ಪ್ರಬುದ್ಧಳಾದ ನಿರ್ಮಲ ಗ್ರಾಮದ ನೆನಪುಗಳ ದ್ವಂದ್ವದಲ್ಲಿ ತನ್ನದೆ ಆದ ಪುಟ್ಟ ಸಂಸಾರ, ಆರ್ಥಿಕ ಸ್ವಾವಲಂಬನೆಯತ್ತ ಗಮನ ಹರಿಸುವುದು ಕಂಡುಬರುತ್ತದೆ. ಆದರೆ ಅಪಿದ್ಯಾವಂತ, ಮುಗ್ಧ ಕೃಷ್ಣನನ್ನು ಗ್ರಾಮ, ಅವ್ವ ಮತ್ತು ಪಾಪಪ್ರಜ್ಞೆಗಳು ನಿರಂತರವಾಗಿ ಕಾಡುತ್ತವೆ. ಹಗಲು ರಾತ್ರಿ ಎನ್ನದೆ ದಿನಪಿಡೀ ಯಕ್ಷಪಾತ್ರಗಳು ಕನಸುಗಳ ರೂಪದಲ್ಲಿ ಅವನನ್ನು ಖಿನ್ನಗೊಳಿಸುತ್ತವೆ. ಅವನ ಖಿನ್ನತೆ, ದುಗುಡ, ದ್ವಂದ್ವ ಮತ್ತು ಪಶ್ಚಾತ್ತಾಪಗಳನ್ನು ಲೈಂಗಿಕ ಪ್ರಲೋಭನೆಗಳಿಂದ ಮರೆಸಿ ಗೆಲ್ಲಲು ಮತ್ತು ಅವನನ್ನು ಲೌಕಿಕದೆಡೆ ಸೆಳೆಯುವ ಪ್ರಯತ್ನವಾಗಿ ನಿರ್ಮಲ ಅದೊಂದು ದಿನ ಬೆತ್ತಲಾಗಿ ಅವನ ಮುಂದೆ ನಿಲ್ಲುತ್ತಾಳೆ. 'ಬಾರೋ ಕೃಷ್ಣ' ಎನ್ನುತ್ತಾಳೆ. ಕೃಷ್ಣ ನೀರು ತುಂಬಿದ ಕಣ್ಣುಗಳಿಂದ ಅವಳನ್ನು ನೋಡುತ್ತಾನೆ. ಅವಳ ತುಂಬು ತೊಡೆ, ಮೊಲೆ, ಕಾಲಿನ ಮೀನಖಂಡಗಳು, ಹಾರುತ್ತಿರುವ ಮುಂಗುರುಳು, ಸೊಂಟ ದಾಟಿ ಕೆಳಗಿಳಿದ ಕೇಶರಾಶಿ ಯಾವುದೂ ಅವನನ್ನು ಉದ್ವಿಗ್ನಗೊಳಿಸುವುದಿಲ್ಲ.

> 'ಎಲ್ಲವೂ ಎಲ್ಲವೂ ಕೃಷ್ಣಾಗೆ ತನ್ನ ಅವ್ವನ ಕಥೆಯಲ್ಲಿ ಬರುವ ಪಾರ್ವತಿ ದೇವರನ್ನು, ರಂಗಸ್ಥಳದ ಮೇಲೆ, ಮುಡಿ ಬಿಚ್ಚಿ 'ಬಾರೋ ಕುರುಕುಲದ ಕುನ್ನಿಯೇ ಬಾರೋ, ಎಂದು ಕುಣಿದ ದ್ರೌಪದಿಯನ್ನು ನೆನಪಿಸಿದವು. "ಅಮ್ಮಾ, ಅಮ್ಮಾ, ದಯವಿಟ್ಟು ನನ್ನ ಬಿಡಿ. ನಾನು ಹೇಳಬೇಕೆಂದರೆ ನಿಮ್ಮ ಪಾದದ ದೂಳಿಗೂ ಸರಿ ಆದವನಲ್ಲ. ಯಾವ ಕೆಟ್ಟ ಗಳಿಗೆಯಲ್ಲಿ ಯಾವ ಬ್ರಹ್ಮರಾಕ್ಷಸ ಮರ ಇಳಿದು ನನ್ನ ಹೆಗಲುಗಳನ್ನು ಏರಿತೋ, ಯಾಕೆ ನಾನು ನಿಮ್ಮ ಹಿಂದ ನಡೆದನೋ ಗೊತ್ತಿಲ್ಲ. ಬೇಕಿದ್ದರೆ ನೀವು ಹೇಳುವ ಯಾವುದೇ ಕೆಲಸವನ್ನು ಮಾಡುತ್ತೇನೆ. ಆದರೆ ಇದೊಂದು ಮಾತ್ರ ನನ್ನಿಂದ ಸಾಧ್ಯವಿಲ್ಲ."

ಬಾಲ್ಯದ ಗೆಳತಿ ಅಪ್ರತಿಮ ಸುಂದರಿ ಬೆತ್ತಲೆಯಾಗಿ ಎದುರಿಗೆ ನಿಂತಾಗಲೂ ಅವನ ಕಣ್ಣುಗಳು ದುಃಖದಿಂದ ಮಂಜಾಗಲು ಕಾರಣವಾದರೂ ಏನು? ಹಣ, ಐಶ್ವರ್ಯ, ಅಂತಸ್ತುಗಳು ತಾನಾಗಿ ಒಲಿದು ಬಂದರೂ ಆ ಶೂದ್ರ ಮನಸ್ಸು ದುಗುಡಗೊಳ್ಳುವುದರ ಹಿಂದಿರುವ ಒತ್ತಡಗಳಾವುವು? ಸುಖವೊಂದು ಹಗಲು ರಾತ್ರಿ ಬೆಂಬಿಡದೇ ಆಹ್ವಾನಿಸಿದರೂ, ಅವ್ವ, ಗಣೇಶ ಹೆಗಡೆ, ಯಕ್ಷಗಾನ ಪಾತ್ರಗಳು, ಬ್ರಹ್ಮರಾಕ್ಷಸರ ಕನಸುಗಳ ರೂಪದ ದ್ವಂದ್ವ ಕಾಡುವುದೇಕೆ? ನಿರ್ಮಲಳೊಂದಿಗೆ ತಾನು ನಗರಕ್ಕೆ ಬಂದಿದ್ದು ಅಕಾರ್ಯವೆಂಬ ಪಶ್ಚಾತ್ತಾಪ, ಪಾಪಪ್ರಜ್ಞೆ ಅವನ ಕನಸು, ಸುಖಗಳನ್ನು ಕೊಲ್ಲುವುದೇಕೆ? ಇಂತಹ ಹತ್ತಾರು ಪ್ರಶ್ನೆಗಳು ತೆರೆದುಕೊಳ್ಳುತ್ತವೆ. ಕಾಮವೊಂದು ನರನಾಡಿಯಲ್ಲಿ ಹರಿದು ಉಕ್ಕೇರಿ ನಿಲ್ಲಬೇಕಾದ ಸಮಯದಲ್ಲಿ ಅವನ ಸರ್ವಾಂಗಗಳು ಭಕ್ತಿಭಾವ ತುಂಬಿಕೊಂಡು ನರಳಲು ಅವನ ಭಾವನಾತ್ಮಕ ದ್ವಂದ್ವ ಕಾರಣವಾಗಿದೆ. ಉಚ್ಚ ಜಾತಿಗೆ ಸೇರಿದ ತನ್ನ ಬಾಲ್ಯದ ಗೆಳತಿಯನ್ನು ಅವಳ ಕುಟುಂಬದಿಂದ ಪ್ರತ್ಯೇಕಿಸಿ ಮೈಲಿಗೆ ಮಾಡಿದೆ ಎಂಬ ತಪ್ಪಿನ ಅನಿಸಿಕೆ ಇಲ್ಲಿದೆ. ಗಮನಿಸಬೇಕಾದ ಅಂಶವೆಂದರೆ, ಕೃಷ್ಣ ಬಾಲ್ಯದ ನಿರ್ವಾಜ್ಯ ಪ್ರೇಮವನ್ನು ಅನುಸರಿಸಿ ನಗರಕ್ಕೆ ಬಂದವನು, ಪ್ರೇಮಕ್ಕೆ ಸೋತವನು. ಪ್ರೇಮದ ಇನ್ನೊಂದು ಮುಖ ಕಾಮಕ್ಕೆ ಅವನು ಸೋಲುವುದಿಲ್ಲ. ಪ್ರೇಮ ಕಾಮವನ್ನು ಗೆದ್ದವನೂ ಅಲ್ಲ. ಒಂದೆಡೆ ಪ್ರೇಮದ (ಬಾಲ್ಯದ ಗೆಳತಿ) ಒತ್ತಡ, ಇನ್ನೊಂದೆಡೆ ಪಶ್ಚಾತ್ತಾಪದ ಒತ್ತಡಗಳು ಅವನನ್ನು ಭಾವುಕನನ್ನಾಗಿ ಮಾಡಿ ನಿರ್ಮಲಳನ್ನು ತ್ಯಜಿಸುವಂತೆ ಮಾಡಿವೆ.

ನಿರ್ಮಲಳ ಬೆನ್ನ ಹಿಂದೆ ಹೋಗಿ ನಗರದಲ್ಲಿ ಕಾಣೆಯಾದ ಕೃಷ್ಣನ ತಾಯಿ ದೇವಿಗೆ ನಗರವೆಂಬುದು ಮಗನನ್ನು ನುಂಗಿಕೊಂಡ ಭೂತವಾಗಿ ಕಾಡುತ್ತಲೇ ಇರುತ್ತದೆ. ಗ್ರಾಮಕ್ಕೆ ಮರಳಿ ಬಂದ ನಿರ್ಮಲಳಿಗೆ ಆಶ್ರಯ ಕೊಡುವಲ್ಲಿ ಅನ್ನದ ಋಣದ ಪ್ರಶ್ನೆ ಅಡಗಿದೆ ಎನ್ನಬಹುದು. 'ನಾನು ಸಾಯೋಕ್ಕಿಂತ ಮುಂಚೆ ಒಂದು ದಿನಾ ಅವ್ವಾ ನನಗ ಹಸಿವು ಒಂದಿಷ್ಟು ಗಂಜಿ ಕೊಡವ್ವಾ ಅಂತಾ ನನ್ನ ಕೈಯ ತುತ್ತಿಗೆ ಬರ್ತಾನೆ ನನ್ನ ಕಂದ' ಎಂಬ ನಂಬಿಕೆಯ ಬಲದಲ್ಲಿ ಈ ತಾಯಿ ನಗರದತ್ತ ದೃಷ್ಟಿ ನೆಟ್ಟು ನಿಂತಿರುವುದು ಕಂಡುಬರುತ್ತದೆ. ಒಂದೆಡೆ ಮಗ (ನಗರ) ಇನ್ನೊಂದೆಡೆ ನಿರ್ಮಲ (ಗ್ರಾಮ ನಗರಗಳ ಕೊಂಡಿ) ಮತ್ತೊಂದೆಡೆ ಗಣೇಶ ಹೆಗಡೆ (ಗ್ರಾಮ) ಈ ವಿರೋಧಾತ್ಮಕ ಬಲಗಳಲ್ಲಿ ಸಿಕ್ಕಿಹಾಕಿಕೊಂಡ ದೇವಿಯ

ದ್ವಂದ್ವಾತ್ಮಕ ಸ್ಥಿತಿ ಬಿರುಗಾಳಿಯಲ್ಲಿ ಸಿಕ್ಕಿಕೊಂಡ ತರಗೆಲೆಯಂತೆ ಹೊರಳಾಡುವುದನ್ನು ಅಧ್ಯಯನ ಗುರುತಿಸುತ್ತದೆ.

ಆದರೆ, ಅದೇ ಊರಿನ ಖಾಸಿಂಸಾಬಿ ಮತ್ತು ಫಾತಿಮಾರ ತಲ್ಲಣಗಳು ಮೂಡಿ ಬರುವ ರೀತಿ ವಿಭಿನ್ನವಾಗಿದ್ದು, ಅವು ನಗರ ಮತ್ತು ಕೊಲ್ಲಿದೇಶಗಳಂತಹ ವಿದೇಶಗಳನ್ನೂ ಒಳಗೊಂಡಿವೆ. ಪಿ.ಯು.ಸಿ.ವರೆಗೆ ಓದಿದ್ದ ಇವರ ಮಗ ಇಸ್ಮಾಯಿಲ್ ಯಾರ ಯಾರ ಜೊತೆಗೋ ನಗರ ಸೇರಿ, ಅದನ್ನೂ ದಾಟಿ ದುಬೈಗೆ ಕೆಲಸಕ್ಕೆಂದು ನಡೆದುಬಿಡುತ್ತಾನೆ. ಅವನು ವರುಷಕ್ಕೋ ಎರಡು ವರುಷಕ್ಕೋ ಬಂದಾಗ ಸಂಭ್ರಮಿಸುತ್ತಿದ್ದ ಫಾತಿಮಾ ಅವನಿಲ್ಲದಾಗ, 'ನಮ್ಮ ಇಸ್ಮಾಯಿಲ್ ಸಣ್ಣಕ್ಕೆ ಇದ್ದಾಗ ಎಷ್ಟು ಚೂಟಿಯಾಗಿದ್ದ ಅಂತಿ, ಈಗ ಇಂತಹ ಮಕ್ಕಳು ಹುಟ್ಟುವುದೇ ಇಲ್ಲ' ಎಂದು ಓಣಿಯ ಹೆಣ್ಣುಮಕ್ಕಳ ಹತ್ತಿರ ಹೇಳುತ್ತ, ತಾಯಂದಿರ ಮತ್ತು ಮಕ್ಕಳ ಇಡೀ ಕುಲವನ್ನು ತನ್ನ ಮಾತುಗಳಲ್ಲಿ ಹಿಂಜಿ ನೋಡುತ್ತಾಳೆ. ಮಗ ಮನೆಬಿಟ್ಟು ಹೋಗುವಾಗ ಅವನ ಬೆನ್ನ ಹಿಂದೆ ಬೀಳ್ತಿದ್ದ ಉದ್ದ ನೆರಳನ್ನು ನೆನೆದು, ಕಣ್ಣು ತುಂಬಿಕೊಂಡು, ಮಗನನ್ನು ಕಸಿದುಕೊಂಡ ವಿದೇಶಿ ಎಂಬ ಸವತಿಯನ್ನು ಮತ್ಸರದಿಂದ ನೋಡುತ್ತ ನಿಲ್ಲುತ್ತಾಳೆ. ಇಂತಹ ಇಸ್ಮಾಯಿಲ್ ವಿದೇಶದಿಂದ ತಂದು ಟ್ರಂಕಿನಲ್ಲಿಟ್ಟಿದ್ದ ಯು.ಎಸ್.ಎ. ಡಾಲರ್ ನೋಟುಗಳು ಖಾಸಿಂಸಾಬಿಯ ಜೀವನ ಚಿತ್ರವನ್ನು ಬದಲಾಯಿಸಿದರೆ, ಪಳಪಳ ಹೊಳೆಯುವ ಆ ಗರಿಗರಿ ಹೊಸ ನೋಟುಗಳು ಫಾತಿಮಾಳ ಮಾತೃ ಹೃದಯವನ್ನು ಅಲ್ಲಾಡಿಸಿಬಿಡುತ್ತವೆ. ಅವಳ ಮನೆಯ ಮೇಲೊಂದು ಕನಸಿನ ನೀಲಿಬಾನು ನಿರ್ಮಾಣವಾಗಿ ಆ ಹಸಿರು ನೋಟು, ಇಸ್ಮಾಯಿಲ್‌ನ ಬಾಲ್ಯ, ಮಗುವಿನ ಪುಟುಪುಟು ನಡುಗೆ, ಯೌವನ, ಸೊಸೆ, ಮೊಮ್ಮಕ್ಕಳ ರೂಪದಲ್ಲಿ ಅವಳನ್ನು ಉದ್ವೇಗ (ದ್ವಂದ್ವಾತ್ಮಕತೆ)ಕ್ಕೆ ನೂಕುತ್ತ ಮಗನ ರೂಪದಲ್ಲಿ ಬೆನ್ನಟ್ಟಿ ಕಾಡುತ್ತದೆ. ಮಗನ ರೂಪದಲ್ಲಿ ಗ್ರಾಮದ ತಾಯಿಯನ್ನು ಕಾಡುವ ವಿದೇಶಿ ನೋಟಿನ ರೀತಿಗೆ ಏನೆನ್ನಬೇಕು? ಅದು ಹುಟ್ಟಿಸುವ ಕುತೂಹಲ, ದ್ವಂದ್ವ, ಅಧೀರತೆ, ಅಭದ್ರತೆಗಳು ಯಾವುದರ ಸಂಕೇತಗಳು? ಈ ನೋಟಿನ ರೂಪ, ನಡೆಗಳಲ್ಲಿ ನಗರ (ವಿದೇಶ) ಸೇರಿದ ಮಗನ ರೂಪ, ನಡೆ, ನುಡಿ ವರ್ತನೆಗಳನ್ನು ಗ್ರಹಿಸಬಯುಸುವ ತಾಯಿಯ ಹೃದಯಕ್ಕೆ ಏನು ಸಾಂತ್ವನ ಹೇಳಬೇಕು? ಮಾತೃ ಹೃದಯದ ಬಡಿತದ ವೇಗ ಆವೇಗಗಳನ್ನು ನಿಯಂತ್ರಿಸುವ ಶಕ್ತಿ ಒಂದು ಕಾಗದದ ತುಂಡಿಗೆ ಇದೆಯೆ? ಇದೆಯೆಂದಾದರೆ ಅದು ಗ್ರಾಮ, ನಗರಗಳ ದ್ವಂದ್ವಾತ್ಮಕತೆಯನ್ನು ನಿಯಂತ್ರಿಸುವ ನಿಯಂತ್ರಕ(Governar)ವಾಗಿರುವುದು ಸಾಹಿತ್ಯ ರೂಪದಲ್ಲಿರುವ ವಾಸ್ತವಿಕ ಬದುಕಿನ ಅದ್ಭುತವೆ ಸರಿ.

**ಕ. ವ್ಯಕ್ತಿ ಮತ್ತು ವ್ಯಕ್ತಿ : ಆಂತರಿಕ ಸಂಘರ್ಷ**

ಗ್ರಾಮ/ನಗರ ನಿರಾಕರಿಸಿ ಹೊಸನೆಲೆಯಲ್ಲಿ ತಮ್ಮ ಬದುಕು ಕಂಡುಕೊಳ್ಳುವ ಇಬ್ಬರು ವ್ಯಕ್ತಿಗಳ ನಡುವಿನ ನೇರ ಮುಖಾಮುಖಿ ಸಂಘರ್ಷವು (ದೈಹಿಕ/ಮಾನಸಿಕ) ಗ್ರಾಮ ಮತ್ತು ನಗರಗಳೆ ಎರಡು ಪಾತ್ರಗಳಾದ ಸಂಘರ್ಷವೆನ್ನಿಸಿಕೊಳ್ಳುತ್ತದೆ. ಗ್ರಾಮ ಅಥವಾ ನಗರದ ನಡವಳಿಕೆ, ಸ್ವಭಾವಗಳ ಘರ್ಷಣೆ ಇಂತಹ ಸಂಘರ್ಷ, ಹೋರಾಟದಲ್ಲಿ ಸ್ವಯಂ ಅನಾವರಣಗೊಳ್ಳುತ್ತವೆ.

ಅಶೋಕ ಹೆಗಡೆ ಅವರ 'ಯಾವ ಸೀಮೆಯ ಹುಡುಗ' ಕತೆಯ ಮನೋಹರ ಹೆಗಡೆ, ಮಂಗಳಾ ಬೆಳಗಾಂವ್ಕರ ಗ್ರಾಮಗಳಿಂದ ಬಂದು ದೆಹಲಿಯ ಸೋಮವಿಹಾರ ಅಪಾರ್ಟ್‌ಮೆಂಟಿನ ರೂಮೊಂದರಲ್ಲಿ ಸ್ನೇಹಿತರಂತೆ ವಾಸಿಸುತ್ತಾರೆ. ಇವರದ್ದು ಬ್ಯಾಂಕ್, ಬ್ಯಾಲನ್ಸ್‌ಶೀಟ್, ಸೆಮಿನಾರ್, ಸಭೆ ಸಮಾರಂಭ ಇತ್ಯಾದಿ ನಿತ್ಯ ಭರಾಟೆಯಲ್ಲೂ ಶಾಂತ, ಸ್ವಸ್ಥ ಜೀವನವಾಗಿದೆ. ಭಯೋತ್ಪಾದಕರ ಸ್ಫೋಟ, ನಕ್ಸಲೀಯರ ಜನ, ಧನ ಅಪಹರಣ, ಮನೆ ದೋಚುವ ಡಕಾಯಿತರ ಭಯದಲ್ಲಿ ಮತ್ತು ಯಾಂತ್ರಿಕವಾದ ದೆಹಲಿಯ ಬದುಕಿನಲ್ಲಿ ಅಲ್ಪಸ್ವಲ್ಪ ಮಾನವೀಯ ಅಂತಃಕರಣ ಉಳಿಸಿಕೊಂಡಿದ್ದ ಜೋಡಿ ಇದಾಗಿದೆ. ಒಂದು ದಿನ ರೂಮಿನ ಮುಂದೆ ಗಾಯಗೊಂಡು ಬಿದ್ದಿದ್ದ ಅಪರಿಚಿತ ವ್ಯಕ್ತಿಯನ್ನು ಮಂಗಳಾ ಎತ್ತಿ ಒಳ ತಂದು ಶುಶ್ರೂಷೆ ಮಾಡುವಾಗ ಮನು ಮಾನಸಿಕವಾಗಿ ಅಸ್ವಸ್ಥನಾಗುತ್ತಾನೆ. ಅಪರಿಚಿತನೊಂದಿಗೆ ಯಾವ ಯಾವದೋ ಸಂಬಂಧ ಹುಟ್ಟಿ ಮಂಗಳ ಮತ್ತು ತನ್ನ ಮಧ್ಯೆ ಆ ಸಂಬಂಧವೊಂದು ಸಮಸ್ಯೆಯಾಗಿ ಬೆಳೆದು ಅದು ತನ್ನ ತೀರ ವೈಯಕ್ತಿಕ ಬದುಕನ್ನು ಸುಡುವ ಅನುಮಾನ ಕಾಡುತ್ತದೆ. ಅರ್ಥವಾಗದ ಮಂಗಳಾಳ ಮಾತು, ನಡತೆಗಳು ನಿಗೂಢವಾಗಿಯೇ ಉಳಿಯುತ್ತವೆ. ಕತೆಯಲ್ಲಿ ಬರುವ ಈ ಸಂದರ್ಭವನ್ನು ಗಮನಿಸಬಹುದು. ಒಮ್ಮೆ ಮಂಗಳ ಅಪರಿಚಿತನ ಹಣೆ ಮುಟ್ಟಿ ನೋಡುತ್ತ,

'ಮನು ಎಂತಹ ಸುಂದರ ಗಡಸು ದೇಹ ಅಲ್ಲವ?' ಎಂದಳು. ಕಣ್ಣಿಗೆ ನುಗ್ಗಿದ ನಿದ್ದೆ ತಟ್ಟನೆ ಹಾರಿ ಹೋಯಿತು. ಬಲಿಯುವ ಪಳೆಯುಳಿಕೆಗಳೆಲ್ಲ ಮತ್ತೆ ಒಂದಾಗಿ ಆತನ ಬಲಿಷ್ಠ ಪಾದದಡಿ ನನ್ನಿಡೀ ದೇಹ ನುಜ್ಜು ಗುಜ್ಜಾಗುತ್ತದೆ ಅನಿಸಿದಾಗ[೨೮]

ಮಂಗಳಾಳ ಆಸಕ್ತಿ ವಲಯದಿಂದ ತಾನು ದೂರವಾಗುತ್ತಿದ್ದೇನೆಯೆ? ಎಂಬ ಸಂದರ್ಭದಲ್ಲಿ ತಟ್ಟನೆ ಮನೋಹರನಿಗೆ ಹಳ್ಳಿಯ ತನ್ನ ದೊಡ್ಡಮ್ಮ (ಅಪ್ಪನ ಹಿರಿಯ ಹೆಂಡತಿ), ಮನೆಯಾಳು ಹೊಲೆಯರ ಬಲಿಯ ನೆನಪಾಗುತ್ತಾರೆ. ಬೇಟೆಯ ನೆಪದಲ್ಲಿ ಬಲಿಯನ ಕೊಲೆ, ಅಪ್ಪ-ದೊಡ್ಡಮ್ಮನ ದಾಂಪತ್ಯದ ನಡುವಿನ ಶಂಕೆಗಳು, ನಂತರ ಬಲಿಯನ ಹೆಂಡತಿ ರಾಮಿ ಮತ್ತು ಅಪ್ಪರ ಹೊಸ ಸಂಬಂಧದ ಸಾಧ್ಯತೆಯಾಗಿದ್ದುದು, ವ್ಯಕ್ತಿ ವ್ಯಕ್ತಿಯೊಳಗಿನ ಆಂತರಿಕ ಸಂಘರ್ಷದ ಸ್ಫೋಟವಾಗಿದೆ. ಮನುಷ್ಯ ಗ್ರಾಮದಲ್ಲಿರಲಿ, ನಗರದಲ್ಲಿರಲಿ ಅವನ ವ್ಯಕ್ತಿತ್ವದ ಸ್ವರೂಪ ಒಂದೇ ಎಂಬುದು ಅಧ್ಯಯನದ ನಿಲುವಾಗಿದೆ. ಗಂಡು ಹೆಣ್ಣುಗಳ ಪರಸ್ಪರ ಅನಿವಾರ್ಯತೆ, ಒಬ್ಬರನ್ನೊಬ್ಬರು ಅರ್ಥ ಮಾಡಿಕೊಂಡಿದ್ದೇವೆ ಎಂಬ ಕಲ್ಪನೆಗಳು ಕೂಡ ಒಂದು ವಾಸ್ತವಿಕ ಭ್ರಮೆಯಾಗಿರಬಹುದು. ಮನುಷ್ಯರ ಈ ಹುಡುಕಾಟದ ಪ್ರವೃತ್ತಿಯಿಂದಲೇ ಹೊಸ ಸಂಬಂಧಗಳ ಆವಿಷ್ಕಾರ, ಹಳೆಯದರ ತಿರಸ್ಕಾರ, ಬದಲಾವಣೆಯ ಅನಿವಾರ್ಯತೆಯನ್ನು ಮತ್ತು ಅಗತ್ಯವನ್ನು ಅಧ್ಯಯನ ಒತ್ತಿ ಹೇಳುತ್ತದೆ. ಈ ಸಂದರ್ಭದಲ್ಲಿ, ಹಳ್ಳಿಯಲ್ಲಿ ಬಾಲ್ಯವನ್ನು ಕಳೆದು, ಮನಸ್ಸಿನೊಳಗಿನ ಹುಡುಕಾಟದ ಮನೋಭಾವಕ್ಕೆ ಅರ್ಥ ಕಾಣದ ವ್ಯಕ್ತಿತ್ವ, ನಗರ ಬದುಕಿನ ಮಾನವೀಯ ಸಂಬಂಧಗಳ ಅನ್ವೇಷಣೆಯಲ್ಲಿ ತೊಡಗಿಕೊಂಡು, ಯಾರನ್ನೂ ನಂಬದ ಸಂಕೀರ್ಣ ಸ್ಥಿತಿ ತಲುಪಿ ಅಸ್ವಸ್ಥವಾಗುವ ಪರಿಯನ್ನು ಗ್ರಾಮೀಣ ಪಾತ್ರ(ಮನೋಹರ)ದಲ್ಲಿ ಕಾಣಬಹುದು. ಮಂಗಳಾ ಇಲ್ಲದ ಸಮಯ ಅಪರಿಚಿತನನ್ನು ಮುಂಬಯಿ ಟ್ರೇನಿಗೆ ಸಾಗಹಾಕಿ ಮರಳಿ ಬರುವಾಗ, ಬಲಿಯನನ್ನು ಬಲಿ ತೆಗೆದುಕೊಂಡಾಗ ಅಪ್ಪನಲ್ಲಿ ಕಂಡಿದ್ದ ಮಾನಸಿಕ ನೆಮ್ಮದಿಯನ್ನು ಮನುವಿನ ಮನಸ್ಸು ಈ ಸಂದರ್ಭದಲ್ಲಿ ಅನುಭವಿಸುತ್ತದೆ. ಹೊಸ ಸಂಬಂಧಗಳ ನೆಲೆಯಲ್ಲಿ, ಹಳೆ ಸಂಬಂಧಗಳನ್ನು ಪುನರ್ವಿಮರ್ಶಿಸಿಕೊಳ್ಳುವ ಇಬ್ಬರು ವ್ಯಕ್ತಿಗಳ ಆಂತರಿಕ ಸಂಘರ್ಷ(ದ್ವಂದ್ವ) ಇದಾಗಿದೆ.

ಕೇಶವ ಮಳಗಿ ಅವರ 'ಕಡಲ ತೆರೆಗೆ ದಂಡೆ' ಕತೆಯು ಅಚ್ಯುತ, ಸತ್ಯಪ್ರಮೋದರ ಆಂತರಿಕ ಸಂಘರ್ಷ ಎರಡು ಗ್ರಾಮೀಣ ಪಾತ್ರಗಳ ನಗರ ಸಂಘರ್ಷವಾಗಿ ಕಾಣುತ್ತದೆ. ಒಂದೇ ಊರಿನ ಎರಡು ವಿಭಿನ್ನ ಪರಿಸರದಲ್ಲಿ ಬೆಳೆದ ಇಬ್ಬರು ವ್ಯಕ್ತಿಗಳು ನಗರ ಸೇರಿ ತಮ್ಮ ಮೂಲ ಪ್ರವೃತ್ತಿಯನ್ನು ತ್ಯಜಿಸದೆ ಎರಡು ವಿಭಿನ್ನ ದ್ರವಗಳಂತೆ ಒಂದೇ ರೂಮಿನಲ್ಲಿ ಬದುಕುತ್ತಾರೆ. ಈ ಎರಡೂ ವ್ಯಕ್ತಿತ್ವಗಳು ತಮ್ಮದೇ ನೆಲೆಯಲ್ಲಿ ಗ್ರಾಮ, ನಗರಗಳ ದ್ವಂದ್ವಾತ್ಮಕತೆಯಿಂದ ನರಳಿ ಹಪಹಪಿಸುವುದನ್ನು ಅಧ್ಯಯನ ಗುರುತಿಸುತ್ತದೆ. ಗ್ರಾಮೀಣ ಕುಟುಂಬದಲ್ಲಿ ಯದುಪತಿ ಕಾಕಾ, ಅಬಜಿಯರ ಪ್ರೀತಿ ಪಡೆದು ಬೆಳೆದ ಅಚ್ಯುತ, ಸ್ವಂತ ಶ್ರಮದ ನಿಷ್ಠ ವ್ಯಕ್ತಿತ್ವವನ್ನು ಬೆಳೆಸಿಕೊಂಡು ಓದಿ, ನಗರದ ಕಾರ್ಖಾನೆಯಲ್ಲಿ ನೌಕರಿಗೆ ಸೇರುತ್ತಾನೆ. ಅದೇ ಗ್ರಾಮದಲ್ಲಿ ಹುಟ್ಟಿ ಬ್ರಾಹ್ಮಣರ ಮಠವೊಂದರಲ್ಲಿ ಬೆಳೆದರೂ (ಸಾಮಾನ್ಯವಾಗಿ ಮಠಗಳು ಸಾತ್ವಿಕ ಕೇಂದ್ರಗಳೆಂಬ ಅಭಿಪ್ರಾಯ ಸಮಾಜದಲ್ಲಿದೆ) ಸತ್ಯಪ್ರಮೋದ ದುಷ್ಟ, ಪರಪೀಡಕ ವ್ಯಕ್ತಿತ್ವ ಬೆಳೆಸಿಕೊಂಡು ಮಠದಿಂದ ಹೊರಹಾಕಲ್ಪಟ್ಟು, ಶಹರಕ್ಕೆ ಬಂದು ಅಚ್ಯುತನ ರೂಮನ್ನು ಸೇರಿಕೊಳ್ಳುತ್ತಾನೆ. ನಗರ ಸೇರಿದ ಅಚ್ಯುತ ಪರಿಚಯವಾದ ಎಡಪಂಥೀಯ ಪ್ರತಿಪಾದಕ ಅನ್ಸರನ ಸಾಂಗತ್ಯದಲ್ಲಿ ಅಚಲತೆ, ನಿಷ್ಠೆ, ವೈಚಾರಿಕ ಪ್ರಜ್ಞೆ ಬೆಳೆಸಿಕೊಂಡರೂ, ಇವನು ಸತ್ಯಪ್ರಮೋದನನ್ನು ವೈಚಾರಿಕವಾಗಿ ಬೆಳೆಸಲಾಗುವುದಿಲ್ಲ. ಹಳೆಯ ಅಪರಾಧಗಳನ್ನು ಮರೆತು ಅಚ್ಯುತ ಸತ್ಯಪ್ರಮೋದನನ್ನು ಒಳ್ಳೆಯ ಗೆಳೆಯನಂತೆಯೆ ಸ್ವಾಗತಿಸಿದ್ದ. ಆದರೆ ಕೆಡುಕಿನ ಬೀಜಗಳನ್ನು ಹೊಕ್ಕುಳ ಬಳ್ಳಿಯಲ್ಲಿಯೇ ಇಟ್ಟುಕೊಂಡು ಹುಟ್ಟಿದ ಸತ್ಯಪ್ರಮೋದ ಅನಾವಶ್ಯಕವಾಗಿ ಇವರ ಮೇಲೆ ಹಠ ಸಾಧಿಸುತ್ತಾನೆ. ಹಣವನ್ನು ಕೇಳಿ ಪಡೆಯುತ್ತಿದ್ದವನು ನಂತರ ಜೇಬಿನಿಂದ ಕದಿಯುವುದು, ಇವರ ಬಟ್ಟೆಗಳನ್ನು ಕೇಳದೆ ಉಪಯೋಗಿಸುವುದು, ಆತ್ಮಹತ್ಯೆಗೂ ಸುಳ್ಳು ಪ್ರಯತ್ನ ಮಾಡಿ, ಬೆದರಿಸಿ ಅಚ್ಯುತನಿಂದ ಹಣ ಕಿತ್ತುಕೊಳ್ಳುತ್ತಾನೆ. ಇವರ ಕ್ರಾಂತಿಯನ್ನು ಅಣಕಿಸುತ್ತ, ಇವರಲ್ಲಿಯೇ ಒಡಕು ಹುಟ್ಟಿಸಲು ಪ್ರಯತ್ನಿಸಿ ಸೋಲುತ್ತಾನೆ. ಉದ್ಯೋಗವಿಲ್ಲದೆ, ಬದುಕಿಗೆ ಭದ್ರತೆ ಸಿಗದ ವ್ಯಕ್ತಿ, ಸಿನಿಕನಾಗಿ ನಗರ ಬದುಕಿನ ಉದ್ಯೋಗಸ್ಥ ವ್ಯಕ್ತಿಗಳನ್ನು ಹೇಗೆ ಕಾಡುತ್ತಾನೆ, ಕಂಟಕವಾಗುತ್ತಾನೆ ಎಂಬುದಕ್ಕೆ ಸತ್ಯಪ್ರಮೋದ ಸಾಕ್ಷಿಯಾಗುತ್ತಾನೆ. ನಿರಂತರ ಕಾರ್ಖಾನೆಯ ದುಡಿತ, ಯಾಂತ್ರಿಕ ಬದುಕುಗಳಿಗಿಂತ ಸತ್ಯಪ್ರಮೋದನ ಬದುಕುವ ರೀತಿ ಅಚ್ಯುತನನ್ನು ಕೆಟ್ಟದಾಗಿ ತಟ್ಟುತ್ತದೆ. ಅನ್ಸರನ ಸಹಾಯದಿಂದ ಒಂದು

ಕೆಲಸ ಸಿಕ್ಕಮೇಲೆ 'ನನ್ನ ನೆಲೆ ಆಧ್ಯಾತ್ಮದಾಗ ಅದ್' ಎನ್ನುತ್ತ ಸಭ್ಯನಂತೆ ನಾಟಕ ಆರಂಭಿಸುತ್ತಾನೆ. ಪರಪೀಡಕನೊಬ್ಬ (ಸತ್ಯಪ್ರಮೋದ) ಹೇಗೆ ಬೌದ್ಧಿಕ, ಮಾನಸಿಕ ಹಿಂಸೆಯನ್ನು ಕೊಡಬಹುದು, ಅದನ್ನು ನಿಚ್ಚಳ ವ್ಯಕ್ತಿತ್ವ(ಅಚ್ಯುತ, ಅನ್ಸರ)ದ ವ್ಯಕ್ತಿಗಳು ಹೇಗೆ ಸ್ವೀಕರಿಸಿ ಗೆಲ್ಲಬಹುದು ಎಂಬುದು ಇಲ್ಲಿಯ ಸಂಘರ್ಷದ ಫಲವಾಗಿದೆ. ಇದು ಜಾತಿ, ಅಂತಸ್ತುಗಳು ನಿರ್ಮಿಸಿದ ಸಂಘರ್ಷವಾಗಿರದೆ ಎರಡು ವಿಭಿನ್ನ ವ್ಯಕ್ತಿತ್ವಗಳು ನಗರ ಸೇರಿ ಪರಸ್ಪರ ಹಳೆಯ ಸಂಬಂಧಗಳನ್ನು ಕಳಚಿಕೊಳ್ಳದೆ ಹೊಸ ಸಂಬಂಧಗಳತ್ತ ಸಾಗುವ ಸಂಘರ್ಷವಾಗಿದೆ. ಅಚ್ಯುತನ ಒಳ್ಳೆಯತನ ಅವನನ್ನು ಅನ್ಸರನತ್ತ ಒಯ್ದರೆ, ಸತ್ಯಪ್ರಮೋದನ ಸಣ್ಣತನ ಯಾವ ಸಂಬಂಧವನ್ನೂ ತಬ್ಬಿಕೊಳ್ಳದ ಹಾಗೆ ಮಾಡಿ, ಸ್ನೇಹದ ವಿಚ್ಛೇದನದಲ್ಲಿ ಅಂತ್ಯವಾಗಿದೆ.

ಗ್ರಾಮ/ನಗರ ನಿರಾಕರಿಸಿ ಹೊಸನೆಲೆಯಲ್ಲಿ ಬದುಕು ಕಟ್ಟಲು ಬಯಸುವ ವ್ಯಕ್ತಿಯ ಸಂಘರ್ಷ ಕುರಿತು ಪ್ರಸ್ತುತ ಕಥನ ಸಾಹಿತ್ಯ ಗ್ರಹಿಸಿದ ಅಂಶಗಳನ್ನು ಹೀಗೆ ಸಂಗ್ರಹಿಸಬಹುದು. • ಗ್ರಾಮ/ನಗರ ಆಶ್ರಯಿಸಿದ ಶ್ರಮಿಕ ವರ್ಗ ಅಲ್ಲಿನ ಪಟ್ಟಭದ್ರ ಹಿತಾಸಕ್ತಿಗಳ ವಿರೋಧ, ದೈಹಿಕ, ಆರ್ಥಿಕ ಸಂಘರ್ಷಗಳನ್ನು ಎದುರಿಸಬೇಕಾಗುತ್ತದೆ. • ಹೊಸನೆಲೆಯಲ್ಲಿ ವ್ಯಕ್ತಿಗಳು ಸಾಮಾಜಿಕ, ಆರ್ಥಿಕ ಮತ್ತು ಅಧಿಕಾರ ಸ್ಥಾನದಲ್ಲಿ ಒಂದು ಹಂತ ತಲುಪಿದಾಗ ಅವರ ಬೌದ್ಧಿಕ ಹೋರಾಟ, ಉಳುವಿಕೆಯ ಸ್ಪರ್ಧೆ (Struggle for existance) ಹಲವಾರು ರಂಗಗಳಲ್ಲಿ ಕಂಡುಬರುತ್ತದೆ. • ಬೌದ್ಧಿಕ, ಭಾವನಾತ್ಮಕ ಸಂಘರ್ಷಗಳು, ದ್ವಂದ್ವಗಳು ಬಹುತೇಕ ವಿದ್ಯಾವಂತ, ಮೇಲ್ವರ್ಗ(ಸ್ವಸಾಮರ್ಥ್ಯದಿಂದ ಉನ್ನತ ಸ್ಥಾನ ಗಳಿಸಿಕೊಂಡವರು)ದ ವ್ಯಕ್ತಿಗಳಲ್ಲಿ ಹೆಚ್ಚಾಗಿರುವುದು ಕಂಡುಬರುತ್ತದೆ. • ವ್ಯಕ್ತಿಯೊಬ್ಬನ ವೈವಾಹಿಕ ಸಂಬಂಧಕ್ಕಾಗಿ ಹಂಬಲಿಸುವ ಸ್ವಾರ್ಥ (ಯಾವ ಸೀಮೆಯ ಹುಡುಗ), ಇನ್ನೊಬ್ಬರ ವ್ಯಕ್ತಿತ್ವ ಹರಣದಿಂದ ತಾನು ಉನ್ನತಿ ಗಳಿಸುವ ಕುಯುಕ್ತಿ(ಕಡಲತೆರೆಗೆ ದಂಡೆ ಕತೆಯ ಸತ್ಯಪ್ರಮೋದ)ಗಳು ಇಂತಹ ದ್ವಂದ್ವಕ್ಕೆ ಕಾರಣವೆಂದು ಹೇಳಬಹುದು.

## ೨. ಕೌಟುಂಬಿಕ ನೆಲೆ ಮತ್ತು ಸಂಘರ್ಷ

### ಅ. ಆಂತರಿಕ ಸಂಘರ್ಷಗಳು

ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ವ್ಯಕ್ತಿ, ಕುಟುಂಬ ಮತ್ತು ಸಾಮಾಜಿಕ ಸಂಬಂಧಗಳು ಒಂದರೊಳಗೊಂದು ಹಾಸುಹೊಕ್ಕಾಗಿದ್ದು, ವ್ಯಕ್ತಿಯ ಸಾಮಾಜಿಕ ಸಂಬಂಧಗಳನ್ನು ಕುಟುಂಬ, ಜಾತಿ, ಧರ್ಮಗಳು ನಿರ್ದೇಶಿಸುತ್ತವೆ. ಹಳೆಯ ಸಂಬಂಧಗಳನ್ನು ಕಳಚಿಕೊಂಡ ವ್ಯಕ್ತಿಗಳು ಹೊಸ ಪರಿಸರದ ಸಂಬಂಧಗಳನ್ನು ಚಿಗುರಿಸಿಕೊಳ್ಳುವಾಗಿನ ಸಂಘರ್ಷ, ಸಂಕಟಗಳು ಆ ಕುಟುಂಬದ ಜಾತಿ, ಅಂತಸ್ತುಗಳನ್ನು ಅವಲಂಬಿಸಿವೆ. ಹೊಸ ನೆಲೆಯ (ಗ್ರಾಮ/ನಗರ) ಪರಿಸರ, ಸೌಲಭ್ಯ, ಆರ್ಥಿಕ ಸಂಗತಿಗಳು ಕುಟುಂಬದೊಳಗಿನ ವ್ಯಕ್ತಿಗತ ಸಂಬಂಧಗಳನ್ನು ಶಿಥಿಲಗೊಳಿಸಿ, ಸಂಘರ್ಷಕ್ಕಿಳಿಸುವುದನ್ನು ಕಾಣುತ್ತೇವೆ.

ಎಸ್. ಎಫ್. ಯೋಗಪ್ಪನವರ ಅವರ 'ಆರಾಮ ಖುರ್ಚಿ' ಕತೆಯ ಇಬ್ಬರು ಸಹೋದರರ ಸಂಘರ್ಷ ಆರ್ಥಿಕ ನೆಲೆಯಲ್ಲಿ ಹುಟ್ಟಿದ ಸಂಘರ್ಷವಾಗಿದೆ. ಹಳ್ಳಿಯ ಮುದುಕಿ ಹನುಮವ್ವ ಕೂಲಿ, ಕುಂಬಳಿ ಮಾಡುತ್ತಲೇ ಮಕ್ಕಳಾದ ಯಲಗುರುದಪ್ಪ, ಲಕ್ಷ್ಮಣರನ್ನು ಮೆಟ್ರಿಕ್‌ವರೆಗೆ ಓದಿಸಿ, ಹುಬ್ಬಳ್ಳಿಯಲ್ಲಿ ನೌಕರಿಗೆ ಸೇರಿಸುತ್ತಾಳೆ. ನಗರದ ವ್ಯಾಪಾರಿ ಮನೋಭಾವದ ಪ್ರಭಾವದಿಂದ ಮಕ್ಕಳಿಬ್ಬರೂ ಪಗಾರದ ನೋಟನ್ನು ಎಣಿಸುವುದನ್ನು ಕಲಿತುಕೊಂಡು, ಮುಂದೆ ಮಕ್ಕಳಿಗಾಗಿ, ಸ್ವಂತ ಮನೆ ಕಟ್ಟಿಸುವುದಕ್ಕಾಗಿ, ನಿವೃತ್ತಿಯಾದ ನಂತರ ಸುಖವಾಗಿ ಬದುಕುವುದಕ್ಕಾಗಿ ಪಗಾರ ಉಳಿಸುವ ಕಲೆಯನ್ನೂ ಕರಗತ ಮಾಡಿಕೊಳ್ಳುತ್ತಾರೆ. ಪ್ರಾವಿಡೆಂಟ್ ಫಂಡು, ಚೀಟಿ ಹೀಗೆ ಸ್ವಂತಿಕೆ ಹೆಚ್ಚಾಗಿ ಕುಟುಂಬದ ಖರ್ಚುಗಳಿಗೆ ಹಿಂದು ಮುಂದು ನೋಡಿದಾಗಲೆ ವೈಷಮ್ಯ ಚಿಗುರುತ್ತದೆ.

> 'ಹೆಂಡತಿಯರ ಜೊತೆ ತಮ್ಮ ತಮ್ಮ ಕೋಣೆಯಲ್ಲಿ ರಹಸ್ಯ ಮಾತುಕತೆ ಪ್ರಾರಂಭವಾಯ್ತು. ಒಬ್ಬರು ಮತ್ತೊಬ್ಬರನ್ನು ಕಳ್ಳರಂತೆ ನೋಡಲು ಪ್ರಾರಂಭಿಸಿದರು. ಹನುಮವ್ವ ಮುದುಕಿ ಎಲ್ಲವನ್ನೂ ಸುಮ್ಮನೇ ಗಮನಿಸುತ್ತಿದ್ದಳು.'[೧೦]

ದೊಡ್ಡ ಮಗ ಯಲಗುರುದಪ್ಪ ಹೊಸದಾಗಿ ಆರಾಮ ಖುರ್ಚಿಯೊಂದನ್ನು ಖರೀದಿಸಿ ತಂದಾಗ ಅದರ ಮೇಲೆ ಕುಳಿತು ಸುಖಿಸಲು ಕಳ್ಳತನದ ಸ್ಪರ್ಧೆ ಆರಂಭವಾಗಿ ಕೌಟುಂಬಿಕ ಸಂಬಂಧ ಇನ್ನೂ ಹದಗೆಡುತ್ತದೆ. ಒಂದು ದಿನ ಮನೆಯಿಂದ ಮಾಯವಾದ ಖುರ್ಚಿ, ಬಿಚ್ಚಿದ ಅಂಗಾಂಗಗಳೊಡನೆ ಮನೆಯ ಕಾಂಪೌಂಡಿನಲ್ಲಿದ್ದ ಬಾವಿಯಲ್ಲಿ ತೇಲಿ ಕಾಣಿಸಿಕೊಂಡು, ಹೊಸರೂಪ ಪಡೆದು ಮನೆಯಲ್ಲಿ ಮತ್ತೆ

ವಿರಾಜಮಾನವಾಗುತ್ತದೆ. ಮಕ್ಕಳನ್ನು ನೋಡುವಾಸೆಯಿಂದ ಹುಬ್ಬಳ್ಳಿಗೆ ಬಂದ ಮುದುಕಿ ಮಕ್ಕಳಿಬ್ಬರೂ ವೈರಿಗಳಾಗಿ ನಿಂತಿದ್ದನ್ನು ಗಮನಿಸಿ, ಸೊಸೆಯರಿಗೆ ಬುದ್ಧಿ ಹೇಳಿದರೂ ಸಂಸಾರ ತಿಳಿಯಾಗುವುದಿಲ್ಲ. ಊಟ ಮುಗಿಸಿ ಸ್ವಲ್ಪ ಹೊತ್ತು ಕುರ್ಚಿಯಲ್ಲಿ ಕುಳಿತ ಮುದುಕಿ ಎದ್ದೇಳುವುದಿಲ್ಲ.

ಇಲ್ಲಿಯ ಕೌಟುಂಬಿಕ ವಿಘಟನೆಗೆ ಆರ್ಥಿಕ ಘರ್ಷಣೆ (ತಾನು ಗಳಿಸಿದ್ದನ್ನು ತಾನು ಮಾತ್ರ ಹೊಂದಬೇಕೆನ್ನುವ ಲಾಲಸೆ) ಕಾರಣವಾಗಿದ್ದು, ಅದು ಬಹಿರಂಗಗೊಳ್ಳಲು ಆರಾಮ ಖುರ್ಚಿ ಒಂದು ಮೂರ್ತ ನೆಪ ಮಾತ್ರ ಎನ್ನಬಹುದು. ಆರಾಮ ಖುರ್ಚಿ, ಹೆಸರೇ ಸೂಚಿಸುವಂತೆ ಬಡ ಕುಟುಂಬವೊಂದರ ಐಷಾರಾಮಿ ವಸ್ತುವಿಗೆ ಸಾಂಕೇತಿಕ ನೆಲೆಯಾಗಿದೆ. ಬಡತನದಿಂದ ಮಧ್ಯಮ ವರ್ಗಕ್ಕೆ, ಹಳ್ಳಿಯ ಬದುಕಿನಿಂದ ನಗರದ (ಐಷಾರಾಮಿ?) ಜೀವನಕ್ಕೆ ಪಲ್ಲಟಗೊಳ್ಳುವಾಗ ಅನೇಕ ಕುಟುಂಬಗಳಲ್ಲಿ ಕಾಣಿಸಿಕೊಳ್ಳುವ ಅತಂಕ, ತಲ್ಲಣ(ದ್ವಂದ್ವ)ಗಳನ್ನು ಕತೆಯಲ್ಲಿ ಕಾಣುತ್ತೇವೆ. ನಾಗರಿಕತೆ ಬೆಳೆದಂತೆಲ್ಲ ಐಷಾರಾಮಿ ವಸ್ತು/ಉಪಕರಣಗಳ ಉಪಯೋಗ ಹೆಚ್ಚಾಗುತ್ತದೆ ಅಥವಾ ಐಷಾರಾಮಿ ವಸ್ತುಗಳ ಉಪಯೋಗ ಹೆಚ್ಚಿದಂತೆಲ್ಲಾ ನಾಗರಿಕತೆ ಬೆಳೆಯುತ್ತದೆ ಎಂಬ ಭ್ರಮೆ ಇಂದು ವ್ಯಾಪಕವಾಗಿ ಹರಡಿದೆ. ಇಂದಿನ ಮಧ್ಯಮ ವರ್ಗದ ಕುಟುಂಬಗಳಲ್ಲಿ ಕಾಣುವ ಟಿ.ವಿ., ಫ್ರಿಡ್ಜ್, ಕಾರು, ಎ. ಸಿ. ಇತ್ಯಾದಿ ಐಷಾರಾಮಿ ಉಪಕರಣಗಳು ಆಧುನಿಕ ತಂತ್ರಜ್ಞಾನದಲ್ಲಿ ಮಾನವನ ಪ್ರಗತಿಯನ್ನು ಸೂಚಿಸುವಂತೆ, ಕೌಟುಂಬಿಕ ಸಂಬಂಧಗಳ ಬುನಾದಿಯನ್ನೇ ಅಲ್ಲಾಡಿಸುವ ಹಾಗೂ ಮನುಷ್ಯ ಮನುಷ್ಯರ ನಡುವಿನ ಮಾನವೀಯ ಸಂಬಂಧಗಳನ್ನು ಕಳಚುವತ್ತ ಸಾಗಿವೆ. ಗ್ರಾಮೀಣ ಅವಿಭಕ್ತ ಕುಟುಂಬವೊಂದು ನಗರ ಸೇರಿ ದೈನಂದಿನ ಜೀವನಕ್ಕೆ, ಆಧುನಿಕ ಸೌಲಭ್ಯದ ಜಗತ್ತಿಗೆ ಮುಖಾಮುಖಿಯಾದಾಗ, ಕೌಟುಂಬಿಕ ಸಂಬಂಧಗಳು (ಇಲ್ಲಿ ಆರಾಮ ಖುರ್ಚಿ ಒಂದು ಸಂಕೇತ ಮಾತ್ರ, ಆರ್ಥಿಕ ನೆಲೆಯಲ್ಲಿ ಕೌಟುಂಬಿಕ, ಅಂತರ್‌ವ್ಯಕ್ತಿ ಸಂಬಂಧಗಳು ತೆಳುವಾಗುತ್ತವೆ ಎಂಬುದು ಹೆಚ್ಚು ಅರ್ಥಗರ್ಭಿತ) ಶಿಥಿಲವಾಗುತ್ತ ಹೋಗುವ ಸಂದರ್ಭವನ್ನು ಇಲ್ಲಿ ಕಾಣುತ್ತೇವೆ. ದುಡಿಮೆಯನ್ನು ನಂಬಿ ಬದುಕುತ್ತಿದ್ದ ಕೆಳವರ್ಗದ ಕುಟುಂಬ ಹಾಗೂ ಅದರ ಸದಸ್ಯರು, ಮನೆಗೆ ಬಂದ ಹೊಸ ವಸ್ತುವಿನ ಆಗಮನಕ್ಕೆ ತೋರುವ ಕುತೂಹಲ, ಅದನ್ನು ಅನುಭವಿಸುವ ಆಸೆ, ಆ ಸುಖಕ್ಕೆ ಸ್ಪಂದಿಸುವ ದೈಹಿಕ, ಮಾನಸಿಕ ಭಾವಗಳ ರೀತಿ ಅಚ್ಚರಿಯನ್ನು ಮೂಡಿಸುತ್ತದೆ. ಆರಾಮಖುರ್ಚಿ ಕೇವಲ ಸೌಲಭ್ಯ (ಆರಾಮದ)ದ ಸಂಕೇತವಾಗಿ ನಿಲ್ಲದೆ ಕದ್ದು ಅನುಭವಿಸುವ ಸುಖವಾಗುವುದು ಕೂಡ ಆಧುನೀಕರಣದ ಫಲವಾಗಿದೆ. ಹೀಗೆ ಆರಂಭವಾದ ಸುಖ ಅನುಭವಿಸುವ ಸ್ಪರ್ಧೆ ಪೈಪೋಟಿಯಾಗಿ ಮನೆಯ ಶಾಂತಿ ಕದಡಿ ಹೋಗಿ, ಮನೆಯಲ್ಲಿ ಎಲ್ಲೆಂದರಲ್ಲಿ ದ್ವೇಷದ ಹೊಗೆ, ಅಸೂಯೆಯ ಗೋಡೆಗಳು ಎದ್ದು ನಿಲ್ಲುತ್ತವೆ. ಸಂಸಾರದ ನೆಮ್ಮದಿಯನ್ನು ಕೊಂದ ಖುರ್ಚಿಯಲ್ಲಿ ಕುಳಿತು ಪ್ರಾಣಬಿಡುವ ಮೂಲಕ ಮುದುಕಿ, ಐಷಾರಾಮಿ ವಸ್ತುಗಳು, ಅವುಗಳನ್ನು ಹೊಂದುವ ಆಶೆ, ಲಾಲಸೆಗಳು ಕೌಟುಂಬಿಕ ನೆಮ್ಮದಿ, ಸಂತೋಷವನ್ನೇ ಕೊಲ್ಲುತ್ತವೆ ಎಂಬ ಸಂದೇಶ ಕೊಡುತ್ತಾಳೆ.

ವಿದ್ಯೆ, ಆರ್ಥಿಕ ಭದ್ರತೆ, ನಗರ ಸೌಲಭ್ಯ, ಮಾವನ ಮನೆಯ ಆಸರೆ ಇದ್ದ ಹಿರಿಯ ಸಹೋದರ ಚಿದಂಬರ, ತನ್ನ ಸ್ವಂತ ತಮ್ಮ ವೇಣುಗೋಪಾಲ ನೌಕರಿ ಹುಡುಕುತ್ತ ನಗರಕ್ಕೆ ಅಣ್ಣನಾಸರೆಗೆ ಬಂದಾಗ, ನಡೆಸಿಕೊಳ್ಳುವ ರೀತಿ ಮತ್ತು ತಮ್ಮನ ಕೀಳರಿಮೆ, ಅಲ್ಪತೃಪ್ತಿಯ ಬದುಕು ಇತ್ಯಾದಿ ಕರ್ಷಣೆಯನ್ನು ರಮಾನಂದ ಅಮೀನ ಅವರ 'ಗದ್ದೆಯ ಸೆರಗು' ಕಾದಂಬರಿ ಹೇಳುತ್ತದೆ. ಮಣ್ಣುಗುಡ್ಡೆ ಗ್ರಾಮದಿಂದ ಮುಂಬಯಿಗೆ ಉದ್ಯೋಗ ಅರಸಿ ಬಂದ ವೇಣುಗೋಪಾಲ ಜರಿದು ಬಿದ್ದ ತನ್ನ ಗ್ರಾಮದ ಮನೆಯನ್ನು ಎತ್ತಿಕಟ್ಟಲು ಆಶಿಸುತ್ತಾನೆ. ಉದ್ಯೋಗ ಮಾಡುತ್ತಲೇ ಕಾಲೇಜು ಸೇರಿ ಓದಿ ಪದವಿ ಗಳಿಸಿ, ಉನ್ನತ ದರ್ಜೆಯ ಪದವಿ ಪಡೆಯುವ ವೇಣುಗೋಪಾಲನನ್ನು ಅತ್ತಿಗೆ, ತನ್ನ ಸ್ವಂತ ತಮ್ಮಂದಿರಂತೆ ನಡೆಸಿಕೊಳ್ಳುವುದಿಲ್ಲ. ಆದರೆ ನೌಕರಿ ದೊರೆತ ನಂತರ ತಂಗಿಯನ್ನು ಕೊಟ್ಟು ಮದುವೆ ಮಾಡಲು ಪ್ರಯತ್ನಿಸುತ್ತಾಳೆ. ವೇಣುಗೋಪಾಲ ಮುಂಬಯಿ ಪ್ರವೇಶಿಸಿದ ದಿನದಿಂದ ಮುಂಬಯಿಯನ್ನು ಬಿಡುವವರೆಗೆ ಅವನಲ್ಲಿ ಅಣ್ಣನೊಂದಿಗೆ ಒಂದು ತಾತ್ವಿಕ ಭಿನ್ನತೆ ಕಾಣಿಸಿಕೊಳ್ಳುತ್ತದೆ. ಇದು ಸಾಮಾಜಿಕ, ಆರ್ಥಿಕ ಭದ್ರತೆ ಇರುವ ಮತ್ತು ಇಲ್ಲದಿರುವ ಎರಡು ಮನಸ್ಸುಗಳ ಜೀವನದೃಷ್ಟಿಯ ವೈರುಧ್ಯತೆಯಾಗಿ ಕೌಟುಂಬಿಕ ಸಂಘರ್ಷ(ದ್ವಂದ್ವ)ದ ರೂಪ ತಾಳಿದೆ.

ಟ್ಯಾಕ್ಸಿ ಡ್ರೈವರನ ಬೆನ್ನ ಹಿಂದೆ ಸಾಮಾನ್ಯ ಹುಡುಗನೊಬ್ಬ ಚಿಕ್ಕ ಬ್ಯಾಗು ಹಿಡಿದುಕೊಂಡು ಕಲ್ಲಿನಂತೆ ನಿಂತಿದ್ದನು. ಪ್ರಯಾಣದಲ್ಲಿ ಕೂದಲು ಕೆದರಿತ್ತು. ಬಟ್ಟೆ ಮಲಿನವಾಗಿತ್ತು. ಮುಖದಲ್ಲಿ ಜೀವಕಳೆ ಇರಲಿಲ್ಲ. ಅವನ ವೇಷ

ನೋಡಿ ಚಿದಂಬರನಿಗೆ ಎಲ್ಲಿಲ್ಲದ ಕೋಪ ಉಕ್ಕಿ ಬಂತು. ಡ್ರೈವರನೇ ತಮ್ಮನೆಂದು ಹೇಳಿದುದರಿಂದ ಮರ್ಯಾದೆ ಮುಚ್ಚಿಡಬೇಕಾಯಿತು. ಸ್ವಲ್ಪ ಹೊತ್ತು ಚಿದಂಬರನಿಗೆ ಏನು ಮಾಡಬೇಕೆಂದು ತೋಚಲಿಲ್ಲ.[೧೧]

ನಗರ ಸೇರಿ, ವಿದ್ಯಾಭ್ಯಾಸ ಮಾಡಿ ನೌಕರಿ ಗಳಿಸಿ ನಗರದಲ್ಲಿ ನೆಲೆನಿಂತ ಇಂದಿನ ತರುಣ, ತರುಣಿಯರು ಗ್ರಾಮೀಣ ಸಂಬಂಧಿಕರನ್ನು ಕಾಣುವ ರೀತಿ ಇಂದು ಬದಲಾಗಿದೆ. ಎರಡು ತಲೆಮಾರುಗಳ ನಡುವೆ ಉಂಟಾದ ಕೌಟುಂಬಿಕ ಬಿರುಕಿಗೆ ಈ ಮನೋಭಾವವೂ ಕಾರಣವಾಗುತ್ತದೆ. ವಾಸ್ತವಿಕವಾಗಿ ಗ್ರಾಮ, ನಗರ ಇವೆರಡೂ ನಿತ್ಯ ಬದುಕಿನಲ್ಲಿ ಪಾತ್ರಗಳಾಗಿ ನಿಲ್ಲುತ್ತವೆ. ಪಾತ್ರಗಳ ರೂಪದಲ್ಲಿ ಹಲವು ವಿಭಿನ್ನ ನಡತೆಗಳನ್ನು ಹೊರಹಾಕಿ ವೈವಿಧ್ಯತೆಯನ್ನು ಮೆರೆಯುತ್ತವೆ, ಮೌಲ್ಯಗಳನ್ನು ಸಂಕೇತಿಸುತ್ತವೆ. ಇಲ್ಲಿ ಚಿದಂಬರ ನಗರವಾಗಿ, ವೇಣುಗೋಪಾಲ ಗ್ರಾಮದ ರೂಪದಲ್ಲಿ ಅವನ ಮನೆಯನ್ನು ಪ್ರವೇಶಿಸುವ ಸಾಂಕೇತಿಕ ನೆಲೆಯನ್ನು ಕಾಣುತ್ತೇವೆ. ಈ ಸಂದರ್ಭದ ಕ್ಲಿಷ್ಟತೆಯನ್ನು ನಗರವೆಂಬ ಪಾತ್ರದ ದೃಷ್ಟಿಕೋನದಿಂದಲೂ ಗ್ರಹಿಸಬಹುದು. ನಗರದ ಬದುಕು ದುಸ್ತರವಾದದ್ದು! ಯಾರಾದರೂ ಹಳ್ಳಿಯಿಂದ ಸಂಬಂಧಿಕರು ಬಂದರೆ ನಗರವಾಸಿಯ ದಿನ ನಿತ್ಯದ ಬದುಕಲ್ಲಿ ವ್ಯತ್ಯಾಸ ಕಾಣಿಸಿಕೊಳ್ಳುತ್ತದೆ. ಅವನ ಯಾಂತ್ರಿಕ ಬದುಕಿನ ನಿತ್ಯಕರ್ಮಗಳಾದ ಊಟ, ತಿಂಡಿ, ನಿದ್ರೆಯ ವ್ಯವಸ್ಥೆಗಳು ತಮ್ಮ ಮೊದಲಿನ ಸ್ಥಿತಿಯನ್ನು ಬದಲಿಸಿಕೊಳ್ಳುತ್ತವೆ. ಇದು ನಗರ ಹಳ್ಳಿಯನ್ನು ಸ್ವಾಗತಿಸುವ ಒಂದು ಪರಿಯಾದರೂ ಇದರಲ್ಲಿ ವ್ಯವಸ್ಥೆಯ ಪಾತ್ರವನ್ನು ಮರೆಯುವಂತಿಲ್ಲ.

ನಗರೀಕರಣ, ಔದ್ಯೋಗೀಕರಣ, ಜಾಗತೀಕರಣದ ಇಂದಿನ ಸಂದರ್ಭಗಳಲ್ಲಿ, ಗ್ರಾಮೀಣ ಪ್ರತಿಭೆಗಳು ನಗರದ ಬಹುರಾಷ್ಟ್ರೀಯ ಕಂಪನಿಗಳಲ್ಲಿ ಸೇವಕ ವೃತ್ತಿಗೆ ತಮ್ಮನ್ನು ತಾವು ಅರ್ಪಿಸಿಕೊಂಡಿರುವುದು ಇತ್ತೀಚಿನ ಬೆಳವಣಿಗೆಯಾಗಿದೆ. ನಗರದಲ್ಲಿ ಹುಟ್ಟಿ, ನಗರದಲ್ಲಿ ಓದಿ ಬೆಳೆದ ಆಧುನಿಕ ಕನ್ಯೆಯನ್ನು, ಅದರಲ್ಲೂ ತನ್ನದೇ ಬ್ಯಾಂಕು, ಕಂಪನಿಯಲ್ಲಿ ಕೆಲಸ ಮಾಡುವ ಅಥವಾ ಅಲ್ಲಿಯ ಉದ್ಯೋಗಿಯ ಮಗಳನ್ನು ಜೀವನ ಸಂಗಾತಿಯಾಗಿ ಮಾಡಿಕೊಂಡು ಆರ್ಥಿಕ ಸುಭದ್ರತೆ ಪಡೆದದ್ದು ಕಂಡುಬರುತ್ತದೆ. ಆ ಮಹಿಳೆಗೆ ನಗರ ಜೀವನದಿಂದ ದೂರದಲ್ಲಿರುವ ಗ್ರಾಮೀಣ ಪರಿಸರದ ಬದುಕಿನ ಕಲ್ಪನೆಯೂ ಇರುವುದಿಲ್ಲ, ಗ್ರಾಮೀಣರ ಸುಖ ದುಃಖಗಳಿಗೆ ಸ್ಪಂದಿಸಿರುವುದಿಲ್ಲ. ವೇಣುಗೋಪಾಲ ಇದನ್ನು ಸ್ಪಷ್ಟವಾಗಿ ಗುರುತಿಸಿದ್ದು, ಮುಂಬಯಿಯ ಈ ಸಾಂಸ್ಕೃತಿಕ ಗಂಭೀರತೆ ಅವನೆದೆಯನ್ನು ನಡುಗಿಸಿದೆ. ಅಣ್ಣ ಚಿದಂಬರ ಮುಂಬಯಿಯ ಹೆಣ್ಣನ್ನು ಮದುವೆಯಾದಾಗ ಅವಳು ತನ್ನ ಮನೆಯನ್ನು ತವರುಮನೆಯ ಸಹಕಾರದೊಂದಿಗೆ ಕಟ್ಟಿಕೊಂಡಳು, ಬದಲಾಗಿ ಚಿದಂಬರನ ಮನೆಯನ್ನು ಕಟ್ಟಲಿಲ್ಲ. ಆದರೆ ವೇಣುಗೋಪಾಲನಿಗೆ ತನ್ನ ದೇಹ ಮುಂಬಯಿಯಲ್ಲಿದ್ದರೂ ಬದುಕು ಹಳ್ಳಿಯಲ್ಲಿದೆ ಎಂಬ ಮಾನಸಿಕ ಸಂಘರ್ಷವಿದೆ. ಮನದ ಮೂಲೆಯಲ್ಲೆಲ್ಲೋ ತನ್ನವರ ನೋವು, ದೀನಸ್ಥಿತಿ ನಿಂತಿರುತ್ತದೆ. ಅವನು ತನ್ನ ಅತ್ತಿಗೆಯ ತಂಗಿಯನ್ನು ಮದುವೆಯಾಗಲು ಇದೇ ಕಾರಣಕ್ಕೆ ಒಪ್ಪುವುದಿಲ್ಲ. ಹೆಜ್ಜೆ ಹೆಜ್ಜೆಗೂ ಅಣ್ಣ ತಮ್ಮಂದಿರಲ್ಲಿಯ ಅಭಿಪ್ರಾಯ ಭಿನ್ನತೆ/ಸಂಘರ್ಷವನ್ನು ಗುರುತಿಸುತ್ತೇವೆ.

ಕುಟುಂಬದ ಯಜಮಾನನ ದುಶ್ಚಟಗಳಿಂದ ಗ್ರಾಮೀಣ ನೆಲೆ ಕಳೆದುಕೊಂಡು ನಗರದ ಹೊಸ ನೆಲೆಯಲ್ಲಿ ಬದುಕು ಕಂಡ ಪಾಟೀಲ ಪುಟ್ಟಪ್ಪ ಅವರ 'ಹೊನ್ನಯ್ಯನ ಬದುಕು' ಕತೆಯ ಹೊನ್ನಯ್ಯನ ಸಂಸಾರ ನಗರದಲ್ಲಿ ಅನೇಕ ಸಂಕಷ್ಟಗಳನ್ನು ಅನುಭವಿಸಿ ನೆಲೆ ನಿಲ್ಲುತ್ತದೆ. ಇಂತಹ ಕುಟುಂಬದ ಸೊಸೆಯಾಗಿ ಪುಟ್ಟತಾಯಿ ತನ್ನ ತವರಿನಿಂದ ಎರಡು ಎಮ್ಮೆ ತಂದು ನಗರದಲ್ಲಿ ಹಾಲಿನ ವ್ಯಾಪಾರ ಮಾಡಿ ಒಂದು ನೆಲೆ ಕಾಣಬೇಕೆನ್ನುವಾಗ, ಹನುಮಯ್ಯ ಹಾಲು ಹಾಕಲು ಹೋಗಿ ಮ್ಯಾಜಿಸ್ಟ್ರೇಟರ ಮನೆಯ ಚಿನ್ನದ ಕಂಠೀಹಾರ ಕದ್ದು ಸಿಕ್ಕುಬೀಳುತ್ತಾನೆ. ಇವನ ಕಾರ್ಯಗಳನ್ನು ವಿರೋಧಿಸಿದ ಹೆಂಡತಿ ಓಬವ್ವನಿಗೆ ಇವನು ಕೊಡುವ ಉತ್ತರ, ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಕುಟುಂಬದ ಯಜಮಾನನ ಸ್ಥಾನವನ್ನು ಪುನರ್ ವ್ಯಾಖ್ಯಾನಕ್ಕೆ ಒಳಪಡಿಸಬೇಕಾದ ಸಂದರ್ಭವಾಗಿದೆ.

"ನೀನು ನನ್ನ ಹೆಂಗ್ಸು, ಅವ್ನು ನನ್ನ ಮಗ, ಆಕೆ ನನ್ನ ಸೊಸಿ. ನೀವೆಲ್ಲ ನಾನು ಏಳ್ದಂಗೆ ಕೇಳ್ಕೊಂಡು ಇರ್ಬೇಕು. ಇಲ್ಲಾಂದ್ರೆ, ನೋಡ್ರಿ, ನಿಮ್ಮ ಹೆಣಾ ಬೀಳ್ಸಿಬಿಟ್ಟೇನು" ಎಂದು ಹನುಮಯ್ಯ ತನ್ನ ಹಿರಿತನದ ಅಧಿಕಾರವನ್ನು ಪ್ರಯೋಗಿಸುವ ಹೆದರಿಕೆ ಹಾಕಿದ'.[೧೨]

ಭಾರತೀಯ ಕೌಟುಂಬಿಕ ವ್ಯವಸ್ಥೆಯಲ್ಲಿ ಯಜಮಾನಿಕೆಯ ದರ್ಪ, ಸರ್ವಾಧಿಕಾರ ರಾಜಾರೋಷವಾಗಿ ಅಪ್ರತಿಹತವಾಗಿ ಮುಂದುವರೆಯುವ ರೀತಿಯನ್ನು ಈ ಮಾತುಗಳು ಹೊರಹಾಕಿವೆ. ಇಲ್ಲಿಯ ಕೌಟುಂಬಿಕ ಸಂಘರ್ಷವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ, ಇದು ಮೂವರ ಶ್ರಮ ಮತ್ತು ಒಬ್ಬನ ವಿಲಾಸತೆಯ ಮಧ್ಯೆ ನಡೆದ ಸಂಘರ್ಷವೆನಿಸುತ್ತದೆ. ಕುಟುಂಬದ ಸದಸ್ಯರೆಲ್ಲ ತನ್ನ ಆಸ್ತಿ, ಅವರ ನಡತೆ, ವರ್ತನೆ, ಶ್ರಮ, ಪ್ರತಿಫಲಗಳನ್ನು ತಾನು ಮಾತ್ರ ನಿರ್ಧರಿಸುವವನು ಎಂಬ ಯಜಮಾನಿಕೆಯ ಸಂಪ್ರದಾಯದ ಹಿಡಿತ ಹನುಮಯ್ಯನ ವರ್ತನೆಯಲ್ಲಿ ಕಂಡುಬರುತ್ತದೆ. ಕೌಟುಂಬಿಕ ನೆಲೆಯಲ್ಲಿ ತಾನು ಅತ್ಯುಚ್ಚ (Supreme), ಉಳಿದವರು ತನ್ನ ಕೈಕೆಳಗಿನ ದುಡಿಯುವ ವರ್ಗ ಎಂಬ ಭಾವನೆ ಜಡಗಟ್ಟಿದ ಸಮಾಜದ ಜೀವವಿರೋಧಿ ನೀತಿಯಾಗಿದ್ದು, ಇದೇ ನೆಲೆಯಲ್ಲಿ ವರ್ಣ, ವರ್ಗ ಶೋಷಣೆಗಳ ಹುಟ್ಟು, ಬೆಳವಣಿಗೆಗಳು ಗ್ರಾಮೀಣ ಸಮಾಜದಲ್ಲಿ ಕಂಡುಬರುತ್ತವೆ. ಹನುಮಯ್ಯನ ಈ ಹಠದಿಂದ ಗ್ರಾಮದ ಆಸ್ತಿಯೆಲ್ಲ ಜುಗಾರಿ ಆಟಕ್ಕೆ ಮಾರಲ್ಪಟ್ಟು, ನಗರದಲ್ಲಿಯೂ ಅವನ ವರ್ತನೆಗಳು ಸುಧಾರಿಸುವುದಿಲ್ಲ, 'ಗರ ವಿಶಾಲತೆ ಇಲ್ಲಿ ಅವನ ಕಸುಬಿಗೆ ಸಹಕಾರಿಯಾಗುವುದು ಕತೆಯಲ್ಲಿ ಧ್ವನಿಸುತ್ತದೆ. ಮಗ ಹೊನ್ನಯ್ಯ, ಸೊಸೆ ಮಟ್ಟತಾಯಿಯರ ಸ್ವತಂತ್ರ ಜೀವನದ ಹಂಬಲ, ಶ್ರಮ ಇಂತಹ ಯಜಮಾನಿಕೆ ಸಂಸ್ಕೃತಿಯಿಂದ ಸಾಕಾರಗೊಳ್ಳುವುದಿಲ್ಲ. ಅನೇಕ ಕುಟುಂಬಗಳಲ್ಲಿ ಯುವಜನಾಂಗ ಇಂತಹ ಯಜಮಾನಿಕೆ ಸಂಸ್ಕೃತಿಯನ್ನು ತಿರಸ್ಕರಿಸಿ, ಸ್ವಂತಂತ್ರ ಬದುಕು, ಭಾವನೆ, ಕನಸುಗಳನ್ನು ಹೊತ್ತು ಅವಿಭಕ್ತ ಕುಟುಂಬ ನಿರಾಕರಿಸುವುದನ್ನು ಕಾಣುತ್ತೇವೆ.

**ಬ. ಕುಟುಂಬ ಮತ್ತು ಸಮಾಜ : ಸಂಘರ್ಷಗಳು**

ಗ್ರಾಮ/ನಗರ ನಿರಾಕರಿಸಿ ಬಂದ ಕುಟುಂಬಗಳು ಸಾಮಾಜಿಕ ವ್ಯವಸ್ಥೆ ಒಡ್ಡಬಹುದಾದ ಅಡೆತಡೆಗಳೊಂದಿಗೆ ಸಂಘರ್ಷಿಸಬೇಕಾದ ಸಂದರ್ಭಗಳು ಕಥನ ಸಾಹಿತ್ಯದಲ್ಲಿ ಕಂಡುಬರುತ್ತವೆ. ಈಗಾಗಲೆ ನೆಲೆಯೂರಿದ ಸಾಮಾಜಿಕ, ಆರ್ಥಿಕ, ಧಾರ್ಮಿಕ (ಅಧಿಕೃತ/ಅನಧಿಕೃತ) ವ್ಯವಸ್ಥೆಗಳು ಹೊಸನೆಲೆಗೆ ಬಂದ ಕುಟುಂಬಗಳನ್ನು ಹಲವಾರು ಕಾರಣಗಳಿಗಾಗಿ ಶೋಷಿಸುವುದು, ದೌರ್ಜನ್ಯಕ್ಕೆ ಈಡು ಮಾಡುವುದು ಕಂಡುಬರುತ್ತದೆ.

ತುಳಸಿ ವೇಣುಗೋಪಾಲ ಅವರ 'ಹೊಂಚು' ಕಥೆಯ ರೈತನಾದ ಪಾಂಡು, ಗ್ರಾಮದಲ್ಲಿ ಬಿದ್ದ ಅನಾವೃಷ್ಟಿಯಿಂದ ಬೇಸತ್ತು, ತನ್ನ ಹೆಂಡತಿಯ ಅಣ್ಣ ಪುಂಡಲಿಕ(ಭಾವು)ನ ಆಸರೆಗೆ ಮುಂಬಯಿ ನಗರ ಸೇರುತ್ತಾನೆ. ಭಾವು 'ನಡೆಯುರಲ್ಲ ಮುಂಬಯಿಗೆ' ಎಂದು ಕರೆದಾಗ, ಮುಗ್ಧ ಪಾಂಡುವಿನ ಕಣ್ಣಲ್ಲಿ ಮುಂಬಯಿಯ ಬಣ್ಣಬಣ್ಣದ ಗಗನಚುಂಬಿ ಕಟ್ಟಡಗಳು, ರಸ್ತೆಗಳು, ಐಷಾರಾಮಿ ಬದುಕು ಕನಸಾಗಿ ತುಂಬಿಕೊಳ್ಳುತ್ತದೆ. ಆದರೆ ವಸ್ತುಸ್ಥಿತಿ ಬೇರೆಯೇ ಆಗಿದ್ದು ಮುಂಬಯಿ ನಗರದ ಪಟ್ಟಭದ್ರ ಹಿತಾಸಕ್ತಿಗಳು ಪಾಂಡುವಿನ ಇಡೀ ಸಂಸಾರವನ್ನು ಹಿಂಡಿ ಹಿಪ್ಪೆ ಮಾಡುತ್ತವೆ. ನಗರ ಪ್ರವೇಶದ ದಿನ ಅವನು ಕೊಳೆಗೇರಿ ಸೇರಿಕೊಂಡಾಗ, 'ತಾನೊಂದು ಭಯಾನಕ ಗುಹೆಯೊಳಗೆ ಕುಳಿತಿರುವಂತೆ ಅನಿಸಿಬಿಟ್ಟಿತು' ಎಂಬ ಪಾಂಡುವಿನ ಅನಿಸಿಕೆ ಬೆಂಕಿಯಿಂದ ಬಾಣಲಿಗೆ ಜಿಗಿದ, ನಗರದ ಕರಾಳ ವ್ಯವಸ್ಥೆಯ ಪಂಜರದೊಳಗೆ ಸಿಕ್ಕುಕೊಂಡ ಅನುಭವವಾಗುತ್ತದೆ. ನಂತರ ಕಾಕೂ(ಅತ್ತೆ)ಳ ಸಂಸಾರದಿಂದ ಇವರನ್ನು ಹೊರಕ್ಕೆ ದಬ್ಬುವ, ಕಳ್ಳ ದಂದೆಯಲ್ಲಿ ಕಾರ್ಯ ನಿರ್ವಹಣೆ, ಜೈಲು, ಬಿಡುಗಡೆಯ ನಂತರ ಮೊದಲಿನ ದಂದೆ ಮಾಡಲು ಒಪ್ಪದ ಪಾಂಡುವಿಗೆ ದೈಹಿಕ ಹಿಂಸೆ, ಮುಂಬಯಿ ನಗರ ಪಾಲಿಕೆಯಲ್ಲಿ ರಾತ್ರಿ ವೇಳೆಯಲ್ಲಿ ಇಲಿ ಹೊಡೆಯುವ ಕೆಲಸ ಮುಂತಾದವುಗಳು ಗ್ರಾಮದ ಪಾಂಡು ಹೈರಾಣಾಗುವಂತೆ ಮಾಡುತ್ತವೆ. ಹೊಲ, ಮನೆ ಮಾರಿ ಬಂದ ಹಣ ಖಾಲಿಯಾಗಿ, ರಾತ್ರಿ ಹೊಡೆಯಲು ಇಲಿಗಳು ಸಿಗದೆ, ನಗರಕ್ಕೆ ಹೋಗಬೇಡಲೋ ಹುಂಬಾ ಎಂದು ಬೈದಿದ್ದ ತಾಯಿ ನೆನೆದು 'ಆಯಿ, ಹೇ ಆಯಿ, ಆಯಿಗೋ' ಎಂದು ಸಶಬ್ದವಾಗಿ ಅಳುತ್ತಾನೆ. ಸಕ್ಕೂ ಬಟ್ಟೆ ಮಾರಾಟದ ಮಳಿಗೆಯಲ್ಲಿ ಕೆಲಸ ಹಿಡಿಯುತ್ತಾಳೆ. ಕುಟುಂಬ ಅನೇಕ ಕಷ್ಟಕಾರ್ಪಣ್ಯಗಳನ್ನು ಸಹಿಸಿದರೂ ಆರ್ಥಿಕಸ್ಥಿತಿ ಒಂದು ತಹಬಂದಿಗೆ ಬರುವುದಿಲ್ಲ. ಇವರ ಆರ್ಥಿಕ ಸಂಕಷ್ಟದ ಅರಿವಿದ್ದ ಭಾವು ತಂಗಿಯನ್ನು ತನ್ನ ಇಸ್ಪೀಟ್ ಅಡ್ಡೆಯ ಸ್ನೇಹಿತರ ಕಾಮದಾಹಕ್ಕೆ ಬಳಸಿಕೊಂಡಾಗ ಪಾಂಡುವಿನ ಕುಟುಂಬ ದುರಂತದಲ್ಲಿ ನಾಶವಾಗುತ್ತದೆ. 'ಇಲ್ಲಿ ಇಲಿ ಹೊಡೆದರೂ ಅನ್ನ ಹುಟ್ಟುತ್ತದಲ್ಲೋ ಪುಂಡ್ಯಾ'[೧೩] ಎಂದು ಸಖೇದಾಶ್ಚರ್ಯದಲ್ಲಿ ನುಡಿದಿದ್ದ ಪಾಂಡುವಿನ ಮಾತಿನಿಂದ ಗ್ರಾಮ ನಗರಗಳ ಎರಡು ವಿಭಿನ್ನ ಮುಖ(ಆರ್ಥಿಕ ವ್ಯವಸ್ಥೆಯ)ಗಳನ್ನು ಅರಿಯಬಹುದು. ಕಷ್ಟಪಟ್ಟು, ಬೆವರು ಸುರಿಸಿ ನ್ಯಾಯವಾಗಿಯೇ ದುಡಿದು ಬದುಕಬೇಕೆನ್ನುವ ಗ್ರಾಮೀಣ ಪಾತ್ರವಾಗಿ ಪಾಂಡು,

ಹೇಗಾದರೂ ಮಾಡಿ ಹಣ ಗಳಿಸಿ ಶ್ರೀಮಂತನಾಗಲು ವೇಗದ (ಕಾಳಸಂತೆಯ) ಬೆಂಬತ್ತಿದ ನಗರ ಪಾತ್ರವಾಗಿ ಭಾವು ನಿಲ್ಲುತ್ತಾರೆ. ಗ್ರಾಮ, ನಗರಗಳು ಪಾತ್ರಗಳಾಗಿ ಮುಖಾಮುಖಿಯಾಗುವುದನ್ನು ಮತ್ತು ಈ ಸಂಘರ್ಷದಲ್ಲಿ ಗ್ರಾಮವು ಸೋಲೊಪ್ಪುವುದನ್ನು ಕಾಣುತ್ತೇವೆ. ಆದರೆ ಒಬ್ಬ ಮಹಿಳೆಯಾಗಿ, ಮಕ್ಕಳ ಹಸಿವು, ಬಟ್ಟೆ, ಶಾಲಾ ಶುಲ್ಕಕ್ಕಾಗಿ ತನ್ನನ್ನು ತಾನು ಮಾರಿಕೊಂಡ ಸಕ್ಕುವಿನದು ದುರಂತ ಬದುಕಾಗಿದೆ. ಭಾರತೀಯ ಮಹಿಳೆ ಮತ್ತು ಶೋಷಣೆಯ ಸಂದರ್ಭದಲ್ಲಿ, ನಿಜವಾದ ಅರ್ಥದಲ್ಲಿ 'ಶ್ರಮಜೀವಿ' ಎಂಬ ಹೆಸರು ಹಾಲಿ ಬೂರ್ಜ್ವಾ ವ್ಯವಸ್ಥೆಯಲ್ಲಿ ಗಂಡಿಗಿಂತ ಹೆಣ್ಣಿಗೆ ಅಕ್ಷರಶಃ ಸಲ್ಲಬೇಕಾಗಿರುವುದಾದರೂ, ಅವಳ ಶ್ರಮ ನಿರುತ್ಪಾದಕವಾಗಿ ಉಳಿದಿದೆ. ಹೆಣ್ಣಿನ ಪ್ರಜ್ಞೆಯನ್ನು ಸಾವಿರಾರು ವರ್ಷಗಳಿಂದಲೂ ನಿರ್ಬಂಧಿಸಿರುವುದರಿಂದ, ವಿಕಸನವೆಂಬುದು ಆಕೆಗೆ ಸಂಪೂರ್ಣ ವಿದೇಶೀಯ ಪರಿಕಲ್ಪನೆಯಾಗಿದೆ. ಬಿಡುಗಡೆ (Emancipation) ಆಕೆಗೆ ಕನಸಿನ ಮಾತಾಗಿದೆ. ಇದಕ್ಕೆ ಬಂಡವಾಳಶಾಹಿ ಹಾಗೂ ಪುರುಷಪ್ರಧಾನ ವ್ಯವಸ್ಥೆಯ ಕರಾಳ ಹಿಡಿತವೆ ಕಾರಣ ಎಂಬ ನಿಲವು ಅಧ್ಯಯನದ್ದಾಗಿದೆ.

ಶೋಷಣೆ, ಶೋಷಣೆಯ ನಂತರ ನಡೆಯುವ ಸಂಘರ್ಷಗಳ ಎರಡು ವಿಭಿನ್ನ ರೂಪಗಳನ್ನು ಅವು ವ್ಯಾಪಿಸುವ ನೆಲೆಗಳನ್ನು ವ್ಯಾಸರಾಯ ಬಲ್ಲಾಳ ಅವರ 'ಬಂಧಮುಕ್ತಿ' ಕತೆಯಲ್ಲಿ ಸಂಕಪ್ಪನ ಗ್ರಾಮ ಮತ್ತು ನಗರಗಳ ಹೋರಾಟದ ಸಂದರ್ಭದಲ್ಲಿ ಗುರುತಿಸುತ್ತೇವೆ. ಗ್ರಾಮೀಣ ಪ್ರದೇಶದಿಂದ ಮುಂಬಯಿಗೆ ಹೋಗಿ ಕಾರ್ಖಾನೆಯೊಂದರಲ್ಲಿ ಸಾಮಾನ್ಯ ಕೂಲಿಯಾಗಿ ಸೇರಿ, ಸಂಜೆ ಕಾಲೇಜುಗಳಲ್ಲಿ ಓದಿ ಯೂನಿಯನ್ನಿನ ಉಪಾಧ್ಯಕ್ಷನಾದ ಸಂಕಪ್ಪ, ಕಾರ್ಖಾನೆಯ ನಾಲ್ಕು ನೂರು ಮಂದಿ ಕೆಲಸಗಾರರನ್ನು ಕಲೆಹಾಕಿ ಎರಡು ಗಂಟೆಗಳ ಕಾಲ ನಿರರ್ಗಳವಾಗಿ ಮಾತನಾಡುವ ಶಕ್ತಿ, ಪ್ರತಿಭೆ ಹೊಂದಿದವನು. ಆದರೆ ಆ ಶಕ್ತಿ, ಪ್ರತಿಭೆ, ಸಾಮರ್ಥ್ಯ ಯಾವುದೂ ಗ್ರಾಮದಲ್ಲಿ ತನ್ನ ತಂದೆ ಮಾಡಿದ ಎರಡು ಸಾವಿರ ರೂಪಾಯಿ ಸಾಲ, ಎರಡು ವರ್ಷದ ಗೇಣಿ ಬಾಕಿಗಾಗಿ ಬರೆದು ಕೊಟ್ಟ ನೋಟ್(Note)ನಿಂದ ರಕ್ಷಿಸಲು ಆಗುವುದಿಲ್ಲ.

> 'ಅವರೆಲ್ಲರ ಜಾತಿಯು ಒಂದೇ. ಮುಂಬಯಿಯಲ್ಲಿ ನಮ್ಮ ಕಾರ್ಖಾನೆಯಲ್ಲಿಯೂ ಇಂತಹುದ್ದೇ ಪ್ರಶ್ನೆಯಿದ್ದಿದೆ. ಇಲ್ಲಿ ಗೇಣಿಬಾಕಿ ಮತ್ತು ಸಾಲ. ಅಲ್ಲಿ ಕಡಿಮೆ ಸಂಬಳ-ಅದರಿಂದಾಗಿ ಸಾಲ. ಹೀಗೆ ಎಲ್ಲ ಕಡೆಯಲ್ಲಿಯೂ ಒಂದೇ ರಾಗ....(ಪುಟ ೪೯) 'ಈ ಊರು ಮುಂಬಯಿಯಾಗಿದ್ದರೆ ನಮ್ಮಂತ ಬಡವರಲ್ಲಿ ಸ್ವಲ್ಪ ಒಗ್ಗಟ್ಟು ಹೆಚ್ಚು ಇದ್ದಿದ್ದರೆ, ನಮ್ಮನ್ನು ದುಡಿಸಿಯೇ ದುಡ್ಡು ರಾಶಿ ಹಾಕುವ ಈ ಧಣಿಯರಿಗೆಲ್ಲ ಬುದ್ಧಿ ಕಲಿಸುತ್ತಿದ್ದೆ.'[೨]

ಸಂಕಪ್ಪನ ಮಾತುಗಳು ಅವನ ಹೋರಾಟದ ಸೋಲು, ಸೋಲಿನಲ್ಲಿನ ಅಸಹಾಯಕತೆಯನ್ನು ಸೂಚಿಸುತ್ತವೆ. ಅತ್ತ ಪೈ ಎಂಬ ಭೂಮಾಲೀಕನಿಗೆ ಹಣ ಕಟ್ಟಬೇಕು, ಇತ್ತ ನಗರದಲ್ಲಿ ನಡೆಯುವ ಕಾರ್ಖಾನೆ ಬಂದ್ ಆಗಿ ಕುಟುಂಬ ಕಷ್ಟದಲ್ಲಿದೆ. ಅಂತಿಮವಾಗಿ ಸಂಕಪ್ಪನ ಬಂಧನವಾಗುತ್ತದೆ. ಸಂಕಪ್ಪ ಈಗ ಬಂದಾನು, ಹಣ ತಂದು ಗೇಣಿ ಬಾಕಿ ಚುಕ್ತಾ ಮಾಡಿಯಾನು ಎಂದು ತಂದೆ, ಹೆಂಡತಿ, ಮಗು ಹಳ್ಳಿಯಲ್ಲಿ ಕಾಯುತ್ತಲೇ ಇರುತ್ತಾರೆ. ಗ್ರಾಮೀಣ ಪಾತ್ರಗಳು ನಗರದತ್ತ ಬಿಡುಗಡೆಯ ಆಸೆಯಿಂದ ನಿರೀಕ್ಷಿಸುವ ಮೂಲದಲ್ಲಿ ಗ್ರಾಮ ನಗರಗಳ ಭಾವನಾತ್ಮಕ ದ್ವಂದ್ವವನ್ನು ಗುರುತಿಸುತ್ತೇವೆ. ಈ ಸಂದರ್ಭದಲ್ಲಿ ಎರಡು ಬಗೆಯ ಶೋಷಣೆಯನ್ನು ಕಾಣುತ್ತೇವೆ. ಗ್ರಾಮಗಳಲ್ಲಿ ಗ್ರಾಮೀಣ ಜನತೆಯನ್ನು ಶೋಷಿಸುವ ಮೇಲ್ಜಾತಿಯ ಜಮೀನ್ದಾರಿ ವರ್ಗ ಗೇಣಿ ಪದ್ಧತಿಯನ್ನು ಒಂದು ಅಸ್ತ್ರವಾಗಿ ಬಳಸಿಕೊಂಡಿರುವುದು ಮೊದಲನೇ ಬಗೆಯದ್ದು. ಆರ್ಥಿಕ ಅಸ್ಥಿರತೆ, ಕಾರ್ಮಿಕ ಸಂಘಗಳ ಒಡಕು, ಭಿನ್ನಾಭಿಪ್ರಾಯಗಳನ್ನು ಅಸ್ತ್ರ ಮಾಡಿಕೊಂಡ ನಗರದ ಬಂಡವಾಳಶಾಹಿಗಳು ಇನ್ನೊಂದು ಬಗೆಯ ಶೋಷಕರಾಗಿದ್ದಾರೆ. ಇವೆರಡೂ ಸಂದರ್ಭಗಳಲ್ಲಿ ರಾಜಾರೋಷವಾಗಿ ಶ್ರಮದ ಅಪಮೌಲ್ಯವಾಗುವುದು ವ್ಯವಸ್ಥೆಯ ವ್ಯಂಗ್ಯವಾಗಿದೆ. ಇದು ಶ್ರಮಿಕ ವರ್ಗದ ನಿರಂತರ ಶೋಷಣೆಯ ಅಂತರಾಳವನ್ನು ತೋರಿಸುತ್ತದೆ. ಕುಟುಂಬ ಮತ್ತು ಸಮಾಜಗಳ ಮುಖಾಮುಖಿಯಲ್ಲಿ ನಡೆಯುವ ಶೋಷಿತ-ಶೋಷಕರ ಸಂಘರ್ಷ (ದ್ವಂದ್ವ) ಇದಾಗಿದೆ.

ಸದಾನಂದ ಸುವರ್ಣ ಅವರ 'ಚಿನ್ನದ ಗೊಂಬೆ' ಕತೆಯ ಲಕ್ಷ್ಮೀನಾರಾಯಣನ ಕುಟುಂಬ ನಗರದ ಕೃತ್ರಿಮ ವ್ಯವಸ್ಥೆಗೆ ಬಲಿಯಾದ ಕುಟುಂಬವಾಗಿದೆ. ಲಕ್ಷ್ಮೀನಾರಾಯಣ, ಹೆಂಡತಿ ನಾಗವೇಣಿಯ ಮಾತು ಕೇಳಿ ಕಡಿಮೆ ಬೆಲೆಗೆ ಚಿನ್ನದ ಬಿಸ್ಕತ್‌ಗಳನ್ನು ಕೊಂಡು ಹೆಚ್ಚಿನ ಬೆಲೆಗೆ ಮಾರಿ ಬೇಗ ಶ್ರೀಮಂತರಾಗುವ ಆಸೆಯಿಂದ ತಾನು ಕೆಲಸ ಮಾಡುವ ಬ್ಯಾಂಕಿನ ಹಣ ದುರುಪಯೋಗಪಡಿಸಿಕೊಳ್ಳುತ್ತಾನೆ. ಮೋಸಹೋದ

ನಂತರ ಆತ್ಮಹತ್ಯೆಗೆ ಶರಣಾಗುತ್ತಾನೆ. ಮಸ್ಕತ್‌ನ ಜೋಸೆಫ್‌ನಂತಹ ಸ್ಮಗ್ಲಿಂಗ್, ಚೀಟಿ ವ್ಯವಹಾರ, ಹಣ ದ್ವಿಗುಣ ಮಾಡುವ ಅನೇಕ ಕಪಟ ಗುಂಪುಗಳು ಗ್ರಾಮ/ನಗರವನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿವೆ. ಗ್ರಾಮೀಣ ಜನರ, ಮುಗ್ಧರ, ಹಣದಾಸೆಯ ಸಂಸಾರಗಳನ್ನು ಮೋಸ ಮಾಡುವುದು ಅವರ ವ್ಯಾಪಾರ, ವ್ಯವಹಾರದ ಒಂದು ಅಂಗವಾಗಿದೆ. 'ನಾಗವೇಣಿಯ ಅಲಂಕಾರ ಸಾಧನಗಳಿಗೆ ಅವನ ಸಂಬಳದ ಅರ್ಧಪಾಲು ಖರ್ಚಾಗುತ್ತಿತ್ತು. ಉಳಿದರ್ಧದಿಂದ ಮನೆಬಾಡಿಗೆ, ಮನೆಖರ್ಚು, ಅವನ ವೈಯಕ್ತಿಕ ಖರ್ಚಿಗೆ ಹಣ ಸಾಕಾಗುತ್ತಿರಲಿಲ್ಲ’[೫] ಎಂಬ ನಿರೂಪಕರ ಮಾತು, ಕುಟುಂಬದ ಉತ್ಪನ್ನವನ್ನು ಅರಿಯದೆ ಆಧುನಿಕ ಜೀವನಶೈಲಿಗೆ ಸೋತು ಹೆಣಗುವ ದಂಪತಿಗಳು ಅಪಾಯವನ್ನು ಆಹ್ವಾನ ಮಾಡಿಕೊಳ್ಳುವ ರೀತಿಯನ್ನು ಅನಾವರಣಗೊಳಿಸಿದೆ. ಹಾಗಾದರೆ ಇಂದಿನ ಗ್ರಾಮಗಳೆಲ್ಲ ಮೋಸ, ವಂಚನೆ, ದರೋಡೆಗಳಿಂದ ಮುಕ್ತವಾಗಿವೆ ಎಂದು ಹೇಳಲಾಗುವುದಿಲ್ಲ. ನಗರಕ್ಕೆ ಹೋಲಿಸಿದರೆ ಅಪರಾಧಗಳ ಪ್ರಮಾಣ ಕಡಿಮೆಯಿದ್ದರೂ ನಗರಗಳ ಸಂಪರ್ಕ, ಸೌಲಭ್ಯ, ಪ್ರಭಾವಗಳಿಂದ ಗ್ರಾಮಗಳು ತಮ್ಮ ಮೂಲ ಶ್ರಮಸಂಸ್ಕೃತಿಯಿಂದ ದೂರ ಸರಿಯುತ್ತಿವೆ ಎಂಬುದು ಕಥನ ಸಾಹಿತ್ಯದ ಗ್ರಹಿಕೆಯಾಗಿದೆ. ರೋಹಿದಾಸ ನಾಯಕ ಅವರ 'ಅಂತರ' ಕಥೆಯ ಶ್ರೀನಿವಾಸರಾಯರು ತಮ್ಮ ವೃತ್ತಿ ಜೀವನವನ್ನು ನಗರದಲ್ಲಿ ಕಳೆದು, ನಿವೃತ್ತಿ ಬದುಕನ್ನು ಶಾಂತ, ಸುವ್ಯವಸ್ಥೆ, ಸುರಕ್ಷತೆ ಹೊಂದಿದ, ನಗರದ ಜಂಜಾಟವಿಲ್ಲದ (ಇದು ಅವರ ಬಾಲ್ಯದ ನೆನಪು) ತಮ್ಮ ಹಳ್ಳಿಯಲ್ಲಿ ಕಳೆಯಲು ಆಶಿಸುತ್ತಾರೆ. ತಮ್ಮ ನಿವೃತ್ತಿಯಿಂದ ಬಂದ ಹಣವನ್ನು ವಿನಿಯೋಗಿಸಿ ಜಮೀನು ಕೊಂಡು ಅಡಿಕೆ, ತೆಂಗು, ಹಲಸು ಹಾಕಿಸಿ ಅಲ್ಲಿಯೇ ಮನೆ ಕಟ್ಟಿಸಿಕೊಂಡು ವಾಸಿಸುತ್ತಾರೆ. ಎರಡು ವರ್ಷ ಕಳೆಯುವಷ್ಟರಲ್ಲಿ ಬದಲಾದ ಗ್ರಾಮೀಣ ಸಂಸ್ಕೃತಿ ಅವರನ್ನು ಬೆಚ್ಚಿಬೀಳುವಂತೆ ಮಾಡುತ್ತದೆ. ಅವಿಭಕ್ತ ಕುಟುಂಬಗಳು ಛಿದ್ರವಾಗಿವೆ, ಸುಶಿಕ್ಷಿತರು, ಶಿಕ್ಷಕರು, ಯುವಕರು ಮಧ್ಯವ್ಯಸನಿಗಳಾಗಿದ್ದಾರೆ. ಕಂಡಲ್ಲಿ ಬಾರ್‌ಗಳು, ಇಸ್ಪೀಟು ಅಡ್ಡೆಗಳು, ಕಳ್ಳಬಟ್ಟಿ, ಕಳ್ಳಸಾಗಾಣಿಕೆ ತಾಣಗಳು ಎದ್ದು ನಿಂತು ಗ್ರಾಮೀಣರ ನೈತಿಕ ಮೌಲ್ಯ ಕುಸಿದು ಹೋಗಿದೆ. ಕಾನೂನು ರಕ್ಷಣೆ ಶೂನ್ಯವಾಗಿದೆ. ರಾಯರು ನಾಲ್ಕು ದಿನ ಊರಲ್ಲಿ ಇಲ್ಲದಿದ್ದಾಗ ಇವರ ತೋಟದ ಫಲಗಳು, ಮನೆಯ ಹಂಚು ಸಮೇತ ಕಳುವಾಗಿ, 'ಅಪ್ಪಾ, ಬೆಂಗಳೂರಿನ ನಮ್ಮ ಮನೆಯ ಮೇಲೆ ಇನ್ನೆರಡು ರೂಮು ಹಾಕಿಸಿದ್ದರೆ ಇದಕ್ಕಿಂತ ನೆಮ್ಮದಿಯಿಂದ ಇರಬಹುದಿತ್ತು’[೬] ಎಂಬ ಮಗನ ಮಾತು ನೆನಪಿಗೆ ಬರುತ್ತದೆ. ನಗರೀಕರಣದ ಪ್ರಭಾವದಿಂದ ಗ್ರಾಮಗಳು ತಮ್ಮ ಮೊದಲಿನ ಶಾಂತಿಯುತ ಬದುಕನ್ನು ಕಳೆದುಕೊಂಡು, ವ್ಯಾಪಾರೀಕರಣದತ್ತ ಮುಖಮಾಡಿವೆ ಹಾಗೂ ಅವು ಮೂಲ ಗ್ರಾಮ ರೂಪಗಳಲ್ಲಿ ಉಳಿದಿಲ್ಲ ಎಂಬ ಧ್ವನಿ ಇಲ್ಲಿ ವ್ಯಕ್ತವಾಗಿದೆ ಮತ್ತು ಇದು ಅಧ್ಯಯನದ ನಿಲುವೂ ಆಗಿದೆ.

ಶಾಂತಿನಾಥ ದೇಸಾಯಿ ಅವರ 'ಬೀಜ' ಕಾದಂಬರಿಯ ಶ್ರೇಯಾಂಸನ ಗ್ರಾಮ ಸಂಘರ್ಷಗಳು ಇದಕ್ಕಿಂತ ಬೇರೆಯಾಗಿವೆ ಮತ್ತು ಅವು ಶ್ರೇಯಾಂಸನ ಗ್ರಾಮೀಣ ಬದುಕಿನ ಸವಾಲನ್ನು ಎದುರಿಸುವ ನಿಲುವನ್ನು ಹೊಂದಿವೆ. 'ಬಾಲ್ಯದ ಅತ್ಯಂತ ಕ್ಲಿಷ್ಟವಾದ, ತೊಡಕಿನದಾದ, ವಿಚಿತ್ರವಾದ ಅನುಭವ ವಿಶ್ವವನ್ನು ಕೈಗೆತ್ತಿಕೊಳ್ಳುವ, ಆ ಹಳೆಯ ಜಗತ್ತನ್ನು ಪ್ರವೇಶಿಸುವ ಪ್ರಾಥಮಿಕ ಪ್ರಯತ್ನ ಶ್ರೇಯಾಂಸನದಾಗಿದೆ’[೭] ಎಂಬ ನಿಲುವು ಸರಿಯಾದದ್ದು. ಆದರೂ ಒಂದು ಕುಟುಂಬದ ಮೇಲೆ ಸಮಾಜದ ಹಿಡಿತ ಎಷ್ಟು ಬಲವಾಗಿರುತ್ತದೆ, ಈ ಹಿಡಿತದ ಹಿಂದಿರುವ ಕಾರಣಗಳು ಯಾವುವು, ಇವು ಕೇವಲ ಸಾಮಾಜಿಕ ಸಂಬಂಧಗಳೆ, ಆರ್ಥಿಕ ಸಂಬಂಧಗಳೆ ಇತ್ಯಾದಿ., ವ್ಯಕ್ತಿ ಮತ್ತು ಕುಟುಂಬಗಳ ಘರ್ಷಣೆಯ ಜೊತೆಜೊತೆಗೆ ಕುಟುಂಬ ಮತ್ತು ಸಮಾಜದ ಘರ್ಷಣೆಗಳನ್ನು ಈ ಸಂದರ್ಭದಲ್ಲಿ ವಿಶ್ಲೇಷಿಸಬಹುದು. ತಂದೆಯ ಶವಸಂಸ್ಕಾರಕ್ಕೆ ಮುಂಬಯಿ(ನಗರ)ಯಿಂದ ಕೃಷ್ಣಾಪುರ(ಗ್ರಾಮ)ಕ್ಕೆ ಬಂದ ಶ್ರೇಯಾಂಸ, ತಾನು ಬಾಲ್ಯದಲ್ಲಿ ಕಂಡು ಬೆಳೆದ ಊರು, ಪರಿಸರ ಬದಲಾಗಿರುವುದನ್ನು ಗಮನಿಸುತ್ತಾನೆ. ತಾನು, ತನ್ನ ತಂದೆಯ ಜೊತೆ ಇಪ್ಪತ್ತು ವರ್ಷಗಳ ಕಾಲ ಕಡಿದುಕೊಂಡ ಸಂಬಂಧವನ್ನು ಪುನರ್‌ನಿರ್ಮಿಸಿಕೊಳ್ಳುವ ಪ್ರಥಮ ಹಂತದಲ್ಲಿಯೆ ಅವನಿಗೆ ಇದರ ಅರಿವಾಗುತ್ತದೆ.

> ನಾನು ಗಟ್ಟಿ ಮನಸ್ಸಿನಿಂದ ಹೋಗಿ ಹೆಣದ ಹತ್ತಿರ ಕೂತೆ. ನನ್ನ ತಂದೆಯ ಮುಖದ ಮೇಲೆ ನನ್ನ ಲಕ್ಷ್ಯ ಕೇಂದ್ರೀಕರಿಸಿದೆ. ಮನಸ್ಸನ್ನೆಲ್ಲಾ ಖಾಲಿ ಮಾಡಿ ಅಪ್ಪನ ಆ ಮುಗಿದ ಕಣ್ಣಿನ ಮುಖವನ್ನು ನನ್ನ ಹೃದಯದಲ್ಲಿ ತುಂಬಿದೆ, ಒಂದು ನಿಮಿಷ. ನನ್ನ ಒಳಗಿಂದ, ನನ್ನ ಹೃದಯದಾಳದಿಂದ, ಸಮುದ್ರದ ಆಳದಿಂದ, ಒಂದು ಬಿಕ್ಕು ಉಮ್ಮಳಿಸಿ ಬಂತು... .. ನಾನಿನ್ನೂ ನನ್ನ-ಅಪ್ಪನ ನಡುವಿನ ಹರಿದು ಹೋದ ಸೂತ್ರವನ್ನು ಮರಳಿ

ಒಂದು ಅವ್ಯಕ್ತವಾದ ರೀತಿಯಲ್ಲಿ ಕಟ್ಟಬೇಕೆನ್ನುವಷ್ಟರಲ್ಲಿ ಬಾಗಿಲಲ್ಲಿ ನಿಂತ ಕೆಲವರು 'ಆತಲ್ಲ, ಇನ್ನ ಲಗೂ ಎತ್ತೋ ತಯಾರಿ ಮಾಡೋಣ, ನಡೀರಿ' ಎಂದು ಗಡಿಬಿಡಿ ಮಾಡಹತ್ತಿದರು.[೧೮]

ಈ ಮಾತಿನಲ್ಲಿ, ಸಮಾಜದ ಪ್ರತಿನಿಧಿಗಳಾದ ಕೆಲವರು (ಕಲ್ಯಾಣಶೆಟ್ಟರು, ದೇವೇಂದ್ರ, ನಂದೂ ಇತ್ಯಾದಿ) ಕುಟುಂಬದ ಮೇಲೆ ಪ್ರಭಾವಿಸುವ, ಅದು ಭಾವುಕತೆಯ ಭದ್ರನೆಲೆಯನ್ನು ಕತ್ತರಿಸಿ ಹಾಕುವ ಪ್ರಭಾವ ಹೊಂದಿರುವುದು ಕಂಡುಬರುತ್ತದೆ. ಈ ಪ್ರಭಾವದ ಅರಿವು ಗ್ರಾಮದಲ್ಲಿ ಮುಂಬರುವ ಸಂಘರ್ಷದ ಸುಳುಹು ಎಂಬಂತೆ ಶ್ರೇಯಾಂಸನಿಗೆ ಕಾಣಿಸುತ್ತದೆ. 'ಆದರೆ, ಸಣ್ಣ ಊರು ಎಂದ ಮ್ಯಾಲೆ ರಾಜಕೀಯ ಇದ್ದೇ ಇರ್ತದ' ಎಂಬ ಕಲ್ಯಾಣಶೆಟ್ಟರ ಮಾತು ಆ ಊರಿನ ರಾಜಕೀಯದ ಒಳಸುಳಿಯನ್ನು ಬಿಚ್ಚಿಡುತ್ತದೆ. ಶ್ರೇಯಾಂಸನ ಗ್ರಾಮ ಆಗಮನ ಅಲ್ಲಿಯ ಪಟ್ಟಭದ್ರ ಹಿತಾಸಕ್ತಿಗಳನ್ನು ಅಲುಗಾಡಿಸಿದ್ದು ನಿಜ. ಶ್ರೇಯಾಂಸನ ಆಸ್ತಿಯನ್ನು ತಾನೇ ಮಾಡಿಸಬೇಕೆಂಬ ಆಸೆ ಹೊತ್ತಿದ್ದ ದೇವೇಂದ್ರ ಕಾಕಾ, ತಂದೆಗೂ ಕೊಡದೇ ತಾನೆ ಉಸ್ತುವಾರಿ ವಹಿಸಲು ಸಿದ್ಧನಾಗಿದ್ದ ನಂದೂ (ದೇವೇಂದ್ರನ ಮಗ), ಇವರಿಗೆ ಒತ್ತಾಸರೆಯಾದ ಲಂಚಕೋರ ವಿಠ್ಠಲರಾಯ, ತಮ್ಮದೇ ದೃಷ್ಟಿಕೋನದಿಂದ ಸಣ್ಣ ಹಿಡುವಳಿದಾರರ ಸಂಘಕ್ಕೆ ವಿರೋಧ ಸೂಚಿಸುವ ಕಲ್ಯಾಣಶೆಟ್ಟರು, ಅಂಬಕ್ಕನ ಸಂಸಾರಕ್ಕೆ ಗಂಟುಬಿದ್ದ ಸಾಹುಕಾರ ಕಳ್ಳಿಮಠ, ಮೋಫತ್ ಚಿಕಿತ್ಸಾಲಯಕ್ಕೆ ಸ್ವಹಿತಕ್ಕಾಗಿ ವಿರೋಧ ಸೂಚಿಸುವ ದೇಪಿಮಠ, ಯೇಲೂರ ಮತ್ತು ಶೇಖಸಾಹೇಬರು ಮುಂತಾದ ಸಮಸ್ಯೆಗಳನ್ನು ಎದುರಿಸಿದ ಮೇಲೆ, ಹಳ್ಳಿಯ ಸಮಸ್ಯೆಗಳು ತಮ್ಮವೇ ಆದ ಆಳ, ಅಗಲ ಹಾಗೂ ಅನೇಕ ಕ್ಲಿಷ್ಟ ಸಂಬಂಧಗಳನ್ನು ಹೊಂದಿವೆಯೆಂಬುದು, ಗ್ರಾಮಗಳು ಇಂತಹ ಸಮಸ್ಯೆಗಳ ಕೂಪವೆಂಬುದು ಅರಿವಾಗುತ್ತದೆ.

ಇದು ಇಷ್ಟಕ್ಕೆ ನಿಲ್ಲುವುದಿಲ್ಲ. ಶ್ರೇಯಾಂಸನ ಮೇಲೆ ಆಕ್ರಮಣವೂ ನಡೆಯುತ್ತದೆ. ತನ್ನ ಮೇಲೆ ರಾತ್ರಿ ದೈಹಿಕ ಆಕ್ರಮಣ ನಡೆದಾಗ 'ಅಯ್ಯೋ ಸತ್ತೆ! ನಾನು ಅಪ್ಪಾ ಸಾಹೇಬರ ಮಗ ಶ್ರೇಯಾಂಸ' ಎಂದು ಬೊಬ್ಬಿಟ್ಟು ಕೂಗಿ, ಜನ್ಮವಿಡೀ ದ್ವೇಷಿಸಿದ್ದ ಅಪ್ಪನ ಹೆಸರಿನಿಂದಲೇ ತನ್ನನ್ನು ಗುರುತಿಸಿಕೊಳ್ಳುವುದು ವಿಚಿತ್ರವೆನಿಸಿದೆ. ತನ್ನನ್ನು ಹೊಡೆಸಿದವರು ಯಾರು ಎಂಬ ಯೋಚನೆಯಲ್ಲೂ, ಆಸ್ಪತ್ರೆಯಲ್ಲಿ ಕಾಣಲು ಬಂದ ದೇವೇಂದ್ರ ಕಾಕಾ ಹಾಗೂ ಕಳ್ಳಿಮಠರನ್ನು ಗುರುತಿಸುವಲ್ಲಿ ಅವನ ಮುಂಬಯಿ ಚುರುಕು ಬುದ್ಧಿ ಕೆಲಸ ಮಾಡುತ್ತದೆ. ಗ್ರಾಮೀಣ ರಾಜಕೀಯಕ್ಕೆ ತನ್ನ ಬಲಗಾಲನ್ನು ಮುರಿದುಕೊಂಡರೂ, ಅದೇ ಊರಲ್ಲಿ ನೆಲೆಸಿ ಬೇರು ಬಿಡುವ ನಿರ್ಧಾರ ಅವನಲ್ಲಿ ಗಟ್ಟಿಯಾಗುತ್ತದೆ. 'ಆಸ್ತಿ ಅಂದರ ಅದಕ ಬೇರು ಇರ್ತಾವು ಬೇರು' ಎಂಬ ಕಲ್ಯಾಣಶೆಟ್ಟರ ಅನುಭವದ ಮಾತನ್ನು ಇಲ್ಲಿ ಅಧ್ಯಯನ ಪ್ರಸ್ತಾಪಿಸುತ್ತದೆ. ಸಮಾಜದಲ್ಲಿ ಆಳವಾಗಿ ಊರಿಕೊಂಡಿರುವ ಈ ಬೇರುಗಳು ಕುಟುಂಬದ ಸಂಬಂಧಿಗಳನ್ನು, ಸ್ನೇಹಿತರನ್ನು, ಕಾನೂನುಗಳನ್ನು ಮತ್ತು ವಂಶವಾಹಿನಿ ಬೀಜಗಳನ್ನು ಸುತ್ತಿಕೊಂಡಿರುತ್ತವೆ ಎಂಬ ಸತ್ಯ ಗ್ರಾಮೀಣ ಅಂತರಂಗವನ್ನು ಬಲ್ಲವರಿಗೆ ಅರಿವಾಗದೇ ಇರದು. ಆದರೆ, ಈ ಆಸ್ತಿಗೆ ಸೆರಗು ಹಾಸಿದ ಅಂಬಕ್ಕಳಂತಹ ದುರ್ಬಲ, ಕೆಳವರ್ಗದ ಕುಟುಂಬಕ್ಕೆ ಈ ಬೇರುಗಳು ಮುಳ್ಳಾಗುವುದೂ ಸಹ ಸತ್ಯ ಎಂಬುದು ಅಧ್ಯಯನದ ನಿಲುವಾಗಿದೆ. ಹಳ್ಳಿಯ ಅನುಭವಗಳನ್ನು ಶ್ರೇಯಾಂಸ ನಗರ ಜೀವನದ ಚೌಕಟ್ಟಿನಲ್ಲಿ, ನಗರ ದೃಷ್ಟಿಕೋನಗಳ ಹಂದರದಲ್ಲಿ ಹೊಂದಿಸಿಡಲು ಪ್ರಯತ್ನಿಸುತ್ತಾನೆ. ಆದರೆ ಹಳ್ಳಿಯ ಸಮಸ್ಯೆಗಳೇ ಬೇರೆ, ಆ ಸಮಸ್ಯೆಗಳಿಗೆ ಸಾಮಾಜಿಕ, ಧಾರ್ಮಿಕ, ಕೌಟುಂಬಿಕ ಮುಖಗಳಿದ್ದು ಸಂಕೀರ್ಣವಾಗಿವೆ. ಇಲ್ಲಿ ಎಲ್ಲವೂ ಅನಿಶ್ಚಿತ, ಎಲ್ಲವನ್ನೂ ವೈಯಕ್ತಿಕವಾಗಿ ಸಜ್ಜುಗೊಳಿಸಬೇಕು ಎಂಬ ಅರಿವು ಹೆಂಡತಿ, ಮಗಳ ಅನುಪಸ್ಥಿತಿಯಲ್ಲಿ ಅವನಿಗಾಗುತ್ತದೆ. ಶ್ರೇಯಾಂಸನದು (ಅಥವಾ ಅವನ ಸ್ಥಾನದಲ್ಲಿರಬಹುದಾದ ಯಾವುದೇ ವ್ಯಕ್ತಿಯಾಗಲಿ) ಗ್ರಾಮ, ಮಹಾನಗರ ಎರಡೂ ಪರಿಸರಗಳ ಅನುಭವ ಹೊಂದಿ, ಗ್ರಾಮೀಣ ವ್ಯಕ್ತಿತ್ವಗಳಿಗೆ ನಗರ ಬದುಕಿನ ಅನುಭವದ ಚೌಕಟ್ಟನ್ನು ಕಟ್ಟಿಕೊಳ್ಳಲೆತ್ನಿಸುವ ದ್ವಂದ್ವಾತ್ಮಕ ಸ್ವಭಾವವೆಂದು ಅಧ್ಯಯನ ಗುರುತಿಸುತ್ತದೆ. ಉದಾಹರಣೆಗೆ ಯೌವನದಲ್ಲಿ ದೇವರು, ದೆವ್ವಗಳನ್ನು ನಂಬದಿದ್ದ ಶ್ರೇಯಾಂಸ ಅಪ್ಪ ಸತ್ತಾಗ ತಲೆ ಬೋಳಿಸಿಕೊಳ್ಳುತ್ತಾನೆ. ಹದಿಮೂರನೆಯ ದಿನದ ಪೂಜೆಯಲ್ಲಿ ಹೆಂಡತಿ ಲಿಝಿಯನ್ನು ತನ್ನ ತಾಯಿಯ ಕಾಲಿಗೆರಗಲು ಸೂಚಿಸುತ್ತಾನೆ. ಇವು ಅವನ ತೆರೆದ ಮನಸ್ಸಿನ ಹಳ್ಳಿಯ ಮೂಲಗುಣಗಳಾದರೆ ಈ ನಡತೆಗಳ ಆಳದಲ್ಲೆಲ್ಲೋ, ತನ್ನ ಹಾಗೂ ಅಪ್ಪನ ನಡುವಿನ ಹರಿದುಹೋದ ಸೂತ್ರವನ್ನು ಮರಳಿ ಕಟ್ಟುವ, ಕಡಿದ ಬೇರನ್ನು ಪುನಃ ಚಿಗುರಿಸುವ ಸ್ವಾರ್ಥಭಾವ (ಗ್ರಾಮೀಣ ಸಮಾಜವನ್ನು ಮೆಚ್ಚಿಸಲು) ಇರುವುದು ಕಾಣುತ್ತದೆ. ಇದೇ ಶ್ರೇಯಾಂಸ ಮುಂಬಯಿಯಲ್ಲಿ ಸೂಟ್ ಧರಿಸಿ ಆಫೀಸಿನಲ್ಲಿ ನಿಲೂಫರಳೊಂದಿಗೆ

ಫಾಸ್ಟ್ ಆಗಿ ವರ್ತಿಸುವ, ಸುರೇಶ ಅಭ್ಯಂಕರನೊಂದಿಗೆ ಕುಳಿತು ಬೀರ್/ಸ್ಕಾಚ್ ಕುಡಿದು (ಜಗತ್ತಿನಲ್ಲಿ ಕೆಟ್ಟ ಸೂಳೆ ಮಕ್ಕಳು ಏನ್ ಕೆಟ್ಟ ಕೆಲಸ ಮಾಡ್ತಾರಲ್ಲ ಅದನ್ನೆಲ್ಲ ನೋಡ್ತಾ ನಿರ್ಲಿಪ್ತವಾಗಿರುವ), ತಂದೆಯ ಉಪಪತ್ನಿ ಅಂಬುಜಕ್ಕಳನ್ನು ಅಪ್ಪಿ ಸಂತೈಸುವ, ಅದೇ ಕ್ಷಣ ಅಪ್ಪನ ರಸಿಕತೆಗೆ ಕರುಬುವ ಅಪ್ಪಟ ಪ್ರಗತಿಪರ ವ್ಯಕ್ತಿತ್ವ ಮತ್ತು ಸಂಪ್ರದಾಯಗಳ ಸಮ್ಮಿಳನ(ದ್ವಂದ್ವ)ವಾಗಿದ್ದಾನೆ.

**ಕ. ಕುಟುಂಬ ಮತ್ತು ಕುಟುಂಬ : ಸಂಘರ್ಷಗಳು**

ಭಾರತೀಯ ಸಂದರ್ಭದಲ್ಲಿ ಕುಟುಂಬದಲ್ಲಿನ ದಾಂಪತ್ಯ ಸಂಬಂಧಕ್ಕೆ ಮಹತ್ವದ ಸ್ಥಾನವಿದೆ. ಗಂಡ, ಹೆಂಡತಿ, ಮಕ್ಕಳು, ಸೊಸೆ, ಮೊಮ್ಮಕ್ಕಳು ಇತ್ಯಾದಿ ಸಂಬಂಧಗಳನ್ನು ಹುಟ್ಟುಹಾಕಿರುವ ದಾಂಪತ್ಯಬಂಧ ಗಂಡ ಹೆಂಡತಿಯರ ಪರಸ್ಪರ ವಿಶ್ವಾಸದ ಮೇಲೆ ನಿಂತಿದೆ. ಇಬ್ಬರಲ್ಲಿ ಒಬ್ಬರಿಗೆ ಅಪನಂಬಿಕೆ, ಅವಿಶ್ವಾಸದಂತಹ ಮಾನಸಿಕ ಒತ್ತಡಗಳು ಉಂಟಾದರೆ, ಇಬ್ಬರ ನಡುವೆ ಮೂರನೇ ವ್ಯಕ್ತಿಯ ಪ್ರವೇಶವಾದರೆ ದಾಂಪತ್ಯ ಸಂಬಂಧ ಶಿಥಿಲವಾಗುವುದನ್ನು ಕಾಣುತ್ತೇವೆ. ಗ್ರಾಮ/ನಗರದ ಹೊಸನೆಲೆಯಲ್ಲಿ ಎರಡು ಕುಟುಂಬಗಳ ಮಧ್ಯೆ ನಡೆಯುವ ದಾಂಪತ್ಯ ಕುರಿತ ಸಂಘರ್ಷಗಳು ಸಾಮಾಜಿಕ ಸ್ವಾಸ್ಥ್ಯ ಕದಡುವ ಸಂದರ್ಭಗಳನ್ನು ಕಥನ ಸಾಹಿತ್ಯದಲ್ಲಿ ಕಾಣುತ್ತೇವೆ.

ಪಾಟೀಲ ಪುಟ್ಟಪ್ಪ ಅವರ 'ಪುತಳಾ ಪ್ರಕರಣ' ಕತೆಯು ಪತಿ ಪತ್ನಿಯರ ದಾಂಪತ್ಯ ಮೌಲ್ಯವನ್ನು ಹೇಳುವ, ಆ ಮೂಲಕ ಸಾಮಾಜಿಕ ಸಂಬಂಧಗಳನ್ನು ಶಿಥಿಲಗೊಳಿಸುವ ಸಂದರ್ಭವಾಗಿದೆ. ಕೊಂಕಣ ಪ್ರದೇಶದ ಗ್ರಾಮೀಣ ಯುವಕ ಮಾರುತಿ ಮುಂಬಯಿಯ ಗಿರಣಿಯೊಂದರಲ್ಲಿ ಕೆಲಸಕ್ಕಿದ್ದು ರೂಪವತಿ ಪುತಳಾಬಾಯಿಯನ್ನು ಮದುವೆಯಾಗಿ, ಮುಂಬಯಿಗೆ ಕರೆದೊಯ್ದು ಸಂಸಾರ ಹೂಡುತ್ತಾನೆ. ಮೊದಮೊದಲು ಎಲ್ಲ ಗಂಡಸರಂತೆ, ಹೆಂಡತಿ ದುಡಿಯುವುದು ಬೇಡವೆನ್ನುವ ಅವನು, ನಂತರ ರಸಿಕಲಾಲ್ ಎಂಬ ವ್ಯಾಪಾರಿಯ ಮನೆಯಲ್ಲಿ ಮನೆ ಕೆಲಸಕ್ಕೆ ಸೇರಿಸುತ್ತಾನೆ. ಒಳ್ಳೆಯ ಸ್ವಭಾವದ ರಸಿಕಲಾಲರು ರೋಗಿ ಹೆಂಡತಿಯ ಸೇವೆ ಮಾಡುತ್ತಿದ್ದ ಪುತಳಾಳನ್ನು ಮಗಳೆಂದು ತಿಳಿಯುತ್ತಾರೆ. ಹೆರಿಗೆಗೆಂದು ತವರಿಗೆ ಪುತಳಾಬಾಯಿ ಹೋದ ಸಂದರ್ಭದಲ್ಲಿ ಮಾರುತಿ, ದುಶ್ಚಟಗಳನ್ನು ಕಲಿತು ದುಡಿದ ದುಡ್ಡು ಹೆಂಡ, ಇಸ್ಪೀಟಿಗೆ ಖಾಲಿಯಾಗುತ್ತ, ಸಂಸಾರ ಆರ್ಥಿಕವಾಗಿ ದಿವಾಳಿಯಾಗುತ್ತದೆ. ಪುತಳಾಬಾಯಿ ಮತ್ತು ರಸಿಕಲಾಲರ ಮಧ್ಯೆ ಅನೈತಿಕ ಸಂಬಂಧ ಕಲ್ಪಿಸಿದ ಕುಡುಕ ಮಾರುತಿ ಲಾಲರನ್ನು ಹೊಡೆದು ಸಾಯಿಸುತ್ತಾನೆ. 'ನಾ ಕೇಳಿದಷ್ಟು ಹಣ ಕೊಡಲು ನಿನ್ನನ್ನೇ ನೀನು ಮಾರಿಕೋ'[19] ಎನ್ನುವ ಮಾರುತಿಯ ಮೇಲೆ ಮಹಾನಗರ ತನ್ನ ಕರಾಳ ಮುದ್ರೆಯನ್ನು ಒತ್ತಿದೆ. ಕುಟುಂಬ ಮತ್ತು ಕುಟುಂಬ ಸಂಘರ್ಷದ ಇನ್ನೊಂದು ಸಂದರ್ಭವನ್ನು ಬಿ.ಎ. ಸನದಿ ಅವರ 'ಅಡಕತ್ತರಿ' ಕತೆಯು ಅನಾವರಣಗೊಳಿಸಿದೆ. ಮುಂಬಯಿಯಲ್ಲಿರುವ ಟೆಕ್ಸಟಾಯಿಲ್ ಇಂಜನಿಯರ್ ಸತೀಶನು ಹೆಂಡತಿ ಉಷೆಯ ಸಂಗೀತ ಶಿಕ್ಷಣಕ್ಕೆ ಜಯದೇವ ಮಾಸ್ತರರನ್ನು ನಿಯಮಿಸಿಕೊಳ್ಳುತ್ತಾನೆ. ಮೊದಮೊದಲು ಕಪಟದ ಸುಳಿವೂ ಇಲ್ಲದ ಶ್ರದ್ಧಾವಂತ ಗುರುವಾಗಿ ಜಯದೇವ ಸತೀಶ, ಉಷಾರ ಮನಸ್ಸುಗಳನ್ನು ಗೆಲ್ಲುತ್ತಾರೆ. ಆರು ತಿಂಗಳ ನಂತರ, ಇಂತಹ ಪ್ರತಿಭೆಯೊಂದು ತನ್ನ ಸ್ವಂತದ್ದಾದರೆ ದೇಶ, ವಿದೇಶಗಳಲ್ಲಿ ಕಾರ್ಯಕ್ರಮ ನೀಡಿ ಹಣ, ಹೆಸರು ಗಳಿಸಬಹುದೆಂಬ ಮಹಾನಗರದ ಮಾನಸಿಕ ವಾಂಛೆ ಅವರನ್ನು ಕಲುಷಿತಗೊಳಿಸುತ್ತದೆ. ತಮ್ಮ ಮೊದಲ ಹೆಂಡತಿಯ ಸಾವು, ಹತ್ತು ವರ್ಷದ ನಿರಾಶ ಜೀವನ, ಉಷೆಯ ಸಿತಾರ ಪ್ರವೀಣೆ ಎನಿಸಿ ಪಬ್ಲಿಕ್ ಫರ್ಫಾರ್ಮೆನ್ಸ್ ಕೊಡುವ ಮಹತ್ವಾಕಾಂಕ್ಷೆ, ಉಷೆ ತನ್ನಂತಹ ಪ್ರತಿಭೆಯ ಜೊತೆ ಬಾಳಬೇಕಾದ ಅರ್ಹತೆಯುಳ್ಳವಳು, ಸಂಗೀತದ ಗಂಧವಿರದ ತಮ್ಮ ಎರಡನೇ ಮಡದಿ ಓಡಿಹೋದದ್ದು, ಸತೀಶ ಇನ್ನೂ ಹುಡುಗ ಎರಡನೇ ಮದುವೆಯಾಗಬಹುದು ಇತ್ಯಾದಿ ಆಮಿಷಗಳೊಂದಿಗೆ ಮಾತನಾಡಿ ಅವಳನ್ನು ಮದುವೆಯಾಗುವ ಇಚ್ಛೆ ವ್ಯಕ್ತಪಡಿಸುತ್ತಾರೆ.

> 'ಕ್ಷಮಿಸಿ ಗುರೂಜಿ, ನಾನೀಗ ಅರಚಿ, ಕಿರಚಿ ಸದ್ದು ಮಾಡಿದರೆ ನಿಮ್ಮ ಹೆಸರಿಗೆ ಕಳಂಕ ತಟ್ಟುತ್ತದೆ. ನೀವು ನನ್ನ ಗುರೂಜಿ ಎಂಬ ಭಾವನೆಯಿಂದ ಇಗೋ, ಇದೊಂದು ಭಾರಿ ನಿಮ್ಮ ಪಾದ ಮುಟ್ಟಿ ನಮಸ್ಕರಿಸುತ್ತೇನೆ. ಇನ್ನೊಂದು ಬಾರಿ ಈ ಪಾದಗಳು ನಮ್ಮ ಮನೆಯ ಕಡೆ ಬಂದರೆ ನನ್ನ ಪಾದರಕ್ಷೆಗಳನ್ನು ಬಳಸಬೇಕಾಗುತ್ತದೆ ಅಷ್ಟೇ.'[20]

ಹೀಗೆ ನುಡಿವ ಉಷೆಯು ಕೌಟುಂಬಿಕ/ದಾಂಪತ್ಯದ ಮೌಲ್ಯಕ್ಕೆ ಅಂಟಿಕೊಳ್ಳುವುದು ಸಾಂಪ್ರದಾಯಕ ನಿಲುವೆಂದು ಕಂಡುಬಂದರೂ, ಅದು ಮಹಿಳೆಯ ಆತ್ಮಾಭಿಮಾನ ಜಾಗೃತಗೊಂಡ ಸಂದರ್ಭವಾಗಿದೆ. ಮೇಲಿನ ಎರಡೂ ಸಂದರ್ಭಗಳನ್ನು ಮಹಿಳಾಕೇಂದ್ರಿತವಾಗಿ ವಿಶ್ಲೇಷಿಸಿದರೆ, ಮಹಿಳೆಯ ಕುರಿತು ಭಾರತೀಯ ಪುರುಷನ ದೃಷ್ಟಿಕೋನ ಒಂದೇ ಆಗಿರುವುದು ಸ್ಪಷ್ಟವಿದೆ. ಮಹಿಳೆ ಶ್ರಮಜೀವಿಯಾಗಿರಲಿ, ಪ್ರತಿಭಾವಂತ ಬುದ್ಧಿಜೀವಿಯಾಗಿರಲಿ ಅವಳು ಪುರುಷನ ಆಸ್ತಿ, ಅವಳ ಆಸೆ, ಆಕಾಂಕ್ಷೆ, ಭಾವನೆಗಳಿಗೆ ಬೆಲೆ ಇಲ್ಲ ಎಂಬುದು ಈ ದೃಷ್ಟಿಕೋನದ ನಿಲುವು. ಮಾರುತಿ ಅವಿದ್ಯಾವಂತ, ದುಶ್ಚಟಗಳ ವ್ಯಸನಿಯಾಗಿದ್ದರೂ ಹೆಂಡತಿ ದುಡಿಯುವುದು ತನಗಾಗಿ ಎಂಬ ಹಕ್ಕೊತ್ತಾಯ ಹಾಕುತ್ತಾನೆ. ಜಯದೇವ ತನ್ನ ವಿದ್ಯಾರ್ಥಿಯ ಪ್ರತಿಭೆಯನ್ನು ತನ್ನ ಸ್ವಾರ್ಥಕ್ಕೆ ನಯವಾಗಿ ಬಳಸಿಕೊಂಡು ಹಣ, ಕೀರ್ತಿಯಾಗಿ ಪರಿವರ್ತಿಸಿಕೊಳ್ಳುವ ವಾಂಛೆಯನ್ನು ಹೊಂದಿದ್ದಾನೆ. ಇಬ್ಬರೂ (ಒಬ್ಬ ಶ್ರಮಜೀವಿ ಇನ್ನೊಬ್ಬ ಬುದ್ಧಿಜೀವಿ)ಮಹಿಳೆಯ ಶ್ರಮವನ್ನು (ಅದು ದೈಹಿಕ, ಬೌದ್ಧಿಕ ಶ್ರಮ ಎರಡೂ ಆಗಿರಬಹುದು) ತಮ್ಮ ಪುರುಷ ಸ್ವಾರ್ಥಕ್ಕೆ ಬಳಸಿ ಅಪಮೌಲ್ಯಗೊಳಿಸುವ ಹುನ್ನಾರ ಅಡಗಿದೆ. 'ಪತಿ' ಹಾಗೂ 'ಗುರು' ಇಬ್ಬರೂ ದೈವ ಸಮಾನ ಎಂಬ ಸ್ಥಾಪಿತ ಹಿತಾಸಕ್ತಿಗಳು ಪೋಷಿಸಿಕೊಂಡು ಬಂದ ಸಂಪ್ರದಾಯದ ಅಡಿಯಲ್ಲಿ ಪುರುಷ ಎಸಗುವ ಕ್ರೌರ್ಯ, ದೌರ್ಜನ್ಯಗಳು ಎರಡೂ ಕಥನಗಳಲ್ಲಿ ಅನಾವರಣಗೊಂಡಿವೆ. ಶ್ರಮಜೀವಿ ಮಹಿಳೆಯ ಹಕ್ಕು ಬಾಧ್ಯತೆಗಳನ್ನು ಸಾಮಾನ್ಯ ವರ್ಗದ ಪುರುಷ ದಮನಿಸಿದರೆ, ವಿದ್ಯಾವಂತ, ಪ್ರತಿಭಾವಂತ ಮಹಿಳೆಯನ್ನು ಬುದ್ಧಿಜೀವಿ, ವಿಚಾರವಾದಿ (ಇವರು ಸ್ವಯಂ ಘೋಷಿತರೂ ಆಗಿರಬಹುದು) ನಿರ್ಬಂಧಿಸುವುದು ಕಂಡುಬರುತ್ತದೆ. ಇವರಿಬ್ಬರೂ ಮಹಿಳೆಯನ್ನು ದಾಸ್ಯಕ್ಕೆ ದೂಡಿದವರಾಗಿದ್ದು ಇವರಲ್ಲಿ ಯಾರು ಹೆಚ್ಚು, ಯಾರು ಕಡಿಮೆಯೆಂಬುದಿಲ್ಲ. ಹೆಣ್ಣನ್ನು ಆಸ್ತಿಯೆಂದು ಭಾವಿಸುವ ಪುರುಷ ಸಮಾಜದ ದೃಷ್ಟಿಕೋನ ಬದಲಾಗಬೇಕು. ಭಾರತೀಯ ಕುಟುಂಬ ರಚನೆಯ ಒಟ್ಟು ಸ್ವರೂಪದಲ್ಲಿ ಪುರುಷಪಕ್ಷೀಯವಾದ ಸುಖದ ಕಲ್ಪನೆಯ ಹಿಂದಿರುವ ದುರಂತವನ್ನು ಈ ಸಂದರ್ಭದಲ್ಲಿ ಗುರುತಿಸುತ್ತೇವೆ.

ಒಟ್ಟಾರೆ, ಮಹಿಳೆಯ ಶೋಷಣೆಯ ಸೂಕ್ಷ್ಮವಾದ ವಾಸ್ತವ ಯಾವುದೆಂದರೆ, ಮಹಿಳೆ ತನ್ನ ಆಕರ್ಷಕ ಮೈಮಾಟ, ಸುಂದರರೂಪ, ಚಾಲೂಕು, ನಿಸ್ಸಹತೆ, ನಿಷ್ಠುರ, ಸಹನೆ ಮತ್ತು ಪ್ರಾಮಾಣಿಕ ದುಡಿಮೆಯಂತಹ ಗುಣಾತ್ಮಕ ಸ್ವಭಾವಗಳಿಂದಾಗಿ ಮತ್ತು ಇವುಗಳಿಗಾಗಿ ಮಾತ್ರ ಬಂಡವಾಳಶಾಹಿಯಡಿ ದುಡಿಯಲು ತಕ್ಕ ಅರ್ಹತೆಗಳನ್ನು ಪಡೆದಿದ್ದಾಳೆ. ಇವುಗಳನ್ನು ಗಮನಿಸದೆ ಅವಳ ಶೀಲ ಪಾವಿತ್ರ್ಯಕ್ಕೆ ಮಾತ್ರ ಒತ್ತುಕೊಡುವ ಬಂಡವಾಳಶಾಹಿ ವ್ಯವಸ್ಥೆ ಮತ್ತು ಸಮಾಜದ ದ್ವಂದ್ವನೀತಿಯಿಂದ ಇಂತಹ ಸಂಘರ್ಷಗಳು ಸಮಾಜದಲ್ಲಿ ಹುಟ್ಟಿಕೊಳ್ಳುತ್ತವೆ ಎಂಬ ನಿಲುವಿಗೆ ಅಧ್ಯಯನ ಬರುತ್ತದೆ.

**ಡ. ಕೌಟುಂಬಿಕ ಹೊಸನೆಲೆ ಮತ್ತು ಅಪ್ಪ**

ಕೌಟುಂಬಿಕ ನೆಲೆಯಲ್ಲಿ ಗಮನಿಸಿದರೆ, ಅಪ್ಪ ಮಕ್ಕಳ ಸಂಬಂಧ ಅಮ್ಮ (ಅವ್ವ) ಮಕ್ಕಳ ಸಂಬಂಧಕ್ಕಿಂತ ವಿಭಿನ್ನವಾದದ್ದು ಮತ್ತು ವೈರುಧ್ಯಗಳಿಂದ ಕೂಡಿದುದಾಗಿದೆ. ಅಪ್ಪನ ವ್ಯಕ್ತಿತ್ವ ಶಿಸ್ತು, ಗಂಭೀರತೆಗಳನ್ನು ಧರಿಸಿ ಯಜಮಾನಿಕೆಯ ಮೇಲರಿಮೆಯಿಂದ ಮೂರ್ತಗೊಂಡಿದ್ದಾಗಿದೆ. ತಾನು ಗಳಿಸುವ ಕಾಲದಲ್ಲಿ ಇಡೀ ಸಂಸಾರವನ್ನು ನಿಯಂತ್ರಿಸುತ್ತಿದ್ದ ಅಪ್ಪ ನಿವೃತ್ತ(ವೃದ್ಧ)ನಾದಾಗ ಗ್ರಾಮ/ನಗರಗಳ ಹೊಸನೆಲೆಯಲ್ಲಿ ಮಕ್ಕಳ ಅಧೀನದಲ್ಲಿ ಹೇಗಿರುತ್ತಾನೆ, ಅವನ ವರ್ತನೆಗಳಾವುವು, ಮೂಲ ನೆಲೆಯಿಂದ ಹೊರಬಂದು ಹೊಸನೆಲೆ ಕಟ್ಟಿಕೊಂಡ ಮಕ್ಕಳ ಜೊತೆ ಅವನ ಆರ್ಥಿಕ, ಕೌಟುಂಬಿಕ ಸಂಬಂಧಗಳೇನು ಎಂಬ ವಿಶ್ಲೇಷಣೆಯು ಆಸಕ್ತಿ, ವೈಶಿಷ್ಟ್ಯಗಳಿಂದ ಕೂಡಿದುದಾಗಿದೆ.

ವಸುಧೇಂದ್ರ ಅವರ 'ಯುಗಾದಿ' ಕತೆಯ ಅಪ್ಪ ಇಂತಹ ಮನಸ್ಥಿತಿಯನ್ನು ಬಿಂಬಿಸುವ ವ್ಯಕ್ತಿತ್ವವಾಗಿದ್ದಾನೆ. ಸಂಪ್ರದಾಯ, ಸರಕಾರಿ ಕೆಲಸಗಳು ದೇವರೆಂದು ನಂಬಿ ಬದುಕಿದ ಗೋಪಣ್ಣ ಮಾಸ್ತರು ಹೆಂಡತಿ ತೀರಿಕೊಂಡೊಡನೆ, ಬೆವರು ಸುರಿಸಿ ಕಟ್ಟಿದ ಗ್ರಾಮದ ಮನೆಯನ್ನು ಬಾಡಿಗೆಗೆ ಕೊಟ್ಟು, ಬೆಂಗಳೂರಿನಲ್ಲಿ ಸಾಫ್ಟ್‌ವೇರ್ ಇಂಜನಿಯರಾಗಿದ್ದ ಮಗನ ಮನೆಯನ್ನು ಸೇರಿಕೊಳ್ಳುತ್ತಾರೆ. ಜಾಗತೀಕರಣದ ವೇಗದ ಬದುಕಿನಲ್ಲಿ ಕೈತುಂಬ ಸಂಪಾದಿಸುವ ಮಗನ ಮನೆ, ವಸ್ತುಗಳು, ವಾತಾವರಣದಲ್ಲಿ ಪರಕೀಯ ಭಾವನೆ ಅನುಭವಿಸುವ ಮಾಸ್ತರರಲ್ಲಿ ದ್ವಂದ್ವವನ್ನು ಕಾಣುತ್ತೇವೆ. ಸಂಧ್ಯಾವಂದನೆಯಲ್ಲಿ ನಂಬಿಕೆಯಿಲ್ಲದ, ಜನಿವಾರ ತ್ಯಜಿಸಿ ಜಾತಿ ಬಿಟ್ಟುಕೊಟ್ಟ, ಸರಕಾರಿ ಕೆಲಸ ದಡ್ಡರ ಕೆಲಸವೆನ್ನುವ, ಹೊಸ ಬಂಗಲೆಯನ್ನು

ತರಕಾರಿ ಕೊಂಡಂತೆ ಸಲೀಸಾಗಿ ಕೊಳ್ಳುವ, ಮಲ್ಟಿನ್ಯಾಶನಲ್ ಕಂಪನಿಯ ಇಂಜನಿಯರ್ ಮಗನಿಗೂ, ಗಾಂಧಿವಾದಿ, ರಾಯರ ಭಕ್ತರಾಗಿ, ಮಾಸ್ತರಿಕೆಯನ್ನು ಅಷ್ಟೇ ಶ್ರದ್ಧೆಯಿಂದ ಬದುಕಿನುದ್ದಕ್ಕೂ ಮಾಡಿಕೊಂಡು ಬಂದಿದ್ದ ತಮಗೂ ಎಷ್ಟೊಂದು ತಾತ್ವಿಕ, ಆರ್ಥಿಕ ಭಿನ್ನತೆಗಳಿವೆಯಲ್ಲ ಎಂಬ ಕೊರಗು (ದ್ವಂದ್ವ) ಅವರನ್ನು ಕಾಡುತ್ತದೆ. ನಗರದ ವೇಗದ ಬದುಕು, ಶೈಲಿಗಳ ಅನುಕರಣೆಯಲ್ಲಿ ಹಳ್ಳಿ, ಮನೆ, ಮಡಿದ ಹೆಂಡತಿ, ಮಾಸ್ತರಿಕೆ ಜೀವನ, ರಾಯರ ಗುಡಿಗಳ ನೆನಪುಗಳು ಅವರನ್ನು ದ್ವಂದ್ವದಲ್ಲಿ ಕಟ್ಟಿಹಾಕಿವೆ. 'ಅಪ್ಪ, ಮಲ್ಟಿನ್ಯಾಷನಲ್ ಕಂಪನಿನಾಗೆ ಕೆಲಸ ಮಾಡೂದು ಅಂದರ ಏನಂತ ತಿಳಕೊಂಡಿ ನೀನು? ಕನ್ನಡ ಸಾಲಿ ಮಾಸ್ತರ ಕೆಲಸ ಅಂತ ಮಾಡೀ ಏನು?'[೨೦] ಎಂಬ ಮಾತು, ತಾವು ನಲವತ್ತು ವರ್ಷ ದೇವರ ಪೂಜೆ ಮಾಡಿದಂತೆ ಮಾಡಿದ ಸೇವೆ ಮಗನ ಕಣ್ಣಲ್ಲಿ ಕಾಲ ಕಸವಾಯಿತಲ್ಲ ಎಂಬ ಸೈದ್ಧಾಂತಿಕ ಖಿನ್ನತೆ ಅಪ್ಪನನ್ನು ಕಾಡಿದೆ. ವೇಗದ ಜೀವನ, ಶ್ರಮಕ್ಕಿಂತ ಹೆಚ್ಚಾಗಿ ಸಂಗ್ರಹವಾಗುವ ಹಣ, ಮಾನಸಿಕ ನೆಮ್ಮದಿಯಿಲ್ಲದ ಕೆಲಸ ಇವು ಇಂದಿನ ಯುವ ಜನಾಂಗ ತಮ್ಮದೇ ಆದ ಜೀವನ ಮೌಲ್ಯವನ್ನು ಕಂಡುಕೊಳ್ಳುವುದಕ್ಕೆ ಸಹಕಾರಿಯಾಗಿವೆ ಎನ್ನಬಹುದು. ಜಾಗತೀಕರಣದ ನವಮೌಲ್ಯಗಳು ಹಳೆತಲೆಮಾರಿನ ಜೀವಗಳನ್ನು (ಮೌಲ್ಯಗಳನ್ನು) ಚಲಾವಣೆ ಕಳೆದುಕೊಂಡ ನಾಣ್ಯದಂತೆ ಪರಿಗಣಿಸಿ, ಆ ಜೀವಗಳು ದ್ವಂದ್ವದಲ್ಲಿ ಬೀಳುವಂತೆ ಮಾಡುತ್ತವೆ.

ಆರ್ಥಿಕ ವ್ಯವಸ್ಥೆಯ ಆಧಾರದ ಮೇಲೆ ಕೌಟುಂಬಿಕ ವ್ಯವಸ್ಥೆ ಛಿದ್ರವಾಗುವ ಮೊದಲು ವ್ಯಕ್ತಿತ್ವದಲ್ಲಿ ಗಟ್ಟಿತನ ತೋರುವ ಗ್ರಾಮದ ತಂದೆ, ರಕ್ತ ಸಂಬಂಧಕ್ಕಿಂತ ಹಣವೇ ಮುಖ್ಯವೆನ್ನುವ ನಗರವಾಸಿ ಪಲಾಯನವಾದಿ ಮಕ್ಕಳಿಬ್ಬರ ಸಂಘರ್ಷವನ್ನು ಹೇಳುವ ರಾಮಕೃಷ್ಣ ಗುಂದಿ ಅವರ 'ಸಂಬಂಧಗಳು' ಕತೆ, ಸಡಿಲಗೊಂಡ ಕೌಟುಂಬಿಕ ಸಂಬಂಧಗಳನ್ನು ಅನಾವರಣಗೊಳಿಸಿದೆ. ಇದು ಕೌಟುಂಬಿಕ ಸಂಘರ್ಷದ ಇನ್ನೊಂದು ಮುಖವಾಗಿದೆ. ಹಳ್ಳಿಯಲ್ಲಿ ಹುಟ್ಟಿ, ಓದಿ ದೊಡ್ಡ ಕಂಪನಿಯೊಂದರಲ್ಲಿ ಉನ್ನತ ಹುದ್ದೆ ಹಿಡಿದು ಮುಂಬಯಿ (ನಗರ) ಸೇರಿದ ರಮೇಶ, ಮಡದಿ, ಮಕ್ಕಳು, ಮನೆ ಹೀಗೆ ಭದ್ರ ನೆಲೆಯನ್ನು ಹೊಂದುತ್ತಾನೆ. ನಿವೃತ್ತ ಶಾಲಾಮಾಸ್ತರರಾಗಿ ಮಗನ ಯಶಸ್ಸಿಗೆ ಕಾರಣರಾದ ವೃದ್ಧ ತಂದೆ ಮಗ, ಸೊಸೆ, ಮೊಮ್ಮಕ್ಕಳನ್ನು ಕಾಣುವ ನಿಸ್ವಾರ್ಥ ಆಸೆಯಿಂದ ಮುಂಬಯಿಗೆ ಬಂದು ಮಗನ ಮನೆಯ ಕಾಲಿಂಗ್‌ಬೆಲ್ ಒತ್ತುತ್ತಾರೆ. ಸೊಸೆ ಬಾಗಿಲು ತೆರೆದು ನೋಡಿ ಒಳಗೆ ಆಹ್ವಾನಿಸುತ್ತಾಳೆ. ಮಗನ ಮನೆಯಲ್ಲಿ ಒಂದು ರಾತ್ರಿ ಅರ್ಧ ಹಗಲು ಕಳೆಯುವುದರಲ್ಲಿ ಆ ವೃದ್ಧರು ಕಂಡುಕೊಳ್ಳುವ ಮಗ, ಸೊಸೆಯರ ಮಾತಿನ ನಯಗಾರಿಕೆ, ನಡತೆಯಲ್ಲಿನ ಕೃತ್ರಿಮತೆ, ಮೊಮ್ಮಕ್ಕಳ ನೈಜ ಪ್ರೀತಿಗಳು – ಇವುಗಳಿಂದ ನಗರದ ವಾತಾವರಣ ಗ್ರಾಮೀಣ ವ್ಯಕ್ತಿಗಳ ಮೇಲೆ ಬೀರಿದ ಪರಿಣಾಮವನ್ನು ಗುರುತಿಸಬಹುದಾಗಿದೆ. ತಂದೆ, ಮಕ್ಕಳ ಎರಡು ತಲೆಮಾರಿನ (ಗ್ರಾಮ, ನಗರ) ಸಂಬಂಧಗಳ ಮಧ್ಯೆ ಹುಟ್ಟಿಕೊಂಡ ಆಳ, ಅಗಲವಾದ ಕಂದರದ ಅರಿವಾಗುತ್ತದೆ. ಈ ವ್ಯಕ್ತಿತ್ವಗಳ ನಡುವೆ ಹುಟ್ಟಿಕೊಂಡು ಸ್ನಿಗ್ಧವಾಗಿ ಬೆಳೆದು ಬರುವ ತಣ್ಣನೆಯ ಕರ್ಷಣೆಯನ್ನು ಅಧ್ಯಯನ ಹೀಗೆ ಗುರುತಿಸುತ್ತದೆ.

> 'ಕೂತ್ಕೊಳ್ಳಿ' ಎಂದು ಆಸನ ತೋರಿಸಿದಳು. 'ಒಂದು ಪತ್ರವನ್ನಾದರೂ ಹಾಕಿದ್ದಿದ್ರೆ' ಅವಳು ರಾಗ ತೆಗೆದಳು. ನನ್ನ ಸ್ವಾಗತಕ್ಕೆ ಸ್ಟೇಷನ್ನಿಗೆ ಬರುತ್ತಿದ್ದರೋ, ಅಥವಾ ಏನಾದರೂ ವಿಶೇಷ ಅಡಿಗೆ ಮಾಡಿ ಕಾದಿರುತ್ತಿದ್ದಳೋ, ಇಲ್ಲಾ ಇಡೀ ಕುಟುಂಬ ಎಲ್ಲಾದರು ಟೂರ್ ಪ್ರೋಗ್ರಾಂ ಹಾಕಿ ಮನೆ ಬಾಗಿಲಿಗೆ ಬೀಗ ಹಾಕಿ, ನಾನು ಬೀಗ ನೋಡಬೇಕಾಗಿತ್ತೇನೋ?'[೨೨]

ವೃದ್ಧರು ಮನಸ್ಸಿನಲ್ಲಿಯೆ ಊಹಿಸಿ ನಸು ನಗುತ್ತಾರೆ. ಇಡೀ ಮನೆ ನಗರದ ಕೃತ್ರಿಮತೆಯ ಸಂಕೇತವಾಗಿದೆ. ವೃದ್ಧರ ಮಾತು, ನಡೆಗಳನ್ನು ಸಂಶಯ, ಗುಮಾನಿಗಳಿಂದ ಗಮನಿಸಲಾಗುತ್ತದೆ. ಹಳ್ಳಿಯಿಂದ ಗರಜಿಗೆ ದುಡ್ಡು ಕೇಳಲು ಬಂದ ಬಂಧುವಿನಂತೆ (ಪೀಡೆ) ನಡೆಸಿಕೊಳ್ಳಲಾಗುತ್ತದೆ. ಆದರೆ ಮುದುಕನಿಗೆ ಮೊಮ್ಮಕ್ಕಳ ಹಟ, ಮಗನ ಹಟವಾಗಿ, ಮಗನ ದುಡಿತದ ಆಯಾಸ ತನ್ನ ಆಯಾಸವಾಗಿ ಕಾಣುವುದು ನಗರದ ಬೇರುಗಳು ಗ್ರಾಮಗಳಲ್ಲಿ ನೆಲೆ ನಿಂತುದರ ಸಂಕೇತವಾಗಿದೆ. ನೆನಪಿನ ಸಿಹಿ ಹೊತ್ತು ಪ್ರೀತಿಯನ್ನು ಕೊಡಲು ಬಂದ ತಂದೆಯಿಂದ, ಅದನ್ನು ಹಣ ಕೊಟ್ಟು ಕೊಳ್ಳಬೇಕಾಗಬಹುದೆಂಬ ಅನುಮಾನ ಮಕ್ಕಳೆಂಬವರ ಮನದಲ್ಲಿ ಹುಟ್ಟಿ ಬೆಳೆಯುತ್ತದೆ. ತಮ್ಮದೇ ಆದ ಪ್ರತ್ಯೇಕ ಪ್ರಪಂಚವನ್ನು ಸೃಷ್ಟಿಸಿಕೊಂಡ ಮಕ್ಕಳು ಸಂಬಂಧದ ಎಳೆಗಳನ್ನು ಎಲ್ಲಿಂದಲೋ ಕಿತ್ತು ಇನ್ನೆಲ್ಲೋ ಜೋಡಿಸಿಕೊಂಡಿದ್ದಾರೆ ಎಂಬ ಅನಿಸಿಕೆಯನ್ನು ಅಧ್ಯಯನ ಗುರುತಿಸುತ್ತದೆ. ಕಾರು, ಬಂಗಲೆ, ಐಷಾರಾಮಿ ಬದುಕು ಎಲ್ಲ

ಸೌಕರ್ಯಗಳನ್ನು ಪಡೆದು ಅನುಭವಿಸುತ್ತಿರುವ ಜೀವನದ ಹಿಂದೆ, ಹಿರಿಯರ, ಹಡೆದವರ ಬೆವರಿನ ತ್ಯಾಗ, ಅರಗಿಸಿಕೊಂಡ ಕಹಿ ಇದೆ ಎಂಬ ಅರ್ಥ ಕಂಪ್ಯೂಟರ್ ಯುಗದ ಮಕ್ಕಳಿಗಾಗುವುದಿಲ್ಲ. ಇದು ನಗರೀಕರಣದಿಂದ ಜನ್ಮತಳೆದ ಸಾಮಾಜಿಕ ದುರಂತವಾಗಿದೆ. ಆದರೆ ಓದು, ಉದ್ಯೋಗದ ಬೆಂಬತ್ತಿ ನಡೆದ ಯುವ ಜನಾಂಗ ತಮ್ಮ ಪರಂಪರೆಯ ಮೂಲದಿಂದಲೇ ಕಳಚಿ ಹೋಗುವ, ತಂದೆ, ಮಕ್ಕಳ ಭಾವನಾತ್ಮಕ ಸಂಬಂಧವನ್ನೆ ಯಾಂತ್ರಿಕವಾಗಿ ನೋಡುವ ದೃಷ್ಟಿಕೋನವನ್ನು, ಸಂದರ್ಭ ಒರೆಗೆ ಹಚ್ಚುವುದನ್ನು ಅಧ್ಯಯನ ಗುರುತಿಸುತ್ತದೆ.

ಗ್ರಾಮೀಣ ಪ್ರದೇಶದಿಂದ ನಗರ ಪ್ರದೇಶದ ಹೊಸ ಪರಿಸರದಲ್ಲಿ ನೆಲೆ ನಿಂತ ಅಪ್ಪಂದಿರ ಬದುಕಿನ ತಲ್ಲಣಗಳು ಹೀಗಿದ್ದರೆ, ಇನ್ನು ಮೂವತ್ತು ವರ್ಷಗಳಷ್ಟು ಕಾಲ ನಗರದಲ್ಲಿ ನೆಲೆಸಿ ನಿವೃತ್ತಿಯಾಗಿ ಮಕ್ಕಳೊಂದಿಗೆ ಬದುಕುವ ಕುಸುಮಾಕರ ದೇವರಗೆಣ್ಣೂರ ಅವರ 'ನಿರಿಂದ್ರಿಯ' ಕಾದಂಬರಿಯ ರೊಳ್ಳಿಯ ಬದುಕಿನ ತಲ್ಲಣ, ದ್ವಂದ್ವಗಳು ಬೇರೆಯೆ ಆಗಿವೆ. ಹಳ್ಳಿಯಲ್ಲಿ ಬಾಲ್ಯ, ಉಪನಗರದಲ್ಲಿ ಓದಿನ ಏಳು ವರ್ಷ, ಮಹಾನಗರದಲ್ಲಿ ವೃತ್ತಿಪರ ಮೂವತ್ತೈದು ವರ್ಷಗಳನ್ನು ಕಳೆದ ಕಲ್ಲಪ್ಪ ರೊಳ್ಳಿಯ ನಿವೃತ್ತ ಜೀವನ ಅವನ ಬದುಕಿನ ಕೊನೆಯ ಘಟ್ಟವಾಗಿ ಆಗಮಿಸುತ್ತದೆ. ನಿವೃತ್ತಿಯವರೆಗೂ ನಿಯತ್ತಿನಿಂದ ಕಷ್ಟಪಟ್ಟು ದುಡಿದು ಬಂದ ರೊಳ್ಳಿಯ ಜೀವ ನಿವೃತ್ತಿಯನ್ನು ನೆನಪಿಸಿಕೊಂಡು ಒದ್ದಾಡುತ್ತದೆ. ಮತ್ತೆ ಕೆಲಸಕ್ಕೆ ಸೇರಿದರೆ ಹತ್ತು ವರ್ಷ ದುಡಿದೇನು! ಪಿಂಚಣಿಯೂ ಉಳಿಯುತ್ತದೆ, ಕಾಲವೂ ಸರಿಯುತ್ತದೆ ಎಂಬ ಅವನ ಅಲೋಚನೆಯನ್ನು ಮಕ್ಕಳು ಒಪ್ಪುವುದಿಲ್ಲ. ಸದಾ ನಾಳಿನ ಕುರಿತ ಅಪ್ಪನ ಕಾಳಜಿಯನ್ನು ಮಕ್ಕಳು ಖಂಡಿಸುವುದು ಹೀಗೆ.

> 'ಬಂದ ಹಣವನ್ನೆಲ್ಲ ಬ್ಯಾಂಕಿನಲ್ಲಿಟ್ಟಿದ್ದೇನೆ. ಹತ್ತು ವರ್ಷ ದುಡಿಯಬಲ್ಲೆ. ಹತ್ತು ವರ್ಷಗಳಲ್ಲಿ ದುಡಿದು ಬಂದ ಹಣವನ್ನೆಲ್ಲ ಮತ್ತೆ ಬ್ಯಾಂಕಿನಲ್ಲಿಡಬಲ್ಲೆ. ನಾನು ಪಟ್ಟ ಪಾಡು ಎಂತಹುದು! ಅದ್ಯಾವುದೂ ನಿಮ್ಮ ಪಾಲಿಗೆ ಇಲ್ಲ. ನಿಮಗೆ ಒಳ್ಳೆಯ ಸಂಬಳದ ನೌಕರಿಗಳಿವೆ.' ರೊಳ್ಳಿ ಹೇಳಿದ. 'ಒಪ್ಪಿದೆವು ಇಲ್ಲ ಎನ್ನಲಿಲ್ಲ. ಈ ಬ್ಯಾಂಕಿನಲ್ಲಿರುವ ಬದಲು ನಮಗೆ ಇನ್ನೊಂದಿಷ್ಟು ಕಲಿಸಿದ್ದರೆ. ಸರಕಾರಿ ನೌಕರಿಯ ಮಂಗಳ ಸೂತ್ರ ಕಟ್ಟಿಕೊಂಡವರಿಗೆ ಇದರ ಕಲ್ಪನೆಯೂ ಬರದು.' ಮಕ್ಕಳ ವಾದ. 'ನಿಮಗೆ ಸಾಧಿಸಿದ್ದು ಬಹಳ ಎನ್ನಿಸಿರಬಹುದು. ಉಣ್ಣದೇ ಕೂಡಿಟ್ಟ ಹಣ ಎಷ್ಟಾದೀತು! ಉಂಡು, ತಿಂಗಿ, ಉಟ್ಟು, ಹರಿದು ತೂರಿದರೂ ಮಿಗುವಷ್ಟು ಗಳಿಸಬೇಕು. ಅದಕ್ಕೆ ಪೌರುಷ ಬೇಕು.'

ಎಲ್ಲರೂ ನೌಕರಿಗೆ ಹದಿವಯಸ್ಸಿನಲ್ಲಿ ಕಷ್ಟಪಟ್ಟರೆ ರೊಳ್ಳಿ ನಿವೃತ್ತಿಯ ನಂತರ ಪ್ರಯತ್ನಿಸುವ ವ್ಯಕ್ತಿತ್ವದ ವಿಡಂಬನೆ ಇಲ್ಲಿದೆ. ಅವನ ಅಂತರ್ಮುಖಿ, ನಿಷ್ಠುರ, ಜಿಪುಣ, ವಿಕ್ಷಿಪ್ತ, ಸಾಫಲ್ಯ ಕಾಣದ ರಿಕ್ತ ಜೀವನದ ಈ ವ್ಯಕ್ತಿತ್ವದ ನಿರ್ಮಾಣ ಹೇಗಾಯ್ತು ಎಂಬುದಕ್ಕೆ ಅವನ ಹುಟ್ಟು, ಬಾಲ್ಯ ಯೌವನ ಕಾಲಗಳ ಪರಿಸರ, ಸನ್ನಿವೇಶ, ಸಂದರ್ಭಗಳು ಕಾರಣ ಎಂದು ಅಧ್ಯಯನ ಕಂಡುಕೊಳ್ಳುತ್ತದೆ. ಮಕ್ಕಳಿಗೆ ಭಾರವಾಗಲು ಇಷ್ಟಪಡದ ಅವನ ಆಶಯವನ್ನು (ಇದು ಇತ್ತೀಚಿನ ವೃದ್ಧರೆಲ್ಲರೂ ಅಭಿವ್ಯಕ್ತಿಸುವ ಬೆಳವಣಿಗೆ) ಮಕ್ಕಳು ಹಣದಾಶೆಯ, ಕೊದಳ, ಜಿಪುಣ ಪ್ರವೃತ್ತಿಗಳು ಎಂಬಂತೆ ಬಿಂಬಿಸುವುದು ಎಷ್ಟರ ಮಟ್ಟಿಗೆ ಸರಿ ಎಂಬ ಚಿಂತನೆಯ ಅಗತ್ಯ ಇದೆ. ಇಲ್ಲಿ ಬದಲಾದ ಕಾಲ ಸಂದರ್ಭದಲ್ಲಿ, ಮಕ್ಕಳು ರೊಳ್ಳಿಯ ಕೆಲಸ ಮಾಡುವ ಸಾಮರ್ಥ್ಯ ಕುರಿತು ಚರ್ಚೆಯನ್ನು ಮಾಡುತ್ತಾರೆ. ಈ ಚರ್ಚೆಯಲ್ಲಿ, ಜಾಗತೀಕರಣದ ಹೊಸಗಾಳಿ, ವೃತ್ತಿಯ ಬದಲಾದ ದೃಷ್ಟಿಕೋನ, ಸರ್ಕಾರಿ, ಖಾಸಗಿ ನೌಕರಿಗಳ ವ್ಯತ್ಯಾಸ, ಕಲ್ಲೂರ ಹಳ್ಳಿಯ ದೃಷ್ಟಿಕೋನ, ನಗರದ ಮಕ್ಕಳು ಬದುಕನ್ನು ಸ್ವೀಕರಿಸುವ ರೀತಿ, ಹೆಂಡತಿ, ಮಕ್ಕಳ ಭವಿಷ್ಯಕ್ಕೆ ಸ್ಪಂದಿಸದ ರೊಳ್ಳಿಯ ಮನಸ್ಸು ಮೊದಲಾದವುಗಳು ಹಾದುಹೋಗುತ್ತವೆ. ಬದಲಾದ ಪರಿಸರದಲ್ಲಿ ಎರಡು ತಲೆಮಾರುಗಳ ಮುಖಾಮುಖಿ ಇದಾಗಿದ್ದು ಹೊಸನೆಲೆಯಲ್ಲಿ ಅಪ್ಪನ ಇರುವಿಕೆಯನ್ನು ಪ್ರಶ್ನಿಸುವಂತಹ ನಿಲುವಾಗಿದೆ. ರೊಳ್ಳಿ ಕೆಲಸ ಮಾಡಲು ಅಸಮರ್ಥ, ನಿವೃತ್ತಿಯೇ ಮೇಲು ಎಂದು ಮಕ್ಕಳು ತೀರ್ಮಾನಿಸುತ್ತಾರೆ.

ಈ ಸಂದರ್ಭದಲ್ಲಿ ತಂದೆಯ (ಗ್ರಾಮದ ಅಪ್ಪನ) 'ಉಳಿಸುವುದು' ಅಂದರೆ, ತಾನು ಅನುಭವಿಸಿದ ಕಷ್ಟವು ಪರಂಪರೆಯ ದ್ಯೋತಕವಾಗಿದ್ದು ಹಳ್ಳಿಯ ಬದುಕನ್ನು ಮತ್ತು ನಗರದ ನಾಗರಿಕತೆಯನ್ನು ಒಟ್ಟಿಗೆ ಸೇರಿಸುವ ಕುರುಹಾಗಿದೆ. ಮಕ್ಕಳ 'ಪೌರುಷ' ಎಂಬುದು ಆಧುನಿಕ ಜಗತ್ತಿನ ಹೋರಾಟವನ್ನು ಬಿಂಬಿಸುತ್ತ ಹೋಗುವುದು, ವೇಗದ ಬದುಕನ್ನು ಅನುಭವಿಸುವುದು ಆಗಿರುತ್ತದೆ. ಇಬ್ಬರ ದೃಷ್ಟಿಕೋನಗಳಲ್ಲಿ ಅಗಾಧವಾದ

ವ್ಯತ್ಯಾಸವನ್ನು ಗುರುತಿಸುತ್ತೇವೆ. ಇವು ಹಳೆಯ ಮತ್ತು ಹೊಸತರ ಮಾನಸಿಕ ಸಂಘರ್ಷದ ಹೆಗ್ಗುರುತಾಗಿ ಹಳ್ಳಿ, ನಗರವನ್ನು ಪ್ರತಿನಿಧಿಸುತ್ತವೆ. ರೊಳ್ಳಿ ಕವಲು ದಾರಿಯಲ್ಲಿ ನಿಂತು ತನ್ನ ಗತ ಬದುಕನ್ನು ನೋಡಿಕೊಳ್ಳುವಂತೆ ಹೊಸನೀರು ಅವನ ಮುಖಕ್ಕೆ ಚಿಮ್ಮುತ್ತದೆ. ಚಿಮ್ಮಿದ ನೀರು ಉಳಿದ ಬದುಕನ್ನಾದರೂ ಅನುಭವಿಸಲು ಪ್ರೇರೇಪಿಸುವುದು ಗಮನಾರ್ಹ ಅಂಶ. ಆಸೆಗೆ ಸ್ಪಂದಿಸಿದ ರೊಳ್ಳಿ ತಾನೆಂದೂ ಕೊಳ್ಳದ, ಬಯಸದ ಹಣ್ಣು, ಪ್ರಸಾದನ ಸಾಧನಗಳು, ಬಟ್ಟೆಗಳನ್ನು ಖರೀದಿಸುತ್ತಾನೆ. ಅವುಗಳನ್ನು ಅನುಭವಿಸುವ ಕಾತುರದಲ್ಲಿ ಅನೇಕ ಪೇಚುಗಳಲ್ಲಿ ಸಿಲುಕಿ ವೃದ್ಧ ಜೀವಗಳು (ಹೆಂಡತಿ ಕೂಡ) ನಲುಗುತ್ತವೆ. ತಡವಾದ ಜ್ಞಾನೋದಯದಲ್ಲಿ ನಿವೃತ್ತಿಯ ನಂತರ ತನ್ನ ಇಡೀ ಒಂದು ಜೀವಮಾನದ ಬದುಕಿನ ಸ್ಥಿತಿಯನ್ನು ಕೆಳದರ್ಜೆಯ ಮಗುವಿಗೆ ಹೋಲಿಸಿಕೊಂಡು ದುಃಖಿಸುವುದು ಮತ್ತು ವಿಷಾದಿಸುವುದು ಗ್ರಾಮೀಣ ಪಾತ್ರದ ಸೋಲಿ(ಸೋಲು ನಗರ ಪಾತ್ರಗಳ ಎದುರು ಮಾತ್ರವೆ ಹೊರತು ವಾಸ್ತವಿಕ ಬದುಕಿನಲ್ಲಿ ಅಲ್ಲ)ನ ದ್ವಂದ್ವವಾಗಿದೆ. ಹೀಗೆ ಅಪ್ಪಂದಿರು ಗ್ರಾಮ/ನಗರಗಳೆಂಬ ಹೊಸ ನೆಲೆಯಲ್ಲಿ (ಮಕ್ಕಳ ಹೊಸ ಗೂಡಿನಲ್ಲಿ) ಪರಾಧೀನತೆಯನ್ನು ಅನುಭವಿಸಿದ್ದು ಕಂಡುಬರುತ್ತದೆ.

ಇನ್ನೊಂದೆಡೆ ಅಪ್ಪಂದಿರು ತಮ್ಮ ಮಕ್ಕಳನ್ನು ಸಾಮಾಜಿಕ, ಆರ್ಥಿಕ ಇಕ್ಕಟ್ಟಿಗೆ ಸಿಕ್ಕಿಸಿ ಸಾಂಸಾರಿಕ ಸಂಬಂಧಗಳ ವಿಘಟನೆಗೆ ಕಾರಣವಾದದ್ದನ್ನು ಅಧ್ಯಯನ ಗುರುತಿಸುತ್ತದೆ. ಪಾಟೀಲ ಪುಟ್ಟಪ್ಪ ಅವರ 'ಹೊನ್ನಯ್ಯನ ಬದುಕು' ಕಥೆಯ ಹನುಮಯ್ಯ ನಗರದ ಮಗನ ಮನೆಯಲ್ಲಿ ವಾಸಿಸುವ ಇನ್ನೊಬ್ಬ ಅಪ್ಪನಾಗಿದ್ದಾನೆ. ತನ್ನ ದುಶ್ಚಟಗಳಿಂದ ಗ್ರಾಮದ ಸಮಸ್ತ ಆಸ್ತಿಯನ್ನು ಕಳೆದುಕೊಂಡು ಬೀದಿಗೆ ಬಿದ್ದಾಗ, ಇವನ ಮೇಲೆ ಕರುಣೆಯಿಟ್ಟು ಮಗ ಸೊಸೆ ತಮ್ಮೊಂದಿಗೆ ನಗರಕ್ಕೆ ಕರೆತರುತ್ತಾರೆ. ಹಾಲಿನ ವ್ಯಾಪಾರ ಕೈಗೊಂಡ ಕುಟುಂಬ ಇವನಿಗೆ ಹಾಲು ಹಾಕಲು ವರ್ತನೆ ಮನೆಗಳಿಗೆ ಕಳಿಸಿದರೆ ಅಲ್ಲಿ ಬೆಲೆಬಾಳುವ ವಸ್ತುಗಳನ್ನು ಕದ್ದು ಹಳೆ ಚಾಳಿಯನ್ನು ಮುಂದುವರೆಸುತ್ತಾನೆ. "ನೀ ನಮ್ಮನ್ನೆಲ್ಲ ಹಾಳುಮಾಡಿ ಬೀದಿ ಬಿಕಾರಿ ಮಾಡಿದ್ಯಲ್ಲ? ಅದನ್ನೆಲ್ಲ ಮರ್‍ತುಬಿಟ್ಟೋ? ಮಗ ಸೊಸಿ ಪುಣ್ಯಾ ಕಟ್ಗೊಂಡು ಒಂದೀಟು ಹೊಟ್ಗೆ ಹಾಕ್ತಾರ್" ಎಂದು ಹೆಂಡತಿ ಓಬವ್ವ ತರಾಟೆಗೆ ತೆಗೆದುಕೊಂಡರೂ, ಇವನು ಅರ್ಥೈಸಿಕೊಳ್ಳುವುದಿಲ್ಲ, ಜಪ್ಪೆನ್ನುವುದಿಲ್ಲ. ಮಕ್ಕಳ ಋಣವನ್ನು ಪರಿಗಣಿಸದ ಹಠಮಾರಿ ತಂದೆಯ ವ್ಯಕ್ತಿತ್ವ ಇವನದಾಗಿದೆ. ದುಶ್ಚಟಗಳನ್ನು ಬಿಡಲು ಕೇಳಿಕೊಂಡ ಹೆಂಡತಿ, ಮಗನೊಂದಿಗೆ ನಡೆದ ಸಂಘರ್ಷದಲ್ಲಿ ಹೆಂಡತಿಯನ್ನು ಸಾಯಿಸಿ ಮಗನನ್ನು ಜೈಲಿಗೆ ಕಳಿಸುವ ತಂದೆಯ ನಡತೆಯಲ್ಲಿ ಸ್ವಲ್ಪವೂ ತಲ್ಲಣ, ಕೀಳರಿಮೆ, ಪಶ್ಚಾತ್ತಾಪದ ಎಳೆ ಕಾಣುವುದಿಲ್ಲ. ಒಟ್ಟಾರೆ, ಅಮ್ಮನ ವ್ಯಕ್ತಿತ್ವದ ಮುಂದೆ ಅಪ್ಪನ ವ್ಯಕ್ತಿತ್ವ ಮಸುಕಾಗಿರುವುದು ಕಥನ ಸಾಹಿತ್ಯದಲ್ಲಿ ಕಾಣುವ ಅಂಶವಾಗಿದೆ. ಒಂದು ಕಾಲಕ್ಕೆ ದರ್ಪ, ಶಿಸ್ತುಗಳ ಮೂರ್ತಿಯೇ ಆಗಿದ್ದ ಅಪ್ಪ ವಯಸ್ಸಾದಂತೆ ವಯಸ್ಕ ಮಕ್ಕಳ ಮುಂದೆ ಕುಗ್ಗಿ ಮುಜುಗರ ಪಡುವುದನ್ನು ಗುರುತಿಸುತ್ತೇವೆ. ಇದಕ್ಕೆ ಆರ್ಥಿಕ ಅಸಹಾಯಕತೆಯೂ ಕಾರಣವಾಗಿದ್ದಂತೆ, ತಮ್ಮ ಮಗ ತಮಗಿಂತ ಹೆಚ್ಚಿಗೆ ಓದಿದ್ದಾನೆ, ಸಾಂದರ್ಭಿಕವಾದ ಲೌಕಿಕ ಜ್ಞಾನದ ಎತ್ತರ ತಲುಪಿದ್ದಾನೆ ಎಂಬ ಭಾವನೆ (ಇದು ಒಳ ಹೆಮ್ಮೆಯೂ ಆಗಿರಬಹುದು, ಕೀಳರಿಮೆಯೂ ಆಗಿರಬಹುದು) ಅವರನ್ನು ಕುಬ್ಜರನ್ನಾಗಿ ಮಾಡುವುದೂ ಉಂಟು. ಆದರೆ ಈ ಭಾವನೆ ಅವ್ವಂದಿರಲ್ಲಿ ಕಂಡುಬರುವುದಿಲ್ಲವೆಂಬುದು ವಿಶೇಷ.

ಕೌಟುಂಬಿಕ ನೆಲೆಯಲ್ಲಿ ಕಂಡುಬರುವ ಸಂಘರ್ಷಗಳನ್ನು ಪ್ರಸ್ತುತ ಕಥನ ಸಾಹಿತ್ಯ ಗ್ರಹಿಸಿರುವ ರೀತಿಯನ್ನು ಹೀಗೆ ಸಂಗ್ರಹಿಸಬಹುದು. * ಗ್ರಾಮ/ನಗರಗಳ ಹೊಸ ಪರಿಸರದಲ್ಲಿ ಕೌಟುಂಬಿಕ ಸಂಬಂಧಗಳು ಸಂಘರ್ಷಕ್ಕೆ ಸಿಕ್ಕು ಶಿಥಿಲವಾಗುತ್ತ ಹೋಗುತ್ತವೆ. ಇದಕ್ಕೆ ಆಧುನಿಕ ಸೌಲಭ್ಯಗಳು, ಹಣ ಕೂಡಿಡುವ ಆಸೆ (ಆರಾಮ ಖುರ್ಚಿ) ಅಥವಾ ಎರಡು ತಲೆಮಾರಿನ ವ್ಯಕ್ತಿಗಳಲ್ಲಿನ ಕೌಟುಂಬಿಕ ಮೌಲ್ಯಗಳ ಭಿನ್ನತೆ (ಸಂಬಂಧಗಳು), ಹಾಗೂ ಒಂದೇ ಕುಟುಂಬದ ವ್ಯಕ್ತಿಗಳಲ್ಲಿನ ಮೇಲರಿಮೆ/ಕೀಳರಿಮೆ ಸ್ವಭಾವಗಳು (ಗದ್ದೆಯ ಸೆರಗು) ಕಾರಣವಾಗಿವೆ. * ಹೊಸ ಪರಿಸರದಲ್ಲಿ ಕೌಟುಂಬಿಕ ಮತ್ತು ಸಾಮಾಜಿಕ ಸಂಬಂಧಗಳು ಹಲವಾರು ಕಾರಣಗಳಿಂದ ಸಂಘರ್ಷವನ್ನು ಹುಟ್ಟು ಹಾಕುತ್ತವೆ. ಉದಾಹರಣೆಗೆ ಸಾಮಾಜಿಕ ಪ್ರತಿಷ್ಠೆ (ಬೀಜ), ಕೀರ್ತಿ, ಹಣ ಮಾಡುವ ಆಸೆಯಿಂದ ದೈಹಿಕ ಸಂಬಂಧಕ್ಕಾಗಿ ಹಂಬಲಿಸುವ ಸ್ವಾರ್ಥ (ಅಡಕತ್ತರಿ), ದಾಂಪತ್ಯದಲ್ಲಿ ಪರಸ್ಪರ ಸಂಶಯ(ಪುತುಳಾ ಪ್ರಕರಣ)ಗಳು ಕಾರಣಗಳೆನ್ನಬಹುದು. * ಕೌಟುಂಬಿಕ ಹೊಸನೆಲೆಯಲ್ಲಿ ಬದುಕಿನ ಮುಸ್ಸಂಜೆಯನ್ನು ಕಳೆಯುವ ಅಪ್ಪಂದಿರು ಕೀಳರಿಮೆ,

ಪರಾಧೀನತೆಯ ದ್ವಂದ್ವ ಅನುಭವಿಸುವುದು ಕಂಡುಬರುತ್ತದೆ. ಗ್ರಾಮದ ಅಪ್ಪಂದಿರು ದಿಟ್ಟ ನಿಲುವು ತಾಳಿ ಸ್ವತಂತ್ರ ನಿರ್ಧಾರ ತೆಗೆದುಕೊಂಡು ತಮ್ಮ ಕೊನೆಯ ಕರ್ತವ್ಯ ಮುಗಿಸುವುದು ಕಂಡುಬರುತ್ತದೆ.

## ೩. ಸಾಮಾಜಿಕ ನೆಲೆ ಮತ್ತು ಸಂಘರ್ಷ

### ಅ. ವರ್ಣ ವ್ಯವಸ್ಥೆ ಮತ್ತು ಸಂಘರ್ಷ

ಗ್ರಾಮ/ನಗರಗಳ ಸಾಮಾಜಿಕ ನೆಲೆಯಲ್ಲಿ ಕಂಡುಬರುವ ಶೋಷಣೆ, ದೌರ್ಜನ್ಯ, ಬಹಿಷ್ಕಾರಗಳಿಗೆ ಒಂದು ವರ್ಗದ ಜನರು ಇನ್ನೊಂದು ವರ್ಗದ ಜನರ ಬಗ್ಗೆ ಹೊಂದಿದ ಮಾನಸಿಕ ಅಸಹನೆ ಕಾರಣವೆನ್ನಬಹುದು. ದಲಿತ, ಕೆಳವರ್ಗಗಳು ಆರ್ಥಿಕ, ಸಾಮಾಜಿಕ ನ್ಯಾಯದ ಹೆಸರಿನಲ್ಲಿ ಆಡಳಿತಕ್ಕೆ ಹತ್ತಿರವಾಗುತ್ತಿರುವ ಕಾರಣಗಳು, ಸವರ್ಣೀಯ ಗುಂಪಿನ ಅಸಹನೆಯನ್ನು ಕೆರಳಿಸಿ ಸಮಾಜ ವಿರೋಧಿ ಸಂಘರ್ಷವನ್ನು ಹುಟ್ಟುಹಾಕುತ್ತವೆ. ಇಂತಹ ಸಂದರ್ಭದಲ್ಲಿ ಹೊಸನೆಲೆ ಪ್ರವೇಶಿಸಿದ ವ್ಯಕ್ತಿಗಳು ಈ ಸಂಘರ್ಷದ ಬಿಸಿಯನ್ನು ಅನುಭವಿಸುವ ಸಂದರ್ಭಗಳು ಕಥನ ಸಾಹಿತ್ಯದಲ್ಲಿ ಕಂಡುಬರುತ್ತವೆ.

ಶತಶತಮಾನಗಳಿಂದಲೂ ನಡೆದುಕೊಂಡು ಬಂದ ಸಂಪ್ರದಾಯಗಳು, ಜೀವನಪದ್ಧತಿಗಳು, ನಂಬಿಕೆಗಳು ಬದಲಾವಣೆಯಾಗದೆ ದೈವ ನಿಯಮದಂತೆ ಸ್ವೀಕರಿಸಬೇಕು ಎಂಬ ನಿಲುವಿನ ಮೇಲ್ವರ್ಗ, ಈ ಧೋರಣೆಯನ್ನು ವಿರೋಧಿಸಿ ಬದಲಾವಣೆ ಬಯಸುವ ದಲಿತ, ಕೆಳವರ್ಗಗಳ ಮಧ್ಯೆ ಸಂಘರ್ಷ ಗ್ರಾಮ/ನಗರಗಳಲ್ಲಿ ಕಂಡುಬರುತ್ತದೆ. ಆರ್. ವಿ. ಭಂಡಾರಿ ಅವರ 'ಬೆಂಕಿಯ ಮಧ್ಯೆ' ಕಾದಂಬರಿಯ ಮುನಿಯಪ್ಪ ಬಾಲಕನಾಗಿದ್ದಾಗ ಸವರ್ಣೀಯರ ಶೋಷಣೆ, ದೌರ್ಜನ್ಯಗಳನ್ನು ಸಹಿಸಿ ಓದಿ, ಹೆಚ್ಚಿನ ವಿದ್ಯಾಭ್ಯಾಸಕ್ಕೆ ನಗರಕ್ಕೆ ಬಂದ ದಲಿತ ಯುವಕನಾಗಿದ್ದಾನೆ. ಕಬಡ್ಡಿ ಆಟದಲ್ಲಿ ತನ್ನ ಮಗನ ಕಾಲು ಎಳೆದಿದ್ದಕ್ಕಾಗಿ, ಅಪ್ಪನಿಂದಲೇ ಮಗನನ್ನು ಹೊಡೆಯಿಸಿದ ಪಾಳೇಗಾರಿ ವ್ಯವಸ್ಥೆಯ ಕ್ರೌರ್ಯವನ್ನು ಸಹಿಸಿ, ಧಿಕ್ಕರಿಸಿ, ಓದಲು ನಗರಕ್ಕೆ ಬಂದ ಮುನಿಯಪ್ಪ ಹರಿಜನರ ಹಾಸ್ಟೆಲ್ ಸೇರಿ ನಿರಾಳವಾಗಿ ಉಸಿರಾಡುತ್ತಾನೆ. ಗ್ರಾಮದಲ್ಲಿ ಅವನ ಹೋರಾಟ ಒಂಟಿಧ್ವನಿಯಾಗಿದ್ದು ನಗರದಲ್ಲಿ ಸಾಂಘಿಕ ರೂಪ ದೊರೆತರೂ, ನಗರದ ಬದುಕಿನ ಸಂಘರ್ಷ ಇನ್ನೊಂದು ಬಗೆಯದಾಗಿದೆ ಎಂಬ ಅರಿವು ಅವನು ಹೈಸ್ಕೂಲ್ ಮುಗಿಸಿ ಕಾಲೇಜ್ ಪ್ರವೇಶಿಸಿದಾಗ ಅನುಭವಕ್ಕೆ ಬರುತ್ತದೆ. ದಲಿತ ಯುವಕರೊಂದಿಗಿನ ಒಡನಾಟ, ಓದು, ಅಂಬೇಡ್ಕರರ ಜೀವನ, ಚಿಂತನೆಗಳ ಅಧ್ಯಯನ ಅವನ ಜ್ಞಾನಕ್ಷೇತ್ರವನ್ನು ವಿಸ್ತರಿಸಿದರೂ, ಸವರ್ಣೀಯ ಯುವಕರ ಒಡನಾಟವಿಲ್ಲದ ಜೀವನ ಪ್ರತ್ಯೇಕತೆಯನ್ನು ಅವನು ಅನುಭವಿಸುತ್ತಾನೆ. ದಲಿತ ಸಂಘರ್ಷ ಸಮಿತಿಯ ಪರಿಚಯವಾಗಿ ಅಸ್ಪೃಶ್ಯತಾ ನಿವಾರಣೆಯ ಹೋರಾಟಕ್ಕೆ ಧುಮುಕುವುದು, ಸವರ್ಣೀಯರ ದೇವಾಲಯ ಪ್ರವೇಶದ ಸಂದರ್ಭದಲ್ಲಿ, ಪೋಲೀಸರೆದುರು ಸವರ್ಣೀಯ ಗೂಂಡಾಗಳು ದಲಿತರನ್ನು ಕಲ್ಲು, ಕಬ್ಬಿಣದ ಸರಳುಗಳಿಂದ ಹೊಡೆದು ಪ್ರತಿಭಟನೆಯನ್ನು ಸಾಯಿಸುವುದು ಅಗಾಧ ನೋವನ್ನು ಉಂಟುಮಾಡುತ್ತದೆ. 'ಬಡವರಿಗೆ ಹುಸಾರಿ ಮಕ್ಕಳು ಹುಟ್ಬಾರ್ದಲೆ'[೨೫] ಎಂದು ಅತ್ತಿದ್ದ ಅಪ್ಪನ ನೆನಪು ಸೋಲಿನ ಹಂತದಲ್ಲಿ ಮರುಕಳಿಸುವುದು ಮತ್ತು ಆಡಳಿತ ಯಾವತ್ತೂ ಅಸ್ಪೃಶ್ಯರ ಹಕ್ಕು ಬಾಧ್ಯತೆಗಳಿಗೆ ಸ್ಪಂದಿಸುವುದಿಲ್ಲ ಎಂಬ ಸತ್ಯದ ಅರಿವನ್ನು ಮರಿಯಪ್ಪ ಮನಗಾಣುವುದು ಅವನ ನಗರ ಸಂಘರ್ಷದ ಮಹತ್ವದ ಘಟ್ಟಗಳಾಗಿವೆ. ಶಿಕ್ಷಣ, ನಗರಮುಖಿ ನಡಿಗೆ ಜೀತಗಾರನ ಮಕ್ಕಳ ಮುಕ್ತಿಗೆ ತೆರೆದ ಹೆಬ್ಬಾಗಿಲು ಎಂಬ ಕಾದಂಬರಿಯ ನಿಲುವನ್ನು ಅಧ್ಯಯನ ಒಪ್ಪಿಕೊಳ್ಳುತ್ತದೆ.

ಗ್ರಾಮ/ನಗರಗಳ ಸಾಮಾಜಿಕ ಬದುಕಿನಲ್ಲಿ ನಡೆಯುವ ಸಂಘರ್ಷ(ಸಂಘರ್ಷವಲ್ಲ ದೌರ್ಜನ್ಯ ಎಂಬುದು ಅಧ್ಯಯನದ ನಿಲುವು)ಗಳಿಗೆ ಜಾತಿಯಾಧಾರಿತ ಅಸಮಾನತೆಯೇ ಮೂಲ ಅಸ್ತಿಭಾರವಾಗಿರುವುದನ್ನು ಅನೇಕ ಕಥೆ, ಕಾದಂಬರಿಗಳು ಅನಾವರಣಗೊಳಿಸಿವೆ. ನಾ. ಡಿಸೋಜಾ ಅವರ 'ಮಂಜಿನ ಕಾನು' ಕಾದಂಬರಿಯ ಕೃಷ್ಣಯ್ಯ ಹೆಗಡೆಯರ ಹುಟ್ಟಾಳು ಕೊಲ್ಲ ಒಡೆಯನ ದೌರ್ಜನ್ಯವನ್ನು ಪ್ರತಿಭಟಿಸಿ ಪಟ್ಟಣಕ್ಕೆ ಮಗ ಹಾಲಪ್ಪನೊಂದಿಗೆ ಬಂದು ಸ್ವತಂತ್ರನಾಗುತ್ತಾನೆ. ಊಳಿಗಮಾನ್ಯ ವ್ಯವಸ್ಥೆಯ ನಿರಾಕರಣೆ ನೆಲೆಯಲ್ಲಿ ಸ್ವತಂತ್ರನಾದ ದಲಿತನೊಬ್ಬ ಗ್ರಾಮ ನಿರಾಕರಿಸಿ ನಗರಕ್ಕೆ ಬಂದರೆ, ಅಲ್ಲಿ ಜೀವನ ನಿರ್ವಹಣೆಗೆ ಕೂಲಿಯಾಗಿ ಮತ್ತೆ ಬಂಡವಾಳಶಾಹಿ ವ್ಯವಸ್ಥೆಯನ್ನು ಆಶ್ರಯಿಸುವುದು ಅವನ ಅಸಹಾಯಕತೆಯಾಗಿದೆ. ಮಗನನ್ನು ಶಾಲೆಗೆ ಸೇರಿಸುವಾಗ ಇವನ ಜಾತಿಯನ್ನು ತಿಳಿದುಕೊಂಡ ಬರಸಯ್ಯ ಮಾಸ್ತರು,

'ಶಾಲೆಗೆ ಸೇರ್ಸಕೋತೀನಿ. ಆದ್ರೆ ಹುಡ್ಗ ಬೇರೆ ಜಾತಿಯವರ ಜೊತೇಲಿ ಸೇರಬಾರ್ದು. ಹೊಲೇರ ಹುಡುಗರ ಜೊತೇಲಿ ಕೂತ್ಕೋಬೇಕು. ಶಾಲೆಗೆ ಬರುವಾಗ ಶುಚಿಯಾಗಿರ್ಬೇಕು ತಿಳಿತಾ'[೨೬]

ಎಂಬ ನಿರ್ಬಂಧನೆಯನ್ನು ಹೇರುತ್ತಾರೆ. ಕೊಲ್ಲ ಕೃತಾರ್ಥನಾದ ಭಾವದೊಂದಿಗೆ ಈ ನಿರ್ಬಂಧನೆಯನ್ನು ನಮ್ರವಾಗಿ ಸ್ವೀಕರಿಸುವುದು ಗ್ರಾಮದ ಆರ್ಥಿಕ, ಸಾಮಾಜಿಕ ದಿಗ್ಬಂಧನಕ್ಕಿಂತ ಪಟ್ಟಣ ಎಷ್ಟೋ ಮೇಲು ಎಂಬ ನಿಲುವು ಕಾದಂಬರಿಯದಾಗಿದೆ. ದಲಿತರಲ್ಲಿ ಸಾಮಾನ್ಯವಾಗಿ ಕಾಣುವ ದೈನ್ಯ, ಬೇಡಿಕೆಯ ಮನೋಭಾವ ಮತ್ತೆ ಇಲ್ಲಿ ಕಾಣಿಸಿಕೊಳ್ಳುತ್ತದೆ. ಹಾಲಪ್ಪ ತನ್ನ ಶಿಕ್ಷಣವನ್ನು ಸವರ್ಣೀಯರ ಮಕ್ಕಳಿಂದ ದೂರ ಕುಳಿತು, ನಿಂತು, ಆಡಿ ಮುಗಿಸಬೇಕಾದುದು ಆಡಳಿತದ ಅಶಕ್ತತೆ, ಯಥಾಸ್ಥಿತಿಯನ್ನು ಮುಂದುವರೆಸುವ ಹುನ್ನಾರದಂತೆ ಕಾಣುತ್ತದೆ. ಗ್ರಾಮಗಳಲ್ಲಿ ಇರುವಂತೆ ನಗರಗಳಲ್ಲಿಯೂ ಸರಕಾರಿ ಶಾಲೆಗಳಿಗೆ ಹೋಗಿ ಶಿಕ್ಷಣ ಪಡೆಯಬೇಕಾದ ದಲಿತ, ಕೆಳವರ್ಗಗಳ ಮಕ್ಕಳ ಸ್ಥಿತಿ ಹೂವಿನ ಹಾಸಿಗೆಯಾಗಿರಲಿಲ್ಲ. ಶಾಲೆಗಳಲ್ಲಿ ಇವರು ಸವರ್ಣೀಯ ಮಕ್ಕಳಿಂದ ದೂರವೆ ಇರಬೇಕಾದ ಸ್ಥಿತಿ ಅವರ ನೈತಿಕ ಸ್ಥೈರ್ಯವನ್ನು ಕುಗ್ಗಿಸುತ್ತಿತ್ತು. ಸವರ್ಣೀಯ ಮಕ್ಕಳು ಮತ್ತು ಅಧ್ಯಾಪಕರಿಂದ ತಿರಸ್ಕಾರಕ್ಕೆ ಒಳಗಾಗುವ ಸನ್ನಿವೇಶಗಳನ್ನು ಕಥೆ, ಕಾದಂಬರಿಗಳು ಚಿತ್ರಿಸುತ್ತವೆ. ಬಸವರಾಜ ಕಟ್ಟೀಮನಿ ಅವರ 'ನೀ ನನ್ನ ಮುಟ್ಟಬೇಡ' ಕಾದಂಬರಿಯಲ್ಲಿ ನಗರದ ಶಾಲೆಗೆ ಬಂದ ಮಹಾದೇವನಿಗೆ ಅಧ್ಯಾಪಕರು ಕೇಳುವ ಪ್ರಶ್ನೆ ಸುಶಿಕ್ಷಿತರ ಮೂಲಭೂತವಾದಿತ್ವವನ್ನು, ಪ್ರಗತಿಪರತೆಯ ಆಷಾಢಭೂತಿತನವನ್ನು ಅನಾವರಣಗೊಳಿಸಿದೆ.

'ನೀನು ಹೊಲೆಯುವರವನೇನಪಾ?' ಎಂಬ ಪ್ರಶ್ನೆಗೆ ತಲೆತಗ್ಗಿಸಿ ಅವಮಾನದಿಂದ ಕುಗ್ಗಿ ಮಾದೇವ 'ಹೌದ್ರಿ' ಎಂದಾಗ 'ಹಾಗಾದರೆ ಅಲ್ಲಿ ಕೂಡು, ಆ ಮೂಲೆಯೊಳಗ'[೨೭]

ಎಂದು ಶಾಲೆಯ ಕಸ, ಪೊರಕೆ, ಚಪ್ಪಲಿಗಳನ್ನು ಇಡುವ/ಬಿಡುವ ಮೂಲೆಯನ್ನು ಅಧ್ಯಾಪಕರು ತೋರಿಸುತ್ತಾರೆ. ಇಂತಹ ಸಂದರ್ಭದಲ್ಲಿ ದಲಿತ ಮಕ್ಕಳ ಮಾನಸಿಕ ಸ್ಥಿತಿ ಎಂತಹ ಅಪಮಾನದಿಂದ ತಳಮಳಿಸಬಹುದು ಎಂಬುದನ್ನು ಊಹಿಸಲು ಅಸಾಧ್ಯವಾಗುತ್ತದೆ. ಪಟ್ಟಣದಲ್ಲಿ ವಾರಕ್ಕೆ ಸಿಕ್ಕುವ ನಾಲ್ಕೂವರೆ ರೂಪಾಯಿಯಲ್ಲಿ ಮೂರು ರೂಪಾಯಿ ಉಳಿಸುತ್ತ ಮಗನನ್ನು ಓದಿಸುವ ಕೊಲ್ಲ ಪಟ್ಟಣದ ಸಂಪರ್ಕದಿಂದ ಉಳಿತಾಯದ ದಾರಿಯನ್ನು ತಿಳಿದುಕೊಳ್ಳುತ್ತಾನೆ. ಶಿಕ್ಷಣ, ಆರ್ಥಿಕ ಸ್ವಾತಂತ್ರ್ಯ, ದಲಿತರ ಸಾಮಾಜಿಕ ಬಿಡುಗಡೆಯಂತಹ ವಿಷಯಗಳಿಗೆ ನಗರಗಳೇ ಸೂಕ್ತ ನೆಲೆಗಳಾಗಬಲ್ಲ ಸಾಧ್ಯತೆಯನ್ನು ಅಧ್ಯಯನ ಗ್ರಹಿಸುತ್ತದೆ. ಗ್ರಾಮ/ನಗರ ಸಾಮಾಜಿಕ ನೆಲೆಯಲ್ಲಿ ನಡೆಯುವ ಜಾತಿ ಆಧಾರಿತ ಶೋಷಣೆ, ದೈಹಿಕ, ಮಾನಸಿಕ ದೌರ್ಜನ್ಯಗಳು ಶಿವರುದ್ರ ಕಲ್ಲೋಳಿಕರ ಅವರ 'ಹೊಲಗೇರಿಯ ರಾಜಕುಮಾರ' ಕಾದಂಬರಿಯಲ್ಲಿಯೂ ಅನಾವರಣಗೊಂಡಿವೆ. ಕುರುಂದವಾಡ ಗ್ರಾಮದಲ್ಲಿ ಹುಟ್ಟಿ ವಡಗಾವ್(ನಗರ)ನ ಹೊಲಗೇರಿಯಲ್ಲಿ ಬೆಳೆದ ಮಾದೇವನ ವಿದ್ಯಾಭ್ಯಾಸವನ್ನು ತಂದೆ ಜಾನುದಾ ಎಷ್ಟೇ ಕಷ್ಟಗಳು ಬಂದರೂ ನಿಲ್ಲಿಸುವುದಿಲ್ಲ. ಸವರ್ಣೀಯರ ಕುತ್ಸಿತ ಬುದ್ಧಿಯನ್ನು ಮಾದೇವ ಕಾಂಬಳೆಯ ವಿದ್ಯಾರ್ಥಿ ಬದುಕಿನ ಅನೇಕ ಸಂದರ್ಭಗಳಲ್ಲಿ ಕಾದಂಬರಿ ಹೊರಹಾಕಿದೆ. ಮಾದೇವನ ಸಹಪಾಠಿ, ಅನುಪಾ ದೇಶಪಾಂಡೆ ಮಾದೇವನ ಜಾತಿ ತಿಳಿದ ತಕ್ಷಣ, 'ಅರೆ ನೀ ಎಸ್ಸಿ ಏನು? ನೋಡಿದರ ಬ್ರಾಹ್ಮಣರವಾ ಕಂಡಂಗ ಕಾಣಿಸ್ತಿ. ಸೈಕಲ್ ಮ್ಯಾಲೆ ಬ್ಯಾರೆ ಕಾಲೇಜಿಗೆ ಬರ್ತಿ'[೨೮] ಎನ್ನುತ್ತಾಳೆ ಹಾಗೂ ಅಂದಿನಿಂದ ಮಾದೇವನ ನೋಟ್ಸ್ ಕೇಳುವುದಿರಲಿ ಅವನತ್ತ ತಿರುಗಿಯೂ ನೋಡುವುದಿಲ್ಲ. ಅಂದರೆ ಬಿಳಿಚರ್ಮ, ಬುದ್ಧಿವಂತಿಕೆ, ಐಶ್ವರ್ಯ, ಶೋಕಿ ಇವೆಲ್ಲ ಕೇವಲ ಸವರ್ಣೀಯರ ಸ್ವತ್ತು, ಅವು ಕೆಳವರ್ಗ, ದಲಿತರಲ್ಲಿ ಇರಬಾರದು, ಇರುವುದಿಲ್ಲ ಎಂಬ ಸವರ್ಣೀಯರ ಮಾನದಂಡದ ನಿಲುವು ಇಲ್ಲಿ ಪ್ರಕಟಗೊಂಡಿದೆ. ಮಾದೇವ ಕಾಂಬಳೆ ಕಾಲೇಜಿಗೆ ಮೊದಲ ರ್‍ಯಾಂಕ್ ಬಂದಾಗ ಯಾರೂ ನಂಬುವುದಿಲ್ಲ. ಸನ್ಮಾನ ಸಮಾರಂಭದಲ್ಲಿ ಇವನ ಪಕ್ಕದಲ್ಲಿ ಕುಳಿತ ಸವರ್ಣೀಯ ಉದ್ಯೋಗಪತಿ ಪಕ್ಕದ ಕುರ್ಚಿಯತ್ತ ವಾಲುತ್ತಾನೆ. ಇವೆಲ್ಲ ಸಂದರ್ಭಗಳು ದಲಿತ ಮನಸ್ಸುಗಳನ್ನು ಹತ್ತಿಕ್ಕಿ ಘಾಸಿಗೊಳಿಸಿ ಅವರು ಪ್ರತಿಭಾವಂತರಾಗಿ ಮುನ್ನುಗ್ಗುವುದನ್ನು ತಡೆಯುವ ಹುನ್ನಾರಗಳಾಗಿವೆ. ಇಂತಹ ಅವಮಾನಗಳು ಮಾದೇವನ ಕುಟುಂಬದ ಸದಸ್ಯರಿಗೂ ಆಗುತ್ತವೆ. ಮಾದೇವನ ಮಗಳ ಸಹಪಾಠಿಗಳು ಅವಳು ಮಹಾರ್ ಜಾತಿಯವಳಾಗಿದ್ದಕ್ಕೆ ಅಧ್ಯಾಪಕರು ಪಾಸು ಮಾಡಿದ್ದಾರೆಂದು ಹಂಗಿಸುತ್ತಾರೆ. ಇದು ಸಾಂಪ್ರದಾಯಿಕ ಶಕ್ತಿಗಳು ತಮ್ಮ ಮಕ್ಕಳಲ್ಲಿ ಹೇಗೆ ಬಾಲ್ಯದಲ್ಲಿಯೇ ಮೇಲರಿಮೆಯನ್ನು, ಅಹಂಕಾರವನ್ನು ಬಿತ್ತಿ ಬೆಳೆಸುತ್ತವೆ ಎನ್ನುವುದಕ್ಕೆ ಉದಾಹರಣೆಯಾಗಿದೆ. ಸಾಮಾಜಿಕ, ಆರ್ಥಿಕ, ರಾಜಕೀಯ ಶಕ್ತಿಗಳನ್ನು

ಬಿಗಿಮುಷ್ಟಿಯಲ್ಲಿ ಹಿಡಿದುಕೊಂಡ ಮೇಲ್ಜಾತಿ/ವರ್ಗದ ಸಮಾಜ ಕೆಳವರ್ಗ, ದಲಿತರ ಹಕ್ಕು ಬಾಧ್ಯತೆಗಳನ್ನು ಧಮನಿಸುವುದರೊಂದಿಗೆ ಹೊಸ ಪರಿಸರದಲ್ಲಿ ಬದುಕು ಕಟ್ಟಿಕೊಳ್ಳುವ ಅವರ ಪ್ರಯತ್ನಕ್ಕೆ ಅಡ್ಡಿಪಡಿಸುವುದನ್ನು ಈ ಎಲ್ಲ ಕತೆ, ಕಾದಂಬರಿಗಳು ದಾಖಲಿಸಿವೆ.

ಹೇಮಲತಾ ಮಹಿಷಿ ಅವರ 'ತ್ರಿಶಂಕು' ಕತೆಯ ನಾಯಕ ದಲಿತ ವರ್ಗದಲ್ಲಿ ಹುಟ್ಟಿ, ಕಷ್ಟಪಟ್ಟು ಓದಿ ಡಾಕ್ಟರ್ ಆಗಿರುತ್ತಾನೆ. ಸರಕಾರದ ರೋಸ್ಟರ್ ಪದ್ಧತಿಯ ಆಧಾರದಲ್ಲಿ ಮೆಡಿಕಲ್ ಕಾಲೇಜೊಂದರಲ್ಲಿ ಪ್ರಮೋಷನ್ ಪಡೆದು ಪ್ರೊಫೆಸರ್ ಮತ್ತು ವಿಭಾಗದ ಮುಖ್ಯಸ್ಥ(ಬಾಸ್)ನಾಗಿದ್ದುದು ಸವರ್ಣೀಯ ಸಹೋದ್ಯೋಗಿಗಳಿಗೆ ಅಸಹನೆಯನ್ನು ಉಂಟು ಮಾಡುತ್ತದೆ. ದಲಿತರಿಗೆ ಇರುವ ಮೀಸಲಾತಿ ಸೌಲಭ್ಯದ ಕುರಿತು ಸವರ್ಣೀಯರಲ್ಲಿ ಇರುವ ಅಸಹನೆ ಇಲ್ಲಿ ಪ್ರಕಟವಾಗಿದೆ. ಮೀಸಲಾತಿಯ ಚಾರಿತ್ರಿಕ ಅನಿವಾರ್ಯತೆಯನ್ನು ಅರ್ಥೈಸಿಕೊಳ್ಳದೆ ಕೆಲವೇ ವರ್ಷಗಳಲ್ಲಿ ಕ್ಷಿಪ್ರ ಬದಲಾವಣೆ ಬಯಸುವ ಮನಸ್ಸುಗಳ ವರ್ತನೆ ಇಂತಹ ಸಂಘರ್ಷವನ್ನು ಹುಟ್ಟುಹಾಕುತ್ತವೆ. ಒಳ್ಳೆಯ ಅಧಿಕಾರದಲ್ಲಿದ್ದರೂ ಇವನಿಗೆ (ಕತೆಯಲ್ಲಿ 'ಬಾಸ್' ಎಂದು ಕರೆಯಲ್ಪಡುವ ನಾಯಕ ವಾಸ್ತವಿಕವಾಗಿ ವ್ಯಂಗ್ಯಕ್ಕೆ ಒಳಗಾಗಿರುವುದು ಗಮನಾರ್ಹ) ನಗರ ಬದುಕಿನಲ್ಲಿ ಸದಾ ಕೀಳರಿಮೆ ಕಾಡುತ್ತದೆ. ಇವನ ಸಹಪಾಠಿ ಭಾಸ್ಕರ್ ಪ್ರತಿವರ್ಷ ಬಂಗಾರದ ಪದಕ ಗಳಿಸುತ್ತಾ ಓದಿ, ಇದೇ ಕಾಲೇಜಿನಲ್ಲಿ ಕೇವಲ ಲೆಕ್ಚರರ್ ಆಗಿರುವುದೂ ಒಂದು ಕಾರಣವಾಗಿ ಇವನನ್ನು ಕೀಳರಿಮೆಗೆ ತಳ್ಳಿದೆ. ಸಾಧಾರಣ ವಿದ್ಯಾರ್ಥಿಯಾಗಿದ್ದು, ಸಾಮಾಜಿಕ ನ್ಯಾಯ ಪಡೆದು ಸಮಾಜದಲ್ಲಿ ಉನ್ನತ ಅಧಿಕಾರ ಗಳಿಸಿದರೂ, ಸವರ್ಣೀಯರನ್ನು ಕಂಡರೆ ಅಪರಾಧಿ ಭಾವದಿಂದ ನೋಡುವ ಇವನ ವ್ಯಕ್ತಿತ್ವದ ಹಿಂದೆ ಸಾವಿರಾರು ವರ್ಷ ತುಳಿತಕ್ಕೊಳಪಟ್ಟ ನೋವಿರುವುದು ಸ್ಪಷ್ಟವಿದೆ. ಈ ನೋವು ನಿತ್ಯ ಬದುಕಿನ ಕ್ಲಿಷ್ಟ ಸಂದರ್ಭಗಳಲ್ಲಿ ವ್ಯಕ್ತವಾಗುವುದು. ಉಳಿದ ಸಹದ್ಯೋಗಿಗಳಿಂದ ಬಾಸ್ ದೂರದಲ್ಲಿರುವುದು ಸ್ವಕೀಳರಿಮೆ(ಸ್ವಕಲ್ಪಿತ)ಯ ಫಲ ಎಂಬುದನ್ನು ಅಧ್ಯಯನ ಗುರುತಿಸುತ್ತದೆ. ಹೊಟ್ಟೆನೋವಿನಿಂದ ಮಲಗಿದ ಒಂಬತ್ತು ವರ್ಷದ ತನ್ನ ಮಗನಿಗೆ ಬಾಸ್ ಚಿಕಿತ್ಸೆ ನೀಡಿದರೂ ಫಲಿಸದೆ, ಸಹೋದ್ಯೋಗಿ ಡಾ. ಭಾಸ್ಕರನನ್ನು ಸಹಾಯ ಕೋರಿದಾಗ,

> 'ತನ್ನ ಮಗನ ಹೊಟ್ಟೆ ನೋವಿಗೆ ಔಷಧಿ ಕೊಡೋಕೆ ಬಗ್ಗಿದ್ದೋನು ಪ್ರೊಫೆಸರ್, ಹೆಡ್ ಆಫ್ ದಿ ಡಿಪಾರ್ಟಮೆಂಟ್! ಎಲ್ಲಾ ಜಾತಿ ಮಹಿಮೆ.' ಭಾಸ್ಕರ ಮತ್ತು ಮಿತ್ರರು ನಕ್ಕು ಆಡಿಕೊಂಡಂತೆ ತೋರುತ್ತದೆ'[೫]

ಎಂಬ ಬಾಸ್‌ನ ಅನಿಸಿಕೆ, ವ್ಯಕ್ತಿ ಜೀವನದಲ್ಲಿ ಅವನ ಮಾನಸಿಕ ಸಂಘರ್ಷವನ್ನು ಸೂಚಿಸುವುದಾಗಿದೆ. ಚಿಕ್ಕ ವಯಸ್ಸಿನಲ್ಲಿ ಮೇಲ್ವರ್ಗಗಳಿಂದ ಶೋಷಣೆಗೆ ಒಳಪಟ್ಟ ಮನಸ್ಸುಗಳು ಮಾತ್ರ ಇಂತಹ ಕೀಳರಿಮೆಯ ಕಿಚ್ಚಿನಲ್ಲಿ ಬೇಯುವುದನ್ನು ಕಾಣುತ್ತೇವೆ. ಇದಕ್ಕೆ ತಕ್ಕಂತೆ ಸಮಾಜದ ಕುಹಕವೂ ಅವರನ್ನು ಅಧೈರ್ಯಗೊಳಿಸುತ್ತದೆ. ಡಾ. ಭಾಸ್ಕರ ಮೇಲ್ವರ್ಗವನ್ನು ಪ್ರತಿನಿಧಿಸುತ್ತಾ ಬಾಸ್‌ನ ಮಗನನ್ನು ಪರೀಕ್ಷಿಸಿ, ನಂತರ ಕಾಫಿಯ ಆಹ್ವಾನವನ್ನು ನಯವಾಗಿ ತಿರಸ್ಕರಿಸುತ್ತಾನೆ. ಒತ್ತಾಯ ಮಾಡಿ ಕೊಟ್ಟಾಗ ಕಾಫಿಯ ಲೋಟದ ಮೇಲಿನ ಗೆರೆಯನ್ನು ಕಂಡು ಮುಖ ಸಿಂಡರಿಸುತ್ತಾನೆ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಅಸ್ಪೃಶ್ಯತೆಯ ಬಹಿರಂಗ ಅನುಷ್ಠಾನ ಸಾಧ್ಯವಿಲ್ಲವಾಗಿದೆ. ಮಡಿ–ಮೈಲಿಗೆಯ ಕಲ್ಪನೆಯಿಂದ ಬಿಡಿಸಿಕೊಳ್ಳಲಾಗದ, ಸಮಾನತೆಯನ್ನು ಒಪ್ಪಿಕೊಳ್ಳಲಾಗದ ವೈದಿಕಶಾಹಿಯ ದ್ವಂದ್ವ ಹಾಗೂ ಮಾನಸಿಕ ಸಂಘರ್ಷಗಳು ಇಂತಹ ನಡತೆಯಲ್ಲಿ ವ್ಯಕ್ತವಾಗುತ್ತವೆ. ಕೆಳವರ್ಗದವರ ಮನೆಯಲ್ಲಿ ಮೇಲ್ವರ್ಗದವರು ಹೀಗೆ ನಡೆದುಕೊಂಡಾಗ ದಲಿತರ ಆತ್ಮಸ್ಥೈರ್ಯ ಕುಸಿದು ಹೋಗುವುದು ಸಹಜ. 'ನನ್ನ ಜಾತಿಯಿಂದ ಲಾಭ ಪಡೆದರೂ ಅದನ್ನು ಒಪ್ಪಿಕೊಳ್ಳಲಾರದ ಹೇಡಿ ಬೇರೆಯವರೆದುರು ನನ್ನ ಜಾತಿಯ ಪ್ರಸ್ತಾಪ ಬಂದರೆ ಮುದುಡಿ ಹೋಗುತ್ತಿದ್ದೆ. ಅದಕ್ಕಾಗಿ ಮನೆಗೆ ಯಾರನ್ನೂ ಕರೆತರುತ್ತಲೇ ಇರಲಿಲ್ಲ' ಎಂಬ ಕಥಾನಾಯಕನ ಸ್ವಗತ ಇದನ್ನು ಸಮರ್ಥಿಸುತ್ತದೆ. ವರ್ಣವ್ಯವಸ್ಥೆಯ ಇಂತಹ ಪರಿಸರದಲ್ಲಿ ಅನೇಕ ದಲಿತ ಕುಟುಂಬಗಳು ಹೋರಾಟ ಮಾಡಲಾರದೆ ಸೋತು ಕೀಳರಿಮೆಯಿಂದ ಬಳಲುವುದನ್ನು ಕಾಣುತ್ತೇವೆ.

ಸವರ್ಣೀಯರ ನಡವಳಿಕೆಗಳಿಂದ ವಿದ್ಯಾವಂತ ಅಸ್ಪೃಶ್ಯರ ಕೀಳರಿಮೆಯ ದ್ವಂದ್ವ ಗ್ರಾಮ/ನಗರ ಎರಡೂ ಕಡೆಗಳಲ್ಲಿ ಕಂಡುಬರುವ ಆತ್ಮಶೋಧನೆಯ ಅಂಶವಾಗಿದೆ. ನಗರದ ವ್ಯಕ್ತಿಗಳ ದ್ವಂದ್ವ ಗ್ರಾಮೀಣರ ದ್ವಂದ್ವಕ್ಕಿಂತ ಭಿನ್ನವಾಗಿದ್ದು ಈ ಸಂಘರ್ಷ ಅಕ್ಷರ/ನಾಗರಿಕ ಸಮಾಜದ ಅಂತರಂಗದಲ್ಲಿ ಅವಿತಿರುವ ಸ್ಫೋಟಕದಂತೆ ಕಾಣುತ್ತದೆ. ಆರ್.ವಿ. ಭಂಡಾರಿ ಅವರ 'ಬೆಂಕಿಯ ಮಧ್ಯೆ' ಕಾದಂಬರಿಯಲ್ಲಿನ ಮುನಿಯಪ್ಪ

ಮತ್ತು ಆತನ ಕುಟುಂಬ ದ್ವೀಪದಂತೆ ಬದುಕಬೇಕಾದ ಸ್ಥಿತಿ ಅಸ್ಪೃಶ್ಯತೆಯ ಇನ್ನೊಂದು ಆಯಾಮವನ್ನು ಹೇಳುತ್ತದೆ. ತ್ರಿಶಂಕು ಕತೆಯ ಭಾಸ್‌ರಂತೆ ಮುನಿಯಪ್ಪನು ತನ್ನ ಅಧಿಕಾರದಿಂದ ಒಂಟಿತನವನ್ನು ಅನುಭವಿಸುವಂತಾದರೆ, ಅವನ ಹೆಂಡತಿ ಆಶಾ ಮತ್ತು ಕುಟುಂಬ ನಗರ ಮಧ್ಯೆ ಏಕಾಂಗಿತನವನ್ನು ಅನುಭವಿಸುವಂತಾಗಿದೆ. ಅವಳಾಗಿಯೇ ಸ್ನೇಹವನ್ನು ಬಯಸಿ ದಾರಿಯಲ್ಲಿ ಬರುವಾಗ ಹೋಗುವಾಗ ಮುಗುಳ್ನಕ್ಕರೆ, ಸವರ್ಣೀಯರು ಬೇಕೋ ಬೇಡವೋ ಎಂಬಂತೆ ನಕ್ಕು ಒಳಸರಿಯುತ್ತಾರೆ. ಮನೆಯೊಳಗೆ ಬಂದಾಳು ಎಂಬ ಭ್ರಮೆಯಲ್ಲಿ, 'ಪೇಟೆಗಾ' ಎಂದು ಕೇಳಿ ಬಾಗಿಲು ಓರೆ ಮಾಡಿಕೊಳ್ಳುತ್ತಾರೆ. ಜಾತಿ ಕಾರಣಕ್ಕಾಗಿ ಮಹಿಳೆಯರು, ಮಕ್ಕಳು ಏಕಾಂಗಿತನವನ್ನು ಅನುಭವಿಸುವುದು ನಗರಗಳಲ್ಲಿ ಕಂಡುಬಂದರೆ, ಗ್ರಾಮದಲ್ಲಿ ಮಾತುಕತೆಗಳಿಲ್ಲದೆ ಸಾಗಹಾಕುವುದು ಕಂಡುಬರುತ್ತದೆ. ನಗರದ ವಿದ್ಯಾವಂತ ವರ್ಗದಲ್ಲೂ ಅಸ್ಪೃಶ್ಯತೆಯು ನಾಶವಾಗಿಲ್ಲ, ಅದು ಬೇರೆ ಸ್ವರೂಪದಲ್ಲಿ ಭದ್ರವಾಗಿ ನೆಲೆ ಊರಿರುವುದನ್ನು ಇವೆರಡೂ ಕಥನಗಳು ಸೂಚಿಸುತ್ತವೆ.

ಅಶೋಕ ಕುಲಕರ್ಣಿ ಅವರ 'ನಿರ್ಗತಿಕರು' ಕಾದಂಬರಿಯಲ್ಲಿ, ವರ್ಗ ಸಂಘರ್ಷದ ಆಂತರ್ಯದಲ್ಲಿ ವರ್ಣ ದೌರ್ಜನ್ಯದ ಸುಳಿವು ಅಡಗಿರುವುದನ್ನು ಕಾಣುತ್ತೇವೆ. ಇಲ್ಲಿ ಶೋಷಿತ, ಶೋಷಕ ವರ್ಗಗಳೆರಡೂ ದಲಿತ ಸಮುದಾಯಕ್ಕೆ ಸೇರಿದ್ದು, ಶೋಷಣೆಯು ವಿಶಿಷ್ಟ ಸಾಮಾಜಿಕ ಆಯಾಮವನ್ನು ಪಡೆದುಕೊಂಡಿದೆ. ಎಲ್ಲೋ ಹುಟ್ಟಿ, ಎಲ್ಲಿಂದಲೋ ಕೃತಪುರ(ಅತ್ತ ಗ್ರಾಮವೂ ಅಲ್ಲದ ಇತ್ತ ನಗರವೂ ಅಲ್ಲದ ಪಟ್ಟಣವೆಂಬುದು ನಿರೂಪಕರ ಮಾತು)ಕ್ಕೆ ಬಂದ ಸಿಕ್ಕಲಗೇರ ಜನಾಂಗದ ಕೋದ ಎಮ್ಮೆ ದೋಳಿಸುವ ಸಾಂಪ್ರದಾಯಿಕ ವೃತ್ತಿಯ ದಲಿತನಾಗಿದ್ದಾನೆ. ಗೌಳಿಗರ, ಗೌಡರ ಮನೆಮನೆಗೆ ಹೋಗಿ ಎಮ್ಮೆ ದೋಳಿಸಿ, ಒಂದು ಪಾವಲಿ ಇಲ್ಲವೆ ಒಂದೆಲೆ, ಹೋಳು ಅಡಿಕೆ, ಚಿಟಿಕೆ ತಂಬಾಕು, ಅಥವಾ ಹಳಸಿದ ರೊಟ್ಟಿ, ಅಂಬಲಿ ಸಂಭಾವನೆ ಪಡೆದು ಎಲುಬಿನ ಹಂದರವಾಗಿದ್ದವನದು ಕನಿಕರದ ಬಾಳು. ತನ್ನನ್ನು ಹೊಡೆದ ಗೌಳಿಗರ ಮಾರುತಿಯ ಹೊಟ್ಟೆಗೆ ಕುಡಿದ ಮತ್ತಿನಲ್ಲಿ ಒದ್ದು, 'ಸಿಕ್ಕಲಗೇರ ಕೋದುನ ಹೆಂಡತಿಯನ್ನು ಮಾರುತಿ ಬಸಿರು ಮಾಡಿದ್ದಕ್ಕೆ ಒದ್ದೆ' ಎಂದು ಪೋಲೀಸರಿಗೆ ಹೇಳಿ, ತಮ್ಮಿಬ್ಬರ ವೈಯಕ್ತಿಕ ಸಮಸ್ಯೆಯನ್ನು ಸಾರ್ವತ್ರಿಕಗೊಳಿಸಿ ಎರಡೂ ಜಾತಿಗಳಲ್ಲಿ ತಲ್ಲಣವನ್ನು ಉಂಟುಮಾಡುತ್ತಾನೆ. ಎಡನ್ ಸಾಹೇಬ, ದೌಲಸಾಬ, ನಾರಾಯಣರಾಯ, ಜಾಧವರಂಥ ಪಟ್ಟಭದ್ರ ಹಿತಾಸಕ್ತಿಗಳು ಸಂದರ್ಭದ ಲಾಭ ಪಡೆಯಲು ಕೆಳವರ್ಗದ ಸಾಣೆ ಇಮ್ಯಾ, ಸೋಂಬಳ್ಯಾ ಮುಂತಾದವರನ್ನು ಬಳಸಿಕೊಂಡು, ತಪ್ಪು ಮಾಡಿದ ಮಾರುತಿಗೆ ಶಿಕ್ಷೆಯಾಗದೆ, ಕೋದುವಿಗೆ ಜೈಲಾಗುವಂತೆ ನೋಡಿಕೊಳ್ಳುತ್ತವೆ. ಮೇವಿನ ಬಣವೆ ಸುಡುವ, ಬಸಿರಲ್ಲಿ ಇರುವ ಶಿಶುವನ್ನು ಹಣ ಕೊಟ್ಟು ಕೊಳ್ಳುವ ಘಟನೆಗಳು ನಗರದ ಅಮಾನವೀಯ ಕ್ರೌರ್ಯಕ್ಕೆ ಕನ್ನಡಿ ಹಿಡಿಯುತ್ತವೆ. "ನಿಮ್ಮದೆಲ್ಲಾ ಆತು. ನನ್ನ ಹೆಂಡತಿಯನ್ನ ಕೆಡಿಸಿದ್ದರ ಬಗ್ಗೆ ನಿಮಗೊಬ್ಬರಿಗ್ಯಾರ ಸಿಟ್ಟೈತಿ? ಇಲ್ಲಾ ನೀವು ನಿಮ್ಮದು ಆಟ ಗೊತ್ತು. ನಿಮಗು ನಮ್ಮ ಸುಖಾ ನೋಡವರ ಗೊತ್ತಿಲ್ಲ"[೨೦] ಎಂದು ನುಡಿಯುವ ಕೋದುವಿನ ಮಾತುಗಳು ಇಡೀ ಸಿಕ್ಕಲಗೇರ ಜನಾಂಗದ ಒಡಲಾಳದ ಉರಿಯಾಗಿ ಹೊಮ್ಮಿವೆ. ಪರಿಶಿಷ್ಟ ವರ್ಗದ ಗೌಳಿಗರ ಮಾರುತಿಗೆ ಸಿಕ್ಕಲಗೇರ ಕೋದು ಅಸ್ಪೃಶ್ಯನಾಗಿ ಕಾಣುವುದು ವ್ಯವಸ್ಥೆಯ ಕ್ರೂರ ವ್ಯಂಗ್ಯವಾಗಿದೆ. ಮೇಲಿನ ಕಥನ ಸಂದರ್ಭಗಳು, ಅಕ್ಷರಲೋಕಕ್ಕೆ ತಮ್ಮನ್ನು ತೆರೆದುಕೊಂಡು ನಗರ ಪ್ರವೇಶಿಸಿದ ದಲಿತ ಯುವಕರ ಸಾಮಾಜಿಕ ಸಂಘರ್ಷವನ್ನು ಹಾಗೂ ಸಂಪ್ರದಾಯದ ರೋಗಗ್ರಸ್ತ ಮನಸ್ಸುಗಳಿಗೆ ಚಿಕಿತ್ಸೆಯ ಅವಶ್ಯಕತೆಯನ್ನು ಒತ್ತಿ ಹೇಳುತ್ತವೆ.

### ಬ. ವರ್ಗ ವ್ಯವಸ್ಥೆ ಮತ್ತು ಸಂಘರ್ಷ

ಗ್ರಾಮ/ನಗರ (ಮೂಲ ನೆಲೆ) ನಿರಾಕರಿಸಿ ಹೊಸ ನೆಲೆಯಲ್ಲಿ ಬದುಕನ್ನು ಕಟ್ಟಿಕೊಳ್ಳಲು ಪ್ರಯತ್ನಿಸುವ ವ್ಯಕ್ತಿಗಳಿಗೆ ಆರ್ಥಿಕ ಸಂಘರ್ಷ ಅನಿವಾರ್ಯ ಹೋರಾಟವಾಗಿದೆ. ಉಟ್ಟ ಬಟ್ಟೆಯ ಮೇಲೆ ಹೊರಬಂದ ಅನೇಕ ವ್ಯಕ್ತಿಗಳು ತಮ್ಮ ದಿನದ ಗಂಜಿಯಿಂದ ಆರಂಭಿಸಿ ಮೂಲಸೌಕರ್ಯಕ್ಕೆ ಸಂಘರ್ಷಕ್ಕಿಳಿದ ಉದಾಹರಣೆಗಳು ಸಾಹಿತ್ಯದಲ್ಲಿ ದೊರಕುತ್ತವೆ. ಈಗಾಗಲೆ ಗ್ರಾಮ/ನಗರಗಳಲ್ಲಿ ಭದ್ರವಾಗಿ ನೆಲೆ ನಿಂತ ವ್ಯವಸ್ಥೆ(ಮೇಲ್ವರ್ಗದ ವ್ಯಕ್ತಿ, ಕುಟುಂಬಗಳು)ಯ ಅಸಹಕಾರ, ಪ್ರತಿರೋಧ ಇಂತಹ ಸಂಘರ್ಷಕ್ಕೆ ಕಾರಣವಾಗುತ್ತದೆ. ಬಸವರಾಜ ಸಾದರ ಅವರ 'ಬಿಕ್ರ' ಕತೆಯ ಬಿಕ್ರನು ಪಟ್ಟಣವೊಂದರಲ್ಲಿ ಹೆಣ ಸುಡುವ ಕೆಲಸಕ್ಕೆ ಸೇರಿಕೊಂಡಾಗ ಅವನ ಪ್ರತಿಕ್ರಿಯೆ ಈ ರೀತಿ ಇದೆ.

'ಹರಿಶ್ಚಂದ್ರ ಮಾರಾಜಾನೇ ಹೆಣಾ ಸುಡೂ ಕೆಲ್ಸ ಮಾಡಲಿಲ್ಲೇನು..? ನನ್ನ ಸುಡುಗಾಡಿನಂತ ಜೀವಕ್ಕ ಇನ್ನೆಂತಾ ಗನಂದಾರಿ ಕೆಲ್ಸ ಸಿಕ್ಕೀತು'[೩೧]

ಎಂದು ತನ್ನ ಮೋಸಹೋದ ಸ್ಥಿತಿಯನ್ನು ಸ್ವ-ನಿವೇದನೆ ಮಾಡಿಕೊಳ್ಳುವ ಬಿಕ್ರ ತುಳಿತಕ್ಕೊಳಗಾದ ಕೆಳವರ್ಗದ ಪ್ರತಿನಿಧಿಯಾಗುತ್ತಾನೆ. ಸುಡುಗಾಡು ಕಟ್ಟಿಸಿದ ಸಾವುಕಾರ ಸಣ್ಣಪ್ಪ ಕ್ರಮೇಣ ಬಿಕ್ರನ ಆದಾಯದ ಮೇಲೆ ಬಂಡವಾಳಶಾಹಿ ಹಿಡಿತ ಬಿಗಿಗೊಳಿಸಿದ್ದನ್ನು ಅಧ್ಯಯನ ಗುರುತಿಸುತ್ತದೆ. ಮೊದಲು ಸುಡಲು ಹೆಣಗಳು ಹೆಚ್ಚು ಬರಲಾರವೆಂದು ಊಹಿಸಿದ್ದ ಸಣ್ಣಪ್ಪ 'ಹೆಣದೆಲೆಗೂಲಿ'ಯನ್ನು ಕೂಲಿಯಾಗಿ ಕೊಡಲು ಹಾಗೂ ಕರ್ಮಾಚರಣೆಗಾಗಿ ಬರುವ ಬೂದಿ ಭಕ್ಷೀಸನ್ನು ತನಗೆ ಒಪ್ಪಿಸುವ ಕರಾರಿನೊಂದಿಗೆ ಬಿಕ್ರನನ್ನು ನೇಮಿಸಿಕೊಳ್ಳುತ್ತಾನೆ. ಹೆಣಗಳ ಸಂಖ್ಯೆ ಹೆಚ್ಚಾದಾಗ ಬಿಕ್ರನಿಗೆ ತಿಂಗಳಿಗೆ ಒಂಬೈನೂರು ರೂಪಾಯಿಯವರೆಗೆ ಗಳಿಕೆಯಾಗುತ್ತದೆ. ಇದನ್ನರಿತ ಬಂಡವಾಳಶಾಹಿ ಲಾಭಕೋರಬುದ್ಧಿ ತಿಂಗಳಿಗೆ ಮೂರು ನೂರು ರೂಪಾಯಿ ಸಂಬಳ (Fixed payment) ಕೊಡಲು ಬಿಕ್ರನನ್ನು ಹೆದರಿಸಿ ಒಪ್ಪಿಸುತ್ತದೆ. ಅಸಹಾಯಕ ಬಿಕ್ರನ ಆರ್ಥಿಕ ಸ್ಥಿತಿ ಇದನ್ನು ಒಪ್ಪುವಂತೆ ಮಾಡುವುದು ಊಳಿಗಮಾನ್ಯ ವ್ಯವಸ್ಥೆಯ ಬಿಗಿ ಹಿಡಿತವಾಗಿದೆ. ನಂತರ ಹೆಣಗಳ ಸಂಖ್ಯೆ ತೀರಾ ಕಡಿಮೆಯಾದಾಗ, ಕಣ್ಣು ಕೆಂಪಾಗಿಸಿಕೊಂಡ ಸಣ್ಣಪ್ಪ ಪುನಃ ಹೆಣದೆಲೆಗೂಲಿ ಕೊಡಲು ತೀರ್ಮಾನಿಸುತ್ತಾನೆ. ಪ್ರತಿಯೊಂದು ತೀರ್ಮಾನದಲ್ಲಿಯೂ ಮಾಲೀಕನ ನಿರ್ಣಯವು ಅಂತಿಮವಾಗಿದ್ದು, ಶ್ರಮಜೀವಿಗೆ ಇಲ್ಲಿ ಆಯ್ಕೆಯ ಸ್ವಾತಂತ್ರ್ಯವಿಲ್ಲ. ವಾರದಲ್ಲಿ ಐದರಿಂದ ಹತ್ತು ರೂಪಾಯಿ ಮಾತ್ರ ಆದಾಯ ಬರುತ್ತಿದ್ದ ಬಿಕ್ರನ ಆರ್ಥಿಕ ಸ್ಥಿತಿ, ಆರೋಗ್ಯಗಳು ಹದಗೆಡುತ್ತವೆ. ಊಳಿಗಮಾನ್ಯ ವ್ಯವಸ್ಥೆಯ ಆಕ್ಟೋಪಸ್ ಹಿಡಿತದಲ್ಲಿ ಅವನು ಬಂಧಿಯಾಗುತ್ತಾನೆ. ಹೊಗೆ, ಬೂದಿಗಳಿಂದ ಅಂಟಿಕೊಂಡ ಕ್ಷಯ, ಅಸ್ತಮದಂತಹ ರೋಗಗಳೊಂದಿಗೆ ಹಸಿವೂ ಸೇರಿಕೊಂಡು ಅವನು ಎಲುಬಿನ ಹಂದರವಾಗುತ್ತಾನೆ. ದುಡಿತದಿಂದ ಬರುವ ಬಹುತೇಕ ಆದಾಯ ಬಂಡವಾಳಶಾಹಿಯ ಪಾಲಾಗಿ, ಅದನ್ನು ಕೇಳಲು ಶ್ರಮಿಕ ವರ್ಗಕ್ಕೆ ಧ್ವನಿಯಿಲ್ಲದಿರುವುದು, ಶ್ರಮಜೀವಿ ಹಸಿವನ್ನೇ ಉಂಡು ಹಸಿವನ್ನೇ ಹೊದ್ದು ಸಾಯುವುದು ವರ್ಗ ವ್ಯವಸ್ಥೆಯ ಪರಿಣಾಮವಾಗಿದೆ. ಅಸಂಘಟಿತ ಶ್ರಮಿಕ ವರ್ಗಕ್ಕೆ ದುಡಿಮೆಗೆ ತಕ್ಕ ಪ್ರತಿಫಲವಿಲ್ಲದೆ, ಅವರ ದುಡಿಮೆಯ ಅಪಮೌಲ್ಯ ನಿರಂತರವಾಗಿ ನಡೆಯುತ್ತದೆ.

ಗ್ರಾಮ ನಗರಗಳ ಆರ್ಥಿಕ ವ್ಯವಸ್ಥೆಯ ಆಂತರಿಕ ಸ್ವರೂಪದಲ್ಲಿ ವ್ಯತ್ಯಾಸವನ್ನು ಕಾಣುತ್ತೇವೆ. ಹಣ ಗಳಿಸುವ ಮತ್ತು ಅದನ್ನು ಬಳಸುವ ರೀತಿಯಲ್ಲೂ ವಿಭಿನ್ನತೆಯಿರುವುದು ಸ್ಪಷ್ಟ ಗೋಚರವಾಗುತ್ತದೆ. ಕೃಷಿ, ಕೃಷಿಕೂಲಿ ಪ್ರಧಾನವಾಗಿರುವ ಗ್ರಾಮಗಳಿಂದ ನಗರ ಪ್ರದೇಶಕ್ಕೆ ಬಂದ ಪಾತ್ರಗಳು ಅಲ್ಲಿನ ಆರ್ಥಿಕ ವ್ಯವಸ್ಥೆಗೆ ಹೊಂದಿಕೊಳ್ಳಲು ಪರದಾಡಿ ಸಂಘರ್ಷಕ್ಕೆ ಇಳಿಯಬೇಕಾಗಿ ಬಂದ ಸಂದರ್ಭಗಳನ್ನು ಕಥನ ಸಾಹಿತ್ಯದಲ್ಲಿ ಕಾಣಬಹುದು. ಸರಸ್ವತಿಬಾಯಿ ರಾಜವಾಡೆ ಅವರ 'ಪ್ರಪಂಚ' ಕತೆಯ ತೋಮನ ಸಂಸಾರದ ನಗರ ಸಂಘರ್ಷವೂ ಇದೇ ನೆಲೆಯಲ್ಲಿ ಹುಟ್ಟಿಕೊಂಡುದುದಾಗಿದೆ. ಭೂ ಒಡೆಯರ ದೌರ್ಜನ್ಯವನ್ನು ವಿರೋಧಿಸಿ, ಗೇಣಿ ಮತ್ತು ಬಿಟ್ಟ ಸೇವೆಗಳನ್ನು ದಿಟ್ಟುಕೊಟ್ಟು, ಗ್ರಾಮ ನಿರಾಕರಣೆಯೊಂದಿಗೆ ಸ್ವತಂತ್ರಗೊಂಡು ಪಟ್ಟಣಾ ಸೇರಿದ ತೋಮನ ಸಂಸಾರ ಕೊಳೆಗೇರಿಯಲ್ಲಿ ವಾಸಮಾಡುತ್ತದೆ. 'ಧನಿಗ್ಳು! ನಾವು ಗುಲಾಮ್ರು, ಛೀ ಬೇಡಿ ತಿಂದ್ರೂ ಗಾಬ್ರಿ ಇಲ್ಲ ಈ ಒಕ್ಲುತನ ದೇಡಪ್ಪಾ. ಬೆವ್ರಿಳ್ಸಿ ಮಾಡಿದ್ದು ಸಸಂತ್ರವಾಗಿ ತಿನ್ಲಿಕ್ಕಿಲ್ಲ. ಹಬ್ಬಾಯಲ್ಲಾಂತ ಹಾಯಾಗಿರ್ಲಿಕ್ಕಿಲ್ಲ. ಅಯ್ಯೋ ನಮ್ಮಾಳ್ವೆಯೆ!' ಎಂದು ಗ್ರಾಮದ ಬದುಕನ್ನು ಜರಿದು ನಗರ ಸೇರಿದ ತೋಮನದು ಊಳಿಗಮಾನ್ಯ ವ್ಯವಸ್ಥೆಗೆ ನೀಡಿದ ದಿಟ್ಟ ಪ್ರತಿಭಟನೆಯಾಗಿದೆ. 'ನೀನು ಹೀಗೆಯೆ ಇರಬೇಕು' ಎಂಬ ಸಂಪ್ರದಾಯವಾದಿ ವಾದಗಳನ್ನು ಪ್ರತಿಭಟಿಸಿ ಬಂದ ತೋಮನಿಗೆ ನಗರದ ಬೀದಿಗಳಲ್ಲಿ ಕೆಲಸ ಸಿಕ್ಕುವುದಿಲ್ಲ. ಭಿಕ್ಷೆ ಬೇಡಿದರೆ ಕಳ್ಳನೆಂಬ ಪಟ್ಟ, ಬಡವರ ಭಾಗ್ಯ ಪತ್ರಿಕೆಯಲ್ಲಿ (ಪತ್ರಿಕೆಯ ಹೆಸರು ಕತೆಯಲ್ಲಿ ವಿಡಂಬನೆಗೊಳಗಾಗಿದೆ) ಚಾಕರಿಯಿಲ್ಲವೆಂದು ಹೊರಗೆ ತಳ್ಳಲ್ಪಡುತ್ತಾನೆ. 'ಹಳ್ಳಿಗರೆಲ್ಲ ಬಂದು ಪಟ್ಟಣಾ ಕೊಳೆಯಾಗುತ್ತಿವೆಯೆಂಬ ನಗರವಾಸಿಗಳ ಬೈಗಳು ಕೇಳಿ, 'ನಾನು ತಪ್ಪು ತಿಳಿದೆ. ಇದು ಸೊರ್ಗವಲ್ಲ, ಬೆಡಗಿನ ನರಕ! ನಮ್ಮಳ್ಳೀಲಿ ಎಲ್ಲಿ ಉಳಿದ್ರೂ ಓಡ್ಸೋರಿಲ್ಲಿಲ್ಲ. ಇಲ್ನೋಡಿ ನಮ್ಮನ್ನು ನೋಡಿದ್ದೂಕ್ಡ್ಲೆ ಏನೋ ಹೊಲಸು ಕಂಡ ಹಾಗೆ ಮಾಡ್ತಾರಲ್ಲ ಎಲ್ರೂ!'[೩೨] ತೋಮನ ಈ ಮಾತುಗಳಲ್ಲಿ ಗ್ರಾಮ ನಗರಗಳ ಶೋಷಣೆಯ ರೀತಿಗಳು ಬೇರೆಬೇರೆಯಾದ ಆಯಾಮಗಳಲ್ಲಿವೆ ಎಂಬುದು ಸ್ಪಷ್ಟವಾಗುತ್ತದೆ. ತೋಮ ನಗರದ ಸ್ಥಿತಿಗತಿಗಳಿಗೆ ಹೊಂದಿಕೊಳ್ಳಲಾರದೆ ಹೋಗುವ ಕತೆಯ ನಿಲುವು ಗ್ರಾಮಗಳನ್ನು ವೈಭವೀಕರಿಸುವ ಉದ್ದೇಶ ಹೊಂದಿದೆಯೆನ್ನಬಹುದು. ಗ್ರಾಮಗಳಲ್ಲಿನ ಸಾಂಪ್ರದಾಯಿಕ ದುಡಿಮೆ, ಜೀವನ,

ಜಾತಿಯಾಧಾರಿತ ಶೋಷಣೆಯಂತಹ ಸಂಗತಿಗಳು ನಗರ ವಿದ್ಯಮಾನಗಳಿಗಿಂತ ವಾಸಿ ಎಂಬ ತೀರ್ಮಾನ ಕಥೆಗಾರರ ಪೂರ್ವೋದ್ದೇಶಿತ ನಿಲುವು ಆಗಿರಬಹುದು ಎಂಬ ಸಂಶಯ ಬರುತ್ತದೆ. ನಗರ ಬದುಕು ಸಂಘರ್ಷದಿಂದ ಕೂಡಿದೆ ನಿಜ. ಆದರೆ ಗ್ರಾಮೀಣ ಬದುಕು ತಾನಾಗಿ ಸಿಗುವ ಸ್ವರ್ಗವಲ್ಲ. ನಗರಕ್ಕಿಂತ ಗ್ರಾಮ ಮೇಲು ಎಂಬ ಪೊಳ್ಳು ಭ್ರಮೆಯಲ್ಲಿ 'ಸೋತು ಹಳ್ಳಿ ಸೇರು' ಎಂಬ ನಿಲುವಿಗೆ ಬರುವುದು, ಹಿರಿಯ ತಲೆಮಾರಿನ (ಲೇಖಕರನ್ನೂ ಸೇರಿಸಿ) ಗೊಂದಲ, ಆಲೋಚನೆಗಳ ಮಿತಿಯಾಗಿದೆ. ನಗರ ಕುರಿತ ನೇತ್ಯಾತ್ಮಕ ಧೋರಣೆಗಳು ಇದರ ಹಿಂದೆ ಕಾರ್ಯವೆಸಗಿವೆ ಎಂಬ ನಿಲುವು ಅಧ್ಯಯನದ್ದಾಗಿದೆ.

ಗ್ರಾಮದಲ್ಲಿ ಸ್ವೇಚ್ಛಾಚಾರಿಯಾಗಿದ್ದ ವ್ಯಕ್ತಿಯೊಬ್ಬ ನಗರ ಸೇರಿ ಇಡೀ ಭೂಗತ ಜಗತ್ತನ್ನೇ ಕೈವಶ ಮಾಡಿಕೊಂಡ ವ್ಯಾಸರಾವ್ ನಿಂಜೂರ ಅವರ 'ಮಂಚ' ಕತೆಯ ಸಂದರ್ಭವನ್ನು ಇಲ್ಲಿ ವಿಶ್ಲೇಷಿಸೋಣ. ಕರಾವಳಿಯ ಪಂಜಿಗುತ್ತು(ಗ್ರಾಮ)ನಿಂದ ಮುಂಬಯಿ(ನಗರ)ಗೆ ಓಡಿ ಬಂದ ಗುರ್ಕಾರ ದಾಸಣ್ಣ ಹೆಗ್ಡೆ ಭೂಗತ ಲೋಕ ಸೇರಿ ಹೆಗ್ಡೆಶೇಟ್ ನಾಮದಿಂದ ರಂಗಕ್ಕಿಳಿಯುತ್ತಾನೆ. ಹೊಸದರಲ್ಲಿ ತನ್ನ ಹಳ್ಳಿಯ ಕ್ಲಾಸ್‌ಮೇಟ್ ಬಾಬಿಸೋಜನ ಗ್ಯಾರೇಜ್ ಪಕ್ಕದಲ್ಲಿ ಪಾನಶಾಪ್ ಹಾಕಿಕೊಂಡು ಅಲ್ಲಿಗೆ ಬಂದ ಖದೀಮರೊಂದಿಗೆ ಆರಂಭಗೊಂಡ ಬ್ರೌನ್ ಶುಗರ್, ವಿದೇಶಿ ಮದ್ಯಗಳ ಕಳ್ಳ ವ್ಯಾಪಾರ, ಸುಪಾರಿ ಕೊಲೆ, ದರೋಡೆಗಳು, ಹೋಟೆಲಿಟ್ಟು ಬಾರ್ ಆರಂಭಿಸುವುದು ನಡೆಯುತ್ತವೆ. ಇವನಿಗೆ ಹಣ ಗಳಿಸುವ ಸುಲಭದ ದಾರಿ ತೋರಿಸಿದ್ದು ಒಬ್ಬಳು ಹೆಣ್ಣು, ಅಪ್ಪರ್‌ಗ್ರೇಡ್ ವೇಶ್ಯಾವಾಟಿಕೆ ನಡೆಸುತ್ತಿದ್ದ ಘರವಾಲಿ ಜಾನಕಿ.

> ಹೆಗ್ಡೆ ನೀನು ಎಂತೆಂಥಾ ದಂದೆ ಎಲ್ಲಾ ಮಾಡುತ್ತಿ. ಆದರೆ ಸ್ವಲ್ಪ ಅಕಲು ಉಪಯೋಗಿಸಬಾರದಾ? ನಮ್ಮತ್ರ ಕಡೆಯೆಲ್ಲಾ ಎಷ್ಟು ಚಂದ ಚಂದದ ಹೆಣ್ಣುಗಳುಂಟು! ಒಂದ್ನಾಲ್ಕು ಈಚೆಗೆ ಕರೆಸಬಾರದಾ? ಈ ವೈವಾಟಿನಲ್ಲಿ ಸಿಗುವ ಹಣದ ಎದುರಿಗೆ ನಿನ್ನ ಹೋಟಲಿನಲ್ಲಿ ಸಿಗುವುದೆಂತ ನಿನ್ನಬ್ಬೆಯ...?"[೩೩]

ಮುಂಬಯಿಯಂತಹ ಮಹಾನಗರದ ಆರ್ಥಿಕ ವ್ಯವಸ್ಥೆಯ ಹಲವು ಹತ್ತು ಕಪ್ಪು ಮುಖಗಳ ಅನಾವರಣ ಮಾಡುವ ಕಥೆ, ದಾಸಣ್ಣ ಹೆಗಡೆಯಂತಹ ವಲಸಿಗರ ಸಂಘರ್ಷ, ಹೋರಾಟ, ಎದುರಿಸುವ ಸವಾಲುಗಳು, ಅನುಭವಿಸುವ ಸಂಕಟಗಳು, ಸುಖಗಳ ವಿವರ ಕೊಡುತ್ತ ಮನುಷ್ಯ ಸ್ವಭಾವದ ವೈರುಧ್ಯಗಳತ್ತ ಗಮನ ಸೆಳೆಯುತ್ತದೆ. ಗ್ರಾಮೀಣ ಜೀವನದಲ್ಲಿ ಸದ್ಗೃಹಸ್ಥರಾದವರು ನಗರವನ್ನು ಆಶ್ರಯಿಸಿದೊಡನೆ ಕಾನೂನುಬಾಹಿರ ಚಟುವಟಿಕೆಗಳಲ್ಲಿ ತೊಡಗಿ ರೌಡಿಯಾಗಬಹುದು. ಗ್ರಾಮಗಳಲ್ಲಿ ಉಂಡಲೆಯುವ ವ್ಯಕ್ತಿಗಳು ನಗರ ಸೇರಿದೊಡನೆ ವೃತ್ತಿನಿಷ್ಠರಾಗಿ (ಭೂಗತ ಲೋಕದ ದಂದೆಯೂ ಸಹ ವೃತ್ತಿನಿಷ್ಠೆಯಿಂದ ವೃದ್ಧಿಯಾಗುವುದೆ ಆಗಿದೆ?) ಬದುಕಬಹುದು. ದಾಸಣ್ಣ ಹೆಗಡೆ (ಇವನಂಥವರು) ಸಮಾಜ ವಿರೋಧಿ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವ ಹಿನ್ನೆಲೆಯಲ್ಲಿ ಅದಕ್ಕೆ ಕಾರಣವಾಗುವ ಅಂಶಗಳನ್ನು ಹೀಗೆ ಗುರುತಿಸುತ್ತೇವೆ. ಮಾರ್ಗದರ್ಶನವಿಲ್ಲದ ಗ್ರಾಮೀಣ ಕೌಟುಂಬಿಕ ಬದುಕು, ಸ್ವೇಚ್ಛಾಚಾರಿ ಮಾವನ ಜೀವನ ಶೈಲಿ, ಆರ್ಥಿಕ ಮುಗ್ಗಟ್ಟು, ಸಾಮಾಜಿಕ ಅವಮಾನ, ಭೂಸುಧಾರಣೆ ಕಾನೂನಿನ ಹೆಸರಿನಲ್ಲಿ ಗೇಣಿ ಜಮೀನುಗಳನ್ನು ವಶಪಡಿಸಿಕೊಂಡ ಸರಕಾರದ ನಿರ್ದಾಕ್ಷಿಣ್ಯ ಕಾನೂನು ಕ್ರಮಗಳು ದಾಸಣ್ಣ ಸಮಾಜವಿರೋಧಿಯಾಗಿ ಬೆಳೆಯಲು ಕಾರಣಗಳಾಗಿವೆ. ಆದರೂ, ನಗರ ಬದುಕಿನಲ್ಲಿ ಇಂತಹ ದಂದೆಗಿಳಿದು ತಕ್ಷಣ ಹಣ ಮಾಡುವ ಹೆಗ್ಡೆಯಂತವರ ಜೀವನ ಬಹಳಷ್ಟು ಶ್ರಮದ್ದು, ಅತಂತ್ರದ್ದು ಎಂದು ಅಧ್ಯಯನ ಗುರುತಿಸುತ್ತದೆ. ಗ್ರಾಮಗಳಲ್ಲಿ ನಡೆದ ಒಂದು ಹೆಣ್ಣಿನ ಬಲಾತ್ಕಾರ, ಜಗಳದಂತಹ ವಿಷಯದಿಂದ ಎರಡು ಸಂಸಾರಗಳು ಪೂರ್ಣ ನಾಶವಾಗುವುದು, ಪಸ್ಕುನಾಯ್ಕ ಚೀಂಕ್ರ ಹಾಗೂ ಯಶೋದೆಯರನ್ನು ಮರುಳು ಮಾಡಿ ಮುಂಬಯಿಗೆ ಹಲವು ಹೆಣ್ಣುಗಳ ಜೊತೆ ಕರೆದೊಯ್ಯುವುದು ಇಂದಿಗೂ ಸಂಭವಿಸುವ ಘಟನೆಗಳಾಗಿವೆ.

ಆರ್. ವಿ. ಭಂಡಾರಿ ಅವರ 'ತಲೆಮಾರು' ಕಾದಂಬರಿಯ ವೀರೇಶ ಬಂಡವಾಳಶಾಹಿಗಳ ಹಿಡಿತಕ್ಕೆ ಸಿಕ್ಕ ವಿದ್ಯಾವಂತ ತರುಣನಾಗಿದ್ದಾನೆ. ಇವನು ಜಾತಿಯಾಧಾರಿತ ಶೋಷಣೆಯನ್ನು ವಿರೋಧಿಸಿ, ನಗರ ಆಯ್ಕೆ ಮಾಡಿಕೊಂಡು ಪತ್ರಿಕಾರಂಗ ಸೇರುತ್ತಾನೆ. ಪತ್ರಿಕೆಯ ಒಡೆಯ ಮಿ. ರಾವ್ ಅವರು ಹಣದ ವ್ಯವಹಾರದಲ್ಲಿ ಅಷ್ಟೊಂದು ದಕ್ಷರಾಗಿರದೆ ಪತ್ರಿಕೆಯನ್ನು ರಾಜಕೀಯ ಪಕ್ಷವೊಂದರ ಮುಖಂಡ (ಬಂಡವಳಶಾಹಿ)ನೊಬ್ಬನಿಗೆ ಮಾರಿದಾಗ, ವೀರೇಶನಂತಹ ತತ್ವಬದ್ಧ ವರದಿಗಾರರು ಅತಂತ್ರರಾಗುತ್ತಾರೆ.

ಈ ಸಂದರ್ಭದಲ್ಲಿ ಭ್ರಷ್ಟತೆಯಿಂದ ಕೂಡಿದ ಆರ್ಥಿಕ ಬಲವು ತತ್ವ, ಸಿದ್ಧಾಂತಗಳನ್ನು ನುಂಗಿಹಾಕುವುದು, ಉತ್ಸಾಹಿ ತರುಣರು ವ್ಯವಸ್ಥೆಗೆ ಸೋತು ರಾಜಿಮಾಡಿಕೊಳ್ಳುವುದನ್ನು ಕಾಣುತ್ತೇವೆ. ಬೋಳೆಗೆರೆಯಲ್ಲಿ ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸಿ ತೋರಿಸಿದ ವೀರೇಶ ನಗರದಲ್ಲಿ ಅದೇ ಗಟ್ಟಿತನವನ್ನು ಏಕೆ ತೋರಿಸುವುದಿಲ್ಲ ಎಂಬ ಪ್ರಶ್ನೆ ಎದುರಾಗುತ್ತದೆ. ಗ್ರಾಮದ ಸ್ವಾವಲಂಬನೆ, ಮನೋನಿರ್ಧಾರ, ಪ್ರತಿಭಟನೆಯ ಸೊಲ್ಲುಗಳು ನಗರದಲ್ಲಿ ಕಳೆದುಹೋಗುತ್ತವೆಯೆ ಎಂಬ ಪ್ರಶ್ನೆಗೆ ಧನಾತ್ಮಕ ಉತ್ತರ ಸಾಹಿತ್ಯದಲ್ಲಿಲ್ಲ. ಯಾಕೆಂದರೆ ಜಯಂತ ಕಾಯ್ಕಿಣಿ ಅವರ 'ಇದ್ದಾಗ ಇದ್ದಾಂಗ' ಕತೆಯ ಪಬ್ಲೂ (ಪ್ರಭಾಕರ ದಂಡೂ ಹರಿಕಾಂತ) ನಗರ ಸೇರಿಯೆ ಪ್ರತಿಭಟಿಸುವ ಗುಣವನ್ನು ಕಲಿತುಕೊಂಡವನು. ಹಾಗಾದರೆ ವೀರೇಶ ದ್ವಂದ್ವದಲ್ಲಿ ಸಿಲುಕಿ ಏಕೆ ಅತಂತ್ರನಾದ ಎಂಬ ಪ್ರಶ್ನೆ ಹಾಗೆಯೆ ಉಳಿಯುತ್ತದೆ. ಅದಲ್ಲದೆ, ಬೋಳೆಗೆರೆ(ಗ್ರಾಮ)ಯಲ್ಲಿಯೇ ಇದ್ದು ನಾಗವೇಣಿಯನ್ನು (ಇವಳು ಬ್ರಾಹ್ಮಣ ಹುಡುಗಿ) ಮದುವೆಯಾಗಿ ಉಚ್ಚ ಕುಲದವರಿಗೆ ವರ್ಣಸಂಕರ ಕುರಿತು ಪಾಠ ಕಲಿಸಬೇಕಾಗಿದ್ದ ವೀರೇಶ, ಪಲಾಯನವಾದಿಯಾಗಿ ನಗರ ಸೇರುತ್ತಾನೆ. ನಂತರ ಬೇರೆ ಜಾತಿಯ ಹುಡುಗಿಯನ್ನು ಮದುವೆಯಾಗಿ ಕೇವಲ ಅಂತರ್ಜಾತಿ ವಿವಾಹಿತನಾಗುವುದು ಅವನ/ಸಮಾಜದ ದೌರ್ಬಲ್ಯವೋ ಏನೋ ಅಥವಾ ಇವನ ಪ್ರಗತಿಪರ ವಿಚಾರಗಳ ಅನುಷ್ಠಾನಕ್ಕೆ ಹಳ್ಳಿಗಿಂತ ನಗರ ಯೋಗ್ಯವೆಂಬ ಭಾವನೆ ಅವನಿಗಿರಬಹುದೆ ಎಂಬುದು ದ್ವಂದ್ವಾತ್ಮಕ ವಿಚಾರವಾಗಿದೆ. ಇಲ್ಲಿಯೂ ವೀರೇಶ ಅಂದುಕೊಂಡಿದ್ದನ್ನು ಸಾಧಿಸುವುದಿಲ್ಲ. ಆದರೆ, ಮಗನ ಮದುವೆಯ ವಿಷಯ ತಿಳಿದ ತಂದೆ ಗಂಮು ಸಾಮಾನ್ಯ ಹಳ್ಳಿಯ ಗಟ್ಟಿ ಅಪ್ಪನ ಹಾಗೆ ಹಾರಾಡುವುದು ಸಂಪ್ರದಾಯದ ಕೊನೆಯ ಕೊಂಡಿಯ ಸೂಚನೆಯಾಗುತ್ತದೆ.

> 'ಎಲ್ಲಾ ಬೋಳೀಮಗನೆ? ಇಷ್ಟಕ ಬಂದ್ಯಾ. ನನ್ನ ಮನೆ ಮಂತಾನದ ಮರ್ಯಾದಿ ತೆಗೆದಲ್ಲೋ. ಇನ್ನು, ನಾನು ತಂಗಿಯಂದಿರು ಅವರ ಗಂಡಂದಿರ ಮದ್ಯೆ ಹೇಗೆ ತಲೆ ಎತ್ತಿ ತಿರುಗಲಿ. ಜಾತಿಯವರಿಗೆ ಏನನ್ನಲಿ? ಇಂದಿಗೆ ರುಣ ತೀರಿತು. ಮಗ ಹುಟ್ಟಲಿಲ್ಲ ಎಂದೇ ತಿಳಿಯುತ್ತೇನೆ' ಎಂದು ಕೂಗಿಕೊಂಡ.[೩೪]

ನಗರ ಸೇರಿದ ಮಗ/ಮಗಳು ಸಂಪ್ರದಾಯ ಮುರಿದು ಜೀವನವನ್ನು ಕಟ್ಟಿಕೊಂಡಾಗ ಗ್ರಾಮೀಣ ಹಳೆ ತಲೆಮಾರಿನ ತಂದೆ/ಪೋಷಕರು ವ್ಯಕ್ತಪಡಿಸುವ ಸಾತ್ವಿಕ ಸಿಟ್ಟನ್ನು ಗಾಮುನ ಮಾತುಗಳಲ್ಲಿ ಕಾಣುತ್ತೇವೆ.

ಪ್ರಸ್ತುತ ಕಥನ ಸಾಹಿತ್ಯ ಮುಂದಿಡುವ ಗ್ರಾಮ/ನಗರದಲ್ಲಿನ ವರ್ಣ, ವರ್ಗ, ಜಾತಿ ಆಧಾರಿತ ಸಂಘರ್ಷದ ಸ್ವರೂಪವನ್ನು ಹೀಗೆ ಸಂಗ್ರಹಿಸಬಹುದು. • ಗ್ರಾಮದಲ್ಲಿನ ಜಮೀನ್ದಾರಿ ವ್ಯವಸ್ಥೆಯ ಊಳಿಗಮಾನ್ಯ ಪದ್ಧತಿಯನ್ನು ತಿರಸ್ಕರಿಸಿ ನಗರಕ್ಕೆ ಬಂದ ದಲಿತ, ಕೆಳವರ್ಗದ ವ್ಯಕ್ತಿಗಳು (ಬಿಕ್ರ ಕಥೆಯ ಬಿಕ್ರ, ಪ್ರಪಂಚ ಕಥೆಯ ತೋಮ, ಮಂಜಿನ ಕಾನು ಕಾದಂಬರಿಯ ಕೊಲ್ಲ ಇತ್ಯಾದಿ.) ಅಸಹಾಯಕರಾಗಿ ಬಂಡವಾಳಶಾಹಿ ವ್ಯವಸ್ಥೆಯನ್ನು ಆಶ್ರಯಿಸುವುದು ಕಥನ ಸಾಹಿತ್ಯದಲ್ಲಿ ಮೂಡಿಬಂದಿದೆ. • ವಿದ್ಯಾಕಾಂಕ್ಷಿ ಪ್ರತಿಭಾವಂತ ದಲಿತ ಯುವಕರು (ಮಂಜಿನ ಕಾನು ಕಾದಂಬರಿಯ ಹಾಲಪ್ಪ, ಹೊಲೆಗೇರಿಯ ರಾಜಕುಮಾರ ಕಾದಂಬರಿಯ ಮಾದೇವ, ನೀ ನನ್ನ ಮುಟ್ಟಬೇಡ ಕಾದಂಬರಿಯ ಮಾದೇವ ಇತ್ಯಾದಿ.,) ನಗರದ ಶಾಲೆ, ಕಾಲೇಜುಗಳಲ್ಲಿ ಜಾತಿ ಆಧಾರಿತ ಶೋಷಣೆಯ ಕ್ರೌರ್ಯಕ್ಕೆ ಒಳಗಾಗುತ್ತಾರೆ. • ಗ್ರಾಮ/ನಗರಗಳಲ್ಲಿ ಹೊಸ ನೆಲೆ ಕಂಡುಕೊಳ್ಳಬೇಕಾದ ಸಂದರ್ಭಗಳಲ್ಲಿ ದಲಿತ, ಕೆಳವರ್ಗದ ವ್ಯಕ್ತಿಗಳಿಗೆ ವರ್ಣ (ಜಾತಿ ಆಧಾರಿತ), ವರ್ಗ ವ್ಯವಸ್ಥೆ ಒಂದು ಸವಾಲಾಗುತ್ತದೆ ಮತ್ತು ಪ್ರತಿರೋಧವನ್ನು ಒಡ್ಡುತ್ತದೆ. • ಸಂಘರ್ಷ/ಹೋರಾಟದ ಸಂದರ್ಭಗಳಲ್ಲಿ ಅವರು ಮತಾಂತರಗೊಳ್ಳುವುದು, ಮಾನಸಿಕವಾಗಿ ದ್ವಂದ್ವ ಅನುಭವಿಸುವುದು ಕಂಡುಬರುತ್ತದೆ. • ಸಾಮಾಜಿಕ ನ್ಯಾಯ ಕೊಡುವ ದೃಷ್ಟಿಯಿಂದ ನಿರ್ಮಿತವಾದ ಕಾನೂನು(ರೋಸ್ಟರ್ ಪದ್ಧತಿ)ಗಳ ಸಹಾಯದಿಂದ ಓದಿ, ಉನ್ನತ ಹುದ್ದೆ ಗಳಿಸಿದ ಸುಶಿಕ್ಷಿತ ದಲಿತರು ಸಹ ಸಾಮಾಜಿಕ ಕೀಳರಿಮೆ/ ದ್ವಂದ್ವಾತ್ಮಕತೆಯಿಂದ (ಅವರನ್ನು ಈ ಸ್ಥಿತಿಗೆ ತಳ್ಳಲು ಸವರ್ಣೀಯ ವರ್ಗದ ಪಾಲೂ ಉಂಟು) ನರಳುವುದು ಕಂಡುಬರುತ್ತದೆ. • ನಗರ ಪ್ರದೇಶದಲ್ಲಿ ವಲಸೆ ಬಂದ ಕಾರ್ಮಿಕರು ಬಂಡವಾಳಶಾಹಿಗಳ ಹಿಡಿತಕ್ಕೆ ಸಿಕ್ಕು ಶೋಷಣೆಗೊಳಗಾಗುತ್ತಾರೆ. ಇಂತವರ ಅಸಹಾಯಕತೆ ಅನೇಕ ಕಥೆ, ಕಾದಂಬರಿಗಳಲ್ಲಿ ವ್ಯಕ್ತವಾಗಿದೆ. • ಅಸಂಘಟಿತ ಶ್ರಮಿಕವರ್ಗ ಸಂಘಟಿತರಾದಾಗ ಮಾತ್ರ ನ್ಯಾಯಯುತ ಉತ್ಪಾದನಾ ಹಂಚಿಕೆಯ ಭಾಗವನ್ನು ದೊರಕಿಸಿಕೊಳ್ಳಲು ಸಾಧ್ಯವೆಂಬುದು ಕಥನ ಸಾಹಿತ್ಯದಿಂದ ತಿಳಿದುಬರುತ್ತದೆ. • ಭೂಗತಲೋಕ ಸೇರಿದ ವ್ಯಕ್ತಿಗಳು (ದಾಸಣ್ಣ ಹೆಗಡೆ) ತಾವು ಅಂದುಕೊಂಡಿದ್ದನ್ನು ಸಾಧಿಸಲು ಆ ವ್ಯವಸ್ಥೆಯೊಳಗೆ ಸಂಘರ್ಷದ ಹಾದಿ ಹಿಡಿದದ್ದು ಕಂಡುಬರುತ್ತದೆ.

## ೪. ನಗರೀಕರಣ, ಜಾಗತೀಕರಣ ಮತ್ತು ಸಂಘರ್ಷ

### ೪. ನಗರೀಕರಣ ಮತ್ತು ಜೀವನ ಪದ್ಧತಿ

ಭಾರತದಂತಹ ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ನಗರೀಕರಣ, ಜಾಗತೀಕರಣದಂತಹ ಆರ್ಥಿಕ, ಸಾಮಾಜಿಕ ಬದಲಾವಣೆಯ ಪ್ರಕ್ರಿಯೆಗಳು ಜನಸಾಮಾನ್ಯರ ಸಾಮಾಜಿಕ, ಆರ್ಥಿಕ, ಧಾರ್ಮಿಕ ವ್ಯವಸ್ಥೆಯ ಜೊತೆ ತಳಕು ಹಾಕಿಕೊಂಡಿವೆ. ಒಂದು ನೆಲೆಯಿಂದ (ಗ್ರಾಮ/ನಗರ) ಇನ್ನೊಂದು ನೆಲೆಗೆ (ಗ್ರಾಮ/ನಗರ) ಸ್ಥಳಾಂತರಗೊಂಡ ವ್ಯಕ್ತಿಗಳು ಜಾಗತೀಕರಣಕ್ಕೆ ಹೇಗೆ ಸ್ಪಂದಿಸುತ್ತಾರೆ, ಅವರ ಪ್ರತಿಕ್ರಿಯೆ ಏನು, ಮುಂತಾದ ಪ್ರಶ್ನೆಗಳೊಂದಿಗೆ ಅವರ ಗೆಲುವು ಮತ್ತು ಸೋಲುಗಳಿಗೆ ಕಾರಣಗಳನ್ನು ಕಥನ ಸಾಹಿತ್ಯದಲ್ಲಿ ಗಮನಿಸಬಹುದು. ಇದು ಹೀಗೆಯೇ ಇರಬೇಕು, ಇಂತಹವರು ಇಲ್ಲಿಯೇ ಬದುಕಬೇಕು ಎಂಬುದು ಸಂಪ್ರದಾಯಸ್ಥರ ಯಥಾಸ್ಥಿತಿ ವಾದವಾಗಿದೆ. ಇಂತಹ ವಾದ ವರ್ಣ, ವರ್ಗ ಅಸಮಾನ ವ್ಯವಸ್ಥೆಯ ಮುಂದುವರಿಕೆಯ ಸೂಚನೆಯೂ ಹೌದು. ಭಾರತೀಯ ಸಾಂಸ್ಕೃತಿಕ ಸಂದರ್ಭದಲ್ಲಿ ವ್ಯಕ್ತಿ ಬಡವನಿರಲಿ, ಶ್ರೀಮಂತನಿರಲಿ, ಮೇಲ್ಜಾತಿ, ಕೆಳಜಾತಿಯವನಿರಲಿ ಊಟ, ವಸ್ತ್ರ, ಶಿಕ್ಷಣ, ಮದುವೆ, ಮಕ್ಕಳು ಅವನ ಜೀವನದ ಪ್ರತಿಯೊಂದು ಹಂತದಲ್ಲಿ ಜಾತಿ, ಕೌಟುಂಬಿಕ ವ್ಯವಸ್ಥೆಗಳು ಪ್ರಭಾವ ಬೀರುತ್ತ ಬಂದಿವೆ. ಒಂದು ಜೀವನ ಪದ್ಧತಿ(ಮೂಲ ನೆಲೆ)ಯಲ್ಲಿ ಬದುಕಿದ ಕುಟುಂಬ ಸದಸ್ಯರು ಬದಲಾದ (ಹೊಸ ನೆಲೆ) ಪರಿಸರದಲ್ಲಿ ಇನ್ನೊಂದು ಜೀವನ ಪದ್ಧತಿಗೆ ಹೊಂದಿಕೊಳ್ಳುವಾಗ ಅನುಭವಿಸುವ ದ್ವಂದ್ವವನ್ನು ಪ್ರಸ್ತುತ ಕಥನ ಸಾಹಿತ್ಯ ಹಿಡಿದಿಟ್ಟಿದೆ.

ರಾಘವೇಂದ್ರ ಪಾಟೀಲ ಅವರ 'ಮಾಯಿಯ ಮುಖಗಳು' ಕತೆಯಲ್ಲಿ ಮಕ್ಕಳ ಸಂಗೀತ ಶಿಕ್ಷಣಕ್ಕಾಗಿ ಕಳ್ಳೀಗುದ್ದಿ ಗ್ರಾಮ ನಿರಾಕರಿಸಿ ಬೆಳಗಾವಿ ಸೇರಿದ ಕಲ್ಲೋಪಂತರ ಕುಟುಂಬ ನಗರ ಪರಿಸರಕ್ಕೆ ಹೊಂದಿಕೊಳ್ಳಲು ಪರದಾಡುತ್ತದೆ. ಕಲ್ಲೋಪಂತರು ಮೇಲ್ಜಾತಿಗೆ ಸೇರಿದ ಮಧ್ಯಮ ವರ್ಗದ ಜಮೀನ್ದಾರಿ ಕುಟುಂಬದವರಾಗಿದ್ದು, ಗ್ರಾಮೀಣ ಬದುಕಿನಲ್ಲಿ ನಿತ್ಯ ಬೆಳಗ್ಗೆ ಪೂಜೆ, ಪುನಸ್ಕಾರ, ಉಪಾಹಾರ ಮುಗಿಸಿಕೊಂಡು ಹೊಲಕ್ಕೆ ಭೇಟಿ, ಮಧ್ಯಾಹ್ನ ಊಟ ನಿದ್ರೆ, ಸಂಜೆ ಮತ್ತೆ ಚಹಾ ಸೇವಿಸಿ ಹೊಲಗಳ ವೀಕ್ಷಣೆ ಇತ್ಯಾದಿ., ಒಂದು ತಂಪಾದ ಜೀವನ ಕ್ರಮಕ್ಕೆ ಹೊಂದಿಕೊಂಡಿರುತ್ತಾರೆ. ಆದರೆ ನಗರಕ್ಕೆ ಬಂದ ನಂತರ ಇವರ ದಿನಚರಿಯು ಅನಿವಾರ್ಯವಾಗಿ ಬದಲಾವಣೆಗೆ ಒಳಗಾಗುತ್ತದೆ. ಹೊಸ ಜೀವನ ವ್ಯವಸ್ಥೆಗೆ ಹೊಂದಿಕೊಳ್ಳಲು ಹಿರಿಯ ಜೀವಗಳು ಪರಿತಪಿಸುತ್ತವೆ. ನಗರದಲ್ಲಿ ಹೊತ್ತು ಏರಿದ ಮೇಲೆ ಏಳುವುದು, ಜಳಕ ಮಾಡಿ ಪೋಹೇಗೀಹೆ ತಿಂದು ಚಾ ಕುಡಿದು, ತಲೆಯ ಮೇಲೆ ಟೋಪಿಯನ್ನು ಧರಿಸಿ ಮಾರ್ಕೆಟ್ಟಿಗೆ ಹೋಗಿ ಅಡ್ಡಾಡಿ ಬರೋದು. ಈ ಅಡ್ಡಾಡುವುದೇ ಕಲ್ಲೋಪಂತರಿಗೆ ಒಂದು ಕೆಲಸವಾಗುತ್ತದೆ. ಆದರೆ ಕೃಷ್ಣಾಬಾಯಿ ಹೊಸ ಗಾಳಿಗೆ ಹೊಂದಿಕೊಳ್ಳಲು ತಡ ಮಾಡುವುದಿಲ್ಲ, ಗ್ರಾಮದಲ್ಲಿದ್ದಾಗ ಕಚ್ಚೆ ಹಾಕಿಕೊಂಡು ಒಂಬತ್ತುವಾರೀ ಸೀರೆ ಉಟ್ಟುಕೊಂಡು ವಯಸ್ಸಾದಂತೆ ಕಾಣಿಸುತ್ತಿದ್ದ ಕೃಷ್ಣಾಬಾಯಿ ಈಗ ಪರಕಾರ ಹಾಕಿಕೊಂಡು ಅರವಾರಿ ಸೀರೆಯನ್ನು ಗೋಲ ಉಟ್ಟುಕೊಂಡು, ತಲಿ ಬಾಚಿಕೊಂಡು ಅಂಬಡ ಕಟ್ಟಿಕೊಳ್ಳುತ್ತಾಳೆ.

> 'ಹೂಂ ನೀ ಹೊಸಾ ಹುಡುಗಿ ಕಂಡಂಗ ಕಾಣಿಸಲಾಕತ್ತಿ ನೋಡು. ಸೂಳೀಮಗನ ಈ ಬೆಳಗಾವಿ ಹೆಂಗಸರ ವಯಸ್ಸನ ಕಡಿಮೆ ಮಾಡಿ ಹುಡುಗೇರನ ಮಾಡಿ ಕೂಡಿಸತದ. ನಮಗ ಇನ್ನೊಂದ ಕೂಸು ಹುಟ್ಟಿದರೂ ಹುಟ್ಟೀತು ನೋಡು. ಗಂಡ ಹುಡುಗ ಆದರೂ ಆಗಬಹುದು.'[೨೫]

ಹಾಸ್ಯಕ್ಕಾಗಿ ಮಾತಾಡಿದ ಕಲ್ಲೋಪಂಥರ ಮಾತನ್ನು ಗಂಭೀರವಾಗಿ ಪರಿಗಣಿಸುವ ಅಗತ್ಯವಿದೆ. ನಗರವು ಗ್ರಾಮೀಣ ಸಾಂಪ್ರದಾಯಿಕ ಬದುಕನ್ನು ಬದಲಿಸಿ ತನ್ನ ಆಧುನಿಕ ಶೈಲಿಯ ತೆಕ್ಕೆಗೆ ತೆಗೆದುಕೊಳ್ಳುತ್ತದೆ. ಮನುಷ್ಯರ ವೇಷಭೂಷಣ, ಆಹಾರ, ಶಿಕ್ಷಣ, ಮಾತಿನ ಶೈಲಿ, ಭಾವನಾತ್ಮಕ ಕೃತ್ರಿಮತೆ ಇತ್ಯಾದಿಗಳಲ್ಲದೆ ಕೊನೆಗೆ ಮಾನವೀಯ ಸಂಬಂಧಗಳನ್ನು ಆರ್ಥಿಕ ತಳಹದಿಯ ಮೇಲೆ ತೆಳುವಾಗಿಸುತ್ತದೆ. ಇದು ಕೌಟುಂಬಿಕ ಸಂಬಂಧಗಳ ಮೇಲೆ ವ್ಯತಿರಿಕ್ತ ಪರಿಣಾಮ ಬೀರುವುದನ್ನೂ ಚರ್ಚಿಸಿದ್ದೇವೆ. ಕಲ್ಲೋಪಂತರ ಮೂರನೇ ಮಗಳು ಡಾನ್ಸ್ ಕಲಿಯುತ್ತೇನೆ ಎಂದಾಗ, ಕೃಷ್ಣಾಬಾಯಿ ಸುತಾರಾಂ ಒಪ್ಪುವುದಿಲ್ಲ. ಡ್ಯಾನ್ಸ್ ಎಂದರೆ ನಾಟಕದ ಕುಣಿತ ಎಂದು ತಿಳಿದಿದ್ದ ಕೃಷ್ಣಾಬಾಯಿಗೆ ಅದು ಭರತನಾಟ್ಯ ಎಂದು ತಿಳಿಸಿ ಹೇಳಬೇಕಾಗುತ್ತದೆ.

ಸಂಗೀತ ಮೇಲ್ವರ್ಗದ ಕಲೆ, ನೃತ್ಯ ಕೇವಲ ಕುಣಿತ, ಅಗ್ಗದ್ದು ಎಂಬ ಸಂಪ್ರದಾಯ ಭಾವನೆ ಪಾರಂಪರಿಕ ವರ್ಣ ವ್ಯವಸ್ಥೆಯ ನಂಬಿಕೆಯ ನೆಲೆಯಲ್ಲಿ ಹುಟ್ಟಿದುದಾಗಿದೆ. ಗ್ರಾಮ ನಿರಾಕರಣೆ, ನಗರ ಆಯ್ಕೆಗಳ ಕಾರಣಗಳೇನೇ ಇರಲಿ, ನಗರ ಪ್ರದೇಶಕ್ಕೆ ಹೋದ ಗ್ರಾಮೀಣ ಕುಟುಂಬವೊಂದು ತನ್ನ ಎಲ್ಲ ಸಂಬಂಧಗಳನ್ನು ಕಳಚಿಕೊಂಡು ನೂರಕ್ಕೆ ನೂರರಷ್ಟು ನಗರ ನೆಲೆಯನ್ನು ಕಂಡುಕೊಳ್ಳಲು ಸಾಧ್ಯವಿಲ್ಲ ಎಂಬುದು ಅಧ್ಯಯನದ ನಿಲುವಾಗಿದೆ. ಇಂತಹ ಕುಟುಂಬಗಳ ದೈನಂದಿನ ಚಟುವಟಿಕೆಗಳ ಮೇಲೆ ಮೂಲ ನೆಲೆಯ ಛಾಯೆ ತನ್ನ ಪ್ರಭಾವವನ್ನು ಬೀರುವುದು ಮತ್ತು ಉಳಿಸಿಕೊಳ್ಳುವುದು ಕಂಡುಬರುತ್ತದೆ.

ನಗರೀಕರಣ ದಲಿತ, ಕೆಳವರ್ಗದ ಕುಟುಂಬಗಳ ಹಿರಿಯ ತಲೆಮಾರಿನ ವ್ಯಕ್ತಿಗಳ ಜೀವನ ಶೈಲಿಯ ಮೇಲೂ ಪ್ರಭಾವ ಬೀರಿರುವುದನ್ನು ಹೇಮಲತಾ ಮಹಿಷಿ ಅವರ 'ತ್ರಿಶಂಕು' ಕತೆಯಲ್ಲಿ ಕಾಣುತ್ತೇವೆ. ಗ್ರಾಮೀಣ ವೃದ್ಧರು (ಒಂದು ಜೀವನ ಪದ್ಧತಿಗೆ/ಜೀವನ ವಿಧಾನಕ್ಕೆ ಹೊಂದಿಕೊಂಡಿದ್ದವರು) ನಗರದ ತನ್ನ ಮಗನ ಮನೆಗೆ ಬಂದಾಗ ಅಲ್ಲಿನ ನಡಾವಳಿಗೆ ಹೊಂದಿಕೊಳ್ಳಲಾರದೆ ಚಡಪಡಿಸುತ್ತಾರೆ. ವಿದ್ಯಾವಂತ ಮಗ ತನ್ನ ತಂದೆ ಒಳ್ಳೆಯ ಚಪ್ಪಲಿ ಧರಿಸಿ ನಗರಕ್ಕೆ ಬರಲಿ ಎಂದು ಹೊಸ ಚಪ್ಪಲಿ ಕೊಡಿಸಿದರೂ, ತಂದೆ ಮಾತ್ರ ಹಳೆ ಚಪ್ಪಲಿ ಮೆಟ್ಟಿಯೇ ಮನೆಗೆ ಬರುತ್ತಾರೆ. ಟೇಬಲ್ ಮೇಲೆ ಕುಳಿತು ಊಟ ಮಾಡದೆ ಅಡಿಗೆ ಮನೆಯಲ್ಲಿ ಕುಳಿತು ಊಟ ಮಾಡುವುದು, ಅವ್ವನ ಒತ್ತಾಯಕ್ಕೆ ಗಿಣ್ಣು ತಂದು ತನಗೆ ತಿನ್ನಿಸುವುದು ಅವರ ಗ್ರಾಮೀಣ ಮುಗ್ಧ ಸ್ವಭಾವವನ್ನು ತೋರಿಸಿದರೂ, ಮನೆಗೆ ಬಂದು ಹೋಗುವ ವಿದ್ಯಾವಂತರ ಮುಂದೆ ಇವು ಅವಮಾನದ ವರ್ತನೆಗಳೆಂದು ಮಗ ತಿಳಿಯುತ್ತಾನೆ. ಡಾಕ್ಟರರ ತಾಯಿಯ ವಿಷಯ ಸಹ ಇದಕ್ಕಿಂತ ಬೇರೆಯಾಗಿರುವುದಿಲ್ಲ. ನಗರ ಜೀವನದ ರೀತಿನೀತಿಗಳು ಅವಳಿಗೆ ಆಗಿ ಬರದೇ ನಾನು ಹಳ್ಳಿಗೆ ಹೋಗ್ತೀನಿ ಎಂದು ಹೋಗಿಬಿಡುತ್ತಾಳೆ. ಹಳ್ಳಿಯಲ್ಲಿ ಹಸು ಸಾಕಿ, ಬೆಣ್ಣೆ, ಗಿಣ್ಣದ ಹಾಲು ಕಳಿಸುವ ತಾಯಿ ನಗರೀಕರಣದ ಬದುಕಿಗೆ ತಿರುಗಿಯೂ ನೋಡುವುದಿಲ್ಲ. 'ನಿಮ್ಮವ್ವ ಭೋ ಬೇಜಾರು ಬೀಳ್ತಾಳೆ ಮಗಾ ಇಸ್ಕೂಲಿಗೆ ಹಾಕಿ ನಾವೇ ಕೈಯಾರೆ ಮಗನ್ನ ತೊರ್‍ಕೊಂಡ್ವಿ ಅಂತಾಳೆ.'[೩೬] ಇದು ಹಳೆ ತಲೆಮಾರಿನ ವ್ಯಕ್ತಿಗಳಲ್ಲಿ ನಗರೀಕರಣ ತಂದ ತಲ್ಲಣವಾಗಿದೆ. ಅಪ್ಪ ಅಮ್ಮಂದಿರ ದೃಷ್ಟಿಯಲ್ಲಿ ಮಗ ವಿದ್ಯಾವಂತನಾಗಿ ಕೈತುಂಬ ಸಂಪಾದಿಸುತ್ತಾನೆ ಎಂಬುದರ ಜೊತೆ, ತಮ್ಮ ಮೂಲ ಕೌಟುಂಬಿಕ ವರ್ತನೆ, ನಡಾವಳಿಗಳಿಂದ ತಪ್ಪಿಸಿಕೊಂಡು ನಗರೀಕರಣದ ಹಿಡಿತಕ್ಕೆ ಒಳಗಾದ ಎಂಬ ವಿಷಾದವಿದೆ.

ನಗರೀಕರಣದ ಗೊಂದಲಗಳು ಹಿರಿಯ ತಲೆಮಾರಿನವರಿಗೆ ಈ ರೀತಿಯಾದರೆ, ಕಿರಿಯ ತಲೆಮಾರಿನ ವ್ಯಕ್ತಿಗಳು ನಗರ, ನಗರೀಕರಣದ ಪ್ರಭಾವಗಳನ್ನು ಅರಗಿಸಿಕೊಡು ಬೆಳೆಯುವುದು ಕಥನ ಸಾಹಿತ್ಯದಲ್ಲಿ ದಾಖಲಾಗಿದೆ. ಆರ್.ವಿ. ಭಂಡಾರಿ ಅವರ 'ತಲೆಮಾರು' ಕೃತಿಯ ವೀರೇಶನ ಗ್ರಾಮ ಮತ್ತು ನಗರ ಜೀವನವನ್ನು ಇಲ್ಲಿ ವಿಶ್ಲೇಷಿಸಬಹುದು. ಗ್ರಾಮೀಣ ಪರಿಸರದಲ್ಲಿ ಸಾಮಾನ್ಯವಾಗಿ ಮನೆಗಳು ವಿಶಾಲವಾದ ನಿಲುವನ್ನು ಹೊಂದಿರುತ್ತವೆ. ವೀರೇಶನ ಬೋಳ್ಗೆರೆ ಗ್ರಾಮದ ಮನೆಯು ಸಹ ಇಂತಹ ವಿಶಾಲತೆಯನ್ನು ಹೊಂದಿದೆ.

> 'ಹಳ್ಳಿಯ ಮನೆಗಳೇ ಹಾಗೆ. ಹುಲ್ಲು ಹೊದಿಸಿದ ಇಮಾರತು. ಮನೆಯ ಮಾಡು ಮುಗಿದಲ್ಲಿಂದ ಮತ್ತೊಂದು ಮಾಡು. ಎರಡೂ ಸೂರಕಲು ಸೇರುವಲ್ಲಿ ಒಂದು ಬೆರಣಿ ಮರದ ಹರಣಿ ಕಟ್ಟಿದೆ. ಮುಂದೆ ಹೊಳ್ಳಿ ತುಳಸಿ ಕಟ್ಟೆ ಇತ್ಯಾದಿ.'[೩೭]

ನಗರದಲ್ಲಿ ಅಡಿ ಜಾಗಕ್ಕೆ ಲಕ್ಷಾಂತರ ರೂಪಾಯಿಗಳ ಮೌಲ್ಯವಿದ್ದು, ಇಂತಹ ವಿಶಾಲತೆ ವ್ಯಾವಹಾರಿಕ ಜಗತ್ತಿನ ಮಧ್ಯೆ ಕಿರಿದಾಗಲ್ಪಡುತ್ತದೆ. ಮಂಗಳೂರಿನ ಪ್ರಸಿದ್ಧ ದಿನಪತ್ರಿಕೆ ಮಲೆನಾಡ ಮಳೆಗಾಲದಲ್ಲಿ ವರದಿಗಾರನಾಗಿ ಸೇರಿದ ವೀರೇಶ, ಒಂದು ಚಿಕ್ಕ ಬಾಡಿಗೆ ಮನೆಯಲ್ಲಿ ಒಂದೇ ರೂಮಿನಲ್ಲಿ ಅಡಿಗೆ, ನಿದ್ರೆ, ಬರಹದಂತಹ ಕ್ರಿಯೆಗಳಿಗೆ ಒಗ್ಗಿಕೊಳ್ಳುತ್ತಾನೆ. ಆರ್. ವಿ. ಭಂಡಾರಿ ಅವರ 'ಬೆಂಕಿಯ ಮಧ್ಯೆ' ಕಾದಂಬರಿಯ ದಲಿತರ ಮುನಿಯಪ್ಪ ಗ್ರಾಮದ ಗುಡಿಸಿಲಿನಿಂದ ನಗರದ ಹರಿಜನರ ವಿದ್ಯಾರ್ಥಿ ನಿಲಯ ಸೇರಿದಾಗ ನಿರಾಳತೆಯನ್ನು ಅನುಭವಿಸಿ ಸ್ವತಂತ್ರನಾಗುತ್ತಾನೆ. ಅಶೋಕ ಕುಲಕರ್ಣಿ ಅವರ 'ನಿರ್ಗತಿಕರು' ಕಾದಂಬರಿಯ ಸಿಕ್ಕಲಗೇರ ಜನಾಂಗದ ಕೋದ (ಇವನು ತನ್ನ ಗುಡಿಸಲನ್ನು ತಾನೇ ಬೆಂಕಿ ಇಟ್ಟು ಸುಟ್ಟು ಬೂದಿ ಮಾಡಿದ ವ್ಯಕ್ತಿ) ತಾನು ಮಾಡದ ಅಪರಾಧಕ್ಕೆ ಜೈಲಿಗೆ ಹೋದಾಗ, ಅಲ್ಲಿನ ಜೈಲಿನ ಸೆಲ್ ಕಂಡು ಖುಷಿಪಡುತ್ತಾನೆ. ತಾವು ಇರುವ ಸ್ಥಳದಲ್ಲಿಯೆ ಅನುಸರಿಸಿಕೊಂಡು ಹೊಂದಾಣಿಕೆ

ಮಾಡಿಕೊಳ್ಳುವುದು ಗ್ರಾಮೀಣ ಹೊಸ ತಲೆಮಾರಿನ ವ್ಯಕ್ತಿಗಳ ಧನಾತ್ಮಕ ಗುಣವಾಗಿದೆ. ಗ್ರಾಮೀಣ ಬದುಕಿನ ಬಡತನವನ್ನು ಅನುಭವಿಸಿದ ಒಂದು ವ್ಯಕ್ತಿತ್ವ ನಗರ ಬದುಕಿನ ಕಷ್ಟ ಸುಖಗಳಿಗೆ ಎಗ್ಗಿಲ್ಲದೆ ಒಗ್ಗಿಕೊಳ್ಳುತ್ತದೆ. ಹೀಗೆ ಒಗ್ಗಿಕೊಳ್ಳುವಾಗ ಕೊಡುಕೊಳ್ಳುವ ಪ್ರಕ್ರಿಯೆ ನಡೆದು ವ್ಯಕ್ತಿಗಳು ನಗರ ಬದುಕಿನ ನೆಲೆಯಲ್ಲಿ ಹಳ್ಳಿಯ ವ್ಯಕ್ತಿತ್ವವನ್ನು ಗಟ್ಟಿಗೊಳಿಸಿಕೊಳ್ಳುತ್ತಾರೆ.

ನಗರೀಕರಣ ಅಥವಾ ಅಭಿವೃದ್ಧಿಯ ಹೆಸರಿನಲ್ಲಿ ಊರು, ಆಸ್ತಿ ಸ್ಥಳಾಂತರಗೊಂಡಾಗ ವ್ಯಕ್ತಿಗಳಲ್ಲಿ ಕಾಣಿಸುವ ದ್ವಂದ್ವಾತ್ಮಕತೆಯು ವ್ಯಕ್ತಿಯಿಂದ ಕುಟುಂಬಕ್ಕೆ ಮತ್ತು ಕುಟುಂಬದಿಂದ ಒಂದು ಸಮೂಹದೆಡೆ ಚಲಿಸಿ ಆಕ್ರಮಿಸಿಕೊಳ್ಳುವ ರೀತಿಯನ್ನು ಮತ್ತು ಒಂದು ಸಮೂಹ ಇದನ್ನು ಸ್ವಿಕರಿಸಿ ಅನುಭವಿಸುವಾಗಿನ ದ್ವಂದ್ವಾತ್ಮಕ ಮನಸ್ಥಿತಿಯನ್ನು ರೇಖಾ ಕಾಖಂಡಕಿ ಅವರ 'ತ್ರಸ್ತ' ಕಾದಂಬರಿಯ ಬಾಗಲಕೋಟೆ(ಮಾದಯ್ಯನ ಗುಡ್ಡ) ಜನತೆಯಲ್ಲಿ ಗಮನಿಸುತ್ತೇವೆ. ಹುಟ್ಟಿ ಬೆಳೆದ ಊರು ಆಲಮಟ್ಟಿ ಅಣೆಕಟ್ಟಿನಲ್ಲಿ ಮುಳುಗಡೆಯಾಗಿ ಅಲ್ಲಿಂದ ನವನಗರ(ಪುನರ್ ವಸತಿಕೇಂದ್ರ)ದೆಡೆ ಸ್ಥಳಾಂತರಗೊಳ್ಳುವ ಜನರನ್ನು ಆಡಳಿತ ಮತ್ತು ಘಟಪ್ರಭೆಯ ಪ್ರವಾಹಗಳು ಕಾಡಿದರೆ, ಮನೆ, ಆಸ್ತಿ ಮುಳುಗಡೆಯಾಗದ ಜನರನ್ನು ನದಿ, ಕೆಸರು, ಹುಳುಹುಪ್ಪಡಿ, ರೋಗರುಜಿನಗಳು ಬೆಂಬತ್ತಿ ಪೀಡಿಸಿವೆ. ಮಚ್ಛರದಾನಿಯ ಒಳಗೆ ಕುಳಿತು ಊಟ ಮಾಡುತ್ತ, ಸಂಚಾರಿ ಶೌಚಾಲಯದಲ್ಲಿ ಮಲಮೂತ್ರ ವಿಸರ್ಜಿಸುತ್ತ, ಅಡಿ ಜಾಗಕ್ಕೂ ಪರದಾಡುವ ಜನರ ಪಾಲಿಗೆ ನರಕವಾಗಿ ತಾಯ್ನೆಲ ಪರಿಗಣಿಸಲ್ಪಟ್ಟಿದೆ. ಬಾಲ್ಯದ ಸ್ವಚ್ಛಂದ ಬದುಕನ್ನು ಅನುಭವಿಸಿದ್ದ ಪುರುಷೋತ್ತಮ ಇಂದಿನ ತನ್ನೂರಿನ ಕರುಣಾಜನಕ ಸ್ಥಿತಿ ಕಂಡು ಮರುಗುತ್ತಾನೆ. ಇವನ ಹಾಗೆ ಊರನ್ನು ನಿರಾಕರಿಸಿ ನಗರ ಸೇರಿದವರ ಮಾನಸಿಕ ತೊಳಲಾಟವನ್ನು ಅಧ್ಯಯನ ಗುರುತಿಸುತ್ತದೆ.

> 'ಈಗಂತೂ ಊರು ಮುಳುಗ್ತದಂತ ಎಲ್ಲೆಲ್ಲಿಂದ ಮಂದಿ ಕಾರು ಮಾಡಿಕೊಂಡು ಬಂದು ಹೋಗ್ತಾರ ಹುಬ್ಬಳ್ಳಿ ಧಾರವಾಡ, ಗದಗ, ಕೊಲ್ಲಾಪುರ ಅಂತ. ಅವ್ರೆಲ್ಲ ಇಲ್ಲೇ ಹುಟ್ಟಿ ಬೆಳದವ್ರು, ಜೀವನಾ ಅರಸಿಕೊಂಡು ಅಲ್ಲಲ್ಲಿ ಹೋಗಿರ್‍ತಾರ. ಈಗ ನಮ್ಮೂರು ಮುಳುಗ್ತದ ಅನ್ನು ತೊಳಲಾಟದಿಂದ ಬಂದು ಬಂದು ನೋಡಿಕೊಂಡು ಹೋಗ್ತಾರ.'[೨೦]

ಮುಳುತ್ತಿರುವ ತಾಯ್ನೆಲವನ್ನು ಅಂತಿಮವಾಗಿ ನೋಡಿಕೊಂಡು ಹೋಗಲು ಬರುತ್ತಿರುವ ಒಂದು ಸಮುದಾಯದ ದ್ವಂದ್ವ, ತೊಳಲಾಟಗಳು, ಬಂಧುಗಳ ಅಂತಿಮ ಯಾತ್ರೆಯಲ್ಲಿ ಪಾಲ್ಗೊಂಡು ಮರಳುವ ವ್ಯಕ್ತಿಗಳ ಮಾನಸಿಕ ಸ್ಥಿತಿಯನ್ನು ಹೋಲುವುದು ಪರಿಸ್ಥಿತಿಯ ಗಂಭೀರತೆಯಾಗಿದೆ.

### ಬ. ವೃದ್ಧಾಪ್ಯ ಮತ್ತು ಅಭದ್ರತೆಯ ಸಂಘರ್ಷ

ಮುಪ್ಪು ಮನುಷ್ಯ ಬದುಕಿನ ಅನಿವಾರ್ಯ ಸ್ಥಿತಿಯಾಗಿದೆ. ಹಲವಾರು ವರ್ಷ ಒಂದು ವ್ಯವಸ್ಥೆಗೆ ಹೊಂದಿಕೊಂಡ ಜೀವ (ಅವರು ನೌಕರರಾಗಿದ್ದರೆ ನಿವೃತ್ತಿ, ಸ್ವಂತ ವೃತ್ತಿಯಲ್ಲಿದ್ದರೆ ವಿಶ್ರಾಂತಿ) ವೃದ್ಧಾಪ್ಯದಲ್ಲಿ ಅದನ್ನು ತೊರೆಯುವಾಗಿನ ಆತಂಕ, ತಲ್ಲಣ, ತಳಮಳಗಳು ಅನೇಕ ಆಯಾಮಗಳಲ್ಲಿ ಕಾಣಿಸಿಕೊಳ್ಳುತ್ತವೆ. ಗ್ರಾಮ/ನಗರದ ಒಂದು ನೆಲೆಯಲ್ಲಿ ಬಾಲ್ಯ ಕಳೆದು ನಗರ/ಗ್ರಾಮದ ಇನ್ನೊಂದು ನೆಲೆಯಲ್ಲಿ ಬದುಕು ಸವೆಸಿದ ವ್ಯಕ್ತಿಗಳು ವೃದ್ಧಾಪ್ಯದ ಹಂತದಲ್ಲಿ ಅನುಭವಿಸುವ ಅತಂತ್ರತೆ, ಅಭದ್ರತೆಯ ದ್ವಂದ್ವವನ್ನು ಪ್ರಸ್ತುತ ಕಥನ ಸಾಹಿತ್ಯ ಪರಿಣಾಮಕಾರಿಯಾಗಿ ಗ್ರಹಿಸಿದೆ.

ವ್ಯಾಸರಾಯ ಬಲ್ಲಾಳರ 'ಮುಸ್ಸಂಜೆ' ಕತೆಯಲ್ಲಿ ನರಸಿಂಹಯ್ಯನವರು ಗ್ರಾಮದಿಂದ ಮುಂಬಯಿಗೆ ಬಂದು ನೌಕರಿ ಸೇರಿ, ಪ್ರತಿದಿನ ಕುರ್ಲಾದಿಂದ ವಿ.ಟಿ.ವರೆಗೆ ಲೋಕಲ್ ಟ್ರೇನಿನಲ್ಲಿ ಪ್ರಯಾಣಿಸುತ್ತ ಇಪ್ಪತ್ತು ವರ್ಷಗಳ ಕಾಲ ನೌಕರಿ ಮಾಡುತ್ತಾರೆ. ರೇಲ್ವೆ ಬೋಗಿಯ ಸಹಪ್ರಯಾಣಿಕರೊಂದಿಗೆ ಇಸ್ಪೀಟ್ ಆಟ ಆಡುತ್ತ ಆತ್ಮೀಯರಾಗಿದ್ದರೂ ನಿವೃತ್ತಿಯ ವಿಷಯವನ್ನು ಹೇಳುವುದಿಲ್ಲ, ಅದು ಅವರೆದೆಯಲ್ಲಿ ತಳಮಳದ ರೂಪದಲ್ಲಿ ಹೆಪ್ಪುಗಟ್ಟಿದೆ. ಮುಂದೇನು ಮಾಡುತ್ತೀರಿ? ಎಂಬ ಕಚೇರಿಯ ಸಹೊದ್ಯೋಗಿಗಳ ಪ್ರಶ್ನೆ ಕೇವಲ ಒಂದು ಪ್ರಶ್ನೆಯಾಗಿರದೆ ಅವರ ಉಳಿದ ಬದುಕಿನ ಭದ್ರತೆಯ ಪ್ರಶ್ನೆಯಾಗಿದೆ. ಮುಂಬಯಿ ಬಿಡುತ್ತೀರೇನು ಮಿ. ರಾವ್, ಬೇರೆ ಕೆಲಸ ನೋಡುತ್ತೀರೇನು ಮಿ. ರಾವ್ ಎಂಬ ಪ್ರಶ್ನೆಗಳು ಅವರನ್ನು ಕಾಡುವುದಕ್ಕಿಂತ, ಮಗ ಪ್ರಭಾಕರ, ಸೊಸೆ ಮೀನಾರವರು ಮಿ. ರಾವ್ ಕುರಿತು ತೆಗೆದುಕೊಂಡ ನಿರ್ಧಾರ ಕಳವಳ ಹುಟ್ಟಿಸಿದೆ. ಸೊಸೆ ಕೆಲಸಕ್ಕೆ ಸೇರುವ, ಮಿ. ರಾವ್ ಮೊಮ್ಮಗನನ್ನು ನೋಡಿಕೊಳ್ಳುವ ತೀರ್ಮಾನದ

ಹಿಂದೆ ಆರ್ಥಿಕ ವ್ಯವಸ್ಥೆ ಸರಿದೂಗಿಸುವ ವಿಚಾರ ಕೆಲಸ ಮಾಡಿದೆಯಾದರೂ, ಎಲ್ಲೋ ಮೂಲೆಯಲ್ಲಿ ತಾನು ಮಗ, ಸೊಸೆಯರಿಗೆ ಮನೆಯಾಳಾಗಿ ಕಳೆದು ಹೋಗುವ ಭೀತಿ (ಅಸ್ತಿತ್ವದ ದ್ವಂದ್ವ) ಮಿ. ರಾವ್‌ರವರ ಎದೆ ತುಂಬಿರುವುದನ್ನು ಅಧ್ಯಯನ ಗುರುತಿಸುತ್ತದೆ. ತನ್ನ ಅಸ್ತಿತ್ವ ಮೂಲೆಗುಂಪಾಗುವ ತಲ್ಲಣ ಅವರನ್ನು ಅಧೀರಗೊಳಿಸಿದೆ.

> 'ಪ್ರಭಾ ತಂದೆಯ ಕೈಯಿಂದ ಕಟ್ಟುಗಳನ್ನು ಪಡೆದು ನೋಡಿದ : 'ಏಳು ಸಾವಿರದ ಮುನ್ನೂರ ನಲವತ್ತೈದು ರೂಪಾಯಿ, ಎಂಟಾಣೆ – ಪ್ರಾವಿಡೆಂಟ್ ಫಂಡ್ ಹಣ. .. ಇಷ್ಟೇನೆ! ಬೆಳ್ಳಿಯ ತಟ್ಟೆ . .ಆಫೀಸಿನದೇನೋ. . ಇಷ್ಟು ಚಿಕ್ಕದೆ?. .'[೨೮]

ಎಂಬ ಮಗನ ಮಾತು ಹಿರಿಯ ಜೀವವೊಂದರ ಜೀವಮಾನದ ಸಾಧನೆಯ ಪ್ರತಿಫಲ ಇಷ್ಟೇನೆ? ಎಂಬ ವ್ಯಾಖ್ಯಾನವಾಗಿ ಎಲ್ಲ ನಿವೃತ್ತ ಜೀವಗಳನ್ನು ಬೆಚ್ಚಿ ಬೀಳಿಸುತ್ತದೆ. ರಾಮಕೃಷ್ಣ ಗುಂದಿ ಅವರ 'ಸಂಬಂಧಗಳು' ಕತೆಯ ವಯೋವೃದ್ಧ, ನಿವೃತ್ತ ಶಿಕ್ಷಕರ ಅನಿಸಿಕೆಗಳು ಸಹ ಇದೇ ನೆಲೆಯಲ್ಲಿ ಮಡುಗಟ್ಟಿ ಕುಳಿತಿವೆ. ವಿದ್ಯಾವಂತ, ಬುದ್ಧಿವಂತ ಇಬ್ಬರು ಮಕ್ಕಳು ವಿದ್ಯಾಭ್ಯಾಸದ ನಂತರ ನೌಕರಿ ಹಿಡಿದು ದೆಹಲಿ, ಮುಂಬಯಿ ನಗರಗಳನ್ನು ಸೇರಿದ್ದಾರೆ. ವಯಸ್ಸಿಗೆ ಬಂದ ಮಗಳ ಮದುವೆಗೆ ವರ ನೋಡಲು ತಂದೆ ಎಷ್ಟು ಸಾರಿ ಪತ್ರ ಬರೆದರೂ ಸ್ಪಂದಿಸುತ್ತಿಲ್ಲ. ತಂದೆಯಾಗಿ ತಮ್ಮ ಬದುಕಿನ ಕರ್ತವ್ಯವನ್ನು ನಿರ್ವಹಿಸದಿದ್ದರೆ ಲೋಕಾಪವಾದದ ಭಯ ವೃದ್ಧರನ್ನು ಕಾಡಿದೆ. ಮುಂಬಯಿಗೆ ವಿಷಯವನ್ನಿಟ್ಟುಕೊಂಡು, ಮಗನ ಸಂಸಾರ ನೋಡಲು ಬಂದ ವೃದ್ಧರಿಗೆ, ಅಲ್ಲಿನ ನಗರೀಕರಣದ ಕೃತ್ರಿಮತೆ, ಮಗ, ಸೊಸೆಯಂದಿರ ನಯಗಾರಿಕೆ, ಸ್ವಾರ್ಥ, ಬೇಜವಾಬ್ದಾರಿ, ಬರಿ ಬಾಯಿಮಾತಿನ ಉಪಚಾರ ಕಂಡು ಬೇಸರವಾಗುತ್ತದೆ. ತಮ್ಮ ಬದುಕಿನ ಕೊನೆಗಾಲದ ಅಭದ್ರತೆಯ ಅರಿವಾಗುತ್ತದೆ. ತಾವು ಮೊದಲೇ ನಿರ್ಧರಿಸಿದ್ದಂತೆ ವಿಚಾರವನ್ನು ಮುಂದಿಡುತ್ತಾರೆ.

> 'ನೋಡು ರಮೇಶ. . ನನಗೂ ನಾಕು ತಿಂಗಳಾಚೆ ನಿವೃತ್ತಿ ಬಂತು. ಇನ್ಸೂರನ್ಸ..ಗ್ರೇಚ್ಯುಟಿ.. ಅಂತ ಸುಮಾರು ಒಂದು ಲಕ್ಷದಷ್ಟು ಕೈಗೆ ಬಂದಿತ್ತು. ಹಣ ಇರುವಾಗ್ಲೆ ಜವಾಬ್ದಾರಿ ಮುಗೀಲಿ ಅಂತ ಸಾವಿತ್ರಿ ಮದುವೆ ವಿಚಾರ ಮಾಡಿ ವರ ನಿರ್ಧರಿಸಿದ್ದೇನೆ.'[೨೯]

ವೃದ್ಧರಿಗೆ (ಮಧ್ಯಮ ವರ್ಗದ ಎಲ್ಲ ಹಿರಿ ಜೀವಗಳು) ತಮ್ಮ ಮುಂದಿನ ಬದುಕಿನ ಅಭದ್ರತೆಗಿಂತ ಮಗಳ ಭವಿಷ್ಯದ ಅತಂತ್ರತೆಯ ನೋವು ಹೆಚ್ಚು ಕಾಡಿದೆ. ನಿವೃತ್ತ ಬದುಕಿನ ಆರಂಭಿಕ ಅಭದ್ರತೆಯಲ್ಲಿ ಮಗಳ ಮದುವೆ ಮುಗಿಸುವ ಕಾತುರ ಈ ಸಂದರ್ಭದಲ್ಲಿ ಸೋಜಿಗವಲ್ಲದಿದ್ದರೂ ಸಮಯೋಚಿತವಾದದ್ದು. ಗಂಡು ಮಗನಿಗೆ ತಮ್ಮ ನಿರ್ಧಾರ ತಿಳಿಸಿ ಗ್ರಾಮಕ್ಕೆ ಬಂದ ವೃದ್ಧರು ಮಗಳು ಸಾವಿತ್ರಿ ತೋರುವ ತಂದೆಯ ಪ್ರೀತಿಯ ನಡುವೆ ತಮ್ಮನ್ನೇ ತಾವು ಪ್ರಶ್ನಿಸಿಕೊಳ್ಳುತ್ತಾರೆ. "ಈ ಸಾವಿತ್ರಿಯನ್ನೂ ಈಗ ಮದುವೆ ಮಾಡ ಹೊರಟಿದ್ದೇನೆ. ಆಮೇಲೆ ಇವಳೂ ತನ್ನ ಗಂಡ, ಮಕ್ಕಳು, ಮನೆ ..?" (ಪುಟ ೩೩) ಗಂಡು ಮಕ್ಕಳಂತೆ ಈ ಹೆಣ್ಣು ಮಗಳೂ ಸಂಸಾರ ಸ್ವಾರ್ಥಕ್ಕೆ ಒಳಗಾದರೆ ಈ ವೃದ್ಧನ ಗತಿ ಎಂಬ ತಲ್ಲಣ ಇಂತಹ ಯೋಚನೆಯ ಹಿಂದಿರುವುದು ಖಚಿತವಾಗಿದೆ. ಈ ಸಂದರ್ಭದ ಜೊತೆಗೆ ರಾಘವೇಂದ್ರ ಖಾಸನೀಸ ಅವರ 'ಅಲ್ಲಾವುದ್ದೀನನ ಅದ್ಭುತ ದೀಪ' ಕತೆಯ ವೃಂದಾ ಅತ್ತಿಗೆಯ ಪರಿಸ್ಥಿತಿಯನ್ನು ಗಮನಿಸೋಣ. ತನ್ನ ಮೈದುನ ಸತ್ಯಬೋಧ ತಾನು ಮಾಡದ ತಪ್ಪಿಗೆ ಮಧ್ಯರಾತ್ರಿ ಮನೆ (ಗ್ರಾಮ) ಬಿಟ್ಟು ಹೊರಟು ಹೋಗಿ ಅನೇಕ ವರ್ಷಗಳು ಕಳೆದಿವೆ. ವೃಂದಾಳ ಓರಗಿತ್ತಿ ಅಂಬಕ್ಕಳ ಕುಟುಂಬ ವಿಘಟನೆಯ ಸಂಚು, ವಿಕೃತ ಬುದ್ಧಿಗಳು ಆ ಕುಟುಂಬವನ್ನು, ಹಿರಿಯ ಜೀವಗಳನ್ನು ಅಭದ್ರತೆಯತ್ತ ನೂಕುತ್ತವೆ. ವೃಂದಾ ಮಗ ವಾಸುವನ್ನು ಕರೆದು ಹೇಳುವ ಈ ಮಾತನ್ನು ದಾಖಲಿಸಬಹುದು.

> 'ಇವರು (ಗಂಡ) ಸಾಯುವ ಕಡೆಯ ಕ್ಷಣದವರೆಗೂ ಪೂಜೆ ಮಾಡಿದ ವೆಂಕಟೇಶ್ವರನ ಆಣೆ ಮಾಡಿ ಹೇಳುತ್ತೇನೆ, ಈ ಆಭರಣಗಳೆಲ್ಲ ನನ್ನವು. ಬಂಗಾರದ ಈ ಗೋಟು ಪಾಟಲಿಗಳು ನನ್ನವು. ಇವೆಲ್ಲವುಗಳನ್ನು ನನ್ನ ತಾಯಿ ನನಗೆ ಕೊಟ್ಟಿದ್ದಾಳೆ. ಈ ಪಾಪಿ (ಅಂಬಕ್ಕ) ಹೇಳುತ್ತಾಳೆ, ಹೊಲ–ಮನೆ ಪಾಲು ಮಾಡಿದಂತೆ, ಇವುಗಳನ್ನೂ ಪಾಲು ಮಾಡಬೇಕಂತೆ. ಇಂತ ಪರಿಸ್ಥಿತಿಯಲ್ಲಿ ಸತ್ಯಬೋಧನೊಬ್ಬ ಮಾತ್ರ ನನ್ನನ್ನು ಈ ಮನೆಯಲ್ಲಿ ಉಳಿಸಬಲ್ಲ..'[೩೦]

ಸತ್ಯವನ್ನು ಬಚ್ಚಿಟ್ಟುಕೊಂಡು ನಗರ ಸೇರಿದ ಮೈದುನ ಮಾತ್ರ ಸತ್ಯವನ್ನು ಪ್ರಕಟಪಡಿಸಿ ನನಗೆ ಭದ್ರತೆ ಕೊಡಬಲ್ಲ ಎಂಬ ಅವಳ ಮಾತು ವೃದ್ಧರ ಅಧೀರತೆ, ಅತಂತ್ರತೆಗಳ ಸಂಕೇತವೆನ್ನಬಹುದು. ಹಾಗಾದರೆ ಇಲ್ಲಿ ಸತ್ಯ ಯಾವುದು? ಅಂಬಕ್ಕಳ ಲೈಂಗಿಕ ದೌರ್ಜನ್ಯಕ್ಕೆ ಒಳಗಾಗಿ, ಪುರುಷನದೇ ತಪ್ಪು ಎಂಬ ಆರೋಪ ಹೊತ್ತುಕೊಂಡು ಗ್ರಾಮ ನಿರಾಕರಿಸಿದ ಸತ್ಯಬೋಧ ಇದ್ದಿದ್ದರೆ, (ಅಥವಾ ಇಂದು ಇಲ್ಲಿಗೆ ಬಂದರೆ) ಅಂಬಕ್ಕಳ ಜಾರ ಬುದ್ಧಿಯನ್ನು ಪ್ರಚುರಪಡಿಸಿ ಸಾಮಾಜಿಕ, ಕೌಟುಂಬಿಕ ಭದ್ರತೆಯನ್ನು ವೃಂದಾ ಅತ್ತಿಗೆಗೆ ನೀಡಬಹುದು, ಎಂಬ ದೂರದಾಸೆ ಈ ಅಶಕ್ತ ಮಹಿಳೆಯದಾಗಿದೆ.

ವ್ಯಾಸರಾಯ ಬಲ್ಲಾಳ ಅವರ 'ನಿವೃತ್ತಿ' ಕತೆಯು ಕೇಶವನ ಅಂತರಂಗವೂ ಇದೆ ರೀತಿಯ ಅಧೀರತೆ, ಭಯದಿಂದ ತುಂಬಿಕೊಂಡಿದೆ. ಗ್ರಾಮ ನಿರಾಕರಿಸಿ ನಗರದಲ್ಲಿ ಹತ್ತಾರು ವರ್ಷ ನೌಕರಿ ಮಾಡಿ ಈಗ ನಿವೃತ್ತಿ ಹೊಂದುತ್ತಿರುವ ಕೇಶವನ ಮುಂದಿನ ದಾರಿ ಅಸ್ಪಷ್ಟವಾದದ್ದು. ತೀರಿಕೊಂಡ ಮಗು ವಸಂತನ ನೆನಪಿನಲ್ಲಿ ಕೊರಗುತ್ತಿರುವ ವಯಸ್ಸಾದ ಕುರೂಪಿ ಹೆಂಡತಿಗೆ ಯಾರು ನೌಕರಿ ಕೊಡುತ್ತಾರೆ, ಅವಳನ್ನು ಸಾಕಿ ಸಲುಹಲು ಮತ್ತೇ ನೌಕರಿ ಹಿಡಿಯಬೇಕೆಂದರೂ ಇಂದಿನ ಯುವ ಜನಾಂಗದೊಡನೆ ಸ್ಪರ್ಧೆ ಸಾಧ್ಯವೆ ಎಂಬ ಸಾಮಾಜಿಕ, ಆರ್ಥಿಕ ಅಸಂಭಾವ್ಯತೆಗಳು ಅವರನ್ನು ದ್ವಂದ್ವದಲ್ಲಿ ಮುಳುಗಿಸಿವೆ.

> 'ಅರ್ಧ ಉರಿಸಿ ಆರಿಸಿ ಹಾಗೇ ಇಟ್ಟಿದ್ದ ಸಿಗರೇಟಿನ ತುಂಡೊಂದನ್ನು ಕಿಸೆಯಿಂದ ತೆಗೆದು ಮತ್ತೇ ಬಾಯಿಗೆ ತುರುಕಿಕೊಂಡು ಅದಕ್ಕೆ ಬೆಂಕಿ ಹಚ್ಚಿದ."' ವಿವಾಹಿತ ಜೀವನದ ಐದು ವರ್ಷ ವ್ಯರ್ಥ ಹೌದು. ಆದರೆ ಮುಂದಿನ ದಾರಿ? ಈ ತಿಂಗಳು ಅಂತ್ಯಕ್ಕೆ ನಿವೃತ್ತಿ ದೊರಕುವಾಗ ಮತ್ತೆ?' (ಪುಟ ೨೩೨)

ತನ್ನನ್ನು, ತನ್ನ ಹೆಂಡತಿಯನ್ನು ಸಾಕಲು ಮಕ್ಕಳಿಲ್ಲದಿರುವ ಚಿಂತೆ, ವ್ಯಗ್ರತೆಗಳನ್ನು ಕೇಶವನ ಅನಿಸಿಕೆಗಳಲ್ಲಿ ಗುರುತಿಸುತ್ತೇವೆ. ಮೇಲಿನ ಸಂದರ್ಭಗಳನ್ನು ಅವಲೋಕಿಸಿದಾಗ, ಇಂದಿನ ಸಾಮಾಜಿಕ ಸಂದರ್ಭದಲ್ಲಿ ಹಿರಿಯ ನಾಗರಿಕರ ಜೀವನದ ಅಭದ್ರತೆಯ ಮೇಲೆ ಬೆಳಕು ಚೆಲ್ಲುವ ಅನೇಕ ಅಂಶಗಳು ಸಾಹಿತ್ಯದ ಹಿನ್ನೆಲೆಯಲ್ಲಿ ಕಂಡುಬರುತ್ತವೆ. ನಮ್ಮ ಸಾಮಾಜಿಕ ರಚನೆಯ ವಿನ್ಯಾಸವನ್ನು ರೂಪಿಸುವ ಪ್ರಬಲ ಶಕ್ತಿ ಕುಟುಂಬ ವ್ಯವಸ್ಥೆಯ ಬಂಧವಾಗಿದೆ. ತಂದೆ, ತಾಯಿ, ಅಣ್ಣ, ತಂಗಿ ಹೀಗೆ ಕುಟುಂಬದ ಬೇರು, ಬಿಳಲುಗಳ ರಕ್ತ ಸಂಬಂಧದ ಆಧಾರ, ಪರಸ್ಪರ ಆರ್ಥಿಕ ಸಂಬಂಧದ ಬಂಧವೂ ಹೌದು. ಉಪಭೋಗ ಸಂಸ್ಕೃತಿ ಪ್ರಧಾನವಾಗಿರುವ ಇಂದಿನ (ಜಾಗತೀಕರಣ, ನಗರೀಕರಣದ) ದಿನಗಳಲ್ಲಿ, ಉಪಯೋಗಿಸಿ ಬಿಸಾಡುವ ಪ್ರವೃತ್ತಿ (Use and Throw Culture) ಎಲ್ಲ ಕ್ಷೇತ್ರವನ್ನು ವ್ಯಾಪಿಸಿದೆ. ಈ ಪ್ರವೃತ್ತಿಯು ಇಂದು ಕೌಟುಂಬಿಕ, ಮಾನವೀಯ ಸಂಬಂಧಗಳನ್ನೂ ಒಳಗೊಂಡಿದೆಯೆಂದರೆ ಅತಿಶಯೋಕ್ತಿಯಲ್ಲ. ಬಾಲ್ಯದಲ್ಲಿ ಓದಿಸಿ, ಬೆಳೆಸಿ ದೊಡ್ಡವರನ್ನಾಗಿ ಮಾಡಿದ ತಂದೆ ತಾಯಿಗಳನ್ನೂ, ಸಹಕರಿಸಿದ ಅಣ್ಣ, ತಮ್ಮಂದಿರನ್ನು ಮರೆತು ಬಿಡುವ, ತೊರೆಯುವ, ಕೌಟುಂಬಿಕ ವಿಘಟನೆಗೆ ಈ ಪ್ರವೃತ್ತಿ ಕಾರಣವಾಗುತ್ತಿದೆ. ಸಮಕಾಲೀನ ಸಂದರ್ಭದಲ್ಲಿ ನಗರದ ವೃದ್ಧರು, ತಮ್ಮ ಮಕ್ಕಳ, ಕೌಟುಂಬಿಕ ನಿರಾಕರಣೆಯನ್ನು ಆತಂಕ, ತಲ್ಲಣ, ಅನಾಥಭಾವದಿಂದ ಎದುರಿಸಿ ವೃದ್ಧಾಶ್ರಮದ ಮೊರೆ ಹೋಗುತ್ತಾರೆ. ಆದರೆ, ಹಳ್ಳಿಯ ವೃದ್ಧ ಪೋಷಕರು ನಿರ್ಧಾರ ತೆಗೆದುಕೊಳ್ಳುವಲ್ಲಿ ಸ್ವಲ್ಪ ಧೃಡತೆ ತೋರಿ, ಬದುಕನ್ನು ಎದುರಿಸುತ್ತಾರೆ. ವೃದ್ಧಾಪ್ಯದ ಜೊತೆ ಜೊತೆಗೆ ಭೀತಿಯನ್ನು ಎದುರಿಸಬೇಕಾದ ಮಾನಸಿಕ ಸಂಕಟಗಳು ಈ ವೃದ್ಧರನ್ನು ಕಾಡುವುದು ನೋಡಿದರೆ, ಭೀತಿ ಸಾವಿನ ಸಂಕೇತವೆ, ಅಥವಾ ಸಾಮಾಜಿಕ, ಕೌಟುಂಬಿಕ ಅಭದ್ರತೆಯ ಸಂಕೇತವೆ ಎಂಬ ಅಂಶ ಅಧ್ಯಯನವನ್ನು ಚಿಂತನೆಗೆ ಈಡು ಮಾಡುತ್ತದೆ. ಸಾಮಾಜಿಕ, ಕೌಟುಂಬಿಕ ಅಭದ್ರತೆಯ ಜೊತೆಗೆ ಸಾವಿನ ಭೀತಿ ಇವರಲ್ಲಿರುವುದು ಸ್ಪಷ್ಟವಿದೆ ಎಂಬುದು ಅಧ್ಯಯನದ ನಿಲುವಾಗಿದೆ.

**ಕ. ಜಾಗತೀಕರಣ ಮತ್ತು ಸಂಘರ್ಷ**

ಜಾಗತೀಕರಣ, ಮುಕ್ತ ಮಾರುಕಟ್ಟೆಯಂತಹ ಜಾಗತಿಕ ಒಪ್ಪಂದಗಳು ಭಾರತದಂತಹ ಅಭಿವೃದ್ಧಿಶೀಲ ದೇಶಗಳ ಆರ್ಥಿಕ ವ್ಯವಸ್ಥೆಗಳ ಮೇಲೆ ವಿಷಮ ಪರಿಣಾಮವನ್ನು ಉಂಟುಮಾಡಿವೆ. ರೈತ, ಕಾರ್ಮಿಕ, ವ್ಯಾಪಾರಿ, ವ್ಯಾಪಾರಿ ಮಧ್ಯವರ್ತಿಗಳ ಮೇಲಾದ ಪರಿಣಾಮಗಳು ಬೇರೆಯದೆ ಆದ ಆಯಾಮ ಪಡೆದುಕೊಂಡರೆ, ಮಧ್ಯಮ ವರ್ಗದ ನೌಕರರು, ಕುಟುಂಬಗಳು ಅದರ ಪ್ರಭಾವಕ್ಕೆ ಸಿಕ್ಕು ನಲುಗಿ ಹೋಗಿವೆ. ಜಾಗತೀಕರಣದ ಪ್ರಭಾವದಿಂದ ಉಂಟಾದ ಒಳ್ಳೆಯ ಮತ್ತು ಕೆಟ್ಟ ಪರಿಣಾಮಗಳನ್ನು

ಮಧ್ಯಮ ವರ್ಗದ ಜನರು ಪಡೆದಾಗ ಅನುಭವಿಸಬಹುದಾದ ದುಗುಡ, ಆತಂಕ, ಬದಲಾವಣೆಗಳನ್ನು ಪ್ರಸ್ತುತ ಕಥನ ಸಾಹಿತ್ಯದಲ್ಲಿ ಹಿಡಿದಿಡಲಾಗಿದೆ.

**ಜಾಗತೀಕರಣ : ವೈಯಕ್ತಿಕ / ಕೌಟುಂಬಿಕ ಮುಖಾಮುಖಿ**

ಅಶೋಕ ಹೆಗಡೆ ಅವರ 'ಅಂತರದಂಗೆ' ಕತೆಯ ಮಧ್ಯವಯಸ್ಸು ದಾಟಿದ ಮನೋಹರ ಜಾಗತೀಕರಣದ ತೀಕ್ಷ್ಣ ಪರಿಣಾಮಗಳಿಗೆ ಮುಖಾಮುಖಿಯಾಗುತ್ತಾನೆ. ಕುಗ್ರಾಮವೊಂದರ ರಾಷ್ಟ್ರೀಕೃತ ಬ್ಯಾಂಕೊಂದರಲ್ಲಿ ಉದ್ಯೋಗಿಯಾಗಿದ್ದ ಮನೋಹರ ಜಾಗತೀಕರಣದ ಪ್ರಭಾವಕ್ಕೆ ಒಳಗಾಗಿ ಕೆಲಸಕ್ಕೆ ರಾಜೀನಾಮೆ ಕೊಟ್ಟು (ಸಹೋದ್ಯೋಗಿ ಹೆಂಡತಿಯನ್ನು ಗ್ರಾಮದಲ್ಲಿಯೇ ಬಿಟ್ಟು) ನಗರದ ಖಾಸಗಿ ಬ್ಯಾಂಕೊಂದನ್ನು ಸೇರುತ್ತಾನೆ. ಕೆಲವೇ ದಿನಗಳಲ್ಲಿ ಬ್ಯಾಂಕು ಮುಚ್ಚಿ ಅವನು ಬೇರೆ ಕಂಪನಿಯಲ್ಲಿ ಕೆಲಸ ಹುಡುಕಿಕೊಳ್ಳಬೇಕಾಗುತ್ತದೆ. ಒಂದೆರಡು ಕಂಪನಿಗಳು ಆವನನ್ನು ಕೆಲಸದಿಂದ ತೆಗೆದುಹಾಕುತ್ತವೆ. ಜಾಗತೀಕರಣದ ತೀವ್ರ ಪ್ರಭಾವದಿಂದ ಪರಸ್ಪರ ಅಪರಿಚಿತರಾದ ಮನುಷ್ಯರ ಲೋಕದಲ್ಲಿ ಜೀವನ ವ್ಯಾಪಾರೀಕರಣವಾಗಿದೆ. ಲಿಫ್ಟಿನೊಳಗೆ ಒಂದಾಗಿಯೇ ನಿಂತರೂ, ಬೇರೆಯಾಗಿಯೇ ಉಳಿಯುವ ಜನರ ಮುಖದಲ್ಲಿ ನಗೆಯ ಸೆಲೆಯಿಲ್ಲ. ಗಂಡಸಾಗುವ ಮಾತ್ರೆಯ ಬಗ್ಗೆ, ಉದುರುವ ತಲೆ ಕೂದಲನ್ನು ನಿಲ್ಲಿಸುವುದರ ಬಗ್ಗೆ, ಕ್ರೆಡಿಟ್ ಕಾರ್ಡು, ಹೊಸ ಮಾದರಿಯ ಮೊಬೈಲ್ ಹೀಗೆ ವ್ಯಾಪಾರೀಕೃತ ಬದುಕು ಅವನನ್ನು ಒಳಗೊಳ್ಳದ ಬದುಕಾಗಿ ಕಾಡುತ್ತದೆ. ಬಾಲ್ಯದ ಗ್ರಾಮಬದುಕಿನ ನೆನಪು ದ್ವಂದ್ವವಾಗಿ ಕಾಡುತ್ತದೆ.

> 'ಮನುವಿಗೆ ಅಜ್ಜ ನೆನಪಾದ, ಅಪ್ಪಯ್ಯ ನೆನಪಾದ. ಇರುವ ಸಣ್ಣ ಹಳ್ಳಿಯಲ್ಲಿ, ನೇತು ಹಾಕಿದ ಗಾಂಧಿ ಫೋಟೋದ ಕೆಳಗೆ, ಎಷ್ಟು ಸರಳವಾಗಿ ಜೀವನ ಕಳೆದು ಬಿಟ್ಟರು. ಊರಿನಲ್ಲಿರುವ ತಾನು ಕಲಿತ ಶಾಲೆ ಈಗಲೂ ಹಾಗೆಯೇ ಇದೆ. ಆದರೆ ಗಾಂಧೀಜಿಯ ಬಗ್ಗೆ ಮಾತ್ರ ಯಾರೂ ಮಾತನಾಡುವುದಿಲ್ಲ.'[೨೨]

ಒಮ್ಮೆ ಪ್ರಶಾಂತ ಜೀವನಕ್ಕೆ ಹೊಂದಿಕೊಂಡ ಒಂದು ವ್ಯಕ್ತಿತ್ವ ತಕ್ಷಣ ಬದಲಾದ ವ್ಯಾಪಾರಿ ಜಗತ್ತಿಗೆ ಹೊಂದಿಕೊಳ್ಳುವುದಿಲ್ಲ. ಹಿರಿಯ ತಲೆಮಾರಿನ ಜನರ ಮಾನಸಿಕ ಸಿದ್ಧತೆ ಯುವಕರೊಂದಿಗಿನ ಸ್ಪರ್ಧೆಯಲ್ಲಿ ಹಿಂದೆ ಬೀಳುವಂತೆ ಮಾಡುತ್ತದೆ. ಬದಲಾವಣೆಯನ್ನು ಒಪ್ಪಿಕೊಂಡು ಬಂದ ಮನಸ್ಸಿಗೆ ದೈಹಿಕ, ಬೌದ್ಧಿಕ ಸಮತೋಲನಶಕ್ತಿ ಇಲ್ಲದ ಕಾರಣ ಮನೋಹರನಂಥ ವ್ಯಕ್ತಿಗಳು ವೇಗದ ಬದುಕಿಗೆ ಒಗ್ಗುವುದಿಲ್ಲ. ಜಾಗತೀಕರಣದಿಂದ ಮನುಷ್ಯ ಸಂಬಂಧಗಳು ಕೊಚ್ಚಿ ಹೋಗುತ್ತಿರುವ ಈ ಸಂದರ್ಭದಲ್ಲಿ ಮಾನವೀಯ ಸಂಬಂಧ ನಂಬಿ, ಹಣವಿಲ್ಲದೆ ಬದುಕುವುದಾದರೂ ಹೇಗೆ ಎಂಬ ಪ್ರಶ್ನೆ ಒಂದು ತಲೆಮಾರಿನ ಜನಾಂಗದ ಸಮಸ್ಯೆಯಾಗಿದೆ. ಜಾಗತೀಕರಣದ ಮಾರುವ-ಕೊಳ್ಳುವ (ಇದೊಂದು ತರದ ಹಸಿವು) ಸಂಸ್ಕೃತಿಯಲ್ಲಿ, ವ್ಯಾಪಾರಿ ನಾಗರಿಕತೆಯಲ್ಲಿ ಹಳೆಯ (ಮನೋಹರನಂತಹ) ತಲೆಮಾರು ಕಳೆದು ಹೋಗುತ್ತಿದೆ. ಅದರ ಜೊತೆಗೆ ಹೊಂದಿಕೊಂಡು ಬದುಕಲಾರದ ವೃದ್ಧಾಪ್ಯದ ಭೀತಿ ಇದಕ್ಕೆ ಸೂಕ್ಷ್ಮವಾಗಿ ಕಾರಣವಾಗುತ್ತದೆ ಎನ್ನಬಹುದು. ಮುಪ್ಪು ಬದುಕಿನ ಒಂದು ಅನಿವಾರ್ಯ ಸ್ಥಿತಿ ನಿಜ, ಆದರೆ ಸಮಕಾಲೀನ ಸಾಮಾಜಿಕ ಸಂದರ್ಭದಲ್ಲಿ (ಜಾಗತೀಕರಣದ ಏಟಿಗೆ ಬಲಿಯಾದ) ವೃದ್ಧರು ಎದುರಿಸುತ್ತಿರುವ ಆತಂಕ, ತಲ್ಲಣ, ಅನಾಥಭಾವ, ಮಾನಸಿಕ ಯಾತನೆಗಳು ವಯಸ್ಸಾದವರಿಗೆ ಮಾತ್ರ ಯಾಕೆ ಕಾಡುತ್ತವೆ ಎಂಬುದು ಪ್ರಮುಖ ಪ್ರಶ್ನೆಯಾಗಿದೆ. ಒಂದು ಜೀವನ ಸಿದ್ಧಾಂತಕ್ಕೆ ಹೊಂದಿಕೊಂಡ ಜೀವಗಳು ಹೊಸದನ್ನು ಸ್ವೀಕರಿಸುವಾಗ ಇಡುವ ತಪ್ಪು ಹೆಜ್ಜೆಗಳು, ಅದರ ಪರಿಣಾಮ, ಕುಟುಂಬಗಳ ವಿಘಟನೆಯೊಂದಿಗೆ ಯಾತನಾಮಯವಾಗುತ್ತವೆ ಎಂಬುದು ಅಧ್ಯಯನದ ನಿಲುವಾಗಿದೆ.

ಇದೇ ರೀತಿಯ ಸಂದರ್ಭವು ಗಿರಿ (ಎಂ.ಎನ್. ಹೆಗಡೆ) ಅವರ 'ಗತಿ, ಸ್ಥಿತಿ' ಕಾದಂಬರಿಯ ನಿರುದ್ಯೋಗಿಗಳಾದ ಅವರ (ಆತನು ಮತ್ತು ಅವಳು, ಇಬ್ಬರಿಗೂ ನಿಶ್ಚಿತವಾಗಿ ಹೇಳ ಹೆಸರಿಲ್ಲವಾದ್ದರಿಂದ ಇವರು ಭಾರತದ ಯಾರೂ ಆಗಬಹುದೆಂಬ ಧ್ವನಿಶಕ್ತಿ ಇಲ್ಲಿ ವ್ಯಕ್ತವಾಗಿದೆ) ಪಾಲಿಗೂ ಬಂದಿದ್ದು, ಅದರ ಕುರಿತು ಚರ್ಚೆ ಇಲ್ಲಿ ಪ್ರಸ್ತುತವೆನಿಸುತ್ತದೆ. ಮಲೆನಾಡಿನ ಹಳ್ಳಿಯೊಂದರಲ್ಲಿ ಹುಟ್ಟಿ ಬೆಳೆದ ಆತ ಬೆಂಗಳೂರಿನಲ್ಲಿ ಓದಿ ನೌಕರಿಗಾಗಿ ಆರು ತಿಂಗಳು ಅಲೆದು ಕೊನೆಗೆ ಹತ್ತಿರದ ಬಿಸಿಲ ನಗರಕ್ಕೆ ಅವಳೊಂದಿಗೆ ಬರುತ್ತಾನೆ. ಆಕೆ ಕೆಲಸಕ್ಕೆ ಸೇರಿಕೊಳ್ಳುತ್ತಾಳೆ, ಅತನ ಉದ್ಯೋಗ ಅನಿಶ್ಚಿತವಾಗುತ್ತದೆ. ಅವಳು ತನಗೆ ಕೊಟ್ಟ ಕೆಲಸಕ್ಕೆ ಬೇಸತ್ತರೆ, ಆವನಿಗೆ ಕಾಯುವುದು ಬೇಸರವನ್ನು ಉಂಟುಮಾಡುತ್ತದೆ.

ಇಬ್ಬರ ಬದುಕಿನ ಅನಿವಾರ್ಯ ಆಸರೆಯಾಗಿ ಬಿಸಿಲು ನಗರ ಅವರನ್ನು ಬರಮಾಡಿಕೊಂಡರೂ, ಅದು ವ್ಯವಸ್ಥೆಯ ಅವ್ಯವಸ್ಥೆಯನ್ನು ತೆರೆದಿಡುವ ನಾಗರಿಕತೆಯ ಸಂಕೇತವಾಗಿದೆ. ಇಡೀ ಬಿಸಿಲ ನಗರ ಒಂದು ಬಂಧಿಖಾನೆಯಾಗಿ ಕಾಣುವ ಹಂತದಲ್ಲಿ ಆತನ ಮನಸ್ಸು ಹಳ್ಳಿಯನ್ನು ಜ್ಞಾಪಿಸಿಕೊಳ್ಳುವುದು ಅವನ ಮೂಲ ನೆಲೆ ಗ್ರಾಮ ಮತ್ತು ಗ್ರಾಮದ ಟಿಪಿಕಲ್ ವ್ಯಕ್ತಿತ್ವವಾಗಿದೆ.

> ‘. ..ಥತ್ ಬಿಸಿಲೇ, ಬೋಳಿ ಮಗನೇ, ಕೊಳಕು ಗಲ್ಲಿಗಳೇ, ಗಾಣಗಲ್ಲುಗಳೇ.. ..ಗಾಜಿಲ್ಲದ ಸೀಮೆಯೆಣ್ಣೆಯ ಬುಡ್ಡಿ ದೀಪದ ಎದುರು ಕುಳಿತುಕೊಂಡು ತೊಡೆಯ ಮೇಲೆ ಪಾಟಿ ಇಟ್ಟುಕೊಂಡು ಬಗ್ಗಿ ಬಾಗಿ ಅ ಆ ಇ ಈ ಬರೆಯುತ್ತಿರುವಾಗ ಈ ತಲೆಗೂದಲು ದೀಪಕ್ಕೆ ತಾಗಿ ಚರಚರ ಸುಟ್ಟಂತೆ ಸುಟ್ಟುಹೋಗಬಹುದು. ಅದರೆ ತಲೆಗೆ ಎಣ್ಣೆ ಹಾಕಿಕೊಂಡರೆ ತಲೆಯೊಂದು ನರಕದ ಕೊಪ್ಪರಿಗೆಯಾಗಬಹುದು. ಎಣ್ಣೆ ಹಾಕಿಕೊಳ್ಳದಿದ್ದರೆ ತಲೆ ಒಣಗಿದ ಹುಲ್ಲಿನ ಮೆದೆ-ಬೆಂಕಿಗೆ ತುತ್ತಾದ ಮೆದೆ.’”

ಈ ಅನಿಸಿಕೆಯಲ್ಲಿನ ಎಲ್ಲ ರೂಪಕಗಳು ಗ್ರಾಮೀಣ ಬದುಕಿನ ವಸ್ತುಗಳೇ ಆಗಿದ್ದು, ಅದರ ಕ್ರಿಯೆ ನಾಶವನ್ನೇ ಹೇಳುತ್ತದೆ. ಇಂತಹ ನಾಶವನ್ನು ಊಹಿಸುವಾಗಲೂ ಆತನ ಚಿತ್ತಭಿತ್ತಿಯಲ್ಲಿ ಬಾಲ್ಯದ ಬದುಕು ನೆನಪಾಗಿ ಕಾಡಿದೆ. ಕಾದಂಬರಿಯ ಅಂತರಂಗದಲ್ಲಿ ನಗರದ ಬದುಕಿನಲ್ಲಿ ಹಾಸು ಹೊಕ್ಕಾದ ಭ್ರಷ್ಟತೆ, ಉಸಿರುಗಟ್ಟಿಸುವ ವಾತಾವರಣ, ನೌಕರಶಾಹಿಯ ದಿವ್ಯ ನಿರ್ಲಿಪ್ತತೆ, ನಿರುದ್ಯೋಗಿಗಳ ಅಸಹಾಯಕತೆ, ಜಡತೆಗಳು ಸಂಕೀರ್ಣ ರೂಪದಲ್ಲಿ ಕಾಣಿಸಿಕೊಳ್ಳುತ್ತವೆ. ಇವುಗಳನ್ನು ಗುರುತಿಸುವ ವ್ಯಕ್ತಿಯಾದ ಆತನಲ್ಲಿ ಹೊಸದನ್ನು ನೋಡುವ ದೃಷ್ಟಿಯಲ್ಲಿನ ಸ್ಪಷ್ಟತೆ, ಸಮಗ್ರತೆ ವ್ಯಕ್ತವಾಗಿರುವುದು ಕಾಣುತ್ತದೆ. ಆತನ ಗುಣವಾದ ಒಂದೂರಿನಿಂದ ಇನ್ನೊಂದಕ್ಕೆ ಚಲಿಸುತ್ತಾ ಬೇಸರವನ್ನು ಅನುಭವಿಸುವುದು ಕಾದಂಬರಿಯ ವಸ್ತುವಾಗಿದೆ. ಇಂತಹ ಗುಣಗಳನ್ನು ಹೊಂದಿದ ವ್ಯಕ್ತಿಯ ಮೂಲ ನೆಲೆ ಒಂದು ಹಳ್ಳಿಯೆಂಬುದು ಮತ್ತು ಆತನ ಎಲ್ಲ ಗ್ರಹಿಕೆಗಳ ಹಿಂದೆ ಹಳ್ಳಿಯ ಅನುಭವದ ಲೇಪವಿದೆ ಎಂಬುದನ್ನು ಅಧ್ಯಯನದ ಗುರುತಿಸುತ್ತದೆ. ‘ಗತಿ ಸ್ಥಿತಿಯಲ್ಲಿ ಕತೆಯ ಅಂಶ ಇಲ್ಲವೆನ್ನುವಷ್ಟು ಕ್ಷೀಣವಾಗಿದೆ’” ಎಂಬುದು ಒಪ್ಪುವ ಮಾತಲ್ಲ. ಒಂದು ಜೀವನಾನುಭವ ಒಂದು ಕತೆಯ ಸಾರಾಂಶವಾಗಬಹುದು ಎಂಬುದು ಅಧ್ಯಯನದ ನಿಲುವಾಗಿದೆ. ವ್ಯಕ್ತಿಯೊಬ್ಬರ ಬಾಲ್ಯಾವಸ್ಥೆ ಅವನ ಮುಂಬರುವ ಜೀವನದ ಮಾರ್ಗಸೂಚಿಯಿದ್ದಂತೆ. ಅವರು ಬಾಲ್ಯದಲ್ಲಿ ಗಳಿಸಿಕೊಂಡ ಅನುಭವ, ಎದುರಿಸಿದ ಸಮಸ್ಯೆಗಳು, ಬೆಳೆದು ಬಂದ ಪರಿಸರ, ವ್ಯಕ್ತಿಗಳು ಅವರ ಜೀವನದುದ್ದಕ್ಕೂ ಹಸಿರಾಗಿದ್ದು, ಸದಾ ಪ್ರಭಾವಿಸುತ್ತ ಇರುತ್ತವೆ. ಅದರಲ್ಲೂ, ಬಾಲ್ಯಾವಸ್ಥೆಯಲ್ಲಿ ಗ್ರಾಮೀಣ ಪರಿಸರ ಬೀರಬಹುದಾದ ಪ್ರಭಾವಗಳು ಹೆಚ್ಚು ಪರಿಣಾಮಕಾರಿಯೆಂದು ಹೇಳಬಹುದು. ಸಾಮಾನ್ಯವಾಗಿ ಗ್ರಾಮೀಣ ಪರಿಸರದಲ್ಲಿ ಬೆಳೆದ ವ್ಯಕ್ತಿಗಳು ಸೂಕ್ಷ್ಮಗ್ರಾಹಿಗಳೂ, ತಾವು ಕಂಡಿದ್ದನ್ನು ಗ್ರಹಿಸುವ, ಅನುಭವಿಸುವ ಹಾಗೂ ವಿವರಿಸುವ ಸ್ವಭಾವವನ್ನು ಪಡೆದಿರುವುದು ಸ್ಪಷ್ಟವಿದೆ. ನಗರ ಬದುಕನ್ನು ಅವರು ಆಸ್ವಾದಿಸುವ, ತಮ್ಮ ಪ್ರಜ್ಞೆಗೆ ಹಿಗ್ಗಿಸಿಕೊಳ್ಳುವ ಭರಾಟೆಯಲ್ಲಿ ಅನುಭವಿಸುವ ತಬ್ಬಲಿತನ, ಪರಕೀಯತೆ, ಭ್ರಷ್ಟ ಸಮಾಜ, ಯಾಂತ್ರಿಕ ಜೀವನದ ಜಿಗುಪ್ಸೆಗಳು ಹೊರ ಹೊಮ್ಮುವ ರೀತಿ ವೈಶಿಷ್ಟ್ಯಪೂರ್ಣವಾದದ್ದು.

**ಜಾಗತೀಕರಣ : ಸಮಾಜೋ-ಆರ್ಥಿಕ ಮುಖಾಮುಖಿ**

ಭಾರತೀಯ ಗ್ರಾಮ/ನಗರಗಳ ಸಾಮಾಜಿಕ ಬದುಕಿನ ಮೇಲೆ ಜಾಗತೀಕರಣದ ಪ್ರಭಾವ, ಇದರಿಂದಾಗಿ ಆರ್ಥಿಕ ರಂಗದ ಮೇಲೆ ಆಗಿರುವ ವ್ಯತ್ಯಯಗಳು ಕಥನ ಸಾಹಿತ್ಯದಲ್ಲಿ ದಾಖಲಾಗಿದೆ. ಅಶೋಕ ಹೆಗಡೆ ಅವರ ‘ಅಂತರದಂಗೆ’ ಕತೆಯಲ್ಲಿ ಮನೋಹರನಿರುವ ಗ್ರಾಮ ‘ಹೆಂಡತಿ ವ್ಯಭಿಚಾರ ಮಾಡಿದಾಗಲೂ ವ್ಯಗ್ರರಾಗದ ಪುರುಷರನ್ನು ಹೊಂದಿದ ತಣ್ಣನೆಯ ಗ್ರಾಮ’ ಎಂಬ ವಿಡಂಬನೆಯಿದೆ.

> ತಣ್ಣಗಿದ್ದ ಊರು, ಇದ್ದಕ್ಕಿದ್ದಂತೆ ವಾಹನದ ಭರಾಟೆಗೆ ಸಿಕ್ಕಿಕೊಂಡಿತು. ರಾಜಕುಮಾರ ಸಿನೆಮಾದ ಬದಲು ರ್‍ಯಾಂಬೋ ರಾರಾಜಿಸಿತು. ಜಗತ್ತೇ ಕೈಯಲ್ಲಿ ಸಿಕ್ಕಂತೆ ಎಲ್ಲೆಂದರಲ್ಲಿ ಓಡಾಡುವ ಜನ, ಇದ್ದ ಸಣ್ಣ ಊರಿಗೂ ಬಂದ ಎ.ಟಿ.ಎಮ್. ಬರುವ ಒಂದೆರಡು ಗಿರಾಕಿಗಳೂ ಬ್ಯಾಂಕಿಗೆ ಬರದೇ ಒಂದೆರಡು ವರ್ಷದಲ್ಲಿ ಹೇಗೆ ಬದಲಾವಣೆಯಾಯಿತು ಊರು.”

ಇಲ್ಲಿನ ಸಂದರ್ಭದಲ್ಲಿ ಗ್ರಾಮೀಣ ಪರಿಸರ ಅನುಭವಿಸುವ ಸೌಲಭ್ಯಗಳನ್ನು ಮತ್ತು ಅದರ ಧನಾತ್ಮಕ ಹಾಗೂ ಋಣಾತ್ಮಕ ಪರಿಣಾಮಗಳನ್ನು ಕಾಣುತ್ತೇವೆ. ಟೆಂಟ್ ಸಿನೆಮಾ ಮಂದಿರಗಳ ಬದಲಾಗಿ ಡಿಜಿಟಲ್

ಡಿಸ್‌ಪ್ಲೇಗಳು, ಟಿ.ವಿ., ವೀಡಿಯೋ ಪಾರ್ಲರ್‌ಗಳು ಕಾಣಿಸಿಕೊಳ್ಳುತ್ತವೆ. ರೇಡಿಯೋ, ಟೇಪ್‌ರಿಕಾರ್ಡ್‌ಗಳ ಬದಲಾಗಿ ಆಧುನಿಕ ಆಡಿಯೋ ಉಪಕರಣಗಳು, ಮೊಬೈಲ್ ಫೋನುಗಳು ಕಡಿಮೆ ಬೆಲೆಗೆ ದೊರಕುತ್ತವೆ. ಇದು ಜಾಗತೀಕರಣದ ಒಂದು ಮುಖವಾದರೆ, ರೈತನ ಬೆಳೆಗೆ ಯೋಗ್ಯ ಬೆಲೆ ದೊರಕದಿರುವುದು, ಸರಕಾರದ ಅಸಹಕಾರದಿಂದ ಜಾಗತಿಕ ಮಾರುಕಟ್ಟೆಯಲ್ಲಿ ಭಾರತೀಯ ರೈತನ ದೀನಸ್ಥಿತಿ, ಬಿತ್ತನೆಯ ಬೀಜ, ರಾಸಾಯನಿಕ ಗೊಬ್ಬರಗಳ ಬೆಲೆ ಏರಿಕೆ, ಮೌಲ್ಯವರ್ಧಿತ ತೆರಿಗೆಯಂತಹ ಹೊಸಹೊಸ ತೆರಿಗೆಗಳ ಭಾರದಿಂದ ಜನಸಾಮಾನ್ಯರ ಜೀವನ ಮಟ್ಟ ಕುಸಿದಿದೆ. ಜಾಗತಿಕ ಮಾರುಕಟ್ಟೆಯೊಂದಿಗೆ ಪೈಪೋಟಿ ನಡೆಸುವ ಸ್ಪರ್ಧಾತ್ಮಕ ಮನೋಭಾವವಿಲ್ಲದೆ ಭಾರತೀಯ ರೈತ, ವ್ಯಾಪಾರಿ ಮತ್ತು ಕೈಗಾರಿಕೋದ್ಯಮಿಗಳು ಸೋಲುತ್ತಿದ್ದಾರೆ. ಜಾಗತಿಕರಣ ನಗರ, ಪಟ್ಟಣಗಳ ಮೇಲೂ ಆಗಾಧವಾದ ಪರಿಣಾಮ ಬೀರಿದ್ದುದು ಸ್ಪಷ್ಟವಾಗಿದೆ.

> ಕಾಲ್ ಸೆಂಟರಿನಲ್ಲಿ ರಾತ್ರಿಯಿಡೀ ದುಡಿಯುವ ಹುಡುಗರು ಹರಿದ ಪೋಸ್ಟರಿನಂತೆ ಕಾಣುತ್ತಿದ್ದರು. ರಾತ್ರಿಯೆಲ್ಲ ಎದ್ದಿರುವ ಅವರು ಈ ಲೋಕದವರಲ್ಲ ಅನಿಸುತಿತ್ತು.. (ಪುಟ ೧೦೦) ತನ್ನನ್ನು ಹೊರತಾಗಿ ಎಲ್ಲರೂ ಸುಖದಿಂದ ಇದ್ದ ಹಾಗೆ ತೋರುತ್ತಿತ್ತು. ಆದರೆ ದಿನದಿಂದ ದಿನಕ್ಕೆ ಮದುವೆಗಳು ವಿಚ್ಛೇದನೆಯಲ್ಲಿ ಮುಳುಗಿರುವುದು ಕಾಣುತ್ತಿತ್ತು. ಅವನ ಪ್ರೀತಿಯ ಬರಹಗಾರರೆಲ್ಲ ಕತೆ ಬರೆಯುವುದನ್ನು ನಿಲ್ಲಿಸಿ ಪತ್ರಿಕೆಯಲ್ಲಿ ಅಂಕಣ ಬರೆಯುತ್ತಿದ್ದರು. ಅವನು ಮೆಚ್ಚುವ ಸಂಗೀತಗಾರರೆಲ್ಲ ಜಾಹಿರಾತುಗಳಿಗಾಗಿ ಹಾಡುತ್ತಿದ್ದರು....ಈ ಓಡುವ ಆಟದಲ್ಲಿ ಈ ಹುಡುಕುವ ಆಟದಲ್ಲಿ ನಾನು ಎಲ್ಲಿ ಕಳೆದು ಹೋದೆ? ಎಂದು ಯೋಚಿಸಲು ಮನಸ್ಸು ಹೆದರುತ್ತಿತ್ತು.... (ಪುಟ ೧೦೧)

ಇದು ಯಾವುದೇ ಗ್ರಾಮ, ನಗರಗಳ ಇಂದಿನ ಸ್ಥಿತಿಯಾಗಿದ್ದು, ಮೊದಲಿದ್ದ ಶಾಂತಿಯುತ ಸಹಬಾಳ್ವೆ ಇಲ್ಲವಾಗಿ ಬದುಕು, ಸಂಬಂಧಗಳು ವ್ಯಾಪಾರೀಕರಣಗೊಂಡಿವೆ ಎಂಬ ಅಭಿಪ್ರಾಯವನ್ನು ಅಧ್ಯಯನ ಕ್ರೋಡೀಕರಿಸುತ್ತದೆ. ಜಾಗತೀಕರಣಕ್ಕೆ ಒಳಗಾದ ಮಹಾನಗರ ಮತ್ತು ಅದರ ಪರಿಸರ ಗರ್ಭಕೋಶವಿದ್ದಂತೆ. ಅದನ್ನು ಸೇರಿದ ಭ್ರೂಣವೆಂಬ ಮನುಷ್ಯನನ್ನು ತನ್ನ ಪರಿಸರಕ್ಕೆ ತಕ್ಕಂತೆ ಬೆಳೆಸುತ್ತ ಎಲ್ಲ ಪೋಷಕಾಂಶಗಳನ್ನು ನೀಡುತ್ತದೆ. ಈ ಕೋಶ ಪ್ರತಿಯೊಂದು ವ್ಯಕ್ತಿಯ ಮನಸ್ಸಿನ ಒಳ ಪದರುಗಳನ್ನು ರೂಪಿಸುವದಲ್ಲದೇ ಅವುಗಳಿಗೆ ಒಂದೊಂದು ಬಗೆಯ ವಿಶಿಷ್ಟತೆ, ವಿಕ್ಷಿಪ್ತತೆಗಳನ್ನು ಕೊಡುತ್ತದೆ ಮತ್ತು ಅವುಗಳಿಗೆ ಒಂದು ಬಗೆಯ ತೀವ್ರತೆಯನ್ನೊದಗಿಸುತ್ತದೆ. ದೇಶದ ವಿವಿಧ ಪ್ರದೇಶಗಳಿಂದ ಸಾಗರ ಸೇರುವ ನದಿಗಳೋಪಾದಿಯಲ್ಲಿ ಹರಿದು ಬರುವ ಜನತೆ ಈ ಗರ್ಭದ ಆಶ್ರಯದಲ್ಲಿಯೇ ಸಂಘರ್ಷಿಸುತ್ತ ಬೆಳೆದು ಮೂಲನೆಲೆಯ ನೆನಪಿನಲ್ಲಿ ನಗರೀಕರಣಕ್ಕೆ ಅರ್ಪಿಸಿಕೊಳ್ಳುತ್ತಾರೆ ಎಂಬುದು ಅಧ್ಯಯನದ ನಿಲುವಾಗಿದೆ.

ಜಾಗತೀಕರಣದ ಅಂತಿಮ ಘಟ್ಟ ಗ್ರಾಮ, ಗ್ರಾಮ ಸಂಸ್ಕೃತಿಯ ನಗರೀಕರಣವೆನ್ನಬಹುದು. ನಗರೀಕರಣದ ವಿಕ್ಷಿಪ್ತತೆಯಲ್ಲಿ ಮಾನವೀಯ ಅಂತಃಕರಣ ಹೇಗೆ ಕರಗಿ ಹೋಗುತ್ತದೆ ಎಂಬ ಸತ್ಯವನ್ನು ಶಂಕರ ಮೊಕಾಶಿ ಪುಣೇಕರ ಅವರ 'ಘಾಟಕೋಪರ್' ಕತೆ ನಿರೂಪಿಸಿದೆ. ಅನಿಲ ಕರ್ಣಿಕ ಎಂಬ ವ್ಯಕ್ತಿ ಮುಂಬಯಿ ನಗರದ ಒಂದು ಛಾಳದ ರೂಮೊಂದರಲ್ಲಿ ವಾಸವಾಗಿದ್ದಾನೆ. ಅವನ ನೆರೆಹೊರೆಯಲ್ಲಿನ ಒಬ್ಬ ಬಾಲಕಿಯನ್ನು ಅವನು ಪ್ರತಿದಿನ ನೋಡುತ್ತಾನೆ. ಅವಳ ಮುಖ, ಮುಗುಳ್ನಗು ಹೂವಿನಷ್ಟೆ ತಾಜಾ ಮತ್ತು ಮಧುರವಾಗಿದೆ. ಒಂದು ದಿನ ಬಾಲಕಿ ರೇಲ್ವೆ ಹಳಿ ದಾಟುವಾಗ ಕರ್ಣಿಕ ಅವಳನ್ನು ಮಾತನಾಡಿಸಿದ್ದೇ ತಪ್ಪಾಗುತ್ತದೆ,

> ಎರಡನೆಯ ಪ್ಲಾಟ್ ಫಾರಂ ಮೇಲಿನ ಗಾಡಿಯನ್ನೇ ನೆನೆಸುತ ಅವಳು ಹಳಿ ದಾಟತೊಡಗಿದ್ದಳು. ಅವಳ ಹಿಂದೆಯೇ ಸದ್ದಿಲ್ಲದೆ ಗಾಡಿ ಬರತೊಡಗಿತ್ತು. ಇನ್ನೂ ಐದಾರು ಫೂಟು ಮಾತ್ರ ಅಂತರ. ನಿಂತಲ್ಲಿಂದಲೇ ಕರ್ಣಿಕ ಕೂಗಿಕೊಂಡನು. 'Look out' ಒಂದೇ ನಿಮಿಷದ ಹಿಂದೆ ಅವನ ನಿರ್ಭತ್ಸನೆಗೆ ಒತ್ತಾದ ಬಾಲಿಕೆ ಅವನ ಧನಿ ಕೇಳಿ ಹಳಿಯ ನಡುವೇ ನಿಂತಳು. ಗರಬಡಿದಂತೆ. ಕ್ಷಣಾರ್ಧದಲ್ಲಿ ಗಾಡಿ ಅವಳನ್ನು ನೆಲಕ್ಕೆ ಚಿಮ್ಮಿ ತನ್ನ ಕೆಲಸ ಪೂರೈಸಿತು. ಅದರ ಭಾರ, ವೇಗಗಳಲ್ಲಿ ಎಚ್ಚರ ತಪ್ಪಿದ ಬಾಲಿಕೆ ಕೂಗಿಕೊಳ್ಳಲಿಲ್ಲ ಸಹ! ತನ್ನ ವಿಚಾರಭಾರದ ಕೆಳಗೆ ಸಿಕ್ಕು ಉಸಿರುಗಟ್ಟಿ ವಿಚಾರ ಶೂನ್ಯನಾದ ಕರ್ಣಿಕ ಓಡಿ ಹೋಗಿ ನಗರದ ಗಾಡಿ ಹತ್ತಿ ನಿಂತ. ಯಾರೋ ಅವನಿಗೆ ಕೈಯಾಸರೆ ಕೊಟ್ಟು ಒಳಗೆ ಎಳೆದುಕೊಂಡರು."[೪೭]

ಆ ಮುಗ್ಧ ಮಗುವಿನ ಸಾವಿಗೆ ಹೊಣೆ ಯಾರು ಎಂಬ ಪ್ರಶ್ನೆ ಕಾಡುತ್ತದೆ. ಕರ್ಣಿಕನೆ ಅಥವಾ ಸ್ವತಃ ಅವಳೆ, ಜಾಗತೀಕರಣಗೊಂಡ ನಗರವೆ, ಸಾತ್ರೆಯ ಮೂರನೆಯ ತತ್ವ ಹೊಣೆಗಾರಿಕೆಯೆ, Responsibility! ಅವಳನ್ನು ರಕ್ಷಿಸಲು ಕರ್ಣಿಕ ಅವಳಿಗೆ ಎಚ್ಚರಿಕೆ ನೀಡಿದ. ಅವನ ಧ್ವನಿ ಕೇಳಿ ಅವಳು ನಿಂತಿದ್ದು ತಪ್ಪೆ, ಇಲ್ಲದಿದ್ದರೆ ಅವಳು ಹಳಿ ದಾಟಿ ಹೋಗಬಹುದಿತ್ತು. ಈ ಸಂದರ್ಭದಲ್ಲಿ ಭಾರತೀಯ ಸಾಮಾಜಿಕ/ಆರ್ಥಿಕವ್ಯವಸ್ಥೆ ಮುಗ್ಧ ಮಗುವಾಗಿ, ಜಾಗತೀಕರಣ ಎಂಬ ದೈತ್ಯ ರೇಲ್ವೆ ಗಾಡಿಯಾಗಿ, ಜಾಗತೀಕರಣದ ಪರಿಣಾಮಗಳನ್ನು ಸೂಕ್ತವಾದ, ಸರಿ ದಿಕ್ಕಿನಲ್ಲಿ ನಿಯಂತ್ರಿಸಲಾರದ ಆಡಳಿತ 'ಕರ್ಣಿಕ' ಎಂಬ ವ್ಯಕ್ತಿಯಾಗಿ (ರೂಪಕಗಳು) ಅಧ್ಯಯನಕ್ಕೆ ಗೋಚರಿಸುತ್ತಾರೆ. ಜಾಗತೀಕರಣಗೊಂಡ ಸಾಮಾಜಿಕ, ಆರ್ಥಿಕ ವ್ಯವಸ್ಥೆಯ ನಿರ್ವಹಣೆ ಎಂದರೆ ಹುಲಿ ಸವಾರಿ ಎಂದು ವಿವೇಕ ಶಾನುಭಾಗ ಅವರ 'ಹುಲಿ ಸವಾರಿ' ಕಥೆ ನಿರೂಪಿಸುತ್ತದೆ.

ನಗರೀಕರಣ/ಜಾಗತೀಕರಣದ ಪರಿಣಾಮವಾಗಿ, ಹೊಸನೆಲೆಯಲ್ಲಿ ವ್ಯಕ್ತಿಗಳು ಎದುರಿಸುವ ಸಂಘರ್ಷಗಳ ಸ್ವರೂಪವನ್ನು ಪ್ರಸ್ತುತ ಕಥನ ಸಾಹಿತ್ಯ ಹೀಗೆ ಮುಂದಿಡುತ್ತದೆ. • ಒಂದು ತಲೆಮಾರಿನ ವ್ಯಕ್ತಿಗಳು ನಗರೀಕರಣಗೊಂಡ ಬದುಕಿನ ಜೀವನ ಶೈಲಿಗೆ ಹೊಂದಿಕೊಳ್ಳಲಾರದೆ ದ್ವಂದ್ವದಲ್ಲಿ ಸಿಲುಕಿರುವುದು ಸ್ಪಷ್ಟವಿದೆ. ಹೊಸತಲೆಮಾರಿನ ಯುವಕರು ಗ್ರಾಮ/ನಗರಗಳ ಎರಡೂ ಪರಿಸರಗಳಲ್ಲಿ ವಿವಿಧ ರೀತಿಯ ಜೀವನಶೈಲಿಗೆ ಹೊಂದಿಕೊಳ್ಳುವುದು ಕಥನ ಸಾಹಿತ್ಯದಲ್ಲಿ ದಾಖಲಾಗಿದೆ. • ಗ್ರಾಮ/ನಗರ ನಿರಾಕರಿಸಿ ಹೊಸನೆಲೆಯಲ್ಲಿ ಜೀವಮಾನಕಾಲ ಬಾಳಿ ವೃದ್ಧರಾದ ವ್ಯಕ್ತಿಗಳಿಗೆ ಬದುಕಿನ ಮುಸ್ಸಂಜೆಯ ಅಭದ್ರತೆ ಕಾಡಿ, ಅವರ ಬದುಕನ್ನು ತಲ್ಲಣಗೊಳಿಸುತ್ತದೆ. • ಜಾಗತೀಕರಣದ ಪ್ರಭಾವಗಳು ಗ್ರಾಮ/ನಗರಗಳಲ್ಲಿಯ ಜನಸಾಮಾನ್ಯರ ಕೌಟುಂಬಿಕ, ಸಾಮಾಜಿಕ, ಆರ್ಥಿಕ, ಮಾನವೀಯ ಸಂಬಂಧಗಳ ನೆಲೆಯನ್ನು ಅಭದ್ರಗೊಳಿಸಿವೆ. ಈ ಪೈಪೋಟಿಯ ಬದುಕಿನಲ್ಲಿ ಸ್ಪರ್ಧಿಸಲಾರದ ಹಿರಿಯ ತಲೆಮಾರಿನ ವ್ಯಕ್ತಿಗಳು ಪರಿಣಾಮಗಳನ್ನು ಆತಂಕದಿಂದ ನೋಡುವ ಸಂಕ್ರಮಣ ಸ್ಥಿತಿಯಲ್ಲಿರುವುದು ಕಂಡುಬರುತ್ತದೆ.

### ೫. ಮಹಿಳೆ ಮತ್ತು ಸಂಘರ್ಷ

ಮಹಿಳೆಗೆ ಸಂಬಂಧಿಸಿದ ಪ್ರತಿಯೊಂದನ್ನು ತುಚ್ಛೀಕರಿಸುವಂತಹ ಸಾಂಸ್ಕೃತಿಕ ದಾಳಿಯ ಪರಿಣಾಮವಾಗಿ ಅವಳು ತನ್ನ ಅಸ್ತಿತ್ವದ ವಿಸ್ಮೃತಿಗೆ ಒಳಗಾಗುವ ಹಂತಕ್ಕೆ ಮುಟ್ಟಿದ್ದಾಳೆ. ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಮಹಿಳೆಯರ ಗ್ರಾಮ/ನಗರ ಸಂಘರ್ಷಗಳಿಗೆ ಜಾತಿ/ವರ್ಗಮೂಲ ಹಾಗೂ ಲಿಂಗಮೂಲದ ಎರಡು ಆಯಾಮಗಳಿವೆ. ಸಾಮಾಜಿಕ, ಆರ್ಥಿಕ ಆಶ್ರಯಗಳಿಂದ ಕಳಚಿಕೊಂಡ ಮಹಿಳೆಯು ಮೊದಲು ಪುರುಷ ಪ್ರಧಾನ ವ್ಯವಸ್ಥೆಯನ್ನು, ನಂತರ ಆರ್ಥಿಕ, ಸಾಮಾಜಿಕ ಸಂಘರ್ಷವನ್ನು ಎದುರಿಸುತ್ತಾಳೆ. ಗ್ರಾಮ/ನಗರ ನಿರಾಕರಿಸುವ ಮಹಿಳೆಯು ವ್ಯಕ್ತಿಗತವಾಗಿ ಇಲ್ಲವೆ ಕೌಟುಂಬಿಕವಾಗಿ ಆರ್ಥಿಕಶಕ್ತಿ ಗಳಿಸುವುದರ ಜೊತೆಗೆ ಸಮಾಜದ ನಿಂದನೆಯನ್ನು ಸಹಿಸಿ ಸಾಮಾಜಿಕ ರಕ್ಷಣೆಯನ್ನು ಪಡೆಯುವಾಗಿನ ಸಂಘರ್ಷ, ಸಂಕಟಗಳು ಪ್ರಸ್ತುತ ಕಥನ ಸಾಹಿತ್ಯದಲ್ಲಿ ಕಂಡುಬರುತ್ತವೆ.

### ಅ. ಹಳೆ ತಲೆಮಾರಿನ ಶ್ರಮಿಕ ವರ್ಗದ ಮಹಿಳೆ ಮತ್ತು ಸಂಘರ್ಷ

ಗ್ರಾಮ/ನಗರಗಳಲ್ಲಿ ಮಹಿಳೆಯರ ಸಮಸ್ಯೆಗಳಿಗೆ ತಮ್ಮವೆ ಆದ ವಿಶಿಷ್ಟ ಆಯಾಮ, ಚೌಕಟ್ಟು ಮತ್ತು ಕ್ಲಿಷ್ಟತೆಗಳಿವೆ. ಎಲ್ಲ ಕಾಲದಲ್ಲಿ ಮಹಿಳೆಯರನ್ನು ದ್ವಿತೀಯ ದರ್ಜೆಯ ಪ್ರಜೆಯಂತೆ ನಡೆಸಿಕೊಳ್ಳುವ ಸಮಾಜ, ಆಡಳಿತಗಳು ಮಹಿಳೆಯರ ಕಷ್ಟ, ಸಮಸ್ಯೆಗಳಿಗೆ ಸ್ಪಂದಿಸುವುದಿಲ್ಲ. ಹೋರಾಟದ ಛಲವಿದ್ದ ವಿದ್ಯಾವಂತ ಮಹಿಳೆಯರು ಸಮಸ್ಯೆಗಳನ್ನು ಸಂಘರ್ಷದ ಮೂಲಕ ಪರಿಹರಿಸಿಕೊಂಡರೆ, ದುರ್ಬಲರು ಸಮಾಜದ ಶೋಷಿತ/ನಿರ್ಲಕ್ಷ ವಾಹಿನಿಗೆ ತಳ್ಳಲ್ಪಡುತ್ತಾರೆ.

ಜಾತಿಶ್ರೇಷ್ಠತೆಯ ಪೊಳ್ಳು ಬೀಜಗಳನ್ನು ಎದೆಯಾಳದಲ್ಲಿ ಬಿತ್ತಿಕೊಂಡಿದ್ದ ಗಂಡ ಮಾದೇವನೊಂದಿಗಿನ ಕೌಟುಂಬಿಕ ಸಂಘರ್ಷದಲ್ಲಿ ಹೋರಾಡುವ ಶಿವರುದ್ರ ಕಲ್ಲೋಳಿಕರ ಅವರ 'ಹೊಲಗೇರಿಯ ರಾಜಕುಮಾರ' ಕಾದಂಬರಿಯ ಸುಮತಿ ಜಾಗ್ರತಗೊಂಡ ದಲಿತ ಮಹಿಳೆಯಾಗಿದ್ದಾಳೆ. ಒಂದೇ ಜಾತಿಯವರೆಂದು ತಿಳಿದು ಮದುವೆಯಾಗಿ ಇಪ್ಪತ್ತು ವರ್ಷಗಳಷ್ಟು ಕಾಲ ಒಂದಾಗಿ ಅನ್ಯೋನ್ಯವಾಗಿದ್ದ ಎರಡು ಜೀವಗಳು ತಾವು ಬೇರೆ ಬೇರೆ ಜಾತಿಗೆ ಸೇರಿದವರೆಂದು ತಿಳಿದಾಗ ಕೇವಲ ದೇಹಗಳು ಬೇರ್ಪಡುವುದಿಲ್ಲ, ಮನಸ್ಸುಗಳೂ

ಬೇರ್ಪಡುತ್ತವೆ. ಇದು ಜಾತಿ ವ್ಯವಸ್ಥೆಗೆ ಬಲಿಯಾದ ಭಾವನಾತ್ಮಕ ಬಂಧವು ಬೇರುಸಮೇತ ಕಳಚಿಕೊಂಡ ಸ್ಥಿತಿಯಾಗಿದೆ. ತಾನು ಕ್ಷತ್ರಿಯ ಕುಲಜನೆಂದು ತಿಳಿದಾಗ ಮಾದೇವನ ಅಹಂ ಹೆಚ್ಚುತ್ತಾ ಹೋಗಿ ಅಂತಿಮವಾಗಿ ತಾನು ಬೆಳೆದು ನಿಲ್ಲಲು ಕಾರಣವಾದ ಹೊಲಗೇರಿ ಮತ್ತು ಹೊಲೆಯರು ನಾಯಿ, ನರಿ, ಹಂದಿಗಳಂತೆ ಪ್ರಾಣಿಗಳೆಂಬ ಭಾವ ಅವನಲ್ಲಿ ಬಲಿಯುತ್ತದೆ. ಅದುವರೆಗೂ ಸುಮತಿಯ ಸದ್ಗುಣಗಳನ್ನು ಮೆಚ್ಚಿಕೊಂಡು ಸಂಸಾರ ಮಾಡಿದ್ದ ಮಾದೇವ, ತಾನು ಮೇಲ್ಜಾತಿಯವನೆಂದು ತಿಳಿದಾಗ ತನ್ನ ಜಾತಿಯ ಮಾನದಂಡದಿಂದ ಅವಳ ಜಾತಿಯನ್ನು ಅಳೆಯುವ ಸ್ವಭಾವವನ್ನು ಬೆಳೆಸಿಕೊಳ್ಳುತ್ತಾನೆ. ಭಾವ ಸಂಬಂಧ, ದೇಹ ಸಂಬಂದಗಳಿಗಿಂತ ಜಾತೀಯತೆ ಎಷ್ಟು ಕ್ರೂರವಾಗಿದೆ ಎಂಬುದು ಇಲ್ಲಿ ಸೂಚಿತವಾಗಿದೆ. ತಪ್ಪು ಮಾಡಿದ ಹೆಂಡತಿಗೆ ಶ್ರದ್ಧೆಯಿಂದ 'ಆ ಹೊಲ್ಯಾರಂಗ ಮಾಡಬ್ಯಾಡ' ಎಂದು ಬಯ್ಯುವುದನ್ನು ಕಲಿತುಕೊಳ್ಳುತ್ತಾನೆ. ಇದನ್ನು ಸುಮತಿ ಮಹಿಳಾ ಅಂತಃಕರಣದ ನೆಲೆಯಲ್ಲಿ ಸಹಿಸಿದರೂ, 'ಭಿಕಾರೇರಂಗ ಇಲ್ಲಿ ಬಂದು ಬಿದ್ದಾಗ ನಿನ್ನ ಜ್ವಾಕಿ ಮಾಡಿದವ್ರು ಹೊಲೇರು, ಮರಾಠಾ ಮಂದಿ ಅಲ್ಲ' (ಪುಟ ೧೧೪) ಎಂದು ಛೇಡಿಸುತ್ತಾಳೆ. ಅಂಬೇಡ್ಕರ ಮತ್ತು ಶಿವಾಜಿ ಫೋಟೋಗಳ ಕುರಿತು ನಡೆದ ವಾಗ್ವಾದದ ನಂತರ ಮನೆ ಬಿಟ್ಟುಹೋದ ಮಾದೇವ, ಮರಾಠಾ ಗಲ್ಲಿಯಲ್ಲಿ ಮನೆ ಮಾಡಲು, ಮರಾಠಿ ಹೆಣ್ಣನ್ನು ಮದುವೆಯಾಗಲು ಪ್ರಯತ್ನಿಸುತ್ತಾನೆ. ಈ ಹಂತದಲ್ಲಿ ಸುಮತಿ ಕೌಟುಂಬಿಕ ಸಂಘರ್ಷದೊಂದಿಗೆ ಸಾಮಾಜಿಕ ಸಂಘರ್ಷಕ್ಕೂ ಇಳಿಯಬೇಕಾಗುತ್ತದೆ. ಮಕ್ಕಳ ಹಸಿವು, ಕೂಲಿ ಕೆಲಸ, ಕುಡಿದು ಹೊಲಗೇರಿಗೆ ಬಂದು ಕಾಡಿಸುವ ಬಾಬ್ಯಾನಂಥ ಸವರ್ಣೀಯ ಕಾಮುಕರ ನೋಟ, 'ಇನ್ನು ಮ್ಯಾಲಿ ಇಕ್ಕೂ ಸೂಳಿ ಆಗ್ತಾಳ ನೋಡ್ತಿರು'[೪೫] ಎನ್ನುವ ವಿಮಲಿಯಂಥ ವಿಕೃತ ಮಹಿಳಾ ಶಕ್ತಿಗಳನ್ನು ಎದುರಿಸುತ್ತ ಸುಮತಿ ದೈಹಿಕವಾಗಿ ಮಾನಸಿಕವಾಗಿ ಜರ್ಜರಿತಳಾಗುತ್ತಾಳೆ. ಮಾದೇವ ತನ್ನನ್ನು, ತನ್ನ ಚಿಕ್ಕ ಮಕ್ಕಳನ್ನು ತ್ಯಜಿಸಿದ್ದಕ್ಕೆ ಸುಮತಿ ದುಃಖಿಸುವುದಿಲ್ಲ, ಆದರೆ ಅವನು (ತಾನು ಉತ್ತಮ ಕುಲ, ನೀನು ಹೀನ ಜಾತಿಯ ಹೆಣ್ಣೆಂದು ಹಂಗಿಸಿ) ತಮ್ಮನ್ನು ತ್ಯಜಿಸಿ ಹೋದ ರೀತಿ ಅವಳನ್ನು ನೋವಿನ ಕೂಪಕ್ಕೆ ತಳ್ಳುತ್ತದೆ. 'ಇದ್ದ ರಾಜರೆಲ್ಲ ಮುಕಳ್ಯಾಗ ಮಣ್ಣ ಹಕ್ಯಾಂದು ಹ್ವಾದ್ರು, ಈಗ ನೀವು ರಾಜಾ ಆಗಾಕ ಕನಸ ಕಾಣಾಕತ್ತೀರಿ' (ಪುಟ ೧೦೩) ಎನ್ನುವ ಅನಕ್ಷರಸ್ಥ ಸುಮತಿ ಪ್ರಭುತ್ವ ವ್ಯವಸ್ಥೆಯನ್ನು ಧಿಕ್ಕರಿಸಿ (ರಾಜನ ಹೆಂಡತಿಯಾಗಲು ಇಷ್ಟಪಡದೆ) ಶ್ರಮ ಸಂಸ್ಕೃತಿಯನ್ನು ಆಯ್ಕೆ ಮಾಡಿಕೊಂಡ (ರಾಮಕ್ಕನ ಜೊತೆ ಕೂಲಿಗೆ ಹೋಗಿ ಮಕ್ಕಳನ್ನು ಸಾಕುತ್ತ) ಕೆಳವರ್ಗದ ವಿಚಿತ್ತ ಮಹಿಳೆಯಾಗಿದ್ದಾಳೆ. ಮಾದೇವನ identityಯ ಹುಡುಕಾಟ ಮತ್ತು ವರ್ತನೆಗಳು ಆತನ ಪತ್ನಿ ಸುಮತಿಯ ವ್ಯಕ್ತಿತ್ವ ಗಟ್ಟಿಗೊಳ್ಳಲು ನೆರವಾಗುತ್ತವೆ. ಮಾದೇವ ಸವರ್ಣೀಯನಾಗಲು ಯತ್ನಿಸಿದಷ್ಟು ಸುಮತಿಯಲ್ಲಿ ದಲಿತಪ್ರಜ್ಞೆ ಜಾಗ್ರತವಾಗುತ್ತದೆ. ತಾನು ಅನುಭವಿಸಿದ ಅಸ್ಪೃಶ್ಯತೆಯ ಯಾತನೆಯನ್ನು ಮರೆತು, ಅವಕಾಶ ಒದಗಿದಾಗ ಇನ್ನೊಬ್ಬರಿ(ಸ್ವಂತ ಹೆಂಡತಿಗೆ)ಗೆ ತಾನೇ ಶೋಷಕನಾಗುವ ಮನುಷ್ಯ ಸ್ವಭಾವದ ಇತಿಮಿತಿಗಳನ್ನು ಇಲ್ಲಿ ಗುರುತಿಸಲಾಗಿದೆ. ಜಾತೀಯತೆಯ ಭೂತ ಮಾನವೀಯ ಸಂಬಂಧಗಳನ್ನು, ಹೆಚ್ಚೇಕೆ ಗಂಡಹೆಂಡಿರ ಸಂಬಂಧವನ್ನೂ ಛಿದ್ರಗೊಳಿಸುವುದನ್ನು ದಾಖಲಿಸಿರುವುದು ಕಾದಂಬರಿಯ ಮೌಲ್ಯವಾಗಿದೆ.

ಕೋರಗಲ್ ವಿರೂಪಾಕ್ಷಪ್ಪ ಅವರ 'ಮಣ್ಣಿನ ಗುಣ' ಕಥೆಯ ಗಂಗವ್ವ ಗಂಡನ ಮನೆಯ ಕೌಟುಂಬಿಕ ಸಂಘರ್ಷದಿಂದ ಬೇಸತ್ತು ಕೊಪ್ಪಳ ನಗರ ಸೇರಿ ಹಾಲಿನ ವ್ಯಾಪಾರ ಮಾಡುತ್ತ ಪುರುಷ ಸಮಾನವಾಗಿ ಬದುಕುತ್ತಾಳೆ. ಮಹಿಳೆಗೆ ಮಹಿಳೆಯೆ ಶತ್ರು ಎಂಬಂತೆ ಇವಳನ್ನು ಗಂಡನ ಮನೆಯಿಂದ ಓಡಿಸಿದ್ದು ಓರಗಿತ್ತಿಯರಾದ ಇಬ್ಬರು ಮಹಿಳೆಯರು ಎಂಬುದು ವಿಶೇಷವಾಗಿದೆ. ಗಂಗವ್ವನ ಬದುಕು ಒಂದು ಸಂಘರ್ಷವೂ ಹೌದು, ಸಾಧನೆಯೂ ಹೌದು. ಇದೇ ವೃತ್ತಿಯಲ್ಲಿ ಹತ್ತು ವರ್ಷ ನಗರವಾಸಿಯಾಗಿದ್ದ ಅವಳ ಮನಸ್ಸು ಮತ್ತು ದೇಹ ಮಕ್ಕಳ ನೆನಪಿನಿಂದ ಹಾಗೂ ಕಷ್ಟದ ಬದುಕಿನಿಂದ ಕುಗ್ಗಿ ಹೋಗುತ್ತವೆ. ಕಥೆಗಾರ ಅವಳನ್ನು ಕಂಡಾಗ ಅವಳ ದೈಹಿಕ ಆಯಾಸವನ್ನು ಗುರುತಿಸಿದ್ದು ಹೀಗೆ,

> ಮುಖದ ಮೇಲೆ ಮೂಡಿದ ನೆರಿಗೆಗಳು ಅವಳ ಹರೆಯದ ಎಣ್ಣೆಯನ್ನು ಕುಡಿದು ಬಿಟ್ಟಿದ್ದವು. ದೂಳು ತುಂಬಿದ ಕೂದಲಿನಲ್ಲಿ ಬಿಳಿಯ ಪಾಚಿಗಳು ಕಂಡು ನಮ್ಮ ಹರೆಯ ನೆರೆದಿದೆಯೆಂದು ಸಾರುತ್ತಿದ್ದವು. ಪ್ರಯತ್ನಪಟ್ಟು ಎದೆಯನ್ನು ಮೇಲೆತ್ತಿ ಕಟ್ಟಿದ್ದರೂ, ನನ್ನ ಯೌವನದ ಸೊಗಡನ್ನು ಈ ನೆಲ ಈ ಕಾಲ ಕಸಿದುಕೊಂಡವು.' ಎಂದು ಹೇಳುತ್ತವೆಯೇನೋ ಎಂಬಂತೆ ಮೊಲೆಗಳೆರಡೂ ಅವನತ ಮುಖಿಯಾಗಿ ನೆಲ ನೋಡುತ್ತಿದ್ದವು. ಕಾಲು ಮೇಲೆ ಕಾಲು ಹಾಕಿ ಹಾಲುಗಳ ಕ್ಯಾನುಗಳ ಮುಂದೆ ಕುಳಿತು ತೊಡೆಯನ್ನು ಕೆರೆದುಕೊಳ್ಳುತ್ತಿದ್ದಳು.'[೪೬]

ಸುಮತಿ ಮತ್ತು ಗಂಗವ್ವನಂತವರ ಹೋರಾಟವನ್ನು ನಾವು ಕೌಟುಂಬಿಕ ಸಂಘರ್ಷ ಮತ್ತು ಸಾಮಾಜಿಕ ಸಂಘರ್ಷ ಎಂಬ ಎರಡು ನೆಲೆಗಳಲ್ಲಿ ಗುರುತಿಸುತ್ತೇವೆ. ಶ್ರಮ, ನಿಷ್ಠೆಯಿಂದ ದುಡಿದರೂ ಕುಟುಂಬದ ಸದಸ್ಯರಿಂದಲೆ ದೌರ್ಜನ್ಯಕ್ಕೊಳಗಾಗುವುದು, ಸ್ವತಂತ್ರವಾಗಿ ಬದುಕಿದರೂ ಸಮಾಜದ ವಕ್ರದೃಷ್ಟಿಗೆ ಬಲಿಯಾಗುವುದು ಈ ವ್ಯವಸ್ಥೆಗಳು ಹೂಡಿದ ಲಿಂಗಾಧಾರಿತ ಶೋಷಣೆಯಾಗಿದೆ. ಇಲ್ಲಿ ಗಂಗವ್ವನ ಅತ್ತೆ, ನಾದಿನಿಯರು ಮಹಿಳೆಯರಾಗಿಯೂ, ಮಹಿಳೆಯ ಮೇಲಿನ ಪುರುಷ ದೌರ್ಜನ್ಯ(ಮಾದೇವನಂತೆ)ದ ಇನ್ನೊಂದು ಮುಖವಾಗಿದ್ದಾರೆ. ಇದು ಮಹಿಳಾ ಶೋಷಣೆಯ ಸಂಕೀರ್ಣತೆಯೆನ್ನಬಹುದು.

**ಬ. ಹೊಸ ತಲೆಮಾರಿನ ಶಿಕ್ಷಿತ ಮಹಿಳೆ ಮತ್ತು ಸಂಘರ್ಷ**

ಗ್ರಾಮ/ನಗರಗಳ ಹೊಸ ನೆಲೆಗಳಲ್ಲಿ ಬದುಕು ಕಟ್ಟಿಕೊಳ್ಳಲು ಯತ್ನಿಸುವ ವಿದ್ಯಾವಂತ ಮಹಿಳೆಯರಲ್ಲಿ ದೈಹಿಕ ಸಂಘರ್ಷದೊಂದಿಗೆ ಮಾನಸಿಕ ಸಂಘರ್ಷವು ಅಧಿಕವಾಗಿರುವುದನ್ನು ಪ್ರಸ್ತುತ ಕಥನ ಸಾಹಿತ್ಯ ಹೊರಹಾಕಿದೆ. ವಿದ್ಯಾವಂತೆ, ಬುದ್ಧಿವಂತೆ, ಅಪ್ರತಿಮ ಸುಂದರಿಯಾಗಿದ್ದ, ಜಯಂತ ಕಾಯ್ಕಿಣಿ ಅವರ 'ಭಾಮಿನಿ ಸಪ್ತಪದಿ' ಕಥೆಯ ಭಾಮಿನಿಗೆ ಇವೇ ಅಂಶಗಳು ವೈರಿಗಳಾಗಿ ಸಮಾಜ ಅವಳನ್ನು ನೋಯಿಸತೊಡಗುತ್ತದೆ. ನಗರಸಭೆಯ ಸದಸ್ಯಳಾಗಿ, ಸಮಾಜಸೇವಕಿಯಾಗಿ ಮೋರ್ವಿ ಅಣೆಕಟ್ಟಿನಿಂದಾದ ನಿರಾಶ್ರಿತರ ಶಿಬಿರದಲ್ಲಿ ಸ್ವಯಂಪ್ರೇರಣೆಯಿಂದ ಸೇವಾಕಾರ್ಯ ನಿರ್ವಹಿಸುತ್ತಿದ್ದ ಭಾಮಿನಿಯನ್ನು ಅವಳ ಸಾಮಾನ್ಯ ದರ್ಜೆಯ ಪತಿ ಅರ್ಥೈಸಿಕೊಳ್ಳುವುದಿಲ್ಲ, ತಾನು ಪುರುಷ ಮತ್ತು ಗಂಡ ಎಂಬ ಅಹಂ(ಇದು ಸುಳ್ಳು ಮೇಲರಿಮೆ, ಅವನಿಗಿದ್ದುದು ಸಮಾಜದಲ್ಲಿ ಅವಳೆತ್ತರ ಬೆಳೆಯಲಾರದ ಸಾಮಾಜಿಕ ಕೀಳರಿಮೆಯಾಗಿದೆ)ನ ನೆಲೆಯಲ್ಲಿ ಅವಳನ್ನು ಶೋಷಿಸಲು ಆರಂಭಿಸುತ್ತಾನೆ. ಕೌಟುಂಬಿಕ ಸಂಘರ್ಷದೊಂದಿಗೆ ವ್ಯಕ್ತಿ ಮತ್ತು ಸಾಮಾಜಿಕ ಸಂಘರ್ಷವನ್ನು ಕಥೆಯಲ್ಲಿ ಕಾಣುತ್ತೇವೆ. ಸೌಂದರ್ಯ ಮತ್ತು ಜನಪ್ರಿಯತೆಗಳು ಮಹಿಳೆಗೆ ಸಮಾಜದಲ್ಲಿ ಗೌರವವನ್ನು ತರುವಂತೆ ಅಸೂಯೆ, ವೈಷಮ್ಯಗಳನ್ನು ಹುಟ್ಟುಹಾಕುತ್ತವೆ. ಇಂಥ ಮಹಿಳೆಯ ಗಂಡ ಸಾಮಾನ್ಯ ವ್ಯಕ್ತಿತ್ವ ಹೊಂದಿದ್ದರೆ, ಲಿಂಗಾಧಾರಿತ ಶೋಷಣೆಯ ನೆಲೆಯಲ್ಲಿ ದಾಂಪತ್ಯ ಸಂಘರ್ಷ ಮೊಳಕೆಯೊಡೆಯುತ್ತದೆ. ಭಾಮಿನಿಯ ವಿಚಾರದಲ್ಲಿ ಆಗಿದ್ದು ಹಾಗೆಯೆ.

> "ಸ್ಟೇಷನರಿ ಪರೇಶನ ಚಂದ ಹೆಂಡತಿ ಎಂದು ಅವಳನ್ನು ನೋಡುತ್ತಿದ್ದ ಜನ ಈಗ ಮುನಿಸಿಪಲ್ ಸದಸ್ಯೆ ಸಮಾಜ ಕಾರ್ಯಕರ್ತೆ ಭಾಮಿನಿಯ ಗಂಡ ಎಂದು ಅವನನ್ನು ನೋಡತೊಡಗಿದರು"[೫೦]

ಬದಲಾದ ಸಾಮಾಜಿಕ ಸ್ಥಾನಮಾನಗಳು ಸಂಪ್ರದಾಯ ಮನೋಭಾವದ ಪುರುಷನನ್ನು ಕೀಳರಿಮೆಗೆ ತಳ್ಳಿದಾಗ, ಏನನ್ನೋ ಕಳೆದುಕೊಂಡವನಂತೆ ಅವನು ಸಂಘರ್ಷಕ್ಕಿಳಿಯುತ್ತಾನೆ. ಇದು ಸ್ವಸ್ಥ ಮತ್ತು ಅಸ್ವಸ್ಥ ಮನೋಭಾವಗಳ ಸಂಘರ್ಷವಾಗಿ ಮುಂದುವರೆಯುತ್ತದೆ. ಮೊದಮೊದಲು ಅವಳ ಹೆಸರು ಕೆಡಿಸಲು ಚಂದಾ ಎತ್ತುವುದು, ದೈಹಿಕ ಸಂಪರ್ಕಕ್ಕೆ ಹಾತೊರೆದು ಆರೋಪ ಹೊರಿಸುವುದು, ಮಾತಿನಿಂದ ಚುಚ್ಚುವುದನ್ನು ಆರಂಭಿಸಿದ ಪರೇಶ, ಅವಳು ನಿರ್ಲಕ್ಷಿಸಿದಾಗ ಸಾಕುಮಗಳು ಡಿಂಕಿಯ ಮುಖಾಂತರ ಶೋಷಣೆ, ದೌರ್ಜನ್ಯ ಆರಂಭಿಸುತ್ತಾನೆ. ಅವಳು ಪ್ರಶ್ನಿಸಿದಾಗ ಸಾರ್ವಜನಿಕ ಸ್ಥಳದಲ್ಲಿ ಹೊಡೆದೂಬಿಡುತ್ತಾನೆ. ಇವನ ಕುಬ್ಜತೆಯನ್ನು ಪುರುಷನೊಬ್ಬ ಹೆಂಡತಿಯ ಜನಪ್ರಿಯತೆಯ ಬಗ್ಗೆ ಮತ್ಸರಗೊಂಡಾಗ, ಸೌಂದರ್ಯದ ಬಗ್ಗೆ ಭ್ರಮನಿರಸಗೊಂಡಾಗ ಪಟ್ಟುಕೊಳ್ಳುವ ಅವಸ್ಥೆಯೆಂದು ಹೇಳಬಹುದಾದರೂ ಗಂಡಸಿನ ಅತಿವಾಂಛೆ ಭಾಮಿನಿಯನ್ನು ದೈಹಿಕವಾಗಿ ಮತ್ತು ಮಾನಸಿಕವಾಗಿ ಘಾಸಿಗೊಳಿಸುತ್ತದೆ.

ಉಲ್ಲಾಸ ಹೆಗಡೆ ಅವರ 'ನನ್ನ ನೋವಿನ ಮೂಲ' ಕಥೆಯ ಮಾದೇವಿಯ ಶೋಷಣೆಯ ಆಯಾಮಗಳು ಬೇರೆ ನೆಲೆಯಲ್ಲಿವೆ. ಪತಿಯೇ ಸರ್ವಸ್ವವೆಂದು ನಂಬಿ ವಿದೇಶಕ್ಕೆ ಅವನೊಂದಿಗೆ ಹೋದ ಮಾದೇವಿಗೆ ತನ್ನ ವೈದ್ಯಪತಿ ವಿದೇಶಿ ಹೆಣ್ಣೊಂದರ ಜೊತೆ ಸಂಬಂಧ ಹೊಂದಿರುವ ವಿಷಯ ತಿಳಿದು ಆಘಾತವಾಗುತ್ತದೆ. ಸಾಂಪ್ರದಾಯಿಕವಾಗಿ ಪತ್ನಿಯಿಂದ ಪಡೆಯಬೇಕಾದ ಸುಖ, ನೆಮ್ಮದಿಯನ್ನು ಪತಿ ಮತ್ತೊಬ್ಬಳಿಂದ ಪಡೆಯುವಾಗ ಪತಿಪತ್ನಿಯರಲ್ಲಿ ಹುಟ್ಟಿಕೊಳ್ಳುವ ಸಂಘರ್ಷದ ಮುಖ ಮತ್ತು ಪತಿಯ ಕ್ರೌರ್ಯವನ್ನು ಕಥೆ ಧ್ವನಿಸುತ್ತದೆ. ವಾರಕ್ಕೊಮ್ಮೆ ಮನೆಗೆ ಬಂದು ದೈಹಿಕ, ಮಾನಸಿಕ ಹಿಂಸೆ ಕೊಡುತ್ತಿದ್ದ ಗಂಡನಿಂದ ದೂರ ಕರೆದುಕೊಂಡು ಹೋಗಲು ಪಾಲಕರಿಗೆ ಮತ್ತು ಭೇಟಿಯಾದ ಬಾಲ್ಯದ ಗೆಳೆಯನಿಗೆ ಬೇಡಿಕೊಂಡರೂ ಹೊಣೆಯಿಂದ ಅವರಿಬ್ಬರೂ ತಪ್ಪಿಸಿಕೊಳ್ಳುತ್ತಾರೆ. ವಿದ್ಯಾವಂತೆ, ಬುದ್ಧಿವಂತೆಯಾದ ಮಾದೇವಿ ಮಾನಸಿಕವಾಗಿ ಕುಗ್ಗಿ ಕುಟುಂಬ, ಸಮಾಜ ಮತ್ತು ಪುರುಷವರ್ಗದ ಮೇಲಿನ ಜುಗುಪ್ಸೆಯಿಂದ

ಕುಡಿತಕ್ಕೆ ದಾಸಳಾಗುತ್ತಾಳೆ. 'ಮುಟ್ಟಾದಾಗ ಶಾಲೆಗೆ ಬರದೇ ಇದ್ದ ಮಾದೇವಿಯೆಲ್ಲಿ? ಬೆಳಿಗ್ಗೆಯೆ ಕುಡಿದ ಇವಳೆಲ್ಲಿ? ಅವಳ ಬಗೆಗೆ ಮರುಕವೆನಿಸಿತು'[೫೦] ಎಂಬ ಮಾತು ಸಾಂಪ್ರದಾಯಿಕ ಕುಟುಂಬದ ಸೂಕ್ಷ್ಮಗ್ರಾಹಿ ಮಹಿಳೆಯನ್ನು ವ್ಯವಸ್ಥೆ ಮತ್ತು ಪರಿಸ್ಥಿತಿಗಳು ಹೇಗೆ ಬದಲಾಯಿಸಬಲ್ಲವು ಎಂಬುದನ್ನು ಬಿಂಬಿಸುತ್ತದೆ. ಗ್ರಾಮ/ನಗರಗಳ ದ್ವಂದ್ವಾತ್ಮಕತೆ ಕೇವಲ ಸ್ವದೇಶಿ ನೆಲೆಯಲ್ಲಿ ಕಾಣುವ ಭಾವವಲ್ಲ. ಅದು ವಿದೇಶಿ ನೆಲದಲ್ಲಿಯೂ ಕಂಡುಬರುವ ತಲ್ಲಣವಾಗಿದೆ. ತಾಯಿ ನೆಲದಿಂದ ದೂರವಾಗಿ, ವಿದೇಶದಲ್ಲಿ ನೆಲೆಸಿ ಹಣ, ಅಂತಸ್ತು ಗಳಿಸುವ ಪುರುಷರ ಸ್ವದೇಶಿ ಸೆಳೆತ, ಮಾನಸಿಕ ದ್ವಂದ್ವ, ಸಂಘರ್ಷಗಳು ಒಂದು ರೀತಿಯದಾದರೆ, ಇವರ ದುಡಿಮೆಯನ್ನು ನಂಬಿ, ಇವರ ಬಾಳ ಸಂಗಾತಿಯಾಗಿ ಹೋದ ಪವಿತ್ರ ನಾಡಿನ (ಭಾರತೀಯ?) ಮಹಿಳೆಯರು ಅನುಭವಿಸುವ ನೋವು, ತುಡಿತ, ತವರು ನಾಡಿನ ಸೆಳೆತಗಳು ಇನ್ನೊಂದು ರೀತಿಯದ್ದಾಗಿವೆ. ಹುಟ್ಟಿದ ನೆಲ, ಬೆಳೆದ ಪರಿಸರದ ಸೆಳೆತ, ಹೊಸ ಅಪರಿಚಿತ ಬದುಕನ್ನು ಅನುಭವಿಸಲಾರದ ಸಂಕಟ, ಬದಲಾದ ಸಾಂಸ್ಕೃತಿಕ ಬದುಕುಗಳು ಇವರನ್ನು ವಿದೇಶದಲ್ಲಿ ಕಟ್ಟಿಹಾಕಿ ಹೈರಾಣಾಗುವಂತೆ ಮಾಡುತ್ತವೆ. ಅದರಲ್ಲೂ ಗಂಡನಾದವನು ಹೆಂಡತಿಯನ್ನು ನಿರ್ಲಕ್ಷಿಸಿದರೆ ಅಥವಾ ಬೇರೆ ಮಹಿಳೆಯನ್ನು ವರಿಸಿದರಂತೂ ಅತ್ತ ಬದುಕಲಾರದೆ, ಇತ್ತ ಸ್ವದೇಶಕ್ಕೆ ಮರಳಿ ಬರಲಾರದೆ ಇವರು ಅತಂತ್ರ ಬದುಕನ್ನು ಬಾಳಬೇಕಾಗುತ್ತದೆ. ಸಂಪ್ರದಾಯಸ್ಥ ಮನೆತನದಲ್ಲಿ ಹುಟ್ಟಿ ಬೆಳೆದ ಮಹಿಳೆಯೊಬ್ಬಳು, ಸಂಪೂರ್ಣ ಬೇರೆ ರೀತಿಯ ಬದುಕನ್ನು, ಅದೂ ತನ್ನವರಾರೂ ಇಲ್ಲದ ದೇಶವೊಂದರಲ್ಲಿ ಆತಂಕ, ನೋವು, ಸಂಕಟಗಳೊಂದಿಗೆ ಕಳೆದು ಹೊಂದಿಕೊಳ್ಳಲಾರದೆ ಹೋದ ಪರಿಯನ್ನು ಅಧ್ಯಯನ ಗ್ರಹಿಸುತ್ತದೆ. ಇದಕ್ಕೆ ಪರಿಹಾರವೆಂದರೆ, ಮದುವೆ ಪವಿತ್ರ ಎಂದು ತಿಳಿದಿರುವ ಸಂಪ್ರದಾಯ ನಾಡಿನ ಹೆಣ್ಣು ಹೆತ್ತ ಪಾಲಕರು ಎಚ್ಚೆತ್ತುಕೊಳ್ಳಬೇಕಾಗಿದೆ. ಫಾರಿನ್ ವರ, ಕೈತುಂಬ ಸಂಬಳ ಎಂದೆಲ್ಲ ಚಿಂತಿಸುವ ಬದಲಾಗಿ ಮಕ್ಕಳ ಭವಿಷ್ಯದತ್ತ ಗಮನ ನೀಡಬೇಕು. ಎರಡನೆಯದಾಗಿ ಎಲ್ಲ ಮದುವೆಗಳನ್ನು ನೋಂದಾಯಿಸಿದರೆ ಕಾನೂನಿನ ನೆರವು ಹೆಣ್ಣುಮಕ್ಕಳ ಆಪತ್ಕಾಲದಲ್ಲಿ ನೆರವಾಗುವುದೆಂಬುದು ಅಧ್ಯಯನದ ನಿಲುವಾಗಿದೆ.

ಪತಿಯೇ ಪರದೈವ ಎಂಬ ಸಂಪ್ರದಾಯ ಶರಣಾತೆಯ ವಿರೋಧಿ ನೆಲೆಯಲ್ಲಿ ಶೋಷಣೆಯನ್ನು ಪ್ರತಿಭಟಿಸಿದ ಎಲ್ಲ ಜಾತಿ, ವರ್ಗಗಳ ವಿದ್ಯಾವಂತ ಮಹಿಳೆಯರ ಸಂಘರ್ಷ ಇದಾಗಿದ್ದು ಕಥನ ಸಾಹಿತ್ಯದಲ್ಲಿ ಇಂತಹ ಅನೇಕ ಸಂದರ್ಭಗಳನ್ನು ಕಾಣುತ್ತೇವೆ. ವ್ಯಾಸರಾಯ ಬಲ್ಲಾಳ ಅವರ 'ಸಾಬೂನಿನ ಗುಳ್ಳೆ' ಕಥೆಯ ಕಲ್ಪನಾ ಅಯ್ಯರ್ ಎಂಬ ಮುಂಬಯಿ ನಗರದ ಮಹಿಳೆ ರೋಗಗ್ರಸ್ತಳಾಗಿದ್ದರೂ ಹಾಸಿಗೆಯಲ್ಲಿ ಮಲಗಿಕೊಂಡು ಮೀನಾಳಿಗೆ ಕೇಳುತ್ತಾಳೆ. 'ನಮ್ಮ ಊರು, ಮನೆ, ಬಹಳ ದೂರ, ಬಂಧುಗಳೆಲ್ಲ ದೂರ. ನಿಮ್ಮ ಊರು ಕೂಡಾ ನಮ್ಮ ಊರಿಗೆ ಸಮೀಪವಿರಬೇಕು ಅಲ್ಲವೆ? ನೀವು ನಮ್ಮಂತೆಯೆ ಅಕ್ಕಿಯನ್ನು ಉಪಯೋಗಿಸುವವರು, ತೆಂಗಿನಕಾಯಿ, ಕಾಫಿ.'[೫೧] ಸಮಯಸಾಧಕ, ನೀಚ ಗಂಡನ ಕ್ರೌರ್ಯ, ಶೋಷಣೆಯನ್ನು ಸಹಿಸಲಾರದೆ ಶವವಾಗುವ ಮುನ್ನ ಹೊರಹೊಮ್ಮುವ ಅವಳ ಮಾತುಗಳು ಲಿಂಗಾಧಾರಿತ ಶೋಷಣೆಯ ತೀವ್ರತೆ, ಹುಟ್ಟೂರಿನ ಕುರಿತ ದ್ವಂದ್ವವನ್ನು ಬಿಂಬಿಸುತ್ತವೆ. ಹೆಂಡತಿಯ ಸಾವಿನ ನಂತರ, ಮೀನಾಳ ಕುಟುಂಬವನ್ನು ತನ್ನ ಹಂಗಿನಲ್ಲಿ ಬೀಳಿಸಿಕೊಂಡು, ದುಡಿಯುವ ತನ್ನನ್ನು ವರಿಸಲು ನಯಗಾರಿಕೆಯನ್ನು ತೋರಿಸುತ್ತಿದ್ದ ಅಯ್ಯರನನ್ನು ನಿರಾಕರಿಸುವ ಬುದ್ಧಿವಂತ ಮಹಿಳೆಯಾಗುವುದು ಮೀನಾಳ ಹೆಚ್ಚುಗಾರಿಕೆಯಾಗಿದೆ. ಕೃತಜ್ಞತೆಯ ಸೆರೆಯಲ್ಲಿ ಅಶಕ್ತ ಮಹಿಳೆಯರನ್ನು ಬೀಳಿಸಿಕೊಂಡು ಅವರ ದುಡಿಮೆ, ಶ್ರಮವನ್ನು ಅಪಮೌಲ್ಯಗೊಳಿಸಿ ಅವರನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಂಡು ಶೋಷಿಸುವುದೂ ಕೂಡ ಪ್ರಧಾನ ವ್ಯವಸ್ಥೆಯ ಒಂದು ಅಂಗವಾಗಿದೆ. ಇದೇ ನೆಲೆಯಲ್ಲಿ ರಾಮಕೃಷ್ಣ ಗುಂದಿ ಅವರ 'ಆರೂ ಮೇಡಂ ಮತ್ತು ಉದ್ಯೋಗ ಪರ್ವ' ಕಥೆಯ ಟೀಚರ್ ಆರೂ (ಆರತಿ) ಪುರುಷ ವ್ಯವಸ್ಥೆಯನ್ನು ಎದುರಿಸಬೇಕಾದ ಸಂದರ್ಭವೊದಗುತ್ತದೆ. ಶಾಲಾ ತಪಾಸಣೆಗೆ ಬಂದ ಶಿಕ್ಷಣಾಧಿಕಾರಿ ಅವಳ ಕರ್ತವ್ಯಕುಶಲತೆಯನ್ನು ಮೆಚ್ಚದೆ, ಅವಳ ಕುಟುಂಬದ ಬಡತನ ಕುರಿತು ಅನುಕಂಪ, ಪಶ್ಚಾತ್ತಾಪಗಳ ನಾಟಕವಾಡಿ ಪಟ್ಟಣಕ್ಕೆ ಬಂದು ತನ್ನೊಡನೆ ಒಂದು ದಿನ ಜಾಲಿಯಾಗಿ ಕಳೆಯಲು ಆಹ್ವಾನಿಸುತ್ತಾನೆ. ಅಲ್ಲಿಂದ ತಪ್ಪಿಸಿಕೊಂಡು ಓಡಿ ಗೌಡರ ಮನೆಗೆ ಬಂದರೆ ಗೌಡರು, 'ಮಂತ್ರಿಗಳವರೆಗೆ ಕೈಯಿರೋ ಮನುಷ್ಯ, ಇಷ್ಟಕ್ಕೆ ಮರೆತು ಬಿಡಿ. ಮುಂದುವರೆಸಿದರೆ ನಿಮಗೇ ಅಪಾಯ'[೫೨] ಎಂದು ಬುದ್ಧಿ ಹೇಳುತ್ತಾರೆ. ಶಿಕ್ಷಣಾಧಿಕಾರಿಯ ಲೈಂಗಿಕ ದೌರ್ಜನ್ಯಕ್ಕೆ ಒಳಗಾದ ಆರೂ ಮೇಡಂ ಪ್ರತಿಭಟಿಸುವುದಿಲ್ಲ. ಅವನ ಹಿಡಿತದಿಂದ ತಪ್ಪಿಸಿಕೊಂಡು ಓಡುತ್ತ ಗೌಡರ ಮನೆಗೆ ಬಂದ ಆರೂ ಮೇಡಂ ಪೋಲೀಸ್

ರಕ್ಷಣೆ ಕೇಳುವುದಿಲ್ಲ. ಇದಕ್ಕೆ ವ್ಯವಸ್ಥೆ ಅವಳ ಮೇಲೆ ಹೇರಿದ ಒತ್ತಡ ಕಾರಣವಾಗಿದೆ. ಮನೆಯ ಆರ್ಥಿಕ ಸ್ಥಿತಿ, ಅಪರಿಚಿತ ಗ್ರಾಮದಲ್ಲಿನ ಅಸಹಾಯಕತೆಗಳೂ ಇವುಗಳಲ್ಲಿ ಸೇರಿವೆ. ಫಿರ್ಯಾದಿ ನೀಡಿದರೆ ಮತ್ತೆ ಶಾಲೆ ವರ್ಷಗಳ ಕಾಲ ಮುಚ್ಚುವುದೆಂಬ ಭೀತಿಯ ಹಿನ್ನೆಲೆಯಲ್ಲಿ ವ್ಯವಸ್ಥೆ (ಗೌಡ) ಅವಳ ಪ್ರತಿಭಟನೆಯನ್ನು ನಿರ್ಬಂಧಿಸುವಲ್ಲಿ ಯಶಸ್ವಿಯಾಗಿದೆ. ಜಾತಿ, ಮತ ಬೇಧವಿಲ್ಲದೆ ಇಂಥ ಮಾನಸಿಕ, ದೈಹಿಕ ದೌರ್ಜನ್ಯಗಳಿಗೆ ಒಳಗಾಗುವ ಲಕ್ಷಾಂತರ ಮಹಿಳಾ ಶ್ರಮಜೀವಿಗಳ ಪ್ರತಿನಿಧಿಯಾಗಿ ಆರೂ ಟೀಚರ ನಿಲ್ಲುತ್ತಾಳೆ.

ಜಾತಿಯಾಧಾರಿತ, ಲಿಂಗಾಧಾರಿತ ಶೋಷಣೆಗಳಿಗೆ, ಸಂಘರ್ಷಗಳಿಗೆ ಒಳಗಾದ ವ್ಯಾಸರಾವ್ ನಿಂಜೂರ ಅವರ 'ಉಸಿರು' ಕಾದಂಬರಿಯ ಶಾರದೆಯದು ವೈರುಧ್ಯಗಳಿಂದ ಕೂಡಿದ ವ್ಯಕ್ತಿತ್ವವಾಗಿದೆ. ಪುರುಷಪ್ರಧಾನ ವ್ಯವಸ್ಥೆಯ ವಿರೋಧಿ ನೆಲೆಯಲ್ಲಿ ಗ್ರಾಮ ನಿರಾಕರಿಸುವ ಶಾರದೆ ಪುರುಷದ್ವೇಷಿಯಾದ ಪಾತ್ರವಾಗಿ ಹೊರಹೊಮ್ಮುವುದಿಲ್ಲ. ಜೊತೆಗೆ ಪ್ರತಿಯೊಂದಕ್ಕೂ ಪುರುಷರನ್ನು ಅವಲಂಬಿಸುವ ಸ್ವಭಾವವಲ್ಲ ಎಂಬುದೂ ಸಂದರ್ಭದ ವಿಶೇಷತೆಯಾಗಿದೆ. ಮಣಿಪಾಲದ ದಾದಿಯರ ತರಬೇತಿ ಶಾಲೆಯನ್ನು ಸೇರಿ ನೂರಾರು ತರದ ಅನುಭವಗಳನ್ನು ಗಳಿಸುತ್ತಾಳೆ. ಮಹಿಳಾ ವಾರ್ಡನ್‌ಗಳ ದೌರ್ಜನ್ಯ, ಸಹಪಾಠಿಗಳ ವ್ಯಂಗ್ಯ, ಕಿರುಕುಳ, ರೋಗಿಗಳ ಬಿಡುವಿಲ್ಲದ ಶುಶ್ರೂಷೆ, ಪುರುಷ (ರೋಗಿ, ವೈದ್ಯರು)ರ ಲೈಂಗಿಕ ದೌರ್ಜನ್ಯ ಇವಳನ್ನು ದೈಹಿಕವಾಗಿ, ಮಾನಸಿಕವಾಗಿ ಗಟ್ಟಿಗೊಳಿಸುತ್ತವೆ. ವ್ಯವಸ್ಥೆ ನಿರ್ಮಿತ ಶೀಲವೆಂಬ ಕೃತ್ರಿಮ ಮೌಲ್ಯವನ್ನು ಕಳೆದುಕೊಂಡ ಸಾಂಪ್ರದಾಯಿಕ ಮಹಿಳೆಯರಂತೆ ದುಃಖಿಸುವುದು ಇವಳ ಜಾಯಮಾನವಲ್ಲ, ಬದಲಿಗೆ ಏನಿದ್ದರೂ ಇವಳದು ಕೊಟ್ಟು ತೆಗೆದುಕೊಳ್ಳುವ ವ್ಯವಹಾರದ ನೀತಿ. ಚರಿಯರ್, ಕುರಿಯನ್, ಪ್ರಭು, ಡಾ. ಅನಂತ, ಕೇಶವ ಹೀಗೆ ಅವಳ ಬದುಕಿನಲ್ಲಿ ಬಂದು ಹೋದ ಪುರುಷರು ಹಲವಾರು ಜನರಾಗಿದ್ದಾರೆ.

> 'ಆಗಾಗ ಮೈಗೆ ದೇಕಂತಲೇ ಕೈತಾಗಿಸುತ್ತಿದ್ದಾಗ ಮೊದಮೊದಲು ಬೇಳು ಕಡಿದಂತಾಗುತ್ತಿತ್ತು. ಆದರೂ ಕ್ರಮೇಣ ಅದು ಆಹಾರದಷ್ಟೇ ಅವಶ್ಯ ಅನ್ನುವ ಅನಿಸಿಕೆ ಬಂದಾಗ ಆಶ್ಚರ್ಯವೆನಿಸಿತ್ತು.'[೫೪]

ಇದು ಅವಳ ಮೊದಲ ಪುರುಷಸ್ಪರ್ಶದ ಗ್ರಹಿಕೆಯಾಗಿದೆ. ನಂತರ ಅದು ಪ್ರತಿದಿನ ತೆಗೆದುಕೊಳ್ಳುವ ಆಹಾರದಷ್ಟೇ ಅವಶ್ಯಕವೆನ್ನುವುದು ಕೂಡ ಅವಳ ಅಭಿಪ್ರಾಯದಲ್ಲಿ ವಾಸ್ತವಿಕವಾದ ಮಹಿಳಾ ಬಯಕೆಯೂ ಆಗಿದೆ. ಮೊದಲನೇ ಸಲ ಪ್ರೀತಿ, ಪ್ರೇಮಕ್ಕೆ ಸ್ಪಂದಿಸಿದ ಶಾರದ ನಂತರ ಮೋಸ ಹೋಗಿ ಗಂಭೀರಳಾಗುವುದು ಅವಳ ವ್ಯಕ್ತಿತ್ವದ ವಿಶೇಷತೆಯೆನ್ನಬಹುದು. ಅನೇಕರು ಇವಳನ್ನು ತ್ಯಜಿಸಿ ಬೇರೆ ಹೆಣ್ಣುಗಳನ್ನು ಮದುವೆಯಾಗಿ ಹೋಗುತ್ತಾರೆ. ಅದಕ್ಕಾಗಿ ಉಳಿದವರಂತೆ ಇವಳು ಶೋಕಿಸುವುದಿಲ್ಲ, ದುಃಖಿಸುವುದಿಲ್ಲ, ಚಿಂತಿಸುತ್ತ ಕೂಡುವುದಿಲ್ಲ. ಪುರುಷರ ದೈಹಿಕ ದೌರ್ಜನ್ಯ (ಗ್ರಾಮದ ಪಟೇಲ) ಎದುರಿಸಿ/ ನಿರಾಕರಿಸಿ ನಗರ ಸೇರಿದ ಶಾರದ ಮತ್ತೆ ಪುರುಷರನ್ನು ಸೇರಿ ದೈಹಿಕ ಸುಖ ಅನುಭವಿಸಿದ್ದು ಮಾತ್ರ ಪುರುಷ ಮೇಲಿನ ದ್ವೇಷದಿಂದಲೋ, ನಿರ್ಲಿಪ್ತತೆಯಿಂದಲೋ ಎಂಬುದನ್ನು ನಿರ್ಧರಿಸುವುದು ಕಷ್ಟವಾಗುತ್ತದೆ. ಬ್ರಾಹ್ಮಣಳಾಗಿ ಹುಟ್ಟಿ, ಸ್ವಜಾತಿ ಪುರುಷನಿಂದಲೇ ಲೈಂಗಿಕ ದೌರ್ಜನ್ಯಕ್ಕೆ ಒಳಗಾಗುವ ಸಂದರ್ಭದಲ್ಲಿ ತಂದೆಯಿಂದ ಆರೋಪಿತಳಾಗಿ ನಗರ ಸೇರಿದ ಬಾಲಚಂದ್ರ ಘಾಣೇಕರ ಅವರ 'ನಾನೆ ಹೊಲೆಯ' (೧೯೩೦-೪೦) ಕಥೆಯ ರಮೆ ಪುರುಷ ಸಮಾಜದ ದೌರ್ಜನ್ಯ, ಆರ್ಥಿಕ ಮುಗ್ಗಟ್ಟಿನ ಸಮಸ್ಯೆಗಳಿಂದ ಮುಕ್ತಳಾಗಲು ಕ್ರೈಸ್ತ ಧರ್ಮಕ್ಕೆ ಮತಾಂತರಗೊಳ್ಳುತ್ತಾಳೆ. ನಗರ ಪ್ರವೇಶ, ಭಿಕ್ಷಾಟನೆ, ನಗರಸಭೆಯ ಕಸಗುಡಿಸುವ ಹೊಲೆಯರ ಮುದುಕಿಯ ಆಶ್ರಯ ಅವಳಲ್ಲಿ ಬದುಕಿನ ಆಶಾಕಿರಣ ಹುಟ್ಟಿಸುವುದಿಲ್ಲ. ಹರಿಜನ ಕೇರಿಗೆ ಬಂದ ಪಾದ್ರಿಗಳ ನೌಕರಿ ಕೊಡಿಸುವ ವ್ಯವಸ್ಥಿತ ಮತಾಂತರದ ಪ್ರಕ್ರಿಯೆಯನ್ನು ಒಪ್ಪಿಕೊಳ್ಳುತ್ತಾಳೆ. ಪುರೋಹಿತನಾಗಿ ಹುಟ್ಟಿ, ಒಂಟಿ ಮಹಿಳೆಯನ್ನು ಬಲಾತ್ಕಾರ ಮಾಡಲು ಬಂದ ಅಣ್ಣಾಚಾರ್ಯನನ್ನು, 'ಅಸ್ಪೃಶ್ಯರಿಗೆ ಅಪವಿತ್ರ ಎನ್ನುವಿಯಲ್ಲೋ ಹೊಲೆಯಾಚಾರಿ! ಈಗ ಯಾರು ಹೊಲೆಯರು? ನಾಚಿಕೆಯಾಗುವುದಿಲ್ಲವೆ ಪರಸ್ತ್ರೀಯರ ಮೇಲೆ ಕೈ ಹಾಕಲಿಕ್ಕೆ?'[೫೫] ಎಂದು ರಮೆಯಿಂದ ನುಡಿಸುವ ನಿರೂಪಕರ ನಿಲುವು ಜಾತಿ ನೆಲೆಯಲ್ಲಿ ಮನುಷ್ಯರ ನಡತೆಯ ಮೌಲ್ಯವನ್ನು ಅಳೆಯುವ ಹುನ್ನಾರ ಹೊಂದಿರುವುದು ಸ್ಪಷ್ಟವಾಗುತ್ತದೆ.

### ಕ. ಮಹಿಳೆ ಮತ್ತು ಲೈಂಗಿಕ ಶೋಷಣೆ

ಲೈಂಗಿಕ ಹಲ್ಲೆಗಳಿಗೆ ಒಳಗಾಗುತ್ತಿರುವುದು ಕೆಳ, ದಲಿತ ವರ್ಗದ ಮಹಿಳೆ ಎಂಬುದು ವಾಸ್ತವದ ಕಠೋರ ಸತ್ಯವಾಗಿದೆ. ಮೊದಲಿಗೆ ಅನಕ್ಷರಸ್ಥ, ಸಾಂಪ್ರದಾಯಿಕ ನಿಲುವಿನ, ಮುಗ್ಧ ದಲಿತ ಮಹಿಳೆಯರ

ಮೇಲೆ ಲೈಂಗಿಕ ಶೋಷಣೆಗಳು ಜರುಗುತ್ತಿದ್ದರೆ, ಇಂದು ವಿದ್ಯಾವಂತ ಮಹಿಳೆಯೂ ಈ ಆತಂಕದಿಂದ ದೂರವಾಗಿಲ್ಲ. ಇದಕ್ಕೆ ಬಾನ್ವರಿದೇವಿಯ ಪ್ರಕರಣವನ್ನು ಉದಾಹರಣೆಯಾಗಿ ಕೊಡಬಹುದು. ಮಹಿಳೆಯರ ಮೇಲೆ ಲೈಂಗಿಕ ಹಲ್ಲೆಗಳು ಏಕೆ ಆಗುತ್ತವೆ ಎಂಬುದಕ್ಕೆ ಕನ್ನಡ ಕಥನ ಸಾಹಿತ್ಯ ಅನೇಕ ಕಾರಣಗಳನ್ನು ಕೊಡುತ್ತದೆ.

ಬಸವರಾಜ ಕಟ್ಟೀಮನಿ ಅವರ 'ಬೀದಿಯಲ್ಲಿ ಬಿದ್ದವಳು' ಕಾದಂಬರಿಯ ಯಮುನೆ ಜಮೀನ್ದಾರಿ ವ್ಯವಸ್ಥೆಯ ಕಪಿಮುಷ್ಟಿಯಲ್ಲಿ ಸಿಕ್ಕು ವೇಶ್ಯೆಯಾದ ಮಹಿಳೆಯಾಗಿದ್ದಾಳೆ. ಬಡತನದಲ್ಲಿ ಹುಟ್ಟಿ ಬೆಳೆದ ಸುಂದರಿ ಯಮುನೆಯ ಮೇಲೆ ಕಣ್ಣು ಹಾಕಿದ ಊರ ಗೌಡ ಮತ್ತು ಸಾಂಪ್ರದಾಯಿಕ ಮನಸ್ಸುಗಳು ಅನೇಕ ಸಂಕಟಗಳನ್ನು ಒಡ್ಡಿ ಅವಳು ನಗರ ಸೇರಿ ವೇಶ್ಯೆಯಾಗುವಂತೆ ಮಾಡುತ್ತವೆ. ಸಿದ್ದರಾಮಪ್ಪ ಎಂಬವನ ನಿಷ್ಠೆಯ ವೇಶ್ಯೆಯಾಗಿ ಇವಳು ಕಳೆದ ನಗರದ ಜೀವನ ಮಾನಸಿಕ, ದೈಹಿಕ ಸಂಘರ್ಷಗಳಿಂದ ಕೂಡಿದೆ. ಇವಳ ದೃಷ್ಟಿಯಲ್ಲಿ ಎಲ್ಲ ಗಂಡಸರೂ ಒಂದೇ. ಸುಂದರವಾದ ಬಡ ಹೆಣ್ಣುಗಳನ್ನು ಬದುಕಲಿಕ್ಕೆ ಬಿಡದ ಈ ಪುರುಷ ಪ್ರಪಂಚ ಸಾಯಲೂ ಬಿಡುವುದಿಲ್ಲ ಎಂಬುದು ಅವಳ ಆರ್ತನಾದವಾಗಿದೆ.

> 'ನನ್ನಿಂದ ಸುಖ ಸಿಗುತ್ತಿದೆಯಂತೆ ಆತನಿಗೆ! ಆತನಿಂದ ತನಗೇನಾದರೂ ಸುಖ ಸಿಗುತ್ತಿದೆಯೆ? ಇಲ್ಲ ಇಲ್ಲ ಯಾವ ಸುಖ, ಆನಂದವೂ ಇಲ್ಲ ಇದೊಂದು ಆಟ. ವಿಚಿತ್ರ ಆಟ. ದೇವರ ಆಟವೇ ಇರಬೇಕು'

ಹೀಗೆ ವಾಸ್ತವವಾದಿಯಾಗುತ್ತ ಸುಖವನ್ನು ವ್ಯಾಖ್ಯಾನಿಸುವ ಯಮುನ ತನ್ನ ಹಣೆಬರಹಕ್ಕೆ ವಿಧಿವಾದವನ್ನು ನಂಬಿ ಸುಖ, ಸಂತೋಷಗಳು ಒಬ್ಬ ವ್ಯಕ್ತಿಯ ಮಾನಸಿಕ ಅನುಭವಗಳು, ದೈಹಿಕ ಅನುಭವಗಳಲ್ಲ ಎನ್ನುವುದರತ್ತ ಗಮನ ಸೆಳೆಯುತ್ತಾಳೆ. ಊಳಿಗಮಾನ್ಯ ವ್ಯವಸ್ಥೆ ಯಮುನೆ ವೇಶ್ಯೆಯಾಗಲು ಕಾರಣವಾದರೆ, ನಗರದ ಬಂಡವಾಳಶಾಹಿ ವ್ಯವಸ್ಥೆ ಶಾಂತಾದೇವಿ ಕಣವಿ ಅವರ 'ಗುಳದಾಳಿ' ಕತೆಯ ಚೆನ್ನಿ ವೇಶ್ಯೆಯಾಗಲು ಕಾರಣೀಭೂತವಾಗುತ್ತದೆ. ಚೆನ್ನಿ(ರೋಜಿ)ಯಲ್ಲಿ ಯಮುನೆಯಲ್ಲಿದ್ದಂತೆ ಪುರುಷ ದ್ವೇಷದ ತೀವ್ರತೆ ಕಂಡುಬರುವುದಿಲ್ಲ. ನಡೆದಿದ್ದೆಲ್ಲ ತನ್ನ ವಿಧಿಬರಹವೆಂದು ವಿಧಿವಾದದಲ್ಲಿ ನಂಬಿಕೆ ಹೊಂದಿರುವ ಅಸಹಾಯಕ ರೋಜಿ, ತನ್ನ ಏಕೈಕ ಆಸ್ತಿ ಬಿಳಿ ದೇಹವನ್ನು ಉಪಯೋಗಿಸಿ ಪ್ರತಿದಿನ ಹಲವು ಜನ ಪುರುಷರಿಗೆ ಸುಖ ನೀಡುತ್ತಾಳೆ.

> ಮನ್ಯಾಗೆ ಮುತ್ತಿನಂತಾ ಹೆಂಡ್ತಿ, ಮೂರು ಮಕ್ಕಳಿದ್ದರೂ ರಂಗಪ್ಪಂಗ ನನ್ನ ಮ್ಯಾಲೆ ಆಸೆ. ಈ ಗಂಡಸರ ಗುಣಾನ ಇಚಿತ್ರ, ಮನಸ ಎತ್ತಾಗ ದೇಕಾ ಅತ್ತಾಗ ಹರಿಬಿಡತಾರ. ಅದಕೇನ ಲಂಗು, ಲಗಾಮ ಇಲ್ಲ. ನನ್ನ ಮನಿ ಮಾಲೀಕರ ಏನು ತಾ ಸೋಣಿದರ ಕಲಿತಾಂವ. ಕೋಟು ಬೂಟು ಹಾಕ್ಕೊಂಡ ದರಬಾರ ಮಾಡಿಕೋಂತ ಅಡ್ಯಾಡಂವಾ. ಹೇಂಡ್ತಿ ತವರ್ಮನಿಗೆ ಹ್ವಾದ ಕೂಡ್ಲೆ ನನ್ ಹಂತ್ಯಾಕ ಬರತಾನ.'

ಗಂಡಸರ ಮನಸ್ಸು, ವಾಂಛೆ, ಅವರ ಮಾನಸಿಕ ದೌರ್ಬಲ್ಯಗಳನ್ನು ಒಂದು ಅಪ್ರಾಪ್ತ ವಯಸ್ಸಿನ ಹೆಣ್ಣಾಗಿ ಗುರುತಿಸುವ ಚೆನ್ನಿ ಅದನ್ನು ಪ್ರತಿಭಟಿಸುವ ಧ್ವನಿಯಾಗುವುದಿಲ್ಲ. ತನಗೆ ಒಂದು ಆಸರೆ ಕೊಟ್ಟ ಪುರುಷರನ್ನು ನಿಯತ್ತಿನಿಂದ ನೋಡಿಕೊಳ್ಳುವ ಮಹಿಳೆ(ವೇಶ್ಯೆ)ಯರಾಗಿ ಯಮುನೆ, ಚೆನ್ನಿ ನಿಲ್ಲುತ್ತಾರೆ. ಯಾವ ದೀಪಾವಳಿ ದಿನ ತಾನು ಶೀಲಗೆಟ್ಟೆನೊ ಅಂದು ಮಾತ್ರ ಯಾರೂ ತನ್ನನ್ನು ಮುಟ್ಟಕೂಡದು ಎಂಬ ನಿರ್ಧಾರ ಅವಳದು. ಯಮುನೆಯು ಬದುಕಿನಲ್ಲಿ ಪಟ್ಟಭದ್ರ ಹಿತಾಸಕ್ತಿ(ಜಮೀನುದಾರರ)ಗಳ ಕೈಗೊಂಬೆಯಾದರೆ, ಚೆನ್ನಿ ಬದಲಾದ ಕಾಲ, ಸಂದರ್ಭದಲ್ಲಿ ಜಾಗತೀಕರಣ(ಬಂಡವಾಳಶಾಹಿ)ಗಳಿಗೆ ಬಲಿಯಾಗಿದ್ದಾಳೆ. ಮಹಿಳಾ ಶೋಷಣೆಯೆಂಬುದು ಕಾಲ, ಸಂದರ್ಭಕ್ಕೆ ತಕ್ಕಂತೆ ವಿವಿಧ ಸ್ವರೂಪ ಪಡೆದು ಇಂದಿಗೂ ಜೀವಂತಾಗಿರುವುದಕ್ಕೆ ಈ ಕಥನಗಳು ಉದಾಹರಣೆಯಾಗಿವೆ.

ಮಹಿಳೆಯರ ಅಸಹಾಯಕತೆ, ಬಡತನ, ಮುಗ್ಧ ನಂಬಿಕೆಗಳು ಅವರ ಕೌಟುಂಬಿಕ ಸದಸ್ಯರಿಂದಲೇ ಅವರನ್ನು ವೇಶ್ಯಾವೃತ್ತಿಗೆ ಇಳಿಯುವಂತೆ ಮಾಡುವುದನ್ನು ಕಥನ ಸಾಹಿತ್ಯದಲ್ಲಿ ಕಾಣುತ್ತೇವೆ. ಹೆತ್ತ ಅಪ್ಪ ಅಮ್ಮಂದಿರು ತಮ್ಮ ಸ್ವಂತ ಮಕ್ಕಳನ್ನು ವೇಶ್ಯಾವೃತ್ತಿಗೆ ತಳ್ಳಿ ಹಣ ಸಂಪಾದಿಸಿದ ಸಂಗತಿಯನ್ನು ಶ್ಯಾಮಲಾ ಬೆಳಗಾಂವಕರ ಅವರ 'ಕರುಳ ಕತ್ತರಿ' ಕಥೆ ನಿರೂಪಿಸುತ್ತದೆ. ಬಣಗಾರ ಗದಿಗೆಪ್ಪ, ಸಣ್ಣವ್ವರ ಕೊನೆಯ ಮಗಳು ಚಂದ್ರಿ ಶಹರದಲ್ಲಿ ಗಾಯನ-ವಾದನಗಳಿಂದ ವೆಂಕಪ್ಪ ನಾಯಕರ(ಜಮೀನ್ದಾರಿ ವ್ಯವಸ್ಥೆಯ ಸಂಕೇತ)ನ್ನು ಸಂತೋಷಪಡಿಸುತ್ತ ಅವರ ಇಟ್ಟುಕೊಂಡಾಕೆಯಾಗಿ ಬಾಳುತ್ತಾಳೆ. ಇಷ್ಟಕ್ಕೂ ಸುಮ್ಮನಿರದ

ಅವಳ ತಂದೆ ಮನೆಗೆ ಹೋಗಿ ನಯವಾದ ಮಾತಿನಿಂದ ಮದ್ದುಕೊಟ್ಟು ಮತಿಭ್ರಮಣೆಗೊಳಗಾಗುವಂತೆ ಮಾಡಿ ಅವಳ ಸಂಪಾದನೆಯನ್ನು ಅಪಹರಿಸುತ್ತಾನೆ. ಹೆತ್ತ ತಂದೆ ತಾಯಿಯರಿಂದ ಮೋಸಹೋಗಿ ಬದುಕನ್ನು ತೆತ್ತುಕೊಳ್ಳುವ ಮಹಿಳೆಯರ ಕುರಿತಂತೆ ಇದೊಂದು ಸಾಂಕೇತಿಕ ಕತೆಯಾಗಿದೆ. 'ಹೇಣತೀ ಮ್ಯಾಲೆ ಜೀವಾ ಮಾಡಿದ್ಹಾಂಗ ನನ್ನ ಮ್ಯಾಲೆ ಸಹ ಜೀವ ಕಳಕೋತಾರ. ಇಷ್ಟ ಯಾಕ ಅವ್ರ ಹೇಂಣ್ತಿ ಸುದ್ದಾ ಬಾಳ ದೊಡ್ಡ ಮನಸ್ನೋರು ಅದಾರ.'[೨೫] ಚಂದ್ರಿಯ ಮಾತುಗಳು ಯಥಾಸ್ಥಿತಿಯನ್ನು ಒಪ್ಪಿಕೊಂಡು ಬದುಕುವ ಅಸಹಾಯಕ ಹೆಣ್ಣಿನ ನಿವೇದನೆಯಾಗಿವೆ. ತುಳಸಿ ವೇಣುಗೋಪಾಲ್ ಅವರ 'ಹೊಂಚು' ಕತೆಯ ಸಕ್ಕುವಿನ ಸಂಘರ್ಷಗಳು ಮಹಾನಗರದ ಸ್ಥಾಪಿತ ಹಿತಾಸಕ್ತಿಗಳ ಕರಾಳ ಮುಖವನ್ನು ತೋರಿಸುವ ಸಂಕಟಗಳಾಗಿ ಕಥೆಯಲ್ಲಿ ಅನಾವರಣಗೊಂಡಿವೆ. ಗ್ರಾಮದಲ್ಲಿ ಬಿದ್ದ ಅನಾವೃಷ್ಟಿಯ ಬೇಗೆಯನ್ನು ತಾಳಲಾರದೆ ಮುಂಬಯಿಗೆ ಹೊರಟಾಗ ಸಕ್ಕುವಿನ ಉತ್ಸಾಹ ಇಮ್ಮಡಿಯಾಗಿದ್ದು ನಿಜ. ನಗರದ ಅಣ್ಣನ ಕುಟುಂಬದ ತಿರಸ್ಕಾರ, ತನ್ನ ಕರಾಳ ದಂದೆಗೆ ಈ ಕುಟುಂಬವನ್ನು ನೂಕುವ ಅಣ್ಣನ ಕಳ್ಳವ್ಯಾಪಾರದ ವ್ಯವಸ್ಥೆ, ಜೈಲಿಗೆ ಹೋಗಿಬರುವ ಗಂಡ, ಆದಾಯ ತರಲಾರದ ಗಂಡನ ಇಲಿ ಹೊಡೆಯುವ ವೃತ್ತಿಗಳು ನಗರ ಬದುಕಿನ ನಿಜವಾದ ನರಕವನ್ನು ತೆರೆದಿಡುತ್ತವೆ.

> 'ಜಾಡಿಗೆ ಕೊಡುವುದು ಬಾಕಿ ಇದೆ. ಮಕ್ಕಳಲ್ಲಿ ಒಬ್ಬರಲ್ಲ ಒಬ್ಬರನ್ನು ನಿತ್ಯ ದವಾಖಾನೆಗೆ ಒಯ್ಯುವುದಿದೆ. ಹೀಗೆ ಅಳುತ್ತಲೆ ತಲೆಗೆ ಬಣ್ಣದ ಕ್ಲಿಪ್ ಸಿಕ್ಕಿಸಿ, ಮುಖಕ್ಕೆ ಬಣ್ಣ, ಟಿಕಲಿ ಹಚ್ಚಿ ತಯಾರಾಗುವ ಸಕ್ಕೂಳನ್ನು ನೋಡುವಾಗ ಪಾಂಡುವಿಗೆ ಸಂಕಟವಾಗುತ್ತದೆ. ಅವಳು ತನಗೀಗ ಬೇಕೀಬೇಕು ಎನ್ನುವ ಇಚ್ಛೆ ತಲೆಗೇರಿ, ಕೈಚಾಚುವ ಹೊತ್ತಿಗೆ ಸಕ್ಕೂ ಸಿಗುವುದೇ ಇಲ್ಲ'[illegible]

ಸಕ್ಕೂವನ್ನು ನಗರದ ಕೀ-ಗೊಂಬೆಯಾಗಿ ಪರಿವರ್ತಿಸಿದ್ದು ಬಡತನವಾದರೆ, ನಗರದ ಬಂಡವಾಳಶಾಹಿ ವ್ಯವಸ್ಥೆ ಪಾಂಡುವಿನ ಬದುಕನ್ನು ಬಲಿತೆಗೆದುಕೊಳ್ಳುತ್ತದೆ. ಭಾವುವಿನ ಇಸ್ಪೀಟ್ ಅಡ್ಡೆಯ ಸ್ನೇಹಿತರ ಕಾಮದಾಟಕ್ಕೆ ಸಕ್ಕೂ ಎಳೆಯಲ್ಪಟ್ಟಾಗ, ಭಾವುವಿನ ತಣ್ಣನೆಯ ಕ್ರೌರ್ಯಕ್ಕೆ ಜಯವಾಗುತ್ತದೆ. ಅಣ್ಣನಿಂದಲೇ ವೇಶ್ಯೆಯಾದ ಸಕ್ಕೂಬಾಯಿಯದು ಆರ್ಥಿಕ ಅಸಹಾಯಕತೆಯ ಸಂಘರ್ಷವೆನ್ನಿಸಿದೆ.

ಕೆಳವರ್ಗದ ಮಹಿಳೆಯರ ಮೇಲೆ ಲೈಂಗಿಕ ಹಲ್ಲೆ ಏಕೆ ನಡೆಯುತ್ತದೆ ಎಂಬುದಕ್ಕೆ ಕಥನ ಸಾಹಿತ್ಯದಲ್ಲಿ ಮೊದಲು ಸಿಕ್ಕುವ ಕಾರಣ, ಆ ಮಹಿಳೆಯ ಬಡತನ ಮತ್ತು ಚೆಲುವುಗಳಾಗಿವೆ. ಇವೆರಡೂ ಅಂಶಗಳು ಅಸಹಾಯಕ ಮಹಿಳಾ ವರ್ಗಕ್ಕೆ ಶಾಪಗಳಾದರೆ, ಕಣ್ಣಿಗೆ ಸುಂದರವಾಗಿ ಕಂಡ ಹೆಣ್ಣುಗಳೆಲ್ಲಾ ತಮ್ಮ ಉಪಭೋಗಕ್ಕೆ ಇರುವವರು ಎಂಬ ಊಳಿಗಮಾನ್ಯ ಮತ್ತು ಬಂಡವಾಳಶಾಹಿಗಳ ಸಾಮಾಜಿಕ ನೀತಿ ಇಂಥ ಲೈಂಗಿಕ ಹಲ್ಲೆ, ಶೋಷಣೆಗಳಿಗೆ ನಿರಂತರ ಕಾರಣವಾಗುತ್ತದೆ. ಯಮುನ, ಚಿನ್ನಿ, ಚಂದ್ರಿ ಮತ್ತು ಸಕ್ಕೂ ಇವರೆಲ್ಲ ಪುರುಷ ಅಧೀನತೆಯನ್ನು ಒಪ್ಪಿಕೊಂಡ ಮಹಿಳೆಯರಾಗಿದ್ದಾರೆ. ಮೇಲ್ವರ್ಗ/ಮೇಲ್ಜಾತಿ ಪುರುಷರ ಉಪಪತ್ನಿಯರಾಗಿ ಬಾಳುವುದರಲ್ಲಿ ಇವರು ಕೃತಕೃತ್ಯರಾಗುತ್ತಾರೆ ಎಂಬಂತೆ ಕಥನಗಳು ಚಿತ್ರಿಸಿವೆ. ದಲಿತ, ಕೆಳವರ್ಗದ ಮಹಿಳೆಯರು ಇಂತಹ ಸಂಬಂಧಗಳನ್ನು ಹೊಂದುವುದು ತಮ್ಮ ಬದುಕಿನ ಅತ್ಯಂತ ಧನ್ಯತೆಯ ಕ್ಷಣಗಳೆಂದು ಭಾವಿಸುವ ಮತ್ತು ಕೃತಕೃತ್ಯರಾದಂತೆ ವರ್ತಿಸುವುದು ಕಥನಗಳಲ್ಲಿ ಕಂಡುಬರುತ್ತದೆ. ಇವರಲ್ಲಿ ತಮ್ಮ ಜಾತಿ ಕುರಿತು ಅಭಿಮಾನ ಕಡಿಮೆ ಎಂಬಂತೆ ನಿರೂಪಕರು ತಮ್ಮ ಸಾಹಿತ್ಯಿಕ ಸತ್ಯವನ್ನು ಲೋಕಸತ್ಯವೆಂಬಂತೆ ಬಿಂಬಿಸಿ ವರ್ಣಿಸುತ್ತಾರೆ. ಆದರೆ ವಾಸ್ತವಿಕವಾಗಿ ಜಾತಿ/ಧರ್ಮ/ವರ್ಗಗಳ ನೆಲೆಯಲ್ಲಿ ಅವರ ಸ್ಥಿತಿಯನ್ನು ವಿಶ್ಲೇಷಿಸುವುದಕ್ಕಿಂತ ಆರ್ಥಿಕ ನೆಲೆಯಲ್ಲಿ ವಿಶ್ಲೇಷಿಸುವುದು ಹೆಚ್ಚು ಸೂಕ್ತ ಎಂಬುದು ಅಧ್ಯಯನದ ನಿಲುವಾಗಿದೆ. ಯಾಕೆಂದರೆ, ಯಾವುದೇ ಹೆಣ್ಣು ತಾನಾಗಿ ಇಷ್ಟಪಟ್ಟು ವೇಶ್ಯೆಯಾಗುವುದಿಲ್ಲ. ಬಡತನ, ಕೌಟುಂಬಿಕ ಸಮಸ್ಯೆಗಳು, ಅಸಹಾಯಕತೆ, ವ್ಯವಸ್ಥೆಯ ದೌರ್ಜನ್ಯ, ಪುರುಷ ದಬ್ಬಾಳಿಕೆ, ಹಣ ಮಾಡುವ ಮಧ್ಯವರ್ತಿ ಜಾಲಗಳು ಅವಳನ್ನು ಈ ವೃತ್ತಿಗೆ ತಳ್ಳುತ್ತವೆ ಎಂಬುದು ಅಧ್ಯಯನ ಕಂಡುಕೊಂಡ ಸತ್ಯವಾಗಿದೆ.

### ಡ. ಕೌಟುಂಬಿಕ ಹೊಸನೆಲೆ ಮತ್ತು ಅವ್ವ

ಕೌಟುಂಬಿಕ ನೆಲೆಯಲ್ಲಿ ಅವ್ವನ ವ್ಯಕ್ತಿತ್ವ ಅಪ್ಪನ ವ್ಯಕ್ತಿತ್ವಕ್ಕಿಂತ ಹೆಚ್ಚು ಪೂರಕ ಮತ್ತು ಪ್ರಭಾವಶಾಲಿಯಾದದ್ದು. ಮಕ್ಕಳಿಗೆ ಅಪ್ಪನಿಗಿಂತ ಹೆಚ್ಚು ಆತ್ಮೀಯಳಾದ ಅವ್ವ ಗ್ರಾಮೀಣ ಬದುಕಿನ ಮುಗ್ಧ ಪ್ರೀತಿಯ ಸಂಕೇತವೂ ಹೌದು. ಕೆಲವೊಮ್ಮೆ ಈ ಮುಗ್ಧ ಪ್ರೀತಿ ಉತ್ಕಟ ಪ್ರೀತಿಯೂ ಆಗುವುದುಂಟು.

ಗ್ರಾಮೀಣ ಪರಿಸರದಿಂದ ನಗರ ಪರಿಸರಕ್ಕೆ ಮಗ ಸೊಸೆಯರೊಂದಿಗೆ ಬಂದ (ನಂತರ ಬರಮಾಡಿಕೊಂಡ) ಅವ್ವಂದಿರು ನಗರವನ್ನು ಹೇಗೆ ಸ್ವೀಕರಿಸುತ್ತಾರೆ? ಅಥವಾ ನಗರ ಬದುಕು ಅವರನ್ನು ಹೇಗೆ ಸ್ವೀಕರಿಸುತ್ತದೆ ಎಂಬ ವಿವರಗಳನ್ನು ಮುಂಬಯಿ ಕರ್ನಾಟಕದ ಕಥನ ಸಾಹಿತ್ಯ ದಾಖಲಿಸಿದೆ. ಇಂತಹ ಸಂದರ್ಭಗಳನ್ನು ಅಧ್ಯಯನ ಎರಡು ದೃಷ್ಟಿಕೋನಗಳಿಂದ ಸೂಕ್ಷ್ಮವಾಗಿ ಗಮನಿಸುತ್ತದೆ. ಮೊದಲನೆಯದು, ಸುಶಿಕ್ಷಿತ ಅವ್ವ (ತಾಯಿ) ಸುಶಿಕ್ಷಿತ ಮಗನೊಂದಿಗೆ ನಗರ/ವಿದೇಶ ಪರಿಸರವನ್ನು ಸ್ವೀಕರಿಸಿದ ಬಗೆ. ಎರಡನೆಯದು, ಮುಗ್ಧ, ಅಶಿಕ್ಷಿತ ಅವ್ವ ಗ್ರಾಮದ ಅಶಿಕ್ಷಿತ ಸೊಸೆ, ಮಗನೊಂದಿಗೆ ಅಥವಾ ನಗರದ ವಿದ್ಯಾವಂತ ಮಗ ಸೊಸೆಯರೊಂದಿಗೆ ಹೊಂದಿಕೊಂಡ ರೀತಿಯನ್ನು ತುಲನಾತ್ಮಕವಾಗಿ ಗಮನಿಸುತ್ತದೆ.

ಗೀತಾ ಕುಲಕರ್ಣಿ ಅವರ 'ಸೇರಾ' ಕತೆಯಲ್ಲಿ ಮಗ ನಿತಿನ್‌ನೊಂದಿಗೆ ಮಲೇಶಿಯಾಕ್ಕೆ ಬಂದು (ಅವನಿಗೆ ಕರುಣಳನ್ನು ಮದುವೆ ಮಾಡಿಸಿ) ಅವರೊಂದಿಗೆ ವಾಸಿಸುತ್ತಿರುವ ತಾಯಿ (ಅವ್ವ) ಕುಟುಂಬದ ಕೆಲಸಗಳನ್ನು ಸೊಸೆಗೆ ಆದೇಶಿಸಿ ಮಾಡಿಸುತ್ತಾಳೆ. ತಪ್ಪಿದರೆ ಇಲ್ಲಿಯ ಅಡಿಗೆ, ಸಂಪ್ರದಾಯಗಳನ್ನು ಕಲಿಸಿಕೊಡುತ್ತಾಳೆ. 'ನಿತಿನ್ ಆಫೀಸಿಗೆ ಹೋಗಿ ಆಯ್ತಿಲ್ಲ- ಅಡುಗೆಗಿಷ್ಟು ತೋರ್ಸಿ, ನಾನು ಕಾಳಿ ಮಂದಿರಕ್ಕೆ ಹೋಗಿ ಬರುತ್ತೇನೆ"[೭೦] ಎನ್ನುವ ತಾಯಿ ಸೊಸೆಯೊಂದಿಗೆ ಹೊಂದಿಕೊಂಡಿದ್ದರೂ, ಎಲ್ಲೋ ಅವಳ ಮಾತಿನ ಜಾಡಿನಲ್ಲಿ ಸೊಸೆಯ ಮೇಲೆ ಅಧಿಕಾರದ ಎಳೆ ಇರುವುದು ಕಂಡುಬರುತ್ತದೆ. ಇವಳೊಬ್ಬ ಸುಶಿಕ್ಷಿತ ತಾಯಿಯಾದ್ದರಿಂದ ಮಾತಿನಲ್ಲಿ ಅನುನಯ ಕೂಡ ತುಂಬಿದೆ. ವಿದ್ಯಾವಂತ ಮಗ, ಸೊಸೆಯರೊಂದಿಗಿನ ಕುಟುಂಬಕ್ಕೆ ಇವಳು ಯಜಮಾನಿಯೂ, ಗೌರವಿತಳೂ ಆಗುತ್ತಾಳೆ.

ಕಳ್ಳೀಗುದ್ದಿ ಗ್ರಾಮದಿಂದ ಬೆಳಗಾವಿ, ಧಾರವಾಡ ನಂತರ ಹುಬ್ಬಳ್ಳಿ ನಗರಗಳಿಗೆ ಬಂದು ಮೂವರು ಹೆಣ್ಣುಮಕ್ಕಳ ಸಂಗೀತ ಶಿಕ್ಷಣಕ್ಕಾಗಿ ಮನೆ ಮಾಡಿದ್ದ ರಾಘವೇಂದ್ರ ಪಾಟೀಲ ಅವರ 'ಮಾಯಿಯ ಮುಖಗಳು' ಕಥೆಯ ಕೃಷ್ಣೋಪಂತರ ಕುಟುಂಬ ತಮ್ಮ ಮೊದಲ ಮಗಳು ಗಂಗ ಮತ್ತು ಮೂರನೆ ಮಗಳು ನರ್ಮದಾಳನ್ನು ಕಳೆದುಕೊಳ್ಳುತ್ತದೆ. ಇಂತಹ ಸಂದರ್ಭದಲ್ಲಿಯೇ ನಿಜವಾದ ಅವ್ವ(ತಾಯಿ)ನ ಆತ್ಮಸ್ಥೈರ್ಯ ಪ್ರಕಟಗೊಳ್ಳುತ್ತದೆ ಎಂದು ಹೇಳಬಹುದು. 'ಮಕ್ಕಳನ್ನು ದಕ್ಕಿಸಿಕೊಳ್ಳಲಾಗದ್ದಕ್ಕೆ ಕೃಷ್ಣಾಬಾಯಿ ಭೋರೆಂದು ಅತ್ತಳು. ಹುಬ್ಬಳ್ಳಿ ಧಾರವಾಡಗಳನ್ನು ಮನಸೋಕ್ತ ಶಾಪಿಸಿದಳು"[೭೧] ಮಕ್ಕಳನ್ನು ಕಳೆದುಕೊಂಡಿದ್ದಕ್ಕಾಗಿ ಹೆತ್ತ ಕರುಳು ಮೊದಲು ನಗರ ಸಂಸ್ಕೃತಿಗೆ ಶಾಪ ಹಾಕುತ್ತದೆ. ನಂತರ ತಕ್ಷಣ ಜಾಗ್ರತಳಾದ ಅವಳ ಮನಸ್ಥೈರ್ಯ ಇದ್ದ ಮಗಳೊಬ್ಬಳನ್ನು ಮತ್ತು ಮಕ್ಕಳಿಬ್ಬರ ಕುರಿತು ಚಿಂತಿಸುತ್ತ ಅರೆಹುಚ್ಚನಂತಾದ ಗಂಡನನ್ನು ಉಳಿಸಿಕೊಳ್ಳುವತ್ತ ಗಮನ ಕೊಡುವುದನ್ನು ಕತೆಯಲ್ಲಿ ಕಾಣುತ್ತೇವೆ. ಶಿಕ್ಷಣ, ಸಂಗೀತ, ನಗರ, ನಗರ ಸಂಸ್ಕೃತಿ, ಸೌಲಭ್ಯಗಳನ್ನು ನಿರ್ದಾಕ್ಷಿಣ್ಯವಾಗಿ ನಿರಾಕರಿಸಿ, ಈ ತಾಯಿ (ಮೇಲ್ಜಾತಿಯ ಮಹಿಳೆ) ತನ್ನ ಕುಟುಂಬ ಸಂರಕ್ಷಣೆಯನ್ನು ಮೊದಲ ಆದ್ಯತೆಯಾಗಿ ಪರಿಗಣಿಸುವುದು ತಾಯಂದಿರ ಕ್ಷೇಮಭಾವವನ್ನು ಸೂಚಿಸುವ ಅಂಶ ಎಂದು ಅಧ್ಯಯನ ಭಾವಿಸುತ್ತದೆ. ಅವ್ವ (ತಾಯಿ) ಯಾವುದೇ ಜಾತಿ, ಧರ್ಮದವಳಾಗಿರಲಿ, ಬಡವ, ಶ್ರೀಮಂತಳಿರಲಿ ಅವಳ ಮೊದಲ ಆದ್ಯತೆ ಕೌಟುಂಬಿಕ ರಕ್ಷಣೆ ಎಂಬುದನ್ನು ಪಾಟೀಲ ಪುಟ್ಟಪ್ಪ ಅವರ 'ಹೊನ್ನಯ್ಯನ ಬದುಕು' ಕತೆಯ ಓಬವ್ವನ ವರ್ತನಾಂಶಗಳಿಂದ ತಿಳಿಯುತ್ತೇವೆ. ಗಂಡನ ದುಶ್ಚಟಗಳಿಂದ ಬೀದಿಗೆ ಬಿದ್ದ ಸಂಸಾರವನ್ನು ಸೊಸೆ, ಮಗನ ಸಹಾಯದಿಂದ ನಗರಕ್ಕೆ ತಂದು ಶ್ರಮವಹಿಸಿ ದುಡಿದು ಬದುಕುತ್ತಿದ್ದ ಕುಟುಂಬದ ತಾಯಿ (ಅವ್ವ) ಮತ್ತೆ ಕುಟುಂಬ ಬೀದಿಗೆ ಬೀಳುವ ಪ್ರಸಂಗ ಬಂದಾಗ ಗಂಡನನ್ನೆ ಪ್ರತಿಭಟಿಸುತ್ತಾಳೆ. ದುಶ್ಚಟಗಳನ್ನು ಬಿಟ್ಟುಬಿಡಲು ಒತ್ತಾಯ ಹೇರುತ್ತಾಳೆ. 'ಹೊಸ್ನನ್ನ ಕರೆದು ನಿನ್ನ ಗಿರಾಗತಿ ಬಿಡಿಸ್ಬಿಟ್ಟೇನು"[೭೨] ಎಂದು ದಾರಿ ತಪ್ಪಿದ ಗಂಡನನ್ನು ಎಚ್ಚರಿಸಿ, ಸಾಮ, ದಾನ, ಬೇಧ, ದಂಡ ಹೀಗೆ ಚತುರೋಪಾಯಗಳಿಂದ ತಿದ್ದಲೆತ್ನಿಸುವ, ಕೌಟುಂಬಿಕ ವಿಘಟನೆಯನ್ನು ತಡೆಯಲು ಸಂಘರ್ಷಕ್ಕಿಳಿಯುವ ಇವಳು ಗ್ರಾಮೀಣ ಕಷ್ಟ ಸಹಿಷ್ಣು ಅವ್ವಳಾಗಿದ್ದಾಳೆ. ಈ ಕುರಿತು ಗಂಡನಿಗೂ ಮಗನಿಗೂ ಘರ್ಷಣೆಯಾದಾಗ ಮಗನನ್ನು ಉಳಿಸಲು ಬಂದ ಅವ್ವ ಕುಡುಗೋಲಿಗೆ ಬಲಿಯಾಗುತ್ತಾಳೆ. ಇದು ಗ್ರಾಮೀಣ ಅವ್ವ (ತಾಯಿ) ಶ್ರಮಜೀವಿ ಮಗ (ಕುಟುಂಬ)ನನ್ನು ಉಳಿಸಲು, ಗಂಡನ ದುಶ್ಚಟಕ್ಕೆ (ಸಂಘರ್ಷ) ತನ್ನನ್ನು ತಾನು ಬಲಿಕೊಟ್ಟುಕೊಳ್ಳುವ ವ್ಯಕ್ತಿತ್ವವಾಗಿದೆ. ಮಿತ್ರಾ ವೆಂಕಟರಾಜ್ ಅವರ 'ಕೊನೆಯ ದಿನ' ಕಥೆಯ ಮೋರಿಬಾಯಿ ಸಹ ಇಂಥ ವ್ಯಕ್ತಿತ್ವವನ್ನು ಹೊಂದಿದ ಮಹಿಳೆಯಾಗಿದ್ದಾಳೆ. ಗಂಡ ಸತ್ತ ನಂತರ ಗರ್ಭಿಣಿ ಸ್ಥಿತಿಯಲ್ಲಿ ನಗರ ಪ್ರವೇಶಿಸಿ, ಕೂಲಿನಾಲಿ ಮಾಡುತ್ತ ಮಗನನ್ನು ಸಾಕುತ್ತಾಳೆ. ನಗರದ ಕಟ್ಟಡ ಕಟ್ಟುವ ಕೆಲಸಕ್ಕೆ ಹೋಗಿ ತನ್ನದೆ

ಒಂದು ಸೂರು ಮಾಡಿಕೊಂಡು ನಂತರ ಹಾಲಿನ ವ್ಯಾಪಾರ ಮಾಡಿ ಮಗನನ್ನು ಓದಿಸುವ ಮೋರಿಬಾಯಿಯ ಬದುಕು ಸಂಘರ್ಷಗಳಿಂದ ತುಂಬಿದೆ.

> ಹಾಲಿನ ಬಾಟ್ಲಿಗಳನ್ನು ಚೀಲದಲ್ಲಿ ತುಂಬಿಕೊಂಡು ಹೋಗುತ್ತಿದ್ದಾಳೆ. ಕೈಯಲ್ಲೆರಡು ಚೀಲ, ಬೆನ್ನ ಮೇಲೊಂದು. ಸರಸರನೆ ಸಾಗುತ್ತಿದ್ದಾಳೆ. 'ಇನ್ನೆಷ್ಟು ದಿನ ಬಹೆನ್, ಇನ್ನೆಷ್ಟು ದಿನ? ನನ್ನ ಮಗು ದೊಡ್ಡವನಾಗಿ ಕೆಲಸ ಮಾಡಲು ಸುರು ಮಾಡಿದನೆಂದರೆ, ಮತ್ತೆಲ್ಲಿ ನನ್ನನ್ನು ಬಿಟ್ಟಾನು? ಕಾಲ ಮೇಲೆ ಕಾಲು ಹಾಕಿ ಕುಳಿತು ಪಾನ ಮೆದ್ದರಾಯಿತು, ಆಗ.' ಎನ್ನುತ್ತಾಳೆ. ಬಾಯಿ ಇಷ್ಟಗಲ ಮಾಡಿ ನಗುತ್ತಾಳೆ[೬]

ಮೋರಿಬಾಯಿ ಸಾಕಿ ಸಲುಹಿದ ಇಬ್ಬರು ವ್ಯಕ್ತಿಗಳು (ರಾಜಿ ಮತ್ತು ಮಗ) ಅವಳಿಗೇ ನೈತಿಕದ್ರೋಹ ಮಾಡುವುದನ್ನು ಗಮನಿಸಿದರೆ, ನಗರ ಪರಿಸರದ ಕ್ರೌರ್ಯ ಮತ್ತು ಭೀಕರತೆಗಳ ಅರಿವಾಗುತ್ತದೆ. ಸೀಮೆಎಣ್ಣೆ ಸುರಿದು ಸಾಯಿಸಿದ ಮಗನನ್ನು ಕಾನೂನಿನ ಕೈಯಿಂದ ಉಳಿಸಲು, ಇದು ನಾನೇ ಮಾಡಿಕೊಂಡಿದ್ದು ಎಂದು ಪೊಲೀಸರಿಗೆ ಹೇಳಿ ಕೌಟುಂಬಿಕ ವಿಘಟನೆ(ಕಾನೂನಿನ ಪ್ರಹಾರದಿಂದ ಕೌಟುಂಬಿಕ ನಾಶ)ಯನ್ನು ತಡೆದು ಸಾವನ್ನಪ್ಪಿದ ಅವ್ವ ಮೋರಿಬಾಯಿಯಾಗಿದ್ದಾಳೆ.

ಎಸ್.ಎಫ್. ಯೋಗಪ್ಪನವರ ಅವರ 'ಆರಾಮ ಖುರ್ಚಿ' ಕತೆಯ ಹನುಮವ್ವ, ಮಕ್ಕಳ ಕೌಟುಂಬಿಕ ಸಂಘರ್ಷವನ್ನು ತಣ್ಣಗೆ ಸ್ವೀಕರಿಸಿ ಮೌನದಲ್ಲಿ ತನ್ನನ್ನು ತಾನು ಶಪಿಸಿಕೊಂಡು ನೋವು ನುಂಗುವ ಮುಗ್ಧ ಅವ್ವ(ತಾಯಿ)ಳಾಗಿದ್ದಾಳೆ. ಕೂಲಿ ಕುಂಬಳಿ ಮಾಡಿ ಮಕ್ಕಳನ್ನು (ಯಲಗುರದಪ್ಪ, ಲಕ್ಷ್ಮಣ) ಓದಿಸಿ, ನೌಕರಿ ಕೊಡಿಸಿದ ನಂತರ ನಗರ(ಹುಬ್ಬಳ್ಳಿ)ದಲ್ಲಿದ್ದ ಮಕ್ಕಳ ಸಂಸಾರ ನೋಡಿ ಸಂತೋಷ ಪಡಲು ಹಳ್ಳಿಯಿಂದ ಕಾಳುಕಡ್ಡಿ ತೆಗೆದುಕೊಂಡು ಬರುತ್ತಾಳೆ. ಮಕ್ಕಳ ಮಧ್ಯೆ ಸಂತೋಷದಿಂದ ಇರುವುದೆಂದರೆ ಬೆಳದಿಂಗಳಲ್ಲಿ ಕಟ್ಟೆಯ ಮೇಲೆ ಕುಳಿತ ಹಾಗೆ ಎಂದು ಆಶಿಸಿದ್ದ ಅವ್ವ, ನಗರದ ಬದುಕು ಮಕ್ಕಳ, ಸೊಸೆಯಂದಿರ ಮೇಲೆ ಪ್ರಭಾವದೀರಿದ್ದನ್ನು ಅರಿತು ನೊಂದುಕೊಳ್ಳುತ್ತಾಳೆ. ಹಳ್ಳಿಯ ಮುಗ್ಧರಾದ ಮಕ್ಕಳು ಹಣ ಗಳಿಸಿ ಎಣಿಸುವುದನ್ನು (ಆರ್ಥಿಕ ಸ್ವಾತಂತ್ರ್ಯ) ಕಲಿತೊಡನೆ ಸಂಘರ್ಷ ಆರಂಭವಾಗುತ್ತದೆ. ಕತೆಯಲ್ಲಿ ಬರುವ 'ಎಲ್ಲಾ ಕೊಟ್ಟೂ ಕಸಿದುಕೊಂಡ ದೇವರಿಗೆ ಹನುಮವ್ವ ಶಾಪ ಹಾಕಿದಳು'[೭] ಎಂಬ ಮಾತಿನಲ್ಲಿಯ ಎಲ್ಲ ಕೊಟ್ಟೂ ಎಂಬ ಪದದ ಅರ್ಥವ್ಯಾಪ್ತಿ ಸಂಕೀರ್ಣವಾಗಿದೆ. ಅಂದರೆ ಮಕ್ಕಳಿಗೆ ವಿದ್ಯಾಭ್ಯಾಸ, ನೌಕರಿ, ಸಂಬಳ, ಸಂಸಾರ ಕೊಟ್ಟ ದೇವರು ಕಸಿದುಕೊಂಡಿದ್ದು ಏನನ್ನು ಎಂಬ ಪ್ರಶ್ನೆ ಅಧ್ಯಯನದ ಮುಂದಿದೆ. ಗ್ರಾಮದಲ್ಲಿ ಜನಿಸಿ, ಓದಿ ನಗರಕ್ಕೆ ಬಂದು ನೌಕರಿ ಆಶ್ರಯಿಸಿದ ಮಕ್ಕಳಿಗೆ ಈ ನಗರ ಇವೆಲ್ಲವನ್ನೂ ಕೊಟ್ಟಿದೆ. ಆದರೆ ಬಂಧುತ್ವ ಪ್ರೀತಿ, ಸಹನೆ, ಸಹಬಾಳ್ವೆ ನೆಮ್ಮದಿಯನ್ನು (ಮಕ್ಕಳಿಗೆ ನಗರವೇ ದೇವರಾಗಿರುವ ಮಾತಿನ ವ್ಯಂಗ್ಯವನ್ನು ಇಲ್ಲಿ ಗುರುತಿಸಬಹುದು) ಕಸಿದುಕೊಂಡಿರುವುದು ಸ್ಪಷ್ಟವಾಗಿದೆ. ಇಲ್ಲಿ ಹನುಮವ್ವ ಕೇವಲ ಒಬ್ಬ ವೃದ್ಧ ಮಹಿಳೆಯಾಗಿ ನಿಲ್ಲುವುದಿಲ್ಲ, ಬದಲಾಗಿ ಮನ ಮಿಡಿಸಿಕೊಳ್ಳುವ ವೃದ್ಧ ತಾಯಿಯಾಗಿ (ಕೊನೆಯ ದಿನ ಕತೆಯ ಮೋರಿಬಾಯಿ, ಮಣ್ಣಿನ ಗುಣ ಕತೆಯ ಗಂಗವ್ವ ಇತ್ಯಾದಿ) ಲಕ್ಷಾಂತರ ಮಾತೃ ಹೃದಯಗಳ ಸಂವೇದನೆಯ ಪ್ರತೀಕವಾಗಿ ನೋವು, ವೇದನೆಯನ್ನು ನುಂಗಿ ನಿಲ್ಲುತ್ತಾಳೆ. ಕರುಳು ಹಂಚಿಕೊಳ್ಳುವ ಮನಸ್ಸು ಯಾರಿಗೂ ಇರಲಿಲ್ಲ ಎಂಬ ವಾಕ್ಯ ಇದನ್ನು ಸಾಕ್ಷೀಕರಿಸುತ್ತದೆ. ಆರಾಮ ಖುರ್ಚಿಯಲ್ಲಿ ಕುಳಿತು ಸುಖ ಅನುಭವಿಸಿದ ಅವ್ವನಿಗೆ ಮಕ್ಕಳ ವೈಮನಸ್ಸಿನಿಂದ ಅದು ಮುಳ್ಳಿನಂತಾಗಿ ಅಲ್ಲಿಯೇ ಪ್ರಾಣಬಿಡುತ್ತಾಳೆ. ಮಕ್ಕಳ ಮುಖಾಂತರ ಹನುಮವ್ವ (ಗ್ರಾಮೀಣ ಅವ್ವ) ನಗರವನ್ನು ಸ್ವೀಕರಿಸುತ್ತಾಳೆ. ಆದರೆ ನಗರವು ಮಕ್ಕಳ ಮುಖಾಂತರ ಅವಳನ್ನು ನಿರಾಕರಿಸುತ್ತದೆ ಎಂಬ ನಿಲುವಿಗೆ ಅಧ್ಯಯನ ಬರುತ್ತದೆ.

ಕೃಷ್ಣಾಬಾಯಿ, ಓಬವ್ವ, ಮೋರಿಬಾಯಿ, ಹನುಮವ್ವ ಇವರೆಲ್ಲ ಕುಟುಂಬದ ಸದಸ್ಯರು ಮಾಡಿದ ತಪ್ಪನ್ನು ಸಮಯೋಚಿತವಾಗಿ ವಿರೋಧಿಸಿ, ಪ್ರತಿಭಟಿಸಿ ಪರಿಣಾಮ ಋಣಾತ್ಮಕವಾದಾಗ ಅದರ ಭಾರವನ್ನು ತಾವೇ ವಹಿಸಿಕೊಂಡು ಕುಟುಂಬ ರಕ್ಷಿಸುವುದನ್ನು ಕಾಣುತ್ತೇವೆ. ಕೌಟುಂಬಿಕ ವ್ಯವಸ್ಥೆಯನ್ನು ಗೌರವಿಸುವ ಇವರು ಅದರ ವಿಘಟನೆಯನ್ನು ಸಹಿಸುವುದಿಲ್ಲ, ಪ್ರಾಣ ಕೊಟ್ಟಾದರೂ ಕುಟುಂಬವನ್ನು ಅವಿಭಕ್ತವಾಗಿಡಲು ಪ್ರಯತ್ನಿಸುತ್ತಾರೆ. ಕುಟುಂಬದ ಗೌರವ ಕುರಿತು ಇವರಲ್ಲಿ ಕಳಕಳಿ, ಸಾಮಾಜಿಕ ಅಂಜಿಕೆ ಇರುವುದು ಗೋಚರಿಸುತ್ತದೆ. ದೈವಿಕ (ವಿಧಿವಾದದ) ನೆಲೆಯಲ್ಲಿ ಕುಟುಂಬದ ಆಗುಹೋಗುಗಳನ್ನು ನಿಯಂತ್ರಿಸುವ ಯಜಮಾನಿಯರಾಗಿದ್ದಾರೆ.

ಬಾಳಾಸಾಹೇಬ ಲೋಕಾಪುರ ಅವರ 'ಅವ್ವ' ಕತೆಯ ಅವ್ವ ಮಗ ಜಿನ್ನೆಸೂರನೊಂದಿಗೆ ಗ್ರಾಮ ನಿರಾಕರಿಸಿ ಗೋವಾಕ್ಕೆ ಬಂದು ಸೊಸೆ ಮಾಲತಿ, ಮೊಮ್ಮಗ(ಕೊಂಕಣಿ ಮರಾಠಿ ಮಾತನಾಡುವವ)ರೊಂದಿಗೆ ಕೌಟುಂಬಿಕವಾಗಿ ಹೊಂದಿಕೊಳ್ಳುತ್ತಾಳೆ. ಹಳ್ಳಿ ಅಜ್ಜಿ(ಮುದುಕಿ)ಯ ಕಲ್ಪನೆಯಿರದ ಮಗುವಿಗೆ 'ಣಮೋಕಾರ ಮಂತ್ರ', 'ದರ್ಶನ ಪಾಠ'ಗಳನ್ನು ಹೇಳಿಕೊಟ್ಟು ನಿಜವಾದ ಗ್ರಾಮೀಣ ಮುಗ್ಧ ಪ್ರೀತಿಯನ್ನು ಧಾರೆ ಎರೆಯುತ್ತಾಳೆ. 'ಓಣ್ಯಾಗ ಹೋಗು ಕೂಸ್ಗಳನ್ನ ಸಾಗರಬಿದ್ದು ಎತ್ತಕೋತಿದ್ದ ನಿನ್ನ ಅಪ್ಪ' ಎಂದು ಮಗನಿಗೆ ಮಕ್ಕಳನ್ನು ಪ್ರೀತಿಸುವ ಕಲೆಯನ್ನು ಕಲಿಸಿಕೊಡುತ್ತಾಳೆ. ಹಳ್ಳಿಯಿಂದ ತಾನು ಹೊಲಿದು ತಂದ ಕೌದಿಗಳನ್ನು ಹಾಸಿ, 'ಇದ ನೋಡ ಕೂಸ ನಿಮ್ಮ ಅಜ್ಜ ನನಗ ತಂದ ಪಹಲೆ ಸೀರಿ ದಡಿ. ಇದಾ ನಿಮ್ಮಪ್ಪ ಸಣ್ಣಾಂವ ಇದ್ದಾಗ ಸಂತ್ಯಾಗಿಂದ ನಾನ ತಂದ ಅಂಗಿ' ಎಂದು ಕೌದಿಯಲ್ಲಿ ಸೇರಿಸಿ ಹೊಲಿದಿದ್ದ ಪ್ರತಿ ಬಟ್ಟೆ ತುಂಡನ್ನು ತೋರಿಸುತ್ತ, ಜೊತೆಗೆ ಗ್ರಾಮೀಣ ಕೌಟುಂಬಿಕ ಸಂಬಂಧಗಳು, ಅವುಗಳ ಮೌಲ್ಯಗಳನ್ನು ಬಿಡಿಸಿ ಬಿಡಿಸಿ ಪರಿಚಯಿಸುತ್ತಾಳೆ. ಇಲ್ಲಿ ಕೌದಿ ಒಂದು ವಸ್ತು ಮಾತ್ರವಾಗಿರದೆ ಗ್ರಾಮೀಣ ಹಿರಿಯರ ನೆನಪುಗಳ ಭಂಡಾರ(ಇಂದಿನ ಕಂಪ್ಯೂಟರ್ ಮೆಮೊರಿಕಾರ್ಡ್)ವಾಗಿ ನಿಲ್ಲುತ್ತದೆ ಮತ್ತು ಒಂದು ಸಂಸ್ಕೃತಿಯ ನಿರಂತರತೆಯನ್ನು ಹುದುಗಿಸಿಕೊಂಡ ಅನನ್ಯತೆಯಾಗಿ ಉಳಿಯುತ್ತ ಕಾಲವನ್ನು ಹಿಡಿದಿಡುತ್ತದೆ. ಮೊಮ್ಮಗನೊಂದಿಗೆ ಮುದುಕಿ ರಸ್ತೆ ದಾಟುವಾಗ ವಾಹನ ಅಪಘಾತವಾಗಿ, ಮೆದುಳು ಸ್ಮೃತಿ ತಪ್ಪಿ ಹಲವು ದಿನಗಳ ನಂತರ ಸಾವನ್ನಪ್ಪುವುದು ವೇಗದ ಬದುಕು ತರುವ ದುರಂತವೆನ್ನಿಸಿದೆ. ಗ್ರಾಮೀಣ ಸಾವಯವ ಸಂಸ್ಕೃತಿಯನ್ನು ಪ್ರತಿನಿಧಿಸುವ ಅವ್ವ ನಗರದ ವೇಗದ ಬದುಕಿಗೆ ಹೊಂದಿಕೊಳ್ಳಲು ಸೋಲುವುದು ಗ್ರಾಮ ನಗರಗಳ ದ್ವಂದ್ವದ ಪ್ರತೀಕವೇನೋ ಎಂಬ ನಿಲುವು ಅಧ್ಯಯನದ್ದಾಗಿದೆ. ಮಲ್ಲಿಕಾರ್ಜುನ ಹಿರೇಮಠ ಅವರ 'ಮಾತೃದೇವೋಭವ' ಕತೆಯ ಅವ್ವ, ಗ್ರಾಮದಲ್ಲಿ ಗಂಡ ಸತ್ತ ನಂತರ ಗಂಡನ ಅಣ್ಣ ಕೊಡುವ ಕಷ್ಟಕಾರ್ಪಣ್ಯಗಳನ್ನು ಸಹಿಸಿ ಮಕ್ಕಳನ್ನು ಓದಿಸಿ ಬೆಳೆಸಿದವಳು. ಎರಡನೆಯ ಮಗ ನೌಕರಿ ಹಿಡಿದು ನಗರ ಸೇರಿದಾಗ, ಅಸ್ತಮಾ ಹಿಡಿದ ತಾಯಿಯನ್ನು ನಗರಕ್ಕೆ ಕರೆಸಿಕೊಳ್ಳುತ್ತಾನೆ. ಕತೆಯಲ್ಲಿ ತಾಯಿಯನ್ನು ಆಸ್ಪತ್ರೆಗೆ ತೋರಿಸುವ ಕಾರಣವಿದ್ದರೂ, ಮನೆಗೆಲಸ ಹೆಂಡತಿಯಿಂದ ನೀಗದೆ, ಹೊತ್ತು ಹೊತ್ತಿಗೆ ಊಟ, ತಿಂಡಿಗಳು ಆಗದಿದ್ದುದು ಮುಚ್ಚಿಟ್ಟ ಸತ್ಯವಾಗಿದೆ. ಅಡಿಗೆ, ಕಸಮುಸುರೆ, ಬಟ್ಟೆ ಬರೆ ಸ್ವಚ್ಛ, ಮೊಮ್ಮಕ್ಕಳ ಆರೈಕೆ ಹೀಗೆ ಹೊಂದಿಕೊಂಡ ಮುದುಕಿ, ಹೊರ ವೆಚ್ಚಗಳನ್ನು ಸಹಿಸುವುದಿಲ್ಲ. ಒಂದು ದಿನ ಬಸವಣ್ಣ ದೇವರಿಗೆ ಹಣ್ಣುಕಾಯಿ ಮಾಡಿಸಲು ಹೋಗುತ್ತೇವೆ ಎಂದು ಸುಳ್ಳು ಹೇಳಿ ಮಗ ಸೊಸೆ ಸಿನೆಮಾ ನೋಡಿ ಬರುತ್ತಾರೆ. ಹಳ್ಳಿಯ ಗುಂಡುಕಲ್ಲು ಬಸವನ ಭಕ್ತೆಯಾಗಿದ್ದ ಅವ್ವ, ಅವರು ಸಿನೇಮಾ ಮಂದಿರದ ಪಕ್ಕದಲ್ಲಿದ್ದ ಹನುಮಂತ ದೇವರಿಗೆ ಕಾಯಿ ಒಡೆದು ಅಂಗಾರ, ಪ್ರಸಾದ ತಂದರೂ, ಅದನ್ನೇ ಬಸವಣ್ಣನ ಪ್ರಸಾದ ಎಂದು ನಂಬಿ ಹಣೆಗೆ ಧರಿಸುತ್ತಾಳೆ. 'ದೇವ್ರು ಇನ್ನ ನನ್ನ ತನ್ನ ಹತ್ರ ಕರೆಸಿಕೊಂಡು ಬಿಡಬೇಕವ್ವಾ ಯಾರ ಕಡಿಂದ ತೊಳಿಸ್ಕೋಬಾರ್ದು, ಬಳಿಸ್ಕೋಬಾರದು. ಗಟ್ಟಿ ಇದ್ದಾಗ ಲಟ್ನ ಒಯ್ಯಬೇಕವ್ವ' ಎಂಬ ಅವಳ ಮಾತು ಸೊಸೆ ಮಗನಿಗೆ ಹೊರೆಯಾಗದೇ ಸಾಯುವ ಇಚ್ಛೆಯನ್ನು ಹೇಳುತ್ತದೆ. ಅವ್ವಂದಿರು ನಗರ ಸ್ವೀಕರಿಸುವ ನೆಲೆಯಲ್ಲಿಯೆ, ಅವರ ಮಗ ಸೊಸೆಯಾದಿ ಸಂಬಂಧಗಳ ಸ್ವೀಕೃತಿಯನ್ನು ಕಾಣುತ್ತೇವೆ.

ಪ್ರಸ್ತುತ ಕಥನ ಸಾಹಿತ್ಯ ಗ್ರಾಮ/ನಗರಗಳ ಹೊಸನೆಲೆಯಲ್ಲಿ ಮಹಿಳೆಯರ ಸಂಘರ್ಷದ ನೆಲೆಗಳನ್ನು ಕೆಳಕಂಡಂತೆ ಮುಂದಿಡುತ್ತದೆ. * ಗ್ರಾಮ/ನಗರ ಜೀವನದಲ್ಲಿ ನೆಲೆ ನಿಲ್ಲಲು ಮಹಿಳಾ ಪಾತ್ರಗಳು ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆ ಮತ್ತು ಸ್ವತಃ ಪುರುಷ ಹೀಗೆ ಎರಡು ಬಗೆಯ ಪ್ರತಿರೋಧಗಳನ್ನು ಎದುರಿಸಬೇಕಾಗುತ್ತದೆ. * ಮಹಿಳೆಯು ಪುರುಷ ಸಮಾನಳಾಗಿ ದೈಹಿಕ ಶ್ರಮದ ಕೆಲಸಗಳನ್ನು ನಿರ್ವಹಿಸುತ್ತ (ಮಣ್ಣಿನ ಗುಣ, ನಾನೇ ಹೊಲೆಯ, ಕೊನೆಯ ದಿನ ಕತೆಗಳ ನಾಯಕಿಯರು) ಸಂಪಾದನೆ ಮಾಡಿ ಬದುಕಿದ್ದು ಕಂಡುಬರುತ್ತದೆ. * ವಿದ್ಯಾವಂತ ಮಹಿಳೆಯರು (ಸಾಬೂನಿನ ಗುಳ್ಳೆ, ಆರೂ ಮೇಡಂ,) ಸ್ವಯಂ ದುಡಿದು ಬದುಕಲು ಪುರುಷಪ್ರಧಾನ ಸಮಾಜ ಅವಕಾಶ ಮಾಡಿಕೊಡುವುದಿಲ್ಲ. ವಿದ್ಯಾವಂತ ಮಹಿಳೆಯರನ್ನೂ ಈ ವ್ಯವಸ್ಥೆ ತನ್ನ ಹಿಡಿತದಲ್ಲಿಟ್ಟುಕೊಂಡಿರುವುದು ಸ್ಪಷ್ಟವಾಗಿದೆ. * ಮಹಿಳೆಯರ ಲೈಂಗಿಕ ಹಲ್ಲೆ ಮತ್ತು ಶೋಷಣೆಗೆ ಊಳಿಗಮಾನ್ಯ, ಬಂಡವಾಳಶಾಹಿ ವ್ಯವಸ್ಥೆಗಳು, ಪುರುಷ ದಬ್ಬಾಳಿಕೆಗಳು ನೇರ ಕಾರಣವಾಗಿದ್ದರೆ, ಮಹಿಳೆಯರ ಮುಗ್ಧತೆ, ಬಡತನಗಳು ಪರೋಕ್ಷ ಕಾರಣಗಳಾಗಿವೆ. * ಗಾಮ/ನಗರ ನಿರಾಕರಿಸಿದ ಅವ್ವ ಹೊಸ ಪರಿಸರವನ್ನು ಸ್ವೀಕರಿಸುವಲ್ಲಿ ತನ್ನ ಕರುಳ ಕುಡಿಗಳನ್ನು, ಕೌಟುಂಬಿಕ ಸಂರಕ್ಷಣೆಯ ಹೊಣೆಯನ್ನು ಸ್ವೀಕರಿಸಿದ್ದುದು ದಾಖಲಾಗಿದೆ.

## ೬. ಮಕ್ಕಳ ಲೋಕ ಮತ್ತು ಸಂಘರ್ಷ

ನಗರ ಆಧುನಿಕತೆಯ ಅತಿಥೇಯನಾದಂತೆ ಸಂಘರ್ಷ, ಗದ್ದಲ, ಕ್ರೌರ್ಯದಿಂದ ಕೂಡಿದ ಯಾತನಾಮಯ ಅನುಭವ ನೀಡುವ ತಾಣವಾಗಿದೆ. ಈ ಆಧುನಿಕ, ಯಾಂತ್ರಿಕ ಬದುಕಿನ ತಣ್ಣನೆಯ ಕ್ರೌರ್ಯದಲ್ಲಿ ಮಕ್ಕಳು ನಗರವನ್ನು ಹೇಗೆ ಸ್ವೀಕರಿಸುತ್ತಾರೆ ಹಾಗೂ ನಗರ ಮಕ್ಕಳನ್ನು ಹೇಗೆ ಸ್ವೀಕರಿಸುತ್ತದೆ ಎಂಬುದು ಕುತೂಹಲಕರ ಅಂಶವಾಗಿದೆ. ಬಾಲ್ಯದ ಮುಗ್ಧತೆಯ ಜೊತೆ ಹೊಸ ಪರಿಸರದ ಭೀತಿಯನ್ನು ಒಟ್ಟೊಟ್ಟಿಗೆ ಹಿಡಿದಿಟ್ಟ ಕಥನಗಳು ಮಕ್ಕಳ ಸಂಘರ್ಷವನ್ನು ಅವರದೇ ಭಾವಗಳಲ್ಲಿ ಸಂಗ್ರಹಿಸಿ ಕೊಟ್ಟಿವೆ.

### ಅ. ಮಕ್ಕಳು ಮತ್ತು ದೈಹಿಕ, ಮಾನಸಿಕ ಸಂಘರ್ಷ

ಮಕ್ಕಳ ಮನಸ್ಸು ಮೃದು ಮತ್ತು ಸೂಕ್ಷ್ಮಗ್ರಹಣ ಶಕ್ತಿಯನ್ನು ಹೊಂದಿದೆ. ಗ್ರಾಮ/ನಗರವನ್ನು ಗ್ರಹಿಸುವ ಮಕ್ಕಳ ಗ್ರಹಿಕೆಗಳು ದೊಡ್ಡವರ ಗ್ರಹಿಕೆಗಳಿಗಿಂತ ಭಿನ್ನವೂ, ವಿಶಿಷ್ಟವೂ ಆಗಿವೆ. ಪ್ರತಿಯೊಂದು ಘಟನೆಯನ್ನು ಆಳವಾಗಿ, ಕೂಲಂಕಶವಾಗಿ ತನ್ನದೆ ದೃಷ್ಟಿಕೋನದಿಂದ ನೋಡುವ, ಅಳೆಯುವ ಗುಣ ಮಕ್ಕಳಲ್ಲಿರುತ್ತದೆ. ಆಹಾರ, ಬಟ್ಟೆ, ಶಿಕ್ಷಣ, ಆಟ, ನಗು, ಅಳು ಹೀಗೆ ಹಲವು ಹತ್ತಾರು ವರ್ತನಾಂಶಗಳು ಮಕ್ಕಳ ದೃಷ್ಟಿಯಲ್ಲಿ ತಮ್ಮದೇ ಆದ ಭಾವ ವಿಸ್ತೀರ್ಣದಲ್ಲಿ ಗ್ರಹಿಸಲ್ಪಡುತ್ತವೆ ಮತ್ತು ವಿಶ್ಲೇಷಿಸಲ್ಪಡುತ್ತವೆ. ವಿವಿಧ ವರ್ಗದ ಕುಟುಂಬಗಳಿಗೆ ಸೇರಿದ ಮಕ್ಕಳ ಗ್ರಹಿಕೆಗಳು ಎಂಥವು, ಮಾನಸಿಕ, ದೈಹಿಕ ಸಂಘರ್ಷಗಳು ಯಾವ ವರ್ಗದ ಮಕ್ಕಳಲ್ಲಿ ಹೆಚ್ಚಿವೆ, ಯಾವ ಮಕ್ಕಳು ಕಾಲಮಾನಕ್ಕೆ ತಕ್ಕಂತೆ ಬದಲಾದ ಹೊಸ ನೆಲೆಗೆ ಹೊಂದಿಕೊಳ್ಳುತ್ತಾರೆ, ಮುಂತಾದ ಅಂಶಗಳ ಕುರಿತು ಕಥನ ಸಾಹಿತ್ಯದ ಮೂಲಕ ಚರ್ಚಿಸಬಹುದು.

ತುಳಸಿ ವೇಣುಗೋಪಾಲ ಅವರ 'ಹೊಂಚು' ಕತೆಯ ಪಾಂಡೋಬ ಮತ್ತು ಸಕ್ಕೂಬಾಯಿಯವರ ಕುಟುಂಬ ಅನಾವೃಷ್ಟಿಯ ತಾಪ ತಾಳಲಾರದೆ ಮುಂಬಯಿಗೆ ಬರುತ್ತದೆ. ಕಥೆಯಲ್ಲಿ ಗ್ರಾಮ ನಿರಾಕರಣೆಯ ಹಿನ್ನೆಲೆಯಲ್ಲಿ ಮಡಿಕೆ, ಕುಡಿಕೆ, ತೊಟ್ಟಿಲು ತ್ಯಾಗ ಮಾಡುವ ಕ್ರಿಯೆಯೊಂದಿಗೆ, ಬಾಳಿ ಬದುಕಿದ ಹಿರಿಯರ ಹಾಗೂ ಮಕ್ಕಳ ಕರುಳ ಬಳ್ಳಿಯ ಸಂಬಂಧವನ್ನು ಕಡಿದುಕೊಂಡು ಬಿಡುವ ಭಾವನಾತ್ಮಕ ನಿರಾಕರಣೆಯ ಸೂಚನೆಯಿದೆ. ಇಬ್ಬರು ಪುಟ್ಟ ಮಕ್ಕಳು ತಂದೆತಾಯಿಗಳ ಜೊತೆ ನಗರ ಸೇರಿದಾಗ ನಗರ ಪರಿಸರಕ್ಕೆ ಪ್ರತಿಕ್ರಿಯೆ ನೀಡುವ ರೀತಿ, ನಗರದ ದಾರುಣ ಬದುಕಿನ ಕಟುಸತ್ಯವನ್ನು ಎತ್ತಿ ತೋರಿಸುತ್ತದೆ. ಬಸ್ಸಿನಲ್ಲಿ ವಾಂತಿ ಮಾಡಿಕೊಂಡು ಸುಸ್ತಾದ ಮಕ್ಕಳು ತೋಯ್ದ ಗುಬ್ಬಚ್ಚಿಗಳಂತೆ ಮುದುರಿ ಕುಳಿತು ತೂಕಡಿಸುತ್ತವೆ. ಪಾಂಡು ಮಕ್ಕಳಿಗೆ ಅದು ನೋಡಿ, ಇದು ನೋಡಿ ಎಂದು ಎಚ್ಚರಿಸುತ್ತ, ಮಕ್ಕಳೇ, ನಾವಿನ್ನು ಇಲ್ಲೇ ಇರೋಣ, ಚಂದದ ಆ ಕೆಂಪು ಬಸ್ಸಿನಲ್ಲಿ ತಿರುಗಾಡಲು ಹೋಗೋಣ, ಹೀಗೆ ಏನೇನೋ ಲಲ್ಲೆ ಮಾಡಿದರೂ ಮಕ್ಕಳ ಪ್ರತಿಕ್ರಿಯೆ ಶೂನ್ಯವಾಗಿರುತ್ತದೆ. ಭಯ ಮಿಶ್ರಿತ ನೋಟದಿಂದ ನೋಡುವಾಗ ಅವುಗಳಿಗೆ ನಗರ ಪ್ರವೇಶವೆಂದರೆ, ತಾವೊಂದು ಭಯಾನಕ ಗುಹೆಯೊಳಗೆ ಕುಳಿತಿರುವಂತೆ ಅನ್ನಿಸಿ ಪಿಳಿಪಿಳಿ ಕಣ್ಣು ಬಿಡುತ್ತವೆ. ಧೃತಿಗೆಟ್ಟ ಮಕ್ಕಳು ಕೊಳೆಗೇರಿಯ ಕತ್ತಲೆಯ ಗುಡಿಸಲನ್ನು ಸೇರಿದಾಗ ಪ್ರತಿರೋಧದ ಸೊಲ್ಲಿರಲಿ, ಅಳುವುದನ್ನೂ ಮರೆತುಬಿಡುತ್ತವೆ. 'ಭಾವುನ ಹೆಂಡತಿ ಮಾಡಿಟ್ಟು ಹೋದ ತೆಳ್ಳನೆಯ ರುಚಿರುಚಿಯಾದ ಪೋಳಿ ಮತ್ತು ಆಮ್ಟಿಯನ್ನು ಮಕ್ಕಳು ಗಬಗಬ ತಿಂದವು'[೬೭] ಎಂಬ ಮಾತಿನ ಆಳದಲ್ಲಿ ಹೊಸದನ್ನು ಮರೆಸುವ ಹಸಿವು ಹಾಗೂ ಮಕ್ಕಳ ಸತ್ತು ಹೋದ ಪ್ರತಿಕ್ರಿಯೆಯನ್ನು ಅಧ್ಯಯನ ಗುರುತಿಸುತ್ತದೆ. ಮಕ್ಕಳ ಇಂತಹ ನಿರ್ಲಿಪ್ತ (ನಿಸ್ತೇಜ) ಪ್ರತಿಕ್ರಿಯೆ ಹಸಿವಿನ ಮುಂದೆ ಹೊಸತು ಮತ್ತು ಆಕರ್ಷಣೆಗಳು ಅರ್ಥ ಕಳೆದುಕೊಳ್ಳುತ್ತವೆ ಎಂಬುದರ ಸಂಕೇತವಾಗಿದೆ. ಹಲವಾರು ಕಥನಗಳಲ್ಲಿ ಮಕ್ಕಳ ಮುಗ್ಧತೆ ಅವರ ಗ್ರಾಮ/ನಗರ ಬದುಕಿನ ಸಂಘರ್ಷಕ್ಕೆ ಕಾರಣವಾಗುತ್ತದೆ. ಗ್ರಾಮ ಬಿಟ್ಟು ನಗರ ಸೇರಿದ ಸರಸ್ವತಿಬಾಯಿ ರಾಜವಾಡೆ (ಗಿರಿಬಾಲೆ) ಅವರ 'ಪ್ರಪಂಚ' ಕತೆಯ ತೋಮ(ಗೇಣಿರೈತ)ನ ಸಂಸಾರದ ಪುಟ್ಟ ಸದಸ್ಯ ದೋಜು, ನಗರದ ಜನ, ವಾತಾವರಣ ನೋಡಿ ಬೆರಗಾಗಿ, 'ಇದೆಂತದಪ್ಪಾ?' ಎಂದು ಅಪ್ಪನಿಗೆ ಅಚ್ಚರಿಯಿಂದ ಪ್ರಶ್ನಿಸುತ್ತಾನೆ. 'ಇದೇ ಪಟ್ಣಪ್ಪಾ' ಎಂದು ತೋಮ ನಗರವನ್ನು ಮಗನಿಗೆ ಪರಿಚಯಿಸುತ್ತಾನೆ. ನಂತರ ನಡೆದ ಘಟನೆಗಳು ಮಗುವಿನ ಆತಂಕ, ಹೊಟ್ಟೆಯ ಹಸಿವನ್ನು ಹೆಚ್ಚಿಸುತ್ತವೆ. ದೋಜು ಕೊಳೆಗೇರಿಯ ನೀರವತೆಯನ್ನು ಕಂಡು ಎಚ್ಚೆತ್ತವನಂತೆ 'ಅಪ್ಪಾ ಹಸಿವು'[೬೮] ಎನ್ನುತ್ತಾನೆ. ಕೈಗೂಸು ಚೀರಿಟ್ಟು ಅಳತೊಡಗುತ್ತದೆ. ಇಲ್ಲಿಯವರೆಗೂ ನಗರದ ಹೊಸ ವಾತಾವರಣದ ಬೆಡಗನ್ನು ಗ್ರಹಿಸುತ್ತಿದ್ದ ದೋಜುವಿಗೆ ಈಗ ಹಸಿವಿನ ಅರಿವಾಗುವುದು ಮಕ್ಕಳ ಸ್ವಭಾವದ ಒಂದು ವೈಚಿತ್ರ್ಯ ಎನ್ನಬಹುದು.

ಮಕ್ಕಳ ದೃಷ್ಟಿಯಲ್ಲಿ ಗ್ರಾಮ ನಗರಗಳೆಂದರೆ ಒಂದೆ, ಅದು ಕುತೂಹಲ ಮತ್ತು ಹಸಿವುಗಳ ಆಕ್ರಮಣ ಎಂಬುದು ಅಧ್ಯಯನದ ನಿಲುವಾಗುತ್ತದೆ.

ಮನೆತನದಲ್ಲಿ ಒಬ್ಬನಾದರೂ ಓದಿ ವಿದ್ಯಾವಂತನಾಗಲಿ ಎಂಬ ತಾಯಿಯ ಆಸೆಯಂತೆ ಸೋದರ ಮಾವನ ಪಟ್ಟಣದ ಮನೆಗೆ ಕಳಿಸಲ್ಪಟ್ಟ, ಕುಸುಮಾಕರ ದೇವರಗೆಣ್ಣೂರ ಅವರ 'ನಿರಿಂದ್ರಿಯ' ಕಾದಂಬರಿಯ ಕಲ್ಲಪ್ಪ ರೊಳ್ಳಿ ಜಗತ್ತನ್ನು ಬಾಲದೃಷ್ಟಿಯಲ್ಲಿ ಗ್ರಹಿಸುವ ಇನ್ನೋರ್ವ ಮುಗ್ಧ ಬಾಲಕನಾಗಿದ್ದಾನೆ. ಮಾಮಿಯ ದೈಹಿಕ, ಮಾನಸಿಕ ಶೋಷಣೆ, ಮಾವನ ಮಕ್ಕಳ ದೌರ್ಜನ್ಯಗಳು ಅವನನ್ನು ಅನಾಥಪ್ರಜ್ಞೆಯಿಂದ ನರಳುವಂತೆ ಮಾಡುತ್ತವೆ. ತಾಯಿ ಪ್ರೀತಿಯಿಂದ ಉಳಿಸಿ, ಕಕ್ಕುಲತೆಯಿಂದ ಕೊಟ್ಟ ಎರಡು ರೂಪಾಯಿಗಳನ್ನು ಕಂಡ ಮಾಮಿ, ಅದು ತನ್ನ ದುಡ್ಡೆಂದು, ಅದನ್ನು ಕಲ್ಲಪ್ಪ ರೊಳ್ಳಿ ಕದ್ದಿದ್ದಾನೆಂದೂ ಮಾವನಿಗೆ ದೂರು ನೀಡಿ ಶಿಕ್ಷೆಗೆ ಗುರಿಪಡಿಸುತ್ತಾಳೆ.

> 'ಅಲ್ಲ, ನಾನು ತಪ್ಪುಗಾರನಲ್ಲ' ಮತ್ತೆ ಹೇಳಿದ. 'ಮತ್ತೆ, ಮತ್ತೆ ಅದೇ ಮಾತನ್ನು ಆಡಬೇಡ. ನಿನ್ನ ಕಾಲ ಮೇಲೆ ನೀನೆ ಕಲ್ಲು ಹಾಕಿಕೊಳ್ಳಬೇಡ' ನಾನು ಅಪರಾಧಿಯಲ್ಲ, ನಾನು ಕಳ್ಳನಲ್ಲ, ನಾನು ನಿರಪರಾಧಿ ಎಂದು ಇವರಿಗೆ ಹೇಗೆ ಖಚಿತ ಮಾಡಿಕೊಡಬೇಕು? ನನ್ನನ್ನು ಯಾರೂ ನಂಬಲೊಲ್ಲರು. ಮನದಲ್ಲಿ ಮರುಗಿದ. 'ಹೂಂ ತಡಮಾಡಬೇಡ' ಹುಡುಗ ನಿರುಪಾಯನಾದ. ಮಾಮಿಯ ಕಾಲು ಹಿಡಿದ. ಅವಳು ದೂರ ನೂಗಿಸಿದಳು.[38]

ಕೌಟುಂಬಿಕ ಪರಿಸರದಲ್ಲಿ ಜರುಗುವ ಇಂತಹ ಘಟನೆಗಳು ಮಗುವೊಂದು ತಾನು ಮಾಡದ ತಪ್ಪಿಗೆ ಪುನಃ ಪುನಃ ಶಿಕ್ಷೆ ಅನುಭವಿಸುವುದು, ತಲೆ ತಗ್ಗಿಸುವುದು ಅವನಲ್ಲಿ ಅನ್ಯಥಾ ಕೀಳರಿಮೆ, ಅಪರಾಧಿ, ಅನಾಥ ಭಾವಗಳನ್ನು ಹುಟ್ಟುಹಾಕುತ್ತದೆ. ಮಕ್ಕಳೊಂದಿಗೆ ಆಡುತ್ತ ಹಗಲು ತನ್ನ ಮನಸ್ಸನ್ನು ಸ್ಥಿಮಿತದಲ್ಲಿಟ್ಟುಕೊಂಡರೂ ಇರುಳಿನಲ್ಲಿ ದುಃಖದ ಕಟ್ಟೆಯೊಡೆದು ಬರುತ್ತದೆ. ಗಟ್ಟಿಯಾಗಿ ಅಳಲೂಬಾರದು, ಕಣ್ಣೀರು ಸುರಿಸುತ್ತಾರೆ. ಇದನ್ನು ಹೋಮ್‌ಸಿಕ್ ಎಂದು ಮನೋವಿಜ್ಞಾನ ಗುರುತಿಸಿದರೂ ಅದರ ಅರ್ಥ ಅನಾಥಭಾವ ಎಂದೇ ಹೇಳಬಹುದು. ಮಕ್ಕಳು ಹಳ್ಳಿಯಲ್ಲಿರುವ ಅಪ್ಪನ ಮೇಲೆ ಜಿಗುಪ್ಸೆ, ಅಮ್ಮನ ಕುರಿತು ದುಃಖ, ಮಾಮಿ, ಮಾಮರ ಶೋಷಣೆಯನ್ನು ಮೌನದಿಂದ ಸಹಿಸಿಕೊಳ್ಳುವುದನ್ನು ಕಲಿಯುತ್ತಾರೆ. ಪ್ರತಿಭಟಿಸಿದರೆ ಹಳ್ಳಿಗೆ ವಾಪಸ್ಸು ಕಳಿಸುವ ಭಯ ಮಕ್ಕಳಲ್ಲಿಯ ಪ್ರತಿಭಟನೆಯ ಧ್ವನಿಯನ್ನು ನಿರ್ಬಂಧಿಸುತ್ತದೆ. ಇಂದಿನ ಸಂದರ್ಭದಲ್ಲಿ, ಇದು ಗ್ರಾಮದಿಂದ ನಗರಕ್ಕೆ ಓದಲು ಬಂದ ಕೆಳ, ದಲಿತ ಮಕ್ಕಳ ಮಾನಸಿಕ ಸ್ಥಿತಿಯನ್ನು ಪ್ರತಿಬಿಂಬಿಸುತ್ತದೆ. ಹೀಗಾಗಿ ಮಕ್ಕಳ ಮನಸ್ಸು ಸುರಕ್ಷತೆಯನ್ನು ಹುಡುಕುತ್ತದೆ.

ಮಕ್ಕಳ ಮೇಲೆ ಕೌಟುಂಬಿಕ ಪರಿಸರ ಬೀರುವ ಪ್ರಭಾವದ ಹಿನ್ನೆಲೆಯಲ್ಲಿ ಈ ಸಂದರ್ಭವನ್ನು ಚರ್ಚಿಸೋಣ. ರೊಳ್ಳಿಯ ಇಬ್ಬರು ಅಣ್ಣಂದಿರು ತಂದೆಯ ನಡತೆ, ವರ್ತನೆಗಳನ್ನು ನೋಡಿ ಅವನಂತೆ ಹಟವಾದಿ, ಜಗಳಗಂಟ, ದುಷ್ಟ ಚಟಗಳಿಗೆ ಬಲಿಯಾಗಿ ದೂರ್ತತನವನ್ನು ಬೆಳೆಸಿಕೊಳ್ಳುತ್ತಾರೆ. ಆದರೆ ರೊಳ್ಳಿ ತಾಯಿಯನ್ನು ಆದರ್ಶವಾಗಿ ಇಟ್ಟುಕೊಳ್ಳುತ್ತಾನೆ. ಮಕ್ಕಳ ಮನಸ್ಸು ಆರ್ದ್ರತೆಯಿಂದ ಕೂಡಿದ್ದಾಗ ಮೂಡಿದ ಭಾವನೆಗಳು ಸದಾ ಕಾಲ ಜೀವಂತವಾಗಿರುವುದಕ್ಕೆ ರೊಳ್ಳಿ ಸಾಕ್ಷಿಯಾಗಿದ್ದಾನೆ. ಸಹನಾಶೀಲಳಾದ (ಅಸಹಾಯಕತೆಯೂ ಎನ್ನಬಹುದು) ತಾಯಿಯ ಗುಣವನ್ನು ರೂಢಿಸಿಕೊಳ್ಳುತ್ತಾನೆ. ಹಲವಾರು ಸಂದರ್ಭಗಳಲ್ಲಿ ಸಂದಿಗ್ಧಕ್ಕೆ ಸಿಲುಕಿದ ಈ ಬಾಲಕ ಸದಾ ಅಂತರ್ಮುಖಿಯಾಗಿರುವ (ಇದು ಬಹಳಷ್ಟು ಮಕ್ಕಳ ಸ್ಥಿತಿಯೂ ಹೌದು) ಸ್ವಭಾವವನ್ನು ಬೆಳೆಸಿಕೊಳ್ಳುವುದನ್ನು ಅಧ್ಯಯನ ಗುರುತಿಸುತ್ತದೆ. ಇದಕ್ಕೆ ಅವನ ಅಸಹಾಯಕ ಸ್ಥಿತಿ, ಅನಾಥಪ್ರಜ್ಞೆ , ಆತಂಕ, ಬದುಕಿನ ಅನಿಶ್ಚಿತತೆ, ಆರ್ಥಿಕ ಅಡಚಣೆಗಳು ಕಾರಣವಾಗಿವೆ. ಇಂತಹ ಮಾನಸಿಕ ಸ್ಥಿತಿ ಮಕ್ಕಳ ದೈನಂದಿನ ಕಾರ್ಯಗಳ ಮೇಲೆ ಪರಿಣಾಮ ಬೀರುತ್ತದೆ. ಇಂತಹವರು ಗೆಳೆಯರನ್ನು ಮಾಡಿಕೊಳ್ಳುವುದಿಲ್ಲ, ಆಟ, ನೋಟಗಳಲ್ಲಿ, ಸ್ಪರ್ಧೆಗಳಲ್ಲಿ ಭಾಗವಹಿಸುವುದಿಲ್ಲ. ಆದರೆ ಅಚ್ಚುಕಟ್ಟುತನ, ಸ್ವಾವಲಂಬನೆ, ಮುಖ್ಯವಾಗಿ ಭಾವನೆಗಳ ಮೇಲೆ ಸಂಯಮವನ್ನು ಕಲಿಯುತ್ತಾರೆ. ತಮ್ಮ ಸುತ್ತಲೂ ಒಂದು ಅವ್ಯಕ್ತವಾದ ಗೋಡೆಯನ್ನು ಕಟ್ಟಿಕೊಳ್ಳುತ್ತಾರೆ. ಈ ತಾಟಸ್ಥ್ಯ ಯಾರಿಗೂ ಹತ್ತಿರವಾಗದೆ ಇದ್ದರೂ, ದೂರವಾಗದಂತೆ ಇರುವುದನ್ನು ಕಲಿಸುತ್ತದೆ.

ಹೊಸನೆಲೆಯಲ್ಲಿ ಪಾಂಡುವಿನ ಮಕ್ಕಳು, ದೋಜು, ಕಲ್ಲಪ್ಪ ರೊಳ್ಳಿ ನಡೆಸಿದ ದೈಹಿಕ, ಮಾನಸಿಕ ಸಂಘರ್ಷಗಳಿಗೆ ಕೌಟುಂಬಿಕ, ಸಾಮಾಜಿಕ ನೆಲೆಗಳಿವೆ. ಕುಟುಂಬದ ಸದಸ್ಯರ ಆಶ್ರಯ, ಸಾಂಗತ್ಯ

(ಅದು ಎಷ್ಟು ಸಾಧ್ಯ? ಎಂಬುದು ಬೇರೆ ವಿಚಾರ) ಇವರಿಗೆ ದೊರೆತಿದೆ. ಈ ಮಕ್ಕಳ ನಗರ ಕುರಿತ ಪ್ರತಿಕ್ರಿಯೆಗಳು ಗಟ್ಟಿ ನೆಲೆಯಲ್ಲಿ ನಿಂತವುಗಳಲ್ಲ. ಇವು ಕೌಟುಂಬಿಕ ಹಿರಿಯ ಸದಸ್ಯರ ಗ್ರಹಿಕೆಗಳ ನೆರಳುಗಳಂತೆ ಕಾಣುತ್ತವೆ. ಆದರೆ, ಇವು ಯಾವವೂ ಇಲ್ಲದೆ ಏಕಾಂಗಿಯಾಗಿ ಗ್ರಾಮ/ನಗರಗಳನ್ನು ನಿರಾಕರಿಸಿ ಬಂದ ಮಕ್ಕಳು ಹೊಸನೆಲೆಯಲ್ಲಿ ಎದುರಿಸಬೇಕಾದ ಸಂಘರ್ಷಗಳು ವಿಭಿನ್ನ ಆಯಾಮಗಳನ್ನು ಹೊಂದಿವೆ.

ತಂದೆ, ತಾಯಿ ತೀರಿಕೊಂಡೊಡನೆ ತನ್ನ ತಂದೆಯ ಎರಡನೇ ಹೆಂಡತಿ (ಚಿಕ್ಕಮ್ಮ) ದುಮಿಂಗ್ ಎಂಬ ಶ್ರೀಮಂತನೊಂದಿಗೆ ವಿವಾಹೇತರ ಸಂಬಂಧ ಬೆಳೆಸಿ, ತನ್ನ ಪ್ರಾಣಕ್ಕೆ ಸಂಚಕಾರ ತಂದಾಗ ನಾ. ಡಿಸೋಜ ಅವರ 'ಪ್ರೀತಿಯೊಂದೇ ಸಾಲದೆ?' ಕಾದಂಬರಿಯ ಮ್ಯಾನುವೇಲ ಮೇಲ್ಪಾಡಿ ಗ್ರಾಮವನ್ನು ರಾತ್ರೋರಾತ್ರಿ ನಿರಾಕರಿಸಿ ಶಿವಮೊಗ್ಗಕ್ಕೆ ಬರುತ್ತಾನೆ. ಈ ಹಂತದಲ್ಲಿ ಸೂಕ್ತ ನಿರ್ಧಾರ, ಮಾರ್ಗದರ್ಶನವಿಲ್ಲದೆ ಮಕ್ಕಳು ಮಾನಸಿಕ ದ್ವಂದ್ವದಲ್ಲಿ ಸಿಕ್ಕುವುದು ಕಂಡುಬರುತ್ತದೆ. ಯಾವೂರಿಗೆ ಹೋಗುವುದು ಎಂಬ ದ್ವಂದ್ವದಲ್ಲಿ ಮ್ಯಾನುವೇಲ ಸಿಲುಕಿದಂತೆ, ರೋಹಿದಾಸ ನಾಯಕ ಅವರ 'ದೂರ' ಕಥೆಯ ವಸಂತನೂ ಸಿಕ್ಕಿಕೊಳ್ಳುತ್ತಾನೆ. ಬಸ್ಸು ಹೋದತ್ತ ಹೊರಟು ನಗರ ಸೇರುವ ಇವರಿಗೆ ನಿಶ್ಚಿತ ಗುರಿ, ಉದ್ದೇಶಗಳು ಇರುವುದಿಲ್ಲ.

> 'ಊರು ಬಿಟ್ಟು ಬರಬಾರದಿತ್ತು ಎನಿಸಿತು. ಮರುಕ್ಷಣದಲ್ಲಿ ಬಂದದ್ದೇ ಒಳ್ಳೆಯದಾಯಿತು ಎಂದುಕೊಂಡ. ಊರಿನ ಬಗ್ಗೆ ಇನ್ನು ಚಿಂತೆ ಮಾಡಬಾರದು. ಏನಿದ್ದರೂ ಮುಂದಿನ ಚಿಂತೆ.'[೨೦]

ಇಂಥ ಪಶ್ಚಾತ್ತಾಪದ ಭಾವನೆಗಳು ಬಹುಕಾಲ ನಿಲ್ಲದೆ ಮತ್ತೆ ಕುಟುಂಬದ ಅಪ್ಪ, ಅಮ್ಮಂದಿರ ಮೇಲಿನ ಸಿಟ್ಟು ಮೇಲುಗೈ ಸಾಧಿಸುವುದು ಕಥನಗಳಲ್ಲಿ ಸ್ಪಷ್ಟವಾಗಿದೆ. ಮ್ಯಾನುವೇಲ ಶಿವಮೊಗ್ಗ ನಗರದ ಹೋಟೆಲೊಂದರಲ್ಲಿ ಕಾಡಿ ಬೇಡಿ ಕ್ಲೀನಿಂಗ್ ಕೆಲಸ ಗಿಟ್ಟಿಸಿಕೊಳ್ಳುತ್ತಾನೆ. ಅಲ್ಲಿದ್ದುದು ಕೆಲವು ದಿನಗಳು ಮಾತ್ರ. ಪ್ಲೇಟೊಂದನ್ನು ಒಡೆದು ಹಾಕಿದನೆಂಬ ಕಾರಣಕ್ಕೆ ಮಾಲೀಕರಿಂದ ಒದೆತ, ಹಿಂಸೆ, ಮೈ ತುಂಬ ಗಾಯ. ಕೈಚೀಲ ಹಿಡಿದು ಅಲ್ಲಿಂದ ಹೊರಬಿದ್ದು, ಹೋಟೇಲಿಗೆ ಬರುತ್ತಿದ್ದ ಲಾರಿ ಡ್ರೈವರಗೆ ಕೈ ಮುಗಿದು ದುಂಬಾಲು ಬಿದ್ದು ದೂರ ಹೋಗಲು ಲಾರಿ ಹತ್ತಿಕೊಳ್ಳುತ್ತಾನೆ. 'ದೂರ' ಕತೆಯ ವಸಂತನ ಒಂದೆರಡು ದಿನಗಳ ನಗರ ಬದುಕಿನ ಸಂಘರ್ಷ/ಅನುಭವ ಮ್ಯಾನುವೇಲನ ಅನುಭವ ಮತ್ತು ಗ್ರಹಿಕೆಯನ್ನು ಸಮೀಕರಿಸುತ್ತದೆ. ವಿಧಾನಸೌಧವನ್ನು ಕುತೂಹಲ ಆಶ್ಚರ್ಯದಿಂದ ನೋಡಿ ಕಬ್ಬನ್ ಪಾರ್ಕಿನಲ್ಲಿ ಮಲಗುತ್ತಾನೆ. ಹೋಟೆಲ್‌ಗಳು ಇದ್ದ ಕಡೆಯಲ್ಲೆಲ್ಲಾ ಕೆಲಸ ಕೇಳಿ ಇಲ್ಲ ಅನ್ನಿಸಿಕೊಳ್ಳುತ್ತಾನೆ. ಅವನ ಅನಿಸಿಕೆಯಲ್ಲಿ ನಿರಾಳತೆ, ಸ್ವಾತಂತ್ರ್ಯ ಅನುಭವಿಸುವ ಕಾತುರಗಳಿವೆ. ಇವನ ಟ್ರಂಕು, ಬಟ್ಟೆಬರೆಗಳು ಮಲಗಿದ್ದಾಗ ಕಳುವಾಗಿ, ಕೊಳಚೆವಾಸಿ ಮಕ್ಕಳಿಂದ ದೈಹಿಕ ದೌರ್ಜನ್ಯ ಅನುಭವಿಸುತ್ತಾನೆ. 'ಒಂದು ರಸ್ತೆಯ ಬದಿಯಲ್ಲಿದ್ದ ತೊಟ್ಟಿಯ ಬಳಿ ಉಂಡು ಬೀಸಾಡಿದ್ದ ಎಲೆಗಳನ್ನು ಕಚ್ಚಿ ಎಳೆಯುತ್ತಿದ್ದ ನಾಯಿಗಳ ನಡುವೆ ನುಸುಳಿ ಎಲೆಯಲ್ಲಿದ್ದುದನ್ನು ಬಳಿದು ಎಲ್ಲರೂ ತಿನ್ನತೊಡಗಿದರು. ಬಾ ತಿನ್ನು ಎಂದು ಕರೆದರು.'[೨೧] ವಸಂತನಿಗೆ ನಗರದಲ್ಲಿನ ಬಡತನ, ಹಸಿವು, ಕ್ರೌರ್ಯಗಳ ದರ್ಶನವಾಗುತ್ತದೆ. ಗ್ರಾಮ (ತನ್ನ ಕುಟುಂಬ) ಹಾಗೂ ನಗರ(ಹೊಸ ಪರಿಸರ)ಗಳ ವ್ಯತ್ಯಾಸ ಕಂಡುಕೊಳ್ಳುತ್ತಾನೆ.

ಕೌಟುಂಬಿಕ ಸಂಬಂಧದಿಂದ ಹೊರಬಂದ ಮಕ್ಕಳ ಮಾನಸಿಕ ಸ್ಥಿತಿ ಎರಡು ಭಾವಗಳ ದ್ವಂದ್ವಗಳಿಂದ ಕೂಡಿದೆ. ಮಾನಸಿಕ ನಿರಾಳತೆಯಲ್ಲಿ ಸ್ವಾತಂತ್ರ್ಯ ಅನುಭವಿಸುವ ಆತುರವೊಂದೆಡೆಯಾದರೆ, ಇನ್ನೊಂದೆಡೆ ಬದುಕಿನ ಅಭದ್ರತೆ ಅವರನ್ನು ಬೆಂಬತ್ತಿ ಕಾಡುತ್ತದೆ. ಮುಂದೇನು ಎಂಬ ದ್ವಂದ್ವ ಅವರನ್ನು ಹಿಂಡಿಹಾಕುತ್ತ ನಗರದ ಬದುಕಿಗೆ ಹೊಂದಿಕೊಳ್ಳಲು ಯಾವ ಮಾರ್ಗವನ್ನಾದರೂ ಹಿಡಿಯಲು ಪ್ರೇರೇಪಿಸುತ್ತದೆ. ಚಂದ್ರಕಾಂತ ಕುಸುನೂರ ಅವರ 'ಚರ್ಚಗೇಟ್' ಕಾದಂಬರಿಯ ರಾಮಪ್ರತಾಪ ಹೀಗೆ ಕಂಡುಕೊಂಡ ವೃತ್ತಿ ಸಿನೆಮಾ ಪೋಸ್ಟರ್‌ಗಳನ್ನು ಅಂಟಿಸುವುದಾಗಿದೆ. ಸಿನೆಮಾ ನಟನಾಗುವ ಕನಸು ಹೊತ್ತು ಗುಜರಾತಿನ ಹಳ್ಳಿಯೊಂದರಿಂದ ಮುಂಬಯಿಗೆ ಬಂದ ಹುಡುಗ, ಕಿಸೆಯಲ್ಲಿನ ಹಣ ಮುಗಿದೊಡನೆ ಸಮುದ್ರ ತೀರದಲ್ಲಿ ಕುಳಿತು ಮುಂದೇನು ಎಂಬ ಪ್ರಶ್ನೆ ಹಾಕಿಕೊಳ್ಳುತ್ತಾನೆ. 'ಮುಂದೇನಿಲ್ಲಾ ಎಂದು ಉತ್ತರ ಕೊಟ್ಟಿತಂತೆ ಹಸಿದ ಹೊಟ್ಟೆ'[೨೨] ಅವರಿವರ ಕೈಕಾಲು ಹಿಡಿದು ಸಿನೆಮಾ ಪೋಸ್ಟರ್ ಹಚ್ಚುವ, ನಂತರ ಹೋಟೆಲ್ ಸಪ್ಲೈಯರ್ ಕೆಲಸಗಳನ್ನು ಮಾಡುತ್ತಾನೆ. ನಗರದ ಬಂಡವಾಳಶಾಹಿ ವ್ಯವಸ್ಥೆಯು ತನ್ನ ಕಬಂಧ ಬಾಹುಗಳಲ್ಲಿ ರಾಮಪ್ರತಾಪನಂತಹ ಚಾಣಾಕ್ಷ ಹುಡುಗನನ್ನು ತಬ್ಬಿಕೊಳ್ಳುತ್ತದೆ.

ಕೆಳವರ್ಗದ ಕುಟುಂಬಗಳಿಂದ ಓಡಿ ಬಂದ ಮ್ಯಾನುವೇಲ, ವಸಂತ, ರಾಮಪ್ರತಾಪರಂಥ ಮಕ್ಕಳಲ್ಲಿ ನಗರ ಪರಿಸರ ಕುರಿತು ಮೊದಲು ಭೀತಿ ಆವರಿಸುತ್ತದೆ. ನಗರದಲ್ಲಿ ಕಾಡುವ ಅನಾಥಪ್ರಜ್ಞೆ ಮತ್ತು ರಾತ್ರಿ ಗಸ್ತು ಪೊಲೀಸರ ಕಾಟಗಳು ಇದಕ್ಕೆ ಕಾರಣವಾಗಿವೆ. ಹಲವು ದಿನಗಳ ಅನುಭವದಿಂದಾಗಿ ಈ ಬಾಲಕರು ಅಪರಿಚಿತರು, ಹೊಸಬರು, ಹೊಸ ಊರು ಎಂಬಿತ್ಯಾದಿ ಭೀತಿಯನ್ನು ನಿವಾರಿಸಿಕೊಳ್ಳುತ್ತಾರೆ. ಕೌಟುಂಬಿಕ ಸಂಬಂಧ ನಿರಾಕರಿಸಿ ಬಂದವರು ಇನ್ನು ಹೆದರಿಕೊಂಡರೆ ಪ್ರಯೋಜನವಿಲ್ಲೆಂಬ ತೀರ್ಮಾನಕ್ಕೆ ಬಂದು, ಬದುಕಿಗೆ ಚಿಕ್ಕಪುಟ್ಟ ವೃತ್ತಿ, ವ್ಯಾಪಾರ (ಇವುಗಳಲ್ಲಿ ಕಳ್ಳತನವೂ ಸೇರಿಕೊಂಡಿದೆ) ಹುಡುಕಿಕೊಳ್ಳುವತ್ತ ಆಸಕ್ತಿ ವಹಿಸುತ್ತಾರೆ. ಇದು ನಗರ ನೆಲಗಟ್ಟಿನ ಮೇಲೆ ಆರ್ಥಿಕ ಭದ್ರತೆ ಹುಡುಕುವ ಮಾನಸಿಕ ಗಟ್ಟಿತನ ಬೆಳೆಸಿಕೊಳ್ಳುವುದರ ಸಂಕೇತವಾಗಿದೆ. ಇದನ್ನು ಕೆಳವರ್ಗದ ಮಕ್ಕಳಲ್ಲಿರುವ ವಿಶಿಷ್ಟ ಗುಣವೆನ್ನಬಹುದು.

**ಬ. ಮಕ್ಕಳು ಮತ್ತು ಲೈಂಗಿಕ ಶೋಷಣೆ**

ಕುತೂಹಲ ಮಕ್ಕಳಲ್ಲಿ ಕಂಡುಬರುವ ಪ್ರಕೃತಿದತ್ತ ಗುಣವಾಗಿದೆ. ಹೊಸ ವಸ್ತು, ಹೊಸ ಅನುಭವಗಳನ್ನು ಕುತೂಹಲ ಬೆರೆತ ನೋಟದಿಂದ ಸ್ವೀಕರಿಸುವ ಮಕ್ಕಳ ಗುಣವನ್ನು ದೊಡ್ಡವರು, ತಮ್ಮ ಕಾಮದ ಬಯಕೆ ತೀರಿಸಿಕೊಳ್ಳಲು ಉಪಯೋಗಿಸಿಕೊಂಡಿದ್ದು ಕಥನ ಸಾಹಿತ್ಯದಲ್ಲಿ ಕಂಡುಬರುತ್ತದೆ. ಮಕ್ಕಳಿಗೆ ಆಸಕ್ತಿಯಿರಲಿ, ಕೇವಲ ಕುತೂಹಲವಿರಲಿ ಇಂಥ ಘಟನೆಗಳು ಮಕ್ಕಳ ಭವಿಷ್ಯದ ಮೇಲೆ ಹೇಗೆ ಪರಿಣಾಮ ಬೀರಿ, ಅವರ ಬದುಕಿಗೆ ಒಂದು ತಿರುವನ್ನು ಕೊಡುತ್ತವೆ ಎಂಬುದನ್ನು ಗಮನಿಸಬಹುದು.

ಕುಂದರನಾಡ ಪಾಟೀಲ ಅವರ 'ಉಲ್ಲಂಘನೆ' ಕಾದಂಬರಿಯ ಚನಬಸು ಸ್ವಭಾವದಲ್ಲಿ ಮೃದು, ಬುದ್ಧಿಯಿಂದ ಚುರುಕಾಗಿದ್ದ ಹುಡುಗ. ಶಿಕ್ಷಣಕ್ಕಾಗಿ ನಗರ ಪ್ರವೇಶಿಸಿದ ದಿನದಿಂದ, ಅಲ್ಲಿನ ಜನರ ನಡತೆ, ಮಾತು, ವ್ಯವಹಾರಗಳನ್ನು ಗಮನಿಸುತ್ತ ಮೌನ ಪ್ರೇಕ್ಷಕನಾಗುವುದು, ಹಳ್ಳಿಯ ಸಂಗತಿಗಳೊಂದಿಗೆ ಹೋಲಿಸಿ ನೋಡುವುದು ಸರಳ ಪ್ರಕ್ರಿಯೆಯಂತೆ ಕಂಡರೂ, ಅವನ ಅಭಿವ್ಯಕ್ತಿ ಅರ್ಥಗರ್ಭಿತವಾಗಿದೆ. ನಗರದ ದೇವಸ್ಥಾನಗಳಲ್ಲಿ ಭಕ್ತಿಯ ಮಹಾಪೂರ ಬಂದವರಂತೆ ಹೆಣ್ಣು, ಗಂಡುಗಳು ಪರಸ್ಪರ ಮೈಯುಜ್ಜುವುದು ವಯಸ್ಸಿಗೆ ಮೀರಿದ ಕೌತುಕವಾಗಿ ಅವನನ್ನು ಕಾಡಿದೆ. ತಾನು ಹುಟ್ಟಿನಿಂದ ಕಲಿತ ಕನ್ನಡ, ಈಗ ಕಲಿಯಲೆತ್ನಿಸುವ ಮರಾಠಿ, ಇಂಗ್ಲೀಶ್, ಹಿಂದಿ ಭಾಷೆಗಳ ಜೊತೆ ಅಮೂರ್ತ ಭಾಷೆಗಳಾದ ಕಣ್ಣಿನ, ಮನದಿಂಗಿತದ ಭಾಷೆಗಳನ್ನು ಅಭ್ಯಸಿಕೊಳ್ಳುವುದನ್ನು ಕಲಿಯುತ್ತಾನೆ. ಎದುರು ಮನೆಯ ಬ್ಯಾಂಕ್ ಮ್ಯಾನೇಜರ್‌ನ ಹೆಂಡತಿ ಮಾಲಿನಿಯ ನೋಟ, ಶಾಲೆಯಲ್ಲಿ ಜಯಲಕ್ಷ್ಮಿ, ಮನೆಗೆಲಸದ ಮುಗ್ಧ ಹುಡುಗಿ ರುಕ್ಕಿಯರ ಕಣ್ಣುಗಳಾಸೆಯಲ್ಲಿ ವ್ಯತ್ಯಾಸವನ್ನು ಗುರುತಿಸುತ್ತಾನೆ. ತನ್ನ ಪುಟ್ಟ ಮಕ್ಕಳನ್ನು ಅಕ್ಕರೆಯಿಂದ ಕಾಣುತ್ತಿದ್ದ ಚನಬಸುವನ್ನು ಮೋಹಿಸಿ, ತನ್ನ ಕಾಮವಾಂಛೆಗೆ ದುರುಪಯೋಗಪಡಿಸಿಕೊಂಡ ಎದುರು ಮನೆಯ ಬ್ಯಾಂಕ್ ಮ್ಯಾನೇಜರ ಹೆಂಡತಿ ಮಾಲಿನಿ ಅತೃಪ್ತ ಹೆಣ್ಣಾಗಿ ನಿಲ್ಲುತ್ತಾಳೆ. ರಾಜಕಾರಣಿಯೊಬ್ಬರ ಕಾರ್ಯದರ್ಶಿಯೂ ಆಗಿದ್ದ ಗಂಡನ ತಿರುಗಾಟ, ಗೈರುಹಾಜರಿಗಳು ಅವಳಿಗೆ ಪ್ರೋತ್ಸಾಹ ಕೊಟ್ಟಂತೆ, ಚನಬಸುನ ಹಳ್ಳಿಯ ಮುಗ್ಧತೆ, ಅನನುಭವ ಅವಳಿಗೆ ಉತ್ತೇಜನ ಕೊಡುತ್ತದೆ. ಈ ಸಂಬಂಧದ ಪರಿಣಾಮಗಳು ಬಾಲಕ (ಯುವಕನಾಗುವ ವಯಸ್ಸಿನಲ್ಲಿ) ಚನಬಸುನ ಮೇಲೆ ಯಾವ ಪರಿಣಾಮ ಬೀರಿದವು ಎಂಬುದರ ಕುರಿತು ಕಾದಂಬರಿ ವಿವರಿಸದಿದ್ದರೂ, ಚನಬಸು ಮೆಟ್ರಿಕ್ ಮುಗಿದ ತಕ್ಷಣ ನೌಕರಿ ಹುಡುಕುತ್ತ ಮುಂಬಯಿಗೆ ಹೋಗಲು ನಿರ್ಧರಿಸುತ್ತಾನೆ. ಇದು ಮಾಲಿನಿಯಿಂದ ದೂರ ಹೋಗುವ ಪ್ರಯತ್ನವೂ ಆಗಿರಬಹುದು. 'ಆತ ಎಂಥಾ ಬ್ರಹ್ಮಚಾರಿ ಅನ್ನೋದು ನನ್ನಷ್ಟು ಯಾರಿಗೂ ಗೊತ್ತಿಲ್ಲ. ಅದನ್ನೆಲ್ಲ ನೆನಸಿ ಇವೊತ್ತಿನ ರಾತ್ರಿ ಯಾಕ ಕರಾಳ ಮಾಡೋದು, ಬಿಡು ಚನಬಸು'[೨೨] ಎನ್ನುವ ಮಾಲಿನಿಯ ಮಾತು ಚನಬಸುವಿಗೆ ಜೀವನದಲ್ಲಿ ಮೊದಲಬಾರಿಗೆ ಜನಪ್ರಿಯ ಬ್ರಹ್ಮಚಾರಿ ರಾಜಕಾರಣಿಯೊಬ್ಬರ ಖಾಸಗಿ ಬದುಕಿನ ಕರಾಳ ಮುಖದ ಪರಿಚಯ ಮಾಡಿಸುತ್ತದೆ ಮತ್ತು ಇದು ಮಾಲಿನಿಯ ದೈಹಿಕ ಸಂಬಂಧದ ಲಾಭವಾಗಿದೆ.

ಓಡಿ ಹೋದ ಮಕ್ಕಳು ಎಂದೇ ದೀವಗಿ ಗ್ರಾಮದಲ್ಲಿ ಪ್ರಚಾರಗೊಂಡಿದ್ದ ಜಯಂತ ಕಾಯ್ಕಿಣಿ ಅವರ 'ಇದ್ದಾಗ ಇದ್ದಾಂಗ' ಕಥೆಯ ಪಬ್ಲೂ (ಪಾಂಡುರಂಗ ದಂಡೂ ಹರಿಕಾಂತ) ಮತ್ತು ಸಂಗಡಿಗರು ಕುರಿಯನ್ ಮೇಸ್ತಿಯೊಂದಿಗೆ ಮುಂಬಯಿಗೆ ಬಂದು ಒಂದು ಅನಾಮಿಕ ಕಂಪನಿಯಲ್ಲಿ ಕಳವು ಮಾಲು ಮಾರುವ ದಂದೆಗೆ ಸೇರಿಕೊಳ್ಳುತ್ತಾರೆ. ಹುಡುಗರು ಪುನಃಪುನಃ ಪೋಲಿಸರಿಂದ ಹೊಡೆತ, ಬಡಿತಗಳನ್ನು

ಸ್ವೀಕರಿಸಬೇಕಾಗುತ್ತದೆ. ಹೊಟ್ಟೆಗೂ ಸರಿಯಾಗಿ ಊಟ ಸಿಗದೆ ತಪ್ಪಿಸಿಕೊಂಡ ಪಬ್ಬು ಮರಾಠಿ ಕುಟುಂಬವೊಂದರಲ್ಲಿ ಮನೆಗೆಲಸಕ್ಕೆ ಸೇರಿಕೊಳ್ಳುತ್ತಾನೆ. ಈ ಕುಟುಂಬ ವಿಷಮ ದಾಂಪತ್ಯದ ಕುಟುಂಬವಾಗಿದ್ದು ಹೆಂಡತಿ ಪಬ್ಬುವಿನ ಕುತೂಹಲವನ್ನು ದುರುಪಯೋಗಪಡಿಸಿಕೊಂಡು ಲೈಂಗಿಕ ದೌರ್ಜನ್ಯ ಮಾಡುತ್ತಾಳೆ.

'ಮಗು ಆಡಿಸುತ್ತಿದ್ದ -ಮಗು ಹಾಲಿಗಾಗಿ ಅಳುತ್ತಿತ್ತು. ಇವನೆದುರೇ ಆ ತಾಯಿ ಬಂದು ಪೋಲಕಾ ಎತ್ತಿ ಹಾಲುಣಿಸಿ- ನಂತರ ತಕ್ಷಣ ಮಗುವನ್ನು ಬದಿಗಿಟ್ಟು "ತುಲಾ ಪಾಯಜೆ ಕಾ?" ಅಂತ ಇವನ ಮುಖವನ್ನು ಎದೆಗೊತ್ತಿಕೊಂಡು ಗಟ್ಟಿ ಅಪ್ಪಿ ಉರುಳ್ಯಾಡಿಸಿ ಮುತ್ತಿಟ್ಟಳಂತೆ. ಆವತ್ತಿನಿಂದ ಅದೇ ಅಭ್ಯಾಸ ಆಯಿತಂತೆ'[೪೪]

ಇಂತಹ ಸಂದರ್ಭಗಳ ಪರಿಣಾಮಗಳು ಮಾತ್ರ ಭಯಂಕರವಾಗಿರುವುದು ಸ್ಪಷ್ಟವಿದೆ. ಗಂಡಸರಿಂದ ಏಟು ತಿನ್ನುವುದರ ಜೊತೆಗೆ ಮಕ್ಕಳು ನಿರಂತರ ಲೈಂಗಿಕ ಹುಚ್ಚಿಗೆ ಬಲಿಯಾಗಬೇಕಾಗುತ್ತದೆ. ಪಬ್ಬು ಹೆಂಗಸರ ಹುಚ್ಚು ಹಿಡಿದು ಯಾವ ವ್ಯವಹಾರ ಮಾಡಿದರೂ ಯಶಸ್ವಿಯಾಗದೆ ಕೊನೆಗೆ ಹುಡುಗಿಯರನ್ನು ಮುಂಬಯಿಯ ವೇಶ್ಯಾವಾಟಿಕೆಗೆ ಸಾಗಿಸುವ ಕಾನೂನುಬಾಹಿರ ದಂದೆಗೆ ಇಳಿಯುತ್ತಾನೆ. ಇಲ್ಲಿ ಪಬ್ಬು (ಮಕ್ಕಳ)ವಿನ ವ್ಯಕ್ತಿತ್ವ ಗ್ರಾಮ ನೆಲೆಯಿಂದ ಹಂತಹಂತವಾಗಿ ನಗರ ನೆಲೆಯಲ್ಲಿ ಸ್ಥಾಪಿತಗೊಂಡು ನಗರ ಪಾತ್ರವೆ ಆದ ರೀತಿಯನ್ನು ಗುರುತಿಸುತ್ತೇವೆ. ಪಬ್ಬು ಚಿಕ್ಕವನಿದ್ದಾಗ ಆನಂದನ ಮಾಂಶಿ ಕೊಟ್ಟ ಮೋದಕವನ್ನೋ, ಉಂಡಿಯನ್ನೋ ಚೂರುಚೂರಾಗಿ ಮೆಲ್ಲುತ್ತ ಒಂದು ತಾಸು ಮಾಡಿ ಆನಂದ ರೇಗಿದಾಗ, ಮಾಂಶಿಯಿಂದ 'ಅವರು ಬಡವರು' ಎಂಬ ಕರುಣೆಗೆ ಒಳಗಾಗುತ್ತಿದ್ದ ಅಮಾಯಕನಾಗಿದ್ದಾನೆ. ಹುಡುಗ ಪಬ್ಬೂ ನಗರಕ್ಕೆ ಹೋಗಿ ಹಲವು ವರ್ಷ ಕಳೆದು ಮರಳುವಾಗ, ನಗರವನ್ನು ಗ್ರಹಿಸಿ, ಧರಿಸಿ ಬರುತ್ತಾನೆ. ಬಟ್ಟೆಬರೆ, ವೇಷಭೂಷಣದಲ್ಲಿ ನಗರದ ಹೊಸತನ, ಭಾಷೆಯಲ್ಲಿ ಬಹುವಚನದ (ಪರಿಚಿತರಿಗೂ) ಪ್ರಯೋಗ, ನಗರದ ಸಂಕೋಚರಹಿತ, ಭಯವಿಲ್ಲದ ನೇರ, ದಿಟ್ಟ ಸ್ವಭಾವ, ಊರಿನ ಸಮಸ್ಯೆಗೆ ಸ್ಪಂದಿಸುವ, ಮೈಗೂಡಿಸಿಕೊಂಡ ಕ್ರಾಂತಿಕಾರಿ ಸ್ವಭಾವ, ತಾಯಿಯ ಶೀಲ ಕುರಿತು ವಿಶ್ಲೇಷಿಸಿ ವಾಸ್ತವತೆಯನ್ನು ಒಪ್ಪಿಕೊಳ್ಳುವ ದಿಟ್ಟ ನಿಲುವು, ಅಪ್ರತಿಮ ಧೈರ್ಯ, ಪ್ರತಿಗಾಮಿಗಳ ವಿರುದ್ಧ ದಾಳಿ, ನಿಷ್ಠುರ ವಾಸ್ತವವಾದಿತನಗಳು ಪರಿವರ್ತನೆಗೊಂಡ ಪಬ್ಬುವಿನಲ್ಲಿ ಎದ್ದು ಕಾಣುತ್ತವೆ. ಇದು ನಗರ ಹುಟ್ಟು ಹಾಕಿ ಬೆಳೆಸಿದ ವ್ಯಕ್ತಿತ್ವವೂ ಆಗಿದೆ. ಕೆಳ, ದಲಿತ ವರ್ಗದ ಬಾಲಕ ತನ್ನ ಗ್ರಾಮೀಣ ಮುಗ್ಧತೆ ಮತ್ತು ಸಂಕೋಚಗಳನ್ನು ನಗರ ಸೇರಿ ದೂರ ಮಾಡಿಕೊಂಡ ರೀತಿ, ಅವನು ಗ್ರಾಮ, ನಗರಗಳನ್ನು ಗ್ರಹಿಸುವ ಸಂಘರ್ಷವಾಗಿದೆ. ನಗರ ತನ್ನ ಗರ್ಭ ಪ್ರವೇಶಿಸಿದ ಮುಗ್ಧರನ್ನು, ಬಾಲಕರನ್ನು ಮಹಿಳೆಯರನ್ನು ಲೀಲಾಜಾಲವಾಗಿ ತನ್ನ ವ್ಯವಸ್ಥೆಗೆ ಹೊಂದಿಸಿಕೊಳ್ಳುತ್ತದೆ. ಬದುಕಿನ ಪಾಠದೊಂದಿಗೆ ತನ್ನ ಸರ್ವ ಸಾಂಗತ್ಯ ಗುಣಗಳನ್ನೂ ಕಲಿಸಿ ಸೀಜನ್‌ಗೊಳಿಸಿ ಬಿಡುತ್ತದೆ ಎಂಬುದು ಅಧ್ಯಯನದ ನಿಲುವಾಗಿದೆ.

ಪಬ್ಬೂನಲ್ಲಿ ಕಂಡುಬರುವ ಹೊಸ ಸ್ಪಂದನೆ ಮತ್ತು ದೈಹಿಕ, ಮಾನಸಿಕ ಪರಿವರ್ತನೆಗಳು ವ್ಯಾಸರಾಯ ಬಲ್ಲಾಳ ಅವರ 'ಹೆಜ್ಜೆ' ಕಾದಂಬರಿಯ ವೇಣುವಿನಲ್ಲೂ ಕಾಣಿಸುತ್ತವೆ. ಬಸರೂರಿನ ದಲಿತ, ದೇವದಾಸಿ ಕುಟುಂಬದ ನಾಗಿಯ ತಮ್ಮ ವೇಣು ತಮ್ಮ ಮನೆಗೆ ಅಕ್ಕನ ದೈಹಿಕ ಸಂಪರ್ಕಕ್ಕಾಗಿ ಬರುತ್ತಿದ್ದ ಪರಮೇಶ್ವರ ಐತಾಳರನ್ನು ಚಿಕ್ಕಯ್ಯ ಎಂದು ಕರೆಯುತ್ತ, ಅವರು ತರುತ್ತಿದ್ದ ಹಂಟ್ಲೆ ಅಂಡ್ ಪಾಮರ್‌ನ ಬಿಸ್ಕೀಟಿನ ತುಣುಕುಗಳಿಗೆ ತೃಪ್ತಿ ಪಡುತ್ತಿದ್ದ ಪುಟ್ಟ ಬಾಲಕನಾಗಿದ್ದಾನೆ. ಇದು ಅವನಿಗೆ ಸಂಭ್ರಮ ತರುವ ಗಳಿಕೆಯಾಗಿ ಕಂಡ ಕಾಲವಾಗಿರುತ್ತದೆ. ಇಂತಹ ವೇಣು ತನ್ನ ಹದಿನಾಲ್ಕನೇ ವಯಸ್ಸಿಗೆ ಓಡಿಹೋಗಿ ಗಾಂಧಿವಾದಿಗಳ ಜೊತೆ ಸೇರಿ ಸ್ವಾತಂತ್ರ್ಯಪ್ರೇಮವನ್ನು ಬೆಳೆಸಿಕೊಳ್ಳುತ್ತಾನೆ. ಧಾರವಾಡ, ಸಿರ್ಸಿ, ಸಿದ್ದಾಪುರ ಸುತ್ತಿ ಹೊಸಗಾಳಿ, ಹೋರಾಟದ ಬದುಕನ್ನು ಪಡೆದು ಮರಳಿ ಬಸರೂರಿಗೆ ಬಂದು ತನ್ನ ಮನೆತನದ ಕಸುಬಿನ ವಿರುದ್ಧ ಸಂಘರ್ಷಕ್ಕಿಳಿಯುತ್ತಾನೆ. ವೇಣು ಮನೆಗೆ (ಅಕ್ಕನ ಸಂಪರ್ಕಕ್ಕೆ) ಬಂದ ಐತಾಳರನ್ನು ಎದುರಿಸುವ ರೀತಿ ಆಶ್ಚರ್ಯ ಹುಟ್ಟಿಸುತ್ತದೆ. ಅಧ್ಯಯನ ಗಮನಿಸಿದ ಅಂಶವೆಂದರೆ ವೇಣು ಇಂತಹ ವ್ಯವಸ್ಥೆಯ ನಿರ್ಮಾಣಕ್ಕಾಗಿ ಐತಾಳರನ್ನು ಹೊಣೆಯಾಗಿಸಿ ದೂರುವುದು, ವಾಗ್ಯುದ್ಧಕ್ಕೆ ನಿಂತು ಗೆಲ್ಲುವುದು. ವ್ಯವಸ್ಥೆಯ ಒಂದು ಭಾಗವಾದ ನಾಗಿ, ನಾಗಿಯ ತಾಯಿ ಭಾಗಿಯರನ್ನು ಅವನು ದೂಷಿಸುವುದಿಲ್ಲ ಎಂಬಲ್ಲಿ ಅವನ ಪ್ರಬುದ್ಧತೆ ಮತ್ತು ಶಿಕ್ಷಣದ ಗೆಲುವಿದೆ.

'ಚಿಕ್ಕಯ್ಯಾ, ನಾನು ಮನೆಬಿಟ್ಟು ಹೋದವನು ಮನೆಗೆ ಬಂದಿದ್ದೇನೆ, ನಿಜ. ನೀವು ಈ ವಯಸ್ಸಿನಲ್ಲಿ ನಿಮ್ಮ ಮನೆ ಬಿಟ್ಟು ಇಲ್ಲಿಗೆ ಇನ್ನೂ ಬರುತ್ತಿರುವ ಕಾರಣವಾದರೂ ಏನು?'[೪೫]

ಎಂಬ ವೇಣುವಿನ ಪ್ರಶ್ನೆ ದಾರಿ ತಪ್ಪಿದ ಪರಂಪರಾಗತ ವ್ಯವಸ್ಥೆಯನ್ನು ಖಂಡಿಸುವುದಾಗಿದೆ. ಐತಾಳರನ್ನು ಹೊರಗಟ್ಟಿದ ವೇಣು ತಾಯಿ, ಅಕ್ಕರಿಗೆ ನೂಲು ತೆಗೆಯುವ ಗಾಂಧಿಯ ರಾಟೆಯನ್ನು ಕೊಟ್ಟು ಹೊಸ ಬದುಕನ್ನು ತೋರಿಸುತ್ತಾನೆ. ಸ್ವಾತಂತ್ರ್ಯದ ಪರಿಕಲ್ಪನೆ, ಶಿಕ್ಷಣ, ಸ್ವಾವಲಂಬಿ, ಶ್ರಮದ ಬದುಕು ದಲಿತ ಕುಟುಂಬಗಳನ್ನು ಜೀತಮುಕ್ತ, ಹಂಗುಮುಕ್ತಗೊಳಿಸಿ, ಊಳಿಗಮಾನ್ಯ ವ್ಯವಸ್ಥೆಯ ಸ್ಥಾಪಿತ ಹಿತಾಸಕ್ತಿಗಳಿಂದ ಬಿಡುಗಡೆಗೊಳಿಸುತ್ತವೆ ಎಂಬುದಕ್ಕೆ ವೇಣುವಿನ ಸಂಘರ್ಷದ ವಿಜಯ ಉದಾಹರಣೆಯಾಗಿದೆ. ವೇಣು ತನ್ನ ಹದಿವಯಸ್ಸಿನಲ್ಲಿ ಮಾಡಿದ ಶೋಷಣೆಯ ವಿರುದ್ಧದ ಪ್ರತಿಭಟನೆ, ಹೋರಾಟವನ್ನು ಉಲ್ಲಂಘನೆ ಕಾದಂಬರಿಯ ಚನಬಸು ಮಾಡುವುದಿಲ್ಲ. ಮಾಲಿನಿಯ ದೈಹಿಕ ಸಂಪರ್ಕದಲ್ಲಿ ಚನಬಸು ತನ್ನ ಕಾಮದ ಕನಸುಗಳನ್ನು ಸಾಕಾರಗೊಳಿಸಿಕೊಂಡು ಕೃತಾರ್ಥನಾಗುತ್ತಾನೆ. ಮುಂಬಯಿಯಲ್ಲಿ ಕೆಲಸ ಕೊಡಿಸುತ್ತೇನೆಂದು ಕರೆದುಕೊಂಡು ಹೋಗಿ ವಸತಿಗೃಹದಲ್ಲಿ ಸಲಿಂಗಕಾಮದಂತಹ ಅಕಾರ್ಯಕ್ಕೆ ಎಳಸಿದ ಬಹುಪ್ರಭಾವಿ ರಾಜಕಾರಣಿ ಫಂಡರಿನಾಥ ಕಾಗವಾಡೆಯನ್ನು ಎದುರಿಸಿ ನಿಲ್ಲುವುದಿಲ್ಲ. ಅಲ್ಲಿಂದ ತಪ್ಪಿಸಿಕೊಂಡು ಬೆಳಗಾವಿಗೆ ಹಿಂದಿರುಗುವುದು ಅವನ (ಪಲಾಯನವಾದ) ಸೋಲಾಗುತ್ತದೆ. ಇದಕ್ಕೆ ಇವರಿಬ್ಬರು ಬೆಳೆದ ವಾತಾವರಣ ಕಾರಣವೆನ್ನಬಹುದು. ಶ್ರಮವರ್ಗದ ಜಾತಿಜನ್ಯ ಸಂಘರ್ಷಗುಣ, ಸ್ವಾತಂತ್ರ್ಯ ಹೋರಾಟಗಾರರ ಸಂಪರ್ಕ, ಸಾಂಗತ್ಯಗಳು ವೇಣುವನ್ನು ಸಿದ್ಧಗೊಳಿಸಿದಂತೆ ಚನಬಸುವನ್ನು ಸಿದ್ಧಗೊಳಿಸಿಲ್ಲದಿರುವುದು ಪಲಾಯನಕ್ಕೆ ಕಾರಣವೆನ್ನಬಹುದು.

ಗ್ರಾಮ/ನಗರ ನಿರಾಕರಿಸಿದ ಮಕ್ಕಳು ಹೊಸನೆಲೆಯಲ್ಲಿ ನೆಲೆ ನಿಲ್ಲಲು ಪ್ರಯತ್ನಿಸುವಾಗಿನ ಸಂಘರ್ಷದ ಸ್ವರೂಪವನ್ನು ಪ್ರಸ್ತುತ ಕಥನ ಸಾಹಿತ್ಯ ಈ ರೀತಿ ಗ್ರಹಿಸಿದೆ. • ಕುಟುಂಬದೊಂದಿಗೆ ಗ್ರಾಮ/ನಗರ ಆಯ್ಕೆ ಮಾಡಿಕೊಂಡ ಪುಟ್ಟ ಮಕ್ಕಳು ಕುತೂಹಲದಿಂದ ಹೊಸ ಪರಿಸರ ಸ್ವೀಕರಿಸುವುದು, ಅನಿಶ್ಚಿತ ಭಾವಗಳಲ್ಲಿ ತೊಳಲಾಡುವುದು ಕಂಡುಬರುತ್ತದೆ. • ಶಿಕ್ಷಣಕ್ಕೆ ಮುಖ ಮಾಡಿದ ದೊಡ್ಡ ಮಕ್ಕಳು ಅನಿಶ್ಚಿತ, ಅನಾಥಭಾವದಿಂದ ಗ್ರಾಮ ಮತ್ತು ನಗರಗಳನ್ನು ತುಲನೆ ಮಾಡುತ್ತಾರೆ. ನಗರ ವ್ಯವಸ್ಥೆಯ ಕ್ರೌರ್ಯದ ವಿರುದ್ಧ ಸಂಘರ್ಷಕ್ಕೆ ಇಳಿಯದೇ ಆ ಪರಿಸರಕ್ಕೆ ಹೊಂದಿಕೊಂಡು ಬದುಕಲು ಬಯಸುತ್ತಾರೆ. • ಏಕಾಂಗಿಯಾಗಿ ಮೂಲ ನೆಲೆಯನ್ನು ನಿರಾಕರಿಸಿ ಬಂದ ಮಕ್ಕಳು ಸ್ವಾತಂತ್ರ್ಯದ ನಿರಾಳತೆಯನ್ನು ಅನುಭವಿಸಿದರೂ ಜೊತೆಗೆ ನಗರದ ಅಭದ್ರತೆಯ ಭಯ ಅವರನ್ನು ಕಾಡಿದೆ. • ಕೆಳವರ್ಗ, ದಲಿತರ ಮಕ್ಕಳು ಹೋಟೆಲ್‌ಗಳಲ್ಲಿ ಕೆಲಸಕ್ಕೆ ಸೇರಿ ಬಂಡವಾಳಶಾಹಿ ಮಾಲೀಕರ ದೈಹಿಕ, ಮಾನಸಿಕ ದೌರ್ಜನ್ಯಗಳಿಗೆ ಬಲಿಯಾಗುವುದು ಕಥನ ಸಾಹಿತ್ಯದಲ್ಲಿ ದಾಖಲಾಗಿದೆ. • ಗ್ರಾಮ/ನಗರಗಳ ಸ್ಥಾಪಿತ ಹಿತಾಸಕ್ತಿಗಳು, ಅತೃಪ್ತ ದಂಪತಿಗಳು ಅಸಹಾಯಕ ಮಕ್ಕಳನ್ನು ಲೈಂಗಿಕವಾಗಿ ಬಳಸಿಕೊಳ್ಳು (ಶೋಷಿಸು)ವುದು ಕಂಡುಬರುತ್ತದೆ.

## ಕೊನೆಯ ಟಿಪ್ಪಣಿಗಳು

೧. ಅಶೋಕ ಕುಲಕರ್ಣಿ, ನಿರ್ಗತಿಕರು, ೧೯೭೮, ಜ್ಯೋತಿಷ್ಮತಿ ಪ್ರಕಾಶನ, ಪುಟ ೧೫
೨. ವ್ಯಾಸರಾವ್ ನಿಂಜೂರ್, ಮಂಚ, ೨೦೦೫, ಸುವರ್ಣಗಿರಿ ಪ್ರಕಾಶನ, ಪುಟ ೬೭
೩. ಶ್ರೀರಂಗ, ವಿಶ್ವಾಮಿತ್ರನ ಸೃಷ್ಟಿ ೧೯೭೪ (ದ್ವಿ ಮು), ಅಕ್ಷರ ಪ್ರಕಾಶನ, ಪುಟ ೧೭೪
೪. ಯಶವಂತ ಚಿತ್ತಾಲ: ಶಿಕಾರಿ, ೧೯೯೫ (ಆರನೇ ಮುದ್ರಣ), ಗೀತಾ ಬುಕ್ ಹೌಸ್, ಪುಟ ೨೩೨
೫. ಕುಂದರನಾಡ ಪಾಟೀಲ, ಉಲ್ಲಂಘನೆ, ೧೯೯೪, ಸಿಂಚನ ಗ್ರಂಥಮಾಲೆ ಧಾರವಾಡ, ಪುಟ ೪೧
೬. ಚಂದ್ರಕಾಂತ ಕುಸನೂರ, ಯಾತನಾ ಶಿಬಿರ, ೧೯೮೮, ಮನೋಹರ ಗ್ರಂಥಮಾಲಾ, ಪುಟ ೩೮
೭. ಅಶೋಕ ಹೆಗಡೆ, ಅಶ್ವಮೇಧ, ೨೦೦೬, ಅಕ್ಷರ ಪ್ರಕಾಶನ, ಹೆಗ್ಗೋಡು, ಪುಟ ೪೯
೮. ಅಶೋಕ ಹೆಗಡೆ, ಒಂದು ತಗಡಿನ ಚೂರು, ೧೯೯೬, ಅಕ್ಷರ ಪ್ರಕಾಶನ (ಹೆಗ್ಗೋಡು), ಸಾಗರ, ಪುಟ ೧೯
೯. ಕೇಶವ ಮಳಗಿ, ಕಡಲ ತೆರೆಗೆ ದಂಡೆ, ೧೯೮೯, ಗಜೇಂದ್ರ ಪ್ರಕಾಶನ, ಪುಟ ೧೬೯
೧೦. ಎಸ್.ಎಫ್.ಯೋಗಪ್ಪನವರ, ಆರಾಮ ಖುರ್ಚಿ, ಇತರ ಕತೆಗಳು, ೧೯೯೬, ಕವಿತಾ ಪ್ರಕಾಶನ, ಪುಟ ೨೭
೧೧. ರಮಾನಂದ ಅಮೀನ್, ಗದ್ದೆಯ ಸೆರಗು, ೧೯೮೩, ಚಂದ್ರಸಾಗರ ಪ್ರಕಾಶನ, ಪುಟ ೬
೧೨. ಪಾಟೀಲ ಪುಟ್ಟಪ್ಪ, ಪಾಪು ಸಮಗ್ರ ಕಥೆಗಳು, ೨೦೦೦, ಸಪ್ನ ಪ್ರಕಾಶನ, ಪುಟ ೯೮
೧೩. ತುಳಸಿ ವೇಣುಗೋಪಾಲ, ಕೆ.ಟಿ.ವೇಣುಗೋಪಾಲ, ಜುಗಲಬಂದಿ, ೨೦೦೫, ಸಮಗ್ರ ಸಾಹಿತ್ಯ ಪ್ರಕಾಶನ, ಪುಟ ೪೧
೧೪. ವ್ಯಾಸರಾಯ ಬಲ್ಲಾಳ, ವ್ಯಾಸರಾಯ ಬಲ್ಲಾಳರ ಸಮಗ್ರ ಕಥೆಗಳು, ಅಂಕಿತ ಪುಸ್ತಕ, ೨೦೦೨, ಪುಟ ೫೧
೧೫. ಸದಾನಂದ ಸುವರ್ಣ, ಚಿನ್ನದ ಗೊಂಬೆ, ದ್ವಿಮು. ೧೯೯೫, ಸುವರ್ಣಗಿರಿ ಪ್ರಕಾಶನ, ಪುಟ ೫೫
೧೬. ರೋಹಿದಾಸ ನಾಯಕ, ಕರೆಯದೇ ಬರುವವರು ೧೯೯೨, ಅಲ್ಲಮ ಪ್ರಕಾಶನ, ಪು ೨೮
೧೭. ಎಚ್.ಎಸ್. ರಾಘವೇಂದ್ರರಾವ್, ನಿಲುವು; ೧೯೮೯, ಕನ್ನಡ ಸಂಘ, ಕ್ರೈಸ್ಟ ಕಾಲೇಜ್, ಬೆಂಗಳೂರು, ಪುಟ ೨೮೮
೧೮. ಶಾಂತಿನಾಥ ದೇಸಾಯಿ, ಬೀಜ, ೨೦೦೨, ಸ್ವಪ್ನ ಬುಕ್ ಹೌಸ್, ಬೆಂಗಳೂರು; ಪುಟ ೭
೧೯. ಪಾಟೀಲ ಪುಟ್ಟಪ್ಪ, ಪಾಪು ಸಮಗ್ರ ಕಥೆಗಳು, ೨೦೦೦, ಸಪ್ನ ಪ್ರಕಾಶನ, ಪುಟ ೧೦೭
೨೦. ಸನದಿ ಬಿ.ಎ., ಅನುಭವ, ೧೯೮೬, ಕಾಲಗತಿ ಪ್ರಕಾಶನ, ರಾಯಭಾಗ, ಪುಟ ೩೮
೨೧. ವಸುಧೇಂದ್ರ, ಯುಗಾದಿ, ೨೦೦೪, ಛಂದ ಪುಸ್ತಕ, ಪುಟ ೧೨
೨೨. ರಾಮಕೃಷ್ಣ ಗುಂದಿ, ಕಡಲ ಬೆಳಕಿನ ದಾರಿಸುಂಟ, ೧೯೯೬; ರಾಘವೇಂದ್ರ ಪ್ರಕಾಶನ, ಪುಟ ೨೮
೨೩. ಕುಸುಮಾಕರ ದೇವರಗೆಣ್ಣೂರು, ನಿರಿಂದ್ರಿಯ, ೧೯೯೩, ದಿವಾಣಜಿ ಪ್ರಕಾಶನ, ಮುಂಬಯಿ, ಪುಟ ೫೧, ೫೨
೨೪. ಪಾಟೀಲ ಪುಟ್ಟಪ್ಪ, ಪಾಪು ಸಮಗ್ರ ಕಥೆಗಳು, ೨೦೦೦, ಸಪ್ನ ಪ್ರಕಾಶನ, ಪುಟ ೯೮
೨೫. ಭಂಡಾರಿ ಆರ್. ಎ., ಬೆಂಕಿಯ ಮಧ್ಯೆ, ೧೯೮೪, ಬಂಡಾಯ ಪ್ರಕಾಶನ ಪುಟ ೮೬
೨೬. ಡಿಸೋಜ ನಾ., ಮಂಜಿನ ಕಾನು, ೧೯೯೦, ಹೇಮಂತ ಸಾಹಿತ್ಯ ಪುಟ ೨೦೧
೨೭. ಬಸವರಾಜ ಕಟ್ಟೀಮನಿ, ನೀ ನನ್ನ ಮುಟ್ಟಬೇಡ, ೧೯೫೪, ಶಾರದಾ ಪ್ರಕಟನಾಲಯ, ಪುಟ ೧೮೦
೨೮. ಶಿವರುದ್ರ ಕಲ್ಲೋಳಿಕರ, ಹೊಲೆಗೇರಿಯ ರಾಜಕುಮಾರ, ೧೯೯೪, ಅನಾರ್ಯ ಪ್ರಕಾಶನ, ಪುಟ ೩೨
೨೯. ಹೇಮಲತಾ ಮಹಿಷಿ, ತ್ರಿಶಂಕು, ೧೯೭೯, ಸಾಹಿತ್ಯದೂತ ಪ್ರಕಾಶನ, ಪುಟ ೪೦
೩೦. ಅಶೋಕ ಕುಲಕರ್ಣಿ, ನಿರ್ಗತಿಕರು, ೧೯೭೮, ಜೋತಿಷ್ಮತಿ ಪ್ರಕಾಶನ, ಪುಟ ೧೦೬
೩೧. ಬಸವರಾಜ ಸಾದರ, ತಪ್ಪಂಡ, ೨೦೦೨, ಲೋಹಿಯಾ ಪ್ರಕಾಶನ, ಬಳ್ಳಾರಿ, ಪುಟ ೩೦
೩೨. ಸರಸ್ವತಿಬಾಯಿ ರಾಜವಾಡೆ (ಗಿರಿಬಾಲೆ), ಕದಂಬ, ೧೯೪೭, ನವಭಾರತ ಪುಸ್ತಕ ಭಂಡಾರ ಉಡುಪಿ, ಪುಟ ೫೩

೩೩. ವ್ಯಾಸರಾವ್ ನಿಂಜೂರ್, ಮಂಚ, ೨೦೦೫, ಸುವರ್ಣಗಿರಿ ಪ್ರಕಾಶನ, ಪುಟ ೧೨
೩೪. ಭಂಡಾರಿ ಆರ್.ವಿ., ತಲೆಮಾರು, ೨೦೦೪, ಸಾಹಿತ್ಯ ನಂದನ ಪ್ರಕಾಶನ, ಪುಟ ೧೬೪
೩೫. ರಾಘವೇಂದ್ರ ಪಾಟೀಲ, ಮಾಯಿಯ ಮುಖಗಳು, ೧೯೯೮, ಆನಂದಕಂದ ಗ್ರಂಥಮಾಲೆ, ಪುಟ ೬
೩೬. ಹೇಮಲತಾ ಮಹಿಷಿ, ತ್ರಿಶಂಕು, ೧೯೭೯, ಸಾಹಿತ್ಯದೂತ ಪ್ರಕಾಶನ, ಪುಟ ೪೬
೩೭. ಭಂಡಾರಿ ಆರ್.ವಿ., ತಲೆಮಾರು, ೨೦೦೪, ಸಾಹಿತ್ಯ ನಂದನ ಪ್ರಕಾಶನ, ಪುಟ ೭೮
೩೮. ವ್ಯಾಸರಾಯ ಬಲ್ಲಾಳ, ವ್ಯಾಸರಾಯ ಬಲ್ಲಾಳರ ಸಮಗ್ರ ಕಥೆಗಳು, ೨೦೦೨, ಅಂಕಿತ ಪುಸ್ತಕ, ಪುಟ ೩೩೭
೩೯. ರೇಖಾ ಕಾಖಂಡಕಿ, ತ್ರಸ್ತ, ೨೦೦೭, ಮನೋಹರ ಗ್ರಂಥಮಾಲಾ, ಧಾರವಾಡ, ಪುಟ ೧೬೧
೪೦. ರಾಮಕೃಷ್ಣ ಗುಂದಿ, ಕಡಲ ಬೆಳಕಿನ ದಾರಿಗುಂಟ, ೧೯೯೬, ರಾಘವೇಂದ್ರ ಪ್ರಕಾಶನ, ಪುಟ ೩೨
೪೧. ರಾಘವೇಂದ್ರ ಖಾಸನೀಸ, ಖಾಸನೀಸರ ಕತೆಗಳು, ೧೯೮೪, ಅಂಕಣ ಪ್ರಕಾಶನ, ಪುಟ ೯೧, ೧೦೩
೪೨. ವ್ಯಾಸರಾಯ ಬಲ್ಲಾಳ, ವ್ಯಾಸರಾಯ ಬಲ್ಲಾಳರ ಸಮಗ್ರ ಕಥೆಗಳು, ೨೦೦೨, ಅಂಕಿತ ಪುಸ್ತಕ, ಪುಟ ೨೩೦
೪೩. ಅಶೋಕ ಹೆಗಡೆ, ಒಳ್ಳೆಯವನು, ೨೦೦೪, ಅಕ್ಷರ ಪ್ರಕಾಶನ (ಹೆಗ್ಗೋಡು) ಸಾಗರ, ಪುಟ ೧೦೦
೪೪. ಗಿರಿ, ಗತಿಸ್ಥಿತಿ, ೧೯೯೯(ಮೂ.ಮು.), ಅಂಕಿತ ಪುಸ್ತಕ ಬೆಂಗಳೂರು, ಪುಟ ೩೭
೪೫. ಆಮೂರ ಜಿ.ಎಸ್., ಕನ್ನಡ ಕಥನ ಸಾಹಿತ್ಯ : ಕಾದಂಬರಿ, ೧೯೯೪, ಶ್ರೀಹರಿ ಪ್ರಕಾಶನ, ಪುಟ ೪೧೦
೪೬. ಅಶೋಕ ಹೆಗಡೆ, ಒಳ್ಳೆಯವನು, ೨೦೦೪, ಅಕ್ಷರ ಪ್ರಕಾಶನ (ಹೆಗ್ಗೋಡು), ಸಾಗರ, ಪುಟ ೧೦೦
೪೭. ಶಂಕರ ಮೊಕಾಶಿ ಪುಣೇಕರ, ಡೆರೆಕ್ ಡಿಸೋಝಾ ಮತ್ತು ಇತರ ಕತೆಗಳು, ೧೯೯೦, ಸಿಂಚನ ಗ್ರಂಥಮಾಲೆ, ಪುಟ ೬೮
೪೮. ಶಿವರುದ್ರ ಕಲ್ಲೋಳಕರ, ಹೊಲಗೇರಿಯ ರಾಜಕುಮಾರ, ಪುಟ ೯೬
೪೯. ಕೋರಗಲ್ ವಿರೂಪಾಕ್ಷಪ್ಪ, ಮಣ್ಣಿನ ಗುಣ, ೧೯೯೨, ಪ್ರಗತಿಪರ ವೇದಿಕೆ ಪ್ರಕಾಶನ ಹಾವೇರಿ, ಪುಟ ೬೪
೫೦. ಜಯಂತ ಕಾಯ್ಕಿಣಿ, ತೂಫಾನ್ ಮೇಲ್, ೨೦೦೫, ಅಂಕಿತ ಪುಸ್ತಕ, ಪುಟ ೪೨
೫೧. ಉಲ್ಲಾಸ ಹೆಗಡೆ, ಹಲವು ಕೆಲರವಗಳ ಊರಗಾಥೆ, ೨೦೦೫, ಚಿಂತನ, ಉತ್ತರ ಕನ್ನಡ, ಪುಟ ೩೫
೫೨. ವ್ಯಾಸರಾಯ ಬಲ್ಲಾಳ, ವ್ಯಾಸರಾಯ ಬಲ್ಲಾಳರ ಸಮಗ್ರ ಕಥೆಗಳು, ಅಂಕಿತ ಪುಸ್ತಕ, ೨೦೦೨, ಪುಟ ೧೨೧
೫೩. ರಾಮಕೃಷ್ಣ ಗುಂದಿ, ಆವಾರಿ, ೧೯೮೪, ರಾಘವೇಂದ್ರ ಪ್ರಕಾಶನ, ಪುಟ ೩೩
೫೪. ವ್ಯಾಸರಾವ್ ನಿಂಜೂರ, ಉಸಿರು, ೧೯೬೭, ಮನೋಹರ ಗ್ರಂಥಮಾಲಾ, ಪುಟ ೨೩೫
೫೫. ಭಾಲಚಂದ್ರ ಘಾಣೇಕರ, ಸಮಗ್ರ ಸಣ್ಣ ಕತೆಗಳು, ೧೯೯೧, ಸಮಾಜ ಪುಸ್ತಕಾಲಯ, (ಭಾಗ: ೨), ಪುಟ ೫
೫೬. ಬಸವರಾಜ ಕಟ್ಟೀಮನಿ, ಬೀದಿಯಲ್ಲಿ ಬಿದ್ದವಳು, ೧೯೫೩, ಪ್ರತಿಭಾ ಗ್ರಂಥಮಾಲೆ, ಪುಟ ೧೨೭
೫೭. ಶಾಂತಾದೇವಿ ಕಣವಿ, ಶಾಂತಾದೇವಿ ಕಣವಿಯವರ ಕಥಾಮಂಜರಿ, ಪ್ರಿಯದರ್ಶಿನಿ ಪ್ರಕಾಶನ, ೨೦೦೩, ಪುಟ ೩೨೨
೫೮. ವಿಜಯಾ ದಬ್ಬೆ, ಶ್ಯಾಮಲಾ ಸಂಚಯ, ೧೯೮೯, ಕರ್ನಾಟಕ ಲೇಖಕಿಯರ ಸಂಘ, ಪುಟ ೪೬
೫೯. ತುಳಸಿ ವೇಣುಗೋಪಾಲ, ಕೆ.ಟಿ.ವೇಣುಗೋಪಾಲ, ಜುಗಲಬಂದಿ, ೨೦೦೫, ಸಮಗ್ರ ಸಾಹಿತ್ಯ ಪ್ರಕಾಶನ, ಪುಟ ೪೨
೬೦. ಗೀತಾ ಕುಲಕರ್ಣಿ, ಪ್ರಶ್ನೆಗೆ ಉತ್ತರ, ೧೯೮೬, ಸಾಹಿತ್ಯ ಭಂಡಾರ ಹುಬ್ಬಳ್ಳಿ, ಪುಟ ೨
೬೧. ರಾಘವೇಂದ್ರ ಪಾಟೀಲ, ಮಾಯಿಯ ಮುಖಗಳು, ೧೯೯೮, ಆನಂದಕಂದ ಗ್ರಂಥಮಾಲೆ, ಪುಟ ೪೬
೬೨. ಪಾಟೀಲ ಪುಟ್ಟಪ್ಪ, ಪಾಪು ಸಮಗ್ರ ಕಥೆಗಳು, ೨೦೦೦, ಸ್ವಪ್ನ ಬುಕ್ ಹೌಸ್, ಪುಟ ೯೮
೬೩. ಮಿತ್ರಾ ವೆಂಕಟರಾಜ್, ರುಕುಮಾಯಿ, ನಂದನ ಪ್ರಕಾಶನ ಬೆಂಗಳೂರು, ೧೯೯೦, ಪುಟ ೬೫
೬೪. ಯೋಗಪ್ಪನವರ ಎಸ್. ಎಫ್., ಆರಾಮ ಖುರ್ಚಿ ಇತರ ಕತೆಗಳು, ೧೯೯೬, ಕವಿತಾ ಪ್ರಕಾಶನ, ಪುಟ ೩೧
೬೫. ಬಾಳಾಸಾಹೇಬ ಲೋಕಾಪುರ, ಕಂಗಳು ತುಂಬಿದ ಬಳಿಕ, ೨೦೦೩, ಸಿ. ವಿ. ಜಿ. ಪಬ್ಲಿಕೇಷನ್ ಬೆಂ., ಪುಟ ೯೫

೬೬. ಮಲ್ಲಿಕಾರ್ಜುನ ಹಿರೇಮಠ, ಅಮೀನಪುರದ ಸಂತೆ, ೧೯೯೧, ಹುನಗುಂದ ಪ್ರಕಾಶನ, ಪುಟ ೪೫
೬೭. ತುಳಸಿ ವೇಣುಗೋಪಾಲ, ಕೆ.ಟಿ.ವೇಣುಗೋಪಾಲ, ಜುಗಲಬಂದಿ, ೨೦೦೫, ಸಮಗ್ರ ಸಾಹಿತ್ಯ ಪ್ರಕಾಶನ, ಪುಟ ೩೭
೬೮. ಸರಸ್ವತಿಬಾಯಿ ರಾಜವಾಡೆ (ಗಿರಿಬಾಲೆ), ಕದಂಬ, ೧೯೪೭, ನವಭಾರತ ಪುಸ್ತಕ ಭಂಡಾರ, ಉಡುಪಿ, ಪುಟ ೫೩
೬೯. ಕುಸುಮಾಕರ ದೇವರಗೆಣ್ಣೂರು, ನಿರಿಂದ್ರಿಯ, ೧೯೯೩, ದಿವಾಣಜಿ ಪ್ರಕಾಶನ, ಮುಂಬಯಿ, ಪುಟ ೨೩
೭೦. ನಾ.ಡಿಸೋಜ, ಪ್ರೀತಿಯೊಂದೇ ಸಾಲದೆ?, ೧೯೮೬, ಹೇಮಂತ ಸಾಹಿತ್ಯ, ಪುಟ ೪೩
೭೧. ರೋಹಿದಾಸ ನಾಯಕ, ಮಾಸ್ತಣ್ಣ ಹಾಗೂ ಇತರ ಕತೆಗಳು, ೧೯೮೫, ಪ್ರಸನ್ನ ಪ್ರತಿಭಾ ಪ್ರಕಾಶನ, ಪುಟ ೭೭
೭೨. ಚಂದ್ರಕಾಂತ ಕುಸನೂರ, ಚರ್ಚಗೇಟ್, ಸತ್ಯಸ್ನೇಹ ಪ್ರಕಾಶನ, ಪುಟ ೩೦
೭೩. ಕುಂದರನಾಡ ಪಾಟೀಲ, ಉಲ್ಲಂಘನೆ, ೧೯೯೪, ಸಿಂಚನ ಗ್ರಂಥಮಾಲೆ ಧಾರವಾಡ, ಪುಟ ೫೬
೭೪. ಜಯಂತ ಕಾಯ್ಕಿಣಿ, ತೆರೆದಷ್ಟೇ ಬಾಗಿಲು, ೧೯೮೨, ಅನನ್ಯ ಪ್ರಕಾಶನ, ಪುಟ ೩೩, ೩೪
೭೫. ವ್ಯಾಸರಾಯ ಬಲ್ಲಾಳ, ಹೆಜ್ಜೆ, ೨೦೦೦, ಗೀತಾ ಬುಕ್ ಹೌಸ್, ಮೈಸೂರು, ಪುಟ ೧೨೫

## ಅಧ್ಯಾಯ ಒಂಬತ್ತು

## ಕಥನ ಸಾಹಿತ್ಯ : ಗ್ರಾಮ/ನಗರ ಮುಂದಿನ ಸಾಧ್ಯತೆಗಳು

ಗ್ರಾಮ/ನಗರ ಮೂಲನೆಲೆ ನಿರಾಕರಣೆಯು ವ್ಯಕ್ತಿಗಳ ಕೌಟುಂಬಿಕ, ಸಾಮಾಜಿಕ ಸಂಬಂಧಗಳ ನಿರಾಕರಣೆಯೂ ಆಗಿದೆ. ಹೊಸ ಪರಿಸರದಲ್ಲಿ ಹೋರಾಡಿ ನೆಲೆ ಕಂಡುಕೊಂಡ ವ್ಯಕ್ತಿ ಮತ್ತು ಕುಟುಂಬಗಳು ಹೊಸ ನೆಲೆಯಲ್ಲಿ ನಿಂತು ಸಮಾಜವನ್ನು ವೀಕ್ಷಿಸುತ್ತಾರೆ. ಈ ಹಂತದ ಸತತ ಹೋರಾಟ, ಸಂಘರ್ಷ, ಸಂಕಟಗಳು ಅವರ ಬದುಕನ್ನು ಯುದ್ಧ ಅಥವಾ ಸ್ಪರ್ಧೆಯ ನಂತರದ ರಂಗಸ್ಥಳವನ್ನಾಗಿಸುತ್ತವೆ. ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಸಂಘರ್ಷದ ಅಂತ್ಯದಲ್ಲಿ ಅವರ ಮಾನಸಿಕ ಸ್ಥಿತಿ, ಯುದ್ಧಾನಂತರದ ಸಂಧಾನ/ಶಾಂತಿ ಪ್ರಕ್ರಿಯೆ ಅಥವಾ ಈಜು ಸ್ಪರ್ಧೆಯ ನಂತರದ ವಿರಾಮ ಆಶಿಸುವ ಹಂತವನ್ನು ತಲುಪಿರುತ್ತದೆ. ಸಂಘರ್ಷದ ನಂತರ ಅವರು ಬದುಕಲ್ಲಿ ನಿರೀಕ್ಷಿಸುವುದೇನು, ಮೂಲನೆಲೆಯ ಬಂಧವೆ, ಹೊಸನೆಲೆಯ ಸಂಬಂಧವೆ, ಯುದ್ಧವೆ, ಶಾಂತಿಯೆ, ಸಂಧಾನವೆ, ಸಂಘರ್ಷವೆ ಇತ್ಯಾದಿ ಅವರ ಅಂತಿಮ ಆಯ್ಕೆಯ ಕುರಿತು ಮುಂಬಯಿ ಕರ್ನಾಟಕದ ಕಥನ ಸಾಹಿತ್ಯ ಹಲವಾರು ಸಾಧ್ಯತೆಗಳನ್ನು ಕಟ್ಟಿಕೊಟ್ಟಿದೆ. ವ್ಯಕ್ತಿ ಮತ್ತು ಕುಟುಂಬಗಳ ಅಂತಿಮ ಆಯ್ಕೆಯ ಸಾಧ್ಯತೆಗಳ ಮೇಲೆ ಬೆಳಕು ಚೆಲ್ಲುವ ವಾಸ್ತವಿಕ ಅಥವಾ ಓದುಗರ ಊಹಾತ್ಮಕ ನಿರ್ಧಾರಗಳನ್ನು ಮತ್ತು ಈ ನಿರ್ಧಾರಗಳು ಹುಟ್ಟುಹಾಕುವ ದ್ವಂದ್ವಾತ್ಮಕತೆಯನ್ನು ಈ ಅಧ್ಯಾಯದಲ್ಲಿ ಸಂಗ್ರಹಿಸಿ ಕೊಡಲಾಗುವುದು.

### ೧. ಮೂಲ ನೆಲೆ ಮತ್ತು ಸಾಧ್ಯತೆಗಳು

#### ಅ. ವೈಯಕ್ತಿಕ ಆಕರ್ಷಣೆಯ ನೆಲೆಯಿಂದ

ಗ್ರಾಮ/ನಗರದ ಮೂಲ ನೆಲೆಯನ್ನು ನಿರಾಕರಿಸಿ ಹೊಸ ನೆಲೆಯಲ್ಲಿ ಜೀವನ ಕಟ್ಟಿಕೊಂಡ ವ್ಯಕ್ತಿಗಳು ಮೂಲ ನೆಲೆಯ ಕುರಿತು ಮಾನಸಿಕ ದ್ವಂದ್ವವನ್ನು ಅನುಭವಿಸುತ್ತಾರೆ. ಹುಟ್ಟಿ ಬೆಳೆದ ನೆಲೆಯ ಆಕರ್ಷಣೆಯು ಸದಾ ಹಸಿರಾಗಿರುವಂತೆ ಅದರತ್ತ ನೋಡುವ ಬಯಕೆಯು ಸಹ ಗುಪ್ತಗಾಮಿನಿಯಾಗಿ ಹರಿಯುತ್ತಿರುತ್ತದೆ. ಕಳೆದುಹೋದ/ಹೋಗುತ್ತಿರುವ ಸಾಮಾಜಿಕ, ಧಾರ್ಮಿಕ ಆರ್ಥಿಕ, ಸಾಂಸ್ಕೃತಿಕ ಸಂಬಂಧಗಳ ಕುರಿತು ಆಕರ್ಷಣೆ, ಸೆಳೆತ ಗುಪ್ತಜಲದಂತೆ ಪ್ರವಹಿಸುತ್ತಾ ಇದ್ದು, ಅಂತಿಮ ನಿರ್ಧಾರದಲ್ಲಿ ಪ್ರಕಟವಾಗುವುದುಂಟು.

ಕೇಶವ ಮಳಗಿ ಅವರ 'ಕಡಲ ತೆರೆಗೆ ದಂಡೆ' ಕತೆಯಲ್ಲಿ ಯದುಪತಿ ಕಾಕಾ ಗ್ರಾಮವನ್ನು ಪುನಃ ಸ್ವೀಕರಿಸುವ ಸುಳಿವನ್ನು ಅವನ ಗ್ರಾಮ ನಿರಾಕಣೆಯ ಸಂದರ್ಭದಲ್ಲಿಯೇ ಗುರುತಿಸುತ್ತೇವೆ. ಹಟಮಾರಿ ಹೆಂಡತಿಯನ್ನು ಪ್ರೀತಿ, ಶಾಂತತೆಯಿಂದ ಗೆಲ್ಲಲಾರದೇ, ನಿಯಂತ್ರಿಸಲಾರದೇ ಮನೆ ತೊರೆದು ಮಧ್ಯರಾತ್ರಿ ಸುರಿವ ಮಳೆಯಲ್ಲಿ ಹೊರಟು ನಿಂತಾಗ, ಇವನ ಕೈಹಿಡಿದು ನಿಲ್ಲಿಸಿಕೊಂಡ ಸಾಕುಮಗ ಅಚ್ಯುತನಿಗೆ, 'ಅವಳ ಶಾಕ್ತವೆಲ್ಲ ಕರಗಿ ಶಾಂತಳಾಗಲಿ, ಸಾಧ್ಯವಾದ್ರ ಆಗ ಬರತೀನಿ' (ಪುಟ ೨೧೧) ಎಂದು ಹೇಳುತ್ತಾನೆ. ಇಲ್ಲಿ ಶಾಂತ ಸ್ವಭಾವದ ಗಂಡ, ಶಾಕ್ತ (ಚಂಡಿ) ಸ್ವಭಾವದ ಹೆಂಡತಿಯರ ವಿಷಮ ದಾಂಪತ್ಯದ

ವಿಕರ್ಷಣೆಯನ್ನು ಕಾಣುತ್ತೇವೆ. ಇದಾದ ಇಪ್ಪತ್ತು ವರ್ಷಗಳ ನಂತರ ಓದಿ ಶಹರದ ಕಾರ್ಖಾನೆಯಲ್ಲಿ ಕೆಲಸಕ್ಕಿದ್ದ ಅಚ್ಯುತನಿಗೆ, ಗ್ರಾಮದಿಂದ ಅಬಚಿ (ಯದುಪತಿ ಕಾಕಾನ ಹೆಂಡತಿ ಭೀಮಕ್ಕ ಅಬಚಿ) ಸೊಟ್ಟಸೊಟ್ಟ ಅಕ್ಷರಗಳಲ್ಲಿ ಪತ್ರವೊಂದನ್ನು ಬರೆಯುತ್ತಾಳೆ.

'ಈಗವನಿಗೆ ಕಾಗದದಲ್ಲಿನ ಅಂಕುಡೊಂಕು ಸಾಲುಗಳು, ಕೇವಲ ಶಬ್ದ, ವಾಕ್ಯಗಳಂತನಿಸಲಿಲ್ಲ. ಆ ಪದಗಳಿಗೆ, ರಕ್ತ-ಮಾಂಸ ತುಂಬಿ, ಸಿಟ್ಟು-ಸೆಡವು ತುಂಬಿ, ಪ್ರೀತಿ-ರಾಗದ್ವೇಷ ತುಂಬಿ, ಯಾವುದೋ ನಿರೀಕ್ಷೆಯಲ್ಲಿ ಕಂದಿ ಹೋಗುತ್ತಿರುವ ಕಣ್ಣಿನ ಬೆಳಕನ್ನು- 'ಅರಿ ಹೋಗಬೇಡ, ಸ್ವಲ್ಪ ಇರು' ಎಂದು ನಿಲ್ಲಿಸಿಕೊಂಡ ಜೀವಂತ ವ್ಯಕ್ತಿಯ ಶಕ್ತಿ ಇದ್ದ ಹಾಗನಿಸಿತು."[೧]

ಇಲ್ಲಿ ಕರುಳಬಳ್ಳಿ ಸಂಬಂಧಕ್ಕಿಂತ ಹೆಚ್ಚಾಗಿ ಎರಡು ಜೀವಗಳ ಹೃದಯ ಬಳ್ಳಿಯ ಸಂಬಂಧ ಬೆಸೆದುಕೊಂಡಿರುವುದನ್ನು ಗುರುತಿಸುತ್ತೇವೆ. ಗ್ರಾಮದಲ್ಲಿ ಕುಳಿತ ವೃದ್ಧ ವ್ಯಕ್ತಿತ್ವವೊಂದು ಅಲ್ಲಿಂದಲೇ ಶಹರದ ಇನ್ನೊಂದು ಯುವ ವ್ಯಕ್ತಿತ್ವವನ್ನು ನಿಯಂತ್ರಿಸುವ, ಪ್ರಭಾವಿಸುವ ಪರಿ ಅಚ್ಚರಿ ಹುಟ್ಟಿಸುತ್ತದೆ. 'ಅಚ್ಯಾ ! ಇವರು ವಾಪಸ್ಸ ಬಂದಾರ' (ಪುಟ ೧೯೯) ಎಂಬ ಅಬಚಿಯ ಮಾತಿನಲ್ಲಿ, ಅವಳ ಮುಖದ ಮೇಲಿನ ನೆರಿಗೆಗಳು ಸುಕ್ಕು ಕಳೆದುಕೊಂಡು ನೆಟ್ಟಗಾಗಿ ಸುಳಿಸುವುದನ್ನು ಗುರುತಿಸುತ್ತೇವೆ. ಇಪ್ಪತ್ತು ವರ್ಷಗಳಷ್ಟು ಧೀರ್ಘಕಾಲ ಕಾಕಾ ಮನೆ (ಗ್ರಾಮ) ನಿರಾಕರಿಸಿ ಹೋದಾಗ ಅಬಚಿಯ ಶಾಕ್ತವೆಲ್ಲ ಕರಗಿ ಶಾಂತವಾದ ರೀತಿಯಲ್ಲಿ, ಒಂಟಿ ಮಹಿಳೆಯೊಬ್ಬಳ ಹೋರಾಟದ ಬದುಕಿನ ಸಾರ್ಥಕ್ಯವಿದೆ. ವೇದಾವತಿ, ಅಚ್ಯುತರನ್ನು ಓದಿಸಲು, ವೇದಾವತಿಯ ಮದುವೆ ಮಾಡಲು ಮನೆಯ ಸಾಮಾನು, ಆಭರಣಗಳೆಲ್ಲ ಕರಗಿಹೋಗಿ ಅಬಚಿ ಅವರಿವರ ಮನೆಗೆಲಸಕ್ಕೆ ಸೇರಿ ಸಂಪಾದಿಸುತ್ತಾಳೆ, ಊರವರ ಟೀಕೆ, ಟಿಪ್ಪಣಿಗಳನ್ನು ಎದುರಿಸಿ ಗಂಡಸಿನಂತೆ ಬದುಕುತ್ತಾಳೆ. ಹಟಮಾರಿತನ, ಶಾಕ್ತವೆಲ್ಲ ಅನುಭವದ ರೂಪ ತಾಳಿ ಅಬಲೆ ಮಹಿಳೆ ಶಕ್ತಿಶಾಲಿಯಾಗುತ್ತಾಳೆ. ಒಂದು ದಿನ ಕಾಕಾ ಸ್ವಪ್ನದಲ್ಲಿ ಅಬಚಿ, ಅಚ್ಯುತ, ವೇದಿಯರನ್ನು ಕಂಡು ಊರಿಗೆ ಮರಳುತ್ತಾನೆ. ಇಲ್ಲಿ ಸ್ವಪ್ನ ಒಂದು ಸಂಕೇತ ಮಾತ್ರವಾಗಿದೆ. ಹುಟ್ಟಿದ ಊರಿನ ಅಗಾಧವಾದ ಆಕರ್ಷಣೆ ಅವನನ್ನು ಸೆಳೆಯುತ್ತದೆ. ಹೆಂಡತಿಯ ಶಾಕ್ತ(ಹಟ, ಯೌವನ)ವೆಲ್ಲ ಕರಗಿರಬಹುದೆಂಬ ಲೋಕಾನುಭವ ಗ್ರಾಮ ಆಕರ್ಷಣೆಯಾಗಿ ಪುನಃ ಎಳೆದು ತರುತ್ತದೆ. ಇಷ್ಟು ವರ್ಷಗಳ ನಂತರ ಊರಿಗೆ ವಾಪಸ್ಸು ಬರಲು ಅವನಿಗೆ ಯಾವ ಪ್ರೇರಣೆಯಾಗಿರಬೇಕು, ಎಂಬ ಪ್ರಶ್ನೆಯನ್ನಿಟ್ಟುಕೊಂಡು ಚರ್ಚಿಸುವುದಕ್ಕಿಂತ ಇವರಿಬ್ಬರ ದಾಂಪತ್ಯ ಮಾಗಿ, ಅನುಭವದಲ್ಲಿ ಮುದಗೊಳ್ಳಲು ಇಪ್ಪತ್ತು ವರ್ಷ ಬೇಕಾಯಿತಲ್ಲ ಎಂದು ಚಿಂತಿಸುವುದು ಸೂಕ್ತವಾಗುತ್ತದೆ. ಅಂತೂ ಅಬಚಿ ಮಾಗಿ ಹಣ್ಣಾಗಿದ್ದಾಳೆ. ಮೊದಲಿನ ರಭಸವಿಲ್ಲ, ಈಗ ಬರಿ ಶಾಂತ! ಕಾಕಾ ಇನ್ನೂ ಮಾಗಿ ತೇಜಸ್ವಿಯಾಗುತ್ತಾನೆ. ಕೊನೆಗಾಲದಲ್ಲಿ ತನ್ನ ಸೃಷ್ಟಿಮಾತೆಯನ್ನು ನೋಡುವ ಮನಸ್ಸಾಗಿ ಮರಳಿದ್ದಾನೆ ಎಂಬುದು ಮುಖ್ಯವಾಗುತ್ತದೆ. ಅಲ್ಲದೆ, ತನ್ನ ಬದುಕಿಗೆ ಅಬಚಿಯೇ ಸರಿಯಾದ ಆಸರೆ (ಆಕೆ ಕೊಡುತ್ತಾಳೆ, ನಾನು ತೆಗೆದುಕೊಳ್ಳಬೇಕು) ಎಂಬ ನಿಲುವು ಅವನನ್ನು ಮತ್ತೆ ಗ್ರಾಮಕ್ಕೆ ಕರೆತಂದಿದೆ ಎಂಬುದು ಅಧ್ಯಯನದ ನಿಲುವಾಗಿದೆ.

ಸಂಸಾರ ತೊರೆದು ಗ್ರಾಮ ನಿರಾಕರಣೆ ಮಾಡಿದ್ದ ಸುನಂದಾ ಬೆಳಗಾಂವಕರ ಅವರ 'ಕಾಯಕ ಕೈಲಾಸ' ಕಾದಂಬರಿಯ ಶಿವಲಿಂಗಯ್ಯ ಅನೇಕ ವರ್ಷಗಳ ನಂತರ, ಕಾಶಿಯಲ್ಲಿ ಬೇಟಿಯಾದ ಗೌಡರ ಸಹಾಯದಿಂದ ಮೂಲ ನೆಲೆ ಸೋಮೇಶ್ವರಕ್ಕೆ ಮರಳುತ್ತಾನೆ. ಶಿವಲಿಂಗಯ್ಯನಿಗೆ ಗ್ರಾಮದ ಸೆಳೆತ ತೀವ್ರಗೊಳ್ಳಲು ಅವನ ಗ್ರಾಮದ ಗೌಡರ ಭೇಟಿ, ಅವರು ಹೇಳಿದ ಹೆಂಡತಿ ಮಕ್ಕಳ ಸಮಾಚಾರಗಳು ನೆಪಮಾತ್ರದ ಸಂಗತಿಗಳಾಗಿವೆ. ಹೊಸ ನೆಲೆಯಲ್ಲಿ ಇಂತಹ ವ್ಯಕ್ತಿಗಳು ಅನುಭವಿಸುವ ಮಾನಸಿಕ ಗೊಂದಲ, ತಲ್ಲಣ, ಮೂಲ ನೆಲೆಯ ನೆನಪಿನ ದ್ವಂದ್ವಗಳು ನಿರಂತರವಾಗಿರುತ್ತವೆ ಎಂಬುದನ್ನು ಶಿವಲಿಂಗಯ್ಯ ತನ್ನ ಹೆಂಡತಿ ಗಂಗಮ್ಮನಿಗೆ ಹೇಳುವ ಆಂತರ್ಯದ ನುಡಿಗಳಲ್ಲಿ ವ್ಯಕ್ತವಾಗಿವೆ.

'ನನ್ನ ಶಿವ ಬದುಕಿಸಿದ್ದು ಗಂಗನ ಮ್ಯಾಗಿನ ಪ್ರೀತಿಗೆ. ನಾ ಆಕಿ ಅಷ್ಟ ಪುಣ್ಯವಂತನಲ್ಲ.' 'ಇಂಥಾ ಭಾವನಾತ್ಮಕ ವಿಚಾರ ನನಗ ಈ ಜನ್ಮದಾಗ ಬರಾಕ ಸಾಧ್ಯಯಿಲ್ಲ. ಮಧ್ಯಾಹ್ನ ಆತು ಹೊಟ್ಟೆ ತುಂಬಿಸೋ ವಿಚಾರ. ರಾತ್ರಿ ಆತು ನಿನ್ನ ಜತೆ ಮಲಗೋ ವಿಚಾರ ಹುಳದಾಂಗ ನನ್ನ ತಲಿ ಕೊರಿತಿದ್ದವು' 'ಹೆಣ್ಣ ಇಲ್ಲದ ನನಗ ಇರಾಕ ಭಾಳ ಕಷ್ಟ ಆಗೇತಿ. ಹುಚ್ಚ ಹಿಡದಾಂಗ ಆಗತಿತ್ತ. ಆದ್ರ ನಿನ್ನ ಹೊರತು ಬ್ಯಾರೆ ಹೆಣ್ಣಿನ ಜತಿ ಇರಾಕ ನನಗ ಹೆದ್ರಿಕಿ. ಆ ಹೆದರಿಕಿನ ನನ್ನ ಮಾನಾ ಉಳಿಸ್ತು."[೨]

ಶಿವಲಿಂಗಯ್ಯನ ಮೂಲನೆಲೆಯ ಆಕರ್ಷಣೆಯ ಹಿಂದೆ ಸಾಮಾಜಿಕ ಚೌಕಟ್ಟಿನೊಳಗೆ ತೃಪ್ತಿಪಡಿಸಿಕೊಳ್ಳಬೇಕಾದ ಆಹಾರ ಮತ್ತು ದೈಹಿಕ(ಕಾಮ)ವಾಂಛೆಗಳು ಹಾಗೂ ಇವುಗಳನ್ನು ಪಡೆಯುವಲ್ಲಿ ಸಾಂಪ್ರದಾಯಿಕ ಸಮಾಜದಲ್ಲಿನ ನಿರ್ಬಂಧಗಳು ಕಾರಣವಾಗಿವೆ. ಹೆಂಡತಿ, ಮಗ, ಸಂಸಾರ ಎಂಬ ಭಾವನಾತ್ಮಕ ಸಂಬಂಧಗಳಿಗಿಂತ ಹೆಚ್ಚಾಗಿ, ಅವನಿಗೆ ಅನ್ಯ ಪ್ರದೇಶದಲ್ಲಿ ಹಸಿವು ಮತ್ತು ಕಾಮವನ್ನು ತೃಪ್ತಿಪಡಿಸಿಕೊಳ್ಳುವ ಅನೈತಿಕತೆಯ ಭಯ ಕಾಡಿದೆ. ಇವೆರಡೂ ಅವನನ್ನು ಮೂಲನೆಲೆಗೆ ಮರಳಿ ಬರಲು ಪ್ರೇರೇಪಿಸಿವೆ. ಮನುಷ್ಯ ಎಲ್ಲೇ ಇರಲಿ ಹಸಿವು ಮತ್ತು ಕಾಮ (ಪ್ರೇಮದ ಹೆಸರಿನಲ್ಲಿ) ಅವನ ಸಂಗಾತಿಗಳು. ಇವುಗಳನ್ನು ಸಾಂಸಾರಿಕ ಚೌಕಟ್ಟಿನೊಳಗೆ ಪಡೆಯಬೇಕಾದ್ದು/ತೃಪ್ತಿಪಡಿಸಬೇಕಾದ್ದು ಅನಿವಾರ್ಯ ಹಾಗೂ ಸುರಕ್ಷತೆ ಎಂಬುದನ್ನು ಶಿವಲಿಂಗಯ್ಯನಂತಹ ಸಂಪ್ರದಾಯವಾದಿಗಳ ಜೀವನದಿಂದ ಅರಿತುಕೊಳ್ಳಬೇಕಾದ ಸಂದೇಶವಾಗಿದೆ.

ಮೂಲನೆಲೆ(ನಗರ)ಗೆ ಮರಳಿ ಬಂದ ಶಿವರುದ್ರ ಕಲ್ಲೋಳಿಕರ ಅವರ 'ಹೊಲಗೇರಿಯ ರಾಜಕುಮಾರ' ಕಾದಂಬರಿಯ ಮಾದೇವನ ಸಂದರ್ಭದಲ್ಲಿ ನಾವು ಆರ್ಥಿಕ ಮತ್ತು ಸಾಂಸ್ಕೃತಿಕ ಕಾರಣಗಳನ್ನು ಕಂಡುಕೊಳ್ಳುತ್ತೇವೆ. ತನ್ನ ಹಳೆಯ ನೆಲೆ (ನಗರ ಹಾಗೂ ಹೊಲಗೇರಿಯ ಸಂಸ್ಕೃತಿ) ನಿರಾಕರಿಸಿ ಹೊಸ ನೆಲೆ (ಗ್ರಾಮ ಹಾಗೂ ಕ್ಷತ್ರಿಯ ರಾಜಮನೆತನದ ಸಂಸ್ಕೃತಿ) ಹುಡುಕುತ್ತ ಹೋದ ಮಾದೇವ ಹೊಸ ನೆಲೆಯ ಕುರಿತು ಭ್ರಮಾತ್ಮಕ ಅಭಿಮಾನ ಬೆಳೆಸಿಕೊಳ್ಳುತ್ತಾನೆ. ಆದರೆ ವಾಸ್ತವಿಕ ಸ್ಥಿತಿ ವಿಭಿನ್ನವಾಗಿದ್ದು ಸಂದರ್ಭಗಳು ಅವನಿಗೆ ಭ್ರಮನಿರಸನವನ್ನು ಉಂಟು ಮಾಡುತ್ತವೆ. ಮೊದಲನೇ ಹಂತದಲ್ಲಿ ಹೊಸ ನೆಲೆ ಮತ್ತು ಹೊಸ ಸಂಸ್ಕೃತಿಗಳು ಮಾದೇವನನ್ನು ನಿರಾಕರಿಸುತ್ತವೆ. ಮರುಮದುವೆಗೆ ಕನ್ಯಾ ನೋಡು ಎಂದ ಸಂದರ್ಭದಲ್ಲಿ, ಮರಾಠಾ ಗಲ್ಲಿಯಲ್ಲಿ ಮನೆ ಬಾಡಿಗೆಗೆ ಕೇಳುವ ಸಂದರ್ಭದಲ್ಲಿ, ಬಸ್ಸಿನಲ್ಲಿ ತನ್ನ ಹೊಸ ಸಂಸ್ಕೃತಿಯ ಕುರಿತು ಅಭಿಮಾನ ಪ್ರದರ್ಶಿಸಿದ ವೇಳೆಯಲ್ಲಿ ಹೊಸ ಸಂಸ್ಕೃತಿಯ ಬಂಧುಗಳು ಇವನನ್ನು ಹಳೆಯ ನೆಲೆಯಲ್ಲಿಯೇ ಗುರುತಿಸಿ ತಿರಸ್ಕರಿಸುವುದು ಕಂಡುಬರುತ್ತದೆ. ತಾನು ಇತ್ತ ದಲಿತ ಸಮುದಾಯಕ್ಕೂ ಸೇರದ, ಅತ್ತ ಸವರ್ಣೀಯರ ಸಮಾಜಕ್ಕೂ ಸೇರದ ಅತಂತ್ರ (ತ್ರಿಶಂಕು ಸ್ಥಿತಿ) ಭಾವ ಅವನಲ್ಲಿ ಸ್ಫುರಿಸುತ್ತದೆ. ಬದಲಾದ ಕಾಲಮಾನದಲ್ಲಿ ಕುರುಂದವಾಡದ ರಾಜವಂಶ ಮತ್ತು ಅರಮನೆಗಳ ಆರ್ಥಿಕಸ್ಥಿತಿಯಲ್ಲಿ ಬದಲಾವಣೆಗಳಾಗಿದ್ದು, ಆರ್ಥಿಕವಾಗಿ ಹೊಸನೆಲೆಯಲ್ಲಿ ತನಗೆ ಬದುಕಿಲ್ಲ ಎಂಬ ಅರಿವು ಮಾದೇವನನ್ನು ಅಧೀರನನ್ನಾಗಿಸಿದೆ. ಈ ಅಧೀರತೆ ಅವನನ್ನು ಸುರಕ್ಷತೆಯ ನೆಲೆಯತ್ತ ಸೆಳೆದಿದೆ ಎಂದು ತೀರ್ಮಾನಿಸಬಹುದು.

ಮಾದೇವ ತನ್ನ ಜಾತಿ ಅಲ್ಲ, ಬಂಧು-ಬಳಗವೂ ಅಲ್ಲ ಎಂದು ತಿಳಿದೂ ಇಡೀ ಹೊಲಗೇರಿ ಆತನಿಗೆ ಆಶ್ರಯ ನೀಡಿ, ರಕ್ಷಿಸಿ, ಪ್ರೀತಿಸಿ ಹೊಸಬದುಕನ್ನು ನೀಡಿದೆ. ಇಂಥ ಅವ್ಯಾಜ್ಯ ಪ್ರೀತಿಗೆ ಸರಿಸಮಾನವಾದುದು ಅವನಿಗೆ ತನ್ನ ಸೋದರತ್ತೆಯ ಬಳಿಯೂ ದೊರೆಯುವುದಿಲ್ಲ. ತನ್ನ ಅಣ್ಣನ ಸ್ವಂತ ಮಗ ಎಂದು ಮನವರಿಕೆ ಆದ ಮೇಲೂ ಆಕೆ ಅವನಿಗೆ ಆಶ್ರಯದ ಒಂದು ಮಾತನ್ನೂ ಆಡುವುದಿಲ್ಲ. ತಂದೆತಾಯಿಗಳ ಫೋಟೋ ಒಂದನ್ನಿತ್ತು ಬೀಳ್ಕೊಡುತ್ತಾಳೆ. ತನ್ನ ಸ್ವಂತ ಮಕ್ಕಳು (ಮೇಲ್ಜಾತಿ ಸಂತಾನಗಳು) ತನ್ನನ್ನು ನಿರ್ಲಕ್ಷಿಸಿ ಹೋಗಿರುವಾಗ, ಕಾಣದ ತಂದೆತಾಯಿಯರ ಕುರಿತು ಮಹಾದೇವನಿಗಿರುವ ಕಳಕಳಿ ಕಂಡು ಅಚ್ಚರಿಪಡುತ್ತಾಳೆ. "ಮೇಲ್ಜಾತಿ ಸಂಸ್ಕಾರಕ್ಕಿಂತ ಕೆಳವರ್ಗದ ಸಂಸ್ಕಾರ ವಿಭಿನ್ನವೇ?" ಎಂದು ಪ್ರಶ್ನಿಸಿಕೊಳ್ಳುತ್ತಾಳೆ. ಹೀಗೆ ಶಿಷ್ಟ ಮತ್ತು ಪರಿಶಿಷ್ಟ ಸಂಸ್ಕೃತಿಗಳ ಮುಖಾಮುಖಿ ಮೂಲಕ ದಲಿತ, ಕೆಳವರ್ಗಗಳ ಸಂಸ್ಕೃತಿಯ ಉದಾತ್ತ ಮೌಲ್ಯ, ಪ್ರೀತಿ, ಬಂಧುತ್ವವನ್ನು ಕಾದಂಬರಿ ಎತ್ತಿ ಹಿಡಿಯುತ್ತದೆ. ಇದನ್ನು ಪ್ರತಿಸಂಸ್ಕೃತಿಯ ನಿರ್ಮಾಣ ಎಂದು ಕರೆಯಬಹುದು. ಈ ಸಾಂಸ್ಕೃತಿಕ ಭಿನ್ನತೆ ಮಾದೇವನ ಅರಿವಿಗೆ ಬರುತ್ತದೆ. "ನಿನ್ನ ಮೂಲ ಈ ಹೊಲಗೇರಿಯೊಳಗ ಐತಿ. ಆದ್ರ ನಿನ್ನ ಜಾತಿ ಬೇರು ನೀ ಕುರುಂದವಾಡದೊಳಗ ಹುಡಿಕ್ಯಾಡಾಕ ಹೊಂಟಿ ಹೋಗು"[5] ಎಂಬ ಖಂಡೋಬನ ಮಾತು ನೆನಪಿಗೆ ಬರುತ್ತದೆ. ತನ್ನ ಅರಮನೆಯ ತಂದೆ, ತಾಯಿಯರ ಮುಖಗಳನ್ನು ಫೋಟೋದಲ್ಲಿ ನೋಡಿ ನೆನಪಿಸಿಕೊಂಡಾಗೆಲ್ಲ ಹೊಲಗೇರಿಯ ಹೀರಾಬಾಯಿ, ಜಾನುಬಾ ಅವರ ಮುಖಗಳು ಕಣ್ಣುಮುಂದೆ ಕಟ್ಟಿ ಕ್ಷೇಮಭಾವವನ್ನು ಸ್ಫುರಿಸಿದಂತಾಯ್ತು (ಪುಟ ೧೫೧). ಖಂಡೋಬಾನ ಮಾತಿನಂತೆ ತನಗೆ ಜೀವನ ಪ್ರೀತಿ ಕೊಟ್ಟ, ಬದುಕಿನ ಭದ್ರತೆ ನೀಡಿದ ಮೊದಲಿನ ಹೊಲಗೇರಿಯ ಬಂಧುಗಳು, ಅವರ ನಿರ್ಮಲ ಪ್ರೀತಿ ಮಾದೇವನಿಗೆ ಮತ್ತೆ ಪ್ರಿಯವಾಗಿ ತೋರುವುದು ಶ್ರಮಸಂಸ್ಕೃತಿಯ ವಿಜಯವಾಗಿದೆ. ಹೊಸ

ಸಂಸ್ಕೃತಿಯನ್ನು ನಂಬಿ ಬಂದವನು ಆ ಸಂಸ್ಕೃತಿಯ ದ್ಯೋತಕವಾಗಿ ತೋರಿದ ಗ್ರಾಮ, ಅರಮನೆ, ಅದರ ಬಿರುಕುಬಿಟ್ಟ ಗೋಡೆ, ಗೋಡೆಯಲ್ಲಿ ನಾಟಿ ಗೇಣುದ್ದ ಬೇರುಬಿಡಲು ಹೆಣಗುತ್ತಿರುವ ಆಲ ಮತ್ತು ಅರಳಿ ಮರದಂತೆ ಅತಂತ್ರನಾದ ಭಾವನೆ ಮಾದೇವನನ್ನು ಕಾಡುತ್ತದೆ. ಅವನು ತ್ರಿಶಂಕು ಸ್ಥಿತಿಯಲ್ಲಿ ದ್ವಂದ್ವಾತ್ಮಕತೆ ಅನುಭವಿಸಿ ಕೊನೆಗೆ ದಲಿತ ಸಂಸ್ಕೃತಿಯ ಉದಾತ್ತತೆಯ ಅರಿವಿನಿಂದ ತಾನು ಬೆಳೆದ ಪರಿಸರಕ್ಕೆ (ನಗರ) ಮರಳಿ ಬರುತ್ತಾನೆ.

ಮೇಲಿನ ಮೂರೂ ಸಂದರ್ಭಗಳಲ್ಲಿ ವ್ಯಕ್ತಿಗಳ ಮೂಲ ನೆಲೆಯ ಆಕರ್ಷಣೆಯ ಸಾಧ್ಯತೆಗಳು ಅವರ ಪಲಾಯನ, ಪಟ್ಟ ಪಶ್ಚಾತ್ತಾಪಗಳನ್ನು ಬಹುವಾಗಿ ಅವಲಂಬಿಸಿರುವುದನ್ನು ಕಾಣುತ್ತೇವೆ. ಕಂಡ ಕನಸು, ಹಸಿವು, ಕಾವು, ಸಾಂಸ್ಕೃತಿಕ ವಿನಾಶ, ಭ್ರಮನಿರಸನ ಇತ್ಯಾದಿಗಳು ಕೇವಲ ಸಂಕೇತ(ಸಬೂಬು)ಗಳಾಗಿದ್ದು ಮೂಲನೆಲೆ ಮಾತ್ರ (ಸಂಸಾರ, ಮಕ್ಕಳು, ಬಂಧುಗಳು, ಸಂಸ್ಕೃತಿ ಸಂಬಂಧಗಳು) ಆಕರ್ಷಣೆಯ ಕೇಂದ್ರಬಿಂದುವಾಗಿದೆ.

### ಬ. ಕೌಟುಂಬಿಕ ಸಂರಕ್ಷಣೆ ಮತ್ತು ಸಾಧ್ಯತೆಗಳು

ಗ್ರಾಮ/ನಗರದಲ್ಲಿರುವ ಒಂದು ಮನೆ ಕೇವಲ ಮನೆಯಾಗಿ ಮಾತ್ರ ಉಳಿಯುವುದಿಲ್ಲ. ಅದು ಕೌಟುಂಬಿಕ ಸಂಬಂಧಗಳ ಮೂಲ ನೆಲೆ. ಸಾಂಸ್ಕೃತಿಕ, ಸಾಮಾಜಿಕ ಸಂಬಂಧಗಳು ಬೇರುಬಿಟ್ಟ ಫಲವತ್ತಾದ ನೆಲ. ವಯಸ್ಸಾದ ತಂದೆ, ತಾಯಿಯರಿಗೆ ಬಾಳಿನ ಆಸರೆ. ಗಂಡು ಮಕ್ಕಳು, ಸೊಸೆಯರಿಗೆ ಸಂಸಾರದ ಆಧಾರ. ಮದುವೆ ಮಾಡಿಕೊಟ್ಟ ಹೆಣ್ಣು ಮಕ್ಕಳಿಗೆ ತವರು. ಈ ಮನೆಯಿಂದ ಇಡೀ ಕುಟುಂಬಕ್ಕೆ ಸಮಾಜದಲ್ಲಿ ಒಂದು ಅಂತಸ್ತು, ಸ್ಥಾನ ಇದೆ ಎನ್ನಬಹುದು. ಇಂಥ ಮನೆ ಭೌತಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಕುಸಿದಾಗ ಅದನ್ನು ಸುಸ್ಥಿತಿಗೆ ತರಲು ಹೊಸನೆಲೆಯಿಂದ ಮೂಲನೆಲೆಗೆ ಮರಳಿ ಬರುವ ಕುಟುಂಬದ ಸದಸ್ಯರನ್ನು ಅಥವಾ ಇಡೀ ಕುಟುಂಬವನ್ನು ಕಥನ ಸಾಹಿತ್ಯದಲ್ಲಿ ಕಾಣುತ್ತೇವೆ.

ರಾಘವೇಂದ್ರ ಪಾಟೀಲ ಅವರ 'ಮಾಯಿಯ ಮುಖಗಳು' ನೀಳ್ಗತೆಯ ಕಲ್ಲೋಪಂತ, ಕೃಷ್ಣಾಬಾಯಿಯರ ಕುಟುಂಬ ನಗರ ಬದುಕಿನಲ್ಲಿ ಇಬ್ಬರು (ಗಂಗ, ನರ್ಮದ) ಮಕ್ಕಳನ್ನು ಕಳೆದುಕೊಳ್ಳುತ್ತದೆ. ಗೊರವರ ಮಾಸ್ತರು, ಗಂಗೂಬಾಯಿಯವರಿಂದ ಸಂಗೀತ ಕಲಿತ ಮಕ್ಕಳು ಉತ್ತಮ ಹಾಡುಗಾರಿಕೆಯನ್ನು ಪಡೆಯುತ್ತಾರೆ. ನಗರದ ಈ ಧನಾತ್ಮಕ ಗುಣ(ಶಿಕ್ಷಣ ಸೌಲಭ್ಯ)ದೊಂದಿಗೆ ಮಕ್ಕಳ ಸಾಮಾಜಿಕ ಸ್ವೇಚ್ಛಾಚಾರ (ಇದು ಸ್ವಾತಂತ್ರ್ಯದ ಬಯಕೆಯೂ ಹೌದು) ಗುಣ/ನಡತೆಯನ್ನು ಸಂಪ್ರದಾಯಸ್ಥ ಕುಟುಂಬ ಗುರುತಿಸುವಲ್ಲಿ ಸೋಲುತ್ತದೆ. ಹಿರಿಯ ಮಗಳು ಗಂಗ, ಗುರುಗಳಾದ ಗಂಗೂಬಾಯಿಯವರ ಜೊತೆ ಉತ್ತರ ಭಾರತದ ಪ್ರವಾಸದಲ್ಲಿದ್ದಾಗ, ಮೌಂಟ್ ಅಬೂದಲ್ಲಿರುವ ಪ್ರಜಾಪಿತ ಬ್ರಹ್ಮಕುಮಾರಿ ಸಮಾಜದಿಂದ ಆಕರ್ಷಿತಳಾಗಿ ಅಲ್ಲಿಗೆ ಹೊರಟು ಹೋಗುತ್ತಾಳೆ. ಡ್ಯಾನ್ಸ್ ಕಲಿಯುತ್ತಿದ್ದ ಕಿರಿಯ ಮಗಳು ನರ್ಮದ ಡ್ಯಾನ್ಸ್ ಕಲಿಸುತ್ತಿದ್ದ ಮಾಸ್ತರರಿಗೆ ಒಲಿದು ಅವರೊಂದಿಗೆ ತೆರಳುತ್ತಾಳೆ. ಇಬ್ಬರು ಮಕ್ಕಳ ನಿರ್ಗಮನವನ್ನು ಈ ಕುಟುಂಬ ತಮ್ಮ ಮೇಲೆರಗಿದ ಆಘಾತ ಎಂದು ತಿಳಿದುಕೊಳ್ಳುತ್ತದೆ. ಮಕ್ಕಳ ಸಂಗೀತ ಶಿಕ್ಷಣಕ್ಕೆ ಮತ್ತು ಅವರ ಮದುವೆ ಸರಳವಾಗಿ ನೆರವೇರಲು ಗ್ರಾಮ ನಿರಾಕರಿಸಿದ್ದ ಕುಟುಂಬದ ಉದ್ದೇಶಗಳು ಸಫಲವಾಗುವುದಿಲ್ಲ. ಕಲ್ಲೋಪಂತರು ಅರೆಮರುಳನಂತಾಗುತ್ತಾರೆ.

> 'ಆಕಿಗೆ ಇದ್ದ ಕೆಲಸ ಅಂದರ ಎರಡ ಎರಡು. ಗಂಡನ್ನ ಸಲಹೂದು ಮತ್ತ ಇದ್ದ ಒಂದು ಮಗಳೂ ಕಳದ ಹೋಗದಂಗ ಕಣ್ಣೊಳಗ ಇಟಗೊಂಡು ಕಾಯದು." 'ತುಂಗಾನ ಮದಿವಿ ಆದಮ್ಯಾಲ ಕೃಷ್ಣಾಬಾಯಿ ಕಳ್ಳೀಗುದ್ದಿಯೊಳಗ ಉಳದಷ್ಟು ಜಮೀನನ್ನ ಉಳಿಸಿಕೋಬೇಕಂತ ಗಂಡನ್ನ ಹೊಂಡಿಸಿಕೊಂಡು ಅಲ್ಲಿಗೆ ಹೋಗಿ ಮನಿ ಹೂಡಿದಳು.'

ಕೃಷ್ಣಾಬಾಯಿ ಒಬ್ಬ ಕೌಟುಂಬಿಕ ಜವಾಬ್ದಾರಿ ಇರುವ ತಾಯಿ/ಮಹಿಳೆಯಾಗಿ ತನ್ನ ಮೂಲ ಬೇರಿನತ್ತ ಹೊರಳುವುದನ್ನು ಕಥನ ಧ್ವನಿಸುತ್ತದೆ. ಈ ನಡುವೆ ತುಂಗ ಸೈನ್ಸ್ ಪದವಿ ಪಡೆದಾಗ, ತಕ್ಷಣ ಜಾಗೃತಳಾದ ಕೃಷ್ಣಾಬಾಯಿ ಗಂಡನ್ನು ಹುಡುಕಿ ಮದುವೆ ಮಾಡುತ್ತಾಳೆ. ಕುಟುಂಬವು ಹೊಸ ನೆಲೆಯಲ್ಲಿ ವಿಘಟನೆಯಂಥ ಆಘಾತಕ್ಕೆ ಒಳಗಾದಾಗ, ಹಿರಿಯ ಸದಸ್ಯರಿಗೆ ತಮ್ಮ ಮೂಲ ನೆಲೆಯ ನೆನಪಾಗುವುದು ಅವರ ಕೌಟುಂಬಿಕ ಬದುಕಿನ ದ್ವಂದ್ವವಾಗಿದೆ. ಅವರು ಅಂತಿಮವಾಗಿ ಆಯ್ಕೆ ಮಾಡಿಕೊಳ್ಳುವುದು ತಮ್ಮ ಕುಟುಂಬದ ಸುರಕ್ಷತೆ

ಎಂಬುದು ಸ್ಪಷ್ಟವಾಗಿದೆ. ಉಳಿದಷ್ಟು ಜಮೀನನ್ನು ಉಳಿಸಿಕೊಳ್ಳುವುದು, ಅಂದರೆ ಕಾನೂನಿನ ವಿರುದ್ಧ ಹೋರಾಟಕ್ಕೆ ಸಿದ್ಧವಾಗುವುದು ಎಂಬರ್ಥವನ್ನೂ ಸೂಚಿಸುತ್ತದೆ. ಈ ಎರಡೂ ಕಾರ್ಯಗಳು ಕೃಷ್ಣಾಬಾಯಿಗೆ ಕೌಟುಂಬಿಕ ನೆಲೆಯಲ್ಲಿ ತನ್ನ ಸಂಸಾರ ರಕ್ಷಣೆಯ ಕಾರ್ಯಗಳಾಗಿವೆ.

ರಮಾನಂದ ಅಮೀನ ಅವರ 'ಗದ್ದೆಯ ಸೆರಗು' ಕಾದಂಬರಿಯ ಮಧ್ಯಮ ವರ್ಗದ ಯುವಕ (ವೇಣುಗೋಪಾಲ) ಮುಂಬಯಿಯ ಅಣ್ಣನ ಮನೆಯಲ್ಲಿ ನೆಲೆಸಿ ಕೆಲಸ ಹಿಡಿದು, ಕಮರ್ಶಿಯಲ್ ಕಾಲೇಜುಗಳಲ್ಲಿ ಓದಿ ಪದವೀಧರನಾದಾಗ ಅವನ ಮುಂದೆ ಎರಡು ಆಯ್ಕೆಗಳಿವೆ. ಮೊದಲನೆಯದು ಅಣ್ಣ ಚಿದಂಬರನಂತೆ ಮುಂಬಯಿಯಲ್ಲಿಯೇ ಸಂಸಾರ ಹೂಡುವುದಾದರೆ, ಎರಡನೆಯದು ಗ್ರಾಮಕ್ಕೆ ಮರಳಿ ಆರ್ಥಿಕ ಶಿಥಿಲತೆ ಕಂಡ ಕುಟುಂಬವನ್ನು ಬಲಪಡಿಸುವುದು. ವೈಯಕ್ತಿಕ ಸ್ವಾರ್ಥವೆ ಅಥವಾ ಗ್ರಾಮ ವಾಸಿಗಳಾದ ಅಪ್ಪ, ಅಮ್ಮ, ಅಕ್ಕ, ತಂಗಿಯರಿಗೆ ಆಸರೆಯಾಗುವ ಕೌಟುಂಬಿಕ ಹೊಣೆಯೆ ಎಂಬ ದ್ವಂದ್ವ ವೇಣುಗೋಪಾಲನನ್ನು ಕಾಡುತ್ತದೆ.

> 'ಮನೆ ಮುರಿದು ಬಿದ್ದಿದೆ. ಹಿರಿಯರ ಹೆಸರು ಕಣ್ಮರೆಯಾಗಿದೆ. ಆದರೆ ಅಂಗಳದಲ್ಲಿ ತುಳಸಿ ಕಟ್ಟೆ ಈಗಲೂ ಇದೆ. ಸದ್ಯ ಅದಕ್ಕಿಂತ ದೊಡ್ಡ ದೇಗುಲ ನಮಗೆ ಬೇರೊಂದಿಲ್ಲ. ಅಕ್ಕಂದಿರನ್ನು ತವರು ಮನೆಯ ಆಶ್ರಯವಿಲ್ಲ ಎಂಬ ಅಪವಾದದಿಂದ ಬಿಡುಗಡೆ ಮಾಡುವುದು ನನ್ನ ಧರ್ಮ. ಅಲ್ಲದೆ ನನ್ನ ಅತ್ತಿಗೆ ಮನೆ ಇಲ್ಲದ್ದಕ್ಕಾಗಿ ಮುಂಬಯಿಯಿಂದ ಇಲ್ಲಿಗೆ ಬರಲಾಗುತ್ತಿಲ್ಲ.'

ಎಂಬ ಅವನ ಮಾತುಗಳಲ್ಲಿ ಕೌಟುಂಬಿಕ ಪ್ರೀತಿ, ಕಳಕಳಿ ಎದ್ದು ಕಾಣುತ್ತವೆ. ಅತ್ತಿಗೆಯ ತಂಗಿ(ನಗರದ ಕನ್ಯೆ)ಯನ್ನು ಮದುವೆಯಾಗಲು ಅವನು ಒಪ್ಪುವುದಿಲ್ಲ. ಹೆಣ್ಣು, ಶೃಂಗಾರ, ಆಧುನಿಕ ಸೌಲಭ್ಯ, ನಗರದ ಶೋಕಿ ಜೀವನ ಶೈಲಿಗಳು ಇಂದಿನ ವಿದ್ಯಾವಂತ ಯುವಕರನ್ನು ಆಕರ್ಷಿಸುವುದು ಸಹಜವಾದರೂ, ವೇಣುಗೋಪಾಲ ತನ್ನ ಸರಳ, ಸಹಜ ಆಕರ್ಷಣೀಯ ಗುಣಗಳಿಂದ ನಗರ ವ್ಯವಸ್ಥೆಯನ್ನು ನಿರಾಕರಿಸುವುದನ್ನು ಅಧ್ಯಯನ ಗುರುತಿಸುತ್ತದೆ. ನಗರದ ಅಣ್ಣನ ಸಂಸಾರಕ್ಕೂ, ಹಳ್ಳಿಯ ಹಿರಿಯರ ಮನೆಗೂ ಸಾಂಸ್ಕೃತಿಕ ಸೇತುವೆಯಾಗುವ ಬಯಕೆಯಿಂದ ಮಣ್ಣುಗುಡ್ಡೆ ಗ್ರಾಮದ ಹುಡುಗಿ ಜಯಂತಿಯನ್ನು ವರಿಸಲು ಆಯ್ಕೆ ಮಾಡಿಕೊಳ್ಳುತ್ತಾನೆ. ಇಲ್ಲಿ ಚಿದಂಬರ ಮತ್ತು ವೇಣುಗೋಪಾಲ ಇವರಿಬ್ಬರು ಒಂದೇ ಕುಟುಂಬದ ಮಕ್ಕಳಾದರೂ ಅವರ ಸ್ವಭಾವಗಳಲ್ಲಿ ವ್ಯತ್ಯಾಸವನ್ನು ಕಾಣುತ್ತೇವೆ. ಅಪ್ಪನ ಆರ್ಥಿಕ ಸ್ಥಿತಿ ಉತ್ತಮವಾಗಿದ್ದಾಗ ಗ್ರಾಮ ನಿರಾಕರಿಸಿ ನಗರ ಸೇರಿ ವಿದ್ಯಾವಂತನಾಗಿ ನಗರದಲ್ಲಿಯೇ ಸ್ವತಂತ್ರನಾದ ಚಿದಂಬರ ತಂಗಿಯರ ಮದುವೆ, ಮನೆಯ ಕಷ್ಟಕ್ಕೆ ಸ್ಪಂದಿಸುವುದಿಲ್ಲ. ಕುಟುಂಬ ಆರ್ಥಿಕ ಸಂಕಷ್ಟದಲ್ಲಿದ್ದಾಗ ಗ್ರಾಮ ನಿರಾಕರಿಸಿ ನಗರಕ್ಕೆ ಬಂದ ವೇಣುಗೋಪಾಲ ಮೂಲನೆಲೆಯ ಕೌಟುಂಬಿಕ ಸಮಸ್ಯೆಗಳಿಗೆ ಸ್ಪಂದಿಸಿ ಮರಳುತ್ತಾನೆ. ಇಲ್ಲಿ ಮೂಲನೆಲೆಯ ಪರಿಸರದ ವಿರುದ್ಧ ಹೋರಾಡಿ ಗೆಲ್ಲಬೇಕೆಂಬ ಛಲ ಎರಡನೆಯವನಲ್ಲಿದೆ. ಇದು ಕಷ್ಟ, ಹಸಿವು, ಬಡತನ, ಶೋಷಣೆಯನ್ನು ಅನುಭವಿಸಿದ ವ್ಯಕ್ತಿತ್ವವೊಂದು ನಗರದಲ್ಲಿದ್ದರೂ ತನ್ನವರ ಕಷ್ಟಕ್ಕಾಗಿ ಸ್ಪಂದಿಸುವ ಉದಾತ್ತ ಗುಣವಾಗಿದೆ.

ಇಂತಹ ಕಳಕಳಿಯನ್ನು ನಾ. ಡಿಸೋಜ ಅವರ 'ಮಂಜಿನ ಕಾನು' ಕಾದಂಬರಿಯ ಕೊಲ್ಲನಲ್ಲಿಯೂ ಕಾಣುತ್ತೇವೆ. ಗುಲಾಮಗಿರಿಯ ಬೇಡಿ ಕಿತ್ತುಕೊಂಡು, ಊಳಿಗಮಾನ್ಯ ವ್ಯವಸ್ಥೆಯ ಜೀತಗಾರಿಕೆ ನಿರಾಕರಿಸಿ ಗಿಳಿಗಾರು ಗ್ರಾಮ ಬಿಡುವಾಗಲೇ ಕೊಲ್ಲ ಹನುಮನಿಗೆ ಹೇಳಿದ ಮಾತುಗಳು ಇಂತಿವೆ.

> 'ನಾನೀಗ ಹಳ್ಳಿ ಬಿಡೋದೆ ಸೈ ಹನುಮ. ಅಂದ್ರೆ ಯಾವತ್ತಿಗೂ ನಾ ಹಳ್ಳಿಗೆ ಬರಲ್ಲ ಅಂತಿಲ್ಲ. ಕೈಯಾಗೆ ಎರಡು ಕಾಸು ಮಾಡಿಕೊಂಡು ಬರ್‍ತೀನಿ. ಹೆಗ್ಗೆಗೆ ಉತ್ತರ ಕೊಡ್ಬೇಕು, ಇವತ್ತಲ್ಲ–ನಾಳೆ. ಅಲ್ಲೀ ತನಕ ನೀನೇ ನನ್ನ ಹೊಲ ಮಾಡ್ತಿರು.'

ಗ್ರಾಮ ನಿರಾಕರಣೆಯೊಂದಿಗೆ, ಜೀತ ನಿರಾಕರಣೆ ಮಾಡಿ ಸ್ವತಂತ್ರಗೊಂಡ ಕೊಲ್ಲ ಮೇಲ್ಜಾತಿ ಹಿತಾಸಕ್ತಿ ಮನಸ್ಸುಗಳಿಗೆ ಸವಾಲು ಹಾಕಿ ನಗರದಲ್ಲಿ ದುಡಿದು ಆರ್ಥಿಕಬಲ ಗಳಿಸಿ, ಮಗ ಹಾಲಪ್ಪನನ್ನು ಓದಿಸಿ ವಿದ್ಯಾವಂತನನ್ನಾಗಿ ಮಾಡಿ ಗ್ರಾಮಕ್ಕೆ ಕರೆತರುತ್ತಾನೆ. ಕೃಷಿ, ಭೂಮಿ ಒಡೆತನ ಮೇಲ್ಜಾತಿಯ ಹಕ್ಕು ಎಂಬ ಸಂಪ್ರದಾಯವಾದಿಗಳಿಗೆ ಎದುರಾಗಿ ಭೂಮಿಯನ್ನು ಉತ್ತಿಬಿತ್ತಿ ಬೆಳೆ ತೆಗೆಯುವ ಛಲ ಈ ದಲಿತನ ಮೈಮನಗಳಲ್ಲಿರುವುದು ಸ್ಪಷ್ಟವಿದೆ. ಹಾಲಪ್ಪ ನೇರವಾಗಿ ಕೃಷ್ಣಯ್ಯ ಹೆಗಡೆ ಮನೆಗೆ ಹೋಗಿ

ಅವನು ತನ್ನ ತಂದೆಗೆ ಹಿಂದೆ ಮಾಡಿದ ಅನ್ಯಾಯವನ್ನು ಪರೋಕ್ಷವಾಗಿ ಎತ್ತಿ ಹೇಳಿ, ಮುಂದೆ ಸ್ವತಂತ್ರವಾಗಿ ಜಮೀನು ಮಾಡುವುದಾಗಿಯೂ, ಅದನ್ನು ನಿಲ್ಲಿಸುವುದು ಯಾರಿಂದಲೂ ಸಾಧ್ಯವಿಲ್ಲೆಂದು (ಇದೊಂದು ಅರ್ಥದಲ್ಲಿ ಆರ್ಥಿಕ, ಸಾಮಾಜಿಕ ಸವಾಲು) ಹೇಳಿ ಬರುತ್ತಾನೆ. ನಗರ ಪರಿಸರ, ಅಲ್ಲಿಯ ಶಿಕ್ಷಣ ಕೊಲ್ಲ, ಹಾಲಪ್ಪರನ್ನು ಊಳಿಗಮಾನ್ಯ ವ್ಯವಸ್ಥೆಯ ಸಮಾಜವನ್ನು ಎದುರಿಸಿ ನಿಲ್ಲುವಂತೆ ಸಿದ್ಧ ಮಾಡಿದೆ. ಆರ್ಥಿಕ ಅನುಕೂಲವಿದ್ದ ಕೃಷ್ಣೋಪಂತರ ಮಕ್ಕಳು, ಚಿದಾನಂದ ಸ್ವತಂತ್ರವಾಗಿ ನಗರದಲ್ಲಿ ಬದುಕನ್ನು ಕಟ್ಟಿಕೊಂಡರೆ, ಆರ್ಥಿಕ ದೃಢತೆಯಿಲ್ಲದ ವೇಣುಗೋಪಾಲ, ಕೊಲ್ಲ, ಹಾಲಪ್ಪರು ನಗರಮುಖಿಯಾಗಿ ಶಿಕ್ಷಣ, ಹೋರಾಟದ ಫಲದಿಂದ ಮೂಲನೆಲೆಯ ಕುಟುಂಬವನ್ನು ಕಟ್ಟಿ ಬೆಳೆಸಿದ್ದು ಕಂಡುಬರುತ್ತದೆ. ಇವೆರಡೂ ವರ್ಗದ ವ್ಯಕ್ತಿಗಳು ಪರಸ್ಪರ ವಿರೋಧಾತ್ಮಕ ಗುಣ, ಉದ್ದೇಶಗಳನ್ನು ಹೊಂದಿರುವುದು ಮಾನವನ ದ್ವಂದ್ವಾತ್ಮಕತೆ ಮತ್ತು ಸಾಹಿತ್ಯಕ ವೈಶಿಷ್ಟ್ಯತೆ ಎನ್ನಿಸಿದೆ. ನಗರವು ಮಾತ್ರ ಬಹುಮುಖಿ ವ್ಯಕ್ತಿತ್ವಗಳನ್ನು ಹುಟ್ಟುಹಾಕಿ ಬೆಳೆಸುವುದು ಕಥನದಲ್ಲಿ ಧ್ವನಿಸಿದೆ. ಈ ಮೂರು ಕುಟುಂಬಗಳು ನಗರದಿಂದ ಮೂಲ ನೆಲೆಯನ್ನು ಹುಡುಕುತ್ತ ಮರಳುವ ಸಾಧ್ಯತೆಗಳ ಹಿಂದೆ ಸಂಸಾರದ ಸಂರಕ್ಷಣೆ, ಕೌಟುಂಬಿಕ ಸಂಬಂಧಗಳ ಅನ್ಯೋನ್ಯತೆ ಕಾಪಾಡುವ, ಸಾಮಾಜಿಕ ಸಂಬಂಧಗಳನ್ನು ಉಳಿಸಿಕೊಳ್ಳುವ ಕಳಕಳಿಯಿದೆ ಎಂಬ ನಿಲುವಿಗೆ ಅಧ್ಯಯನ ಬರುತ್ತದೆ.

**ಕ. ಸಾಮಾಜಿಕ ನೆಲೆ (ಭದ್ರತೆ) ಮತ್ತು ಸಾಧ್ಯತೆಗಳು**

ಗ್ರಾಮದ ಮೂಲ ನೆಲೆ ನಿರಾಕರಿಸಿ ನಗರಕ್ಕೆ ಹೋಗಿ ಇಪ್ಪತ್ತು ವರ್ಷಕಾಲ ಒಂದು ವ್ಯವಸ್ಥೆಯಲ್ಲಿ ಬದುಕಿ, ಸಾಮಾಜಿಕ, ಆರ್ಥಿಕ ಭದ್ರತೆಯನ್ನು ಕಂಡುಕೊಂಡ ಮೇಲೆ, ಮತ್ತೆ ಗ್ರಾಮಕ್ಕೆ ಮೂಲನೆಲೆ (ಬೇರು)ಯನ್ನು ಹುಡುಕಿಕೊಂಡು ಬರುವ ಶಾಂತಿನಾಥ ದೇಸಾಯಿ ಅವರ 'ಬೀಜ' ಕಾದಂಬರಿಯ ಶ್ರೇಯಾಂಸ ಬೇರು ಪದವನ್ನೇ ಒರೆಗೆ ಹಚ್ಚಬೇಕಾದ ಪ್ರಶ್ನೆಯಾಗಿದ್ದಾನೆ. ಅಪ್ಪ ತೀರಿಕೊಂಡ ಸುದ್ದಿ ತಿಳಿದು ಕೃಷ್ಣಾಪುರಕ್ಕೆ ಬಂದ ಶ್ರೇಯಾಂಸನಿಗೆ ಅವನ ಕುಟುಂಬದ ಹಿತೈಷಿ ಕಲ್ಯಾಣಶೆಟ್ಟರು, 'ಅದೆಂಗಾಗಬೇಕು? ನೀನೂ ಸಂಬಂಧ ಕಳಕೊಂಡ ಹುಡುಗ. ಅಂದಾಂಗ, ಮುಂಬೈಕ ಹೋಗಿ ನೀ ನಿನ್ನ ಬೇರನ್ನ ಕಳಕೊಂಡಬಿಟ್ಟಿ'[1] ಎನ್ನುವ ಮಾತು ಈ ಬೇರಿನ ಪ್ರಶ್ನೆಯ ಮೂಲವನ್ನು ಕೆದಕುತ್ತದೆ. ಇಪ್ಪತ್ತು ವರ್ಷಗಳ ಕಾಲ ಮುಂಬಯಿ(ನಗರ)ಯಲ್ಲಿ ಸುರಕ್ಷಿತ ಜೀವನ ನಡೆಸಿದ ಶ್ರೇಯಾಂಸನಿಗೆ ಕೃಷ್ಣಾಪುರ (ಗ್ರಾಮ) ಆಕರ್ಷಿಸಿದ್ದು ಹೇಗೆ, ವ್ಯಕ್ತಿಯೊಬ್ಬನ ಬೇರುಗಳೆಂದರೆ ಅವನ, ಅವನ ಕೌಟುಂಬಿಕ ಸಂಬಂಧಗಳೆ, ಹಿರಿಯರು ಮಾಡಿಟ್ಟ ಪಿತ್ರಾರ್ಜಿತ ಆಸ್ತಿಯ ನಂಟೆ, ಅವನೇ ಕಟ್ಟಿಕೊಂಡ ಬಾಲ್ಯದ ಸಾಮಾಜಿಕ, ಸಾಂಸ್ಕೃತಿಕ ಸಂಬಂಧಗಳೆ, ಈ ಬೇರು ಪದ ಸಮಾಜದ ಎಲ್ಲ ವರ್ಗ/ವರ್ಣದ ವ್ಯಕ್ತಿಗಳಿಗೂ ಸಮಾನವಾಗಿ ಅನ್ವಯಿಸುವ ಸಾಮಾಜಿಕ ಸಂಬಂಧವಾಗಿದೆಯೆ ಎಂಬ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಆದರೆ ಈ ಸಂದರ್ಭದಲ್ಲಿ ಪೂರ್ವ ವ್ಯವಸ್ಥೆಯ ಕೌಟುಂಬಿಕ ಸಂಬಂಧಗಳು ಮಾತ್ರ ಎಂಬುದು ಗಟ್ಟಿಯಾಗಿ ನಿಲ್ಲುತ್ತದೆ. ಆಸ್ತಿ ಏನಿದ್ದರೂ ಅದಕ್ಕೆ ಪೂರಕವಾಗಿ ಬರುವ ಆರ್ಥಿಕ ಅಂಶವೆಂಬುದು ಅಧ್ಯಯನದ ದೃಷ್ಟಿಯಲ್ಲಿ ಕಾಣಿಸಿಕೊಳ್ಳುವ ಸಂಗತಿಯಾಗಿದೆ.

ಶ್ರೇಯಾಂಸ ತನ್ನ ತಂದೆಯ ಅಂತ್ಯಕ್ರಿಯೆಗೆ ಕೃಷ್ಣಾಪುರಕ್ಕೆ (ಗ್ರಾಮ) ಬಂದಾಗಲೇ ಅವನು ಕೈಗೊಳ್ಳುವ ಕಾರ್ಯಗಳು ಅವನ ಮುಂಬರುವ ನಿರ್ಧಾರದ ಮುನ್ಸೂಚನೆಗಳಾಗಿವೆ. ಮೊದಲು ಒಂದು ಬೈಕನ್ನು ಖರೀದಿಸಿದ ಶ್ರೇಯಾಂಸ ಹೆಂಡತಿಗೆ, ಬೈಕು ಗ್ರಾಮೀಣ ಪ್ರದೇಶದ ರಾಷ್ಟ್ರೀಯ ವಾಹನವೆಂದು ಕರೆದು, ಮಹಾನಗರದಲ್ಲಿ ಕಾರಿದ್ದಂತೆ, ಹಳ್ಳಿಗಳಲ್ಲಿ ದ್ವಿಚಕ್ರ ವಾಹನಗಳು ಎನ್ನುತ್ತಾನೆ. ಗ್ರಾಮೀಣ ಜನರು ಮಂದ ಚಲನಶೀಲತೆಯುಳ್ಳವರು, ಇವರಿಗೆ ಒಬ್ಬ ಬೌದ್ಧಿಕ ನೇತಾರ ಬೇಕೆನ್ನುವ ವಾದ ಅವನ ತಲೆಯನ್ನು ಪ್ರವೇಶಿಸುತ್ತದೆ. ಸಾಮಾಜಿಕ ಸೇವಾ ಕಾರ್ಯಕರ್ತನಾಗಿ ಕೆಲಸ ಆರಂಭಿಸುತ್ತಾನೆ. ಉದಾಹರಣೆಗೆ, ಶಾಲೆಯಲ್ಲಿ ಭಾಷಣ, ಆಸ್ಪತ್ರೆ ಸ್ಥಾಪನೆಯ ಕುರಿತು ಸಲಹೆ, ಆಸಕ್ತಿ, ಕಾರ್ಖಾನೆಯ ಅಭಿವೃದ್ಧಿಗಳಲ್ಲಿ ಸಲಹೆ, ಸೂಚನೆಗಳನ್ನು ಕೊಡುವುದು, ಇವೆಲ್ಲ ಕಾರ್ಯಗಳು ಅವನ ಮುಂಬರುವ ನಿರ್ಧಾರ ದೃಢಗೊಳ್ಳುವ ಸೂಚನೆಗಳಾಗಿವೆ. ಕಮ್ಯೂನಿಷ್ಟವಾದಿ ಲೋಂಡೆ ಹಣುಮಂತ ಕಟ್ಟಿದ ಸಣ್ಣ ಹಿಡುವಳಿದಾರರ ಸಂಘಕ್ಕೆ ಬೆಂಬಲ ಕೊಡುವ ಶ್ರೇಯಾಂಸ ಈ ಮೊದಲು ಮುಂಬಯಿ ಮಹಾನಗರದಲ್ಲಿ ತಾನೂ ಬಂಡವಾಳಶಾಹಿಯ ಸೇವಕನಲ್ಲವೆ ಎಂಬ ಆತ್ಮಾವಲೋಕನದಲ್ಲಿ ಕೀಳರಿಮೆಯನ್ನು ಅನುಭವಿಸುತ್ತಾನೆ.

ಹಲವು ವಿಷಯಗಳ ಕುರಿತು ಆ ಊರಿನ ಜನರ ಬಗ್ಗೆ, ಅವರ ಅಭಿಪ್ರಾಯಗಳ ಬಗ್ಗೆ ತನ್ನಲ್ಲಿ ಒಮ್ಮೆಲೆ ಒಂದು ಆಸ್ಥೆಯನ್ನು ಬೆಳೆಸಿಕೊಳ್ಳುವುದು, ಅವನ ಗ್ರಾಮ ಆಕರ್ಷಣೆಯ ಸಾಧ್ಯತೆಯ ಕುರುಹು ಆಗಿದೆ.

ಇಂತಹ ಹಲವು ಕಾರ್ಯಗಳ ಮುಖಾಂತರ ತಾನು ಕೃಷ್ಣಾಪುರದಲ್ಲಿ ನೆಲೆಸಿ ಆಸ್ತಿ, ತಾಯಿ ಮತ್ತು ಅಕ್ಕಂದಿರನ್ನು ನೋಡಿಕೊಳ್ಳುವ, ಆ ಮುಖಾಂತರ ತನ್ನ ಬಿಟ್ಟೆ ಹೋದ ಕೌಟುಂಬಿಕ, ಸಾಮಾಜಿಕ ಸಂಬಂಧವನ್ನು ಕಟ್ಟಿ ನೆಲೆಗೊಳಿಸುವ ನಿರ್ಧಾರವನ್ನು ಧೃಡವಾಗಿಸುತ್ತ ಬರುತ್ತಾನೆ. ಇದಕ್ಕೆ ಶ್ರೇಯಾಂಸನ ಮನಸ್ಸಿನ ಮೊದಲ ಪಾತಳಿಯಲ್ಲಿ ಅನೇಕ ಕಾರಣಗಳನ್ನು ಗುರುತಿಸಬಹುದು. ಮೊದಲನೆಯದಾಗಿ ಅದು ವೈಯಕ್ತಿಕವಾದ ಕಾರಣವಾಗಿದ್ದು, ತೀವ್ರತರವಲ್ಲದ್ದು. ಬಾಲ್ಯ, ಯೌವನದಲ್ಲಿ ಪ್ರೀತಿಸಿದ ರೇವತಿ, ಗಂಡ ಸತ್ತು ಕೃಷ್ಣಾಪುರದಲ್ಲಿ ನೆಲೆಸಿದ್ದು ಅವನಿಗೆ ತಿಳಿದಿದೆ. ಅವಳೊಂದಿಗೆ ಅದೇ ಊರಿನಲ್ಲಿ ವಾಸಿಸುವ ಅವನ ಮನದ ವಾಂಛೆಯ ಹಿಂದೆ, ಅವಳಿಗೆ ವಿಶ್ವಾಸಘಾತ ಮಾಡಿ ಓಡಿ ಬಂದಿದ್ದರ ಪಶ್ಚಾತ್ತಾಪವಿದೆ. ಯೌವನದಲ್ಲಿ ಈ ಪ್ರೀತಿಯನ್ನು ಗಂಭೀರವಾಗಿ ಪರಿಗಣಿಸದೆ ಶ್ರೇಯಾಂಸ, ಅವಳಿಗೆ ಬೇರೆ ಒಳ್ಳೆ ಗಂಡು ಹುಡುಕಿ ಮದುವೆ ಮಾಡು, ಎಂದು ಅವಳಣ್ಣನಿಗೆ ಪತ್ರ ಬರೆದು ಸೂಚಿಸಿ ತ್ಯಾಗ ಮನೋಭಾವವನ್ನು ಮೆರೆದಿದ್ದ. ಈಗ, ವಿಧವೆ ರೇವತಿಗೆ ಮುಂಬಯಿಯಿಂದ ಪತ್ರ ಬರೆದು ಪ್ರೀತಿಯ ತೀವ್ರತೆಯನ್ನು ತೋಡಿಕೊಳ್ಳುವುದು ಅವನ ವಿಕ್ಷಿಪ್ತ ಮನೋಭಾವವನ್ನು ತೋರಿಸುತ್ತದೆ. 'ರೇವತಿ ನನಗೆ ನೀ ಬೇಕು ಎಂದು ನಾ ಸ್ಪಷ್ಟವಾಗೇ ಹೇಳಿ ಬಿಡ್ತೀನಿ. ಅದಕ್ಕೆ ನೀನೇ ಇಲ್ಲಿ ಅಂದರೆ ಮುಂಬಯಿಯಲ್ಲಿ ಬಂದಿರಬೇಕು, ಇಲ್ಲ ನಾನೇ ಅಲ್ಲಿಗೆ ಬರಬೇಕು.' (ಪುಟ ೧೪೭) ರೇವತಿ ತನ್ನೂರಿನ ಅಭಿವೃದ್ಧಿಗೆ ಶ್ರೇಯಾಂಸನ ಅವಶ್ಯಕತೆಯಿದೆಯೆಂದು ಗುರುತಿಸಿಯೂ, ತನ್ನ ವೈಯಕ್ತಿಕ ಕಾರಣಕ್ಕಾಗಿ ಅವನು ಕೃಷ್ಣಾಪುರಕ್ಕೆ ಬರುವುದು ಬೇಡವೆನ್ನುತ್ತಾಳೆ. ಅಂತಿಮ ನಿರ್ಧಾರವನ್ನು ಅವನಿಗೇ ಬಿಡುತ್ತಾಳೆ. ರೇವತಿಯೆಡೆಗಿನ ಶ್ರೇಯಾಂಸನ ವಾಂಛೆಯನ್ನು ಅವನ ಮಗಳು ಕಲ್ಪನಾ ಸರಿಯಾಗಿ ಗುರುತಿಸುತ್ತಾಳೆ. 'ಡ್ಯಾಡಿ, ನನಗ ಕೇಳಿದರ, ನೀ ರೇವತೀನ್ನ ಹೃದಯದ ಆಳದಿಂದ ಪ್ರೀತಿಸ್ತೀಯ. ಅವಳಿಗೆ ಹೊಸ ಜೀವನ ಕೊಡಬೇಕಂತ ನೀನು ತೀವ್ರವಾಗಿ ಇಚ್ಛಿಸುತ್ತೀಯಾ' (ಪುಟ ೧೭೭). ಇದು ಹೊಸ ಜನಾಂಗದ ಗೆಲುವನ್ನು, ಅದು ಸಮಸ್ಯೆಗೆ ಅವರ್ಗೀಯವಾಗಿ ಸ್ಪಂದಿಸುವ ರೀತಿಯನ್ನು ತೋರಿಸುತ್ತದೆ. ಆದರೆ ಇಲ್ಲಿ ಇನ್ನೊಂದು ಪ್ರಶ್ನೆ ಎದುರಾಗುತ್ತದೆ. ಅದು, ರೇವತಿ ಇಲ್ಲದಾಗಲೂ ಅವನು ಕೃಷ್ಣಾಪುರದಲ್ಲಿಯೇ ಉಳಿಯುವ ತಿರ್ಮಾನವನ್ನು ಏಕೆ ಮಾಡಿದ? ಇದಕ್ಕೆ ಬಹುಶಃ ಶ್ರೇಯಾಂಸನ ಮೇಲಿನ ಹಲ್ಲೆಯ ನಂತರ ನರ್ಸಿಂಗ್ ಹೋಂನಲ್ಲಿ ರೇವತಿ, ಶ್ರೇಯಾಂಸರ ಸಂಭಾಷಣೆ, ಬದಲಾದ ರೇವತಿ ಸೃಷ್ಟಿಸಿದ ಚಿತ್ರ(Art)ಗಳ ಆಧಾರದ ಮೇಲೆ ರೇವತಿ ತೀರ್ಮಾನ ಬದಲಾಗಿರುವುದನ್ನು ವಿಮರ್ಶಕರು ಗುರುತಿಸುತ್ತಾರೆ.[7] ಇದು ಶ್ರೇಯಾಂಸನ ವಾದ ಸರಣಿಯನ್ನು ಮಾತ್ರ ಗ್ರಹಿಸಿದ ನಂತರದ ತೀರ್ಮಾನವಾದರೆ ಅವನ ಬದುಕಿನಲ್ಲಿ ಬಂದ ಇತರ ಪಾತ್ರಗಳ ವಾದಸರಣಿಯನ್ನು ನಾವು ಪರಿಗಣಿಸಬೇಕಾಗಿದೆ. ಕಾಲು ಮುರಿದು ಹೋಗುವಂತಹ ಏಟನ್ನು ತಿಂದ ನಂತರವೂ ತನ್ನ ಹಳ್ಳಿಯಲ್ಲಿಯೇ ಉಳಿಯುವ ದೃಢ ನಿರ್ಧಾರವನ್ನು ಶ್ರೇಯಾಂಸ ಕೈಗೊಳ್ಳಲು ಕಾರಣ ಇದೊಂದೇ ಆಗಿರದೆ ಅನೇಕ ಕಾರಣಗಳನ್ನು ಅಧ್ಯಯನ ಗುರುತಿಸುತ್ತದೆ, ಅವು ಅಪ್ಪನಂತೆಯ ಸಮಾಜದಲ್ಲಿ ಬದುಕುವ ಹಠ ಹಾಗೂ ತಾಯಿ, ಸಹೋದರಿಯರ ರಕ್ಷಣೆಯ ಕೌಟುಂಬಿಕ ಹೊಣೆಯಂತಹ ಕಾರಣಗಳಾಗಿರಬಹುದು.

ಆದರ್ಶದ ಬೆನ್ನು ಹತ್ತಿ ನಗರ ಸೇರಿ ಕ್ರಾಂತಿ, ಚಳುವಳಿ, ಜಾತಿವಿನಾಶ ಚಿಂತನೆ ಎನ್ನುತ್ತ ಅಧ್ಯಾಪಕ ವೃತ್ತಿಯಲ್ಲಿದ್ದ (ಅಶೋಕ ಹೆಗಡೆ ಅವರ) 'ಅಪ್ಪ' ಕತೆಯ ಮನು (ಮನೋಹರ) ಮರಳಿ ಮೂಲನೆಲೆಗೆ ಬರುವ ಸಂದರ್ಭ ಸೃಜನಕ್ರಿಯೆಯತ್ತ ಒಲಿದು ಸರಳತೆ ಅರಸುವ ಜೀವನದ ಅನ್ವೇಷಣೆಯಾಗಿದೆ. ಅಪ್ಪ ಮಗನ ಸಂಬಂಧ ಕೇವಲ ಕೌಟುಂಬಿಕ ನೆಲೆಯ ಮೇಲೆ ನಿಂತಿರದೇ ಮನುಷ್ಯತ್ವದ ಪಾತಳಿಯ ಮೇಲೆ ನಿಂತಿರುತ್ತದೆ. ತಪ್ಪು ಮಾಡಿದಾಗ ಬಯ್ದು ಶಿಕ್ಷಿಸುವ, ನೋವಾದಾಗ ಅಪ್ಪಿ ಸಂತೈಸುವ, ಸಾವನ್ನು ಕುರಿತು ಗಂಭೀರವಾಗಿ ಸ್ವಾಗತಿಸುವ, ಬಡವ, ದಲಿತರ ಕುರಿತು ನಿಜವಾದ ಕಾಳಜಿ ಹೊಂದಿದ ಅಪ್ಪ ತೀರಿಕೊಂಡ ಸುದ್ದಿ ತಿಳಿದು ಮನೋಹರ ಹಳ್ಳಿಗೆ ಬರುತ್ತಾನೆ.

> 'ಹಾಗೆ ನೋಡಿದರೆ ಅಪ್ಪ ಕೇವಲ ಅಪ್ಪನಾಗಿರಲಿಲ್ಲ. ಹಳೆಯ ಅಶ್ವತ್ಥ ಮರವಾಗಲಿಲ್ಲ. ಸ್ಪಂದನ ಕಳೆದುಕೊಂಡ ಕೊರಡಾಗಲಿಲ್ಲ. ವಯಸ್ಸಿನ ಅಂತರ ಮರೆತು ನನ್ನೊಂದಿಗೆ ಚರ್ಚಿಸುತ್ತಿದ್ದ. ಕೆಣಕುತ್ತಿದ್ದ. ಮೌನವಾಗಿ ನನ್ನ ನೋಡಿ ನಗುತ್ತಿದ್ದ. ಈವತ್ತಿಗೂ ಆ ನಗೆಗಳೆಲ್ಲಾ ಸಂಪೂರ್ಣ ಅರ್ಥ ಆಗಲಿಲ್ಲ....'[8]

ಗ್ರಾಮ ನಿರಾಕರಣೆಯ ಕಾಲಕ್ಕೆ ಅಪ್ಪನ ಸೈದ್ಧಾಂತಿಕ ನಿಲುವುಗಳನ್ನು ಅರ್ಥ ಮಾಡಿಕೊಳ್ಳದೇ, ಅವನಿಂದ ದೂರ ಹೋದ ಮಗನಾಗಿ ಮನೋಹರನಲ್ಲಿ ಇರುವ ಪಶ್ಚಾತ್ತಾಪವನ್ನು ಈ ಮಾತುಗಳು

ಹೊರಹಾಕಿವೆ. ತಂದೆಯ ಕಾಲಾನಂತರ ಮಗನಾಗಿ ಮನೋಹರನ ಮುಂದೆ ಎರಡು ಆಯ್ಕೆಗಳಿವೆ. ಒಂದನೆಯದು ಆದರ್ಶಕ್ಕಾಗಿ ಆದರ್ಶ (ನಗರದಲ್ಲಿಯೇ ಇದ್ದು ಅಧ್ಯಾಪಕ ವೃತ್ತಿ ಕೈಗೊಂಡು ಹೋರಾಟ ಮಾಡುವುದು). ಇನ್ನೊಂದು ವಾಸ್ತವ ಜಗತ್ತಿನ ಸೃಷ್ಟಿಕಾರ್ಯದಿಂದ ಆದರ್ಶದ ಮೂಲವನ್ನು (ಗ್ರಾಮಕ್ಕೆ ಬಂದು ಅಪ್ಪನ ಮಾರ್ಗದಲ್ಲಿ ಮುನ್ನಡೆಯುವುದು) ಶೋಧಿಸುವುದು. ಮನೋಹರ ಎರಡನೆಯ ದಾರಿಯನ್ನು ಆಯ್ಕೆ ಮಾಡಿಕೊಂಡು ತಂದೆಯ ಉತ್ತರಾಧಿಕಾರಿಯಾಗುತ್ತಾನೆ. ಈ ನಿರ್ಧಾರದ ಹಿಂದೆ ಪುನಃ 'ಬೀಜ' ಕಾದಂಬರಿಯ ಶ್ರೇಯಾಂಸನ ನಿರ್ಧಾರಕ್ಕೆ ಕಾರಣವಾದ ಅಂಶಗಳ ಸುಳುಹುಗಳನ್ನು ಕಾಣುತ್ತೇವೆ, ಅಥವಾ 'ಅಪ್ಪ' ಕತೆಯ ಮನೋಹರನ ತೀರ್ಮಾನ ಶ್ರೇಯಾಂಸನ ತೀರ್ಮಾನವೂ ಆಗಿರುವುದನ್ನು ನೋಡುತ್ತೇವೆ. ಯಾಂತ್ರಿಕ ಬದುಕಿನಿಂದ ಬೇಸತ್ತು ಸೃಷ್ಟಿಕಾರ್ಯದತ್ತ ಆಕರ್ಷಣೆಗೊಂಡ ಗ್ರಾಮದ ಯಾವುದೇ ಯುವಕನ ಆಯ್ಕೆಯೂ ಇದೇ ಆಗಿದೆ ಎಂಬುದನ್ನೂ ಗಮನಿಸುತ್ತೇವೆ. ನಗರ ಬದುಕಿನಲ್ಲಿ ಕ್ರಾಂತಿ ಮಾಡುವಾಗ ಮನೋಹರನಿಗೆ ಉಂಟಾದ ಭ್ರಮನಿರಸನದ ಸುಳಿವನ್ನು ಅಧ್ಯಯನ ಇಲ್ಲಿ ಗಮನಿಸುತ್ತದೆ. ರೋಸನಾಳಿಗೆ ಬರೆದ ಪತ್ರ ಇದನ್ನು ಒಪ್ಪಿಕೊಳ್ಳುತ್ತದೆ.

> 'ಹೊಸ ಮನುಷ್ಯನಾಗಬೇಕು. ಕಟ್ಟಿಕೊಂಡ ಗೋಡೆಯನ್ನು ಈ ಬಯಲಿನಂತೆ ಬಯಲು ಮಾಡಿ ಬಿಡಬೇಕು...ಇಲ್ಲಿ ನನ್ನೂರ ಮಣ್ಣಿನಲ್ಲಿ ಹೊಸ ಸೃಷ್ಟಿಯ ಬೀಜ ಬಿತ್ತುತ್ತೇನೆ. ಮೊಳಕೆಯೊಡೆದಾಗ, ಬಿಸಿಲಿಗೆ ಬಾಡಿ ಗಾಳಿಗೆ ನಗುವಾಗ ನಿನಗೆ ಪತ್ರ ಬರೆಯುತ್ತಿರುತ್ತೇನೆ..... ಬೆಂಗಳೂರಿನಲ್ಲಿ ನಿನ್ನ ನೀಳಿದೆಯ ಮೇಲೆ ಮಲಗಿದರೆ ಮಾತ್ರ ನಿದ್ರೆ ಬರುತ್ತಿತ್ತು. ಇಲ್ಲಿ ಹಾಗಲ್ಲ. ರಾತ್ರಿ ಹತ್ತರಿಂದ ಬೆಳಗ್ಗೆ ಅಮ್ಮ ಎಬ್ಬಿಸುವವರೆಗೆ ಕನಸಿಲ್ಲದ ನಿದ್ರೆ ಬರುತ್ತದೆ....ನೌಕರಿಗೂ ಇಂದೇ ರಾಜೀನಾಮೆ ಕಳಿಸುತ್ತಿದ್ದೇನೆ. ಅಪ್ಪಯ್ಯನ ಬೀಪನ್ನು ನಾಳೆ ತೊಳೆಯಬೇಕು ಹೊಲಸಾಗಿದೆ.' (ಪುಟ ೨೯)

ಇಲ್ಲಿ ಬರುವ, ಕಟ್ಟಿಕೊಂಡ ಗೋಡೆಯನ್ನು ಒಡೆಯಬೇಕು ಎಂಬ ವಾಕ್ಯ ಏನನ್ನು ಸೂಚಿಸುತ್ತದೆ? ನಗರದಲ್ಲಿ ನಾಗರಿಕನೆನಿಸಿಕೊಳ್ಳುವ ಮನುಷ್ಯರು ತಮ್ಮ ಸುತ್ತ ಕಟ್ಟಿಕೊಂಡ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ವ್ಯವಸ್ಥೆಯ ಕೃತಕ ಗೋಡೆಗಳು, ಹುಚ್ಚು ಯೌವನದಲ್ಲಿ ಸಂಸಾರ, ಪ್ರೀತಿ, ಇಂಗ್ಲೀಶ್ ಶಿಕ್ಷಣ, ಆದರ್ಶ ಎಂಬ ಆಕರ್ಷಣೆಯ ಗೋಡೆಗಳು, ನಗರದಲ್ಲಿ ಇಂದು ಮನುಷ್ಯರು ಉಣ್ಣುವ ಅನ್ನದಿಂದ ಹಿಡಿದು ಬೀಳುವ ಕನಸುಗಳವರೆಗೂ ಕಲಬೆರಕೆಯ ಬದುಕು ಕಟ್ಟಿಕೊಂಡ ವಾಸ್ತವದ ಗೋಡೆಗಳೇ ಎಂಬ ಕುರಿತು ವಿಶ್ಲೇಷಿಸಿದಾಗ, ಒಟ್ಟಾರೆ ನಗರದ ಬದುಕು ಮನುಷ್ಯರೇ ಕಟ್ಟಿಕೊಂಡ ಕೃತ್ರಿಮತೆಯಾಗಿದೆ (ಒಗ್ಗಿ/ಒಪ್ಪಿಕೊಂಡ ಸ್ವಯಂಕೃತ ಅಪರಾಧ) ಎಂಬ ಕಥನದ ನಿಲುವನ್ನು ಅಧ್ಯಯನ ಪುರಸ್ಕರಿಸುತ್ತದೆ. ನಗರ ಬದುಕಿನ ಹಿನ್ನೆಲೆಯಲ್ಲಿ ಚಿಂತಿಸಿದಾಗ ಇಂದಿನ ನಗರ ಜೀವನದ ಸವಾಲುಗಳು ಸಾವಿರಾರಿವೆ. ಮೂಲತಃ ನಿಸರ್ಗದ ಘಟಕಗಳೆನಿಸಿದ ಗಾಳಿ, ನೀರು, ಬೆಳಕು ಮತ್ತು ಮಣ್ಣು ಈ ನಾಲ್ಕೂ ಕಡಿಮೆಯಾಗಿವೆ ಮತ್ತು ಅಶುದ್ಧವಾಗಿವೆ. ಈ ಪ್ರಕ್ರಿಯೆ ನಿರಂತರ ನಡೆಯುತ್ತಲಿದೆ. ಜೊತೆಗೆ ನಾವು ಸೃಷ್ಟಿಸಿಕೊಂಡ ಸೌಕರ್ಯಗಳು, ಶೇಖರಿಸಿಟ್ಟ ಸಾಮಗ್ರಿಗಳು, ಇಂಧನಗಳು, ಒತ್ತೊತ್ತು ಕಟ್ಟಡಗಳು, ಇಕ್ಕಟ್ಟು ರಸ್ತೆಗಳು ಎಲ್ಲವೂ ಅಪಾಯಕ್ಕೆ ದಾರಿ ಮಾಡಿಕೊಡುವಂತಹುಗಳಾಗಿವೆ. ಈ ಹಿನ್ನೆಲೆಯಲ್ಲಿ ಮನೋಹರನ ಕಟ್ಟಿಕೊಂಡ ಗೋಡೆಗಳನ್ನು ಈ ಬಯಲಿನಂತೆ ಬಯಲು ಮಾಡಿಬಿಡಬೇಕು ಎಂಬ ಮಾತು ಅರ್ಥವನ್ನು ಪಡೆದುಕೊಳ್ಳುತ್ತದೆ. ಮೇಲಿನ ಎರಡೂ ಕಥನಗಳಲ್ಲಿ ಕಥಾನಾಯಕರ ಕೌಟುಂಬಿಕ ಹೊಣೆ, ಅಪ್ಪ ಬಿಟ್ಟು ಹೋದ ಸೃಷ್ಟಿಕಾರ್ಯ ಹಾಗೂ ಸಾಮಾಜಿಕ ಜವಾಬ್ದಾರಿಗಳು, ಒಂದನ್ನು ಮರೆಯಲು ಇನ್ನೊಂದರ ಅವಶ್ಯಕತೆ ಇದೆ ಎಂಬ ಅನುಭವದ ಅರಿವಿನೊಂದಿಗೆ ಮೇಳೈಸಿ ನಿರ್ಧಾರದ ರೂಪ ತಾಳಿವೆ.

ಗ್ರಾಮ/ನಗರಗಳ ಭಾವನಾತ್ಮಕ ದ್ವಂದ್ವವು ವ್ಯಕ್ತಿಗಳ ಮಾನಸಿಕ ಪರಿಧಿಯಲ್ಲಿದ್ದುಕೊಂಡು ಅಲ್ಲಿ ತೇಲುವ, ಕಾಡುವ, ಮತ್ತು ಪ್ರಭಾವಿಸುವ ಅನೇಕ ವ್ಯಕ್ತಿತ್ವಗಳನ್ನು ಪಲ್ಲಟಗೊಳಿಸುತ್ತಲೇ ಇರುತ್ತದೆ. ಈ ಜಿಜ್ಞಾಸೆ ಹುಟ್ಟುಹಾಕುವ ಭಾವನೆ, ಕ್ರಿಯೆಗಳು ಅದ್ಭುತವೆನ್ನಬಹುದು. ಮೂಲನೆಲೆ ನಿರಾಕರಿಸಿ ಮುಂಬಯಿಗೆ ಬಂದು ಮೂವತ್ತು ವರ್ಷ ನಗರ ಜೀವನದಲ್ಲಿ ಸಂಘರ್ಷ ನಡೆಸಿ, ಕೋಟ್ಯಾಂತರ ರೂಪಾಯಿಗಳ ಆಸ್ತಿ, ಸಮಾಜದಲ್ಲಿ ಒಂದು ಉನ್ನತ ಸ್ಥಾನಮಾನ ಗಳಿಸಿದ್ದ ರೇಖಾ ಕಾಖಂಡಕಿ ಅವರ 'ತ್ರಸ್ತ' ಕಾದಂಬರಿಯ ಪುರುಷೋತ್ತಮನ ಮನಸ್ಥಿತಿಯನ್ನು ಅಲ್ಲಾಡಿಸಿದ ಸಂಗತಿ ಯಾವುದು? ಊಟ, ತಿಂಡಿ, ವ್ಯಾಪಾರ, ಮೈಥುನ, ನಿದ್ದೆಗಳಲ್ಲಿ ದುತ್ತನೆ ಪ್ರತ್ಯಕ್ಷವಾಗಿ ಪ್ರಭಾವ ಬೀರುವ ವ್ಯಕ್ತಿತ್ವ ಯಾವುದು? ಸಕಲ ಸೌಲಭ್ಯ ಹೊಂದಿ ನಿರಂಬಳವಾಗಿ ಜೀವನ ನಡೆಸಿದ್ದ ಪುರುವನ್ನು ವಿಚಲಿತಗೊಳಿಸಿದ ವೃತ್ತ ಪತ್ರಿಕೆಯ

ಸುದ್ದಿ ಯಾವುದು? ಆ ಸುದ್ದಿಯ ಹಿಂದೆ ಬೆಂಬಿಡದೇ ಬಂದು ಆಕ್ರಮಿಸಿಕೊಂಡ ನೆನಪುಗಳು ತಂದು ನಿಲ್ಲಿಸುವ ವ್ಯಕ್ತಿತ್ವಗಳಾವುವು? ಎಂಬುದರ ಕುರಿತು ದ್ವಂದ್ವಾತ್ಮಕ ನೆಲೆಯಲ್ಲಿ ಚರ್ಚಿಸಬಹುದು.

> 'ಏನೂ ಮಾತಾಡಲಿಲ್ಲ ಅವನು. ಎದುರಿನ ಟೀಪಾಯ್ ಮೇಲೆ ತಾನು ತಂದು ಒಗೆದ ಆವತ್ತಿನ ಪೇಪರ್ ಕಣ್ಣಿಗೆ ಬಿತ್ತು. ಎದೆಯ ಮೇಲೆ ಸುತ್ತಿಗೆ ಪೆಟ್ಟಿನಂತೆ ಬಡೆಯುತ್ತಿವೆ ಆ ಸಾಲುಗಳು. ಕೃಷ್ಣಾ ನದಿಗೆ ಕಟ್ಟುವ ಅಣೆಕಟ್ಟು, ಆಲಮಟ್ಟಿ ಡ್ಯಾಮ್, ಘಟಪ್ರಭಾದ ಹಿನ್ನೀರಿನಿಂದ ಮುಳುಗುವ ಬಾಗಲಕೋಟೆ, ನೆಲೆಯಿಲ್ಲದೆ ಪರಿತಪಿಸುವ ಜನ. "ಒಂದು ಮಾತ್ರ ಅರ್ಥ ಮಾಡ್ಕೋಳಪಾ, ನೀನು ಬಾಳ ಓದಬೇಕು, ಶ್ಯಾಣ್ಯಾ ಆಗಬೇಕು. ಏನಪಾ ಅದಕಿಂತ ಹೆಚ್ಚು ಮನಶ್ಯಾ ಆಗಿ ಬಾಳ್ಬೇಕು"[10]

ಮಹಾ ನಗರದ, ವೃತ್ತಿ ಜೀವನದಲ್ಲಿನ ಹೋರಾಟ, ಸಂಘರ್ಷ, ಕೊಂಕು ನುಡಿಗಳು, ಲೇವಡಿ, ಸೋಲು, ವಿರೋಧಿಗಳ ಗೆಲುವು, ದರ್ಪ, ಆರ್ಥಿಕಹಾನಿ ಈ ಯಾವ ಸಂಗತಿಗಳು ಪುರುಷೋತ್ತಮನನ್ನು ಧೃತಿಗೆಡಿಸಿರಲಿಲ್ಲ. ಬದಲಿಗೆ ಘಟಪ್ರಭೆಗೆ ಕಟ್ಟಿದ ಅಣೆಕಟ್ಟಿನಲ್ಲಿ ಹುಟ್ಟೂರು ಮುಳುಗುತ್ತಿದೆ ಎಂಬ ಸುದ್ದಿ ಅವನ ಜಂಘಾಬಲವನ್ನೇ ಉಡುಗಿಸಿ, ನಿದ್ದೆಗೆಡಿಸಿ ದ್ವಂದ್ವದಲ್ಲಿ ನೂಕುತ್ತದೆ. ಹಾಗಾದರೆ ಅವನನ್ನು ತೊಳಲಾಟಕ್ಕೆ ಹಚ್ಚಿದ್ದು ಯಾವುದು? ಯಾಕಾಗಿ? ಅವರ ಸಂಬಂಧವೇ ಬೇಡವೆಂದು ಅಲ್ಲಿಯ ಬೇರನ್ನು ಕಳಚಿಕೊಂಡು ಬಂದಿರಲಿಲ್ಲವೆ? ಆದರೆ, ಕಳಚಿಕೊಂಡು ಬಂದ ಮಣ್ಣಿನಲ್ಲಿ ಇನ್ನೂ ತನ್ನ ಅಂತಃಸತ್ವ ಅಡಗಿ, ಬೇರು ಕಿತ್ತರೂ ಕಿತ್ತ ಜಾಗದಲ್ಲಿ ಉಳಿದ ಸಣ್ಣ ಗರಿಕೆಯಂತೆ ಆವನ ಸತ್ವ ಉಳಿದು, ಮತ್ತೇ ತನ್ನ ಅಸ್ತಿತ್ವವನ್ನು ಮೂಡಿಸುತ್ತಿದೆಯೆ? ಅವನಿಗೆ ಆ ನೆಲದ ಋಣ ಬೇಕಾಗಿರಲಿಲ್ಲ, ಆದರೂ–ಆದರೂ ಬೇಡವೆಂದುಕೊಂಡು ಬಂದವನಿಗೆ ಇವತ್ತು ಅದೇ ನೆಲದ ನೆನಪುಗಳು ಕೈಗೆ ಕಬ್ಬಿಣದ ಸರಪಳಿ ಹಾಕಿ ಎಳೆಯುತ್ತಿವೆಯೆ? ಇದೊಂದು ಮುಗಿಯಲಾರದ ಜಿಜ್ಞಾಸೆಯಾಗಿದೆ. ಕೇವಲ ವೃತ್ತ ಪತ್ರಿಕೆಯಲ್ಲಿ ಬಂದ ಒಂದು ತುಂಡು ಸುದ್ದಿ ಓದಿದರೆ ಅವನೇಕೆ ಇಷ್ಟು ನಿರ್ವಿಣ್ಣನಾಗುತ್ತಿದ್ದಾನೆ? ದೂರ ದೂರದ ಕರ್ನಾಟಕ, ಅಲ್ಲೊಂದು ಸಣ್ಣ ಊರು. ಅಲ್ಲೊಂದು ನದಿ ಘಟಪ್ರಭಾ, ಕತ್ತಿ ಹೊಳಿ ಎಂದು ಕೂಡ ಕರೆಯುತ್ತಾರೆ. ನದಿಯಂಚಿಗಿದ್ದ ಮನೆಗಳು, ಮನೆಗಳನ್ನು ನೆಲಸಮ ಮಾಡಿದರೆ ಅವನು  ಯಾಕಿಷ್ಟು ವಿಷಣ್ಣನಾಗಬೇಕು? ಅವನದು ಎನ್ನುವುದು ಏನಿದೆ ಅಲ್ಲಿ? ಕೇವಲ ಹದಿನಾರು ವರ್ಷ ಕಳೆದ ಬಾಲ್ಯದ ಬದುಕು ಈ ಮೂವತ್ತು ವರ್ಷ ನಗರದ ಬದುಕನ್ನು ಮಸುಕು ಮಾಡುವುದೇಕೆ? ಪುರುಷೋತ್ತಮ ತನ್ನನ್ನು ಗಾಢವಾಗಿ ಪ್ರಭಾವಿಸುತ್ತ ಕಾಡುವ ದತ್ತೂ ಮಾಸ್ತರರ ವ್ಯಕ್ತಿತ್ವಕ್ಕೆ ಸಾಮಾಜಿಕ ಭದ್ರತೆ ಒದಗಿಸಲು ನಿರ್ಧರಿಸಿ ಮೂಲನೆಲೆಯತ್ತ ಹೊರಟು ನಿಲ್ಲುತ್ತಾನೆ.

### ಡ. ಅನಿವಾರ್ಯತೆ/ಅಸಹಾಯಕತೆ ಮತ್ತು ಸಾಧ್ಯತೆಗಳು

ಹೊಸನೆಲೆಯಲ್ಲಿ ಬದುಕಿನ ಸಂಘರ್ಷಗಳು, ಸಂಕಟಗಳು ಅಸಹನೀಯವಾಗಿದ್ದರೆ ವ್ಯಕ್ತಿ ಮತ್ತು ಕುಟುಂಬಗಳು ಹೊಸನೆಲೆಯ ಬದುಕಲ್ಲಿ ಮುಂದುವರೆಯಲು ಇಷ್ಟಪಡುವುದಿಲ್ಲ. ಇಂತಹ ಸಂದರ್ಭಗಳು ವ್ಯಕ್ತಿ ಮತ್ತು ಕುಟುಂಬಗಳನ್ನು ಇನ್ನೊಂದು ನೆಲೆಗೆ ಅಥವಾ ತಮ್ಮ ಮೂಲನೆಲೆಗೆ ಮರಳುವಂತೆ ಪ್ರೇರೇಪಿಸುತ್ತವೆ. ಮೂಲನೆಲೆ ನಿರಾಕರಿಸಿದ ದಿನದಿಂದ ದ್ವಂದ್ವಾತ್ಮಕತೆಯನ್ನು ಅನುಭವಿಸುತ್ತಿರುವ ವ್ಯಕ್ತಿಗಳು ಸಹ ಮೂಲನೆಲೆಯತ್ತ ಪಲಾಯನ ಮಾಡುವುದು ಕಥನ ಸಾಹಿತ್ಯದಲ್ಲಿ ಕಂಡುಬರುತ್ತದೆ.

ಮಾಲತಿ ಪಟ್ಟಣಶೆಟ್ಟಿ ಅವರ 'ಋಣ' ಕತೆಯ ಬಾಳಣ್ಣ ಉತ್ತರ ಕರ್ನಾಟಕದ ಬರಪೀಡಿತ ಗ್ರಾಮದಿಂದ ಬಂದು ನಗರದ ಕಾರ್ಖಾನೆಯೊಂದರಲ್ಲಿ ಕಾರ್ಮಿಕನಾಗಿದ್ದಾನೆ. ನಗರಕ್ಕೆ ಬಂದಾಗಿನಿಂದ ಗ್ರಾಮ, ತಾಯಿ ಅಲ್ಲಿನ ಪರಿಸರದ ನೆನಪಿನಿಂದ ಮಾನಸಿಕ ದ್ವಂದ್ವದಲ್ಲಿ ಬಳಲುತ್ತ, ಕಥೆಯ ಹೆಸರು ಹೇಳುವ ಹಾಗೆ ತಾಯಿ, ತಾಯ್ನೆಲಗಳ ಹಂಗಿನ ಋಣ ಹೊತ್ತು ನಗರದಲ್ಲಿ ತೊಳಲಾಡುವ ವ್ಯಕ್ತಿಯಾಗಿದ್ದಾನೆ. ಕಡಿಮೆ ಸಂಬಳ, ಹೆಚ್ಚು ದುಡಿತ, ರಜೆಗಳಿಲ್ಲದ ಜೀವನ ಹೀಗೆ ನಗರದ ಬಂಡವಾಳಶಾಹಿಗಳ ಬಿಗಿ ಹಿಡಿತದಲ್ಲಿ ಸಿಕ್ಕಿಕೊಂಡವನಿಗೆ ತಾಯಿಯ ಶವಸಂಸ್ಕಾರಕ್ಕೂ ರಜೆ ದೊರಕುವುದಿಲ್ಲ. ಇನ್ನು ನಗರದ ಸ್ನೇಹಿತರು, ಅಧಿಕಾರಿಗಳು ಇವನಿಗೆ ಊರಿಗೆ ಹೋಗಲು ಬಸ್ಸಿನ ಖರ್ಚನ್ನೂ ಕೊಡುವುದಿಲ್ಲ.

'ಇದೆಂಥ ಜನ! ಇದೆಂಥ ನಗರಿ!! ನನ್ನ ನಂದನವನ ಬಿಟ್ಟು ನಾನೇಕೆ ಈ ಸುಡುಗಾಡಿಗೆ ಬಂದೆ. ಅವ್ವನ ಮಾತು ಕೇಳದ ನನ್ನ ಮೂರ್ಖತೆಯನ್ನ ನಾನೇ ಹಳಿದುಕೊಂಡೆ. ಹೇಗಾದರೂ ಹೆಣಗಿ ಈ ನಿರ್ಮಮ ವಾತಾವರಣದಿಂದ ಎಲ್ಲಿಗಾದರೂ ಓಡಿಹೋಗಬೇಕು ಎಂದು ನಿಶ್ಚಯಿಸಿದೆ.'[೧೧]

ಬಾಳ್ಯಾ(ಲೇಖಕರ)ನ ನಗರ ತಿರಸ್ಕಾರ, ಗ್ರಾಮ ವ್ಯಾಮೋಹಗಳು ಪೂರ್ವಗ್ರಹಪೀಡಿತವಾಗಿ ಕತೆಯಲ್ಲಿ ವ್ಯಕ್ತವಾಗಿವೆ. 'ನನ್ನ ನಂದನವನ (ಗ್ರಾಮ) ಹಾಗೂ ನನ್ನ ಕಣ್ಣೆದುರಿಗೆ ನನ್ನೂರ ಗಿಡ ಮರಗಳು ಕೈಚಾಚಿ ನಿಂತು ಕರೆಯುತ್ತಿದ್ದವು. ನಾನು ಓಡುತ್ತಲೇ ಇದ್ದೆ. ಕಾಳ್ಯಾ (ನಂಬಿಕೆಯ ನಾಯಿ) ನನ್ನ ಬಗಲಲ್ಲಿತ್ತು' ಎಂಬ ನಿರೂಪಣೆ, ಪಲಾಯನವನ್ನು ತಾಯಿಯ ಶವಸಂಸ್ಕಾರಕ್ಕೆ ಅನಿವಾರ್ಯತೆಯ ನೆಲೆಯಲ್ಲಿ ಬಲವಂತದ ಹೇರಿಕೆಯಾಗಿ ಚಿತ್ರಿಸಿದ ಭಾವನೆ ಬರುತ್ತದೆ. ರೋಹಿದಾಸ ನಾಯಕ ಅವರ 'ದೂರ' ಕತೆಯ ವಸಂತ ನಗರದ ಕ್ರೌರ್ಯವನ್ನು ಅನುಭವಿಸಿದ ನಂತರ ತನ್ನ ಗ್ರಾಮ, ಕೌಟುಂಬಿಕ ಸದಸ್ಯರ ಮೇಲಿನ ಪ್ರೀತಿಯನ್ನು ಅರಿತುಕೊಳ್ಳುತ್ತಾನೆ. ತಂದೆಯ ಮೂದಲಿಕೆ ಮತ್ತು ಬಡತನದಿಂದ ಬೇಸತ್ತು ನಗರ ಸೇರಿ ಎರಡೇ ದಿನಗಳಲ್ಲಿ ನಗರ ವ್ಯವಸ್ಥೆಯ ಕರಾಳ ಮುಖಗಳನ್ನು ಕಂಡು, ಎಂಜಲೆಲೆಯಲ್ಲಿ ಮಿಕ್ಕುಳಿದ ಅನ್ನ ಆರಿಸಿ ತಿಂದು, ಆ ಜೀವನದ ಬಗೆಗಿನ ಎಲ್ಲ ಆಕರ್ಷಕ ಕಲ್ಪನೆಗಳಿಗೂ ವಿದಾಯ ಹೇಳಿ ಗ್ರಾಮಕ್ಕೆ ಮರಳುವಲ್ಲಿ ಲೇಖಕರ ಗ್ರಾಮಪ್ರೀತಿಯನ್ನು ಗುರುತಿಸುತ್ತೇವೆ. 'ಅಪ್ಪ, ಅಮ್ಮ ಎಲ್ಲರೂ ಓಡಿ ಬಂದು ತನ್ನನ್ನು ಹಿಡಿದುಕೊಂಡಾಗ ಈ ಮನೆಯೇ ಸ್ವರ್ಗವೆನಿಸಿತ್ತು. ಅಪ್ಪನ ಜೊತೆ ತಾನೂ ದುಡಿಯುತ್ತೇನೆ ಎಂಬ ನಿರ್ಧಾರಕ್ಕೆ ಬಂದಿದ್ದ'[೧೨] ಎಂಬ ಬಾಲಕನ ಅನಿಸಿಕೆ ಮತ್ತು ಪಶ್ಚಾತ್ತಾಪಗಳು ನಿರೂಪಕನ ಅನಿಸಿಕೆಯಾಗಿ ಕಾಣುತ್ತವೆ. ಈ ಅಂತಿಮ ಆಯ್ಕೆಯ ಸಾಧ್ಯತೆಯ ಮೂಲ ಅನಿವಾರ್ಯತೆ ಮತ್ತು ಪಶ್ಚಾತ್ತಾಪ ಎಂಬ ನಿಲುವಿಗೆ ಅಧ್ಯಯನ ಬರುತ್ತದೆ.

ತುಳಸಿ ವೇಣುಗೋಪಾಲ ಅವರ 'ಹೊಂಚು' ಕಥೆಯ ಪಾಂಡೋಬನ ಮರಳಿ ಮೂಲನೆಲೆಗೆ ಪಲಾಯನವೂ ಸಹ ಪಶ್ಚಾತ್ತಾಪದ ನೆಲೆಯಲ್ಲಿ ಚಿತ್ರಿತವಾಗಿದೆ. ಬರ ಬಿದ್ದ ಗ್ರಾಮದಿಂದ ನಗರಕ್ಕೆ ಬಂದು ತನ್ನ(ಹೆಂಡತಿಯ ಅಣ್ಣ ಭಾವ)ವರಿಂದ ಶೋಷಣೆಗೊಳಗಾದ ಪಾಂಡು, ಅವರ ಆದೇಶದಂತೆ ಕಳ್ಳ ಮಾರಾಟ, ಜೇಲು, ಹೊಡೆತ, ರಾತ್ರಿ ಗಸ್ತು ತಿರುಗಿ ಇಲಿ ಹೊಡೆಯುವ ಕಾಯಕದಲ್ಲಿ ತನ್ನ ಬದುಕಿನ ಅಂಗವಾಗಿದ್ದ ಹೆಂಡತಿ ಸಕ್ಕೂವನ್ನು ಕಳೆದುಕೊಳ್ಳುತ್ತಾನೆ.

'ಪಾಂಡು ಎರಡು, ಮೂರು, ನಾಲ್ಕು ಎಂದು ಬಡಿಗೆಯನ್ನು ಎತ್ತಿ, ಎತ್ತಿ ಬೀಸಿದ. ಲೆಕ್ಕ ಪೂರ್ತಿಯಾದ ತೃಪ್ತಿಯಲ್ಲಿ ಹೊರಬಂದು ಗೋಣಿ, ಬಡಿಗೆ, ಟಾರ್ಚು ಕೆಳಗೆಸೆದು, ಕೊಳೆಗೇರಿ ದಾಟಿ ಮುಖ್ಯರಸ್ತೆ ಸೇರಿ ಓಡಹತ್ತಿದ. ಈ ರಸ್ತೆಯ ಆ ಕೊನೆಯಲ್ಲಿ ಬಂಜರಾಗುತ್ತಿರುವ ತನ್ನ ಮಣ್ಣಿದೆ ಎನ್ನುತ್ತಾ ವೇಗ ಹೆಚ್ಚಿಸಿಕೊಂಡ ಪಾಂಡೋಬಾ'[೧೩]

ಮೇಲಿನ ಮೂರೂ ಸಂದರ್ಭಗಳಲ್ಲಿ ತಾಯಿ ಮತ್ತು ಮಣ್ಣಿ(ತಾಯ್ನೆಲ)ನ ವ್ಯಾಮೋಹ ಪಾಂಡು, ಬಾಳ್ಯಾ ಮತ್ತು ವಸಂತರನ್ನು ಮರಳಿ ಮೂಲ ನೆಲೆಗೆ ಕರೆತರುತ್ತದೆ. ಇದರ ಜೊತೆಗೆ ನಗರ ವ್ಯವಸ್ಥೆಯ ಕ್ರೌರ್ಯಕ್ಕೆ ಸಿಕ್ಕ ಬಡ ವ್ಯಕ್ತಿ ಮತ್ತು ಕುಟುಂಬಗಳ ಅಂತಿಮ ಆಯ್ಕೆಯ ಸಾಧ್ಯತೆ ಪಲಾಯನವಾಗಿ ಲೇಖಕರ ಬಲವಂತದ ಹೇರಿಕೆ ಎಂಬಂತೆ ಕಥನದಲ್ಲಿ ಕಂಡುಬರುತ್ತದೆ. ಈ ಮೂರೂ ಕಥನಗಳ ನಿರೂಪನೆಯ ಜಾಡು ಮತ್ತು ನಾಡಿ ಮಿಡಿತಗಳು, ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ಕೇಳಿಬರುವ 'ಸೋತು ಹಳ್ಳಿಗೆ ಮರಳು' ಎಂಬ ನಾಣ್ನುಡಿಯನ್ನು ನೆನಪಿಸುತ್ತವೆ. ಈ ಹಿರಿಯ ನಿರೂಪಕರು ಕಥನ ಪಾತ್ರಗಳ ಅಸಹಾಯಕತೆಯನ್ನು ಅನಿವಾರ್ಯತೆಯಾಗಿಸುವಲ್ಲಿ ಅವರ ನಗರ ವಿರೋಧಿ ನಿಲುವು ಕಾರ್ಯ ನಿರ್ವಹಿಸಿರಬಹುದೆ? ಎಂಬ ಗುಮಾನಿ ಬರುವುದು ಸಹಜ ಹಾಗೂ ಅನಿವಾರ್ಯ.

ನಗರದ ಭೂಗತಲೋಕದ ದೊರೆಗಳನ್ನೂ ಮೂಲನೆಲೆಯ ವ್ಯಾಮೋಹವೆಂಬ ಅನಿವಾರ್ಯತೆ ಬಿಟ್ಟಿಲ್ಲ. ವ್ಯಾಸರಾವ್ ನಿಂಜೂರ್ ಅವರ 'ಮಂಚ' ಕಥೆಯ ದಾಸಣ್ಣ ಹೆಗ್ಡೆ ನಗರದ ಭೂಗತಲೋಕ ಸೇರಿ ಕೋಟ್ಯಂತರ ರೂಪಾಯಿ ಗಳಿಸಿ ಡಾನ್ ಎನಿಸಿಕೊಳ್ಳುತ್ತಾನೆ. ಪಂಜುರ್ಲಿ ಭೂತಕ್ಕೆ ಗುಡಿಯ ನಿರ್ಮಾಣಕ್ಕೆಂದು ತನ್ನ ಮೂಲ ನೆಲೆ ಪಂಜುಗುತ್ತು ಗ್ರಾಮಕ್ಕೆ ಬಂದಾಗ, ಮುಂಬಯಿಯ ಅವನ ಸಾಮ್ರಾಜ್ಯದ ಮೇಲೆ ಪೊಲೀಸ್‌ದಾಳಿ ಮತ್ತು ಶೂಟ್‌ಔಟ್ ನಡೆದು ಅವನ ಬಂಟರು, ಆಸ್ತಿಪಾಸ್ತಿ ನಾಶವಾಗುತ್ತದೆ. "ಪೋಲೀಸರು ಬುಸುಗುಟ್ಟುತ್ತಿದ್ದಾರೆ. ಇಲ್ಲಿಗೆ ಬರಬೇಡಿ ಬಂದರೆ ನಿಮ್ಮ ಪ್ರಾಣಕ್ಕೆ

ಸಂಚಕಾರ." ಎಂಬ ದೂರವಾಣಿ ಸುದ್ದಿ ಕೇಳಿಸಿಕೊಂಡ ದಾಸಣ್ಣ ಹೆಗ್ಡೆಗೆ ತೀರ ನಿಶ್ಶಕ್ತಿ ಎನಿಸಿ ಕುಸಿದಾಗ, ಎಲ್ಲೋ ಕಟ್ಟುವಾದ್ಯ ಕೇಳಿಸುತ್ತದೆ" ಎಂಬ ಕಥನದ ಸಾಲುಗಳು ಮುಂಬಯಿ ನಗರವನ್ನೇ ನಡುಗಿಸಿದ್ದ ದಾಸಣ್ಣ ಹೆಗಡೆ ಮರಳಿ ತನ್ನ ಗ್ರಾಮದ ಪಾಲಾದ ಅಸಹಾಯಕತೆಯನ್ನು ಹಿಡಿದಿಟ್ಟಿವೆ.

ಗ್ರಾಮ–ನಗರ ಕುರಿತ ಕಥನ ಲೇಖಕರ ದೃಷ್ಟಿಕೋನವನ್ನು ಕುರಿತು ಹೇಳುವುದಾದರೆ, ಮುಂಬಯಿ ಕರ್ನಾಟಕದ ಬಹಳಷ್ಟು ಕಥನಗಳು (ಕಥೆ, ಕಾದಂಬರಿ) ಸೃಷ್ಟಿಯಾಗಿದ್ದು ಸ್ವಾತಂತ್ರ್ಯ ಹೋರಾಟದ ಆಚೆ, ಈಚೆಗಿನ ಕಾಲದಲ್ಲಿ. ಆಗ ಗಾಂಧೀಜಿಯವರ ಪ್ರಭಾವ ಸಾಹಿತಿಗಳ ಮೇಲೆ ಆಗುತ್ತಿತ್ತು. (ಯಾವ ಪ್ರಮಾಣದಲ್ಲಿ ಯಾವ ಸ್ವರೂಪದಲ್ಲಿ ಎಂಬುದು ಬೇರೆ ಮಾತು) ಬ್ರಿಟೀಶರು ಹಳ್ಳಿಗಳ ಸಂಪತ್ತನ್ನು ದೋಚಿ ಪಟ್ಟಣಗಳನ್ನು, ನಗರಗಳನ್ನು ನಿರ್ಮಾಣ ಮಾಡುತ್ತಿದ್ದರು. ಹಳ್ಳಿಗಳು ಕ್ಷಯಿಸದೆ ಪಟ್ಟಣ, ನಗರಗಳು ಬೆಳೆಯುವಂತಿರಲಿಲ್ಲ. ಇಂತಹ ಸಂದರ್ಭದಲ್ಲಿ ಸಾಹಿತಿ, ಲೇಖಕರಿಗೆ ಹಳ್ಳಿಗಳ ಮೇಲೆ ಸಹಜವಾಗಿ ಕಾಳಜಿ ಅಭಿಮಾನ ಮೂಡುತ್ತಿತ್ತು. ಅವರು ಪಟ್ಟಣಗಳಿಗೆ ವಿರುದ್ಧವಾಗಿ ಗ್ರಾಮಗಳನ್ನು ಗ್ರಹಿಸಿ ಆದರ್ಶದ ಹಂತದಲ್ಲಿಟ್ಟು ನೋಡುತ್ತಿದ್ದರು. ಚರ್ಚಿಸಿದ ಕಥನಗಳಲ್ಲಿನ ಬಾಳ, ವಸಂತ, ಪಾಂಡೋಬ, ದಾಸಣ್ಣ ಹೆಗಡೆ ಇವರೆಲ್ಲ ಗ್ರಾಮ, ಗ್ರಾಮೀಣ ಸಂಬಂಧಗಳಿಗೆ, ಸೆಳೆತಗಳಿಗೆ ಭಾವುಕ(Panic)ರಾಗಿದ್ದುದು ಕಂಡು ಬರುತ್ತದೆ. ಬಾಳನ ತಾಯಿ, ವಸಂತನ ತಂದೆ, ಪಾಂಡೋಬನ ಸತ್ತು ಹೋದ ಆಯಿ, ದಾಸಣ್ಣನ ಅತ್ತೆ ಇತ್ಯಾದಿ ಗ್ರಾಮೀಣ ನೆಲೆಯ ವ್ಯಕ್ತಿತ್ವಗಳು ದೂರದ ನೆಲೆಯ ತಮ್ಮ ಮಕ್ಕಳು ಮತ್ತು ಸಂಬಂಧಿಕರ ಮೇಲೆ ತಮ್ಮ ಪ್ರಭಾವ (Influence) ಬೀರಿದ್ದು ಇಲ್ಲಿ ಸ್ಪಷ್ಟವಿದೆ. ಬದುಕಿನ ಭದ್ರತೆ, ರಕ್ಷಣೆ, ಕೃತ್ರಿಮತೆಯ ವಿಚಾರದಲ್ಲಿ ನಗರ ಪರಿಸರಕ್ಕಿಂತ ಗ್ರಾಮವೇ ಉತ್ತಮ ಎಂಬ ಆವರ ಪರಂಪರಾಗತ ವಾದ, ನಗರ ಸೇರುವವರ ಕುರಿತ ಆಕ್ಷೇಪಗಳು ಅನಿವಾರ್ಯ ಮತ್ತು ಸಂಕಷ್ಟದ ಕಾಲದಲ್ಲಿ ನಗರ ಪಾತ್ರಗಳನ್ನು ಆವರಿಸಿ ಅವರನ್ನು ಅಸಹಾಯಕರನ್ನಾಗಿ ಮಾಡುತ್ತವೆ. ಇಂಥ ಸಂದರ್ಭಗಳಲ್ಲಿ ಭಾವುಕರಾದ ವ್ಯಕ್ತಿಗಳು ನಗರ ವ್ಯವಸ್ಥೆಯ ವಿರುದ್ಧ ಈಜಲು ಮಾನಸಿಕ ಸಿದ್ಧತೆ ಮಾಡಿಕೊಳ್ಳುವಲ್ಲಿ ಸೋತು ಅನಿವಾರ್ಯವಾಗಿ ಮೂಲ ನೆಲೆಯತ್ತ ಪಲಾಯನ ಮಾಡುವುದು ಕಂಡುಬರುತ್ತದೆ. 'ಸ್ವಸ್ಥಾನೇ ನಿಧನಂ ಶ್ರೇಯಂ' ಎಂಬ ನಿಲುವಿನ ಸಂಪ್ರದಾಯವಾದಿಗಳ ಉತ್ತರಾಧಿಕಾರಿಗಳಾಗಿ, ಅಜ್ಞ ನೆಟ್ಟಾಲದಲ್ಲಿ ನೇಣಿಗೆ ಶರಣಾಗುವ ಯುವ ಪೀಳಿಗೆಯ ಪಲಾಯನ ಇದಾಗಿದೆ.

ವ್ಯಕ್ತಿಗಳು ಹೊಸನೆಲೆಯಿಂದ ಮರಳಿ ಮೂಲನೆಲೆಗೆ ಬರುವ ಸಾಧ್ಯತೆಗಳನ್ನು ಪ್ರಸ್ತುತ ಕಥನ ಸಾಹಿತ್ಯ ಗ್ರಹಿಸಿರುವ ರೀತಿಯನ್ನು ಹೀಗೆ ಕ್ರೋಢೀಕರಿಸಬಹುದು. • ಹೆಂಡತಿ, ಮಕ್ಕಳು ಮುಂತಾಗಿ ಕೌಟುಂಬಿಕ, ಸಾಂಸ್ಕೃತಿಕ ಸೆಳೆತ(ಕಡಲ ತೆರೆಗೆ ದಂಡೆ ಕತೆಯ ಕಾಕಾ)ಗಳು, ಹಸಿವು, ಕಾಮದಂತಹ ಪ್ರಕೃತಿದತ್ತ ಆವಶ್ಯಕತೆ(ಕಾಯಕ ಕೈಲಾಸ ಕಾದಂಬರಿಯ ಶಿವಲಿಂಗಯ್ಯ)ಗಳು, ವೈಯಕ್ತಿಕ ಆಕರ್ಷಣೆಗಳು ಗ್ರಾಮ/ ನಗರದ ಹೊಸನೆಲೆಯಿಂದ ಮೂಲನೆಲೆಗೆ ವ್ಯಕ್ತಿಗಳನ್ನು ಸೆಳೆದು ತರುತ್ತವೆ. • ಹೊಸ ಬದುಕಿನ ಭದ್ರತೆ ಕುರಿತು ಹೊಸನೆಲೆಯಲ್ಲಿ ಉಂಟಾದ ಭ್ರಮನಿರಸನದಿಂದ (ಹೊಲಗೇರಿಯ ರಾಜಕುಮಾರ ಕಾದಂಬರಿಯ ಮಾದೇವ) ಮೂಲನೆಲೆಗೆ ಮರಳುವುದು ಕಂಡುಬರುತ್ತದೆ. • ಮೂಲನೆಲೆಯ ಕುಟುಂಬ ಸಂರಕ್ಷಣೆ (ವೇಣುಗೋಪಾಲ, ಕೃಷ್ಣಾಬಾಯಿ, ಕೊಲ್ಲ), ಕೌಟುಂಬಿಕ, ಸಾಮಾಜಿಕ ನೆಲೆ (ಬೀಜ ಕಾದಂಬರಿಯ ಶ್ರೇಯಾಂಸ, ಅಪ್ಪ ಕಥೆಯ ಮನು) ಉಳಿಸಿಕೊಳ್ಳಲು ಮೂಲನೆಲೆಗೆ ಮರಳಿ ಬರುವ ಸಾಧ್ಯತೆಗಳು ಕಥನ ಸಾಹಿತ್ಯದಲ್ಲಿ ದಾಖಲಾಗಿವೆ. • ಹೊಸನೆಲೆಯಲ್ಲಿನ ಅಸಹಾಯಕತೆ ಅನಿವಾರ್ಯತೆಯಾಗಿ ಮತ್ತು ಗ್ರಾಮ ಜೀವನ ಕುರಿತು ಭಾವುಕರಾದ ಯುವಪೀಳಿಗೆ (ಋಣ ಕಥೆಯ ಬಾಳ, ದೂರ ಕಥೆಯ ವಸಂತ, ಮಂಚ ಕಥೆಯ ದಾಸಣ್ಣ, ಹೊಂಚು ಕಥೆಯ ಪಾಂಡೋಬ ಮುಂತಾದವರು) ಗ್ರಾಮ/ನಗರದ ಮೂಲನೆಲೆಗೆ ಮರಳಿ ಬರುತ್ತಾರೆ.

## ೨. ಹೊಸನೆಲೆ ಮತ್ತು ಸಾಧ್ಯತೆಗಳು

### ಅ. ವೈಯಕ್ತಿಕ ನೆಲೆ ಮತ್ತು ಸಾಧ್ಯತೆಗಳು

ಹೊಸನೆಲೆಯು ಹೊಸ ಸಂಬಂಧಗಳ ಸಂಕೇತವಾಗಿದೆ. ಮೂಲನೆಲೆಯಿಂದ ಹೊಸನೆಲೆಗೆ ಬಂದ ವ್ಯಕ್ತಿ ಮತ್ತು ಕುಟುಂಬಗಳು ಕೇವಲ ಭೌತಿಕವಾಗಿ ಸ್ಥಳಾಂತರಗೊಳ್ಳದೆ, ಅವರ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಸಂಬಂಧಗಳೂ ಸ್ಥಳಾಂತರಗೊಳ್ಳುತ್ತವೆ. ವ್ಯಕ್ತಿಗಳು ಹಲವು ಹತ್ತು ಸಂಘರ್ಷಗಳನ್ನು ಎದುರಿಸಿ

ಹೊಸನೆಲೆಯಲ್ಲಿ ಹೊಸ ಬದುಕನ್ನು ಕಟ್ಟಿಕೊಳ್ಳುತ್ತಾರೆ. ಹೊಸ ಸಂಬಂಧಗಳನ್ನು ಬಿಟ್ಟುಕೊಟ್ಟು ಮೂಲನೆಲೆಗೆ ಹಿಂತಿರುಗಲು ಇಷ್ಟಪಡದ ವ್ಯಕ್ತಿಗಳ ನಿರ್ಧಾರದ ಹಿಂದೆ ಯಾವ ಕಾರಣಗಳಿವೆ, ಹೊಸನೆಲೆ ಅವರ ಅಂತಿಮ ಆಯ್ಕೆ ಏಕೆ ಆಗುತ್ತದೆ, ಮುಂತಾದ ಪ್ರಶ್ನೆಗಳಿಗೆ ಪ್ರಸ್ತುತ ಕಥನ ಸಾಹಿತ್ಯ ಅನೇಕ ವೈಯಕ್ತಿಕ, ಕೌಟುಂಬಿಕ ಮತ್ತು ಸಾಮಾಜಿಕ ಕಾರಣಗಳನ್ನು ತೆರೆದಿಡುತ್ತದೆ.

ವ್ಯಾಸರಾವ್ ನಿಂಜೂರ್ ಅವರ 'ಉಸಿರು' ಕಾದಂಬರಿಯ ಕೇಶವನ ಓದು ಮುಗಿದ ನಂತರ ತಮ್ಮ ಗ್ರಾಮದಲ್ಲಿಯೇ ವೈದ್ಯ ವೃತ್ತಿಯನ್ನು ಕೈಗೊಂಡು ಜನಸೇವೆ ಮಾಡಬೇಕೆಂಬುದು ತಾಯಿ ರುಕ್ಮಿಣಮ್ಮ, ಅಣ್ಣ ನಾರಾಯಣ ಮತ್ತು ಅತ್ತಿಗೆಯರ ಅಪೇಕ್ಷೆಯಾಗಿದೆ. ಬದುಕಿದ್ದಾಗ ಕೇಶವನ ತಂದೆಯ ಆಸೆಯೂ ಇದೇ ಆಗಿದ್ದು, ಕೇಶವನ ಓದು, ತೆಗೆಯುವ ಅಂಕಗಳು, ಉನ್ನತ ಹುದ್ದೆ ಎಲ್ಲವೂ ಅವರಿಗೆ ಹೆಮ್ಮೆಯ ವಿಷಯಗಳಾಗಿದ್ದವು. ಆದರೆ ಕೇಶವ ನಗರದಲ್ಲಿ ಓದಿದವನು, ನಗರದಲ್ಲಿಯೆ ಶಾಪ್ ಹಾಕಿ ಅಲ್ಲಿಯೆ ನೆಲೆಸಲಿ ಎಂಬುದು ಹೆಂಡತಿ ಛಾಯಾ ಮತ್ತು ಮಾವನವರದ್ದಾಗಿದೆ. ಪಡಮುನ್ನೂರಿನ ಗ್ರಾಮೀಣ ಸಂಸ್ಕೃತಿಯಿಂದ ದೂರ ಸರಿದು ಹೋಗುತ್ತಿರುವ ಮಗನನ್ನು ರುಕ್ಮಿಣಮ್ಮ ಪ್ರಶ್ನಿಸುತ್ತಾರೆ.

> 'ಯಾಕೆ ಮಗ, ಇಲ್ಲೆ ಉಡುಪಿಯಲ್ಲೋ, ಮಲ್ಪೆಯಲ್ಲೋ ಶಾಪು ಇಟ್ಟರೆ ಆಗದ? ನಮ್ಮ ಊರಿನವರಿಗೂ ಅನುಪತ್ಯಕ್ಕೆ ಆಗುತ್ತೆ.' ತಾಯಿ ಹೇಳುತ್ತಾಳೆ. 'ಇಲ್ಲೇನು ಉಪಯೋಗವಮ್ಮ, ನುಸಿ ಹೊಡೆಯುತ್ತ ಕೂದ್ರಬೇಕು.' ಮಗನ ವಾದ. 'ಅಲ್ಲವೋ, ನಿನ್ನ ಅಪ್ಪಯ್ಯನಿಗೂ ನೀನು ಊರಿನಲ್ಲೆ ಡಾಕ್ಟರನಾಗಬೇಕು ಎನ್ನುವ ಆಸೆ ಇತ್ತು.' ಕೇಶವ ಮಾತಾಡಲಿಲ್ಲ. ತಾಯಿ ಒತ್ತಾಯಿಸುತ್ತಾಳೆ. ಕೊನೆಗೆ ಕೇಶವ 'ನನಗೆ ಈ ಸುಡುಗಾಡು ಹಳ್ಳಿಯ ಸಹವಾಸ ಬೇಡ' ಎಂದು ತಾಯಿಯ ಬದಿಯಿಂದ ಎದ್ದು ಹೆಂಡತಿಯ ಹತ್ತಿರ ಹೋಗುತ್ತಾನೆ.[೨೫]

ಕೇಶವನು ತಾನು ಹೊಸನೆಲೆಯಲ್ಲಿ ನೆಲೆ ನಿಲ್ಲಲು ಕೊಡುವ ಕಾರಣಗಳು ಮೊದಲ ನೋಟಕ್ಕೆ ಹೆಂಡತಿ, ಮಾವಂದಿರ ಇಚ್ಛೆಯಾದರೂ, ಅದರ ಮೂಲದಲ್ಲಿ ಆರ್ಥಿಕ ವ್ಯವಸ್ಥೆ, ವ್ಯವಹಾರ ಚಾತುರ್ಯ ಕಾರ್ಯನಿರ್ವಹಿವೆ. ಒಂದೆಡೆ ಹುಟ್ಟಿ ಬೆಳೆದ ಹಳ್ಳಿಯ ಮಣ್ಣು, ಅಪ್ಪ, ಅಮ್ಮ, ಬಂಧುಗಳು ಹೀಗೆ ಭಾವನಾತ್ಮಕ ಸೆಳೆತವಿದ್ದರೆ, ಇನ್ನೊಂದೆಡೆ ಹಣ, ಮತ್ತು ವ್ಯವಹಾರದ ಸೂಕ್ಷ್ಮತಂತುಗಳು, ಹೆಂಡತಿ ಮತ್ತು ಸೌಲಭ್ಯಗಳ ಆಕರ್ಷಣೆಯಿದೆ. ಈ ದ್ವಂದ್ವದಿಂದ ಮುಕ್ತನಾಗಲು ಅವನು ಹೆಂಡತಿಯ ಮಾತನ್ನು ಕೇಳುತ್ತಾನೆ. ಅತ್ಯಂತ ಸರಳ, ಮುಗ್ಧ ವ್ಯಕ್ತಿಯಾಗಿದ್ದ ಕೇಶವನ ಆಸಕ್ತಿವಲಯ ಬದಲಾವಣೆಯಾಗಿದ್ದನ್ನು ಕಾಲೇಜು ಹಂತದಲ್ಲಿ ಗುರುತಿಸಬಹುದು. ಹೈಸ್ಕೂಲ್ ಓದುವಾಗ ಸಿನೆಮಾ ಎಂದರೆ ದೂರ ನಿಲ್ಲುತ್ತಿದ್ದ ಬಾಲಕನನ್ನು ನಗರದ ಕಾಲೇಜು ಶಿಕ್ಷಣ, ನಗರ ಜೀವನ ಸಹಪಾಠಿಗಳೊಂದಿಗೆ ಡೇಟ್‌ಡೇಟಿಂಗ್, ಕುಡಿತ, ವೇಶ್ಯಾ ಸಹವಾಸವನ್ನೂ ಕಲಿಸಿದೆ. ನಗರ ಸೌಲಭ್ಯವನ್ನು ಯುವ ಜನಾಂಗ ಉಪಯೋಗಿಸಿಕೊಳ್ಳುವ ಅಥವಾ ದುರುಪಯೋಗಪಡಿಸಿಕೊಳ್ಳುವ ರೀತಿಯನ್ನು ಅಧ್ಯಯನ ಗುರುತಿಸುತ್ತದೆ. ಶಿಕ್ಷಣ, ಉದ್ಯೋಗ, ಆರೋಗ್ಯ ಮುಂತಾದ ಮಾನವ ಅಭಿವೃದ್ಧಿ ಸಂಬಂಧಿತ ಸೌಲಭ್ಯಗಳು ನಗರಕೇಂದ್ರತವಾಗಿರುವುದು ಯುವ ಜನಾಂಗದ ಈ diverted ಮನೋಭಾವ(ಈ ಸುಡುಗಾಡು ಹಳ್ಳಿಯ ಸಹವಾಸ ಬೇಡ ಎಂಬ ವಾಕ್ಯ ಇದನ್ನು ಸೂಚಿಸುತ್ತದೆ)ದಿಂದ ಎಂಬುದು ಅಧ್ಯಯನದ ನಿಲುವಾಗಿದೆ. ಇಲ್ಲಿ ಇನ್ನೂ ಒಂದು ಗಮನಿಸಬೇಕಾದ ವಿಷಯವೆಂದರೆ ಗ್ರಾಮ, ನಗರ ಕುರಿತಾದ ವ್ಯವಸ್ಥೆಯ ತಾರತಮ್ಯವಾಗಿದೆ. ವಾಸ್ತವದ ಸಂಗತಿ ಎಂದರೆ, ನಮ್ಮ ಎಲ್ಲ ಅಭಿವೃದ್ಧಿ ಮೆಟ್ಟಿಲುಗಳು ನಗರದತ್ತ ಮುಖಮಾಡಿ ನಿಂತಿವೆ. ಸಮಸ್ಯೆ ಇರೋದು ಹಳ್ಳಿಗಳಲ್ಲಿ, ಪರಿಹಾರ ಇರುವುದು ನಗರಗಳಲ್ಲಿ ಎಂಬಂತಾಗಿದೆ. ಇದಕ್ಕೆ ಕಾರಣ ಜಾಗತೀಕರಣ, ಸರಕಾರಗಳ ವೈಫಲ್ಯ, ಗ್ರಾಮಗಳ ಕುರಿತು ನಿರಂತರ ಬದಲಾವಣೆಯ (ನಿರ್ಲಕ್ಷ್ಯ) ಮನೋಭಾವ ಕಾರಣಗಳಾಗಿವೆ.

ರಮಾನಂದ ಅಮೀನ್ ಅವರ 'ಗದ್ದೆಯ ಸೆರಗು' ಕಾದಂಬರಿಯ ಚಿದಂಬರನ ಹೊಸ ನೆಲೆಯ (ಅಂತಿಮ) ಆಯ್ಕೆಯ ಸಾಧ್ಯತೆಯು ಸಹ ನಗರ ಬದುಕಿನ ಆಕರ್ಷಣೆಯಿಂದ ನಿರ್ಧರಿಸಿದ್ದಾಗಿದೆ. ಚಿದಂಬರ ಮಣ್ಣುಗುಡ್ಡೆ ಗ್ರಾಮ ತೊರೆದು ಮುಂಬಯಿ ನಗರ ಸೇರಿ ಓದಿ ಬ್ಯಾಂಕಿನಲ್ಲಿ ಕೆಲಸಕ್ಕೆ ಸೇರುವಾಗ, ಪದ್ಮನಾಭ ಮಾಸ್ತರರ ಆರ್ಥಿಕಸ್ಥಿತಿ ಉತ್ತಮವಾಗಿರುತ್ತದೆ. ಇಬ್ಬರು ತಂಗಿಯರ ಮದುವೆಗೆ ಬಂದಿದ್ದ ಚಿದಂಬರ ಮನೆಯವರಿಗೆ ಬಟ್ಟೆಬರೆ, ಉಡುಗೊರೆ ತಂದು ಸಹಾಯ ಮಾಡುತ್ತಾನೆ. ತನ್ನ ಬ್ಯಾಂಕಿನ ಸಹೋದ್ಯೋಗಿಯೊಬ್ಬರ ಮಗಳು ಚಿತ್ರಾಳನ್ನು ಮದುವೆಯಾದಾಗ ಹುಟ್ಟೂರಿನ ಆಕರ್ಷಣೆ ಕಡಿಮೆಯಾಗುತ್ತದೆ.

ಚಿದಂಬರ ಮನೆಯೊಂದನ್ನು ಕೊಂಡು ಮುಂಬಯಿಯಲ್ಲಿ ನೆಲೆ ನಿಲ್ಲಲು ಅವನ ಮಾವ ಆಸರೆ ನೀಡುತ್ತಾರೆ. 'ಚಿದಂಬರ ಹೆಂಡತಿಯನ್ನು ತನ್ನ ಮನೆಗೆ (ಗ್ರಾಮ) ಕರೆದೊಯ್ಯಲಿಲ್ಲ. ತಾಯಿ ತಂಗಿಯರ ಪರಿಚಯ ಮಾಡಿಕೊಡಲಿಲ್ಲ.'[೧೬] ಹೀಗೆ ಚಿದಂಬರ ಹುಟ್ಟಿದೂರಿನ ಆಕರ್ಷಣೆ ಕಳೆದುಕೊಂಡು ನಗರ(ಹೆಂಡತಿ)ದ ಆಕರ್ಷಣೆಯನ್ನು ಬೆಳೆಸಿಕೊಳ್ಳಲು ಯೌವನ ಸಹಜ ಕಾಮನೆಗಳು, ನಗರದ ಸೌಲಭ್ಯ, ಮಾವನ ಆಸರೆಗಳು ಕಾರಣವೆನ್ನಬಹುದು. ಅಮ್ಮ, ಮನೆ ಜರಿದು ಬಿದ್ದಿದೆ ಎಂದು ಪತ್ರ ಬರೆದಾಗ, ಅವರಿಗೆ ಬೇಕಾಗಿದ್ದ ಆರ್ಥಿಕ ಸಹಾಯದ ಅವಶ್ಯಕತೆಯನ್ನು ಅರ್ಥೈಸಿಕೊಳ್ಳುವುದಿಲ್ಲ. ಮುಂಬಯಿ ನಗರದ ಸೌಲಭ್ಯ, ತನ್ನ ನೌಕರಿ, ಮಾವನ ಸಹಾಯದಿಂದ ಕಟ್ಟಿಕೊಂಡ ಮನೆ (ಸಂಸಾರ) ಅವನನ್ನು ಸೆಳೆದು ನಗರ ಜೀವಿಯಾಗಿ ಮಾಡುತ್ತವೆ. ತನ್ನ ತಮ್ಮ ವೇಣುಗೋಪಾಲನಿಗೆ ಚಿತ್ರಾಳ ತಂಗಿ ಲೀನಾಳನ್ನು ತಂದುಕೊಳ್ಳಬೇಕೆಂಬ ಪ್ರಸ್ತಾಪದ ಸಂದರ್ಭದಲ್ಲಿ ಚಿದಂಬರ ಇದನ್ನು ವಿರೋಧಿಸುತ್ತಾನೆ. ಎರಡು ವಿರುದ್ಧ ವಾತಾವರಣದಲ್ಲಿ (ಗ್ರಾಮ ಮತ್ತು ನಗರ) ಬೆಳೆದ ಇಬ್ಬರು ವ್ಯಕ್ತಿಗಳು ದಾಂಪತ್ಯದಲ್ಲಿ ಹೊಂದಿಕೊಂಡು ಹೋಗಲಾರರೆಂಬುದು ಅವನ ವಾದವಾಗಿದೆ. 'ಮುಂಬಯಿ ನಗರದಲ್ಲಿ ಹುಟ್ಟಿ ಬೆಳೆದು, ನಗರ ಜೀವನದ ಸೊಗಸನ್ನು ಉಂಡು ಬೆಳೆದಿರುವ ನಿನ್ನ ತಂಗಿಯನ್ನು ಹಳ್ಳಿಕ್ಕೆ ದೂಡಬೇಕೆಂದಿರುವೆಯಾ?' (ಪುಟ ೬೩). ಚಿದಂಬರನನ್ನು ನಗರ (ಹೊಸನೆಲೆ) ಸಂಪೂರ್ಣ ಆಕ್ರಮಿಸಿಕೊಂಡಿರುವುದು ಅವನ ಮಾತು, ಮನೋಧರ್ಮಗಳಿಂದ ತಿಳಿದು ಬರುತ್ತದೆ. ಒಂದು ಅಶಿಕ್ಷಿತ/ಸೌಲಭ್ಯರಹಿತ ಸಮುದಾಯ(ಗ್ರಾಮ)ವನ್ನು ಇನ್ನೊಂದು ಶಿಕ್ಷಿತ/ ಸೌಲಭ್ಯವಂತ ಸಮುದಾಯ ನಿರಾಕರಿಸಿದಾಗ ಉಂಟಾಗುವ ಭಿನ್ನಾಭಿಪ್ರಾಯ(ದ್ವಂದ್ವ)ವನ್ನು ಇಂತಹ ಸಂಭಾಷಣೆಗಳಲ್ಲಿ ಕಾಣಬಹುದಾಗಿದೆ. ಇವರ ಒತ್ತಾಸರೆಯಾಗಿ ನಿಲ್ಲುವ ಸುಶಿಕ್ಷಿತ ಮಹಿಳೆಯರ ಆಕರ್ಷಣೆಯೂ ಈ ಪಾತ್ರಗಳನ್ನು ಪ್ರೇರೇಪಿಸಿದೆ. ಗ್ರಾಮಗಳಲ್ಲಿ ಹುಟ್ಟಿ ಓದಿ ಬೆಳೆದು ನಗರಗಳಲ್ಲಿ ನೌಕರಿಯನ್ನು ದೊರಕಿಸಿಕೊಂಡು ಹಳ್ಳಿಯ ಮಣ್ಣನ್ನು, ತಂದೆ, ತಾಯಿಯರ ಆಸೆಯನ್ನು ಬಿಟ್ಟು ಶಾಶ್ವತವಾಗಿ ನಗರ ಸೇರುವ ಕೇಶವ, ಚಿದಂಬರನಂತವರು ಮಾನಸಿಕ ದ್ವಂದ್ವನ್ನು ಅನುಭವಿಸುತ್ತ ಸಂಕ್ರಮಣ ಕಾಲದ ಕೊಂಡಿಯಾಗಿ ಎಲ್ಲ ಕುಟುಂಬಗಳಲ್ಲೂ ಕಾಣಸಿಗುತ್ತಾರೆ.

ಉಮಾರಾವ್ ಅವರ 'ದೇಹಾಂತ' ಕತೆಯ ನಾಯಕ ರಾಜೀವ ವಿನಿಮಯ ಅರ್ಥ ವ್ಯವಸ್ಥೆಯ ಒಂದು ಅಂಗವಾಗಿ, ಆರ್ಥಿಕ ವ್ಯವಸ್ಥೆಯ ಬೆನ್ನು ಹತ್ತಿ, ತಾನು ಹುಟ್ಟಿದ ಗ್ರಾಮೀಣ ನೆಲೆಯಿಂದ ದೂರ ಸಾಗಿ ಮುಂಬಯಿ ನಗರ ಸೇರುತ್ತಾನೆ. ಈ ಗ್ರಾಮ ನಗರಗಳ ಪರಿಸರ ವ್ಯತ್ಯಾಸದಿಂದ ತಾನು ಬಾಲ್ಯದಲ್ಲಿ ಪ್ರೀತಿಸಿದ, ತನ್ನನ್ನು ಅತಿಶಯವಾಗಿ ಪ್ರೀತಿಸಿದ್ದ ಶ್ರೀಪಾದು ಮಾಮನನ್ನು ಇಂದು ಅಷ್ಟೇ ತೀವ್ರತೆಯಿಂದ ಪ್ರೀತಿಸಲಾರದವನಾಗಿದ್ದಾನೆ ಮತ್ತು ಮರೆಯಲಾರದವನಾಗಿದ್ದಾನೆ. ಮಾವನ ಸಾವಿನ ಸುದ್ದಿ ಬಂದಾಗ ರಾಜೀವ ತನ್ನ ಬದುಕಿನಲ್ಲಾದ ಪರಿವರ್ತನೆಯನ್ನು ಒರೆಗೆ ಹಚ್ಚಿ ನೋಡಿಕೊಳ್ಳುತ್ತಾನೆ. ಊರಿಗೆ ಹೋದಾಗಲೆಲ್ಲಾ, ತನ್ನ ಬಾಲ್ಯವನ್ನು ಅದರ ಮೂಲಕ ಬಾಲ್ಯದ ತನ್ನನ್ನು ಜೀವಂತವಾಗಿಸುತ್ತಿದ್ದ ಶ್ರೀಪಾದು ಮಾಮ ತನ್ನ ಪಾಲಿಗೆ ಸತ್ತು ಹೋಗಿದ್ದು ಎಂದು? ತನ್ನ ಗ್ರಾಮೀಣ ಬದುಕಿನ ನೆನಪುಗಳನ್ನು ಕೆದಕಿದಾಗ, ದೇಹಾಂತ ಮಾವನಿಗಾದರೂ, ನಿಜವಾಗಿ ಸತ್ತವನು ತಾನೆ ಎಂಬ ಸತ್ಯದ ಅರಿವಾಗುತ್ತದೆ. ಮಾಮ ತನಗಾಗಿ ಬಿಟ್ಟ ಆಸ್ತಿಯನ್ನು ರಾಜೀವ ಸ್ವೀಕರಿಸಲಾರದವನಾಗಿದ್ದಾನೆ. ಹೆಂಡತಿ ರಮಾ ಒತ್ತಾಯಿಸಿದಾಗ 'ಹೇಳಿದೆನಲ್ಲಾ. ಶ್ರೀಪಾದುಮಾಮ ಆಸ್ತಿ ಬಿಟ್ಟಿದ್ದು ನನಗಲ್ಲ'[೧೭] ಎಂದು ಉತ್ತರಿಸುತ್ತಾನೆ. ರಾಜೀವನ ಉತ್ತರವು ತನ್ನ ವ್ಯಕ್ತಿತ್ವ ರೂಪಾಂತರವನ್ನು (ಇದೂ ಸಹ ದ್ವಂದ್ವಾತ್ಮಕತೆ) ಒಪ್ಪಿಕೊಳ್ಳುತ್ತ, ಶ್ರೀಪಾದು ಮಾಮ ಆಸ್ತಿ ಬಿಟ್ಟಿರುವುದು ಹಳೆಯ ಬಾಲ್ಯದ ರಾಜೀವನಿಗೆ ಹೊರತು ಜಾಗತೀಕರಣದ ಪ್ರಭಾವಕ್ಕೆ ಒಳಗಾಗಿ ಕೌಟುಂಬಿಕ, ಮಾನವೀಯ ಸಂಬಂಧಗಳನ್ನು ತೊರೆದುಕೊಂಡ ಹೊಸ ರಾಜೀವನಿಗಲ್ಲ ಎಂಬ ಅರ್ಥವ್ಯಾಪ್ತಿ ಇಲ್ಲಿದೆ. ಮನೆಯಲ್ಲಿ ಮಗ, ಕಾಫಿ, ಚಿತ್ರಹಾರ, ಹೆಂಡತಿ, ಶಯನಸುಖ, ಕಛೇರಿಯಲ್ಲಿ ಗೆಳತಿ ಬರ್ನಿ, ಕಾಕ್‌ಟೇಲ್ ಪಾರ್ಟಿ, ಕುಡಿತ, ಅಸಭ್ಯ ಜೋಕುಗಳು, ಬಲವಂತದ ನಗು, ಗಿರಾಕಿಗಳ ಸಂತೃಪ್ತಿಗಾಗಿ ಆಡಬಾರದ ಆಟಗಳು ಹೀಗೆ ಔದ್ಯೋಗಿಕ ಸುಳಿ(ಇದೊಂದು ಆಧುನಿಕ ಸಂಸ್ಕೃತಿ)ಯಲ್ಲಿ ಆಳವಾಗಿ ಮುಳುಗಿದ ರಾಜೀವ, ಶ್ರೀಪಾದು ಮಾಮನ ಆಸ್ತಿಯೊಂದಿಗೆ ಮೂಲನೆಲೆ (ಗ್ರಾಮೀಣತೆ) ಯನ್ನೂ ದೂರವಿಟ್ಟು ನಗರ ನೆಲೆಯನ್ನು ಅಂತಿಮವಾಗಿ ಸ್ವೀಕರಿಸುವುದು ಕಂಡುಬರುತ್ತದೆ. ಜಯಂತ ಕಾಯ್ಕಿಣಿ ಅವರ 'ಇದ್ದಾಗ ಇದ್ದಾಂಗ' ಕಥೆಯ ಪಬ್ಲೂ ಸಹ ಹೀಗೆ ಗ್ರಾಮೀಣತೆಯಿಂದ ನಗರ ವ್ಯವಸ್ಥೆಗೆ ರೂಪಾಂತರಗೊಂಡ ಇನ್ನೊಬ್ಬ ಯುವಕನಾಗಿದ್ದಾನೆ. ಬಾಲ್ಯದಲ್ಲಿಯೆ ನಗರ ಆಕರ್ಷಣೆಗೆ ಒಳಗಾಗಿ ಓಡಿ ಹೋಗಿ ನಗರದ ಸಂಘರ್ಷಗಳನ್ನು ಎದುರಿಸಿ ಯುವಕನಾಗಿ ನಗರದ ವರ್ತನೆಗಳನ್ನು ರೂಡಿಸಿಕೊಂಡು ಗ್ರಾಮಕ್ಕೆ ಮರಳುವ ಪಬ್ಬುವನ್ನು

ಗ್ರಾಮ (ಎರಡನೇ ಬಾರಿಗೆ) ನಿರಾಕರಿಸುತ್ತದೆ. ಜಾತಿಯಾಧಾರಿತ, ವರ್ಗ ವ್ಯವಸ್ಥೆಯ ಶೋಷಣೆ, ದೌರ್ಜನ್ಯಕ್ಕೆ ಬಲಿಯಾದ ಕುಟುಂಬದಲ್ಲಿ ಅವನ ತಂಗಿ ಸಾವನ್ನಪ್ಪುತ್ತಾಳೆ, ತಾಯಿ ಹುಚ್ಚಿಯಾಗುತ್ತಾಳೆ. ಪಬ್ಬೂನ ತಾಯಿ, ತಂಗಿಯರನ್ನು ಪರಿಗಣಿಸಿ ಹೇಳುವುದಾದರೆ, ಬಂಡವಾಳಶಾಹಿ, ಜಮೀನ್ದಾರಿ ವ್ಯವಸ್ಥೆಯಲ್ಲಿ ಮೇಲ್ವರ್ಗದ ಪುರುಷರು ಬೇರೆಬೇರೆ ಆಮಿಷಗಳನ್ನು ಒಡ್ಡಿ ಕೆಳ, ದಲಿತ ವರ್ಗದ ಮಹಿಳೆಯರನ್ನು ವಶಪಡಿಸಿಕೊಳ್ಳುವುದು ಕಂಡುಬರುತ್ತದೆ. ಮಾತಿನ ನಯ, ಹಣ, ಹೆಂಡತಿ ಸ್ಥಾನಗಳಂತಹ ಆಮಿಷಗಳು ಎದ್ದು ಕಾಣುತ್ತವೆ ಮತ್ತು ಇವು ಕಥನ ಸಾಹಿತ್ಯದಲ್ಲಿ ದಾಖಲಾಗಿವೆ. ಪಬ್ಬು ಖಾಯಂ ಆಗಿ ನಗರಕ್ಕೆ ಹೊರಟುಹೋಗುವ ಮುನ್ನ ಆನಂದನಿಗೆ, "ತಿರುಗಿ ಬೊಂಬಾಯಿಗೆ ಹೋಗುತ್ತೇನೆ. ಒಬ್ಬನೇ ಅಲ್ಲ ಇಲ್ಲಿಯ ಸುಮಾರು ಎಂಟತ್ತು ಹುಡುಗೀರನ್ನು ತಗೊಂಡು ಹೋಗ್ತೇನೆ. ಅವರನ್ನು ಅಲ್ಲಿ ಮಾರುತ್ತೇನೆ. ಇಲ್ಲಿಗಿಂತ ಚಲೋದಾಗಿ ಅವರಲ್ಲಿ ಇರ್ತಾರೆ. ನಾನು ಬದುಕುತ್ತೇನೆ"[೬೮] ಎಂದು ಹೇಳುವ ಪಬ್ಬುವಿನ ಮಾತಿನಲ್ಲಿ, ಗ್ರಾಮದಲ್ಲಿ ನಡೆಯುವ ಕೆಳಜಾತಿಯ ಮಹಿಳೆಯರ ಅಮಾನವೀಯ ಶೋಷಣೆ ಕುರಿತು ತಲ್ಲಣವಿದೆ. ಇದಕ್ಕೆ ಅವನ ತಾಯಿ, ತಂಗಿಯರು ಉದಾಹರಣೆಯಾಗಿದ್ದಾರೆ. 'ಇಲ್ಲಿಗಿಂತ ಚಲೋದಾಗಿ ಅವರಲ್ಲಿ ಇರ್ತಾರೆ' ಎನ್ನುವ ನಂಬಿಕೆಯಲ್ಲಿ, ಅವರನ್ನು ದಾರಿ ತಪ್ಪಿಸಿ ವೇಶ್ಯೆಯರನ್ನಾಗಿ ಮಾಡುತ್ತಿದ್ದೇನೆ ಎಂಬ ಪಶ್ಚಾತ್ತಾಪ, ತಪ್ಪಿತಸ್ಥ ಭಾವಗಳು ಕಾಣುವುದಿಲ್ಲ. ಗ್ರಾಮೀಣ ಪರಿಸರದಲ್ಲಿ ಜಾತಿ ವ್ಯವಸ್ಥೆ ಮುಗ್ಧ ಮಕ್ಕಳನ್ನು, ಮಹಿಳೆಯರನ್ನು ಅಮಾನುಷವಾಗಿ ಅನ್ಯಾಯಕ್ಕೆ ಒಳಗಾಗಿಸಿ, ಶೋಷಿಸಿ ಮಾನವೀಯತೆ ಮರೆತು ಬದುಕುವ ಮಾರ್ಗ ಶೋಧನೆಗೆ ಗಂಭೀರವಾಗಿ ತೊಡಗಿಸುತ್ತದೆ ಎಂಬುದು ಅಧ್ಯಯನದ ನಿಲುವಾಗಿದೆ. ಗ್ರಾಮೀಣ ಜಮೀನ್ದಾರಿ ಶಕ್ತಿಗಳ ಹಾಗೂ ಅಧಿಕಾರಶಾಹಿಗಳ ದಮನಕಾರಿ ಸಂಸ್ಕೃತಿಯ (Appressive Culture) ಹಲವು ಮುಖಗಳನ್ನು ಕಥನಗಳು ಬಿಚ್ಚಿಟ್ಟಿವೆ. ಇಲ್ಲಿ ಕೇಶವ, ಚಿದಂಬರ, ರಾಜೀವ, ಪಬ್ಬೂ ಇವರೆಲ್ಲ ಒಬ್ಬ ವ್ಯಕ್ತಿಯನ್ನು ಪ್ರತಿನಿಧಿಸದೆ ಒಂದು ಯುವ ಸಮುದಾಯ(ಮಧ್ಯಮವರ್ಗ/ಕೆಳವರ್ಗ)ದ ಪ್ರತಿನಿಧಿಗಳಾಗಿ ನಗರದ ಪಾತ್ರಗಳಾಗುತ್ತಾರೆ.

### ಬ. ಕೌಟುಂಬಿಕ ರಕ್ಷಣೆ ಮತ್ತು ಸಾಧ್ಯತೆಗಳು

ಮನುಷ್ಯ, ಪ್ರಕೃತಿ ಮತ್ತು ನಾಗರಿಕತೆಗೆ ಒಂದು ಅವಿನಾಭಾವ ಸಂಬಂಧವಿದೆ. ಸಾಮಾನ್ಯವಾಗಿ ಪ್ರಕೃತಿಯ ಮಡಿಲಲ್ಲಿ ಬೆಳೆದ ವ್ಯಕ್ತಿಗಳು ಅಲ್ಲಿಯ ಪರಿಸರದಿಂದ ದೂರ ಹೋಗಲು ಇಷ್ಟಪಡುವುದಿಲ್ಲ. ಅದೇ ರೀತಿ ನಾಗರಿಕ ಸೌಲಭ್ಯಗಳನ್ನು ಅನುಭವಿಸಿದ ವ್ಯಕ್ತಿಗಳು ಸುಲಭವಾಗಿ ಅವುಗಳನ್ನು ನಿರಾಕರಿಸಿ ಬದುಕಲು ಇಚ್ಛಿಸುವುದಿಲ್ಲ. ಹೊಸನೆಲೆಯ ಸಂಘರ್ಷದ ನಂತರ ಒಂದು ಕುಟುಂಬ ಹಾಗೂ ಅದರ ಸದಸ್ಯರು ಯಾವ ಅಂಶಗಳಿಗೆ ಒತ್ತು ಕೊಡುತ್ತಾರೆ, ಹೊಸ ಪರಿಸರದಲ್ಲಿ ಅವರು ಬಯಸುವುದೇನು, ಈ ವಾಸ್ತವಿಕ ಸಂಗತಿಗಳನ್ನು ಕಥನ ಸಾಹಿತ್ಯದ ಆಧಾರದಲ್ಲಿ ಚರ್ಚಿಸಬಹುದು.

ಕೇಶವ ಮಳಗಿ ಅವರ 'ಕಡಲ ತೆರೆಗೆ ದಂಡೆ' ಕತೆಯ ಸತ್ಯಪ್ರಮೋದನ ನಗರ ಸಂಘರ್ಷ ಅವನ ದೃಷ್ಟಿಯಲ್ಲಿ 'ಉಳಿವಿಕೆಗಾಗಿ ನಡೆದ ಹೋರಾಟ' (Struggling for Existance) ಆಗಿದೆ. ತಾನೂ ಬದುಕಬೇಕು, ತನಗೂ ಒಂದು ನೌಕರಿ ಬೇಕು ಎಂಬ ಬಯಕೆಯಲ್ಲಿ ಅದಕ್ಕೆ ಸ್ಪಂದಿಸದ ಗೆಳೆಯರಾದ ಅಚ್ಯುತ ಮತ್ತು ಅನ್ವರ ಇವರ ವಿರುದ್ಧ ಒಂದು ಸಮರವನ್ನು ಸಾರಿ, ಅವರಿಂದಲೇ ಸಹಾಯ ಪಡೆದು ನಗರದಲ್ಲಿ ನೆಲೆ ನಿಲ್ಲುತ್ತಾನೆ. ಉಡಾಳನೆಂಬ ಕೆಟ್ಟ ಹೆಸರು ಪಡೆದು ಮನೆ, ಮಠಗಳಿಂದ ಹೊರಹಾಕಲ್ಪಟ್ಟ ಸತ್ಯಪ್ರಮೋದನಿಗೆ ಗ್ರಾಮದಲ್ಲಿ ಕೌಟುಂಬಿಕ ನೆಲೆಯಿಲ್ಲದ್ದು ನಗರದಲ್ಲಿ ನೆಲೆ ನಿಲ್ಲಲು ಕಾರಣವಾಗುತ್ತದೆ. ಗ್ರಾಮ ಬಿಟ್ಟುಬಂದ ನಂತರ ಅತ್ತ ಆಸಕ್ತಿ ತೋರಿಸದಿರುವುದು ಗ್ರಾಮ ಕುರಿತು ಅವನ ತಿರಸ್ಕಾರ, ತಣ್ಣನೆಯ ದ್ವೇಷ ಕಾರಣವಾಗಿದೆ. ಅದರೆ ಈ ನಡತೆ ಅವನ ಬಾಹ್ಯ ತೋರಿಕೆ ಎನ್ನಬಹುದು. ವತ್ಸಲಳನ್ನು ಮದುವೆಯಾಗಿ ಸ್ವಂತಮನೆ ಮಾಡಿ ನಗರದ ಬದುಕಿಗೆ ಹೊಂದಿಕೊಂಡರೂ ಗ್ರಾಮ ಅವನನ್ನು ಎಡೆಬಿಡದೇ ಕಾಡುತ್ತದೆ.

> 'ಅಪ್ಪ ನನ್ನ ಮ್ಯಾಲಿನ ಸಿಟ್ಟ ಅವ್ವನ ಮ್ಯಾಲ ಹಾಕತಿದ್ದ. ನನ್ನ ಎದರ ಅಕೀನ್ನ ಸಿಕ್ಕಂಗ ಹೊಡೆದಾಗ ಜೀವ ಖಜೀಲ ಅಂತಿತ್ತು, ಆಕಿ ಚಿರಡಿ ಹೆಂಗಸ ಖರೆ, ಆದ್ರ ಆಕೀನೂ ತಾಯಿ ಇದ್ಲು ಅಪ್ಪಾ! ಒಮ್ಮೆ ಅಕಿ ಬೆನ್ನಿಗೆ ಬರೆ ಹಾಕಿದ್ದು ಅಪ್ಪ ಇಲ್ಲದಾಗ ಕರದು ತೋರಿಸಿದ್ಲು. ಆಗ ನನಗ ಅವನ ಮ್ಯಾಗ ಮನಸ ಮುರಿದು ದ್ವೇಷಿಸಲಿಕ್ಕ ಹತ್ತಿದೆ.'[೬೯]

ಹೀಗೆ ಅಪ್ಪ ಮತ್ತು ಇಡೀ ಗ್ರಾಮವನ್ನು ನಿರಾಕರಿಸಲು ಕಾರಣವಾದ ದ್ವೇಷವನ್ನು ಹೇಳಿಕೊಳ್ಳುವಾಗ, ಎಲ್ಲೋ ಮನಸ್ಸಿನ ಮೂಲೆಯಲ್ಲಿ ತಾಯಿಯೊಂದಿಗಿನ (ಗ್ರಾಮ) ಪ್ರೀತಿ, ಅಕ್ಕರೆಗಳು ಅವನಲ್ಲಿ ಉಳಿದುಬಿಡುತ್ತವೆ. ಆದರೂ ಅವನು ನಗರ ಬಿಟ್ಟು ಗ್ರಾಮಕ್ಕೆ ಬರಲಾರದವನಾಗಿದ್ದಾನೆ. ಒಂದೆಡೆ ಅಪ್ಪನ ಮೇಲಿನ ದ್ವೇಷ ಗ್ರಾಮ ವಿಕರ್ಷಣೆಯ ಬಲ(Repulsion force)ವಾಗಿ ಮತ್ತು ತಾಯಿಯ ಮೆಲಿನ ಅನುಕಂಪ ಆಕರ್ಷಣೆಯ ಬಲ(Attraction Force)ವಾಗಿ ಅವನನ್ನು ದ್ವಂದ್ವಾತ್ಮಕತೆಯಲ್ಲಿ ಬಂಧಿಸಿವೆ.

ವತ್ಸಲಳನ್ನು ಮದುವೆಯಾದ ನಂತರ, 'ನನ್ನ ಜೋಡಿ ಇನ್ನೊಂದು ಜೀವ ಬೇಕಾಗಿತ್ತು. ನನ್ನ ಲಗ್ನಕ್ಕೊ ಮಂದಿ ಕಲ್ಲ ಒಗದ್ರು, ನಾನು ಇರೋ ಪರಿಸ್ಥಿತಿಗೆ ಅವರು ಕನ್ಯಾನ್ನ ಕೊಡಂಗಿಲ್ಲ ಅಂತ ಗೊತ್ತಾಗಿ, ನಾ ಪ್ರಮೋಷನ್ ಮ್ಯಾಲ ಆಫೀಸರ್ ಆಗೀನಿ ಅಂತ ಅವರಿಗೆ ಸುಳ್ಳು ಹೇಳಿದೆ.' (ಪುಟ ೧೯೨) ಎಂದು ನುಡಿಯುವ ಸತ್ಯಪ್ರಮೋದನ ಮಾತಿನಲ್ಲಿ ನಗರದ ವಂಚನೆ ಮನೆ ಮಾಡಿದ್ದರೂ ಅದರಲ್ಲಿ ಪಶ್ಚಾತ್ತಾಪದ ಎಳೆ ಕಾಣಬವುದಿಲ್ಲ. ನಗರದಲ್ಲಿ ಸ್ವಂತ ಮನೆಮಾಡಿ ಎಲ್.ಐ.ಸಿ. ಎಜೆಂಟನಾಗಿ ಜನರನ್ನು ವಂಚನೆಗೈದು ಹಣ ಮಾಡುತ್ತಿದ್ದರೂ ಅದಕ್ಕಾಗಿ ಅವನಲ್ಲಿ ಸಂಕೋಚವಿಲ್ಲ. ಎಲ್ಲ ತಾನು ಬದುಕುಳಿಯುವ ಹಂಬಲಕ್ಕಾಗಿ ಎಂಬ ನಂಬಿಕೆ ಇದೆ. ಸ್ವಂತಮನೆ ಮಾಡಿ ಆರ್ಥಿಕ ಭದ್ರತೆ ಕಂಡುಕೊಂಡ ಸತ್ಯಪ್ರಮೋದ ನಗರದಲ್ಲಿಯೇ ನೆಲೆ ನಿಂತರೂ, ಗ್ರಾಮಕ್ಕೆ ಹೊರಟು ನಿಂತಿದ್ದ ಅಚ್ಯುತನಿಗೆ 'ನನ್ನ ಆಯಿ, ಅಪ್ಪರಿಗೆ ನಮಸ್ಕಾರ ಹೇಳು' ಎಂದು ಮತ್ತೊಮ್ಮೆ ಗ್ರಾಮದ ನೆನಪುಗಳನ್ನು ಕಟ್ಟಿಕೊಳ್ಳು(ದು)ತ್ತಾನೆ. ಗ್ರಾಮವು ನಗರದ ವ್ಯಕ್ತಿಗಳನ್ನು ಪ್ರಭಾವಿಸುವ ರೀತಿಯನ್ನು ಕಥನ ಅನನ್ಯವಾಗಿ ಕಟ್ಟಿಕೊಟ್ಟಿದೆ.

ವಿವೇಕ ಶಾನಭಾಗ ಅವರ 'ಗುರುತು' ಕತೆಯ ಆನಂದ ತಾನು ಹೊಂದಿದ ನಗರದ ಭದ್ರ ನೆಲೆಯನ್ನು ಬಿಟ್ಟು ಹೊರಬರಲಾರದವನಾಗಿದ್ದಾನೆ. ಹೆರವಟ್ಟಿ ಗ್ರಾಮದ ಆನಂದ ತನ್ನ ಸಾಕು ತಂದೆಯಂತಿದ್ದ ಮುಕುಂದ ಮಾಸ್ತರರ ಆಸೆಯಂತೆ, ಅವರ ಆಸ್ತಿಯ ಅರ್ಧಭಾಗಕ್ಕೆ ಒಡೆಯನಾಗಲಾರ. ಹುಬ್ಬಳ್ಳಿ(ನಗರ)ಯಲ್ಲಿ ಮಾಡುತ್ತಿರುವ ನೌಕರಿ ಅವನಿಗೆ ತೃಪ್ತಿ ನೀಡಿದೆ. ಮಾಸ್ತರರು ಗ್ರಾಮಕ್ಕೆ ಕರೆಸಿ, ಈ ಕುರಿತು ತಿಳಿಸಿದಾಗ, ಮಾಸ್ತರರ ಆಸ್ತಿ ಹಂಚಿಕೆಯ ಪ್ರೇರಿತ ಆಸೆ ಒಂದು ಕಡೆ, ನಗರದ ಆಕರ್ಷಣೆ ಮತ್ತೊಂದು ಕಡೆ, ಅವನು ಈ ಇಬ್ಬಂದಿ ಎಳೆದಾಟ(ದ್ವಂದ್ವ)ಕ್ಕೆ ದಾಳವಾಗುತ್ತಾನೆ. ಕೊನೆಗೂ ಅವನು ನಗರ ಜೀವನವನ್ನೇ ಆಯ್ಕೆ ಮಾಡಿಕೊಳ್ಳುತ್ತಾನೆ. ಅವನ ಆಯ್ಕೆಯ ಹಿಂದೆ ಅನೇಕ ಸಾಮಾಜಿಕ, ಆರ್ಥಿಕ ಕಾರಣಗಳಿವೆ. ಮಾಸ್ತರರ ಪ್ರೀತಿಯನ್ನು ಅವನು ಅಲ್ಲಗಳೆಯುವುದಿಲ್ಲ. ಆದರೆ ಅವರ ಮಗ ಮಂಜುನಾಥನ ದ್ವೇಷದ ಆತಂಕ ಆನಂದನಿಗೆ ಬೇಡವಾಗಿದೆ. ಗ್ರಾಮಕ್ಕೆ ಬಂದು ನೆಲೆ ನಿಲ್ಲಲು ಒಪ್ಪದ ಆನಂದನ ನಿರ್ಧಾರಕ್ಕೆ ಇನ್ನೊಂದು ಕಾರಣ, ನಗರದಲ್ಲಿಯೆ ಹುಟ್ಟಿ ಬೆಳೆದ ಹೆಂಡತಿ, ಮಗಳ ಕಡೆಗಿನ ಅವನ ಒಲವಾಗಿದೆ. ಈ ಆಕರ್ಷಣೆಯಿಂದ ತಪ್ಪಿಸಿಕೊಂಡು ಅವನು ಹೊರ ಬರಲಾರದವನಾಗಿದ್ದಾನೆ. ಇದು ಇಂದು ನಗರ ಸೇರಿದ ಬಹಳಷ್ಟು ಯುವಕರ ಸ್ಥಿತಿಯೂ ಆಗಿದೆ. ನಗರಗಳ ಸುಭದ್ರ ನೆಲೆಯಲ್ಲಿ ನಿಂತು ಗ್ರಾಮದತ್ತ ಹರಿದುಹೋದ ರಸ್ತೆಗಳನ್ನೆ ದಿಟ್ಟಿಸುತ್ತ ತಾವು ಕಳೆದ ಬಾಲ್ಯದ ನೆನಪುಗಳ ದ್ವಂದ್ವದಲ್ಲಿ ನಿಟ್ಟುಸಿರು ಹರಿಸುವ ಯುವಕರು, ಗ್ರಾಮ ನೀಡಿದ ಬದುಕಿನ ಅನುಭವಗಳನ್ನು ಮೆಲುಕುಹಾಕುತ್ತಾರೆ. ಇದು ಒಂದು ರೀತಿಯ ದ್ವಂದ್ವಾತ್ಮಕತೆಯಾಗಿದೆ. ಗ್ರಾಮಗಳಲ್ಲಿ ತಾವು ಬಾಲ್ಯ ಕಳೆದ ಸ್ಥಳಗಳಲ್ಲಿ ನಿಂತು, ನಗರದತ್ತ ಮುಖ ಮಾಡಿ ತಮ್ಮ ಬದುಕಿನ ಅನಿಶ್ಚಿತತೆಯ ದ್ವಂದ್ವದಲ್ಲಿ, ಕಳೆದ ಅನುಭವಗಳನ್ನು ಯುವಕರು ಶೋಧಿಸತೊಡಗುತ್ತಾರೆ ಎಂಬುದು ಮತ್ತೊಂದು ರೀತಿಯ ದ್ವಂದ್ವಾತ್ಮಕತೆಯಾಗಿದೆ.

> ಆನಂದನಿಗೆ ಒಮ್ಮೆಲೇ ತನ್ನ ಹೆಂಡತಿ ಮಗಳು ನೆನಪಾದರು. ಮಗಳು, ಪುಟಾಣಿ ರಶ್ಮಿ ತಾನು ಜೊತೆಗೆ ಬರದೇ ಸ್ಕೂಲಿಗೆ ಹೋಗುವ ಹುಡುಗಿಯಲ್ಲ. ಗ್ಯಾಸಿನವನಿಗೆ ಈವತ್ತು ಸಿಲಿಂಡರ್ ತರಲು ಹೇಳಿದ್ದನ್ನು ಸ್ಮಿತಾಳಿಗೆ ತಿಳಿಸಲು ಮರತೇ ಹೋಯಿತು. ಆನಂದನಿಗೆ ಈ ಊರು, ಈ ಆಸ್ತಿ ಕರಕರೆ ಅನ್ನಿಸಿ ಬಿಟ್ಟಿತು. ಮಾಸ್ತರರು ಇಲ್ಲಿ ಬಂದು ಇದನ್ನು ತಗೋ ಅನ್ನುತ್ತಾರಲ್ಲ. ಯಾರದೋ ಮನೆಯ ಮೊದಲ ಮಹಡಿಯ ಮೇಲೆ ಬಾಡಿಗೆಗಿರುವ ಅವನ ಕಲ್ಪನೆಯಲ್ಲಿ ಆಸ್ತಿ ಎಂದರೆ ಸೈಟು ಎಂದೇ ಅರ್ಥ. ಬೆಳಿಗ್ಗೆ ಮಾಸ್ತರರು ಅರ್ಧ ಪಾಲು ನಿನಗೂ ಕೊಡುತ್ತೇನೆ ಎಂದಾಗ ತಬ್ಬಿಬ್ಬಾದದ್ದು ಇದಕ್ಕೆ ಇರಬೇಕು. ತನ್ನ ಡಿಪಾರ್ಟಮೆಂಟಿನ ಆ ಶ್ರೀನಿವಾಸರಾವ್ ಯೂನಿವರ್ಸಿಟಿಗೆ ತೊಲಗಿದರೆ ತಾನು ಮುಂದಿನ ಹೆಚ್.ಓ.ಡಿ. ಆಗಬಹುದು ಎಂಬ ಆಸೆಯಲ್ಲಿ, ಪ್ರಿನ್ಸಿಪಾಲ್ ಮೂರ್ತಿಯವರ ಆಡಳಿತದ ಬಗ್ಗೆ ಮೆಚ್ಚುಗೆ ಸೂಸುವ ತಾನು ಈ ನೆಲದ ಒಡೆಯನಾಗುವುದನ್ನು ಕಲ್ಪನೆಯಲ್ಲೂ ಗ್ರಹಿಸಲಾರದವನಾದ.'[೨೦]

ಕತೆಯಲ್ಲಿನ ಈ ವಾಕ್ಯಗಳು ಇಂದು ಗ್ರಾಮಗಳಲ್ಲಿ ಜಮೀನು, ಕೃಷಿ ಇವು ಲಾಭದಾಯಕ ಜೀವನ ಆಧಾರವಾಗಿ ಉಳಿದಿಲ್ಲ ಮತ್ತು ಹಳ್ಳಿಗಳು ಆಧುನಿಕ ಸೌಲಭ್ಯಗಳನ್ನು ಪೂರೈಸುವ ಸ್ಥಿತಿಯಲ್ಲಿ ಇಲ್ಲ ಎಂಬುದನ್ನು ಒತ್ತಿ ಹೇಳುತ್ತವೆ. ಶಿಕ್ಷಣ ಹಾಗೂ ಸಮಕಾಲೀನ ಬದುಕಿನ ಸಾಧ್ಯತೆಗಳಿಗೆ ಮುಖಾಮುಖಿಯಾಗುವ ಛಾತಿ/ಧೈರ್ಯವಿದ್ದರೆ ನಗರಗಳಲ್ಲಿ ಬದುಕು ಸಾಗಿಸಬಹುದೆಂಬ ಒಂದು ಸಾಮಾನ್ಯ ಭರವಸೆ, ನಂಬಿಕೆ ಇಂದು ಯುವಜನರಲ್ಲಿ ಬಲವಾಗುತ್ತಿದೆ. ಜೊತೆಗೆ ಗ್ರಾಮ ಕಟ್ಟಿ ಬೆಳೆಸಿದ ಒಂದು ಇಡೀ ವ್ಯಕ್ತಿತ್ವವನ್ನು, ನಗರದ ಯಾಂತ್ರಿಕ ಜೀವನ ಆಪೋಶನ ತೆಗೆದುಕೊಂಡಿದೆ ಎಂಬುದು ಅಧ್ಯಯನದ ನಿಲುವಾಗಿದೆ.

ಮೇಲಿನ ಎರಡು ಸನ್ನಿವೇಶಗಳಲ್ಲಿ ನಗರಮುಖಿ ಪಾತ್ರಗಳು ಗ್ರಾಮವನ್ನು ತಿರಸ್ಕರಿಸಿ ಅಂತಿಮವಾಗಿ ಹೊಸ ನೆಲೆಯನ್ನು ಸ್ವೀಕರಿಸುತ್ತವೆ. ಕುಸುಮಾಕರ ದೇವರಗೆಣ್ಣೂರು ಅವರ 'ನಿರಿಂದ್ರಿಯ' ಕಾದಂಬರಿಯ ಕಲ್ಲಪ್ಪ ರೊಳ್ಳಿ ಮೂವತ್ತು ವರ್ಷದಿಂದ ದೂರವಾಗಿದ್ದ ಕೌಟುಂಬಿಕ ಸಂಬಂಧವನ್ನು ಆರ್ಥಿಕ ವ್ಯವಹಾರದಿಂದ ಶಾಶ್ವತವಾಗಿ ಕಳಚಿಕೊಳ್ಳಲು ತೀರ್ಮಾನಿಸಿ (ಇದು ಅವನ ವಿದ್ಯಾವಂತ ಮಕ್ಕಳ ನಿರ್ಧಾರ) ಗ್ರಾಮಕ್ಕೆ ಬರುತ್ತಾನೆ. ಈ ಹಂತದಲ್ಲಿ ರೊಳ್ಳಿ ಮತ್ತು ಅವನ ಮಕ್ಕಳ ನಡುವೆ ಇರುವ ವ್ಯಾವಹಾರಿಕ ಮನೋಭಾವದಲ್ಲಿನ ವ್ಯತ್ಯಾಸವನ್ನು ಕಾಣುತ್ತೇವೆ. ಹಳ್ಳಿಯ ಆಸ್ತಿ (ಭೂಮಿ) ಮಾರಿ ಸುಲಭವಾಗಿ ಹಣ ಮಾಡುವ ದಾರಿಗೆ ಎಲ್ಲ ಮಕ್ಕಳ ಬೆಂಬಲವಿದೆ. ಹಳ್ಳಿಗೆ ಬಂದು ಅದೇ ಭೂಮಿಯಲ್ಲಿ ದುಡಿದು ಬದುಕುವ ಆದರ್ಶ (ಶ್ರಮ ಜೀವನ? ಕೃಷಿ ವೃತ್ತಿ ಇಂದು ಸಂಕಟದ ಸ್ಥಿತಿಯಲ್ಲಿದೆ, ಅದು ಬೇರೆ ವಿಚಾರ) ಯಾರಿಗೂ ಬೇಡವಾಗಿದೆ. ಮಕ್ಕಳ ಮಾತುಗಳಲ್ಲಿ ಹಳ್ಳಿಯಲ್ಲಿರುವ ಆಸ್ತಿಯ ಮೇಲೆ ಅಪ್ಪನ ಹಕ್ಕನ್ನು ನೆನಪಿಸುವುದರೊಂದಿಗೆ, ತಮ್ಮ ಹಕ್ಕಿನ ಮುದ್ರೆಯೊತ್ತುವುದು ಎದ್ದು ಕಾಣುತ್ತದೆ. ಯಾವ ಮನೆಯನ್ನು ಮಾರಿ ಹಣ ಪಡೆದುಕೊಂಡು ಹೋಗಲು ಬಂದಿದ್ದರೋ, ಅದು ಬಿದ್ದು, ಅದರಡಿ ತಾವೇ ಸಾಯಬಹುದು ಎಂಬ ಕಲ್ಪನೆ ಕೌಟುಂಬಿಕ ವಿಘಟನೆಯ ಹಿನ್ನೆಲೆಯಲ್ಲಿ ಅರ್ಥ ಪಡೆದುಕೊಳ್ಳುತ್ತದೆ. ಮನೆ ಒಡೆದು ಹಲವು ಮನೆಗಳಾಗಿದ್ದುದು, ಎಲ್ಲ ಮನೆಗಳಲ್ಲಿಯೂ ಒಲೆ ಉರಿಯುತ್ತಿದ್ದುದು, ಬಡತನ ಹಾಸಿಕೊಂಡು ಮಲಗಿದ್ದುದು ರೊಳ್ಳಿಗೆ ನಿರಾಶೆಯನ್ನು ಉಂಟು ಮಾಡಿವೆ. ಮನೆ ಮಾರುವ ಮತ್ತು ಹಣದ ಪ್ರಶ್ನೆ ಬಂದಾಗ ಸಾಲ ಮುಂಚೂಣಿಗೆ ಬಂದು ನಿಲ್ಲುತ್ತದೆ. ಆದರೆ ಮೂವತ್ತೈದು ವರ್ಷಗಳ ಕಾಲ ರೊಳ್ಳಿಯ ಆಸ್ತಿಯನ್ನು ಅನುಭವಿಸಿದ ಋಣದ ಪ್ರಸ್ತಾಪವೇ ಇಲ್ಲಿ ಆಗುವುದಿಲ್ಲ. ಇದು ಇಂದಿನ ಗ್ರಾಮೀಣ ಜನರ ನೈತಿಕ ಮಟ್ಟ ಕುಸಿದಿರುವ ಸೂಚನೆಯೂ ಹೌದು. ಇದಕ್ಕೆ ಹೊಣೆಯಾದರೂ ಯಾರು? ದುರಹಂಕಾರದಿಂದ ಇಡೀ ಮನೆತನ (ಗ್ರಾಮ) ನಾಶವಾಗಿದೆ. ವಿದ್ಯೆಯಿಲ್ಲದ ಅಣ್ಣ ತಮ್ಮಂದಿರ (ಗ್ರಾಮೀಣರ) ಕಚ್ಚಾಟ, ದೂರು, ನಿರಾಶೆ ಮುಂತಾದವುಗಳು ಬಯಲಿಗೆ ಬರುತ್ತವೆ.

> 'ಅಲ್ಲಿ ಹೇಗೆ ಬದುಕಿದ್ದಾರೋ? ಮನೆ ಎನ್ನಲೂ ಬರುವುದಿಲ್ಲ. ಇಲಿ, ಹಲ್ಲಿ, ಹಾವು, ಹುಳು, ಚೇಳು ಇವುಗಳ ಸಂಗ್ರಹವಾಗಿದೆ. ಅಲ್ಲಿ ಮನುಷ್ಯರು ವಾಸ ಮಾಡುವುದು ಅಸಾಧ್ಯ! ತನಗೆ ಆಗಿದ್ದ ಸೋಲನ್ನು ಮರೆತು ಮಗ ಮುಂಬಯಿಗೆ ಮರಳುವಾಗ ಕೇಳಿದ. 'ಹಳ್ಳಿಗಳೆಂದರೆ ಹಾಗೆ' ಉತ್ತರಿಸಿ ರೊಳ್ಳಿ ಮೌನ ವಹಿಸಿದ. [೨೧]

ನಗರಕ್ಕೆ ಹಿಂದಿರುಗುವಾಗ ನುಡಿದ ರೊಳ್ಳಿಯ ಮಗನ ಮಾತು, ಗ್ರಾಮಗಳ ಆರ್ಥಿಕ, ಸಾಮಾಜಿಕ ದುಸ್ಥಿತಿ ತೆರೆದಿಡುವುದರೊಂದಿಗೆ, ಅವು ಅಜ್ಞಾನ, ಅಂಧಕಾರ, ಮೂಢನಂಬಿಕೆ, ಜಾತೀಯತೆ, ಶೋಷಣೆ, ನಿರಕ್ಷರತೆಗಳ ಕೂಪಗಳು ಎಂಬುದನ್ನು ವಿಷಜಂತುಗಳ ವಾಸಸ್ಥಾನಕ್ಕೆ ಹೋಲಿಸಿ ವಿಡಂಬನೆ ಮಾಡುತ್ತದೆ. ಅವಿಭಕ್ತ ಕುಟುಂಬಗಳು ಕೌಟುಂಬಿಕ ವಿಘಟನೆಯತ್ತ ನಡೆದಿರುವುದನ್ನೂ ತಿಳಿಸುತ್ತದೆ. ನಗರದ ಭದ್ರನೆಲೆ (ಇದು ಗ್ರಾಮ ಬದುಕಿನ ಅಭದ್ರತೆಯೂ ಹೌದು) ರೊಳ್ಳಿ ಮತ್ತು ಮಕ್ಕಳನ್ನು ನಗರಕ್ಕೆ ಮರಳಿ ಕರೆತರುತ್ತದೆ.

ವೆಂಕಟೇಶ ಹುಣಶೀಕಟ್ಟಿ ಅವರ 'ಕೋಲ್ಮಿಂಚು' ಕಾದಂಬರಿಯ ನರಸಾಪುರದ ಪಕ್ಕೀರಪ್ಪ ಕೆಟ್ಟು ಪಟ್ಟಣ ಸೇರಿದವನು (ಪಕ್ಕೀರಪ್ಪ ಕೆಡಲು ಕಾರಣ ಭಾರತದ ಸಂವಿಧಾನಾತ್ಮಕ ನ್ಯಾಯವ್ಯವಸ್ಥೆ ಎಂಬುದು ಇಲ್ಲಿ ಗಮನಾರ್ಹ). ಹುಬ್ಬಳ್ಳಿಯ ಮಂಡಿಯಲ್ಲಿ ಕಾರಕೂನನಾಗಿ ಪ್ರಾಮಾಣಿಕತೆಯಿಂದ ದುಡಿದು, ಯಜಮಾನರಿಂದ ನಂಬಿಕಸ್ಥನೆನಿಸಿಕೊಂಡು ತನ್ನದೊಂದು ಸ್ವಂತ ಅಂಗಡಿ ಹಾಕಿಕೊಳ್ಳುತ್ತಾನೆ ಹಾಗೂ ಸಾಮಾಜಿಕ, ಆರ್ಥಿಕ ಭದ್ರತೆಯನ್ನು ಪಡೆದುಕೊಳ್ಳುತ್ತಾನೆ. ಗ್ರಾಮದಲ್ಲಿ ಹತ್ತಾರು ವರ್ಷ ನ್ಯಾಯಕ್ಕಾಗಿ ನ್ಯಾಯಾಲಯಕ್ಕೆ ಅಲೆದು ಇರುವ ಜಮೀನನ್ನು ಕಳೆದುಕೊಳ್ಳುವ ಪಕ್ಕೀರಪ್ಪ ಮತ್ತೆ ನರಸಾಪುರ(ಗ್ರಾಮ)ದತ್ತ

ನೆಲೆಗಾಗಿ ತಿರುಗಿ ನೋಡುವುದಿಲ್ಲ. ತನ್ನ ಗ್ರಾಮ ಮತ್ತು ಪಕ್ಕದ ಗ್ರಾಮಗಳ ಜೊತೆಗಿನ ಕೌಟುಂಬಿಕ, ಸಾಮಾಜಿಕ ಸಂಬಂಧಗಳನ್ನು ನಿರಾಕರಿಸದೆ ಉಳಿಸಿಕೊಳ್ಳುತ್ತಾನೆ. ಮಗನಿಗೆ ಹೊಸಕೋಟೆ(ಪಕ್ಕದ ಗ್ರಾಮ)ಯ ಗೌಡರ ಮಗಳನ್ನು ತಂದು ಮದುವೆ ಮಾಡುತ್ತಾನೆ. ಹೊಸದಾಗಿ ಮದುವೆಯಾಗಿ ಬಂದ ಸೊಸೆಗೆ 'ಧೈರ್ಯವಾಗಿರಮ್ಮ ನಾವೂ ನಿಮ್ಮ ಹಳ್ಳಿ ಕಡೆಯವರೆ'[೨೨] ಎಂದು ಧೈರ್ಯ ತುಂಬುವ ಅವನ ಮಾತು, ಹೊಸ ನೆಲೆಯೊಂದಿಗೆ ಮೂಲ ನೆಲೆಯ ಸಂಬಂಧಗಳನ್ನು ಬೆಸೆದು ಜೀವಂತ ಉಳಿಸಿಕೊಳ್ಳುವ ಬಯಕೆಯಾಗಿದೆ.

ಸತ್ಯಪ್ರಮೋದ, ಆನಂದ, ರೊಳ್ಳಿ, ಪಕ್ಕೀರಪ್ಪ ಇವರೆಲ್ಲರ ಕೌಟುಂಬಿಕ ಹಿನ್ನೆಲೆ, ಜೀವನ ರೀತಿ, ಹೊಸ ನೆಲೆಯಲ್ಲಿ ಕೌಟುಂಬಿಕ ಭದ್ರತೆ ಹೊಂದಿದ ಕಾರಣಗಳು ವಿಭಿನ್ನ ನೆಲೆಯಲ್ಲಿ ನಿಲ್ಲುತ್ತವೆ. ಸತ್ಯಪ್ರಮೋದನಿಗೆ ಮೂಲನೆಲೆ(ಅಪ್ಪ)ಯ ಮೇಲಿನ ದ್ವೇಷಕ್ಕಾಗಿ ಹೊಸನೆಲೆಯಲ್ಲಿ ಕೌಟುಂಬಿಕ ರಕ್ಷಣೆಯ ಅಗತ್ಯವಿದೆ. ಆನಂದನಿಗೆ ಮೂಲನೆಲೆಯ ಮೇಲಿನ ಸೆಳೆತದಿಂದ ದೂರ ಹೋಗಲು (ಡೈವರ್ಸ್ ಆಗಲು) ಹೊಸನೆಲೆಯಲ್ಲಿ ಕೌಟುಂಬಿಕ ಭದ್ರತೆ (ಅವನೊಬ್ಬ ಸರಕಾರಿ ನೌಕರ) ಹೊಂದಿರುವುದು ಕಾರಣವಾಗಿದೆ. ಅಣ್ಣ, ತಮ್ಮಂದಿರು (ಗ್ರಾಮದಲ್ಲಿರುವ ಹಣದಾಸೆಯ ಬಂಧುಗಳು)ಗಳಿಂದ ದೂರವಿರಲು ರೊಳ್ಳಿಗೆ ಹೊಸನೆಲೆಯ ಕೌಟುಂಬಿಕ ಭದ್ರತೆ ಹೊಂದಿದ ಪರಿಸರ ಸೂಕ್ತವೆನಿಸುತ್ತದೆ. ಪಕ್ಕೀರಪ್ಪ ತನ್ನ ಹೊಸ ನೆಲೆಯಲ್ಲಿ ಹೊಸ ಬದುಕನ್ನು ಕಟ್ಟಿಕೊಂಡಿದ್ದರೂ ಗ್ರಾಮೀಣ ಬದುಕಿನ ಸಂಬಂಧಗಳನ್ನು ಚಿಗುರಿಸಿಕೊಂಡು ಬೆಳೆಸಿಕೊಂಡಿದ್ದಾನೆ.

**ಕ. ಸಾಮಾಜಿಕ ನೆಲೆ ಮತ್ತು ಸಾಧ್ಯತೆಗಳು**

ಹೊಸನೆಲೆಯಲ್ಲಿ ಶಾಶ್ವತವಾಗಿ ನೆಲೆ ನಿಲ್ಲಲು ನಿರ್ಧರಿಸುವ ವ್ಯಕ್ತಿ ಮತ್ತು ಕೌಟುಂಬಿಕ ತೀರ್ಮಾನಗಳ ಹಿಂದೆ ಹಲವು ಸಾಮಾಜಿಕ ಕಾರಣಗಳನ್ನು ಕಥನ ಸಾಹಿತ್ಯದಲ್ಲಿ ಕಾಣುತ್ತೇವೆ. ಇವುಗಳಲ್ಲಿ ಸಾಮಾಜಿಕ ಭದ್ರತೆ, ಸಮಾಜ ಸೇವೆಯಲ್ಲಿ ತೊಡಗಿಸಿಕೊಂಡ ವ್ಯಕ್ತಿ, ಆದರ್ಶಗಳು ಕಾರಣಗಳಾಗಿವೆ. ಮೂಲನೆಲೆಯ ಬದುಕಿನ ಅಸಹನೀಯವಾದ ನೆನಪುಗಳಿಂದ ಮುಕ್ತರಾಗಲು ಹೊಸನೆಲೆಯನ್ನು ಅವಲಂಬಿಸಿರುವುದೂ ಕಂಡುಬರುತ್ತದೆ. ಶ್ರೀರಂಗ ಅವರ 'ವಿಶ್ವಾಮಿತ್ರನ ಸೃಷ್ಟಿ' ಕಾದಂಬರಿಯ ನಾರಾಯಣ ಲಿಂಗ, ವರ್ಣ, ವರ್ಗ ಶೋಷಣೆಗಳಿಗೆ ಮೂಲನೆಲೆಯಾಗಿದ್ದ ಕಮತೂರು ಎಂಬ ಕುಗ್ರಾಮದಲ್ಲಿ ಶಾಶ್ವತವಾಗಿ ನೆಲೆಸಲು ತೀರ್ಮಾನಿಸುತ್ತಾನೆ. ಮೇಲ್ಜಾತಿಗೆ ಸೇರಿದ ನಾರಾಯಣ ಹೊಟೇಲ್‌ನಲ್ಲಿ ಶೂದ್ರರ ಎಂಜಲು ತೊಳೆಯುತ್ತಿದ್ದಾನೆಂದು ಕೇಳಿ ಅವನನ್ನು ಪಟ್ಟಣಕ್ಕೆ ಮರಳಿ ಕರೆದೊಯ್ಯಲು ತಂದೆ ಶ್ರೀನಿವಾಸ ನಾಯಕ ಕೃಷ್ಣಮಾಚಾರಿಯೊಂದಿಗೆ ಬರುತ್ತಾನೆ.

> 'ನಮ್ಮು ನಾವು ನೋಡಿಕೊಳ್ಳೋದಂದ್ರ ಏನ್ಮಾಡಬೇಕು?' ನಾರಾಯಣನ ಪ್ರಶ್ನೆ. 'ಏನ್ಮಾಡಬೇಕು ಅಂದ್ರ, ಚಹಾದಂಗ್ಡೀವಳ್ಗ ಕೆಲ್ಸಾ ಮಾಡ್ಬೇಕ?' ಶೀನಪ್ಪನಾಯಕ. 'ಚಹಾದಂಗ್ಡೀವಳಗ ಇದ್ದರೇನು, ಗಟಾರ ಬಳೆದರೇನು ಅಂತ ನೀವೆ ಹೇಳಿದ್ರಲ್ಲ.' ನಾರಾಯಣ ಕೇಳುತ್ತಾನೆ. 'ಬ್ರಾಹ್ಮಣನಾಗಿ ಹುಟ್ಟಿದ್ದಕ್ಕ ಅಭಿಮಾನ ಅದ್ರು ಅದನೊ ಇಲ್ಲೊ?' ನಾಯಕನ ಅರ್ಭಟ. 'ಬ್ರಾಹ್ಮಣನಾಗಿ ಇಂಗ್ಲೀಷ ಕಲೀಬೇಕೇನು?' (ನಾರಾಯಣನಿಗೆ ಇಂಗ್ಲೀಷ ಕಲಿಯಲು ನಾಯಕರೇ ಅವಕಾಶ ಮಾಡಿಕೊಟ್ಟಿದ್ದರು) 'ಅಲ್ಲೋ, ಮನುಷ್ಯನಾದ ಮಾತ್ರಕ್ಕ ಮನುಷ್ಯ ಧರ್ಮ ಬಿಡ್ಬಾರ್ದು ಅಂಬೋದನ್ನ ಮಂದಿ ಹೇಳ್ಬೇಕ ನಿನಗ?' ಅಪ್ಪನ ಪ್ರಶ್ನೆಗೆ. 'ಸಮಾಜಸೇವಾ ಮನುಷ್ಯ ಧರ್ಮ ಅಲ್ಲ?' ನಾರಾಯಣ ಮನುಷ್ಯ ಧರ್ಮ ಕುರಿತು ತಿರುಗೇಟು ನೀಡಿದ. 'ಏನು ನಿನ್ನ ತಲೆ, ಹಾಂಗ ಮಾತಾಡಿದರ!' ಎಂದು ತಂದೆ ಅಬ್ಬರಿಸುತ್ತಾರೆ.[೨೩]

ಊಳಿಗಮಾನ್ಯ ವ್ಯವಸ್ಥೆಯನ್ನು ಪುರಸ್ಕರಿಸುತ್ತ ಬಂದ ಸಾಂಪ್ರದಾಯಿಕ ವ್ಯಕ್ತಿತ್ವಗಳ ಮಾನಸಿಕ ದ್ವಂದ್ವ ಸಂಭಾಷಣೆಯಲ್ಲಿದೆ. ಇವರ ನುಡಿ ಮತ್ತು ನಡೆಗಳಲ್ಲಿನ ಸ್ಪಷ್ಟ ವ್ಯತ್ಯಾಸವನ್ನು ಇಲ್ಲಿಯ ಸಂದರ್ಭ ಅನಾವರಣಗೊಳಿಸಿದೆ. ಕಮತೂರಿನಲ್ಲಿ ನೆಲೆಸಲು ನಿರ್ಧರಿಸಿದ ನಾರಾಯಣ ತುಳಜಿ ಎಂಬ ದಲಿತರ ಹೆಂಗಸು, ಒಂದು ನಾಯಿಯೊಂದಿಗೆ ಆಶ್ರಮ ಪ್ರಾರಂಭಿಸಿ ಅವಿದ್ಯಾವಂತ ಯುವಕರಿಗೆ ಶಿಕ್ಷಣ ನೀಡುತ್ತಾನೆ. ಕಮತೂರು ಎಂಬ ಕುಗ್ರಾಮ ಸಂಪ್ರದಾಯವಾದಿಗಳ ಮತ್ತು ಪ್ರಗತಿಪರರ ನಡುವಿನ ಸಂಘರ್ಷದ ಕುರುಕ್ಷೇತ್ರವಾಗುತ್ತದೆ. ಮಹಿಳಾ ಶೋಷಣೆಯ ವಿವಿಧ ಮಗ್ಗಲುಗಳನ್ನು ತುಳಜಿ ತಾಯಿಯ ಶೋಷಣೆಯ

ಸಂದರ್ಭದ ಮೂಲಕ ಕಾದಂಬರಿ ಅನಾವರಣಗೊಳಿಸುತ್ತದೆ. ಆರ್ಥಿಕ ಶಕ್ತಿಯ ಹಿನ್ನೆಲೆಯಲ್ಲಿ ನಡೆಯುವ ಗೇಣಿ ರೈತರ ಶೋಷಣೆ, ಜಾತಿಯಾಧಾರಿತ ನೆಲೆಯಲ್ಲಿ ಸತ್ತ ದನದ ಮಾಂಸ ತಿನ್ನುವ ದಲಿತರ ಕರಾಳ ಪರಿಸ್ಥಿತಿ ಮುಂತಾದ ಪಾರಂಪರಿಕ ಅನಿಷ್ಟ ಪದ್ಧತಿಗಳನ್ನು ವ್ಯಂಗ್ಯ, ವಿಡಂಬಣೆಯ ಮೂಲಕ ವಿವರಿಸುತ್ತದೆ. ಇಂತಹ ಕಥನ ಕುರಿತು 'ವಿಶ್ವಾಮಿತ್ರನ ಸೃಷ್ಟಿಯಲ್ಲಿ ಮಾತ್ರ ಆಧುನಿಕತೆಯ ಫಲವಾಗಿ ಅಣಕ (Irony) ತಾನೇ ತಾನಾಗಿದೆ'[೨೪] ಎಂಬ ಅಭಿಪ್ರಾಯವನ್ನು ಅಧ್ಯಯನ ಒಪ್ಪುತ್ತದೆ.

ಯಶವಂತ ಚಿತ್ತಾಲ ಅವರ 'ಶಿಕಾರಿ' ಕಾದಂಬರಿಯ ನಾಗಪ್ಪ ಅಂತಿಮವಾಗಿ ಮುಂಬಯಿಯಲ್ಲಿಯೇ ಉಳಿಯಲು ತೆಗೆದುಕೊಳ್ಳುವ ನಿರ್ಧಾರ ಅವನ ಸಾಮಾಜಿಕ ಕಳಕಳಿಯ ದ್ಯೋತಕವಾಗಿದೆ. ನಗರದ ಬಂಡವಾಳಶಾಹಿ ವ್ಯವಸ್ಥೆ ನಾಗಪ್ಪನನ್ನು ಹದಿನಾಲ್ಕು ದಿನಗಳ ಕಾಲ ಬೌದ್ಧಿಕ ಶೋಷಣೆಗೆ ಒಡ್ಡಿ, ಮಾನಸಿಕ ತೊಳಲಾಟಕ್ಕೆ ಸಿಕ್ಕುವಂತೆ ಮಾಡಿದ್ದು, ಅವನು ಕೆಲಸಕ್ಕೆ ರಾಜೀನಾಮೆ ಕೊಟ್ಟು ಮುಂಬಯಿ ಬಿಟ್ಟು ಹೊರಟು ಹೋಗಲಿ ಎಂಬ ಉದ್ದೇಶದಿಂದಲ್ಲ. ಬದಲಿಗೆ ಸಮಾಜದಲ್ಲಿ ಒಂದು ಅಂತಸ್ತು ಗಳಿಸಿದ್ದ ಶ್ರೀನಿವಾಸನ ಪೂರ್ವಾಶ್ರಮದ ವಿಷಯ ತನ್ನ ಕಥನದಲ್ಲಿ ಎತ್ತದಿರಲಿ ಎಂಬುದಾಗಿತ್ತು. ಭ್ರಷ್ಟ ಬಂಡವಾಳಶಾಹಿ ವ್ಯವಸ್ಥೆಯ ಕ್ರೌರ್ಯಕ್ಕೆ ಮಣಿದು ತನ್ನ ಕಂಪನಿಯ ಆಡಳಿತ ವರ್ಗಕ್ಕೆ ಶರಣಾಗುವ ತೀರ್ಮಾನವನ್ನು ನಾಗಪ್ಪ ಮನಸ್ಸಿನಿಂದ ಕಿತ್ತು ಹಾಕಿ ಇನ್ನೂ ಗಟ್ಟಿಯಾಗುತ್ತಾನೆ. ತಾನು ರಾಜೀನಾಮೆ ಕೊಟ್ಟದ್ದು ಕೇವಲ ಒಂದು ಕೆಲಸಕ್ಕೆ ಮಾತ್ರವಲ್ಲ. ಆ ಕೆಲಸ ಪ್ರತಿನಿಧಿಸುವ ಸ್ವಾರ್ಥಮೂಲವಾದ ವ್ಯಾವಹಾರಿಕ ಜಗತ್ತಿಗೆ ಎಂದು ಹೇಳಿ, ಮೇರಿ ತರುವ ಪ್ರಲೋಭನೆ(Offer, ಮತ್ತೆ ಕಂಪನಿಗೆ ಸೇರಿ ಉನ್ನತ ಹುದ್ದೆ ಅಲಂಕರಿಸುವ ಮೇಲಾಧಿಕಾರಿಯ ಆಹ್ವಾನ)ಯನ್ನು ತಿರಸ್ಕರಿಸುತ್ತಾನೆ.

> 'ಈ ಸೀತಾರಾಮರನ್ನು, ಶ್ರೀನಿವಾಸರನ್ನು, ಬಂದೂಕುವಾಲಾ, ದಸ್ತೂರರನ್ನು ನಾನು ವೈಯಕ್ತಿಕವಾಗಿ ದ್ವೇಷಿಸಿ ಉಪಯೋಗವಿಲ್ಲ. ಅವರು ವ್ಯವಹರಿಸುತ್ತಾ ಭದ್ರಗೊಳಿಸುತ್ತಿರುವ ನೆಲದಡಿಯ ಈ ಹೊಸ ಜಗತ್ತನ್ನೇ ನಾನು ಬಯಲಿಗೆಳೆಯಬೇಕಾಗಿದೆ. ನನ್ನ ಉಳಿದ ಆಯುಷ್ಯವನ್ನೀಗ ಇದಕ್ಕೆ ಮೀಸಲಿರಿಸುತ್ತೇನೆ. ನೀನು ತಿಳಕೊಂಡ ಹಾಗೆ ಕತೆ, ಕಾದಂಬರಿಗಳನ್ನು ಬರೆಯುವುದಕ್ಕಲ್ಲ. ನಿಮ್ಮಂತಹವರ ನಿಜವಾದ ಬಣ್ಣ ತೋರಿಸಿಕೊಡಲು ಅನುವು ಕೊಡಬಹುದಾದಂತ ಜರ್ನಲಿಸಂಗೆ'[೨೫]

ಸೀತಾರಾಮನಿಗೆ ಹೇಳುವ ನಾಗಪ್ಪನ ಮಾತುಗಳು ಅವನ ಮುಂದಿನ ಜೀವನದ ಗುರಿ, ನಿರ್ಧಾರಗಳನ್ನು ಪ್ರಕಟಿಸಿವೆ. ಇಂತಹ ಗುರಿ ಮತ್ತು ನಿರ್ಧಾರದ ಹಿಂದೆ ನಾಗಪ್ಪನ ಸ್ವಹಿತದ ಕಾರ್ಯವೊಂದು ಇದ್ದುದು ಗಮನಾರ್ಹವಾಗಿದೆ. 'ಮನಸ್ಸಿನ ಆಳದಲ್ಲೆಲ್ಲೋ ಗಟ್ಟಿಯಾಗ ಹತ್ತಿದ ನಿಶ್ಚಯವೊಂದು ಮಾತನ್ನು ಹುಡುಕುತ್ತಿತ್ತು, ನನ್ನ ಮಟ್ಟಿಗೆ ಇನ್ನೂ ಕಂಡಿರದ ಅಣ್ಣನನ್ನು, ಕಾಣೆಯಾದ ತಂಗಿಯನ್ನು ಹುಡುಕಿ ತೆಗೆಯುವುದೇ ಮುಂದಿನ ಆಯುಷ್ಯದ ಗುರಿಯಾಗಬೇಕು' (ಪುಟ ೩೨೫). ನಾಗಪ್ಪ ಹೆದರಿ ಹೇಡಿಯಾಗಿ ಹನೇಹಳ್ಳಿಗೆ (ಮೂಲನೆಲೆಗೆ) ಮರಳುವುದಿಲ್ಲ. ಅದರ ನೆನಪಿನಲ್ಲಿ ನಗರದ (ಹೊಸನೆಲೆಯ) ಬದುಕನ್ನು ಎದುರಿಸಿ ಗೆಲ್ಲುವ ಛಲ ತೊಡುವುದನ್ನು ಕಾಣುತ್ತೇವೆ.

ಉತ್ಪಾದನಾ ಸಂಬಂಧ ಮತ್ತು ಉತ್ಪಾದನೆಯ ಮೇಲಿನ ಹಿಡಿತದ ಹಿನ್ನೆಲೆಯಲ್ಲಿ ಸೃಷ್ಟಿಸಲ್ಪಟ್ಟ ಮಹಿಳೆ–ಪುರುಷ ಬೇಧನೀತಿಯ ಬೇರು ಖಾಸಗಿ ಆಸ್ತಿಯ ಉಗಮದೊಂದಿಗೆ ತಳುಕು ಹಾಕಿಕೊಂಡಿದೆ. ಇದರೊಂದಿಗೆ ಶುರುವಾದ ಪುರುಷಪ್ರಧಾನ ಮೌಲ್ಯಗಳು ಒಟ್ಟು ಮಹಿಳೆಯ ಅಸ್ತಿತ್ವದ ಮೇಲೆ ಹಿಡಿತ ಸಾಧಿಸತೊಡಗಿವೆ. ಈ ಹಿಡಿತ ನಿರಾಕರಿಸಿ ಹೊಸ ನೆಲೆಯಲ್ಲಿ ನೆಲೆಸಿದ ವ್ಯಾಸರಾಯ ಬಲ್ಲಾಳ ಅವರ 'ಹೆಜ್ಜೆ' ಕಾದಂಬರಿಯ ಮೂವರು ಮಹಿಳೆಯರ ನಿರ್ಧಾರಗಳ ಸಾಧ್ಯತೆಗಳನ್ನು ವಿಶ್ಲೇಷಿಸಬಹುದು. ಅತ್ತಿಗೆ ಸಾವಿತ್ರಿಯ ಪ್ರಗತಿಪರ ನಿಲುವಿನಂತೆ ನಡೆದು ಪುತ್ತೂರಿನ ಶಾಲೆಯೊಂದರಲ್ಲಿ ಹಿಂದಿ ಶಿಕ್ಷಕಿಯಾಗಿದ್ದ ಶಾಂಭವಿ ಸಹದ್ಯೋಗಿ, ವಿಜಾತಿ ಯುವಕನನ್ನು ಪ್ರೀತಿಸಿ ಮದುವೆಯಾಗಿ ಹೊಸನೆಲೆಯಿಂದ ಸಂಪ್ರದಾಯ ಕುಟುಂಬ(ಗ್ರಾಮ)ಕ್ಕೆ ಹೊಸಸ್ಪಂದನೆಯ ಸಂದೇಶವನ್ನು ಕಳಿಸುತ್ತಾಳೆ. ತಂದೆ ನಾರಾಯಣಶಾಸ್ತ್ರಿ ಮಗಳ ಸಂಬಂಧ ಕಡಿದುಕೊಳ್ಳುವ ಹಾಗೂ ಘಟಶ್ರಾದ್ಧ ಮಾಡುವುದಾಗಿ ಬೆದರಿಕೆ ಹಾಕುತ್ತಾನೆ. ಆದರೂ ಲೆಕ್ಕಿಸದೆ ರಿಜಿಸ್ಟರ್ಡ್ ಮದುವೆಯಾಗಿ ದಿಟ್ಟ ಹೆಜ್ಜೆ ಇಡುತ್ತಾಳೆ. 'ತನ್ನ ಸೂಚನೆಯಂತೆ ಕಲಿತ ಹಿಂದಿ ಭಾಷಾ ಜ್ಞಾನ ಒಂದು ಮೆಟ್ಟಲು ಮಾತ್ರ, ಉಪಾಧ್ಯಾಯ ವೃತ್ತಿ ಹಿಡಿದು ದೂರದ ಪುತ್ತೂರಿನಲ್ಲಿ ಏಕಾಕಿಯಾಗಿ ನೆಲೆಸಿದ್ದಾಳೆ, ತಂದೆಯ ಆಕ್ಷೇಪವನ್ನೂ ಬದಿಗೊತ್ತಿ' (ಪುಟ ೨೮೯) ಎಂಬ ಮಾತುಗಳು ಅವಳು

ತೆಗೆದುಕೊಂಡ ದಿಟ್ಟ ನಿರ್ಧಾರದ ನೆಲೆಯನ್ನು ಸೂಚಿಸುತ್ತವೆ. ಮಹಿಳೆಯನ್ನು ಸಾಮಾಜಿಕ, ಆರ್ಥಿಕ ಸಂಬಂಧದಿಂದ ವಿಮುಖಗೊಳಿಸಿದ್ದ ಸಾಂಪ್ರದಾಯಿಕ ಕೌಟುಂಬಿಕ ವ್ಯವಸ್ಥೆಗೆ ಮರಳಿ ಬರದೆ ಅಲ್ಲಿಯೇ (ಹೊಸನೆಲೆಯಲ್ಲಿ) ಮನೆ ಮಾಡಿ ಆರ್ಥಿಕ, ಸಾಮಾಜಿಕ ಭದ್ರತೆ ಪಡೆಯುತ್ತಾಳೆ. ಸಮಚಿತ್ತದ, ದೃಢಸ್ವಭಾವದ ಸಾವಿತ್ರಿ ಮುಂಬಯಿಯಲ್ಲಿ ಗಂಡನ ಮರಣದಿಂದ ಕಂಗೆಡುವುದಿಲ್ಲ. ಶಿಕ್ಷಣವನ್ನು ಮುಂದುವರೆಸಿ ರಾಷ್ಟ್ರೀಯ ಶಾಲೆಯಲ್ಲಿ ಮುಖ್ಯಾಧ್ಯಾಪಕಿಯಾಗುತ್ತಾಳೆ. ಗಾಂಧಿ ಮಾರ್ಗದಲ್ಲಿಯೇ ಹೆಜ್ಜೆಯಿಟ್ಟು ನಡೆದು ಗ್ರಾಮ(ಮೂಲನೆಲೆ)ಕ್ಕೆ ಹಿಂದಿರುಗುವ ಪ್ರಲೋಭನೆಗಳಿಗೆ ಒಳಗಾಗುವುದಿಲ್ಲ.

'ಇಲ್ಲಮ್ಮ ನನ್ನ ಧೈರ್ಯ ನನ್ನನ್ನು ನೋಡಿಕೊಳ್ಳುತ್ತದೆ. ವಿದ್ಯಾ ಜೀವಕೊಟ್ಟ ಮುಂಬಯಿಯನ್ನು ಬಿಟ್ಟು ನಾನು ಎಲ್ಲಿಗೂ ಹೋಗೊಲ್ಲ. ಈಗ ಗಾಂಧೀಜಿ ಜೈಲಿನಲ್ಲಿದ್ದಾರಮ್ಮ. ಆದರೆ ಎಷ್ಟು ದಿನ ಅಂತ ಈ ಸರಕಾರ ಅವರನ್ನು ಜೈಲಿನಲ್ಲಿಡಕಾಗುತ್ತೆ. ಅವರು ಹೊರಗೆ ಬರುವವರೆ. ಆಮೇಲೆ ಏನೆಲ್ಲಾ ಆಗುತ್ತೋ... ಅದನ್ನೆಲ್ಲ ನಾನು ನೋಡೋದು ನಮ್ಮ ವಿದ್ಯಾ ಜೀವ ಕೊಟ್ಟ ಮುಂಬಯಿಯಲ್ಲೆ. ಅವರು ಅಪೇಕ್ಷೆ ಪಟ್ಟಂತೆ ನಮ್ಮ ಪಾಪಾ ಕಸ್ತೂರಿಯನ್ನು ಬೆಳೆಸೋದು ನನ್ನ ಕೆಲಸ. ಅದನ್ನು ನಾನು ಇಲ್ಲೆ ಮಾಡಬೇಕಾಗಿದೆ.' ೨೩

ಸಾವಿತ್ರಿಯ ದೃಢ ನಿರ್ಧಾರದ ಹಿಂದೆ ಮುಂಬಯಿಯಲ್ಲಿ ಜಾತಿ, ಮತ ಬೇಧವಿಲ್ಲದೇ ಪಾಠ ಮಾಡಬಹುದು, ವಿಧವೆಯ ಅವಲಕ್ಷಣದ ಮುಖ ತೋರಿಸಲು ಹೆದರಬೇಕಾಗಿಲ್ಲ ಎಂಬ ನಿರಾಳತೆ ಇದೆ. ಆದರೆ ಈ ನಿರಾಳತೆ ಗ್ರಾಮ ಬದುಕಿನಲ್ಲಿ ಸಿಗಲಾರದೆಂಬ ಸೂಚನೆಯೂ ಇಲ್ಲಿದೆ. ಇದರ ಜೊತೆಗೆ ತನ್ನ ಹೆಣ್ಣು ಮಗುವನ್ನು, ಮಹಿಳೆಯನ್ನು ಎರಡನೇ ದರ್ಜೆಯ ಪ್ರಜೆಯಂತೆ ನಡೆಸಿಕೊಳ್ಳುವ ಕೊಡದೂರು–ಕೆಡದೂರುಗಳ ಗ್ರಾಮೀಣ ಸಾಂಪ್ರದಾಯಿಕ ಕೌಟುಂಬಿಕ ವ್ಯವಸ್ಥೆಯಿಂದ ದೂರ ಇಟ್ಟು ಬೆಳೆಸುವ ಉದ್ದೇಶವೂ ಅವಳದಾಗಿದೆ. ಶ್ರೀಕಂಠಶಾಸ್ತ್ರಿಗಳ ಮನೆ ಹೊರಗಿನಾಳು ವೇಣುವಿನ ಹೆಂಡತಿ ಶೂದ್ರರ ರುಕ್ಕು ಮುಂಬಯಿಯಲ್ಲಿ ಅಂತಿಮವಾಗಿ ತೆಗೆದುಕೊಳ್ಳುವ ನಿರ್ಧಾರಗಳು ಅವಳ ಕ್ರಾಂತಿಕಾರಕ ಹೆಜ್ಜೆಗಳಾಗಿವೆ. ಸ್ವತಂತ್ರ ಜೀವನದ ಹಂಬಲ ಹೊತ್ತು ಪಾರಂಪರಿಕ ಊಳಿಗಮಾನ್ಯ ವ್ಯವಸ್ಥೆಯನ್ನು ನಿರಾಕರಿಸಿ ನಗರಕ್ಕೆ ಹೋಗುತ್ತಾಳೆ. ರಾಧು ಎಂಬ ಹೆಣ್ಣಿನಿಂದ ಮೋಸ ಹೋಗಿ ಮುಂಬಯಿ ಸೇರಿ ಕೆನೆಡಿ ಬ್ರಿಜ್ ಪಕ್ಕದಲ್ಲಿ ವೇಶ್ಯಾವೃತ್ತಿಯನ್ನು ಮಾಡುತ್ತಿದ್ದ ರುಕ್ಕು ಜೀವನ ಪ್ರೀತಿಯನ್ನು, ಗಂಡ ಅಣ್ಣುವಿನ ಮೇಲಿನ ಮಮತೆಯನ್ನು ಕಳೆದುಕೊಳ್ಳುವುದಿಲ್ಲ. ಹೊಸ ಬದುಕಿನ ಮೆಟ್ಟಿಲುಗಳ ಮೇಲೆ ನಿಂತು ತನ್ನ ಹಳೆಯ ನೆಲೆಯತ್ತ ಹಿಂತಿರುಗಿ ನೋಡುವ ಅವಳ ಹೃದಯ ವೈಶಾಲ್ಯ ವೇಶ್ಯೆಯಾದರೂ ಮೆಚ್ಚುವಂತಹುದಾಗಿದೆ. ಊರಿನಲ್ಲಿ ಹೇಳದೇ ಬಂದಿದ್ದೀಯ ಎಂದು ತುಳುವಿನಲ್ಲಿ ಕೇಳಿದಾಗ ಅವಳ ಉತ್ತರ ಬರೆ ನಗು. ಗಂಡನಿಗೂ ತಿಳಿಸದೆ ಬಂದಿದ್ದೀಯಲ್ಲವೇನೆ? ಎಂದು ಮತ್ತೆ ಕೇಳಿದಾಗ, ಕಾಗದ ಬರೆದಿದ್ದೇನೆ ಹಣ ಕಳಿಸಿದ್ದೇನೆ ಎಂದು ಹೇಳಿದವಳು ಹೆಚ್ಚು ಮಾತನಾಡುವ ಇಚ್ಛೆ ಇರದಂತೆ ಹೋಗಿ ಬಿಟ್ಟಳು (ಪುಟ ೨೯೫). ಇಂಥ ಮಹಿಳಾ ಪಾತ್ರಗಳನ್ನು ಸೃಷ್ಟಿಸಿ, ಮಹಿಳೆಗೆ ಸಂಬಂಧಿಸಿದ ಪ್ರತಿಯೊಂದನ್ನು ತುಚ್ಛೀಕರಿಸುವಂತಹ ಸಾಂಸ್ಕೃತಿಕ ದಾಳಿಯಿಂದ ಅವರನ್ನು ಬಿಡುಗಡೆಗೊಳಿಸಿ, ಶಿಕ್ಷಣ, ನಗರದ ಹೊಸ ವಾತಾವರಣದತ್ತ ಕರೆದೊಯ್ದು ಆರ್ಥಿಕ ಸ್ವಾತಂತ್ರ್ಯದ ಬಲವನ್ನು ಕೊಡುವ ಕಾದಂಬರಿಯ ನಿಲುವು (೧೯೩೦ರ ದಶಕದಲ್ಲಿ) ಪ್ರಗತಿಪರತೆಯ ಗಟ್ಟಿ ಧ್ವನಿಯಿಂದ ಕೂಡಿದೆ. ಈ ಸಂದರ್ಭದಲ್ಲಿ ವ್ಯಕ್ತಿಗಳು ಸಾಮಾಜಿಕ ಭದ್ರತೆಯನ್ನು ನಗರದಲ್ಲಿ ಪಡೆಯುವುದು ಎಂದರೆ ನಗರಗಳು ಅಂತರ್ಜಾತಿ ವಿವಾಹಗಳಿಗೆ, ಸಮಾಜ ಸುಧಾರಣೆಯಂತಹ ಪ್ರಗತಿಪರ ಚಿಂತನೆಗಳಿಗೆ, ಊಳಿಗಮಾನ್ಯ ವ್ಯವಸ್ಥೆಯನ್ನು ನಿರಾಕರಿಸಿ ಬಂದವರಿಗೆ ಆಸರೆಯ ನೆಲೆಯಾಗಿವೆ ಎಂಬ ಕಾದಂಬರಿಯ ನಿಲುವು ಅಧ್ಯಯನದ ನಿಲುವೂ ಆಗಿದೆ.

ಮಾನಸಿಕ ತುಮುಲ, ದ್ವಂದ್ವಗಳನ್ನು ಅನುಭವಿಸಿ ಅಂತಿಮವಾಗಿ ನಿರ್ಧಾರ ತೆಗೆದುಕೊಳ್ಳಬೇಕಾದ ಸಂದರ್ಭದಲ್ಲಿ ಹೊಸನೆಲೆಯ ಸಾಧ್ಯತೆಯನ್ನು ಉಳಿಸಿಕೊಂಡ ನಾ. ಡಿಸೋಜ ಅವರ 'ಪ್ರೀತಿಯೊಂದೇ ಸಾಲದೆ?' ಕಾದಂಬರಿಯ ಮನುವೇಲ ಹೆಚ್ಚು ಸ್ಪಷ್ಟವಾಗಿ ನಿಲ್ಲುವ ವ್ಯಕ್ತಿಯಾಗಿದ್ದಾನೆ. ಮನುವೇಲನ ಹೊಸ(ಹಿಂದೂ)ನೆಲೆ ಅಥವಾ ಹಳೆ(ಕ್ರೈಸ್ತ)ನೆಲೆಯ ಆಯ್ಕೆಯು ಎರಡು ಧರ್ಮಗಳಲ್ಲಿ ಒಂದನ್ನು ಆಯ್ಕೆ ಮಾಡಿಕೊಳ್ಳಬೇಕಾದ ಸಂದಿಗ್ಧದ ಆಯ್ಕೆಯೂ ಆಗಿದೆ. ಮರಳಿ ಮೂಲನೆಲೆಗೆ ಬರುವ ಆಮಿಷಗಳು, ಸೆಳೆತಗಳು, ಕೌಟುಂಬಿಕ ನೆನಪುಗಳು ಒಂದೆಡೆಯಾದರೆ, ಹೊಸನೆಲೆ ಕೊಟ್ಟ ಕೌಟುಂಬಿಕ, ಸಾಮಾಜಿಕ ಭದ್ರತೆ, ಪ್ರೀತಿ, ವಿಶ್ವಾಸಗಳು ಇನ್ನೊಂದೆಡೆಯಾಗಿ ಮನುವೇಲ (ಮಾನಪ್ಪ) ಮಾನವೀಯ ಸಂಬಂಧಗಳ ಸಂಕೀರ್ಣತೆಯ ತೊಡಕಿ(ದ್ವಂದ್ವ)ನಲ್ಲಿ ಸಿಲುಕಿ ಒದ್ದಾಡುತ್ತಾನೆ. ಸಾಕುತಂದೆ ಕರಿಯಪ್ಪ ಆತ್ಮಸಾಕ್ಷಿಯಂತೆ

ನಿರ್ಧಾರ ತೆಗೆದುಕೊಳ್ಳಲು ತಿಳಿಸುತ್ತಾನೆ. ಮನೆಗೆ ಬಂದ ಫಾದರಿಗೆ ಕುಡಿಯಲು ಹಾಲು ಕೊಟ್ಟು ಮಾನಪ್ಪ ವಿನಯದಿಂದ ಹೇಳುತ್ತಾನೆ.

'ಇನ್ನು ಈ ಪ್ರಯತ್ನ ನೀವು ಬಿಡಬೇಕು. ಮನುವೇಲ ಒಂದು ಸಾರಿ ಮಾನಪ್ಪ ಆದ. ಮತ್ತೆ ಅವನು ಮನುವೇಲ ಆಗೋದಿಲ್ಲ. ಹುಟ್ಟಿದ ಹಳ್ಳಿ ಮನೇಲಿ ಏನೇನೋ ತೊಂದರೆಪಟ್ಟುಕೊಂಡು ಓಡಿಬಂದ ಮೇಲೆ ಪಾಡಿ ಥಾಮಸ್‌ನ ಮಗ ಮನುವೇಲ ಯಾವತ್ತೋ ಸತ್ತುಹೋದ. ಈಗ ನಿಮ್ಮೆದುರು ನಿಂತಿರುವವನು ಭೂತದಕಟ್ಟೆ ಕರಿಯಪ್ಪ ಅವನ ಹೆಂಡತಿ ಪ್ರೀತಿ, ವಿಶ್ವಾಸದಿಂದ ಸಾಕಿದ ಮಗ ಮಾನಪ್ಪ..'[೨೬]

ಮಾನಪ್ಪನ ನಿರ್ಧಾರಕ್ಕೊಂದು ಮಾನವೀಯ ಸ್ಪರ್ಶದ (ಕರಿಯಪ್ಪನ ಸಂಸಾರ) ಆಸರೆಯಿದೆ. ಸಮಾಜ ಅವನನ್ನು ಕರಿಯಪ್ಪನ ಸಾಕುಮಗ ಮತ್ತು ಅಳಿಯ ಎಂದೂ ಗುರುತಿಸಿದೆ. ಕರಿಯಪ್ಪನ ಕುಟುಂಬ ಅವನಿಗೆ ಪ್ರೀತಿ, ವಿಶ್ವಾಸ, ಜೀವನದ ಭದ್ರತೆ, ಮಗಳನ್ನು ಕೊಟ್ಟು (ಕೌಟುಂಬಿಕ) ಸಂಬಂಧ ಬೆಳೆಸಿದ್ದರ ಹಿನ್ನೆಲೆಯಲ್ಲಿ ಅವನು ಹೊಸನೆಲೆಯನ್ನು ಆಯ್ಕೆ ಮಾಡಿಕೊಂಡಿದ್ದಾನೆ. 'ಯಾವುದೇ ಧರ್ಮವಾಗಲೀ ವರ್ಣಾಶ್ರಮ ಆಗಲಿ ಮೂಲತಃ ಮಾನವನ ಕಲ್ಯಾಣಕ್ಕಾಗಿ ರೂಪಿತವಾದದ್ದೇ ವಿನಾ ಮನುಕುಲದ ಅಧಃಪತನಕ್ಕಲ್ಲ. ಪ್ರೀತಿ, ವಿಶ್ವಾಸಗಳ ತಳಪಾಯ ಹೊಂದಿದ ಪ್ರೀತಿಯೊಂದೇ ಸಾಲದೆ? ಕೃತಿ, ವಿಶ್ವಮಾನವತೆಯ ಆಶಯ'[೨೭] ಎಂಬ ನಿಲುವನ್ನು ಅಧ್ಯಯನ ಭಾಗಶಃ ಬೆಂಬಲಿಸುತ್ತದೆ. ಜೊತೆಗೆ ಧರ್ಮ, ವರ್ಣಾಶ್ರಮರಹಿತ ವಿಶ್ವಮಾನವತ್ವದ ತಳಹದಿಯೇ ಪ್ರೀತಿ, ವಿಶ್ವಾಸಗಳು ಎಂದೂ ಹೇಳುತ್ತದೆ.

### ಡ. ಅಸಹಾಯಕತೆ/ ಅನಿವಾರ್ಯತೆ ಮತ್ತು ಹೊಸನೆಲೆ ಸಾಧ್ಯತೆಗಳು

ಹೊಸನೆಲೆಯಲ್ಲಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ನಿರಂತರ ಸಂಘರ್ಷ ನಡೆಸಿದ ವ್ಯಕ್ತಿಗಳು ಸೋಲುವ ಸಂದರ್ಭಗಳಲ್ಲಿ ಅಸಹಾಯಕತೆಯಿಂದ ಮಾನಸಿಕ ದ್ವಂದ್ವಕ್ಕೆ ಒಳಗಾಗುತ್ತಾರೆ. ಸೋಲೋ-ಗೆಲುವೋ ಹೊಸನೆಲೆಯನ್ನು ಅಪ್ಪಿಕೊಂಡು ಅಲ್ಲಿಯೇ ಬಾಳಬೇಕಾದ ಸಂದರ್ಭಗಳಲ್ಲಿ, ಅವರ ಅಸಹಾಯಕತೆಯು ಬದುಕಿನ ಅನಿವಾರ್ಯತೆಯಾಗಿ ರೂಪಗೊಳ್ಳುತ್ತದೆ. ಅನಿವಾರ್ಯತೆ ಅಂತಿಮ ಸಾಧ್ಯತೆಯಾಗಿಸುವ ವೈಯಕ್ತಿಕ, ಕೌಟುಂಬಿಕ, ಸಾಮಾಜಿಕ ಕಾರಣಗಳನ್ನು ಕಥನ ಸಾಹಿತ್ಯದಲ್ಲಿ ಕಾಣುತ್ತೇವೆ.

ಬ್ರಾಹ್ಮಣ್ಯವನ್ನು ತಿರಸ್ಕರಿಸಿ ಅಬ್ರಾಹ್ಮಣ್ಯದತ್ತ ಒಲಿದ ವ್ಯಾಸರಾವ್ ನಿಂಜೂರ ಅವರ 'ನಿರಾಕರಣೆ' ಕತೆಯ ಕೇಶವ ಜಡಗಟ್ಟಿದ ಹಿಂದೂ ಸಮಾಜದ ಜೀವವಿರೋಧಿ ನೀತಿಯನ್ನು ನಿರಾಕರಿಸಿದವನಾಗಿದ್ದಾನೆ. ಅವನ ಜಾತಿ ನಿರಾಕರಣೆಯಲ್ಲಿ ಕೌಟುಂಬಿಕ ಸಂಬಂಧ ಮತ್ತು ಗ್ರಾಮ ನಿರಾಕರಣೆಯನ್ನು ಗುರುತಿಸುತ್ತೇವೆ. ಮುಂಬಯಿಯಲ್ಲಿ ಗೆಳೆಯ ಅಂಗಾರನ ಆಶ್ರಯ ಪಡೆದು, ವ್ಯಾಪಾರದಲ್ಲಿ ತನ್ನನ್ನು ತೊಡಗಿಸಿಕೊಂಡ ಕೇಶವನ ಆದಾಯವನ್ನು ನಗರದ ಸ್ಥಾಪಿತ ಹಿತಾಸಕ್ತಿಗಳು ನಿಯಂತ್ರಿಸುತ್ತವೆ. ಅಂಗಾರ ತನ್ನ ಚಿಕ್ಕಪ್ಪನ ಕೊನೆಯ ಆಸೆಯಂತೆ ಪುರಾತನ ವೃತ್ತಿಯಾದ ವೇಶ್ಯಾವಾಟಿಕೆ ನಡೆಯುವ ಪ್ರದೇಶದಲ್ಲಿ ದೇವಾಲಯ ನಿರ್ಮಿಸಿ, ಆ ಸಮುದಾಯದ ಪಾಪಪ್ರಜ್ಞೆಯನ್ನು ಹಣವಾಗಿ ಪರಿವರ್ತಿಸುವ ಉಪಾಯ ಮಾಡುತ್ತಾನೆ. ಬಾಲ್ಯದಲ್ಲಿ ಅಪ್ಪನ ಒತ್ತಾಯಕ್ಕೆ ಸಂಸ್ಕೃತವನ್ನು ಕಲಿತು ಓಡಿ ಬಂದಿದ್ದ ಕೇಶವನ ಉಪಯುಕ್ತತೆ (ಅರ್ಚಕನಾಗಿ) ಈ ಸಂದರ್ಭದಲ್ಲಿ ಅವನಿಗೆ ಕಾಣುತ್ತದೆ.

> 'ಹಡೆ ಮಾಣಿ, ಥೇಟ್ ಮಂಡೆ ಸಮ ಇಲ್ಲದ್ದು. ಇಲ್ಲಿ ಇತ್ಲಾಗಿನವರು ಮಂತ್ರ ತಂತ್ರ ಕಲಿತಿದ್ದರೆ ಎಷ್ಟು ಲಾಯಕ್ಕಾಗುತ್ತಿತ್ತು ಎಂದು ನೆಪಲಾಡುತ್ತಿದ್ದರೆ, ಅವನಿಗೆ ಬ್ರಾಹ್ಮಣ್ಯ ಬೇಡವಂತೆ. ಏನಾದರೂ ಮಾಡಿ ಆ ಮಾಣಿಯನ್ನು ಒಪ್ಪಿಸಿದರೆ ಊರಿಗೇನು, ವಿಲಾಯಿತಿಗೂ ವಿಮಾನದಲ್ಲಿ ಹೋಗಬಹುದೆಂದು ಯೋಚಿಸುತ್ತಿದ್ದ ಅಂಗಾರ.' 'ಅದು ನಿನಗೆ ಮತ್ತೆ ತಿಳಿಯುತ್ತದೆ. ಈಗ ಬಾಳೆ ಹಣ್ಣಿನ ಬುಟ್ಟಿ ಗಾಡಿ ಬಿಸಾಡಿ ನಾನು ಹೇಳಿದ ಹಾಗೆ ಮಾಡು' ಎಂದು ಕಡಕ್ ಆಗಿ ಹೇಳಿದ ಅಂಗಾರನ ಮಾತಿಗೆ ಎದುರಾಡಲಾಗಲಿಲ್ಲ.[೨೮]

ಗ್ರಾಮದಲ್ಲಿದ್ದಾಗ ಜಾತಿನೆಲೆಯಲ್ಲಿ ಕೇಶವನ ಕುಟುಂಬದಿಂದ ಅಂಗಾರ ಶೋಷಣೆಗೆ ಒಳಗಾಗಿರುತ್ತಾನೆ. ಆದರೆ ಬದಲಾದ ಕಾಲ ಮತ್ತು ಸಂದರ್ಭದಲ್ಲಿ (ಅದೇ ಅಂಗಾರ ನಗರದಲ್ಲಿ ಹಣ ಮಾಡಲು) ಕೇಶವನನ್ನು ಆರ್ಥಿಕನೆಲೆಯಲ್ಲಿ ಶೋಷಣೆಗೈಯುವುದು ಮತ್ತು ಆತನ ಆಸೆ, ಆಕಾಂಕ್ಷೆ, ಸ್ವಾತಂತ್ರ್ಯಗಳನ್ನು ನಿರ್ಬಂಧಿಸುವುದನ್ನು ಕಾಣುತ್ತೇವೆ. ಯಾವ ಬ್ರಾಹ್ಮಣ್ಯ ಬೇಡವೆಂದು ಗ್ರಾಮ ನಿರಾಕರಿಸಿ ನಗರಕ್ಕೆ ಕೇಶವನು

ವಲಸೆ ಹೋಗಿದ್ದನೋ, ಆ ಮಹಾನಗರದಲ್ಲಿನ ಅವನ ಆರ್ಥಿಕ, ಸಾಮಾಜಿಕ ಅಸಹಾಯಕತೆಗಳು ಪುನಃ ಅದನ್ನೇ ಸ್ವೀಕರಿಸುವಂತೆ ಮಾಡುತ್ತವೆ. ಪರಿಸ್ಥಿತಿಯೊಂದಿಗೆ ಹೊಂದಿಕೊಳ್ಳಬೇಕಾದ ಅನಿವಾರ್ಯ ಸ್ಥಿತಿಯ ನಿರ್ಮಾಣ ಕೇಶವನಿಗೆ ಒದಗಿ ಬರಲು ಹಲವು ಕಾರಣಗಳಿವೆ. ನಗರ(ಹೊಸನೆಲೆ)ದಲ್ಲಿ ಅಂಗಾರನ ಆಶ್ರಯ ಕಳೆದುಕೊಂಡು ಬೀದಿಗೆ ಬೀಳುವ ಭಯ, ನಿರುದ್ಯೋಗದ ಚಿಂತೆ, ಗ್ರಾಮಕ್ಕೆ (ಮೂಲನೆಲೆಗೆ) ಮರಳಿದರೆ ತಂದೆ ಕೊಡುವ ಮಾನಸಿಕ, ದೈಹಿಕ ಹಿಂಸೆ, ಕಿಟ್ಟತ್ತೆಯ ಕಾಟ ಹೆಚ್ಚಾಗಿ ತಾಯಿಗೆ ಆಗುವ ತೊಂದರೆಗಳು ಇವನ ನಿರ್ಧಾರ ಗಟ್ಟಿಯಾಗಲು ಕಾರಣಗಳಾಗಿವೆ. ಕೇಶವ ಮುಂಬಯಿ ಮಹಾನಗರದಲ್ಲಿ ಹೈಟೆಕ್ ದೇವಸ್ಥಾನದ ಪೂಜಾರಿಯಾಗಿ ನೇಮಕಗೊಳ್ಳುವ, ಅದೇ ನಗರದಲ್ಲಿ ನೆಲೆ ನಿಲ್ಲುವ ನಿರ್ಧಾರದ ಹಿಂದೆ ಅವನ ಅಸಹಾಯಕತೆ ಅನಿವಾರ್ಯ ಸಾಧ್ಯತೆಯಾಗಿದೆ.

ಜಾಗತೀಕರಣದ ಸೆಳೆತಕ್ಕೆ ಸಿಕ್ಕು ರಾಷ್ಟ್ರೀಕೃತ ಬ್ಯಾಂಕಿನ ಉದ್ಯೋಗ (ಗ್ರಾಮ) ನಿರಾಕರಿಸಿ ನಗರದ ಬ್ಯಾಂಕು, ಸಾಫ್ಟ್‌ವೇರ್ ಕಂಪನಿಗಳಲ್ಲಿ ಕೆಲಸ ಮಾಡಿ, ಸೋತು ಹೋದ ಅಶೋಕ ಹೆಗಡೆ ಅವರ 'ಅಂತರದಂಗೆ' ಕತೆಯ ಮನೋಹರನದು ಉಭಯ (ಹೈಬ್ರಿಡ್) ಆರ್ಥಿಕ ವಿನಿಮಯ ಸಂಸ್ಕೃತಿಯ ಅಸಹಾಯಕತೆಯಾಗಿದೆ. ಮಧ್ಯವಯಸ್ಸಿನ ಮನೋಹರ ಯುವಕರೊಂದಿಗೆ ಸ್ಪರ್ಧಿಸುವ, ತನ್ನ ನಿತ್ಯದ ದಿನಚರಿ ತ್ಯಜಿಸಿ ಜಾಗತಿಕ ಮಾರುಕಟ್ಟೆಯ ಆಚಾರ, ವಿಚಾರಗಳನ್ನು ರೂಢಿಸಿಕೊಳ್ಳುವ ಹಂತದಲ್ಲಿ ಸ್ವಂತಿಕೆಯನ್ನು ಕಳೆದುಕೊಂಡು ಪರಿತಪಿಸುವುದನ್ನು ಅಧ್ಯಯನ ಕಂಡುಕೊಳ್ಳುತ್ತದೆ. ಮನೋಹರನ ಅಸಹಾಯಕತೆ ಇಂದಿನ ಸಾಫ್ಟ್‌ವೇರ್, ಐಟಿ, ಬಿಟಿ ಸಂಸ್ಥೆಗಳಲ್ಲಿ ಹೆಚ್ಚಿನ ಸಂಬಳಕ್ಕೆ ಸಂಸ್ಥೆಯ ಕೂಲಿಗಳಾಗಿ ದುಡಿಯುವ ಇಂಜನಿಯರುಗಳನ್ನು ನೆನಪಿಸುತ್ತದೆ. ಯಶಸ್ಸಿಗಾಗಿ ಹತ್ತು ಮೆಟ್ಟಿಲು ಎಂಬ ಪುಸ್ತಕದ ಸಹಾಯದಿಂದ ಒಂದು ಅಂತಾರಾಷ್ಟ್ರೀಯ ವ್ಯವಹಾರಗಳನ್ನು ನಿಭಾಯಿಸುವ ದಲ್ಲಾಳಿ ಸಂಸ್ಥೆಯಲ್ಲಿ ಕೆಲಸ ಪಡೆದುಕೊಳ್ಳುತ್ತಾನೆ. ಗಿರಾಕಿಗಳ ಜೊತೆ ಬೆರೆಯುವುದು, ಅವರ ಅಗತ್ಯಗಳನ್ನು ಪೂರೈಸುವುದು, ಪಡೆಯಲಿಚ್ಛಿಸುವ ಯೋಜನೆಯನ್ನು ಪಡೆಯುವತ್ತ ತಂತ್ರಗಾರಿಕೆ ರೂಪಿಸುವುದು, ಒಟ್ಟಾರೆ ಗಿರಾಕಿ ಖುಷಿಯಾಗಿರುವಂತೆ ನೋಡಿಕೊಳ್ಳುವುದು ಅವನ ಕೆಲಸವಾಗಿದೆ. ಜರ್ಮನಿಯ ಪ್ರಸಿದ್ಧ ಕಂಪನಿಯ ಐವತ್ತರ ಹರೆಯದ ಲೇಡಿಬಾಸ್‌ಳ ದೈನಂದಿನ ಅಗತ್ಯ ಪೂರೈಸಿ, ಅವಳನ್ನು ನಗಿಸುತ್ತಲೇ ಇದ್ದ ಮನೋಹರನನ್ನು ಕುರಿತು ಅವಳು, 'ಆಹಾ ಒಳ್ಳೆಯ ಹಾಸ್ಯ, ಮನು, ಇಂದು ನನ್ನ ಜೊತೆ ಮಲಗು'[10] ಎಂದು ಆಜ್ಞಾಪಿಸುತ್ತಾಳೆ. ಆದರೆ ಮನೋಹರನ ಆತ್ಮಾಭಿಮಾನ, ಕೆಲಸ ಬಿಟ್ಟರೆ ಮಗ, ಮಗಳ ಗತಿ, ಅವರ ಶಿಕ್ಷಣ, ಹೆಂಡತಿಯ ಕನಸುಗಳು? ಮತ್ತೆ ನಿರುದ್ಯೋಗಪಟ್ಟ ಮಾನಸಿಕ ಗೊಂದಲದಲ್ಲಿ ಮನೋಹರನ ಕೈಕಾಲುಗಳು ತಣ್ಣಗಾಗುತ್ತವೆ. ಮನಸ್ಸು ಮೌನದೊಪ್ಪಿಗೆ ಸೂಚಿಸಿ ಪರಿಸ್ಥಿತಿಯ ಜೊತೆ ಒಪ್ಪಂದ ಮಾಡಿಕೊಳ್ಳುತ್ತದೆ. ಇದು ಜಾಗತೀಕರಣದ ಅಂತಿಮ ಫಲವಾಗಿದ್ದು, ಪೂರ್ವ, ಪಶ್ಚಿಮಗಳನ್ನು ಎಲ್ಲ ದೃಷ್ಟಿಯಿಂದಲೂ ಒಂದುಗೂಡಿಸುವುದೇ ಜಾಗತೀಕರಣದ ಉದ್ದೇಶ ಎಂಬುದು ಇಲ್ಲಿ ಅರ್ಥ ಪಡೆಯುತ್ತದೆ. ಅಂತರದಂಗೆ ಒಬ್ಬನ ಅಂತರಂಗದ ದಂಗೆಯೂ ಹೌದು, ಹಾಗೆಯೇ ಜಾಗತೀಕರಣಕ್ಕೆ ಸಿಕ್ಕಿದ ಸಮಾಜದ ಅಂತರಾಳದ ದಂಗೆಯೂ ಹೌದು ಎಂಬುದು ಅಧ್ಯಯನ ನಿಲುವಾಗಿದೆ. ಮನುಷ್ಯರು ಸ್ವೀಕರಿಸಲು ಸಿದ್ಧರಿರಲಿ, ಇಲ್ಲದಿರಲಿ ಔದ್ಯೋಗೀಕರಣ, ಜಾಗತೀಕರಣ, ಮುಕ್ತ ಸ್ವಾತಂತ್ರ್ಯದ ಪರಿಣಾಮ ಇಂದು ಎಲ್ಲರ, ಎಲ್ಲದರ ಮೇಲೂ ದಾಳಿ ಮಾಡುತ್ತಿದೆ. ಬಡತನ, ನಿರುದ್ಯೋಗ, ಏರುತ್ತಿರುವ ಜನಸಂಖ್ಯೆ ಇಂತಹ ಸಮಸ್ಯೆಗಳೊಂದಿಗೆ ಭಾರತದ ಜನಸಾಮಾನ್ಯರು, ರೈತರು ಇದನ್ನು ಸ್ವೀಕರಿಸಬೇಕಾಗಿದೆ. ಏರುತ್ತಿರುವ ಬೆಲೆಗಳು, ಹೊಸಹೊಸ ತೆರಿಗೆಗಳು, ಮಾರುಕಟ್ಟೆ ಸ್ಪರ್ಧೆ, ಕೈಗೆಟುಕುವ ಸೌಲಭ್ಯಗಳು, ಶಾಲಾ, ಕಾಲೇಜು, ವೃತ್ತಿ ಶಿಕ್ಷಣದ ಹೆಚ್ಚಿದ ಶುಲ್ಕಗಳು ಮನುಷ್ಯರಲ್ಲಿಯ ಮಾರು, ಕೊಳ್ಳುವ ಪೈಪೋಟಿಗಳ ಮಧ್ಯೆ ಸಾಮಾನ್ಯ ವರ್ಗ ಕೊಚ್ಚಿ ಹೋದರೂ, ಅನಿವಾರ್ಯವಾಗಿ ವಾಸ್ತವಿಕ ಸ್ಥಿತಿಗೆ ಹೊಂದಿಕೊಂಡು ಹೋಗಲೇಬೇಕೆಂಬ ಯಾಂತ್ರಿಕತೆಗೆ ಅವರು ಒಗ್ಗಿಕೊಂಡಿದ್ದಾರೆ. ಇದಕ್ಕೆ ಮನೋಹರ ಉದಾಹರಣೆಯಾಗಿದ್ದಾನೆ.

ನಗರೀಕರಣ, ಜಾಗತೀಕರಣಗಳ ದಾಳಿಗೆ ಒಳಗಾದ ನಗರ ಬದುಕಿನ ತಣ್ಣಗಿನ ಕ್ರೌರ್ಯ ಮತ್ತು ಕರಾಳತೆಗಳು ಹೀಗಿದ್ದರೆ, ಇದೇ ಕಾರಣಗಳಿಗಾಗಿ ಬದಲಾದ ಆರ್ಥಿಕ, ಸಾಮಾಜಿಕ ಸಂದರ್ಭಗಳಲ್ಲಿ, ಮೂಲ ನೆಲೆ ಬಯಸಿ ಗ್ರಾಮಕ್ಕೆ ಮರಳಿದ ವ್ಯಕ್ತಿಗಳು ಕಂಡುಕೊಳ್ಳುವ ಗ್ರಾಮಗಳ ರೂಪಾಂತರವನ್ನು ಕಥನ ಸಾಹಿತ್ಯದಲ್ಲಿ ದಾಖಲಿಸಲಾಗಿವೆ. ವೆಂಕಟೇಶ ಹುಣಶೀಕಟ್ಟಿ ಅವರ 'ನಾನು ಹಳ್ಳಿ ಸೇರಿದಾಗ' ಕಥೆಯ ನಾಯಕ ಹದಿನೈದು ವರ್ಷಗಳ ಕಾಲ ಮುಂಬಯಿಯಲ್ಲಿದ್ದು, ಹಣದುಬ್ಬರ ಹಾಗೂ ನಗರದ

ಯಾಂತ್ರಿಕ ಬದುಕಿನಿಂದ ಬೇಸತ್ತು ತನ್ನ ಗ್ರಾಮಕ್ಕೆ (ಮೂಲನೆಲೆಗೆ) ಮರಳುತ್ತಾನೆ. ಗ್ರಾಮ ಹಲವು ಬದಲಾವಣೆಗಳನ್ನು ಕಂಡು ತನ್ನ ಮೂಲರೂಪವನ್ನು ಕಳೆದುಕೊಂಡಿರುತ್ತದೆ. ಜನರ ನಡವಳಿಕೆ, ನೈತಿಕತೆಗಳಲ್ಲಿ ಬದಲಾವಣೆಯಾಗಿ ದೈನಂದಿನ ವಸ್ತುಗಳನ್ನು ದೊರಕಿಸಿಕೊಳ್ಳಲು ಜನಸಾಮಾನ್ಯರು ಪರದಾಡುವುದನ್ನು, ಗ್ರಾಮದ ನೆಮ್ಮದಿ ರಾಜಕೀಯಗೊಂಡಿದ್ದನ್ನು ಕಥೆ ಅನಾವರಣಗೊಳಿಸಿದೆ. 'ಇದೀಗ, ಕೆಟ್ಟು ಪಟ್ಟಣ ಸೇರು ಎಂಬ ಗಾದೆ ಸುಳ್ಳೆನಿಸತೊಡಗಿತು, ನಾಲ್ಕಾರು ಎಕರೆ ಜಮೀನನ್ನು ಉಳಿಸಿಕೊಳ್ಳಲು ನಮ್ಮ ನೆಮ್ಮದಿಯನ್ನೆ ಒತ್ತೆಯಿಟ್ಟು ಹಳ್ಳಿಗೆ ಬಂದದ್ದಾಗಿತ್ತು'[೨೧] ಎಂಬ ನಿರೂಪಕನ ಮಾತುಗಳು ಗ್ರಾಮ ಸಂಸ್ಕೃತಿ ತೀವ್ರ ಬದಲಾಗುತ್ತಿರುವ ವಿಷಯವನ್ನು ಸ್ಪಷ್ಟಗೊಳಿಸಿವೆ. ನಗರೀಕರಣ, ಜಾಗತೀಕರಣದ ಪ್ರಭಾವಗಳು ಇಂದಿನ ಬಹುತೇಕ ಗ್ರಾಮಗಳನ್ನು ಮೂಲ ಸ್ವರೂಪದ ಗ್ರಾಮಗಳನ್ನಾಗಿ ಉಳಿಸಿಲ್ಲ. ಏರುತ್ತಿರುವ ಬೆಲೆಗಳು, ಯಾಂತ್ರೀಕರಣಗೊಳ್ಳುತ್ತಿರುವ ಕೃಷಿಪದ್ಧತಿ, ಬೆಳೆದ ಫಸಲಿಗೆ ಬೆಲೆ ಇಲ್ಲದೆ ರೈತರ ಆತ್ಮಹತ್ಯೆಗಳು ಹಳ್ಳಿಯ ಕೆಳವರ್ಗದ ಜನರ ಬದುಕನ್ನು ದಾರುಣಗೊಳಿಸಿವೆ. ಬದುಕಿನ ಸೇವಾ ವಿಧಾನವಾಗಿದ್ದ ಕೃಷಿ ವಾಣಿಜ್ಯೀಕರಣಗೊಂಡ ಬಗೆ ಖುಷಿಯ ವಿಚಾರವಲ್ಲ. ಸ್ವಾವಲಂಬಿಯಾಗಿದ್ದ ರೈತ ಸಾವಯವ ಪದ್ಧತಿ ಮರೆತು, ಆಧುನಿಕ ಪದ್ಧತಿ ಮೊರೆ ಹೊಕ್ಕು ಸಾಲಗಾರನಾಗಿರುವುದು ಸುಳ್ಳಲ್ಲ. ಸಗಣಿ ಗೊಬ್ಬರ, ಕುರಿಗೊಬ್ಬರದ ಬಳಕೆ ನಿಂತಿದೆ. ಬಿತ್ತನೆಯ ಬೀಜ, ರಸಗೊಬ್ಬರ, ಕೀಟನಾಶಕಗಳು ರೈತನನ್ನು ಬಲಿ ತೆಗೆದುಕೊಳ್ಳುತ್ತಿವೆ. ಇಂದಿನ ಸ್ಥಿತಿಯಲ್ಲಿ ರೈತ ಸಾವಯವ ಕೃಷಿ ಪದ್ಧತಿ, ಮಿಶ್ರಬೆಳೆ ಬೆಳೆವ ಪದ್ಧತಿಯತ್ತ ಒಲವು ತೋರಬೇಕಾಗಿದೆ. ಆದರೆ ಇಂದು ಆಧುನಿಕತೆಯ ಒತ್ತಡಗಳಲ್ಲಿ, ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವ ತವಕದಲ್ಲಿ ಗ್ರಾಮೀಣ ಸಮುದಾಯಗಳು, ದುಡಿಯುವ ವರ್ಗಗಳು ಇವೆ. ಈ ಸಂದರ್ಭದಲ್ಲಿ ಶ್ರಮಿಕ ಸಂಸ್ಕೃತಿಗೆ ಧ್ವನಿಯಾಗಬೇಕಾದ ಪ್ರಭುತ್ವ ನಗರಕೇಂದ್ರಿತ ಆಡಳಿತವನ್ನು ಹುಟ್ಟುಹಾಕಿರುವುದು ಅದರ ಎಲ್ಲ ವಿಫಲತೆಗೆ ಸಾಕ್ಷಿಯಾಗಿದೆ. ಮೂಲನೆಲೆಯತ್ತ ದೃಷ್ಟಿಹರಿಸಿದ ವ್ಯಕ್ತಿಗಳು ಸೋತು ಹೊಸನೆಲೆ(ನಗರ)ಯತ್ತ ಮತ್ತೆ ಮುಖ ಮಾಡುವುದು ಕಂಡುಬರುತ್ತದೆ.

ಅಶೋಕ ಹೆಗಡೆ ಅವರ 'ಆಲಿಕಲ್ಲು' ಕತೆಯ ನಾಗರಾಜ ಅಂತಹ ಇನ್ನೊಬ್ಬ ವ್ಯಕ್ತಿ ಆಗಿದ್ದಾನೆ. ಅಪ್ರಾಪ್ತ ವಯಸ್ಸಿನಲ್ಲಿ ಚಿಕ್ಕ ಕಾರಣಕ್ಕಾಗಿ ಗ್ರಾಮ ನಿರಾಕರಿಸಿ ನಗರ ಸೇರಿದ ನಾಗರಾಜ ಹಳ್ಳಿಯವನಾಗಿ ಯಾವೊತ್ತೂ ನಗರದ ಬದುಕನ್ನು ಆಸ್ವಾದಿಸಲಿಲ್ಲ. ಸದಾ ನೆನಪಾಗಿ ಕಾಡುವ ಹಳ್ಳಿಯ ಗೂಡನ್ನು ಹಲವು ವರ್ಷಗಳ ನಂತರ ಮತ್ತೆ ಹುಡುಕಿಕೊಂಡು ಬಂದ ಅವನನ್ನು ಹಳ್ಳಿ ಸ್ವಾಗತಿಸಿದ್ದಾದರೂ ಹೇಗೆ? ಮನೆಯ ಪರಿಸ್ಥಿತಿ ಮೊದಲಿನಂತಿರಲಿಲ್ಲ. ಬದುಕು ಜರ್ಝರವಾಗಿ ಆ ಕುಟುಂಬವನ್ನು ಅಪ್ಪಿ ನಿಂತಿರುತ್ತದೆ. ಶುಭ್ರ ಮಡಿಯುಟ್ಟು ಪೂಜೆ ಮಾಡುತ್ತಿದ್ದ ತಾಯಿ ಹರಿದ ಸೀರೆಯಲ್ಲಿರುತ್ತಾಳೆ. ಪಡಸಾಲೆಯಲ್ಲಿ ಕುಳಿತ ಕೆದರಿದ ಬಿಳಿ ತಲೆಯ ಅಕ್ಕ, ಹಾಲಿಲ್ಲದ ಮೊಲೆ ಚೀಪುತ್ತಿರುವ ಅವಳ ಕೂಸು ಆ ಮನೆಯ ಆರ್ಥಿಕ ಸ್ಥಿತಿಗೆ ಹಿಡಿದ ಕನ್ನಡಿಯಾಗಿವೆ. ಬಾಗಿಲು ಬಡಿದು ಒಳ ಬಂದ ಅಪ್ಪನ ಕೈಯಲ್ಲಿ ಬೇಟೆಯಾಡಿದ ಮೊಲಗಳು, ಕುಡಿದು ಓಲಾಡುವ ಸ್ಥಿತಿ! ಮಂತ್ರ ಉಚ್ಚರಿಸುವ ಬಾಯಲ್ಲಿ ಬೈಗಳು, ಕುಡಿದ ವಾಸನೆ. ನಾಗರಾಜನ ಕುಟುಂಬದ ಆರ್ಥಿಕ ಸ್ಥಿತಿ ಕೆಳಮಟ್ಟದಲ್ಲಿದ್ದು, ಇದಕ್ಕೆ ಕಾರಣ ಕುಟುಂಬಕ್ಕೆ ಆಸರೆಯಾಗಬೇಕಿದ್ದ ಏಕೈಕ ಮಗನ ನಗರ ಪಲಾಯನವಾಗಿದೆ. ವಯಸ್ಸಾದ ತಂದೆ ತಾಯಿ, ಅಸಹಾಯಕ ಅಕ್ಕ, ಉಣ್ಣಲು ಅನ್ನವಿಲ್ಲದೆ ಮಾಂಸಾಹಾರಿಯಾದ ಸಂಸಾರ, ದಾರಿತಪ್ಪಿದ ಸಾಂಸ್ಕೃತಿಕ ಆಚರಣೆಗಳು, ಬದುಕಲು ಕಂಡುಕೊಂಡ (ರಾತ್ರಿ ಜರುಗುವ ಘಟನೆಗಳು) ಮಾರ್ಗಗಳು ಉಚ್ಚ ಜಾತಿಯ ಕುಟುಂಬಗಳು ಸಹ ಗ್ರಾಮೀಣ ಪರಿಸರದಲ್ಲಿ ಆರ್ಥಿಕವಾಗಿ ಶೋಷಣೆಗೊಳಗಾಗುವ ಸ್ಥಿತಿಯನ್ನು ನಿವೇದಿಸಿವೆ. 'ಶೋಷಣೆ ಎಂಬ ಪದಕ್ಕೆ ಜಾತಿಭೇದವಿಲ್ಲ. ಆರ್ಥಿಕ, ಸಾಮಾಜಿಕ, ರಾಜಕೀಯ ರಂಗದಲ್ಲೆಲ್ಲ ಶೋಷಣೆಗೆ ಒಳಗಾದ ಎಲ್ಲ ಜನರೂ ದಲಿತರೆ'[೨೨] ಎಂಬ ಮಾತನ್ನು ಅಧ್ಯಯನ ತಾತ್ವಿಕವಾಗಿ ಒಪ್ಪಿಕೊಳ್ಳುತ್ತದೆ. ಯಾವ ಊರು, ಮನೆ, ಅಕ್ಕ, ಅಪ್ಪ ಅಮ್ಮ ಎಲ್ಲವನ್ನೂ ದಿನದ ಇಪ್ಪತ್ನಾಲ್ಕು ಗಂಟೆಗಳ ಕಾಲ ನೆನಪು ಮಾಡಿಕೊಂಡು ತಲ್ಲಣಿಸುತ್ತ ನಗರ ಬದುಕನ್ನು ಕಳೆದಿದ್ದನೋ, ಅದೇ ನಾಗರಾಜ ಅಂತಹ ದಾರುಣ ಬದುಕಿನಲ್ಲಿ ಒಂದು ರಾತ್ರಿಯೂ ತಂಗುವ ಸಾಹಸ ಮಾಡುವುದಿಲ್ಲ. ಅಂದು ರಾತ್ರಿ ನಾಗರಾಜ ಎರಡನೇ ಬಾರಿ ಗ್ರಾಮ ನಿರಾಕರಿಸುತ್ತಾನೆ.

> 'ನಾಗರಾಜ ದಡಕ್ಕನೇ ಎದ್ದು ನಿಂತ. ಆ ಕತ್ತಲಲ್ಲಿ ಏನೂ ಕಾಣಲಿಲ್ಲ. ಬದಲಿಗೆ ಯಾರೋ ಕದ ತಟ್ಟಿದ ಹಾಗೆ, ಯಾರೋ ಗುಸುಗುಸನೆ ಮಾತನಾಡಿದ್ದು, ಮತ್ತೆ ಯಾರೋ ಮನೆಯಿಂದ ಹೊರಬಿದ್ದ ಹಾಗೆ, ನಾಗರಾಜ ಚಾಪೆಯ ಪಕ್ಕಕ್ಕಿರುವ ತನ್ನ ಚೀಲ ನೋಡಿಕೊಂಡ, ತೆನೆಮುತ್ತು ಬಸ್ಸು ಇನ್ನು ಹದಿನೈದು ನಿಮಿಷಕ್ಕೆ ಊರಿನ ಮೊದಲ ತಿರುವನ್ನು ಸೇರಲಿತ್ತು.'[೨೩]

ಬದಲಾದ ಕೌಟುಂಬಿಕ ರೀತಿ, ನೀತಿ ಮತ್ತು ವರ್ತನಾಂಶಗಳು ನಾಗರಾಜನನ್ನು ಮತ್ತೇ ಹೊಸ ನೆಲೆಗೆ ಮರಳಿ ಹೋಗುವಂತೆ ಮಾಡುತ್ತವೆ. ಗ್ರಾಮೀಣ ಪರಿಸರವನ್ನು ಆಶ್ರಯಿಸಿ ಬಂದ ಇಂತಹ ಯುವಕರು ಅಲ್ಲಿಯ ಬದಲಾದ ಪರಿಸರದಿಂದ ವಿಕರ್ಷಿತರಾಗುವುದು ಗಮನಾರ್ಹ ಅಂಶವಾಗಿದೆ.

ವ್ಯಕ್ತಿ ಮತ್ತು ಕುಟುಂಬಗಳು ಶಾಶ್ವತವಾಗಿ ಹೊಸನೆಲೆಯಲ್ಲಿ ನೆಲೆಸಲು ಕಾರಣವಾಗುವ ಅಂಶಗಳನ್ನು ಪ್ರಸ್ತುತ ಕಥನ ಸಾಹಿತ್ಯ ಹೀಗೆ ಗ್ರಹಿಸಿದೆ. * ಗ್ರಾಮದ ಮೂಲನೆಲೆಯಿಂದ ನಗರ ಸೇರಿ ಉದ್ಯೋಗ, ನೌಕರಿ ಅವಲಂಬಿತ ವ್ಯಕ್ತಿಗಳು ಹೊಸನೆಲೆಯ ಕುರಿತು ಹಲವಾರು ಆಕರ್ಷಣೆಯನ್ನು ಹೊಂದಿರುತ್ತಾರೆ. ನಗರದ ಸೌಲಭ್ಯಗಳು, ಬಾಳಸಂಗಾತಿ, ಮಕ್ಕಳ ಶಿಕ್ಷಣ ಮುಂತಾದ ಕಾರಣಗಳು ಅವರನ್ನು ಶಾಶ್ವತ ನಗರವಾಸಿಗಳನ್ನಾಗಿ ಮಾಡುತ್ತವೆ. * ಕುಟುಂಬದ ರಕ್ಷಣೆ, ಆರ್ಥಿಕ ಭದ್ರತೆ, ಮೂಲನೆಲೆಯ ಕುರಿತು ವಿರೋಧಿ ಭಾವಗಳು ವ್ಯಕ್ತಿ, ಕುಟುಂಬಗಳನ್ನು ಹೊಸನೆಲೆಯಲ್ಲಿ ಶಾಶ್ವತವಾಗಿ ನೆಲೆಸುವಂತೆ ಮಾಡುತ್ತವೆ. * ಸಮಾಜಸೇವೆ ಕೈಗೊಂಡು ಯಶಸ್ಸು ಗಳಿಸುವ ಆಸೆಯಿಂದ (ನಾರಾಯಣ, ಸಾವಿತ್ರಿ ಮೊದಲಾದವರು), ಒಂದು ವ್ಯವಸ್ಥೆಯನ್ನು ಬುಡಮೇಲು ಮಾಡುವ ಪ್ರಗತಿಪರ ಧೋರಣೆಯನ್ನು ಗುರಿಯಾಗಿ ಹೊಂದಿ (ಶಿಕಾರಿ ಕಾದಂಬರಿಯ ನಾಗಪ್ಪ) ಅದನ್ನು ಸಾಧಿಸುವ ಛಲದಿಂದ ಹೊಸ ನೆಲೆಯನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. * ಸಂಪ್ರದಾಯವನ್ನು ನಿರಾಕರಿಸಿ ಅಂತರ್ಜಾತಿ ಮರುಮದುವೆಯಾಗಿ (ಹೆಜ್ಜೆ ಕಾದಂಬರಿಯ ಶಾಂಭವಿ) ಸಾಮಾಜಿಕ ಭದ್ರತೆಯನ್ನು ಪಡೆಯಲು ಮತ್ತು ಊಳಿಗಮಾನ್ಯ ವ್ಯವಸ್ಥೆಯನ್ನು ನಿರಾಕರಿಸಿದ ವ್ಯಕ್ತಿಗಳು ಸಾಮಾಜಿಕ ಭದ್ರತೆ ಬಯಸಿ (ಹೆಜ್ಜೆ ಕಾದಂಬರಿಯ ರುಕ್ಕು) ಮುಂತಾದವರು ಹೊಸನೆಲೆಯನ್ನು ಶಾಶ್ವತವಾಗಿ ಆಯ್ಕೆ ಮಾಡಿಕೊಳ್ಳುತ್ತಾರೆ. * ಹೊಸನೆಲೆಯಲ್ಲಿ ಆರ್ಥಿಕ ಅಭದ್ರತೆ, ಅಸಹಾಯಕತೆಗೆ ಒಳಗಾದಾಗ (ನಿರಾಕರಣೆ ಕತೆಯ ಕೇಶವ, ಅಂತರದಂಗೆ ಕತೆಯ ಮನೋಹರ, ಆಲಿಕಲ್ಲು ಕಥೆಯ ನಾಗರಾಜ ಮುಂತಾದವರು) ಬೇರೆ ದಾರಿ ಕಾಣದೆ ಹೊಸನೆಲೆಯಲ್ಲಿ ಅನಿವಾರ್ಯವಾಗಿ ನೆಲೆಸಲು ನಿರ್ಧರಿಸುತ್ತಾರೆ. * ಆರ್ಥಿಕ, ಸಾಮಾಜಿಕ, ಭಾವುಕ ಕಾರಣಗಳನ್ನು ಹೊರತುಪಡಿಸಿ ಗ್ರಾಮ/ನಗರದ ಸುರಕ್ಷಿತ ನೆಲೆಯಲ್ಲಿ ನಿಂತ ವ್ಯಕ್ತಿಗಳು ಅವುಗಳನ್ನು ಬದಲಾಯಿಸಲು ಇಚ್ಛಿಸುವುದಿಲ್ಲ. ಹೊಸ ಸಂಬಂಧಗಳನ್ನು ಬಿಟ್ಟುಕೊಟ್ಟು ಮೂಲನೆಲೆಗೆ ಹಿಂತಿರುಗಲು ಇಷ್ಟಪಡದ ವ್ಯಕ್ತಿಗಳ ನಿರ್ಧಾರದ ಹಿಂದೆ ಆರ್ಥಿಕ, ಧಾರ್ಮಿಕ, ಭಾವನಾತ್ಮಕ ಭದ್ರತೆಯಿರುವುದು ಕಂಡುಬರುತ್ತದೆ.

## ೩. ಮೂಲ/ಹೊಸನೆಲೆ ಆಯ್ಕೆಯ ದ್ವಂದ್ವ ಮತ್ತು ಸಾಧ್ಯತೆಗಳು

### ಅ. ವೈಯಕ್ತಿಕ ನೆಲೆ ಮತ್ತು ದ್ವಂದ್ವ

ಗ್ರಾಮ/ನಗರಗಳ ಸಂಘರ್ಷದ ನಂತರ ವ್ಯಕ್ತಿ, ಕುಟುಂಬಗಳು ಹೊಸನೆಲೆಯನ್ನು ಅಥವಾ ಮೂಲ ನೆಲೆಯನ್ನು ಆಯ್ಕೆ ಮಾಡಿಕೊಳ್ಳುವುದು ಸಾಮಾನ್ಯವಾಗಿ ಕಂಡುಬರುವ ಸಂಗತಿಯಾಗಿದೆ. ಕೆಲವು ಸಂದರ್ಭಗಳಲ್ಲಿ, ಇವೆರಡರಲ್ಲಿ ಯಾವುದಾದರೂ ಒಂದನ್ನು ಆಯ್ಕೆ ಮಾಡಿಕೊಳ್ಳಲಾರದ ದ್ವಂದ್ವವು ಒಂದು ನಿರ್ಧಾರವಾಗುತ್ತದೆ, ಈ ನಿರ್ಧಾರವೇ ಅಂತಿಮ ಸಾಧ್ಯತೆಯಾಗಿ ನಿಲ್ಲುತ್ತದೆ. ಬದುಕಿನಲ್ಲಿ ಅಳವಡಿಸಿಕೊಂಡು ಬಂದ ಮೌಲ್ಯಾಧಾರಿತ ತತ್ವ, ಸಿದ್ಧಾಂತಗಳಿಗೆ ಚ್ಯುತಿ ಬಂದಾಗ, ಇಲ್ಲವೆ ಅವುಗಳನ್ನು ಬದಲಾಯಿಸಿಕೊಳ್ಳಬೇಕಾದ ಸಂದರ್ಭಗಳು ಮನುಷ್ಯರ ಬದುಕಿನಲ್ಲಿ ಕಾಣಿಸಿಕೊಂಡಾಗ ಅವರು ಹೇಗೆ ಪ್ರತಿಕ್ರಿಯಿಸುತ್ತಾರೆ, ಯಾವ ಆಯ್ಕೆಯನ್ನು ಅಂತಿಮ ಸಾಧ್ಯತೆಯಾಗಿ ನಿರ್ಧರಿಸುತ್ತಾರೆ ಎಂಬುದರ ಕುರಿತು ಚರ್ಚಿಸಬಹುದು.

ಬೋಳಿಗೆರೆ ಗ್ರಾಮದಲ್ಲಿ ಊಳಿಗಮಾನ್ಯ ವ್ಯವಸ್ಥೆಯ ವಿರುದ್ಧ ವ್ಯವಸ್ಥಿತ ಹೋರಾಟವನ್ನು ಮಾಡಿದ್ದ ಆರ್.ವಿ. ಭಂಡಾರಿ ಅವರ 'ತಲೆಮಾರು' ಕಾದಂಬರಿಯ ವೀರೇಶ ಮಂಗಳೂರಿನಲ್ಲಿ ನಗರ ಬದುಕಿನ ಆರ್ಥಿಕ ತೊಂದರೆಗಳ ಬಿಸಿಯನ್ನು ಅನುಭವಿಸುತ್ತಾನೆ. ಜಾತಿ, ಲಿಂಗಾಧಾರಿತ ಶೋಷಣೆಯನ್ನು ಪ್ರತಿಭಟಿಸಿ ಸ್ವತಂತ್ರ ಬದುಕನ್ನು ಅರಸಿ, ತನ್ನವೇ ಆದ ತತ್ವ, ಸಿದ್ಧಾಂತಗಳನ್ನು ಗೌರವಿಸಿ ಬದುಕು ಸಾಗಿಸಿದ ಅವನಿಗೆ ನಗರದ ಸ್ಥಾಪಿತ ಹಿತಾಸಕ್ತಿಗಳ ವಿರುದ್ಧ ಧ್ವನಿ ಎತ್ತುವುದು ಸಾಧ್ಯವಾಗುವುದಿಲ್ಲ. ಬೆಲೆ ಏರಿಕೆ, ಕೌಟುಂಬಿಕ ಸಮಸ್ಯೆಗಳಿಂದ ಆರ್ಥಿಕ ಮುಗ್ಗಟ್ಟಿಗೆ ಬಲಿಯಾಗಿ, ಪತ್ರಿಕೆಯ ಮಾಲಿಕರಾದ ರಾವ್ ಅವರು ಸಿಬ್ಬಂದಿಗಳ ಸಮೇತ ಪತ್ರಿಕೆಯನ್ನು ಬಂಡವಾಳಶಾಹಿಗಳಿಗೆ ಮಾರುತ್ತಾರೆ. ಮಾಲೀಕತ್ವ ಬದಲಾವಣೆಯ ಈ ಪ್ರಕ್ರಿಯೆ ಆರ್ಥಿಕವಾಗಿ ಅನುಕೂಲವಾಗಿತ್ತಾದರೂ ಪತ್ರಿಕಾ ಧರ್ಮದ ಬದ್ಧತೆಯನ್ನು ಅಡವಿಟ್ಟಂತಾಗುತ್ತದೆ. ವೀರೇಶನ

ಬದುಕಿನಲ್ಲಿ ಇದುವರೆಗೂ ಕಾಯ್ದುಕೊಂಡು ಬಂದ ಪ್ರಾಮಾಣಿಕತೆ, ಮೌಲ್ಯಗಳಲ್ಲಿ ಬದಲಾವಣೆಗಳು ಕಂಡುಬರುತ್ತವೆ. ಹಣಕ್ಕಾಗಿ ಮೌಲ್ಯಾಧಾರಿತ ಪತ್ರಿಕೋದ್ಯಮದ ವೃತ್ತಿಯನ್ನು ಬಲಿಕೊಡುವುದೆ, ಇಲ್ಲವೆ ಪ್ರಾಮಾಣಿಕತೆಯ ಬೆನ್ನತ್ತಿ ಮರಳಿ ಗ್ರಾಮಕ್ಕೆ ಮರಳುವುದೆ ಎಂಬ ಪ್ರಶ್ನೆಗಳು ಅವನನ್ನು ದ್ವಂದ್ವದಲ್ಲಿ ಸಿಲುಕಿಸಿವೆ. ಗ್ರಾಮೀಣ ಪ್ರದೇಶದಿಂದ ನಗರಕ್ಕೆ ವಲಸೆ ಬಂದವರಿಗೆ ನಗರದ ಬದುಕು ಬಹಳಷ್ಟು ಕೊಡುತ್ತದೆ ಮತ್ತು ಕಸಿದುಕೊಳ್ಳುತ್ತದೆ. ಶ್ರಮದ ಬದುಕನ್ನು ಬಯಸಿದವರಿಗೆ ದುಡಿಯುವ ಮಾರ್ಗಗಳು, ಹಣ ಮಾಡುವ ದುರಾಸೆಗೆ ಒಳಗಾದವರಿಗೆ ವಂಚನೆಯ ನೂರೆಂಟು ಒಳದಾರಿಗಳನ್ನು ತೋರಿಸುತ್ತದೆ. ನಗರಗಳಲ್ಲಿ ಜನ ಸಾಮಾನ್ಯರ ಜೀವನ ಬಂಡವಾಳಶಾಹಿ ಮತ್ತು ರಾಜಕೀಯ ಶಕ್ತಿಗಳೆಂಬ ಪ್ರಭಾವಿ ವಲಯಗಳ ಆಕ್ಟೋಪಸ್ ಹಿಡಿತದಲ್ಲಿ ಸಿಕ್ಕಿಕೊಂಡು ನರಳುತ್ತಿವೆ. ಪತ್ರಿಕಾ ರಂಗವೂ ಇದಕ್ಕೆ ಹೊರತಾಗಿಲ್ಲ. ಸೈದ್ಧಾಂತಿಕ ನೆಲೆಗಟ್ಟಿಲ್ಲದ ಬಂಡವಾಳಶಾಹಿಗಳ ಕೈಯಲ್ಲಿ ಪತ್ರಿಕೆಗಳು ಸಿಕ್ಕಿರುವ, ಅವು ದರಗಳ ಸ್ಪರ್ಧೆಯಲ್ಲಿ ಪರದಾಡುವ ವಿಚಾರ ಕನ್ನಡಿಗರ ಮುಂದಿದೆ. ವೀರೇಶನ ಸ್ಥಿತಿಯೂ ಇದಕ್ಕೆ ಹೊರತಾಗಿಲ್ಲ.

> 'ತಾಟಿನಲ್ಲಿ ಉಣ್ಣುವುದು ನೇಮ, ನೀತಿ ಬಿಟ್ಟವರು, ಪಟ್ಟಣದ ಜನ' ಎನ್ನುತ್ತಿದ್ದ ಗಂಪುವಿನ ಮುಗ್ಧ, ಸ್ವಾಭಿಮಾನಿ ಮಗ (ಪುಟ ೧೩) ನಗರದ ಪ್ರತಿಷ್ಠಿತ ಲಾಡ್ಜಿನಲ್ಲಿ ಬಿಗರೆ ಮಾಂಸದ 'ಕಬಾಬ'ದ ಮುಂದೆ ಕುಳಿತಿದ್ದ.[೩೪] ಲುಂಗಿಯನ್ನು ಕಟ್ಟಿಕೊಳ್ಳಲು ಅಭ್ಯಾಸವಿರದ ಹಳ್ಳಿಯ ವೀರೇಶ (ಪುಟ ೬೭) ಹೋಟಲಿನಲ್ಲಿ ಪಕ್ಕಕ್ಕೆ ನಿಂತ ಸುಂದರಿಯ ಕೈ ಹಿಡಿದು ಜಗ್ಗಿ ಅವಳ ಮುಖದ ಹತ್ತಿರ ಹುಟಿ ಒಯ್ಯುತ್ತಾನೆ. (ಪುಟ ೧೭೪)

ಗಾಮೀಣ ವ್ಯಕ್ತಿತ್ವದ ಮುಗ್ಧತೆ, ನಂಬಿಕೆಗಳನ್ನು ಅರಗಿಸಿಕೊಂಡು ಕಾಲಕ್ಕೆ ತಕ್ಕಂತೆ ಬದಲಾಯಿಸುವ ನಗರದ ಗುಣವನ್ನು ವೀರೇಶ ಬೆಳೆಸಿಕೊಂಡಿರುವುದನ್ನು ಇಲ್ಲಿ ಕಾಣುತ್ತೇವೆ. ಅವನ ಬದುಕು ಕಂಡ ವಿಚಿತ್ರ ಬದಲಾವಣೆಗಳು ಅವನನ್ನು ದ್ವಂದ್ವದಲ್ಲಿ ಕೆಡವಿ ಮ್ಲಾನವದನನನ್ನಾಗಿ ಮಾಡುತ್ತವೆ. ಅದೇ ದ್ವಂದ್ವದಲ್ಲಿ ಹೋಟೆಲ್ ಬಿಟ್ಟು ಹೊರಬರುತ್ತಾನೆ. ಹೊರಗೆ ಗುಡುಗು, ಮಿಂಚು, ಬಿರುಗಾಳಿ, ಮಳೆ ! ಒಳಗೆ, ಗ್ಲಾಸ್‌ಗಳ ಕಿಣಿಕಿಣಿ, ನಗು, ಸುರೆ, ಸುಂದರಿಯರ ಮಾದಕ ಧ್ವನಿಗಳ ಅನುರಣನ, ಬೇಡದ ವಾತಾವರಣ!! ವೀರೇಶ ತ್ರಿಶಂಕುವಾಗಿ ರಸ್ತೆ ಬದಿ ನಿಲ್ಲುತ್ತಾನೆ. ಆಯ್ಕೆಯ ದ್ವಂದ್ವ ಇಲ್ಲಿ ಗೆಲುವು ಸಾಧಿಸುತ್ತದೆ. ಹರಿಯುವ ನೀರಿನ ಜೊತೆ ಈಜುವತ್ತ ಅವನ ದೃಷ್ಟಿ ನೆಟ್ಟಿದೆಯೆಂದು ಅಧ್ಯಯನ ಊಹಿಸಬಹುದಾಗಿದೆ! ಆದರೆ ವೀರೇಶ ಬಿರುಗಾಳಿಯಲ್ಲಿ ನಿಂತು ಕಾಯುವುದು ಏತಕ್ಕೆ, ಇದೆಲ್ಲವನ್ನು ತೊರೆದು ಮತ್ತೆ ಪಲಾಯನವಾದಿಯಾಗಲೋ? ಏನನ್ನೂ ನಿರ್ಧರಿಸದಿರುವುದು ವೀರೇಶನ ಆಯ್ಕೆಯಾಗಿದೆ.

ವೀರೇಶನ ಸೈದ್ಧಾಂತಿಕ ದ್ವಂದ್ವ (ಸಂದಿಗ್ಧತೆ) ವ್ಯಾಸರಾವ್ ನಿಂಜೂರ ಅವರ 'ಉಸಿರು' ಕಾದಂಬರಿಯ ರವಿಯನ್ನೂ ಕಾಡುತ್ತದೆ. ಅಡ್ಕನಡ್ಕ(ಗ್ರಾಮ)ದ ಸುಬ್ರಾಯ ಭಟ್ಟರ ಮಗ ರವಿಗೆ ಬೇಸಾಯ, ಯಕ್ಷಗಾನಗಳಲ್ಲಿ ಆಸಕ್ತಿಯಿತ್ತು. ಮಣ್ಣಿನ ಮಗನಾಗಿ ಸೃಷ್ಟಿಕ್ರಿಯೆಯಲ್ಲಿ ಪಾಲ್ಗೊಂಡು ಈ ನೆಲದ ಅನ್ನದಾತನಾಗುವ ಕನಸು, ಪ್ರಾಮಾಣಿಕತೆ ಅವನದಾಗಿದೆ. ಅಪ್ಪನ ಮಹತ್ವಾಕಾಂಕ್ಷೆಯಂತೆ ಇಂಜನಿಯರಿಂಗ್ ಓದಲು ಮಣಿಪಾಲ ಪಟ್ಟಣವನ್ನು ಸೇರಿ, ಪ್ರತಿವರ್ಷ ಫೇಲಾಗುತ್ತ, ಅತ್ತ ಇಂಜನಿಯರ್ ಆಗದೆ ಇತ್ತ ರೈತನಾಗದೇ ತ್ರಿಶಂಕು ಸ್ಥಿತಿ ತಲುಪುತ್ತಾನೆ. ನಗರದಲ್ಲಿ ನೆಲೆ ನಿಲ್ಲಲಾರದೆ ನಗರ ನಿರಾಕರಿಸಿ ಬರಲಾರದ ದ್ವಂದ್ವ ಅವನನ್ನು ಕಾಡುತ್ತದೆ. ರತ್ನ ಎಂಬ ಹುಡುಗಿಯಲ್ಲಿ ಆಸಕ್ತನಾಗಿ, ಅವಳನ್ನು ಎದೆಗಪ್ಪಿ ಚುಂಬಿಸುತ್ತಾನೆ ಹಾಗೂ ಅದೊಂದು ಅದ್ಭುತವೆಂದುಕೊಳ್ಳುತ್ತಾನೆ. ತನ್ನ ಸ್ನೇಹಿತ ಕೇಶವನಿಗೆ ಬರೆದ ಪತ್ರದಲ್ಲಿ ಅವನ ಮಾನಸಿಕ ದ್ವಂದ್ವ ಪ್ರಕಟವಾಗಿದ್ದು ಇಡೀ ವ್ಯಕ್ತಿತ್ವ ಆಧ್ಯಾತ್ಮಿಕತೆಯತ್ತ ಸರಿದುದನ್ನು ಕಾಣಬಹುದು.

> ಒಂದು ವರ್ಷದಲ್ಲಿ ಪಾಸಾದರೆ ನನಗೆ ಬಿ.ಇ. ಕೊಡುತ್ತಾರೆ. ಅಪ್ಪ ಅಡಕೆ ಮರಕ್ಕೆ ಸುತ್ತು ಬರುತ್ತಿದ್ದಾರೆ. (ಪುಟ ೨೧೪) 'ನಾನು ಮರಿ. . .ಶೂನ್ಯದೊಂದಿಗೆ ಸಂಸಾರ ಮಾಡುತ್ತಿದ್ದೇನೆ. ದಾರ್ಶನಿಕನಾಗುತ್ತಿದ್ದೇನೆಂದು ಬೆಚ್ಚಿ ಬೀಳಬೇಡ. ಈಗಲೂ ನನ್ನ ಬಾಳಿನಲ್ಲಿ ಒಳ್ಳೊಳ್ಳೆಯ ಕ್ಷಣಗಳು ಬರುವುದುಂಟು. ಪ್ರಿನ್ಸಿಪಾಲರು ಕೋಣೆಗೆ ಕರೆದು ಪಾಸು ಮಾಡಿಸುತ್ತೇನೆ ಎಂದರಯ್ಯಾ. ದೊಡ್ಡ ಜೋಕಾಯಿತು. ಮೇಜಿನ ಮೇಲಿನ ಪೇಪರ್ ವೈಟ್. . .[೩೫] 'ಹಿರಿಯಡ್ಕದಲ್ಲಿ ತಾಳ, ಮದ್ದಲೆಯಾಗಿದ್ದು ನಿನಗಲ್ಲದಿದ್ದರೂ ನನಗೆ ಸುದ್ದಿಯೆ. ಇವೆಲ್ಲ ಏಕೆ ಬರೆದೆ ಎಂದು ನೀನು ಆಶ್ಚರ್ಯಪಡುತ್ತೀಯ. ಅದರೆ ನೀನು ನನ್ನನ್ನು ಹುಚ್ಚ ಅನ್ನಲಿಕ್ಕಿಲ್ಲ. ಅದರೆ ನಾನು ಹೇಳುತ್ತೇನೆ. ನನ್ನ ಅಪ್ಪ ಹುಚ್ಚ, ನಮ್ಮ ಪ್ರಿನ್ಸಿಪಾಲರು ಹುಚ್ಚ, ಕೆಲವೊಮ್ಮೆ ಇಡೀ ಜಗತ್ತು ಹುಚ್ಚು, ಥತ್! ಇದರ ಮನೆ ಹಾಳಾಗ, (ಪುಟ ೨೬೩)

ರವಿಯ ಬದುಕು ಇತರರಿಗಿಂತ ಭಿನ್ನವಾಗಿದ್ದು ನೇರ ನಡೆಯ ವರ್ತನೆಗಳಿಂದ ಕೂಡಿದೆ. ಅಪ್ಪನ ಆಕಾಂಕ್ಷೆಯನ್ನು ಪ್ರತಿಭಟಿಸಲೂ ಆಗದೆ, ಪೂರೈಸಲೂ ಆಗದೆ ಇಂಜನಿಯರಿಂಗ್ ಕೋರ್ಸ್‌ಗೆ ಮಣ್ಣು ಹೊತ್ತು ಫೇಲಾಗಿ, ಹಸ್ತ ಸಾಮುದ್ರಿಕ, ಭವಿಷ್ಯ ಹೇಳುವುದು ಇತ್ಯಾದಿ ಕಲಿಯುತ್ತಾ ಸಿನಿಕನಂತಾಗುತ್ತಾನೆ. ತನಗೇ ಅರ್ಥವಾಗದ ಬದುಕನ್ನು ಕಟ್ಟಿಕೊಳ್ಳುತ್ತ ಅಪ್ಪನ ಪ್ರತಿಷ್ಠೆಯನ್ನು ಇಂಜನಿಯರಿಂಗ್ ಪಾಸು ಮಾಡಿ ಹೆಚ್ಚಿಸಲಾರದೆ ರವಿಯ ಭವಿಷ್ಯ ಅಪ್ಪನ ಮಹಾತ್ವಾಕಾಂಕ್ಷೆಗೆ ಬಲಿಯಾಗುವುದು, ಇಂದಿನ ಅನೇಕ ಶ್ರೀಮಂತ ಮಕ್ಕಳ ಪಾಡಾಗಿದೆ. ರವಿ ಇತ್ತ ಹಳ್ಳಿಗೂ ಸೇರದೆ, ಅತ್ತ ನಗರಕ್ಕೂ ಹೊಂದದೆ ತ್ರಿಶಂಕುವಿನಂತಾಗುತ್ತಾನೆ. ಗ್ರಾಮ/ನಗರ ನೆಲೆಯ ಅಂತಿಮ ನಿರ್ಧಾರಕ್ಕೆ ಬರದೆ ದ್ವಂದ್ವದಲ್ಲಿ ಸಿಲುಕುವುದು ಅವನ ಮಾತುಗಳಿಂದ ವ್ಯಕ್ತವಾಗುತ್ತದೆ. ವೀರೇಶ ಮತ್ತು ರವಿ ಇವರು ತಮ್ಮ ತತ್ವ, ಸಿದ್ಧಾಂತಗಳಿಗೆ ಚ್ಯುತಿ ಬಂದಾಗ ದ್ವಂದ್ವಾತ್ಮಕತೆಯಿಂದ ನರಳುವುದು ತಿಳಿಯುತ್ತದೆ. ಜೀವನದ ಉಳಿಯುವಿಕೆಯ (Struggling for Existance) ಹೋರಾಟದಲ್ಲಿ ಗ್ರಾಮೀಣ ಯುವಕರಾದ ಇವರು ಯಾವುದನ್ನು ವಿರೋಧಿಸುತ್ತ ಬೆಳೆಯುತ್ತಾರೋ ಅದನ್ನೆ ಅಪ್ಪಿಕೊಳ್ಳುವುದನ್ನು ಗಮನಿಸುತ್ತೇವೆ. ನಗರ ಪರಿಸರದ ಸ್ಥಾಪಿತ ಹಿತಾಸಕ್ತಿಗಳು ಯುವ ಜನಾಂಗವನ್ನು ಬದಲಾಯಿಸಿ, ಹೇಗೆ ತನ್ನ ಆರ್ಥಿಕ ಬಲದ ಬೂಜ್ವಾ ವ್ಯವಸ್ಥೆಯ ಹಿಡಿತದಲ್ಲಿ ತೆಗೆದುಕೊಳ್ಳುತ್ತವೆ ಎಂಬುದನ್ನು ಗಮನಿಸಬಹುದು.

ಆರ್. ವಿ. ಭಂಡಾರಿ ಅವರ 'ಇನ್ನೂ' ಕಥೆಯ ಎಸ್. ಪರಮೇಶ್ವರ ಮೂವತ್ತೈದು ವರ್ಷ ನಗರವಾಸದಿಂದ ತನ್ನ ಗ್ರಾಮ(ಅರೆಅಂಗಡಿ)ಕ್ಕೆ ಮರಳಿ ಬರುತ್ತಾನೆ. ಗ್ರಾಮ ನಿರೀಕ್ಷೆ ಮೀರಿ ಬದಲಾಗಿದ್ದುದು ಅವನ ಗಮನಕ್ಕೆ ಬರುತ್ತದೆ. ಅಭಿವೃದ್ಧಿ ಹೆಸರಿನಲ್ಲಿ ಸೌಲಭ್ಯ ದೊರಕಿಸಿಕೊಂಡರೂ ಗ್ರಾಮೀಣರು ಕೌಟುಂಬಿಕ, ಸಾಮಾಜಿಕ ಆಚರಣೆ, ಸಂಪ್ರದಾಯ, ಜಾತಿಪದ್ಧತಿಗಳಿಂದ ಕಳಚಿಕೊಂಡಿರುವುದಿಲ್ಲ. ಪರಮೇಶ್ವರಶಾಸ್ತ್ರಿ ತಂದೆ ವಿಘ್ನೇಶ್ವರಶಾಸ್ತ್ರಿಗಳನ್ನು ವಿರೋಧಿಸುತ್ತ ಅಂತರ್‌ಜಾತಿ ವಿವಾಹವಾಗಿ ಎಸ್. ಪರಮೇಶ್ವರನಾಗಿದ್ದಾನೆ. ಗಾಂಧೀಜಿಯವರ 'ಹಳ್ಳಿಗೆ ಹಿಂತಿರುಗಿ' ಎಂಬ ಘೋಷಣೆ, 'ಹೋಗುವೆನು ನಾ ಹೋಗುವೆನು ನಾ ನನ್ನ ದೂರದ ಹಳ್ಳಿಗೆ' ಎಂಬ ಕುವೆಂಪುರವರ ಕಾವ್ಯದ ಕರೆಯನ್ನು ಗ್ರಾಮದೊಂದಿಗೆ ನಿರಾಕರಿಸಿದವನಾಗಿದ್ದಾನೆ. ವಸುಸೇನ ಎಂಬ ಮುಕ್ರಿ ಜಾತಿಯ ಹುಡುಗನನ್ನು ಓದಿಸಿ ಮಾಸ್ತರಿಕೆ ಕೆಲಸ ಕೊಡಿಸಿದ ವಿಘ್ನೇಶ್ವರ ಶಾಸ್ತ್ರಿಗಳು (ಪ್ರಗತಿಪರರೆಂಬ ಸ್ವಹೆಗ್ಗಳಿಕೆ) ಕೊನೆಯವರೆಗೂ ಮಗನ ಅಂತರ್‌ಜಾತಿ ವಿವಾಹವನ್ನು ಸ್ವೀಕರಿಸದೇ ದ್ವಂದ್ವಾತ್ಮಕ ತರ್ಕದಲ್ಲಿ ಸಿಲುಕಿ ಕೊನೆಯುಸಿರೆಳೆಯುತ್ತಾರೆ. ಪರಮೇಶ್ವರ ನಗರನೆಲೆಯಲ್ಲಿಯೂ ಬದುಕನ್ನು ಸ್ವೀಕರಿಸಲಾರದೆ, ಅಂತಿಮ ಕಾಲದಲ್ಲಿ ಗ್ರಾಮಕ್ಕೆ ಹಿಂತಿರುಗಿ ಸಹೋದರನಿಗೆ 'ನೋಡಪ್ಪಾ ತಮ್ಮಾ, ನಲವತ್ತು ವರ್ಷ ವನವಾಸ, ಅಜ್ಞಾತವಾಸ ಅನುಭವಿಸಿ ಬಂದಿದ್ದೇನೆ. ನನ್ನ ಪಾಲಿನ ಪಾಲು ಕೊಡು. ಅದಕ್ಕೆ ಮನಸ್ಸು ಬಾರದಿದ್ದರೆ ಒಂದು ಮನೆ ಕಟ್ಟುವಷ್ಟು ಜಾಗ ಕೊಡು'[೨೩] ಎಂಬ ದೀನಸ್ಥಿತಿಯ ಬೇಡಿಕೆ ತಂದಿದ್ದಾನೆ ಎಂಬುದು ಪ್ರಗತಿಶೀಲ ಗ್ರಾಮೀಣ ವ್ಯಕ್ತಿತ್ವದ ನಗರನೆಲೆಯ ಸೋಲೆಂಬುದನ್ನು ಸಾಹಿತ್ಯ ಗ್ರಹಿಸಿದೆ. ಅಪ್ಪನ ಶ್ರಾದ್ಧದ ದಿನ ಗ್ರಾಮದ ಮನೆಗೆ ಬಂದ ಪರಮೇಶ್ವರ, ವಸು ಹೊಳ್ಳಿಯ ಮೇಲೆ ಕೂತು ಉಂಡು ಬಾಳೆ ಎಲೆ ಎಸೆದು ಬರುವುದನ್ನು ನೋಡುತ್ತಾನೆ. ಜಾತಿ ಪದ್ಧತಿ ಇನ್ನೂ ಉಳಿದುಕೊಂಡಿದೆಯಲ್ಲ ಎಂಬ ಗ್ರಹಿಕೆಯೆ ಅವನನ್ನು ವಿಹ್ವಲಗೊಳಿಸುತ್ತದೆ. ಗ್ರಾಮ ಎಷ್ಟೇ ಅಭಿವೃದ್ಧಿ ಹೊಂದಿದರೂ ಜಾತಿಪದ್ಧತಿ ತೊಲಗಿಲ್ಲ, ಅಭಿವೃದ್ಧಿ ಏನಿದ್ದರೂ ಭೌತಿಕವಾದದ್ದು ಮಾತ್ರ ಎಂಬ ಸೂಚನೆ ಕೊಡುತ್ತದೆ. 'ಇವೊತ್ತಿನ ಪ್ರಸಂಗ ಕರ್ಣಪರ್ವ, ನಾನೇ ಕರ್ಣ' ಎಂದು ವಸು ಹೇಳುವುದರಲ್ಲಿ, ಶಾಸಿಗಳ ಕುಟುಂಬಕ್ಕೆ ವಸು ಕರ್ಣನಾದರೂ ನಿಜಾರ್ಥದಲ್ಲಿ ತಾನೇ ಕರ್ಣನೆನಿಸಿದ ಅತಂತ್ರಭಾವ, ದ್ವಂದ್ವಗಳು ಪರಮೇಶ್ವರನದಾಗಿವೆ. ತಾನೇ ಇಷ್ಟಪಟ್ಟು (ನಗರ ಮತ್ತು ವಿಜಾತಿ ಹೆಣ್ಣನ್ನು) ನಗರದಲ್ಲಿದ್ದರೂ ಸಾಂಪ್ರದಾಯಿಕ ತಂದೆಯನ್ನು ಇನ್ನಿಲ್ಲದಂತೆ ದ್ವಂದ್ವಾತ್ಮಕತೆಗೆ ನೂಕಿದ್ದ ಪರಮೇಶ್ವರ ಅಂತಿಮವಾಗಿ ಯಾವ ಆಯ್ಕೆ ಮಾಡಿಕೊಳ್ಳಬೇಕೆಂದು ತಿಳಿಯದೇ ಗೊಂದಲದಲ್ಲಿ ಬೀಳುತ್ತಾನೆ. ಅತ್ತ ಪಾಂಡವರನ್ನು ಸೇರಲಾರದ, ಇತ್ತ ಕೌರವನ ಪರ ನಿಂತೂ ಮನಸ್ಸುಕೊಟ್ಟು ಹೋರಾಡಲಾರದ ಕರ್ಣನ ದ್ವಂದ್ವಾತ್ಮಕ ವ್ಯಕ್ತಿತ್ವದ ರೂಪಕದೊಂದಿಗೆ ಪರಮೇಶ್ವರನ ಬದುಕು, ಅತ್ತ ನಗರ ಇತ್ತ ಗ್ರಾಮಕ್ಕೆ ಸೇರದೇ ಅತಂತ್ರವಾದ ಸ್ಥಿತಿಯನ್ನು ಕಥನ ಧ್ವನಿಸಿದೆ. ಇಲ್ಲಿ ಅಧ್ಯಯನವು ವಿಕರ್ಷಣೆಯಲ್ಲಿಯೂ ಗ್ರಾಮ ನಗರಗಳು ಪರಸ್ಪರ ಪ್ರಭಾವಿಸುವ ದ್ವಂದ್ವಾತ್ಮಕತೆ ಅನಂತವಾಗಿರುವುದನ್ನು ಗುರುತಿಸುತ್ತದೆ. ಅವನ ಜೀವನ ಪದ್ಧತಿ, ನಡೆನುಡಿ, ನಂಬಿಕೆ, ಸಂಪ್ರದಾಯಗಳೊಂದಿಗೆ ವಿಘ್ನೇಶ್ವರಶಾಸ್ತ್ರಿ(ಗ್ರಾಮ)ಗಳು ಮಗನನ್ನು ನಿರಾಕರಿಸಿದರೂ, ಬಂಡೆದ್ದ ಮಗನ ರೂಪದಲ್ಲಿ ನಗರ ಅವರನ್ನು ಜೀವಮಾನವಿಡೀ ಕಾಡು(ಪ್ರಭಾವಿಸು)ತ್ತದೆ. ಪರಮೇಶ್ವರ

ಊರು(ಗ್ರಾಮ) ಬಿಟ್ಟರೂ ಊರು ಅವನನ್ನು ಬಿಡದೆ ತಂದೆ, ತವರಿನ ರೂಪದಲ್ಲಿ (ಯಾವತ್ತೂ ಕಾಯುವ ನೆನಪುಗಳು) ದ್ವಂದ್ವವಾಗಿ ಅವನನ್ನು ಕಾಡುತ್ತದೆ. ಇಬ್ಬರ ಮನದ ತುಮುಲ, ದುಗುಡಗಳು ಬೇರೆ ಬೇರೆಯಾಗಿದ್ದರೂ ಅವು ಪರಸ್ಪರ ನಿರಾಕರಣೆ(ವಿಕರ್ಷಣೆ, Repulsion)ಯ ನೆಲೆಯಲ್ಲಿ ಪ್ರಭಾವಿಸುವ ರೀತಿ ಅದ್ಭುತವೆಂದು ಹೇಳಬಹುದು.

ಇದೇ ಲೇಖಕರ 'ಮರದ ಕೆಳಗೆ ಬಿದ್ದ ಕೋಡ' ಕಥೆಯ ರಾಮನಾಥ ನಗರದಲ್ಲಿ ಬಿ. ಎ. ಮುಗಿಸಿ ಗ್ರಾಮದಲ್ಲಿ ಆದರ್ಶ ಒಕ್ಕಲಾಗಬೇಕೆಂದು ಬಂದ ಯುವಕ. ಆದರೆ ಗ್ರಾಮದ ಗೊಡ್ಡು ರಾಜಕೀಯ, ಜಾತಿ ಪದ್ಧತಿ, ಸ್ವಾರ್ಥಿಗಳ, ವಂಚಕರ ಗೂಡಾದ ಪಂಚಾಯಿತಿ, ಸರಕಾರಿ ಸಂಸ್ಥೆಗಳು, ಅಪ್ಪನ ಜಿಮಣತನ ಅವನನ್ನು ಅಸಹಾಯಕ ಮತ್ತು ನಿಷ್ಪ್ರಯೋಜಕ ಸ್ಥಿತಿಗೆ ತಳ್ಳಿ, ಗ್ರಾಮ ನಗರಗಳ ಅಂತಿಮ ಆಯ್ಕೆಯಲ್ಲಿ ದ್ವಂದ್ವ ಸೃಷ್ಟಿಸುತ್ತವೆ. ಒಂದೆಡೆ ಗ್ರಾಮದಲ್ಲಿ ಆಧುನಿಕ ಪ್ರಜ್ಞೆಯ ಯುವಕರ ಗುಂಪು ನಿರ್ಮಿಸುವ ಆಸೆ, ಇನ್ನೊಂದೆಡೆ ಗ್ರಾಮ ನಿರಾಕರಿಸಲೇಬೇಕಾದ ಮಾನಸಿಕ ಅಸ್ವಸ್ಥತೆಗಳು ರಾಮನಾಥನನ್ನು ಕಾಡಿವೆ.

> 'ಒಂದು ಕ್ಷಣಕ್ಕೆ ಅಪ್ಪನ ಆಸ್ತಿಗಿಂತ ವಿಶ್ವನಾಥನ ವಿಶ್ವಾಸದ ಮಾತೇ ಮಿಗಿಲಾದದ್ದಾಯಿತೇಕೆ ಎಂದು ಚಿಂತಿಸಿದೆ. ಒಂದೊಂದೇ ಪುಸ್ತಕ, ಬಟ್ಟೆಯನ್ನು ಸೂಟಕೇಸಿನಲ್ಲಿ ತುರುಕುತ್ತ ನಾನೇನಾದೆ, ಮರದ ಕೆಳಗೆ ಉರುಳಿ ಬಿದ್ದ ಕೋಡವನ್ನು ತಮ್ಮ ಗುಂಪಿನಲ್ಲಿ ಮಂಗಗಳು ಪ್ರವೇಶ ಕೊಡುವುದಿಲ್ಲವಂತೆ. ಹಾಗೆ, ಹಾಗೆ, ನಾನು ಮರದಿಂದ ಉರುಳುತ್ತಿರುವೆನೆ ಎಂದುಕೊಳ್ಳುತ್ತೇನೆ.'[೨೪]

ಇಂತಹ ಯೋಚನೆಗಳು ಸಂದರ್ಭದ ಅತಂತ್ರ ಸ್ಥಿತಿಯನ್ನು ಬಿಂಬಿಸುತ್ತ ವ್ಯಕ್ತಿ ಗ್ರಾಮ ಬದುಕಿಗೆ ಹೊರಗಿನವನಾದ ಪ್ರಜ್ಞೆಯನ್ನು ಧ್ವನಿಸಿವೆ. ಗ್ರಾಮಗಳ ಮುಖ್ಯ ರಸ್ತೆ ಹೇಗೆ ನಗರವನ್ನು ತಲುಪುತ್ತದೆಯೋ ಹಾಗೇ ನಗರಗಳ ಉಪ ರಸ್ತೆಗಳು ಗ್ರಾಮವನ್ನು ತಲುಪುತ್ತವೆ. ಈ ರಸ್ತೆಯ ಮೇಲೆ ನಿಂತ ರಾಮನಾಥ, ಪರಮೇಶ್ವರ ಮುಂತಾದ ಲಕ್ಷಾಂತರ ವ್ಯಕ್ತಿಗಳಿಗೆ ರಸ್ತೆಗಳು ಸಾಗುವುದು ನಗರದಿಂದ ಗ್ರಾಮದ ಕಡೆಗೋ, ಗ್ರಾಮದಿಂದ ನಗರದ ಕಡೆಗೋ ಎಂಬ ವಿಸ್ಮಯವನ್ನು ಉಂಟುಮಾಡುತ್ತವೆ. ಮುಂದೆ ಸಾಗಲೋ ಅಥವಾ ಹಿಂದೆ ಬರಲೋ ಎಂಬ ದ್ವಂದ್ವ ರಸ್ತೆಯ ಮೇಲಿರುವವರನ್ನು ಕಾಡಿರುವುದು ಪ್ರಸ್ತುತ ಸಾಹಿತ್ಯದಲ್ಲಿ ಅನಾವರಣಗೊಂಡಿದೆ.

### ಬ. ಕೌಟುಂಬಿಕ ನೆಲೆ ಮತ್ತು ದ್ವಂದ್ವ ಸಾಧ್ಯತೆಗಳು

ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ವ್ಯಕ್ತಿ ಮತ್ತು ಕುಟುಂಬಗಳು ಹಾಗೂ ಅವುಗಳ ಪರಸ್ಪರ ಸಂಬಂಧಗಳಿಗೆ ಮಹತ್ವದ ಸ್ಥಾನವಿದೆ. ವೈಯಕ್ತಿಕ ನಿರ್ಧಾರಗಳು ಕುಟುಂಬ ವ್ಯವಸ್ಥೆಯ ಮೇಲೆ ಪರಿಣಾಮ ಬೀರಿದಂತೆ, ಕುಟುಂಬವು ಸಹ ವ್ಯಕ್ತಿಯ ಆಗುಹೋಗುಗಳ ಮೇಲೆ ಹಿಡಿತ ಹೊಂದಿರುವುದು ಕಂಡುಬರುತ್ತದೆ. ಪರಸ್ಪರ ಪೂರಕವಾಗಿರುವ ಈ ಸಂಬಂಧಗಳು ಅಷ್ಟೇ ಪರಸ್ಪರ ಪ್ರಭಾವ ಬೀರುವುದು ಪ್ರಸ್ತುತ ಕಥನ ಸಾಹಿತ್ಯದಲ್ಲಿ ಅನಾವರಣಗೊಂಡಿದೆ.

ಸದಾನಂದ ಸುವರ್ಣ ಅವರ 'ಯಾರು ಹೊಣೆ' ಕಥೆಯ ಮಧುಕರನ ನಿರ್ಧಾರದ ಮೇಲೆ ಕೌಟುಂಬಿಕ ಚಿಂತನೆಯ ಪ್ರಭಾವವನ್ನು ಕಾಣುತ್ತೇವೆ. ಅವನಿಗೆ ನಗರದಲ್ಲಿ ಒಂದು ನೆಲೆಯಾಗಿ ಮನೆ ಇದೆ, ನೌಕರಿ ಇದೆ, ಗ್ರಾಮದಲ್ಲಿ ಸಹಕರಿಸುವ ತಂದೆ, ತಾಯಿಯರ ಸಂಸಾರ ಇದೆ. ತನ್ನನ್ನು ಮದುವೆಯಾಗು ಎಂದು ನಗರದ ಪರಿಚಿತ ಉದ್ಯೋಗಸ್ಥ ಗೆಳತಿ ರಮಾ ಕೇಳಿದಾಗ ಅವಳು ಅಪರಿಚಿತಳಂತೆ ಕಾಣುತ್ತಾಳೆ. ಇದಕ್ಕೆ ಕಾರಣವೇನು, ಮಧುಕರನ ಚಿಂತನೆ ದ್ವಂದ್ವಗಳಿಂದ ಕೂಡಿದೆ. ರಮಾಳನ್ನು ಮದುವೆಯಾದರೆ ತನ್ನ ಬದುಕಿನಲ್ಲಿ ಘಟಿಸಬಹುದಾದ ಸಾಧಕ, ಬಾಧಕಗಳ ಕುರಿತು ಮಧುಕರ ಚಿಂತಿಸುತ್ತಾನೆ. ಅವನದು ಅವಿಭಕ್ತ ಕುಟುಂಬ. ಇವನ ನಿರ್ಧಾರಗಳು ಅವನ ಕುಟುಂಬದ ಮೇಲೆ ಪೂರಕ ಅಥವಾ ವಿಷಮ ಪರಿಣಾಮ ಬೀರುವ ಸಾಧ್ಯತೆಗಳನ್ನು ತಳ್ಳಿ ಹಾಕುವಂತಿಲ್ಲ. ಅವನು ನಗರದಲ್ಲಿದ್ದರೂ ತಂದೆ, ತಾಯಿಯರ ಹಿಡಿತದಲ್ಲಿದ್ದಾನೆ. ಅವರ ವ್ಯಕ್ತಿತ್ವಗಳು ಇವನನ್ನು ಪ್ರಭಾವಿಸುತ್ತಿರುವುದು ಸ್ಪಷ್ಟವಿದೆ. ಇದು ನಗರ ಕುರಿತು ಅವನ ಆಸಕ್ತಿ ಕುಂದುತ್ತಿರುವ ಗ್ರಾಮದತ್ತ ಎಳೆಯುತ್ತಿರುವುದರ ಸೂಚನೆಯೆಂದು ಊಹಿಸಬಹುದಾಗಿದೆ. ಗ್ರಾಮದಲ್ಲಿರುವ ತನ್ನ ಕುಟುಂಬದ ಕಾಳಜಿ ಇದರ ಹಿಂದಿರುವ ವೃತ್ತತ್ಯಾಗಿ ಬಲ(Centrifugal Force)ವಾಗಿ ಕಾರ್ಯ ನಿರ್ವಹಿಸುತ್ತದೆ. ಈ ವಾಕ್ಯಗಳನ್ನು ಗಮನಿಸಬಹುದು.

'ಯೋಚಿಸಿದ್ದನೇ ಹೊರತು ನಿರ್ಧಾರಕ್ಕೆ ಬರಲೇ ಇಲ್ಲ. ಅದಕ್ಕೆ ಪ್ರಬಲವಾದ ಕಾರಣವೇನಂದರೆ ಅವಳು ಗುಜರಾತಿ. ತಾನು ವಿಜಾತಿಯ ಯುವತಿಯನ್ನು ಮದುವೆಯಾದರೆ ಮನೆಯಲ್ಲಿ ಹಗರಣ ಖಂಡಿತ. ಅಲ್ಲದೆ ಹುಟ್ಟೂರಿನಲ್ಲಿ ವಿವಾಹ ವಯಸ್ಕರರಾದ ಇಬ್ಬರು ತಂಗಿಯರಿದ್ದಾರೆ.'[೩೮]

ಹಳ್ಳಿಯಲ್ಲಿರುವ ತಂಗಿಯರ ಕುರಿತಾದ ಅವನ ಕಾಳಜಿ ಅವನ ದ್ವಂದ್ವವನ್ನು ಹೆಚ್ಚಿಸಿ ನಿರ್ಧಾರ ತೆಳುವಾಗುವಂತೆ ಮಾಡಿದೆ. ಅವನು ರಮಾಳನ್ನು (ನಗರ) ನಿರಾಕರಿಸುವುದರ ಮೂಲಕ ಗ್ರಾಮವನ್ನು ಸ್ವೀಕರಿಸುವ ಮುನ್ಸೂಚನೆಗಳಿದ್ದರೂ ಅಲ್ಲಿ ಗಟ್ಟಿ ನೆಲೆ ಕಂಡುಬರುವುದಿಲ್ಲ. ಅವನು ಇದಕ್ಕಾಗಿ ನಗರವನ್ನೂ ತ್ಯಜಿಸಲಾರದವನಾಗಿದ್ದಾನೆ. ಗ್ರಾಮ/ನಗರ ಮತ್ತು ನಗರ/ಗ್ರಾಮಗಳ ವೃತ್ತದ ಸುತ್ತ ತಿರುಗುತ್ತ ಯಾವ ಆಯ್ಕೆಯ ಸಾಧ್ಯತೆಗಳನ್ನು ಹೊಂದದೇ ಇರುವುದು ಅವನ ಆಯ್ಕೆಯಾಗಿದೆ.

ವ್ಯಾಸರಾವ್ ನಿಂಜೂರ ಅವರ 'ಉಸಿರು' ಕಾದಂಬರಿಯ ನಾರಾಯಣ ಕೂಡ ಇದೇ ರೀತಿಯ ಸಮಸ್ಯೆಯಲ್ಲಿ ಸಿಲುಕಿದ್ದರೂ, ಅವನ ನಿರ್ಧಾರದ ಹಿಂದೆ ಅನೇಕ ಸ್ವಾರ್ಥಜನ್ಯ ಕಾರಣಗಳನ್ನು ಗುರುತಿಸುತ್ತೇವೆ. ಪಡಮುನ್ನೂರಿ(ಗ್ರಾಮ)ನಲ್ಲಿ ಹೆಂಡತಿ, ಮಗುವನ್ನಿಟ್ಟು, ವೃದ್ಧ ತಂದೆ, ತಾಯಿಗಳ ಆರೈಕೆ ಮಾಡುವ ಹೊಣೆ ಹೊರಿಸಿ ತಾನು ಮೈಸೂರಿನಲ್ಲಿ ಹೋಟೆಲ್ ನಡೆಸುತ್ತಿರುತ್ತಾನೆ. ಇತ್ತ ಗ್ರಾಮ ನಿರಾಕರಿಸಿಯೂ ಗ್ರಾಮದ ಸಂಬಂಧಗಳನ್ನು ನಿರಾಕರಿಸಲಾರದ, ನಗರ ಆಯ್ಕೆ ಮಾಡಿಕೊಂಡರೂ ಸಂಸಾರವನ್ನು ನಗರದಲ್ಲಿಟ್ಟು ನೆಲೆ ಕಂಡುಕೊಳ್ಳಲಾರದ ನಾರಾಯಣನ ಸ್ಥಿತಿ ಎರಡು ದೋಣಿಗಳಲ್ಲಿ ಹೆಜ್ಜೆಯಿಟ್ಟು ನಡೆಯುವ ವ್ಯಕ್ತಿಯಂತಾಗಿದೆ. ಇವನ ಈ ದ್ವಂದ್ವ ನಿಲುವಿನ ಹಿಂದೆ ಹಲವು ಕಾರಣಗಳಿವೆ. ಮೊದಲನೆಯದಾಗಿ ಸುರಾಲಿ, ಕೊಕ್ಕರ್ಣೆಯಲ್ಲಿದ್ದ ಗೇಣಿ ರೈತರ ಮೇಲಿನ ತನ್ನ ಕುಟುಂಬದ ಯಜಮಾನಿಕೆಯ ಹಿಡಿತವನ್ನು ಭದ್ರಪಡಿಸುವುದಾಗಿದೆ.

> 'ಇವೆಲ್ಲ ನಿನಗೆ ಅರ್ಥವಾಗುವುದಿಲ್ಲ ಸಾವಿತ್ರಿ, ಅಪ್ಪಯ್ಯನ ಕಾಲ ಬೇರೆ. ಅವರಿರುವವರೆಗೆ ಅವರ ಸೌಜನ್ಯಕ್ಕೆ ಒಕ್ಕಲುಗಳು ತಲೆಬಾಗುತ್ತಿದ್ದರು. ಈಗ ಈ ಗೌರ್ಮೆಂಟು ಸಾವಿರಾರು ಕಾನೂನು ಮಾಡಿದೆ. ಇಷ್ಟರಲ್ಲೆ ನಮಗೆ ಆಗದವರು ಏನಾದರೂ ಹೇಳಿಕೊಟ್ಟರೆ ಮತ್ತೆ ನಮ್ಮ ಪಾಡು ಬೇಡ.'[೩೯]

ಎಂಬ ನಾರಾಯಣನ ಮಾತು ಟೆನೆನ್ಸಿ(ಭೂಸುಧಾರಣೆ) ಕಾನೂನಿನ ಕುರಿತು ಭಯ ಹೊಂದಿರುವುದೇ ಆಗಿದೆ. ಗೇಣಿ ರೈತರು ಕೈತಪ್ಪಿ ಹೋಗಬಹುದೆಂಬ ಭಯ ಅಂದು ಭೂ ಒಡೆಯರನ್ನು ದ್ವಂದ್ವಾತ್ಮಕತೆಗೆ ನೂಕಿರುವುದಕ್ಕೆ ಈ ಸಂದರ್ಭ ಸಾಕ್ಷಿಯಾಗಿದೆ. ಎರಡನೆಯದು, ಹೆಂಡತಿಯನ್ನು ಗ್ರಾಮದಲ್ಲಿ ಬಿಟ್ಟು ತಾನು ನಗರದಲ್ಲಿನ ಐಷಾರಾಮಿ ಸೌಲಭ್ಯಗಳನ್ನು ಅನುಭವಿಸುವ ಬಯಕೆಯೂ ಒಳ ಮನಸ್ಸಿನಲ್ಲಿದೆ. ನಗರದಲ್ಲಿ ಯಾರ ಅಡೆತಡೆಯಿಲ್ಲದೆ ಇಸ್ಪೀಟು, ಕುದುರೆ ರೇಸು, ಹೆಣ್ಣುಗಳ ಖಯಾಲಿ ಹೀಗೆ ಹಾದಿ ತಪ್ಪಿ ಆಗಾಗ್ಗೆ ಹೋಟೆಲನ್ನು ನಷ್ಟಕ್ಕೆ ಒಳಪಡಿಸುತ್ತಿದ್ದ ನಾರಾಯಣನಿಗೆ ಸಂಸಾರವನ್ನು ನಗರಕ್ಕೆ ಒಯ್ಯಲು ಇಷ್ಟವಿಲ್ಲ. ತಾನು ಮೈಸೂರಿನಲ್ಲಿ ನೆಲೆಸಿ ಸುರಾಲಿ(ಗ್ರಾಮ)ಯ ಗೇಣಿ ಜಮೀನನ್ನು ನೋಡಿಕೊಳ್ಳುತ್ತಾ ಹೋಗುವುದೆಂದು ತೀರ್ಮಾನಿಸುತ್ತಾನೆ. ನಾರಾಯಣ ನಗರ ಜೀವನವನ್ನೂ ತೊರೆಯದೆ, ಹಳ್ಳಿಯಿಂದಲೂ ದೂರವಾಗದೆ ಎರಡೂ ನೆಲೆಗಳ ಸೌಲಭ್ಯ, ಸೌಕರ್ಯಗಳನ್ನು ಅನುಭವಿಸುವ ಮನೋಭಾವ(ದ್ವಂದ್ವ ನಿಲುವು)ವನ್ನು ವ್ಯಕ್ತಪಡಿಸುತ್ತಾನೆ.

ರಾಮಕೃಷ್ಣ ಗುಂದಿ ಅವರ 'ಸಂಬಂಧಗಳು' ಕಥೆಯ (ಗ್ರಾಮ) ನಿವೃತ್ತ ವೃದ್ಧ ಮಾಸ್ತರರು ಕಷ್ಟಪಟ್ಟು ತಮ್ಮ ಮಕ್ಕಳಾದ ರಮೇಶ, ಉಮೇಶರನ್ನು ಓದಿಸುತ್ತಾರೆ. ಓದಿ ಉನ್ನತ ಹುದ್ದೆಗೇರಿದ ಮಕ್ಕಳು ನಗರಗಳಲ್ಲಿ ನೆಲೆಸಿ, ತಂದೆ, ಗ್ರಾಮ, ಚಿಕ್ಕ ತಂಗಿ ಸಾವಿತ್ರಿಯತ್ತ ಲಕ್ಷ ವಹಿಸದೆ ನಗರದ ಐಷಾರಾಮಿ ಬದುಕಿಗೆ ಒಗ್ಗಿಹೋಗುತ್ತಾರೆ. ಸಾವಿತ್ರಿಯ ಮದುವೆಗೆ ಗಂಡು ಹುಡುಕಲು ತಂದೆ ಹೇಳಿದರೂ ರಮೇಶ ಪ್ರಯತ್ನಿಸುವುದಿಲ್ಲ. ಮಗಳ ಮದುವೆಯನ್ನು ವೃದ್ಧರು ತಾವೇ ನಿರ್ಧರಿಸಿ ಮುಂಬಯಿಗೆ ವಿಷಯ ತಿಳಿಸಲು ಬಂದು ಎರಡು ಹಗಲು ಒಂದು ರಾತ್ರಿ ಕಳೆಯುವಾಗ ಗ್ರಾಮ, ನಗರಗಳು ಕಟ್ಟಿ ಬೆಳೆಸಿದ ಎರಡು ವಿಭಿನ್ನ ವ್ಯಕ್ತಿತ್ವಗಳು ಅನಾವರಣಗೊಳ್ಳುತ್ತವೆ. ಮಗ, ಸೊಸೆಯರ ಮಾತು, ನಡತೆಯ ಉದ್ದಕ್ಕೂ ಹಣದ ಪ್ರಭಾವ ಎದ್ದುಕಂಡರೆ, ವೃದ್ಧರು ಮೊಮ್ಮಕ್ಕಳ ಆಟ, ಹಟಗಳಲ್ಲಿ ತಮ್ಮ ಮಕ್ಕಳ ಬಾಲ್ಯವನ್ನು ಕಾಣುತ್ತಾರೆ. 'ವರದಕ್ಷಿಣೆ ಅಂತ ಕೊಡೋಕೆ ಹೋಗಬೇಡಿ'[೪೦] ಎಂದು ಕಂಪ್ಯೂಟರ್ ಯುಗದ ಸೊಸೆ ಗಾಂಧಿ ಯುಗದ ಮಾವನಿಗೆ ಬುದ್ಧಿವಾದ ಹೇಳುತ್ತಾಳೆ. ಇಲ್ಲಿ, ವರದಕ್ಷಿಣೆ ವಿರೋಧಿ ಮಹಿಳಾ ಪ್ರತಿಭಟನೆಯ

ಮನೋಭಾವವಿರದೆ, ವರದಕ್ಷಿಣೆ ನೀಡುವುದಾದರೆ ತಾವು ಅದರ ಜವಾಬ್ದಾರಿ ವಹಿಸಲಾಗುವುದಿಲ್ಲ ಎಂಬರ್ಥವನ್ನು ಕಾಣುತ್ತೇವೆ. ವಿದ್ಯಾವಂತ, ಬುದ್ಧಿವಂತ ಮನಸ್ಸುಗಳು ಹೀಗೇಕೆ ವರ್ತಿಸುತ್ತವೆ ಎಂಬ ಪ್ರಶ್ನೆಗೆ, ಹೆಚ್ಚು ಹೆಚ್ಚು ಸೌಲಭ್ಯಕ್ಕಾಗಿ ಆಶಿಸುವ ಆರ್ಥಿಕ ವ್ಯಾಮೋಹ ಇಂಥ ಅಸ್ವಸ್ಥ ಮನಸ್ಸುಗಳನ್ನು ನಿಯಂತ್ರಿಸುತ್ತದೆ ಎಂದು ಒಪ್ಪಬೇಕಾಗುತ್ತದೆ. ಸ್ವಂತ ಕಾರು, ಮನೆ, ಕೇವಲ ತಮ್ಮ ಮಕ್ಕಳ ಓದಿಗಷ್ಟೇ ಸೀಮಿತವಾದ ಇವರ ಗುರಿಗಳು ಅವಿಭಕ್ತ ಕುಟುಂಬವನ್ನು ಛಿದ್ರಗೊಳಿಸುತ್ತವೆ. ಶಿಕ್ಷಣ, ನವನಾಗರಿಕತೆಯ ಪ್ರಭಾವಕ್ಕೆ ತೆರೆದುಕೊಂಡುದರ ಪ್ರತಿಫಲ ಇದಾಗಿದೆ. ಪ್ರಸ್ತುತ ಸಂದರ್ಭದಲ್ಲಿ ಮಗ, ಸೊಸೆಯರ ನಯವಾದ ಮಾತುಗಳ ಹಿಂದೆ, ಸಾವಿತ್ರಿಯ ಮದುವೆಯಾದರೆ ತಾವು ಕೊಡಬೇಕಾದ ಖರ್ಚಿನ ಅರಿವಿದ್ದುದು ಸ್ಪಷ್ಟವಿದೆ. ನಗರದಲ್ಲಿ ನೆಲೆಸಿದ ಗ್ರಾಮೀಣ ಯುವಕರ ಬದಲಾದ ನಡತೆಯಲ್ಲಿ ನಗರದ ಕೃತ್ರಿಮತೆ, ಜವಾಬ್ದಾರಿಯಿಂದ ಜಾರಿಕೊಳ್ಳುವ ಹುಸ್ನಾರಗಳು ಗೋಚರಿಸುತ್ತವೆ. ನಿಮ್ಮ ಪ್ರೀತಿ, ನನ್ನನ್ನು ದೊಡ್ಡವನನ್ನಾಗಿ ಮಾಡಿದ್ದಕ್ಕೆ ಧನ್ಯವಾದಗಳು ಎಂಬ ಕೃತ್ರಿಮ ಹೊಗಳಿಕೆ, ವ್ಯಕ್ತಿಗಳು ಹೆಚ್ಚು ಹೆಚ್ಚು ವಿದ್ಯಾವಂತರಾದಂತೆ, ನಾಗರಿಕರಾದಂತೆ ಹೇಡಿಗಳು, ಪಲಾಯನವಾದಿಗಳಾಗುವ ಸಾಧ್ಯತೆಗಳನ್ನು ಹೆಚ್ಚಿಸುತ್ತದೆ.

ಒಂದು ಸಂಸಾರದಲ್ಲಿ ತಂದೆ, ತಾಯಿಗಳು ಹೆತ್ತ ಮಕ್ಕಳನ್ನು ಸಾಕಿ, ಓದಿಸಿ ದೊಡ್ಡವರನ್ನಾಗಿ ಮಾಡುವುದು ಕೇವಲ ಕರ್ತವ್ಯಕ್ಕೆ ಮಾತ್ರವಾಗಿರದೆ, ಈ ಕಾರ್ಯದ ಹಿಂದೆ, ಖಂಡಿತ ಪ್ರತಿಫಲದಾಸೆ ಇದ್ದೇ ಇರುತ್ತದೆ. ಕೌಟುಂಬಿಕ ನೆಲೆಯಲ್ಲಿ ಪರಸ್ಪರ ಅವಲಂಬಿತ ಆರ್ಥಿಕಬಂಧ ಇವರನ್ನೆಲ್ಲ ಬಂಧಿಸಿದೆ. ಅದು ಇಳಿ ವಯಸ್ಸಿನಲ್ಲಿ ತಮ್ಮ ಆಸರೆಗೆ, ಹೆಣ್ಣು ಮಕ್ಕಳ ಮದುವೆಗೆ, ಉಳಿದ ತಂಗಿ, ತಮ್ಮಂದಿರ ಓದಿಗೆ ಸಹಾಯವಾಗಲು ಎಂಬ ಆಶಯ ಈ ಹಿರಿಯರ ಶ್ರಮದ ಹಿಂದಿನ ಉದ್ದೇಶ(ಇದಕ್ಕೆ ಬೇಕಾದರೆ ಸ್ವಾರ್ಥವೆನ್ನಿ)ವಾಗಿದೆ. ಹಳ್ಳಿಯಲ್ಲಿ ನೌಕರಿ ಮಾಡುತ್ತ ಕಷ್ಟಪಟ್ಟು ಓದಿಸಿ, ನಗರದ ಬದುಕಿನಲ್ಲಿ ಇಬ್ಬರೂ ಗಂಡುಮಕ್ಕಳನ್ನು ಕಳೆದುಕೊಂಡ ಶಿಕ್ಷಕರಿಗೆ ತನ್ನ ಮಗಳೂ ಸಹ ಕಳೆದು ಹೋಗುವ ಭೀತಿ ಆವರಿಸುವುದು ಸಹಜವಾದದ್ದು. ಮಕ್ಕಳು ನಗರ ಪಾಲಾದುದಕ್ಕೆ ಆಕ್ಷೇಪ ತೋರಿಸದ ಮಾಸ್ತರರು ಅವರ ಹಣದ ವ್ಯಾಮೋಹ, ಕೌಟುಂಬಿಕ ಬೇಜವಾಬ್ದಾರಿಗೆ ಸಂತಾಪ ವ್ಯಕ್ತಪಡಿಸುತ್ತಾರೆ. ಕಥನದ ಎರಡು ತಲೆಮಾರುಗಳ ತಾತ್ವಿಕ ಭಿನ್ನತೆಯನ್ನು ಅಧ್ಯಯನ ಕಂಡುಕೊಳ್ಳುತ್ತದೆ. ಈ ಸಂದರ್ಭಗಳಲ್ಲಿ ವ್ಯಕ್ತಿಗಳು (ಮಾಸ್ತರರ ಮಕ್ಕಳು ಇತ್ತ ಗ್ರಾಮಕ್ಕೂ ಅತ್ತ ನಗರಕ್ಕೂ ಸಲ್ಲದ) ವೈಯಕ್ತಿಕ, ಕೌಟುಂಬಿಕ ನಿರ್ಧಾರಗಳನ್ನು ತೆಗೆದುಕೊಳ್ಳುವಾಗ ದ್ವಂದ್ವಾತ್ಮಕತೆಯಿಂದ ಬಳಲುವುದು ಕಂಡುಬರುತ್ತದೆ.

**ಕ. ಸಾಮಾಜಿಕ ನೆಲೆ ಮತ್ತು ದ್ವಂದ್ವ ಸಾಧ್ಯತೆಗಳು**

ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ವ್ಯಕ್ತಿ, ಕುಟುಂಬ ಮತ್ತು ಸಾಮಾಜಿಕ ಸಂಬಂಧಗಳು ಪರಸ್ಪರ ಪೂರಕವಾಗಿದ್ದು ಒಂದು ನಿಶ್ಚಿತ ಚೌಕಟ್ಟಿನಲ್ಲಿ ನಿರ್ಮಿತವಾಗಿವೆ. ನಗರೀಕರಣ, ಜಾಗತೀಕರಣಗಳ ಪ್ರಭಾವದಿಂದ ಕೌಟುಂಬಿಕ ಸಂಬಂಧಗಳಂತೆ ಸಾಮಾಜಿಕ ಸಂಬಂಧಗಳೂ ಶಿಥಿಲವಾಗುತ್ತಿದ್ದು, ಇದಕ್ಕೆ ಪಾಶ್ಚಾತ್ಯ ದೇಶಗಳ ಸಾಂಸ್ಕೃತಿಕ ಅನುಕರಣೆ ಕಾರಣವೆಂಬ ಆಪಾದನೆ ಕೇಳಿಬರುತ್ತಿದೆ. ಸಾಮಾಜಿಕ ನೆಲೆಯಲ್ಲಿ ವ್ಯಕ್ತಿಯ ವರ್ತನಾಂಶಗಳ ಬದಲಾವಣೆಗೆ ಕಾರಣವಾಗುವ ಅಂಶಗಳು ಮತ್ತು ಅವು ವ್ಯಕ್ತಿ, ಕುಟುಂಬಗಳ ಮೂಲನೆಲೆ ಅಥವಾ ಹೊಸನೆಲೆಗಳ ಆಯ್ಕೆಯ ಸಾಧ್ಯತೆಯ ಮೇಲೆ ಬೀರುತ್ತಿರುವ ಪರಿಣಾಮಗಳನ್ನು ಕಥನ ಸಾಹಿತ್ಯ ತೆರೆದಿಟ್ಟಿದೆ.

ರೋಹಿದಾಸ ನಾಯಕ ಅವರ 'ಅಂತರ' ಕತೆಯ ಶ್ರೀನಿವಾಸರಾಯರು ಬೆಂಗಳೂರಿನಲ್ಲಿ ವೃತ್ತಿ ಜೀವನ ನಡೆಸಿ, ಜೀವಮಾನವಿಡೀ ದುಡಿದು ಸಂಪಾದಿಸಿದ ಹಣವನ್ನು/ಗಳಿಕೆಯನ್ನು ನಿವೃತ್ತಿಯ ನಂತರ ತಮ್ಮ ಮೂಲನೆಲೆ ಗ್ರಾಮದಲ್ಲಿ ತೊಡಗಿಸಲು ಆಸಿಸುತ್ತಾರೆ. ಆದರೆ ಅವರ ಕನಸಿನ ಗ್ರಾಮ ಭೌತಿಕವಾಗಿ ಮತ್ತು ನೈತಿಕವಾಗಿ ಸಂಪೂರ್ಣ ಬದಲಾಗಿರುತ್ತದೆ. ವೈಯಕ್ತಿಕ ಮೌಲ್ಯಗಳ ಜೊತೆ ಕೌಟುಂಬಿಕ ಮೌಲ್ಯಗಳು ಕುಸಿದು ಹೋಗಿದ್ದು, ಅಣ್ಣ, ತಮ್ಮಂದಿರ ಕಿತ್ತಾಟ, ಆಸ್ತಿ, ಮನೆ ಪಾಲು ಮಾಡಿಕೊಂಡು ಬದುಕುವುದು ಕಂಡುಬರುತ್ತದೆ. ಶಿಕ್ಷಣ ಮುಗಿಸಿ ಗ್ರಾಮಕ್ಕೆ ಮರಳಿದ ಯುವಕರು ಸ್ವಯಂ ಉದ್ಯೋಗ ಮಾಡಿ ಸಂಪಾದಿಸದೆ, ಹಣ ಮಾಡುವ ಅಡ್ಡ ದಂದೆ, ರಾಜಕೀಯ ಪ್ರೇರಿತ ಗಲಾಟೆ, ದೊಂಬಿಗಳಲ್ಲಿ ನಿರತರಾಗಿದ್ದಾರೆ. ರಾಯರ ದೃಷ್ಟಿಯಲ್ಲಿ ಇಂದು ಗ್ರಾಮೀಣ ಒಗ್ಗಟ್ಟು ನಾಶವಾಗಿದ್ದು, ನೈತಿಕ ಮೌಲ್ಯಗಳ ಕುಸಿತದಲ್ಲಿ ಗ್ರಾಮಗಳು ನಗರಗಳಿಗೆ ಸರಿಸಾಟಿಯಾಗುತ್ತಿವೆ. ಜಾತಿ, ವರ್ಗಗಳನ್ನು ಮೀರಿ ಎಲ್ಲಿ ನೋಡಿದರೂ ಹಣ, ಹಣದ

ದುರಾಸೆ, ದುಡಿಯದೇ ಹಣ ಮಾಡುವ ಹಂಬಲ ಗ್ರಾಮಗಳಲ್ಲಿ ಕಂಡುಬರುತ್ತದೆ. ನೌಕರಿಯಿದ್ದವರ ಹತ್ತಿರ ಸಾಲ ಕೇಳುವುದು, ಕೊಡದಿದ್ದರೆ ಮುನಿಸಿಕೊಳ್ಳುವುದು, ಶರಾಬು ಕುಡಿಯುವ ಶಿಕ್ಷಕರು, ವಿದ್ಯಾವಂತರು ಧಾರಾಳವಾಗಿ ಕಂಡುಬರುತ್ತಾರೆ. ಬದಲಾವಣೆಗೆ ಸಿಲುಕಿ ಅಪಮೌಲ್ಯಗೊಂಡ ತಮ್ಮ ಮೂಲನೆಲೆ ಕಂಡು ರಾಯರಿಗೆ ನಿರಾಶೆಯಾಗುತ್ತದೆ. ತಮ್ಮ ಬಾಲ್ಯದ ದಿನಗಳನ್ನು ನೆನೆದು ಮರುಗುತ್ತಾರೆ. ತೋಟ, ಗದ್ದೆಗಳನ್ನು ಅಭಿವೃದ್ಧಿಪಡಿಸಿಕೊಂಡ ರಾಯರು ಒಮ್ಮೆ ಹೆಂಡತಿಯ ತವರಿನ ಮದುವೆಗೆ ನಾಲ್ಕು ದಿನ ಹೋಗಿ ಬಂದಾಗ ಅವರ ಫಸಲು, ಮನೆಯು ಕಳ್ಳತನವಾಗುತ್ತದೆ. 'ಅಂದು ಊಟವೂ ರುಚಿಸಲಿಲ್ಲ, ನಿದ್ದೆಯೂ ಬರಲಿಲ್ಲ' (ಪುಟ ೨೭) ಎಂಬ ಅವರ ಮಾತು ಮಾರ್ಮಿಕವಾಗಿದೆ. ನಂತರದ ಅವರ ನಿರ್ಧಾರ?

'ಇದ್ದ ದುಡ್ಡಿನಲ್ಲಿ ಅರ್ಧ ಖಾಲಿಯಾಗಿದೆ. ಅತ್ತ ಬೆಂಗಳೂರು ಬಿಟ್ಟು ಬಂದಾಗಿತ್ತು. ಇತ್ತ ಹಳ್ಳಿಯನ್ನೂ ಬಿಡುವಂತಿಲ್ಲ. ಮುಂದಿನ ದಾರಿಯನ್ನು ಆ ದೇವರೇ ತೋರಿಸಲಿ ಎಂದು ತೀರ್ಥಯಾತ್ರೆಗೆ ಹೊರಟೆ.'[೪೧]

ಶ್ರೀನಿವಾಸರಾಯರ ಅಸಹಾಯಕತೆ ದ್ವಂದ್ವವಾಗಿ ಗ್ರಾಮ/ನಗರ ಆಯ್ಕೆಯ ಪರಿಹಾರ ಕಾಣದೆ, ಅಂತಿಮ ಸಾಧ್ಯತೆಗಳನ್ನು ಜೀವಂತವಾಗಿಟ್ಟಿದೆ.

ಚಂದ್ರಕಾಂತ ಕುಸನೂರ ಅವರ 'ಚರ್ಚಗೇಟ್' ಕಾದಂಬರಿಯ ರಾಮಪ್ರತಾಪ ನಗರದ ಬಣ್ಣದ ಕನಸುಗಳ ಬೆನ್ನತ್ತಿ ಗ್ರಾಮ ನಿರಾಕರಣೆ ಮಾಡಿ ನಗರದ ವ್ಯಾಪಾರಿ ಜಗತ್ತಿನಲ್ಲಿ ಅತಂತ್ರನಾದ ವ್ಯಕ್ತಿಯಾಗಿದ್ದಾನೆ. ಇಲ್ಲಿ ಕ್ಷಣಕ್ಷಣಕ್ಕೆ ಬದಲಾಗುವ ರಾಮಪ್ರತಾಪನ ಸಾಮಾಜಿಕ ನಿಲುಗಳನ್ನು ಗಮನಿಸಿ ಅವನ ವ್ಯಕ್ತಿತ್ವ(ನಗರ)ವನ್ನು ನಿರ್ಧರಿಸಬಹುದು. ಸಿನೆಮಾ ನಟನಾಗುವ ಕನಸು ಹೊತ್ತು ಹಳ್ಳಿಯಿಂದ ಮುಂಬಯಿಗೆ ಬಂದ ಬಾಲಕ ನಗರದ ವೇಗದ ಬದುಕಿನ ಸುಳಿಗೆ ಸಿಕ್ಕು ನಟನಾಗದೇ ಕಾರಕೂನನಾಗಿ, ಬದುಕಿನ ಕ್ರೌರ್ಯಕ್ಕೆ, ವೈಯಕ್ತಿಕ ಗೀಳಿಗೆ ತನ್ನನ್ನು ಅರ್ಪಿಸಿಕೊಳ್ಳುವುದು ಮೊದಲಿನ ಹಂತವಾಗಿದೆ. ಈ ವಾಕ್ಯವನ್ನು ಗಮನಿಸೋಣ.

'ವಸುಂದರಾಬಾಯಿಯವರ ಆ ಹಲ್ಕಟ್ ನೌಕರಿ ಮಾಡುವುದಕ್ಕಿಂತ ಯಾವುದಾದರೂ ಸೂಳೆಯ ಮನೆಯ ಕಾವಲುಗಾರನಾಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು? ಹಿಟ್ಟು ತುಂಬಿದ ಬಾಟ್ಲಿಯನ್ನು ಪೆನ್ಸಿಲಿನ್ ಎಂದು ಮಾರುತ್ತಿದ್ದರೂ 'ಹೋಗಲಿಬಿಡು ನಮಗೇನು' ಎಂದು ಸುಮ್ಮನಿರುತ್ತಿದ್ದೆ. ಆದರೆ ಬಡವ, ದೀನರು ದುಡಿದ ದುಡ್ಡಿಗೆ ಹೇಗೆ ಮಾರಲಿ?''

ನಗರದ ಮೋಸದ ವ್ಯವಹಾರವನ್ನು ಮೊದಲಿಗೆ ವಿರೋಧಿಸಿ ಕೊನೆಗೆ ಅದನ್ನೇ ಒಪ್ಪಿ(ಗ್ಗಿ)ಕೊಂಡು ತನ್ನನ್ನು ಕಳೆದುಕೊಳ್ಳುವ ರಾಮಪ್ರತಾಪನ ಪ್ರತಿಭಟನೆ ಒಂದು ಧ್ವನಿಯಾದರೂ, ಅದು ಗಟ್ಟಿಯಾಗುವುದಿಲ್ಲ. ರಾಮಪ್ರತಾಪನ ಬಡವರ ಪರ ಕಾಳಜಿಯನ್ನು ಇಲ್ಲಿ ಗ್ರಹಿಸಬಹುದು ಮತ್ತು ಬೆವರಿನ ಬೆಲೆ ಅರಿತ ನಂತರ ಅವನ ವಜಾವಾಗುವುದು ಪರಿಸ್ಥಿತಿಯ ವಿಡಂಬನೆಯಾಗಿದೆ. ಇದು ಅವನ ಬದುಕಿನ ಎರಡನೆಯ ಹಂತವಾಗಿದೆ. ರಾಮಪ್ರತಾಪನ ನಗರ ಬಿಡುವ ನಿರ್ಧಾರ ಅತಾರ್ಕಿಕವಾಗಿದ್ದು ಅದಕ್ಕೊಂದು ಗಟ್ಟಿಯಾದ ನೆಲೆಯೇ ಕಂಡುಬರುವುದಿಲ್ಲ. ಹಿಂದೊಮ್ಮೆ, ತಾನು ಅಂಗಡಿಯಲ್ಲಿ ಕಾಣಿಸಿಕೊಳ್ಳದಿದ್ದರೆ ಸತ್ತಿದ್ದೇನೆಂದೇ ಊಹಿಸಿಕೊಳ್ಳಿ ಎಂದಿದ್ದ ಪ್ರತಾಪ, ಇಂದು ನಾನು ನಿಮ್ಮ ಕಣ್ಣಿಗೆ ಬೀಳದಿದ್ದರೆ ಸನ್ಯಾಸಿಯಾಗಿ ಹೊರಟು ಹೋಗಿದ್ದೇನೆ ಎಂದು ತಿಳಿದುಕೊಳ್ಳಿ ಎಂಬ ಮಾತುಗಳನ್ನು ಗಮನಿಸಿದರೆ, ಸಿದ್ಧಾಂತದ ತಳಹದಿಯ ಬದುಕು ತನ್ನದಲ್ಲ, ಅದು ಅನುಕೂಲಸಿಂಧು ಜೀವನವೆನ್ನುವುದನ್ನು ಅವನೇ ಒಪ್ಪಿಕೊಳ್ಳುತ್ತಾನೆ. ಒಮ್ಮೆ ಮಹಾತ್ಮನಂತೆ (ವೇಶ್ಯೆಯ ಮಗಳನ್ನು ಮದುವೆಯಾಗಿ) ಸಭ್ಯನಾಗಿ ಬದುಕು ಪ್ರೀತಿಸುವ, ಇನ್ನೊಮ್ಮೆ ರಾಕ್ಷಸನಂತೆ (ಹೆಂಡತಿಯನ್ನು ವೇಶ್ಯಾಗೃಹಕ್ಕೆ ಮರಳಿ ಕಳಿಸುವ ನಿರ್ಧಾರ ತೊಟ್ಟು) ಕಾಣಿಸುವ ಮತ್ತು ಇಂದು ಸನ್ಯಾಸಿಯಾಗಲು ನಿರ್ಧರಿಸುವುದು ನಗರ ಬದುಕಿನ ಸಾಮಾಜಿಕ ಮೌಲ್ಯದ ಚಂಚಲತೆಯನ್ನು ಸೂಚಿಸುತ್ತದೆ. 'ಹೌದು ಬಂದೆ. ನನ್ನ ಹೊಟ್ಟೆಯೇ ನನ್ನನ್ನು ಕರೆ ತಂದಿತು. ಸುಮಿತ್ರ (ಹೆಂಡತಿ) ನನ್ನನ್ನು ಇಲ್ಲಿಗೆ ಕಳಿಸಿದಳು. ಅವಳಿಗಾಗಿ ನಾನು ಬಂದೆ ವಸುಂಧರ. ಕ್ಷಮೆ ಕೇಳಿಕೊಂಡು ಬಂದೆ, ಮನೋಹರಲಾಲನಿಗೆ ಕೈ ಜೋಡಿಸಿ ಬಂದೆ. ನಮ್ಮ ಮನೆಗೆ ಬರುವಿರಾ?' (ಪುಟ ೧೨೯) ಎಂಬ ಅವನ ಪ್ರಶ್ನೆಯೇ ಆತನು ಗ್ರಾಮಕ್ಕೆ ಮರಳುವುದನ್ನು ನಿರಾಕರಿಸಿ, ಅಸಹಾಯಕತೆಯಿಂದ (ದ್ವಂದ್ವದಲ್ಲಿ ಸಿಲುಕಿ) ಮಹಾನಗರದ ಬದುಕಿನ ತೆಕ್ಕೆಗೆ ಪುನಃ ಸೇರಿ ಹೋದದ್ದನ್ನು ಹೇಳುತ್ತದೆ. ನಗರದ ಬಂಡವಾಳಶಾಹಿ

ಹಿತಾಸಕ್ತಿಗಳು ಅಸಹಾಯಕ ವ್ಯಕ್ತಿಗಳನ್ನು ಆರ್ಥಿಕ ಬಿಗಿ ಹಿಡಿತದಲ್ಲಿ ಬಂಧಿಸಿಟ್ಟಿರುವ ವ್ಯವಸ್ಥೆಯ ಕ್ರೌರ್ಯ ಇದಾಗಿದೆ.

ಗಿರಿ(ಎಮ್.ಎನ್. ಹೆಗಡೆ) ಅವರ 'ಗತಿ, ಸ್ಥಿತಿ' ಕಾದಂಬರಿಯ ಹೆಸರು ಸೂಚಿಸುವ ಹಾಗೆ ನಗರೀಕರಣ/ ಜಾಗತೀಕರಣದ ದಾಳಿಗೆ ಸಿಕ್ಕ ಸಮಾಜವೊಂದರ ಗತಿ (ನಡೆ) ಮತ್ತು ಪ್ರಸ್ತುತ ಸಾಮಾಜಿಕ ಸ್ಥಿತಿಗಳ ಇರುವಿಕೆ (ಸ್ಥಿತಿ) ಕಾದಂಬರಿಯಲ್ಲಿ ವಿಡಂಬನೆಯ ರೂಪದಲ್ಲಿ ಪ್ರಸ್ತಾಪವಾಗಿದೆ.

> 'ಬುದ್ಧಿ ತಿಳಿಯಾಗಿದ್ದ ಕ್ಷಣದಲ್ಲಿ ಬೇಸರ ಎಲ್ಲ ಊರಲ್ಲೂ ಒಂದೇ ಎಂದು ಅನ್ನಿಸಿದರೂ ಇಲ್ಲಿದ್ದಾಗ ಆ ಕಡೆ, ಅಲ್ಲಿದ್ದಾಗ ಈ ಕಡೆ ಮನಸ್ಸು ಎಳೆಯುವುದು ಅಷ್ಟೇ ಸತ್ಯದ ವಿಷಯವಾಗಿತ್ತು'[೮೮]

ಎಂಬ ಕಾದಂಬರಿಯ ಮಾತು ಮನುಷ್ಯನ ಈ ದ್ವಂದ್ವಾತ್ಮಕತೆ ಮಾನವನ ಮೂಲಭೂತ ಸ್ವಭಾವದಲ್ಲಿ ಸೇರಿಕೊಂಡ ಒಂದು ಅಂಶ ಎಂಬುದನ್ನು ಪ್ರತಿಪಾದಿಸುತ್ತದೆ. ಅವನು ಹಳ್ಳಿಯಲ್ಲಿದ್ದಾಗ ಮಗುವಿನ ಅಳು, ಎಂಟು ವರ್ಷದ ಶಾಲಾ ಬಾಲಕಿ ಹೊತ್ತು ನಡೆದ ಪಾಠಿ ಚೀಲ, ಶಕುಂತಲೆಯನ್ನು ನೆನಪಿಸುವ ಗ್ರಾಮೀಣ ಸುಂದರಿ, ಸೊಂಟಕ್ಕೆ ಕತ್ತಿಯೊಂದನ್ನು ಕಟ್ಟಿಕೊಂಡ ಶೂದ್ರ, ಕಿವಿಯಲ್ಲಿ ಗಾಳಿ ಹೊಕ್ಕು ಚಂಗನೇ ಜಿಗಿಯುತ್ತ ರಸ್ತೆಗೆ ಬಂದ ಆಗ ತಾನೆ ಹುಟ್ಟಿದ ಹಸುವಿನ ಕರು, ಶಾಲು ಹೊದ್ದು ಗಾಳಿಗೆ ಹೊರಟ ಬ್ರಾಹ್ಮಣ ಹೀಗೆ ಅನೇಕ ದೃಶ್ಯಗಳು ನೇತ್ರಪಟಲದ ಮುಂದೆ ಹಾದು ಹೋದರೂ, ಅವನ ಸುಪ್ತ ಮನಃಪಟಲದಲ್ಲಿ ಸ್ಥಾನ ಪಡೆಯುವಲ್ಲಿ ಸೋಲುತ್ತವೆ. ನಗರ-ಗ್ರಾಮ, ಅಳು-ನಗು, ಸುಖ-ದುಃಖ, ಹಗಲು-ರಾತ್ರಿ, ನೋವು-ನಲಿವು ಮುಂತಾದ ದ್ವಂದ್ವ ಪ್ರಕ್ರಿಯೆಗಳಿಗೆ ಅವನಲ್ಲಿದ್ದುದು ನಿರಾಸಕ್ತಿ ಮಾತ್ರ. ಅವನ ಮನಸ್ಸಿನ ಈ ಇಬ್ಬಂದಿತನ ಅವನ ಸ್ವಭಾವದಲ್ಲಿಯೇ ಅಡಗಿದೆಯೆಂದು ಹೇಳಬಹುದು. 'ಆತನ ಆ ಗಳಿಗೆಯ ಅನಿಸಿಕೆ, ಅನುಭವವಷ್ಟೇ ಕಾದಂಬರಿಯನ್ನು ಕಟ್ಟುತ್ತದೆ. ಇಲ್ಲಿ ನೋಡುವ ಕ್ರಿಯೆಯೆ ಕಾದಂಬರಿಯ ಮೂಲ ದ್ರವ್ಯ'[೮೯] ಎಂಬ ಮಾತು ಸತ್ಯವಾದರೂ ಆ ಮನಸ್ಸನ್ನು ಆ ಸ್ಥಿತಿಗೆ ಪ್ರೇರಪಣೆ (Induce) ಮಾಡುವ ಬಾಹ್ಯ, ಆಂತರಿಕ(ಸಾಮಾಜಿಕ) ಕಾರಣಗಳೂ ಇಲ್ಲಿ ಪ್ರಾಮುಖ್ಯತೆ ಪಡೆಯುತ್ತವೆ. 'ಗತಿ ಸ್ಥಿತಿ ಮುಖ್ಯವಾಗಿ ನಮ್ಮ ಸಮಕಾಲೀನ ಪ್ರಜ್ಞೆಯ ನಾಡಿ ಮಿಡಿತ, ಸಮಕಾಲೀನ ನಗರ ಜೀವನ. ಈ ನಗರ ಜೀವನಕ್ಕೆ ಅಲ್ಲಿನ ಖೋಟಾ ವ್ಯವಸ್ಥೆ, ಇಬ್ಬಂದಿತನಕ್ಕೆ ಒಳಗಾದವರ ಅಸಹಾಯಕ, ಅಪರಿಚಿತ ಬದುಕಿನ ಪ್ರತಿರೂಪ'[೯೦] ಎಂಬ ನಿಲುವು ಅಧ್ಯಯನದ ನಿಲುವೂ ಆಗಿದೆ. ಆತನ ಇಬ್ಬಂದಿತನ, ಅಸಹಾಯಕತೆಗಳು ಆತನ ಮೂಲ ನೆಲೆ ಗ್ರಾಮದಲ್ಲಿಯೂ ಪ್ರಕಟವಾಗಿರುವುದು, ನಗರದಲ್ಲಿದ್ದು ಗ್ರಾಮದತ್ತ ನೋಡುವ ತೀವ್ರತೆಯನ್ನು ತೋರಿಸುತ್ತದೆ. ಮಲೆನಾಡಿನ ಹಳ್ಳಿಯಿಂದ ಬೆಂಗಳೂರಿಗೆ, ಅಲ್ಲಿಂದ ಬಿಸಿಲು ನಗರ, ಮೈಸೂರು ಹೀಗೆ ನೌಕರಿ ಹುಡುಕುತ್ತ ಹೋದ ಆತ ಅನೇಕ ಗತಿ(Change)ಗಳಲ್ಲಿ ಹಾದು ಹೋಗಿ ಕೊನೆಗೆ ಜೋಗ ಜಲಪಾತದೆದುರು ಒಂದು ಸ್ಥಿತಿ(Permanence)ಯನ್ನು ಗಳಿಸಿಕೊಳ್ಳುತ್ತಾನೆ.

ಸಾಮಾಜಿಕ ನೆಲೆಯಲ್ಲಿ, ಒಂದು ಪರಿಸರ(ಮೂಲನೆಲೆ/ಹೊಸನೆಲೆ)ದಲ್ಲಿ ನೆಲೆ ನಿಲ್ಲಲು ದ್ವಂದ್ವಭಾವ ಪ್ರದರ್ಶಿಸುವ ವ್ಯಕ್ತಿ, ಕುಟುಂಬಗಳ ಕುರಿತು ಪ್ರಸ್ತುತ ಕಥನ ಸಾಹಿತ್ಯ ಗ್ರಹಿಸಿರುವ ನಿಲುವುಗಳನ್ನು ಹೀಗೆ ಸಂಗ್ರಹಿಸಬಹುದು. • ಬದುಕಿನಲ್ಲಿ ತಾವು ನಂಬಿ ಬಂದ ತತ್ವ, ಸಿದ್ಧಾಂತಗಳಿಗೆ ಚ್ಯುತಿ ಉಂಟಾದಾಗ ವ್ಯಕ್ತಿಗಳು (ತಲೆಮಾರು ಕಾದಂಬರಿಯ ವೀರೇಶ, ಉಸಿರು ಕಾದಂಬರಿಯ ರವಿ, ಬಿರುಕು ಕಾದಂಬರಿಯ ಬಸವರಾಜು) ನಿರಾಶೆ, ಅಸಹಾಯಕತೆಯಿಂದ ಅಂತಿಮ ಸಾಧ್ಯತೆಯ ನಿರ್ಧಾರಕ್ಕೆ ಬರದಿರುವುದು ಕಂಡುಬರುತ್ತದೆ. • ಕೌಟುಂಬಿಕ ಜವಾಬ್ದಾರಿಯ ಅರಿವು, ಸಮಾಜದ ಟೀಕೆ, ವ್ಯಕ್ತಿಗತ ಸ್ವಾರ್ಥಗಳಿಂದ ಯಾವ ನಿರ್ಧಾರಕ್ಕೂ ಬರಲಾರದೆ (ಯಾರು ಹೊಣೆ ಕಥೆಯ ಮಧುಕರ, ಉಸಿರು ಕಾದಂಬರಿಯ ನಾರಾಯಣನಂಥವರು) ದ್ವಂದ್ವ ನಿರ್ಧಾರ ತೆಗೆದುಕೊಳ್ಳುತ್ತಾರೆ. • ವೈಯಕ್ತಿಕ ಜೀವನದ ನಿರಾಸಕ್ತಿ, ಸಾಮಾಜಿಕ ಅಸಹಾಯಕತೆಗಳಿಂದ (ಗತಿ ಸ್ಥಿತಿ ಕಾದಂಬರಿಯ ಅವನು (ನಾಯಕ), ಚರ್ಚಗೇಟ್ ಕಾದಂಬರಿಯ ರಾಮಪ್ರತಾಪ, ಅಂತರ ಕತೆಯ ಶ್ರೀನಿವಾಸರಾಯರಂಥವರು) ಯಾವ ನಿರ್ಧಾರವನ್ನೂ ತೆಗೆದುಕೊಳ್ಳದೆ, ಅವರ ಅಂತಿಮ ಸಾಧ್ಯತೆಗಳು ದ್ವಂದ್ವದಿಂದ ಕೂಡಿರುತ್ತವೆ.

## ೪. ಮಹಿಳಾ ಗ್ರಹಿಕೆ ಮತ್ತು ಸಾಧ್ಯತೆಗಳು

ಭಾರತದ ಸಂದರ್ಭದಲ್ಲಿ, ಮಹಿಳೆಗೆ ಸಂಬಂಧಿಸಿದ ಪ್ರತಿಯೊಂದನ್ನು ತುಚ್ಛೀಕರಿಸುವಂತಹ ಸಾಂಸ್ಕೃತಿಕ ದಾಳಿಯ ಪರಿಣಾಮವಾಗಿ ಅವಳು ತನ್ನ ಅಸ್ತಿತ್ವದ ವಿಸ್ಮೃತಿಗೆ ಒಳಗಾಗುವ ಹಂತಕ್ಕೆ ತಲುಪಿದ್ದಾಳೆ.

ಸಾವಿರಾರು ವರ್ಷಗಳಿಂದ ನಡೆಯುತ್ತಿರುವ ಈ ಪ್ರಯತ್ನಗಳ ಹಿಂದೆ ಆರ್ಥಿಕ ಶಕ್ತಿಯಷ್ಟೇ ಪ್ರಬಲವಾಗಿ ಪ್ರಭುತ್ವವಾದಿ ಪುರುಷ ರಾಜಕಾರಣವೂ ಇದೆ. ಇದರೊಂದಿಗೆ ಸುರುವಾದ ಪುರುಷಪ್ರಧಾನ ಮೌಲ್ಯಗಳು, ಪುರುಷರ ಸಾಮಾಜಿಕ ಯಜಮಾನಿಕೆ ಒಟ್ಟು ಮಹಿಳೆಯ ಅಸ್ತಿತ್ವದ ಮೇಲೆ ಹಿಡಿತ ಸಾಧಿಸತೊಡಗಿವೆ. ಲಿಂಗಧಾರಿತ ಶೋಷಣೆಗೆ ಪುರುಷರು ಮತ್ತು ಅವರೊಂದಿಗೆ ಕೈಜೋಡಿಸುವ ಮಹಿಳೆಯರೂ ಕಾರಣವಾಗಿರುವುದು ನಗ್ನ ಸತ್ಯವಾಗಿದೆ.

### ಅ. ಮರಳಿ ಮೂಲ ನೆಲೆಗೆ : ವೈಯಕ್ತಿಕ ನೆಲೆ ಮತ್ತು ಸಾಧ್ಯತೆಗಳು

ಮಹಿಳೆ ಮತ್ತು ಪುರುಷರ ಚಿಂತನೆಗಳು, ಗ್ರಹಿಕೆಗಳು ಭಿನ್ನವಾಗಿರುತ್ತವೆ, ಜೊತೆಗೆ ಅಲೋಚನಾ ಕ್ರಮಗಳು ಗುಣಲಕ್ಷಣಗಳು ಮತ್ತು ಕೌಶಲ್ಯಗಳು ಅವರಿಬ್ಬರಲ್ಲಿ ಬೇರೆ ಬೇರೆಯಾಗಿರುವುದನ್ನು ಸಂಶೋಧನೆಗಳು ಗುರುತಿಸಿವೆ. ಹೀಗಾಗಿ ಮಹಿಳೆ ಮತ್ತು ಪುರುಷರು ಒಂದೇ ವಿಷಯಕ್ಕೆ ಸಂಬಂಧಿಸಿದಂತೆ ಒಂದೇ ಸಮಯದಲ್ಲಿ ಭಿನ್ನ ನೆಲೆಯಲ್ಲಿ ವಿಚಾರ ಮಾಡುತ್ತಾರೆ. ಲಿಂಗ ಶೋಷಣೆ ಮತ್ತು ವೈಚಾರಿಕತೆಯ ಭಿನ್ನತೆಯ ಹಿನ್ನೆಲೆಯಲ್ಲಿ, ಗ್ರಾಮ/ನಗರ ಮುಂದಿನ ಸಾಧ್ಯತೆಗಳಿಗೆ ಮಹಿಳೆ ಹೇಗೆ ಸ್ಪಂದಿಸುತ್ತಾಳೆ, ಗ್ರಾಮ/ನಗರ ಬದುಕಿನ ಸಂಘರ್ಷದ ನಂತರ ಅವಳ ಮುಂದಿನ ನಿರ್ಧಾರವೇನು ಎಂಬ ವಿಷಯಗಳ ಕುರಿತು ಕಥನ ಸಾಹಿತ್ಯದಲ್ಲಿ ಅರಸಬಹುದು. ಮಹಿಳೆ ಹೊಸನೆಲೆಯನ್ನು ನಿರಾಕರಿಸಿ ಮೂಲನೆಲೆಗೆ ಮರಳಿ ಬರಲು ಅನೇಕ ಕಾರಣಗಳನ್ನು ಕಥನ ಸಾಹಿತ್ಯ ಸೂಚಿಸುತ್ತದೆ. ಕೌಟುಂಬಿಕ ನೆಲೆಯಲ್ಲಿ ಪುರುಷ ದೌರ್ಜನ್ಯಗಳು, ಲೈಂಗಿಕ ಶೋಷಣೆಗಳು, ಕುಟುಂಬ ರಕ್ಷಣೆ, ಆಶ್ರಯದ ಅನಿವಾರ್ಯತೆ ಮುಂತಾದವು ಪ್ರಮುಖ ಕಾರಣಗಳಾಗಿವೆ. ಬಾಲ್ಯಾವಸ್ಥೆಯಲ್ಲಿ ಗೋಕರ್ಣದಿಂದ ಗುಜರಾತಿನ ಅಹಮದಾಬಾದಿಗೆ ಹೋಗಿ ನೆಲೆಸಿದ್ದ ಜಯಂತ ಕಾಯ್ಕಿಣಿ ಅವರ 'ಭಾಮಿನಿ ಷಟ್ಪದಿ' ಕಥೆಯ ಭಾಮಿನಿ ಅಹಮದಾಬಾದ ತ್ಯಜಿಸುವ ನಿರ್ಧಾರ ತೆಗೆದುಕೊಳ್ಳುತ್ತಾಳೆ. ಈ ನಿರ್ಧಾರಕ್ಕೆ ಗಂಡ ಪರೇಶನ ಮಾನಸಿಕ, ದೈಹಿಕ ದೌರ್ಜನ್ಯ, ಸಾಮಾಜಿಕ ಅಪಮಾನಗಳು ಯಾವುವೂ ಕಾರಣವಾಗುವುದಿಲ್ಲ. ಭಾಮಿನಿ ತನ್ನ ಕರ್ತವ್ಯಪ್ರಜ್ಞೆ, ಸೇವಾ ಮನೋಭಾವಗಳಿಂದ ಪರೇಶನಿಗಿಂತಲೂ ಸಾಮಾಜಿಕವಾಗಿ ಉನ್ನತ ಸ್ಥಾನ ಗಳಿಸಿ ಕೌಟುಂಬಿಕ ವಲಯವನ್ನು ದಾಟಿ ಬೆಳೆದ ಮಹಿಳೆ. ಪುರುಷಪ್ರಧಾನ ಮೌಲ್ಯವನ್ನು ಗೌರವಿಸುತ್ತಲೇ ತನ್ನ ತಾಯ್ತನದ ಹಕ್ಕುಗಳಿಗೆ ಚ್ಯುತಿಬರದಂತೆ ನೋಡಿಕೊಂಡವಳು. ಮೋರ್ವಿ ಪುನರ್ವಸತಿ ಶಿಬಿರದಿಂದ ಕರೆತಂದ ಆರು ವರ್ಷದ ಅನಾಥ ಮಗು ಡಿಂಕಿಯನ್ನು ಪರೇಶ ಮಗಳಾಗಿ ನೋಡದೆ, 'ಇವಳನ್ನು ಇಟ್ಟುಕೊಳ್ಳುವುದು ಸಾಧ್ಯವಿಲ್ಲ, ಬೇರೆಡೆ ವ್ಯವಸ್ಥೆ ಮಾಡು' ಎನ್ನುತ್ತಾನೆ. ಸಾಕುಮಗಳು ಡಿಂಕಿಯ ಅನುಪಸ್ಥಿತಿಯಲ್ಲಿ ತನ್ನ ಸ್ವಂತ ಮಗಳು ಪಿಂಕಿ ಮತ್ತು ಗಂಡ ಸಂತೋಷವಾಗಿರುವುದನ್ನು ಗಮನಿಸಿದ ಭಾಮಿನಿ ತನ್ನ ಮತ್ತು ತನ್ನ ತಂದೆಯ ಮೂಲನೆಲೆ ಗೋಕರ್ಣಕ್ಕೆ ಡಿಂಕಿಯೊಂದಿಗೆ ಬಂದು ಬಿಡುತ್ತಾಳೆ. ಡಿಂಕಿಗೆ ತಾಯಾಗುವ ವೈಯಕ್ತಿಕ ಕಾರಣಕ್ಕಾಗಿ ಭಾಮಿನಿಯು ತನ್ನ ಮೂಲನೆಲೆ ಆಯ್ಕೆ ಮಾಡಿಕೊಳ್ಳುತ್ತಾಳೆ. ಹಿತ್ತಲಮನಿ ನಾಗರತ್ನಮ್ಮ ಹೇಳುವ 'ಊರು ಬಿಟ್ಟರೆ ಉದ್ಧಾರ ಆಗೋದು, ಇಲ್ಲದಿದ್ರೆ ಇಡೀ ದಿನ ಟೂರಿಸ್ಟರಿಗೆ ಅಡುಗೆ ಮಾಡ್ತಂಡು, ಸಂತರ್ಪಣೇಲಿ ದಕ್ಷಿಣೆ ತಕಂಡು ಆಯುಷ್ಯನೇ ದಂಡ ಮಾಡ್ಕತಿದ್ದೆ'[15] ಎಂಬ ಮಾತಿನಲ್ಲಿ ಸನಾತನ ಸಂಪ್ರದಾಯದ ನೆರಳಲ್ಲಿ ಮಹಿಳೆಯನ್ನು ಮನೆಕೆಲಸಕ್ಕೆ ಸೀಮಿತಗೊಳಿಸಿದ್ದು, ಸಂಪತ್ತಿನಂತೆ ಮಹಿಳೆಯನ್ನು ಖಾಸಗಿ ಆಸ್ತಿಯಾಗಿಸಿ ಅಬಲೆಯಾಗಿಸಿದ್ದು ಸ್ಫೋಟಗೊಂಡಿದೆ. ಇಂತಹ ಬದುಕನ್ನು ನಿರಾಕರಿಸಿ ಆತ್ಮಹತ್ಯೆ ಮಾಡಿಕೊಂಡ ಭಾಮಿನಿಯ ತಾಯಿಯ ಬದುಕು ಭಾಮಿನಿಯನ್ನು ಸೆಳೆದಿದ್ದುದು ಆಶ್ಚರ್ಯವಲ್ಲ. ಜೊತೆಗೆ ಬಾಗಾಪುರದ ಮಲ ಹೊರುವ ಹೆಂಗಸು ನುಡಿದ 'ಅದರಲ್ಲೇನು ಹೇಸಿಗೆ? ನಾವು ನಮ್ಮ ಮಕ್ಕಳದ್ದನ್ನು ತೆಗೆಯುವುದಿಲ್ಲವೆ, ಹಾಗೇನೇ ಇದನ್ನು ತೆಗೀತೇವೆ' ಎಂಬ ಮಾತು ಒಬ್ಬ ದಲಿತರ ಮಹಿಳೆ ಇಡೀ ಊರಿನ, ಇಡೀ ದೇಶದ, ಇಡೀ ಲೋಕದ ತಾಯಾದ ಅನುಭವವನ್ನು ಭಾಮಿನಿಗೆ ನೀಡಿದ್ದಾಳೆ. ಹಾಗಾದರೆ ತಾನು ಡಿಂಕಿಗೆ ತಾಯಾಗಬಾರದೇಕೆ ಎಂಬ ಗ್ರಹಿಕೆ ಸಾಕುಮಗಳೊಂದಿಗೆ ಭಾಮಿನಿಯನ್ನು ಮೂಲ ನೆಲೆಯತ್ತ ಎಳೆದು ತಂದಿದೆ.

ರಾಮಕೃಷ್ಣ ಗುಂದಿ ಅವರ 'ಆರೂ ಮೇಡಂ ಮತ್ತು ಉದ್ಯೋಗ ಪರ್ವ' ಕತೆಯ ಆರು, ಪುರುಷರ ಲೈಂಗಿಕ ದೌರ್ಜನ್ಯವನ್ನು ವಿರೋಧಿಸಿ ಹೊಸನೆಲೆ (ಗ್ರಾಮ) ನಿರಾಕರಿಸಿ ಮೂಲನೆಲೆ(ನಗರ)ಗೆ ಹಿಂದಿರುಗಿದ ಮಹಿಳೆಯಾಗಿದ್ದಾಳೆ. ಶಾಲಾ ತಪಾಸಣೆಗೆ ಬಂದ ಶಿಕ್ಷಣಾಧಿಕಾರಿ (Buerocrate) ಆರು ಮೇಡಂಳ

ಶ್ರಮವನ್ನು ಗುರುತಿಸಿದರೂ ಲೈಂಗಿಕವಾಗಿ ಬಳಸಿಕೊಳ್ಳಲು (ನಗರಕ್ಕೆ ಬಂದು ತನ್ನೊಡನೆ ಒಂದು ರಾತ್ರಿ ಕಳೆಯಲು ಆಹ್ವಾನ ನೀಡಿ) ಆಮಿಷ ಒಡ್ಡುತ್ತಾನೆ. ವಿಷಯ ತಿಳಿದ ಗೌಡ 'ಮಂತ್ರಿಗಳವರೆಗೆ ಕೈಯಿರೋ ಮನುಷ್ಯ, ಇಷ್ಟಕ್ಕೆ ಮರೆತುಬಿಡಿ. ಮುಂದುವರಿಸಿದರೆ ನಿಮಗೇ ಅಪಾಯ'[೪೭] ಎಂದು ಬುದ್ಧಿವಾದ ಹೇಳುತ್ತಾನೆ. ಗೌಡರ ಮಾತುಗಳು ಕಾರ್ಯಾಂಗ/ಅಧಿಕಾರಿಶಾಹಿ (Beurocrates) ವ್ಯವಸ್ಥೆಯನ್ನು ಎದುರಿಸಿ ನಿಲ್ಲಲಾರದ ಅನುಭವಜನ್ಯ ಮಾತುಗಳಾಗಿದ್ದರೂ, ಮತ್ತೇ ತನ್ನೂರ ಶಾಲೆ ಮುಚ್ಚಬಾರದೆಂಬ ಸ್ವಾರ್ಥದಿಂದ ಕೂಡಿವೆ. ಹಿಂದಿನ ಘಟನೆಗಳ ಪರಿಣಾಮವನ್ನು ಅರಿತಿದ್ದ ಅವರು ವಾಸ್ತವಿಕತೆಯ ಜೊತೆ ಹೊಂದಿಕೊಂಡು ಹೋಗುವ ದಾರಿಯನ್ನು ತೋರಿಸುತ್ತಾರೆ. ಮೂರು ದಿನಗಳ ನಂತರ ಶಿಕ್ಷಣಾಧಿಕಾರಿಯಿಂದ ಶಾಲೆಯ ಅಭ್ಯಾಸ ಕ್ರಮ, ಶಿಸ್ತು, ವ್ಯವಸ್ಥೆ ಯಾವುದೂ ಸರಿ ಇಲ್ಲ, ಹಾಜರಿ ಸಂಖ್ಯೆ ಕಡಿಮೆ, ಶಾಲೆಯನ್ನು ಮುಚ್ಚುವಂತೆ ಶಿಫಾರಸ್ಸು ಮಾಡಲಾಗಿದೆ ಎಂಬ ಒಕ್ಕಣಿಕೆಯ ಕಾಗದ ಬರುತ್ತದೆ. ಆರೂ ದಿಟ್ಟ ನಿರ್ಧಾರ ತೆಗೆದುಕೊಳ್ಳುತ್ತಾಳೆ. ತನ್ನ ಲಗೇಜ್ ಹೊತ್ತು ಗ್ರಾಮ ನಿರಾಕರಿಸಿ ಮತ್ತೇ ನಗರದತ್ತ (ಮೂಲನೆಲೆ) ಹೊರಡುತ್ತಾಳೆ. ಆದರ್ಶ, ದೇಶಸೇವೆ ಮುಂತಾದ ಕನಸುಗಳನ್ನು ಕಂಡ ಯುವ ಜನರು ಶೈಕ್ಷಣಿಕ ಮತ್ತು ಔದ್ಯೋಗಿಕ ರಂಗದಲ್ಲಿರುವ ಭ್ರಷ್ಟಾಚಾರ, ಶೋಷಣೆ, ಅಸಮಾನತೆಗಳನ್ನು ಕಂಡು ರೋಸಿಹೋಗಿರುವ ಸಂದರ್ಭ ಇದಾಗಿದೆ. ಇಂತಹ ಯುವ ಜನತೆಯ ಮುಂದಿರುವ ತಾತ್ವಿಕ ದ್ವಂದ್ವಗಳು ಹಲವಾರು. ಪರಿಸ್ಥಿತಿಯ ಜೊತೆ ಒಪ್ಪಂದ ಮಾಡಿಕೊಂಡು ಮುಖ್ಯವಾಹಿನಿಯಲ್ಲಿ ಸೇರಬೇಕು ಅಥವಾ ವಿರೋಧಿಸಿ ಕ್ರಾಂತಿಕಾರಿಯಾಗಬೇಕು. ಇವೆರಡೂ ಸಾಧ್ಯವಿಲ್ಲದಿದ್ದರೆ ಈ ವ್ಯವಸ್ಥೆ, ಪರಿಸರ (ಗ್ರಾಮ/ನಗರ) ನಿರಾಕರಿಸಿ ಪಲಾಯನವಾದಿಯಾಗಬೇಕು. ಇಲ್ಲಿ ಆದದ್ದೂ ಹಾಗೆಯೇ. ಆರು ಮೇಡಂ ಅವರನ್ನು ಲೈಂಗಿಕವಾಗಿ ಬಳಸಿಕೊಳ್ಳಲೆತ್ನಿಸಿದ ಅಧಿಕಾರಿಯದು ನೇರವಾದ ಶೋಷಣೆಯಾದರೆ, ಅಧಿಕಾರಿಗೆ ಹೊಂದಿಕೊಂಡು ಹೋಗಲು ನಯವಾಗಿ ಸೂಚಿಸುತ್ತ, ಘಟನೆಯನ್ನು ವಿರೋಧಿಸದ ಪಟೇಲನೂ ಸಹ ಶೋಷಕನಾಗಿದ್ದಾನೆ ಎಂಬುದನ್ನು ಮರೆಯುವಂತಿಲ್ಲ. ಮೇಲಿನ ಎರಡೂ ಸಂದರ್ಭಗಳಲ್ಲಿ ಮಹಿಳೆಯರು ಮೂಲನೆಲೆಗೆ ಮರಳಿ ಬರಲು ಕಾರಣವಾಗುವ ಲಿಂಗಾಧಾರಿತ ಶೋಷಣೆ ವಿದ್ಯಾವಂತ, ಬುದ್ಧಿವಂತ ಮಹಿಳೆಯರನ್ನು ಬಿಟ್ಟಿಲ್ಲ ಎಂಬುದು ಸ್ಪಷ್ಟವಿದೆ. ಭಾಮಿನಿ, ಅರುಂಧತಿಯರು ತಮ್ಮ ವೈಯಕ್ತಿಕ ಕಾರಣಗಳಿಗಾಗಿ, ಮಹಿಳಾ ಶೋಷಣೆಯನ್ನು ಪ್ರಾಥಮಿಕ ನೆಲೆಯಲ್ಲಿ ವಿರೋಧಿಸುತ್ತಾರಾದರೂ, ಈ ವಿರೋಧಕ್ಕೆ ಬೆಂಬಲ ಸಿಗದೆ ಅದು ಗಟ್ಟಿಯಾಗುವುದಿಲ್ಲ. ಪುರುಷಗಾಮಿ ಗ್ರಾಮೀಣ/ನಗರ ಪರಿಸರದ ಶೋಷಣೆಯ ಸ್ವರೂಪ ಮತ್ತು ಕಾರಣಗಳ ದಟ್ಟ ಹಾಗೂ ತಾಜಾ ಅನುಭವಗಳು ಇಲ್ಲಿ ಮೂರ್ತರೂಪ ಪಡೆದುಕೊಂಡಿವೆ. ಎಲ್ಲಿ ಅವಶ್ಯಕತೆಗಳನ್ನು ತ್ಯಾಗ ಮಾಡಲಾಗಿದೆಯೋ ಅಲ್ಲಿ ಹತಾಶೆ, ದಮನ ಇದ್ದೇ ಇರುತ್ತದೆ ಎಂಬ ನೆಲೆಯಲ್ಲಿ ಇವೆರಡೂ ಸಂದರ್ಭಗಳು ಮಹಿಳಾ ಶೋಷಣೆಯ ವಿಭಿನ್ನ ರೂಪಗಳೆಂಬುದು ಅಧ್ಯಯನದ ನಿಲುವಾಗಿದೆ.

### ಕೌಟುಂಬಿಕ ನೆಲೆ ಮತ್ತು ಸಾಧ್ಯತೆಗಳು

ಆಶ್ರಯ, ಕೌಟುಂಬಿಕ ರಕ್ಷಣೆ, ಶಿಥಿಲಗೊಂಡ ಕೌಟುಂಬಿಕ ಸಂಬಂಧಗಳ ಬೆಸುಗೆ ಮುಂತಾದ ಅಂಶಗಳು ಅಶಿಕ್ಷಿತ, ಕೆಳವರ್ಗದ ಮಹಿಳೆಯರು ಹೊಸನೆಲೆಯನ್ನು ತ್ಯಜಿಸಿ ಮೂಲನೆಲೆಗೆ ಮರಳಿ ಬರಲು ಕಾರಣಗಳಾಗಿವೆ. ಶಾಂತಾದೇವಿ ಕಣವಿ ಅವರ 'ಗುಳದಾಳಿ' ಕಥೆಯ ರೋಜಿ (ಚೆನ್ನಿ) ಇಂತಹ ಸಂಬಂಧಗಳಿಗೆ ಹಾತೊರೆದ ಮಹಿಳೆಯಾಗಿದ್ದಾಳೆ. ನಗರದ ಊಳಿಗಮಾನ್ಯ ವ್ಯವಸ್ಥೆಯ (ಪುರುಷರ) ಲೈಂಗಿಕ ಶೋಷಣೆಗೆ ಬಲಿಯಾಗಿ ವೇಶ್ಯಾವೃತ್ತಿಯಲ್ಲಿ ಬದುಕುತ್ತಿದ್ದ ರೋಜಿಗೆ ತನ್ನ ವೃತ್ತಿ ಕುರಿತು ಪಶ್ಚಾತ್ತಾಪವಿಲ್ಲ, ಬದಲಿಗೆ ನಿಷ್ಠೆಯಿದೆ. ತನ್ನ ಈ ಸ್ಥಿತಿಗೆ ಕಾರಣರಾದ ತಾಯಿ, ಅತ್ತೆ(ಗ್ರಾಮ)ಯರ ಕುರಿತು ತಿರಸ್ಕಾರ ಕಂಡುಬರುತ್ತದೆ. ಮಹಿಳೆಯ ಕುರಿತಾದ ಸಮಸ್ಯೆಯನ್ನು ಮಹಿಳೆಯರು ತುಚ್ಛೀಕರಣ ದೃಷ್ಟಿಯಿಂದ ನೋಡಿದ್ದಕ್ಕೆ ತನಗೆ ಈ ಗತಿ ಬಂತೆಂಬ ಭಾವನೆ ಅವಳದಾಗಿದೆ. ಸುಳ್ಳು ಹೇಳಿ ಗಂಡನಿಗೆ ಎರಡನೇ ಮದುವೆ ಮಾಡಿದ್ದ ಅತ್ತೆ, ಕತ್ತು ಹಿಡಿದು ಹೊರಹಾಕಿದ ತಾಯಿ ಈ ಸಂದರ್ಭದಲ್ಲಿ ಸ್ತ್ರೀದೇಹಿ, ಪುರುಷ ಮನಸ್ಸಿನ ದೌರ್ಜನ್ಯದ ಪ್ರತೀಕವಾಗಿ ನಿಲ್ಲುತ್ತಾರೆ. ಎರಡನೇ ಹೆಂಡತಿ ತೀರಿಕೊಂಡು ವೇಶ್ಯಾ (ರೋಜಿ) ಸಂಪರ್ಕಕ್ಕೆ ಬಂದ ಗಂಡ ಮಲ್ಲಪ್ಪನನ್ನು

> 'ನಾ ಇನ್ನೂ ನಿನ್ನ ಪಿರಿತಿ ಮಾಡ್ತೀನಿ, ಅದಕ್ಕ ನಿನ್ನೆ ರೊಕ್ಕ ಹಿಡೀಲಿಲ್ಲ. ನಾ ನಿನ್ನ ಹೆಣ್ತಿ. ಮಾಡಿಕೊಂಡ ಹೇಣ್ತಿ ಕೂಡ ಮಕ್ಕೊಂಡರ ಗಂಡನ ರೊಕ್ಕ ಇಸಕೋಬೇಕನ? ನೀ ಬೇಕಾದಾಗ ನನ್ನಲ್ಲೇ ಬಂದು ಹೋಗು'[೪೮]

ಎಂದು ಕೇಳುವಾಗಿನ ಧ್ವನಿಯಲ್ಲಿ ಜೀವನಪ್ರೀತಿಯನ್ನು ಕಾಣುತ್ತೇವೆ. ಮಹಿಳೆಯ ಸಹಜ ಬಯಕೆಗಳು, ಕನಸುಗಳು ಸನ್ನಿವೇಶದ ಒತ್ತಡದಿಂದಾಗಿ ಹತ್ತಿಕ್ಕಲ್ಪಡುವುದರಿಂದ ಹುಟ್ಟಿಕೊಳ್ಳುವ ಕರ್ಷಣ(Tension)ದ ತೀವ್ರತೆಯನ್ನು ಅಧ್ಯಯನ ಇಲ್ಲಿ ಗುರುತಿಸುತ್ತದೆ. 'ನೀ ಬೇಕಾದಾಗ ನನ್ನಲ್ಲೇ ಬಂದು ಹೋಗು' ಎಂಬ ಮಾತು ಅವಳ ವೃತ್ತಿಪರತೆಯ ಜೊತೆಗೆ, ಸಂಘರ್ಷದ ತೀವ್ರತೆಯನ್ನು ಕಳೆದುಕೊಂಡ ಅಸಹಾಯಕ ಸ್ಥಿತಿಯನ್ನು ತೋರಿಸುತ್ತದೆ. ಇದನ್ನು ಗಂಡನೆಂಬ ಪುರುಷನ ಮೇಲಿನ ಉಳಿದುಕೊಂಡ ಪ್ರೀತಿಯೆಂದೂ ತಿಳಿಯಬಹುದು. ಅವನು ಆಡುವ 'ನಿಂದೇನೂ ತಪ್ಪಿಲ್ಲ, ಕಷ್ಟಾ ಉಂಡೀದಿ. ನಾ ಎಲ್ಲಾ ವಿಚಾರ ಮಾಡೀನಿ' ಎಂಬ ಮಾತು, ಯಾವ ತಪ್ಪನ್ನೂ ಮಾಡದ ನಿನ್ನನ್ನು ವೇಶ್ಯೆಯನ್ನಾಗಿ ಮಾಡಿದ್ದು ನಿನ್ನ, ನನ್ನ ತಾಯಂದಿರು ಮತ್ತು ಈ ಸಮಾಜ ಎಂಬ ಅರ್ಥ ಹೊಂದಿದೆ. ಒಂದು ಹೆಣ್ಣು ವೇಶ್ಯೆಯಾಗಲು ಪುರುಷ ಪ್ರಧಾನ ವ್ಯವಸ್ಥೆ ಮಾತ್ರ ಕಾರಣವಲ್ಲ ಜೊತೆಗೆ ಮಹಿಳೆಯ ಪಾಲೂ ಇದೆ ಎಂಬುದು ತಾತ್ವಿಕವಾಗಿ ಒಪ್ಪಿಕೊಳ್ಳುವ ಅಭಿಪ್ರಾಯವಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಚಿನ್ನಿಯನ್ನು ಮಲ್ಲ ಸ್ವೀಕರಿಸಲು ಒಪ್ಪಿದ್ದು ಯಾವ ಕಾರಣಕ್ಕೆ, ಚಿನ್ನಿ ಮಲ್ಲನೊಂದಿಗೆ ಗ್ರಾಮಕ್ಕೆ ಮರಳಿ ಹೋಗಲು ಕಾರಣವೇನು? ಹೆಂಡತಿ ಇಲ್ಲದೆ ಮಕ್ಕಳನ್ನು ಸಾಕುವ ಕೌಟುಂಬಿಕ ಅಸಹಾಯಕತೆ ಮಲ್ಲನನ್ನು ಕಾಡಿದರೆ, ಗಂಡನಿಲ್ಲದ ಅಧೀರತೆ, ವೇಶ್ಯಾವಾಟಿಕೆಯ ನಿತ್ಯ ನರಕಗಳಿಂದ ಮುಕ್ತಿಯನ್ನು ಚಿನ್ನಿ ಬಯಸಿರಬಹುದು. ಇವರಿಬ್ಬರ ಅಭದ್ರತೆಯ ಬದುಕು ಪರಸ್ಪರ ಹತ್ತಿರಕ್ಕೆ ಸೆಳೆದಿರಬಹುದು. ಇಲ್ಲಿ ಚಿನ್ನಿ ತಾಳಿ ತೆಗೆದು ಮಲ್ಲಣ್ಣನ ಕೈಗೆ ಕೊಟ್ಟು ಕೊರಳು ಒಡ್ಡುವ ಪ್ರಕ್ರಿಯೆ ಹೆಚ್ಚಿನ ಮಹತ್ವವನ್ನು ಪಡೆದುಕೊಳ್ಳುತ್ತದೆ. ಒಬ್ಬ ಗಂಡನ ಹೆಂಡತಿಯಾಗಿ ತಾನು ಮರಳಿ ಮೂಲನೆಲೆಗೆ (ವೇಶ್ಯೆಯಾಗಿ ಅಲ್ಲ) ಮರಳುತ್ತೇನೆ ಎಂಬ ಮಹಿಳಾ ಗ್ರಹಿಕೆ ಇದಾಗಿದೆ.

ಕೋರಗಲ್ ವಿರೂಪಾಕ್ಷಪ್ಪ ಅವರ 'ಮಣ್ಣಿನ ಗುಣ' ಕಥೆಯ ಗಂಗವ್ವಳದೂ ಸಹ ಹೆಂಡತಿಯಾಗಿಯೇ ಮರಳಿ ಮೂಲನೆಲೆಗೆ ಹಿಂದಿರುಗುವ ಗ್ರಹಿಕೆಯಾಗಿದೆ. ಮೂರು ಮಕ್ಕಳ ತಾಯಿ ಗಂಗವ್ವನನ್ನು ಗಂಡನ ಮನೆಯಿಂದ ಓಡಿಸಿದವರು ಅವಳ ಅತ್ತೆ ಹಾಗೂ ಮದುವೆಯಾಗದೆ ತವರಿನಲ್ಲಿದ್ದ ಇಬ್ಬರು ನಾದಿನಿಯರು ಎಂಬುದು ಗಮನಾರ್ಹ! ಗಂಡನ ಅಸಹಾಯಕತೆ, ಮಕ್ಕಳ ಆಕ್ರಂದನಗಳ ನೆನಪಿನಲ್ಲಿ ಗಂಗವ್ವ ಕೊಪ್ಪಳದಲ್ಲಿ ಒಂಟಿಯಾಗಿ ಹಾಲು ಮಾರುತ್ತ ಹತ್ತು ವರ್ಷ ಕಳೆದು ಅನುಭವ ರೂಪದಲ್ಲಿ ಮಾಗುತ್ತಾಳೆ.

> 'ನನ್ನ ಕಷ್ಟಕ್ಕ ನೀ ಯಾಕ ಮರಗ್ತೀದಿ ಬಿಡು. ಯಾರ ಹೊಟ್ಟಿ ನೋಯತೈತಿ ಅವರ ಅಜವಾನ ತಿನ್ನಬೇಕು. ನೀನು ಎಷ್ಟೋ ಸರ್ತಿ ಗಂಡನ ಮನಿ ಬಿಟ್ಟು ಬಂದ ನನ್ನ ರಾಜಿ ಮಾಡಾಕ ಪ್ರಯತ್ನ ಮಾಡಿದ್ದಿ. ಪಾಲಿಗೆ ಬಂದಿದ್ದು ಬಿಡುಗಡಿಯಿಲ್ಲ.' 'ಈ ಮಣ್ಣಾಗ ಅಂಥ ಗುಣ ಐತಿ. ಎಲ್ಲಾ ಕಳಕೊಂಡೀನಿ ಅಂದ್ರೂ ಒಳಗೊಳಗ ಬೆಂಕಿ ಆಗಿ ಸುಡತಿರತೈತಿ. ಅವರು ನನ್ನ ಪಾಲಿಗಿ ಇಲ್ಲ ಅಂದ್ರೂ ಅವರ ಬಗ್ಗಿ ಕೇಳಬೇಕು ಅನಸತೈತಿ' ಎಂದಳು."[೪೯]

ಗಂಡನ ಮನೆಗೆ ಮರಳಿ ಕರೆದೊಯ್ಯಲು ಬಂದ ನಿರೂಪಕನಿಗೆ ಹೇಳುವ ಗಂಗವ್ವ, ತನ್ನ ನೋವು, ಸಂಘರ್ಷವನ್ನು ತಾನೆ ಭರಿಸುವ, ಅದಕ್ಕೆಲ್ಲ ದೈವದಾಟದ ನಂಟು ಲೇಪಿಸುವ ವಿಧಿವಾದದಲ್ಲಿ ನಂಬಿಕೆ ಇಟ್ಟ ಅನುಭವಿ ಮಹಿಳೆಯಾಗಿದ್ದಾಳೆ. ಗಂಗವ್ವನ ಮನಃಸ್ಥಿತಿ ದ್ವಂದ್ವಾತ್ಮಕತೆಯಿಂದ ಕೂಡಿದೆ. ಗಂಡನ ಮನೆ ಬೇಡವೆನ್ನುವ ಗಂಗವ್ವ ಮಕ್ಕಳ ಕುರಿತು ಕ್ಷೇಮ ಕೇಳುವುದು ಇದನ್ನು ಸೂಚಿಸುತ್ತದೆ, ಜೊತೆಗೆ ಅವಳು ಹಳೆಯ ವೈಮನಸ್ಸು ಮರೆತು, ಗ್ರಾಮಕ್ಕೆ ಮರಳಿ ಬರುವ ಮುನ್ಸೂಚನೆಯಾಗಿದೆ. ಗಂಗವ್ವ ಮರಳಿ ಹಳ್ಳಿಗೆ ಹಿಂದಿರುಗಲು ನಿಶ್ಚಯಿಸಿದ ನಿರ್ಧಾರದ ಹಿಂದೆ ಅನೇಕ ಕೌಟುಂಬಿಕ ಹಾಗೂ ವೈಯಕ್ತಿಕ ಅಂಶಗಳು ನಮ್ಮ ಗಮನ ಸೆಳೆಯುತ್ತವೆ. ಕಾಟ ಕೊಡುತ್ತಿದ್ದ ಅತ್ತೆ ಹಾಗೂ ಒಬ್ಬಳು ನಾದಿನಿ ತೀರಿಕೊಂಡಿದ್ದಾರೆ. ಇನ್ನೊಬ್ಬಳು ಕುರುಡಿಯಾಗಿ ಅಸಹಾಯಕಳಾಗಿದ್ದಾಳೆ. ಗಂಗವ್ವನಿಗೆ ವಯಸ್ಸಿಗೆ ಬಂದ ಗಂಡು ಮಕ್ಕಳ ಹಿತಚಿಂತನೆ, ಮದುವೆಗೆ ಬಂದಿರುವ ಮಗಳ ಕ್ಷೇಮ, ಅಸಹಾಯಕ ಗಂಡನಿಗೆ ಆಸರೆ ಇತ್ಯಾದಿ., ಕೌಟುಂಬಿಕ ಸಂರಕ್ಷಣೆಯ  ಕಾರಣಗಳಿವೆ. ತನ್ನ ಕೊನೆಗಾಲದ ಕರ್ತವ್ಯಗಳೂ ಅವಳನ್ನು ಗ್ರಾಮದತ್ತ ಕರೆದಿವೆ. ಅಂತಿಮವಾಗಿ ತನ್ನನ್ನು ಮುಪ್ಪಿನ ಕಾಲಕ್ಕೆ ನೋಡಿಕೊಳ್ಳುವವರು ಯಾರು, ತನಗೂ ಮಕ್ಕಳ ಆಸರೆ ಬೇಕಲ್ಲವೆ ಎಂಬ ಸ್ವಹಿತವೂ ನಿರ್ಧಾರದ ಒಂದು ಭಾಗವಾಗಿದೆ. ಕೊನೆಗೆ 'ಗಂಡ ಬಂದು ಕರೆದರೆ ಬರತೀನಿ' ಎಂಬ ಮಾತು, ಜೀವಮಾನವಿಡೀ ಗಂಡ, ಹೆಂಡತಿಯರು ಒಟ್ಟಾಗಿ ಇರಬೇಕೆನ್ನುವ ಈ ಮಣ್ಣಿನ ದಾಂಪತ್ಯದ ಆಶಯವನ್ನೂ ಸೂಚಿಸಿದೆ. ಗಂಗವ್ವನ ಹಾಲು ಮಾರಿದ

ದುಡ್ಡು ಟ್ರಂಕಿನ ತುಂಬಾ ಇದೆಯೆಂಬ ಸುದ್ದಿಯಿದ್ದು ಅದನ್ನು ತೆರೆದು ನೋಡಿದಾಗ, ಅಲ್ಲಿ ಹಣ ಕಾಣದೆ, ಗಂಗವ್ವ ಗಂಡನೊಂದಿಗೆ ಜಾತ್ರೆಯೊಂದರಲ್ಲಿ ತೆಗೆಸಿಕೊಂಡ ಫೋಟೋ ಇರುವುದು, ಗುಳದಾಳಿಯ ಚೆನ್ನಿಯ ತಾಳಿ ಪ್ರಸಂಗವನ್ನು ನೆನಪಿಸುತ್ತದೆ. ಚೆನ್ನಿ, ಗಂಗವ್ವ ಇವರು ಕೆಳವರ್ಗದ ಅಸಹಾಯಕ ಹೆಣ್ಣುಗಳಾಗಿ, ಪುರುಷರೊಂದಿಗೆ ಕೈಜೋಡಿಸಿದ ಮಹಿಳೆಯರ ದೌರ್ಜನ್ಯಕ್ಕೆ ಒಳಗಾದವರು. ಪುರುಷರೊಂದಿಗೆ ಮಹಿಳಾ ಶೋಷಣೆಗೆ ಕೈಜೋಡಿಸುವ ಮಹಿಳೆಯರೂ ಕೂಡ ಈ ಪುರುಷಪ್ರಧಾನ ಸಮಾಜದ ಭಾಗವಾಗಿಯೇ ಇರುತ್ತಾರೆ. ಅವರು ಸ್ತ್ರೀದೇಹಿಗಳಾದರೂ ಅವರ ಚಿಂತನೆ, ಆಲೋಚನೆ, ಕ್ರಿಯೆಗಳೆಲ್ಲ ತಲೆತಲಾಂತರದಿಂದ ಬೆಳೆಸಿಕೊಂಡು ಬಂದ ಪುರುಷಲೋಕದ ವಿಚಾರಗಳು ಮತ್ತು ಚಿಂತನಾ ಎಳೆಗಳೇ ಆಗಿರುತ್ತವೆಂಬ ನಿಲುವು ಅಧ್ಯಯನದ್ದಾಗಿದೆ.

**ಮರಳಿ ಗೂಡಿಗೆ : ಅನಿವಾರ್ಯತೆ, ಅಸಹಾಯಕತೆ ಮತ್ತು ಸಾಧ್ಯತೆಗಳು**

ವ್ಯವಸ್ಥೆಯ ಕ್ರೂರ ಹಿಡಿತಕ್ಕೆ ಸಿಕ್ಕ ಮಹಿಳೆಯರು ಅಸಹಾಯಕತೆಯಿಂದ ತಮ್ಮ ಮೂಲನೆಲೆಗೆ ಮರಳುವುದನ್ನು ಮುಂಬಯಿ ಕರ್ನಾಟಕದ ಕಥನ ಸಾಹಿತ್ಯ ವಿವರಿಸಿದೆ. ಆಶ್ರಯ, ಆರ್ಥಿಕ ಅವಲಂಬನೆ, ಸಾಮಾಜಿಕ ಭದ್ರತೆ ಮುಂತಾದ ಕಾರಣಗಳು ಸಾಹಿತ್ಯ ಗ್ರಹಿಸಿದ ಅಂಶಗಳಾಗಿವೆ. ಸದಾನಂದ ಸುವರ್ಣ ಅವರ 'ಚಿನ್ನದ ಗೊಂಬೆ' ಕತೆಯ ಲಕ್ಷ್ಮೀನಾರಾಯಣನ ಸಂಸಾರ ನಗರದ ವಂಚನೆಯ ಜಾಲಕ್ಕೆ ಸಿಕ್ಕು ಆರ್ಥಿಕವಾಗಿ ಹಾನಿಗೊಳಗಾಗಿ ದುರಂತದಲ್ಲಿ ಕೊನೆಗೊಳ್ಳುತ್ತದೆ. ಗ್ರಾಮೀಣ ಮೂಲದ ಲಕ್ಷ್ಮೀನಾರಾಯಣ ತನ್ನ ಹೆಂಡತಿ ನಾಗವೇಣಿಯ ಪ್ರಲೋಭನೆ, ಪ್ರಚೋದನೆಯಿಂದ ಚಿನ್ನದ ಬಿಸ್ಕತ್‌ಗಳೆಂದು ತಾಮ್ರದ ಗಟ್ಟಿಗಳನ್ನು ಕೊಂಡು, ಮೋಸಹೋಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ನಗರದಲ್ಲಿ ನಾಗವೇಣಿಯ ಸ್ಥಿತಿ ಅತಂತ್ರವಾಗುತ್ತದೆ.

> 'ಗಂಡನ ಮರಣಕ್ಕೆ ತಾನೇ ಕಾರಣಳೆಂದು ತಿಳಿದ ನಾಗವೇಣಿಗೆ ತನ್ನ ಗತಜೀವನದ ವಿಲಾಸಗಳನ್ನು ನೆನೆದು ಜಿಗುಪ್ಸೆ ಮೂಡಿತು. ಲಕ್ಷ್ಮೀನಾರಾಯಣನ ಮೃತ್ಯು ನಿಂತಲ್ಲಿ ಕುಳಿತಲ್ಲಿ ಅವಳನ್ನು ಅಪರಾಧಿನಿಯೆಂದು ಕಾಡತೊಡಗಿತು. ಅತ್ತೆ ಮಾವಂದಿರಲ್ಲಿ ಕ್ಷಮೆ ಬೇಡುತ್ತೇನೆ, ಜೀವನವಿಡೀ ಅವರ ಸೇವೆ ಮಾಡುತ್ತೇನೆ' ಎಂದು ಮೈಸೂರಿನಿಂದ ಗ್ರಾಮಕ್ಕೆ ಮರಳಿದಳು.[illegible]

ಚಿನ್ನದ ಪ್ರಲೋಭನೆ, ಗಂಡನ ಮೃತ್ಯು, ಮಗುವಿನ ಅಗಲಿಕೆಯ ನೋವುಗಳು ಅವಳಲ್ಲಿ ಅಪರಾಧಿ ಭಾವ ಮೂಡಿಸಿ ಆಘಾತದ ರೂಪ ತಾಳಿ ಅರೆಹುಚ್ಚಿಯಾದಾಗ ಅವಳು ಹಳ್ಳಿಯನ್ನು ಆಶ್ರಯಿಸುವುದು, ಕೊನೆಗೂ ಗ್ರಾಮದ ಜೀವ ಗ್ರಾಮಕ್ಕೆ ಮರಳುವ, ಭಾವನಾತ್ಮಕ ಪ್ರಕ್ರಿಯೆಯನ್ನು ಗಮನಿಸುತ್ತೇವೆ. ಗ್ರಾಮ ಮತ್ತು ನಗರಗಳ ಸಮಸ್ಯೆಗಳು ರೂಪ, ತೀವ್ರತೆಯಲ್ಲಿ ಬೇರೆ ಬೇರೆಯಾಗಿವೆ. ಇಂತಹ ಸಮಸ್ಯೆಗಳಿಗೆ ಅವುಗಳದೇ ಆದ ಆಳ, ಅಗಲ ಮತ್ತು ಸಂಕೀರ್ಣತೆಗಳಿರುತ್ತವೆ. ಗ್ರಾಮವಾಸಿಗಳು ನಗರಕ್ಕೆ ಆಗಮಿಸಿದಾಗ ಇಂತಹ ಸಮಸ್ಯೆಗಳನ್ನು ಅರ್ಥೈಸಿಕೊಳ್ಳಲಾಗುವುದಿಲ್ಲ. ಕ್ಷಿಪ್ರಗತಿಯಿಂದ ಹಣ ಮಾಡಿ, ಮನೆ, ಕಾರು, ಟಿ.ವಿ. ಫ್ರಿಡ್ಜ್‌ನಂತಹ ಐಷಾರಾಮಿ ವಸ್ತುಗಳನ್ನು ಹೊಂದುವುದು, ಇದಕ್ಕಾಗಿ ಯಾವ ಕಾನೂನುಬಾಹಿರ ಕೆಲಸ ಮಾಡಲೂ ಅಂಜದಿರುವ ವ್ಯವಸ್ಥೆ ನಗರದಲ್ಲಿ ಕಾರ್ಯನಿರ್ವಹಿಸುತ್ತವೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಾಮಾನ್ಯರೂ ಕೂಡ ವಂಚನೆ, ಮೋಸ, ಭ್ರಷ್ಟಾಚಾರ ಮತ್ತು ಭಯೋತ್ಪಾದನೆಯಂತಹ ಸಾಮಾಜಿಕ ಸಮಸ್ಯೆಗಳನ್ನು ಜೀವನಕ್ರಮದ ಭಾಗವಾಗಿ ನೋಡತೊಡಗಿದ್ದಾರೆ. ಇವುಗಳನ್ನು ನಿಯಂತ್ರಿಸಬೇಕಾದ ಆಡಳಿತದ ಮೌನ, ಗೊತ್ತಿದ್ದೂ ಬಲೆಗೆ ಬೀಳುವ ಸಾರ್ವಜನಿಕರು ಇಂತಹ ವ್ಯವಸ್ಥೆಗಳನ್ನು ನಿರ್ಬಂಧಿಸುವ ಬದಲು ಕಾರ್ಯನಿರ್ವಹಿಸಲು ಸಹಕಾರಿಯಾಗಿವೆ ಎನ್ನಬಹುದು. ವೀಣಾ ಶಾಂತೇಶ್ವರ ಅವರ 'ಶೋಷಣೆ ಬಂಡಾಯ ಇತ್ಯಾದಿ' ಕಾದಂಬರಿಯ ಕಮಲಾ ವಿದ್ಯಾವಂತ ಕಲಾವಿದೆ. ಗ್ರಾಮದಲ್ಲಿ ಹುಟ್ಟಿ ಯೂನಿವರ್ಸಿಟಿಯಲ್ಲಿ ಓದಿ ಹಲವು ಸ್ಥಿತ್ಯಂತರಗಳನ್ನು ಕಂಡು ಮುಂಬಯಿಯಲ್ಲಿ ಶಿವಮೂರ್ತಿಯ ನಾಟಕ ಸಂಸ್ಥೆ ಸೇರುತ್ತಾಳೆ. ಶಿವಮೂರ್ತಿ ವಿವಾಹಿತ, ಮೂವರು ಮಕ್ಕಳನ್ನು ಹೊಂದಿದವ ಎನ್ನುವುದು ಗೊತ್ತಿದ್ದರೂ ಅವನನ್ನು ಆರಾಧಿಸಿ ಮದುವೆಯಾಗುತ್ತಾಳೆ. ಸಾಮಾಜಿಕ ಪ್ರತಿಷ್ಠೆ, ಗೌರವ ಪಡೆವ ಮಹಿಳೆಯ ಕುರಿತಾದ ಪುರುಷ ಸಹಜ ಅಸೂಯೆ, ಕೀಳರಿಮೆಗಳು ಶಿವಮೂರ್ತಿಯಲ್ಲಿ ಕಾಣಿಸಿಕೊಂಡ ಪರಿಣಾಮ ಗಂಡನ ದೈಹಿಕ, ಮಾನಸಿಕ ಹಿಂಸೆಯನ್ನು ಸಹಿಸಲಾರದೇ ಹೊಸನೆಲೆಯನ್ನು ನಿರಾಕರಿಸಿ ಹೊರಟು ಹೋಗುತ್ತಾಳೆ. ಕಮಲಳ ಹೊಸನೆಲೆಯ ನಿರಾಕರಣೆಗೆ ಗಂಡನ ದೈಹಿಕ ಶೋಷಣೆಗಿಂತ ಗಂಡನ ಸಂಶಯ

ಸ್ವಭಾವ, ವಿವಾಹಪೂರ್ವ ಘಟನೆಗಳ ವಿಡಂಬನೆ ಮಹಿಳೆಯಾಗಿ ಅವಳನ್ನು ಆಶ್ರಯರಹಿತಳನ್ನಾಗಿ ಮಾಡುತ್ತವೆ. ಕಮಲಳ ಕೌಟುಂಬಿಕ ಸಂಬಂಧಗಳ ಶಿಥಿಲತೆಗೆ ಇವರಿಬ್ಬರೂ ಸಮಾನ ಜವಾಬ್ದಾರರಾಗಿರುವುದು ಕಂಡುಬರುತ್ತದೆ. ಬದುಕು ಮತ್ತು ಭಾವನಾತ್ಮಕ ವಿಷಯಗಳಲ್ಲಿ ಇವರಿಬ್ಬರಲ್ಲಿ ಕಾಣುವ ಸಮಾನ, ಸಾಮಾನ್ಯ ಅಂಶಗಳು ಮತ್ತು ದ್ವಂದ್ವಗಳು ಇವರ ಸಮಸ್ಯೆಗಳಿಗೆ ಕಾರಣವಾಗಿವೆ. ಇಬ್ಬರೂ ಗ್ರಾಮಗಳನ್ನು ನಿರಾಕರಿಸಿ ನಗರಕ್ಕೆ ಬಂದವರು, ಇಬ್ಬರೂ ಕಲಾ ಸೇವೆಯನ್ನೇ ಆದರ್ಶವಾಗಿಟ್ಟುಕೊಂಡು ನಗರದಿಂದ ಆಕರ್ಷಿತರಾಗಿ ಜೀವನದಲ್ಲಿ ಸ್ವಲ್ಪವನ್ನಾದರೂ ತ್ಯಾಗ ಮಾಡಿದವರು. ಇನ್ನೂ ಉತ್ತಮವಾದ ಅಂಶಗಳೆಂದರೆ, ಇಬ್ಬರೂ ಪರಸ್ಪರ ಪ್ರೀತಿಸಿ, ಮದುವೆಯಾಗಿ ಒಬ್ಬರನ್ನೊಬ್ಬರು ಭಾವನಾತ್ಮಕವಾಗಿ ಅವಲಂಬಿಸಿದವರು. ಇವರ ಅವಲಂಬನೆ ಎಷ್ಟಿತ್ತೆಂದರೆ, ಬೇರೆ ಯಾವುದೇ ಗಂಡು/ಹೆಣ್ಣು ಇವರ ಜೀವನದಲ್ಲಿ ಬಂದರೆ ಸಹಿಸದಷ್ಟು, ಪರಸ್ಪರ ದ್ವೇಷಿಸುವಷ್ಟು ಪ್ರೀತಿಯ ಪರಸ್ಪರಾವಲಂಬಿಗಳು. ಇವೇ ಅಂಶಗಳಿಂದ ಮತ್ತು ಪರಸ್ಪರಲ್ಲಿ ಅಂಕುರಿಸಿದ ಸಂಶಯ ದೃಷ್ಟಿಯಿಂದ ಇವರು ಬೇರೆಯಾಗುವುದು ಮೊದಲನೇ ಘಟ್ಟವಾದರೆ, ಪರಸ್ಪರ ಅವಲಂಬನೆಯಿಂದ ಪುನಃ ಹತ್ತಿರ ಬರುವುದು ಎರಡನೆಯ ಘಟ್ಟವಾಗಿ ಕಂಡುಬರುತ್ತದೆ.

ಕಮಲಳ ಮೂಲನೆಲೆಯ (ಮರಳಿ ಶಿವಮೂರ್ತಿಯೆಡೆ ಬರುವುದು) ಸಾಧ್ಯತೆಯಂತೆ ಪುನಃ ಗಂಡನೆಡೆಗೆ ಬರುವ ಇನ್ನೊರ್ವ ಮಹಿಳೆ ಇದೇ ಕಾದಂಬರಿಯ ರೋಶನ್‌ಬೀ ಆಗಿದ್ದಾಳೆ. ಗಂಡ ಇನ್ನೊಬ್ಬಳನ್ನು ಮದುವೆಯಾಗಿದ್ದಾನೆಂದು, ಅವನನ್ನು ಬಿಟ್ಟು ರೋಶನ್‌ಬೀ ತವರುಮನೆಗೆ ಹೋಗುತ್ತಾಳೆ. ಅವನು 'ಬಾ' ಎಂದು ಒಂದು ಪತ್ರ ಬರೆದಿದ್ದಕ್ಕೆ ಮರಳಿ ಬರುತ್ತಾಳೆ. ತನ್ನ ಗಂಡ ಬರೆದ ಒಂದು ಪತ್ರಕ್ಕೆ ಖುಷಿಯಿಂದ ಬಂದು ಗಂಡನ ತಪ್ಪನ್ನು ಕ್ಷಮಿಸಿದ ರೋಶನ್‌ಬೀಯು ಸಹ ಕಮಲಳಂತೆ ಪುರುಷಪ್ರಧಾನತೆಯನ್ನು ಒಪ್ಪಿಕೊಳ್ಳುವ ವ್ಯಕ್ತಿತ್ವವಾಗುತ್ತಾಳೆ. ಅವಳ ನಿರ್ಧಾರ ಅಸಹಾಯಕತೆಯ ಅನಿವಾರ್ಯತೆಯಾಗಿ ನಿಲ್ಲುತ್ತದೆ. 'ಇನ್ನ ಮ್ಯಾಲ ವಾರದಾಗ ಒಂದು ದಿನ ತಪ್ಪದ ಮನಿಗೆ ಬರ್ತೀನಿ ಅಂತ, ಮತ್ತ ಹೆಂಡ್ತಿ ಗಳಿಸಿದ ರೊಕ್ಕಾ ಕೈಯಿಂದ ಮುಟ್ಟೋದಿಲ್ಲ ಅಂತಾ, ತವರು ಮನಿಯಿಂದ ನಾ ತಂದ ಯಾವ ಸಾಮಾನೂ ಒತ್ತೀ ಇಡ್ಲಿಕ್ಕೆ ಒಯ್ಯೂದಿಲ್ಲ ಅಂತ ವಚನ ಕೊಟ್ಟಾನ'[10] ಎಂದು ಹೇಳುವ ಅವಳು ತನ್ನ ಸಂಸಾರದ ರಕ್ಷಣೆ ಬಯಸಿದ್ದಲ್ಲದೇ ಒಬ್ಬ ಪುರುಷನ ಆಶ್ರಯವನ್ನು ಒಪ್ಪಿಕೊಳ್ಳುತ್ತಾಳೆ. ಜೊತೆಗೆ ಸವತಿಯ ಇರುವಿಕೆಯನ್ನು ಕುರಿತು ಹೇಳುವ 'ಆ ಇನ್ನೊಬ್ಯಾಕಿ ನನ್ನ ಮನಿಗೇನೂ ಬಂದಿಲ್ಲಲ್ರಿ, ತನ್ನ ಮನ್ಯಾಗ ತಾ ಅದಾಳ. ಇಬ್ರಿ ಬಿತ್ತಿ ಆಕಿಗೂ ಮಕ್ಳು, ಮರಿ ಆಗ್ಯಾವು. ನಾ ಯಾಕ ಆಕಿಗೆ ಕೆಟ್ಟುದು ಬಯಸ್ಲಿರಿ ಬಾಯಿ?' (ಪುಟ ೭೫) ಎಂಬ ಅವಳ ಮಾತಿನಲ್ಲಿ ಹಂಚಿ ಉಣ್ಣುವ, ಇತರರ ಸಂಸಾರ ಸಂರಕ್ಷಣೆಯನ್ನೂ ಬಯಸುವ ಅಲ್ಪತೃಪ್ತಿಯ ಬದುಕು ಕಂಡುಬರುತ್ತದೆ. ನಮ್ಮಲ್ಲಿ ಗಂಡು ಹೆಣ್ಣಿನ ಸಂಬಂಧವನ್ನು ನಿಯಂತ್ರಿಸುವುದು ಪರಸ್ಪರ ಅರಿವಿನ ಸಹಜ ಪ್ರೇಮವಲ್ಲ ಬದಲಿಗೆ ಸಾಮಾಜಿಕ ಪ್ರತಿಷ್ಠೆಯ ಪೂರ್ವಾಗ್ರಹಗಳು ಎಂಬುದು ಇಲ್ಲಿ ಗಮನಾರ್ಹವಾಗಿದೆ. ಭಾರತೀಯ ಸಂದರ್ಭದಲ್ಲಿ ಹೆಣ್ಣಿನ ಮೂಕಶೋಕದ ಒಂದು ಮಾದರಿ ಈ ಸಂದರ್ಭವಾಗಿದೆ. 'ಕಾದಂಬರಿಯಲ್ಲಿ ಕಮಲಾಳ ನಿರ್ಧಾರಕ್ಕೆ ದೈಹಿಕ ಹಾಗೂ ಮಾನಸಿಕ ಕಾರಣಗಳಿದ್ದರೆ, ರೋಶನ್‌ಬೀಯ ನಿರ್ಧಾರಕ್ಕೆ ಆರ್ಥಿಕ ಹಾಗೂ ಸಾಮಾಜಿಕ ಕಾರಣಗಳಿವೆ'[11] ಎಂಬ ವಿಮರ್ಶಕರ ನಿಲುವು ಅಧ್ಯಯನದ ನಿಲುವೂ ಆಗಿದೆ.

### ಬ. ಹೊಸ ನೆಲೆ – ಹೊಸ ಬದುಕು ಮತ್ತು ಸಾಧ್ಯತೆಗಳು

ಗ್ರಾಮ/ನಗರದಿಂದ ಬಂದು ನಗರ/ಗ್ರಾಮದ ಪುರುಷಪ್ರಧಾನ ಸಮಾಜದಲ್ಲಿ ಹೋರಾಡಿ, ತಮ್ಮ ಬದುಕು ಕಟ್ಟಿಕೊಂಡ ಮಹಿಳೆಯರದು ಸದಾ ಹೋರಾಟದ ಗಟ್ಟಿ ವ್ಯಕ್ತಿತ್ವವೆಂದು ಕಥನ ಸಾಹಿತ್ಯ ದಾಖಲಿಸಿದೆ. ಹೊಸ ನೆಲೆಯ ಬದುಕು ಅವರಿಗೆ ಭದ್ರತೆ ಕೊಡುವ ಭರವಸೆ ಇದ್ದಾಗ ಆ ನೆಲೆಯನ್ನು ಶಾಶ್ವತವಾಗಿ ಆಶ್ರಯಿಸುತ್ತಾರೆ. ಸಾಮಾಜಿಕ, ಆರ್ಥಿಕ ಸಂಘರ್ಷ ನಡೆಸಿ ಪಡೆದ ಹೊಸ ಬದುಕು ಅವರನ್ನು ಭೌತಿಕ ಮತ್ತು ಮಾನಸಿಕವಾಗಿ ತೃಪ್ತಿಯಲ್ಲಿಟ್ಟಿರುವುದು ಕಂಡುಬರುತ್ತದೆ. ವ್ಯಾಸರಾವ್ ನಿಂಜೂರ ಅವರ 'ಉಸಿರು' ಕಾದಂಬರಿಯ ಶಾರದಳ ಬದುಕು ಇದಕ್ಕೆ ಉದಾಹರಣೆಯಾಗಿದೆ. ಸನಾತನ ಕಾಲದಿಂದಲೂ ಶೀಲ ಮತ್ತು ಪಾವಿತ್ರ್ಯಗಳು ಪುರುಷಪ್ರಧಾನ ಧೋರಣೆಯ ಮಾನದಂಡದಿಂದ ಅಳೆಯಲ್ಪಟ್ಟಿವೆ. ವರ್ಗ ಸಮಾಜದ ಚಿಂತನೆ, ವರ್ಗ ಆಡಳಿತ ಸಿದ್ಧಾಂತಗಳು (ಹಾಗೆ ನೋಡಿದರೆ ಹೆಣ್ಣಿನ ಲೈಂಗಿಕ ಶೋಷಣೆಗೂ

ಖಾಸಗಿ ಆಸ್ತಿಯ ಉಗಮ, ಬೆಳವಣಿಗೆಗೂ ಸಂಬಂಧವಿದೆ), ಪಾತಿವ್ರತ್ಯದ ಆದರ್ಶ ಮತ್ತು ಮಹಿಳೆಯ ಕುರಿತಾದ ವೈರುಧ್ಯಪೂರ್ಣ ಸಂಪ್ರದಾಯ ಮತ್ತು ನಂಬಿಕೆಗಳಿಗೆ ಕಾರಣವಾಗಿದೆ. ಗ್ರಾಮದಿಂದ ಬಂದು ನಗರ ಸೇರಿದ ಉಸಿರು ಕಾದಂಬರಿಯ ನಾರಾಯಣ, ಕೇಶವ, ಮೋಹನ, ರವಿ, ಮಾರ್ಗರೇಟ್, ಶಾರದ ಎಲ್ಲರೂ ಶೀಲ ಕಳೆದುಕೊಂಡವರಾಗಿದ್ದಾರೆ. ಇಂಥ ಕೃತ್ರಿಮ ಮೌಲ್ಯಗಳನ್ನು ನಿರ್ಲಕ್ಷಿಸಿ, ನಿರ್ಲಿಪ್ತಳಾಗಿದ್ದು ಸ್ವ–ಪ್ರಯತ್ನದಿಂದ ದೃಢ ವ್ಯಕ್ತಿತ್ವವನ್ನು ಗಳಿಸಿ, ನಗರದಲ್ಲಿ ನೆಲೆಯೂರಿದ (ಹೊಸನೆಲೆ) ವ್ಯಕ್ತಿತ್ವ ಶಾರದಳದು ಎನ್ನಬಹುದು. ಮಣಿಪಾಲದ ದಾದಿಯರ ಶಾಲೆಯಲ್ಲಿ ಶಿಕ್ಷಣ ಮುಗಿಸಿ ಚೇರಿಯನ್‌ನಿಂದ ಪ್ರೇಮವಂಚಿತಳಾಗಿ ಬೆಂಗಳೂರಿಗೆ ಹೋಗಿ, ದಾದಿಯ ವೃತ್ತಿಯಲ್ಲಿ ಸೇವೆ ಆರಂಭಿಸುತ್ತಾಳೆ.

> 'ಹತ್ತರ ಒಟ್ಟಿಗೆ ಹನ್ನೊಂದು. ಕೇಶವ ಒಂದು ಪ್ಲಸ್ ಅಷ್ಟೆ. ವಂಚಿಸುತ್ತಾನೆಂದು ತಿಳಿದೂ ಅವನ ಬಲೆಗೆ ಬಿದ್ದುದು ನನ್ನ ತಪ್ಪು ತಾನೆ? ಅವನು ನನ್ನಿಂದ ಸುಖ ಪಡೆದ. ಆದರೆ ಆ ಸುಖ ಏಕಮುಖವಲ್ಲ. ನಾನೂ ಸಹ ಆ ಸುಖವನ್ನು ಹಂಚಿಕೊಂಡಿದ್ದೇನೆ. ನನಗೆ ಪ್ರೇಮದ ಹುಚ್ಚ ಹೊಳೆಯಲ್ಲಿ ತೇಲುವ ಮೌಢ್ಯ ಬೇಕಿಲ್ಲ. ಕೊಟ್ಟು ತೆಗೆದುಕೊಳ್ಳುವ ಪಕ್ಕಾ ವ್ಯಾಪಾರ ಮನೋಭಾವ ನನ್ನದು. ಹಸಿವಾದರೆ ಉಣ್ಣುತ್ತೇನೆ. ತಿಣುಕಿದರೆ ತುರಿಸಿಕೊಳ್ಳುತ್ತೇನೆ.'[೨೫]

ಸ್ನೇಹ ಕೇಳಿದವರಿಗೆ ಸ್ನೇಹ, ಪ್ರೇಮ ಕೇಳಿದವರಿಗೆ ಪ್ರೇಮ, ಕಾಮ ಕೇಳಿದವರಿಗೆ ಕಾಮ ಹೀಗೆ ಎಲ್ಲವನ್ನೂ ನೀಡಿದ ದಿಟ್ಟೆ ಶಾರದಳ ಭಾವನೆಗಳನ್ನು ಮತ್ತು ಕೊಟ್ಟು ಉಣ್ಣುವ ಬಾಳಿನ ನೀತಿಯನ್ನು ಇಲ್ಲಿ ಗುರುತಿಸುತ್ತೇವೆ. ತನ್ನೊಂದಿಗೆ ದೈಹಿಕ ಸುಖ ಹಂಚಿಕೊಂಡ ಗಂಡಸರು(ಕೇಶವನೂ ಸಹ) ಬೇರೆ ಹುಡುಗಿಯರನ್ನು ಮದುವೆಯಾದ ವಿಷಯ ತಿಳಿದೂ, ಬದುಕು, ಪ್ರೀತಿ, ಪ್ರೇಮ, ಪುರುಷ, ಸಂಭೋಗ, ಶೀಲ ಕುರಿತು ಪ್ರಶ್ನಿಸಿದ ಗೆಳತಿ ಸರಳಾಳಿಗೆ ಉತ್ತರಿಸುವ ಶಾರದಳ ಮಾತುಗಳಲ್ಲಿ ಬಹಳಷ್ಟು ಗಟ್ಟಿ/ ದಿಟ್ಟತನ ತುಂಬಿದೆ. ಶಾರದ ಗ್ರಾಮೀಣ ಕೆಳ, ದಲಿತ ವರ್ಗದಿಂದ ಬಂದಿದ್ದರೂ, ಬದುಕಿನಲ್ಲಿ ಎಲ್ಲರಿಗೂ ಆತ್ಮಸ್ಥೈರ್ಯ ತುಂಬುತ್ತ ಅನಾಥ ಹೆಣ್ಣುಗಳಿಗೆ ಮಾದರಿಯಾಗಿ ನಗರದಲ್ಲಿ ನೆಲೆ ನಿಲ್ಲುತ್ತಾಳೆ. ಗ್ರಾಮೀಣ ಪ್ರದೇಶದ ವ್ಯಕ್ತಿತ್ವವೊಂದು ಶಿಕ್ಷಣ ಪಡೆದು, ಹೊಸ ಗಾಳಿಗೆ ಸ್ಪಂದಿಸುತ್ತಾ ನಗರದ ಅನುಭವಗಳಿಂದ ಪಸರಿಸಿ ಬೆಳೆದ ರೀತಿ ಇದಾಗಿದೆ.

ಕೋರಗಲ್ ವಿರೂಪಾಕ್ಷಪ್ಪ ಅವರ 'ಕತೆ ಅಂದ್ರೆ ಕತೆ ಅಲ್ಲ' ಕಥೆಯ ನಿರಕ್ಷರಕುಕ್ಷಿ ಪಾರ್ವತೆವ್ವ, ಒಂಟಿ ಹೆಣ್ಣಿನ ಮೇಲೆ ನಡೆಯುತ್ತಿರುವ ಗಂಡನೆಂಬ ಪುರುಷನ ದೌರ್ಜನ್ಯ ನಿರಾಕರಿಸಿ, ಗೆಳೆಯನೊಂದಿಗೆ ಗ್ರಾಮ(ಹೊಸ ನೆಲೆ)ಕ್ಕೆ ಬಂದ ಮಹಿಳೆಯಾಗಿದ್ದಾಳೆ. ಮೊದಲಿನ ಗಂಡನ ಮಗ ರಂಗಪ್ಪನನ್ನು ಓದಿಸಿ ಇಂಜನಿಯರ್ ಮಾಡಿ ಪ್ರತಿಫಲವಾಗಿ ಅವನಿಂದ ಏನನ್ನೂ ನಿರೀಕ್ಷಿಸುವುದಿಲ್ಲ. ಇಂಜನಿಯರ್ ಆದ ರಂಗಪ್ಪ ಹಳ್ಳಿಯತ್ತ ಸುಳಿಯುವುದಿಲ್ಲ. 'ಇಲ್ಲಿ ಕರ್‍ಕೊಂಡು ಬಂದು ಇಟ್ಕಾಬಹುದ್ರಿ, ಆದರ ಆಕಿ ಹಳ್ಳಿಯಾಕಿ ನಮ್ಮ ಮಿಸ್ಸೆಸ್ಸು ಸುಧಾರಿಸಿದಾಕಿ. ಆಕಿಗೆ ಈಕಿಗೆ ಹೊಂದಿಕೆ ಆಗೋದಿಲ್ಲರಿ' ಎನ್ನುವ ರಂಗಪ್ಪ ಕೈತುಂಬ ಸಂಪಾದಿಸಿದರೂ ತಾಯಿಯನ್ನು ತನ್ನೊಂದಿಗೆ ಕರೆದುಕೊಂಡು ಬರಲಾರ. ಇದಕ್ಕೆ ಕಾರಣ ಗ್ರಾಮ, ನಗರಗಳ ಮೂಲಭೂತ ನಡತೆಗಳ ವ್ಯತ್ಯಾಸವನ್ನು ತೋರಿಸುತ್ತಾನಾದರೂ, ತಾಯಿ ಎರಡನೇ ಪುರುಷನ ಜೊತೆ ಕೂಡಿಕೆ ಮಾಡಿಕೊಂಡು ಬಂದ ಮಹಿಳೆ ಎಂಬ ಅಳುಕು ಅವನಲ್ಲಿರುವಂತಿದೆ. ತಾನು ಮಾತ್ರ ಹೆಂಡತಿ ಇದ್ದರೂ ಇನ್ನೊಬ್ಬ ಮಹಿಳೆಯೊಂದಿಗೆ ಸಂಬಂಧ ಹೊಂದಿರುವುದು ಅವನ ದೃಷ್ಟಿಯಲ್ಲಿ ಸರಿಯಾದ ನಡತೆಯಾಗಿದೆ. ಲಿಂಗ ತಾರತಮ್ಯದ ಅಸ್ವಸ್ಥ ಮನಸ್ಥಿತಿ ವಿದ್ಯಾವಂತರನ್ನೂ ಬಿಟ್ಟಿಲ್ಲ, ಸುಧಾರಣೆ ಏನಿದ್ದರೂ ಅದು ತೋರಿಕೆಗೆ ಮಾತ್ರ, ಆಂತರಿಕವಾಗಿ ಶತಮಾನಗಳಷ್ಟು ಹಿಂದಿನ ಲಿಂಗ ತಾರತಮ್ಯದ ಮೌಲ್ಯಗಳನ್ನು ಹೊಂದಿದ್ದರೂ ಬಾಹ್ಯದಲ್ಲಿ ತಾವು ಸ್ತ್ರೀ–ಪುರುಷರ ಸಮಾನತೆಯ ಪ್ರತಿಪಾದಕರೆಂದು ತೋರ್ಪಡಿಸುವ ಸುಶಿಕ್ಷಿತರ ಗುಂಪಿಗೆ ರಂಗಪ್ಪ ಸೇರುತ್ತಾನೆ. ತನ್ನ ಅಂತಿಮ ಕಾಲದಲ್ಲಿ ನಗರ ಸೇರಿ ಮಗನ ಹತ್ತಿರ ಇರು ಎಂಬ ಸಲಹೆಯನ್ನು ಪಾರವ್ವ ನೇರವಾಗಿ ನಿರಾಕರಿಸುತ್ತಾಳೆ.

> 'ರಂಗಣ್ಣ ಮೊದಲಿನ ಹಂಗ ಉಳಿದಿಲ್ಲಪ, ಈ ಕಿನ್ನಾಳ ಸೀರಿ, ಈ ನನ್ನ ಮಣ್ಣಿನ ಮಾತು ಅವನ ಮನಿ ಹೊರಗ ಉಳಿದಾವು. ಅವನ ರೊಕ್ಕ ರೂಪಾಯಿ ನನಗ ಒಂದೂ ಬ್ಯಾಡ ಬುಡು. ಯಾರರ ನಿಮ್ಮಂತವ್ರ ಅಂಗಳ ಕಸ ಹೊಡ್ದರ ಒಂದು ರೊಟ್ಟಿ ಚಟ್ನಿ ಕೊಡ್ತಾರ' ಎಂದು ಮಗನ ಹಂಗು ಹರಿದು ಮಾತಾಡಿದ್ದಳು.'[೨೬]

ತಾಯಿಯನ್ನು ಅವ್ವ ಎಂದು ಕರೆಯದೇ ಮುದುಕಿ ಎಂದು ಕರೆದು, ಬದುಕೆಂದರೆ ಹಣ ಮತ್ತು ಅಂತಸ್ತು ಎಂಬಂತೆ ನಗರದಲ್ಲಿ ಕರಗಿ ಹೋದ ಇಂತಹ ಸುಶಿಕ್ಷಿತರು, ಗ್ರಾಮದ ನೆಲದಾಳದ ಪ್ರೀತಿಯನ್ನು ಅರ್ಥೈಸಿಕೊಳ್ಳಲಾರರೆಂಬುದು ಈ ವೃದ್ಧ ಮಹಿಳೆಯ ನಿಲುವಾಗಿದೆ. ಪಾರ್ವತೆವ್ವ ಕುಡುಕ ಗಂಡನೊಂದಿಗಿನ ಮೂಲನೆಲೆಯನ್ನು ಮರೆತು ತನ್ನ ಹೊಸನೆಲೆಯಲ್ಲಿಯೇ ಬದುಕು ಕಟ್ಟಿಕೊಂಡು ಕೊನೆಯ ಗಳಿಗೆಯವರೆಗೂ ಅಲ್ಲಿಯೇ ಬಾಳುತ್ತಾಳೆ.

ಜಯಂತ ಕಾಯ್ಕಿಣಿ ಅವರ 'ಸುಮಿತ್ರೆಗೊಂದು ಸುದ್ದಿ' ಕಥೆಯ ಸುಮಿತ್ರೆಯದು ಪಾರ್ವತೆವ್ವನ ಹಾದಿಯಲ್ಲಿ ನಡೆದು ಬಂದ ಅಲ್ಪಸ್ವಲ್ಪ ಅಕ್ಷರ ಜ್ಞಾನವಿರುವ ಮತ್ತೊಂದು ಗ್ರಾಮೀಣ ವ್ಯಕ್ತಿತ್ವವಾಗಿದೆ. ಸುಮಿತ್ರೆ ಕುಡುಕ ಫಾರೆಸ್ಟ್ ಗಾರ್ಡ್ ಗಂಡ ರಮಾಕಾಂತನನ್ನು ತ್ಯಜಿಸಿ, ಅವರಿವರ ಮನೆಯಲ್ಲಿ ಅಡಿಗೆ, ಬಾಣಂತನ, ಮನೆಗೆಲಸ ಮಾಡಿಕೊಟ್ಟು ಪುರುಷನಿಷ್ಠ ಧೋರಣೆಯ ಕೌಟುಂಬಿಕ ವ್ಯವಸ್ಥೆಯ ಬಂಧನದಿಂದ ಹೊರಬಂದು, ಆರ್ಥಿಕ ಸ್ವಾತಂತ್ರ್ಯ ಪಡೆದ ಮಹಿಳೆಯಾಗಿದ್ದಾಳೆ. ತಮ್ಮನ ವಿನಂತಿಯ ಮೇರೆಗೆ ಗ್ರಾಮ ನಿರಾಕರಿಸಿ ಮುಂಬಯಿಗೆ ಬಂದು, ತಮ್ಮನ ಮಗ ಸುಧಾಕರ ಮತ್ತು ಸ್ನೇಹಿತರಿಗೆ ಬೇಯಿಸಿ ಹಾಕುವ ಕೆಲಸ ಕೈಗೊಳ್ಳುತ್ತಾಳೆ. ನಗರ ಅವಳಿಗೆ ನೆಮ್ಮದಿಯ ಗೂಡಾಗಿದೆ. 'ಅವಳಿಗ್ಯಾಕೋ ಅನಿಸಿಹೋಯಿತು. ತನಗೆ ಮಕ್ಕಳಾಗಿದ್ದರೆ ತಾನು ರಮಾಕಾಂತನ ಜೊಟ್ಟಿ ಕಾರಾಗೃಹದಲ್ಲಿ ಶಾಶ್ವತವಾಗಿ ಬೀಳುತ್ತಿದ್ದೆನೇನೋ.'[೫೫] ಕುಡುಕ ಗಂಡನ ಜೊತೆಯ ಸಂಸಾರವೆಂದರೆ ಅದೊಂದು ಜೊಟ್ಟಿ ಕಾರಾಗೃಹವೆಂದು, ವಿಷಮ ಕೌಟುಂಬಿಕ ವ್ಯವಸ್ಥೆಯನ್ನು ತಿರಸ್ಕರಿಸುವ ನೆಲೆಯಲ್ಲಿ ಯೋಚಿಸುವ ಮಹಿಳೆಯಾದರೂ ಕಳೆದು ಹೋದ ಯೌವನ, ಗ್ರಾಮದ ಸಹವಾಸ ಅವಳನ್ನು ದ್ವಂದ್ವ ಭಾವಕ್ಕೆ ನೂಕುತ್ತವೆ. ಸಹಿಸಿಹೋದ ಬದುಕು ಮತ್ತೆಲ್ಲಿ ತನ್ನನ್ನು ಆವರಿಸಿ ಬಿಡುವುದೋ ಎಂಬ ಅವ್ಯಕ್ತ ಭಯವೂ ಇದಕ್ಕೆ ಕಾರಣವೆನ್ನಬಹುದು. ಒಂದು ಜೀವಮಾನ ಕಾಲ ಕಷ್ಟಪಟ್ಟು ಅಭದ್ರತೆಯ ಬದುಕನ್ನು ಕಳೆದ ವ್ಯಕ್ತಿಯ ಮಾನಸಿಕ ದ್ವಂದ್ವ ಇದಾಗಿದೆ. ಸುಧಾಕರನಿಗೆ ಅವನ ತಂದೆ ಪತ್ರದಲ್ಲಿ ಸುಮಿತ್ರೆಯ ಗಂಡ ಘಟ್ಟದ ಮೇಲೆ ತೀರಿಕೊಂಡ ವಿಷಯ ಬರೆದು, ಸುಮಿತ್ರೆಗೆ ತಿಳಿಸು ಎಂದು ಹೇಳುತ್ತಾರೆ. ಪತ್ರ ಓದಿದ ಸುಮಿತ್ರ ವಿಚಲಿತಳಾಗದೆ, ಎಂದಿನಂತೆ ಕಾರ್ಯ ನಿರ್ವಹಿಸಿ, ರಾತ್ರಿ ಊಟ ಮುಗಿಸುತ್ತಾಳೆ. ದೀಪ ಆರಿಸಿ ಸೀರೆ ಹೊದ್ದುಕೊಂಡು ತೋಳಿನ ಮೇಲೆ ತಲೆಯಿಟ್ಟು ಕವುಚಿ ಮೊಳಕಾಲುಗಳನ್ನು ಹೊಟ್ಟೆಗೆ ತಂದು ಸಣ್ಣ ಮಗುವಿನಂತೆ ನಿದ್ದೆ ಹೋಗುತ್ತಾಳೆ.

ಸುಮಾರು ಇಪ್ಪತ್ತು ವರ್ಷಗಳಿಂದ ಗಂಡನ ಸಾಂಗತ್ಯವಿಲ್ಲದೆ ಅವರಿವರ ಮನೆಗೆಲಸ ಮಾಡುತ್ತ ಬದುಕಿದ ಸುಮಿತ್ರೆಗೆ ಈ ಸುದ್ದಿ ಏನನ್ನು ತಲುಪಿಸುತ್ತದೆ, ಇದರಲ್ಲಿ ಅವಳಿಗೆಂಥಹ ಸಂದೇಶವಿದೆ, ಕುಡುಕ ಗಂಡನ ಕಾರಾಗೃಹದಿಂದ ತಾನು ಹೊರಗುಳಿದ ತೃಪ್ತಿ ಅವಳನ್ನು ತುಂಬುತ್ತದೆಯೆ, ಇಲ್ಲವೆ ಅವನ ಮರಣಕ್ಕೊಂದು ಅವಳಲ್ಲಿ ಅನುಕಂಪವಿದೆಯೆ ಎಂಬ ಕಥೆಯ ಪ್ರಶ್ನೆಗಳು ಅಧ್ಯಯನಕ್ಕೂ ಎದುರಾಗುತ್ತವೆ. ಸುದ್ದಿ ತಿಳಿದೂ ಕಾರ್ಯ ನಿರ್ವಹಿಸುವ ಅವಳ ಈ ಕ್ರಿಯೆಗಳಲ್ಲಿಯೆ ಪ್ರತಿಕ್ರಿಯೆಯಿದೆ. ತನ್ನನ್ನೂ ಅರಣ್ಯದ ಒಂದು ಮರದಂತೆ ತಿಳಿದಿದ್ದ, ಅವನ ಗುಟ್ಟುಗಳನ್ನೆಂದೂ ಬಿಟ್ಟುಕೊಡದ ಗಂಡನ ನೆನಪುಗಳು, ಅವನ ಸಾವಿನ ಸುದ್ದಿಯೊಂದಿಗೆ ಅವಸಾನ ಹೊಂದುತ್ತವೆ ಎಂದು ತೀರ್ಮಾನಿಸಬಹುದು. ತ್ಯಜಿಸಿದ ಗಂಡನ ಸಾವಿಗಾಗಿ ಸುಮಿತ್ರೆ ವ್ಯಥೆ ಪಡದೆ, ನಿತ್ಯ ಬದುಕಿನ ಒಂದು ಸಾಮಾನ್ಯ ಸಂಗತಿಯಂತೆ ಸ್ವೀಕರಿಸಿ, ಹಾಗೇ ಬಿಟ್ಟು ಕೊಟ್ಟು ಮುಂಬಯಿಯಲ್ಲಿಯೇ ಉಳಿಯುವುದು ಅವಳ ಅಂತಿಮ ಆಯ್ಕೆಯಾಗಿದೆ.

ಮಹಿಳೆಯ ಹಕ್ಕುಗಳನ್ನು, ಪ್ರಕೃತಿ ಸಹಜ ಆಸೆಗಳನ್ನು ತನ್ನ ದಮನ, ದಬ್ಬಾಳಿಕೆ ಮೂಲಕ ಹತ್ತಿಕ್ಕಲೆತ್ನಿಸುವ ಪುರುಷ/ಪರಿಸರದ ವಿರುದ್ಧ ಮಹಿಳೆ ಹೋರಾಡುತ್ತಾಳೆ. ಇಂತಹ ಹೋರಟದಲ್ಲಿ ಅವಳು ಸೋತರೂ ಆಶಾವಾದಿಯಾಗಿ ಉಳಿಯುವುದು ಅವಳ ಅಪಾರವಾದ ಆತ್ಮವಿಶ್ವಾಸದ ಪ್ರತೀಕವಾಗಿದೆ. ಶಾರದ, ಪಾರ್ವತೆವ್ವ ಮತ್ತು ಸುಮಿತ್ರೆಯರು ಪುರುಷರಿಂದ ಶೋಷಣೆ, ದೌರ್ಜನ್ಯಕ್ಕೆ ಒಳಗಾಗಿ ಹೊಸ ನೆಲೆಯನ್ನು ಸ್ವೀಕರಿಸಿದವರು. ಕೌಟುಂಬಿಕ, ಸಾಮಾಜಿಕ ಸಂಘರ್ಷಗಳನ್ನು ಎದುರಿಸಿ ಹೊಸ ಪರಿಸರದಲ್ಲಿ ಒಂದು ಶಾಶ್ವತ ನೆಲೆ ಕಂಡುಕೊಂಡು ನಿರಾಳ ಬದುಕನ್ನು ಅನುಭವಿಸುತ್ತಾರೆ. ಕಳೆದು ಹೋದದ್ದರ ಕುರಿತು ಅವರಲ್ಲಿ ಚಿಂತೆ, ಪಶ್ಚಾತ್ತಾಪವಾಗಲಿ ಕಂಡುಬರುವುದಿಲ್ಲ. ಪುರುಷ ಪ್ರಧಾನವ್ಯವಸ್ಥೆಯ ಆಸರೆಯಿಲ್ಲದೆ ಬದುಕ ಬಯಸುವ ಇವರ ನಿಲುವು ಕಥನ ಸಾಹಿತ್ಯದಲ್ಲಿ ದಾಖಲಾಗಿದೆ.

## ಕ. ಮಹಿಳೆ ಮತ್ತು ಮೂಲನೆಲೆ/ಹೊಸನೆಲೆ ಆಯ್ಕೆಯ ದ್ವಂದ್ವ

ಗ್ರಾಮ/ನಗರ ಅಂತಿಮ ಸಾಧ್ಯತೆಗಳ ಸಂದರ್ಭದಲ್ಲಿ ಪುರುಷರಿಗಿಂತ ಮಹಿಳೆಯರು ಹೆಚ್ಚು ದ್ವಂದ್ವಾತ್ಮಕತೆಗೆ ಒಳಗಾಗುವುದನ್ನು ಮುಂಬಯಿ ಕರ್ನಾಟಕದ ಕಥನ ಸಾಹಿತ್ಯ ಸೂಚಿಸಿದೆ. ಮಹಿಳೆಯೊಂದಿಗೆ ಗಂಡ, ಮಕ್ಕಳು, ಕುಟುಂಬ, ಸಮಾಜ, ಸಂಸ್ಕೃತಿ ಹೀಗೆ ಹಲವು ಹತ್ತು ನಿಕಟ/ಭಾವನಾತ್ಮಕ ಸಂಬಂಧಗಳು ಈ ಗೊಂದಲಗಳಿಗೆ ಕಾರಣ ಎಂಬುದು ಸಾಹಿತ್ಯದ ಗ್ರಹಿಕೆಯಾಗಿದೆ. ಮಹಿಳೆಯ ಮೃದುತ್ವ, ಸಹನೆ, ಸೂಕ್ಷ್ಮ ಗ್ರಹಿಕೆ, ಭಾವುಕತೆ ಮುಂತಾದ ಗುಣಗಳ ಹುಟ್ಟಿಗೆ ಕಾರಣವಾಗುವ ಜೈವಿಕ ಗುಣಾನು(ಜೀನ್ಸ್)ಗಳು ಇದಕ್ಕೆ ಪೂರಕವಾಗಿ ಕಾರ್ಯ ನಿರ್ವಹಿಸುವುದನ್ನು ಸಹ ಅಧ್ಯಯನಗಳು ಸೂಚಿಸುತ್ತವೆ.

ಲೋಹಿತ್ ನಾಯ್ಕರ ಅವರ 'ನಿರ್ಧಾರ' ಕಥೆಯ ಮಾಲತಿ ಅಂತಿಮ ನಿರ್ಧಾರದ ಸಾಧ್ಯತೆಯ ಹಂತದಲ್ಲಿ ದ್ವಂದ್ವಾತ್ಮಕತೆಗೆ ಸಿಲುಕುತ್ತಾಳೆ. ಶುಂಠೇನಹಳ್ಳಿಯ (ಗ್ರಾಮ) ದಲಿತ ಕುಟುಂಬದಲ್ಲಿ ಜನಿಸಿ, ಜಾತಿಜನ್ಯ ಶೋಷಣೆ, ದೌರ್ಜನ್ಯಗಳನ್ನು ಸವರ್ಣೀಯರಿಂದ ಅನುಭವಿಸಿ ಹೋರಾಟದ ಬದುಕನ್ನು ರೂಡಿಸಿಕೊಂಡ ಮಾಲತಿಯನ್ನು ಅತ್ತೆಯ ಮನೆಯ ಪುರುಷ ಹಿತಾಸಕ್ತಿಗಳು (ಇದರಲ್ಲಿ ಮಹಿಳೆಯರ ಪಾಲೂ ಇದೆ) ದುಡಿಸಿಕೊಂಡು, ಶೀಲದ ಪ್ರಶ್ನೆ ಬಂದಾಗ ಹೊರ ಹಾಕುತ್ತವೆ. ಸಾಮಾಜಿಕ ಲಿಂಗತಾರತಮ್ಯ ಶೋಷಣೆ, ಪ್ರಿಯತಮನ ವಂಚನೆ, ಕುಟುಂಬದ ಜನರ ದೈಹಿಕ, ಮಾನಸಿಕ ಹಲ್ಲೆಗಳನ್ನೆಲ್ಲ ಎದುರಿಸಿ ದೂರ ಶಿಕ್ಷಣ (Distance Education)ದ ಸಹಾಯದಿಂದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕಿಯಾಗುತ್ತಾಳೆ. ಇದು ಅವಳು ಶಿಕ್ಷಣ, ಸ್ವಾಭಿಮಾನಗಳಿಂದ ಅನೇಕ ನೆಲೆಗಳನ್ನು ದಾಟಿ ಪಡೆದುಕೊಂಡ ಹೊಸನೆಲೆಯ ಬದುಕು. ಹೊಸನೆಲೆ(ನಗರ, ಧಾರವಾಡ)ಯಲ್ಲಿ ಆರ್ಥಿಕ (ವೃತ್ತಿ ಇದೆ) ಭದ್ರತೆ, ಸಾಮಾಜಿಕ(ಎರಡನೇ ಪತಿ ವಿ.ವಿ.ಯಲ್ಲಿ ಪ್ರೊಫೆಸರ್ ಆಗಿದ್ದಾರೆ)ಭದ್ರತೆ, ಸಾಂಸ್ಕೃತಿಕ ಪ್ರಾತಿನಿಧಿತ್ವ(ಲೇಖಕಿಯಾದ ಮಾಲತಿ ಅನೇಕ ಬಹುಮಾನ ಪಡೆದಿದ್ದಾಳೆ), ಕೌಟುಂಬಿಕ ತೃಪ್ತಿ(ಪುಟ್ಟ ಮಗುವಿದೆ)ಗಳಿದ್ದ ಅನುಭವ ಪ್ರೌಢೆಯಾಗಿ ಮಾಲತಿ, ಅದೇ ಹಳೆ ವೃತ್ತಿಯಲ್ಲಿದ್ದ ಯೌವನದ ಪ್ರಿಯಕರನನ್ನು ಬಯಸಿದ್ದೇಕೆ, ಅಂತಹ ದೇವರಂತಹ ಗಂಡನಿಗೆ ವಂಚನೆ ಮಾಡಿದ್ದೇಕೆ ಎಂಬ ಪ್ರಶ್ನೆಗಳಿಗೆ ಅವಳ ದ್ವಂದ್ವ ಸ್ವಭಾವವು ಉತ್ತರವಾಗಿದೆ. ಗ್ರಾಮ, ನಗರಗಳ ಅಂತಿಮ ಆಯ್ಕೆಯ ದ್ವಂದ್ವವನ್ನು ಅಗೋಚರವಾಗಿ ಬಿತ್ತುವ ಮಹಿಳೆಯೊಬ್ಬಳ ಚಿತ್ತವೃತ್ತಿಯ ವಿವರಗಳನ್ನು ಕಥನ ಸೂಕ್ಷ್ಮವಾಗಿ ವಿವರಿಸಿ ಗ್ರಾಮ(ಗೆಳೆಯ), ನಗರ(ಗಂಡ)ಗಳ ನಡುವಿನ ಮಾನಸಿಕ ವೃತ್ತದಲ್ಲಿ ಸುತ್ತುತ್ತದೆ. ನಿರ್ಧಾರ ಎಂಬುದು ಕಥೆಯ ಶಿರೋನಾಮೆಯಾಗಿದ್ದರೂ ಯಾವ ನಿರ್ಧಾರವನ್ನೂ ತೆಗೆದುಕೊಳ್ಳದಿರುವುದು ಇಲ್ಲಿಯ ಒಂದು ವ್ಯಂಗ್ಯವೆ ಸರಿ. ಗ್ರಾಮೀಣ ಪ್ರದೇಶದ ದಲಿತ ಕುಟುಂಬದಿಂದ ಬಂದ ಕಥಾನಾಯಕಿ ಸಾಂಸ್ಕೃತಿಕ ಪುನರ್ಜನ್ಮ ಪಡೆದು, ದಲಿತ ಪದ ಮೀರಿ ಬೆಳೆದು, ಬಾಲ್ಯದ ಆಸೆ, ಆಕಾಂಕ್ಷೆಗಳನ್ನೆಲ್ಲ ಪೂರೈಸಿಕೊಂಡರೂ ಮತ್ತೆ ಮಾನಸಿಕ ಚಾಂಚಲ್ಯಕ್ಕೆ, ದ್ವಂದ್ವಕ್ಕೆ ಬಲಿಯಾಗುವುದು ಮಾತ್ರ ಯಾವ ಕಾರಣಕ್ಕೆ ಎಂಬ ಜಿಜ್ಞಾಸೆ ಅಧ್ಯಯನವನ್ನು ಕಾಡುತ್ತದೆ. ಜೊತೆಗೆ ಈ ಸಾಮಾಜಿಕ ವ್ಯವಸ್ಥೆಯಲ್ಲಿಯ ಕ್ಲಿಷ್ಟ ಸಮಸ್ಯೆಗಳನ್ನು ಕುರಿತು ಚಿಂತಿಸಲು ಪ್ರೇರೇಪಿಸುತ್ತದೆ.

ಕಥನದಲ್ಲಿ, ರೇಲ್ವೆ ಗಾಡಿಯಲ್ಲಿ ಪ್ರಯಾಣಿಸುತ್ತಿದ್ದ ಮಾಲತಿಯು ಎರಡು ಸ್ಥಳಗಳಲ್ಲಿ ಮಾನಸಿಕ ಚಾಂಚಲ್ಯಕ್ಕೆ ಒಳಗಾಗಿ ದ್ವಂದ್ವಾತ್ಮಕತೆಯಿಂದ ನಲುಗುವುದನ್ನು ಅಧ್ಯಯನ ಗುರುತಿಸುತ್ತದೆ. ಮೊದಲನೆಯದಾಗಿ, 'ಇನ್ನೇನು ಹರಿಹರ ಬಂದು ಬಿಡುತ್ತೆ ಎಂದರು. ಅವರ ಕಣ್ಣುಗಳು ತೇವಗೊಂಡಿದ್ದವು. ಏನೋ ಹುಡುಕುವಂತಿದ್ದವು. ರೈಲು ಹೊರಟಾಗ ಎದ್ದು ಬಾಗಿಲ ಬಳಿ ಬಂದು ನಿಂತರು. ಕಣ್ಣುಗಳು ಶುಂಠೇನಹಳ್ಳಿ, ಹೊಲೆಯರ ಕೇರಿಗಳನ್ನು ಅರಸುತ್ತಿದ್ದವು. ಸ್ವಲ್ಪ ಸಮಯದ ನಂತರ ತಮ್ಮ ಆಸನದಲ್ಲಿ ಕುಳಿತುಕೊಂಡರು' (ಪುಟ ೬೯). ಇದು, ಇಂದು ನಗರವಾಸಿಯಾದ ಮಹಿಳೆಯೊಬ್ಬಳ ಬಾಲ್ಯದ ದಿನಗಳನ್ನು ನೆನಪಿಸುವ ಸ್ಥಳ. ನಾನು ಓದಬೇಕು, ಓದಿ ನೌಕರಿ ಹಿಡಿದು ಕೂಲಿಯಾಗಿರುವ ಅವ್ವ, ಜೀತ ಮಾಡುವ ಅಪ್ಪರನ್ನು ಬಿಡಿಸಿ, ತಂಗಿಯನ್ನು ಓದಿಸಿ ಮದುವೆ ಮಾಡಿಕೊಡಬೇಕೆಂಬ ಕನಸು ಕಂಡ ಸ್ಥಳ. ಎರಡನೆಯದಾಗಿ ಕಡೂರಿನ ಸ್ಟೇಶನ್ ಬಂದಾಗ, ಅವಳ ಕಣ್ಣುಗಳು ಮಿನುಗಿ, ಉದ್ವೇಗ ಹೆಚ್ಚಾಗುತ್ತದೆ.

'ಕಡೂರಿನಲ್ಲಿ ರೈಲು ನಿಂತಾಗ ನನ್ನ ಕಣ್ಣುಗಳು ಸುಮ್ಮನಿರಲಾರದಂತಾದವು. ಅತ್ತಿತ್ತ ನೋಡುತ್ತ ಚಂಚಲವಾಗಿ ಯಾರನ್ನೋ ಹುಡುಕಿದವು. ಇನ್ನೂ ದೂರ, ಬಹಳ ದೂರ, ಐದಾರು ಭೋಗಿಗಳಷ್ಟು ದೂರ ಇರುವಾಗಲೇ ನನ್ನ ಕಣ್ಣುಗಳು ಅವನನ್ನು–ರಮೇಶನನ್ನು ಗುರುತಿಸಿದ್ದವು'[೨೦]

